

## ಪ್ರೊ. ಎಂ.ವಿ. ಸೀತಾರಾಮಯ್ಯ ಸಮಗ್ರ ಸಾಹಿತ್ಯ

## ಸಂಪುಟ – ೫

# ಮಕ್ಕಳ ಸಾಹಿತ್ಯ ಮತ್ತು ನಾಟಕಗಳು


ಸಂಪಾದಕರು

**ಪ್ರೊ. ಟಿ.ಎಸ್. ನಾಗರಾಜ ಶೆಟ್ಟಿ**





ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು – ೫೬೦ ೦೦೨

# ಪ್ರಕಾಶಕರ ಮಾತು

ಕನ್ನಡ ಓದುಗರಿಗೆ ಸುಲಭ ಬೆಲೆಯಲ್ಲಿ ಉತ್ತಮ ಕೃತಿಗಳು ಲಭ್ಯವಾಗಬೇಕೆನ್ನುವ ಉದ್ದೇಶದಿಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜನಪ್ರಿಯ ಸಾಹಿತ್ಯ ಪ್ರಕಾಶನದಡಿ ಹಲವಾರು ಪ್ರಕಟಣಾ ಯೋಜನೆಗಳನ್ನು ಹಮ್ಮಿಕೊಂಡು ಕಾರ್ಯರೂಪಕ್ಕೆ ತರಲಾಗುತ್ತಿದೆ. ಎಂ. ಗೋಪಾಲಕೃಷ್ಣ ಅಡಿಗ, ಹುಯಿಲಗೋಳ ನಾರಾಯಣರಾಯರು, ನಾಡೋಜ ಚೆನ್ನವೀರ ಕಣವಿ, ಕೆ.ಎಸ್. ನರಸಿಂಹಸ್ವಾಮಿ, ಡಿ.ಎಸ್. ಕರ್ಕಿ, ಕೀರ್ತಿನಾಥ ಕುರ್ತಕೋಟಿ ಹಾಗೂ ಪ್ರೊ. ಎಲ್.ಎಸ್. ಶೇಷಗಿರಿರಾವ್ ಹೀಗೆ ಪ್ರಮುಖ ಸಾಹಿತಿಗಳ ಸಮಗ್ರ ಸಾಹಿತ್ಯ ಪ್ರಕಟಣೆಗಳನ್ನು ಹೊರತರಲಾಗುತ್ತಿದೆ. ಪ್ರಸಕ್ತ ವರ್ಷ ಪ್ರೊ. ಎಂ.ವಿ. ಸೀತಾರಾಮಯ್ಯನವರ ಜನ್ಮಶತಮಾನೋತ್ಸವ ವರ್ಷವಾಗಿದ್ದು, ಈ ಸಂದರ್ಭದಲ್ಲಿ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯವನ್ನು ಹೊರತರಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಉದ್ದೇಶಿಸಿದೆ. ಒಬ್ಬ ಲೇಖಕರ ಸಮಗ್ರ ಅಧ್ಯಯನ ಮಾಡಲು ಅನುಕೂಲವಾಗಬೇಕೆಂಬುದು ಈ ಯೋಜನೆಯ ಆಶಯ.

'ರಾಘವ' ಎಂಬ ಕಾವ್ಯನಾಮದಿಂದ ಖ್ಯಾತರಾಗಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರು ಕವನ, ಕಥೆ, ಕಾದಂಬರಿ, ಮಕ್ಕಳ ಸಾಹಿತ್ಯ, ಗ್ರಂಥ ಸಂಪಾದನೆ, ಕಾವ್ಯಮೀಮಾಂಸೆ, ಸಂಶೋಧನೆ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದವರು. ಗಾಢ ಅಧ್ಯಯನ ಹಾಗೂ ಬರವಣಿಗೆಯ ಅಚ್ಚುಕಟ್ಟಿನಿಂದ ಐದು ದಶಕಗಳ ಕಾಲ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸುವುದರ ಜೊತೆಗೆ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಸಂಸ್ಥೆಯನ್ನು ಸ್ಥಾಪಿಸಿ, ಅದರ ಮೂಲಕ ಹಸ್ತಪ್ರತಿಶಾಸ್ತ್ರ ಎಂಬ ನೂತನ ಸಂಶೋಧನಾ ಕ್ಷೇತ್ರವನ್ನು ಆರಂಭಿಸಿ ಅಳಿಸಿ ಹೋಗುತ್ತಿದ್ದ ಪ್ರಾಚೀನ ಸಾಹಿತ್ಯದ ಸಂಗ್ರಹ, ಸಂರಕ್ಷಣೆಯತ್ತ ನಾಡಿನ ಗಮನವನ್ನು ಸೆಳೆದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರದು ಬಹುಮುಖ ಪ್ರತಿಭೆ.

ಕನ್ನಡ ಸಾಹಿತ್ಯದ ನವೋದಯ ಕಾಲದಲ್ಲಿ ಸಾಹಿತ್ಯ ಸೃಷ್ಟಿಯನ್ನು ಆರಂಭಿಸಿ ಹಳಗನ್ನಡ ಪರಂಪರೆ ಮತ್ತು ಆಧುನಿಕ ಕನ್ನಡ ಹಾಗೂ ಇಂಗ್ಲಿಷ್ ಸಾಹಿತ್ಯದ ಹೊಸತನಗಳನ್ನು ಮೈಗೂಡಿಸಿಕೊಂಡು ಸಾಹಿತ್ಯ ನಿರ್ಮಿತಿಗೆ ತೊಡಗಿದ ಎರಡು ಪರಂಪರೆಗಳ ಭವ್ಯ ಸೇತು ಪ್ರೊ. ಎಂ.ವಿ. ಸೀತಾರಾಮಯ್ಯನವರು. ಸೃಜನಶೀಲ ಸಾಹಿತ್ಯದ ಜೊತೆಜೊತೆಗೆ ಸಂಶೋಧನಾತ್ಮಕ ಸಾಹಿತ್ಯವನ್ನು ಬೆಳೆಸಿದ ಅಪೂರ್ವ ಸಾಧಕರು. ಅಧ್ಯಯನ-ಅಧ್ಯಾಪನಗಳಲ್ಲಿ ಅಪಾರ ಅನುಭವ ಪಡೆದಿದ್ದ ಪ್ರೊ. ಎಂ.ವಿ. ಸೀತಾರಾಮಯ್ಯನವರು ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿ ಕನ್ನಡ ಭಾಷೆಯನ್ನು ಬೆಳೆಸುವಲ್ಲಿ ಗಣನೀಯವಾದ ಸೇವೆಯನ್ನು



# ಸಂಪಾದಕರ ಮಾತು

ಕನ್ನಡ ಸಾಹಿತ್ಯ ಲೋಕದ ಹಿರಿಯ ಚೇತನಗಳಲ್ಲಿ ಒಬ್ಬರಾಗಿದ್ದ ಸನ್ಮಾನ್ಯ ಶ್ರೀ ಎಂ.ವಿ. ಸೀತಾರಾಮಯ್ಯ ಅವರು ಈಗ ನಮ್ಮ ನಡುವೆ ಇಲ್ಲ. ಆದರೆ ಅವರ ಆದರ್ಶ ಹಾಗೂ ಮೌಲ್ಯಗಳು ಇಂದಿನವರಾದ ನಮಗೆ ಅನುಕರಣೀಯವಾದುವು. ಅವರ ಶಿಷ್ಯರು ಹಾಗೂ ಅಭಿಮಾನಿ ಬಳಗ ಇದನ್ನು ಮರೆತಿಲ್ಲ; ಅವರ ಶತಮಾನೋತ್ಸವವನ್ನು ಆಚರಿಸಬಯಸಿದ್ದೇ ಇದಕ್ಕೆ ಸಾಕ್ಷಿ. ಪಾಂಡಿತ್ಯಪೂರ್ಣವೂ, ವೈವಿಧ್ಯಮಯವೂ ಆದ ಅವರ ಸಮಗ್ರ ಸಾಹಿತ್ಯವನ್ನು ಜನತೆಯ ಮುಂದಿಡಲು ನಡೆಸಿರುವ ಪ್ರಯತ್ನ ಅತ್ಯಂತ ಸ್ವಾಗತಾರ್ಹ.

'ಮಕ್ಕಳ ಸಾಹಿತ್ಯ ಮತ್ತು ನಾಟಕಗಳು' ಎನ್ನುವ ಈ ಸಂಪುಟ ಎಂ.ವಿ.ಸೀ. ಸಮಗ್ರ ಸಾಹಿತ್ಯ ಮಾಲೆ'ಯ ಐದನೆಯ ಸಂಪುಟವಾಗಿದೆ. ಇದನ್ನು ಸಂಪಾದಿಸಲು ನನಗೆ ಅವಕಾಶ ನೀಡಿದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ. ಶತಮಾನೋತ್ಸವ ಸಮಿತಿಯ ಗೌರವಾಧ್ಯಕ್ಷರಾದ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ, ಅಧ್ಯಕ್ಷರಾದ ನಾಡೋಜ ಜಿ. ನಾರಾಯಣ ಮತ್ತು ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ಮತ್ತು ಡಿ. ಲಿಂಗಯ್ಯ ಅವರಿಗೆ ಆಭಾರಿಯಾಗಿದ್ದೇನೆ. ಎಂ.ವಿ. ಸೀತಾರಾಮಯ್ಯ ಅವರ ಶತಮಾನೋತ್ಸವ ವರ್ಷದಲ್ಲಿ ಪ್ರತಿಷ್ಠಾನ ಹಮ್ಮಿಕೊಂಡಿರುವ ಹಲವು ಯೋಜನೆಗಳಲ್ಲಿ ಸಮಗ್ರ ಸಾಹಿತ್ಯ ಪ್ರಕಟಣೆಯೂ ಒಂದಾಗಿದೆ. ಇದನ್ನು ಕನ್ನಡ ಸಂಸ್ಕೃತಿ ಇಲಾಖೆ ಪ್ರಕಟಿಸುತ್ತಿರುವುದು ಅಭಿನಂದನೀಯವಾಗಿದೆ. ಅದರ ಪದಾಧಿಕಾರಿಗಳಿಗೂ ಕೂಡ ನನ್ನ ಧನ್ಯವಾದಗಳು.

ಸುಮಾರು ಒಂದು ನೂರು ಗ್ರಂಥಗಳನ್ನೂ ನೂರಾರು ಲೇಖನಗಳನ್ನೂ ರಚಿಸಿರುವ ಎಂ.ವಿ. ಸೀತಾರಾಮಯ್ಯನವರ ಇಡೀ ಸಾಹಿತ್ಯವನ್ನು ಸಮಗ್ರ ಸಾಹಿತ್ಯ ಮಾಲೆಯಲ್ಲಿ ಜೋಡಿಸಿ ಒಟ್ಟು ಹನ್ನೆರಡು ಸಂಪುಟಗಳಲ್ಲಿ ಅಡಕಗೊಳಿಸುವ ಸಂಯೋಜನಾ ಕಾರ್ಯವನ್ನು ಪ್ರತಿಷ್ಠಾನದ ಮತ್ತು ಉತ್ಸವ ಸಮಿತಿಯ ಕಾರ್ಯದರ್ಶಿಗಳಾದ ಡಾ. ನಾ. ಗೀತಾಚಾರ್ಯ ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಈ ಸಂಪುಟಕ್ಕೆ ಅಳವಡುವ ಕೃತಿಗಳು ಮತ್ತು ಲೇಖನಗಳನ್ನು ಪ್ರತಿಷ್ಠಾನದ ಮೂಲಕ ಒದಗಿಸಿಕೊಟ್ಟಿರುವುದಕ್ಕಾಗಿ ಅವರಿಗೂ ಮತ್ತು ಉತ್ಸವ ಸಮಿತಿ ಕಾರ್ಯದರ್ಶಿಗಳಾದ ಎಸ್.ವಿ. ಶ್ರೀನಿವಾಸ ರಾವ್ ಹಾಗೂ ಎಂ.ಎಸ್. ಭಾಸ್ಕರ್ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಎಂ.ವಿ.ಸೀ. ಅವರ ಎಲ್ಲ ನಾಟಕಗಳನ್ನೂ ದೊರಕಿಸಿಕೊಳ್ಳಲು ನಾವು ಸಕಲ ಪ್ರಯತ್ನ ಮಾಡಿದೆವು. ಆದರೂ ಅವರ ಎರಡು ನಾಟಕಗಳು (೧. ಹೂವಿನ ಆಸೆ ಮತ್ತು ೨. ತೆರೆಮರೆಯ ಚಿತ್ರಗಳು) ಎಲ್ಲೂ ದೊರಕಲಿಲ್ಲ. ಅನಿವಾರ್ಯವಾಗಿ

ಸಲ್ಲಿಸಿದ್ದಾರೆ. ಅವರ ವಿಸ್ತೃತ ಹಾಗೂ ವ್ಯಾಪಕ ಸಾಹಿತ್ಯ ಸೇವೆಯನ್ನು ಗುರುತಿಸಿ, 'ಮುಗಿಯದ ಮಾಯೆ' ಕವನ ಸಂಕಲನಕ್ಕೆ ದೇವರಾಜ್ ಬಹದ್ದೂರ್ ಬಹುಮಾನ; 'ತೊಟ್ಟಿಲು ತೂಗದ ಕೈ' ನಾಟಕಕ್ಕೆ, 'ಜೀವನ ನಾಟಕ' ಕಾದಂಬರಿಗೆ ರಾಜ್ಯ ಸರ್ಕಾರದ ಬಹುಮಾನ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ; 'ಆಸ್ವಾದ' ಅಭಿನಂದನ ಗ್ರಂಥ ಹೀಗೆ ಹಲವಾರು ಪ್ರಶಸ್ತಿ ಪುರಸ್ಕಾರಗಳನ್ನು ನೀಡಿ ಗೌರವಿಸಲಾಗಿದೆ.

ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯವನ್ನು ಇಲಾಖೆಯಿಂದ ಪ್ರಕಟಿಸಲು ಸಹಕರಿಸಿದ ಬಿ.ಎಂ.ಶ್ರೀ. ಪ್ರತಿಷ್ಠಾನದ ಡಾ. ನಾ. ಗೀತಾಚಾರ್ಯ ಅವರಿಗೂ ಈ ಸಂಪುಟವನ್ನು ಸಂಪಾದಿಸಿಕೊಟ್ಟ ಪ್ರೊ. ಟಿ.ಎಸ್. ನಾಗರಾಜ ಶೆಟ್ಟಿ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಸಮಗ್ರ ಸಾಹಿತ್ಯ ಪ್ರಕಟಣಾ ಯೋಜನೆಗೆ ಒಪ್ಪಿಗೆ ನೀಡಿದ ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಬಿ.ಆರ್. ಜಯರಾಮರಾಜೇ ಅರಸ್ ಅವರಿಗೆ, ಈಗಿನ ಇಲಾಖಾ ಕಾರ್ಯದರ್ಶಿಗಳಾದ ರಮೇಶ ಬಿ. ಝಳಕಿ ಅವರಿಗೆ ವಿಶೇಷ ವಂದನೆಗಳು ಹಾಗೂ ಈ ಪ್ರಕಟಣೆಯನ್ನು ಹೊರತರಲು ಸಹಕರಿಸಿದ ಶ್ರೀ ಬಲವಂತರಾವ್ ಪಾಟೀಲ್ ಜಂಟಿ ನಿರ್ದೇಶಕರು (ಸುವರ್ಣ ಕರ್ನಾಟಕ), ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ, ಕಾರ್ಯಕ್ರಮ ಅಧಿಕಾರಿ, ಪ್ರಕಟಣಾ ಶಾಖೆ ಹಾಗೂ ಸಿಬ್ಬಂದಿ ವರ್ಗದವರಿಗೆ ನನ್ನ ಕೃತಜ್ಞತೆಗಳು. ಈ ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಮಯೂರ ಪ್ರಿಂಟ್ ಆ್ಯಡ್ಸ್‌ನ ಮಾಲೀಕರು ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳು.

ನಾಡಿನ ಸಂಶೋಧನಾ ಕ್ಷೇತ್ರಕ್ಕೆ ಅಪಾರ ಕೊಡುಗೆ ನೀಡಿರುವ ವಿದ್ವಾಂಸರಾದ ಪ್ರೊ. ಎಂ.ವಿ. ಸೀತಾರಾಮಯ್ಯ ಅವರ ಕೃತಿಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ಒದಗಿಸುವುದು ನಮ್ಮ ಆಶಯವಾಗಿರುತ್ತದೆ. ಪ್ರೊ. ಎಂ.ವಿ.ಸೀತಾರಾಮಯ್ಯನವರ ಸಮಗ್ರ ಸಾಹಿತ್ಯ ಸಂಪುಟಗಳನ್ನು ಸಾಹಿತ್ಯಾಸಕ್ತರು ಪ್ರೀತಿಯಿಂದ ಸ್ವಾಗತಿಸುತ್ತಾರೆಂದು ನಂಬಿದ್ದೇವೆ. ಈ ಕೃತಿಗಳ ಪ್ರಯೋಜನವನ್ನು ಕನ್ನಡ ಜನತೆ ಪಡೆದುಕೊಂಡರೆ ನಮ್ಮ ಶ್ರಮ ಸಾರ್ಥಕ.

ಬೆಂಗಳೂರು
೨೮.೦೯.೨೦೧೦

**ಮನು ಬಳಿಗಾರ್**
ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಪ್ರಸ್ತಾವನೆ

ಕನ್ನಡ ಸಾಹಿತ್ಯ ಮೊದಲಿನಿಂದಲೂ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಉತ್ತಮ ಗುಣಮಟ್ಟವನ್ನು ಕಾಯ್ದುಕೊಳ್ಳುತ್ತಲೇ ಬಂದಿದೆ. ಏಳು ಜನ ಸಾಹಿತಿಗಳಿಗೆ ಜ್ಞಾನಪೀಠ ಪ್ರಶಸ್ತಿ ಸಂದಿದೆ. ಆದಿ ಕವಿ ಪಂಪನಿಂದಲೇ ಶ್ರೇಷ್ಠ ಮಟ್ಟದ ಸಾಹಿತ್ಯ ಕಂಡ ನಾಡು ನಮ್ಮದು. ಇಂದೂ ಉತ್ತಮ ಕೃತಿಗಳು ಎಲ್ಲ ಪ್ರಕಾರಗಳಲ್ಲೂ ಹೊರಬರುತ್ತಿವೆ. ಬಿ.ಎಂ.ಶ್ರೀ ಆಚಾರ್ಯರು ಹೇಳಿರುವಂತೆ ಫಸಲೇನೋ ಸಾಕಷ್ಟಿದೆ; ಕುಯ್ಲು ಮಾಡುವವರು ಕಡಮೆ. ಓದುಗರ ಸಂಖ್ಯೆಯಷ್ಟೇ ಹೆಚ್ಚಬೇಕಾಗಿದೆ.

ನಮ್ಮ ಭಾಷೆಯಲ್ಲಿ ಆಧುನಿಕ ಅರ್ಥದಲ್ಲಿ 'ನಾಟಕ' ಎನ್ನುವ ಬಗೆಯ ಬರೆವಣಿಗೆ ಬಹಳ ತಡವಾಗಿ ಪ್ರಾರಂಭವಾಯಿತು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ (೧೬೮೦) ಸಿಂಗರಾರ್ಯನಿಂದ ರಚಿತವಾದ 'ಮಿತ್ರವಿಂದಾ ಗೋವಿಂದ' ಮೊಟ್ಟ ಮೊದಲ ನಾಟಕ. ಇದರದು ಐತಿಹಾಸಿಕ ಮಹತ್ವ. ಇದೂ ಶ್ರೀ ಹರ್ಷನ ಸಂಸ್ಕೃತ ನಾಟಕ 'ರತ್ನಾವಳಿ'ಯ ರೂಪಾಂತರವಾಗಿದೆ.

ನಾಟಕ ಸಾಹಿತ್ಯ ನಡೆದು ಬಂದ ದಾರಿಯನ್ನು ಗಮನಿಸಿದರೆ ಕೆಲವು ಮಾದರಿಗಳು ಕಾಣಬರುತ್ತವೆ. ಮೊದಲಿಗೆ ಸಂಸ್ಕೃತ ನಾಟಕಗಳ ಅನುವಾದಗಳು ನಂತರ ಇಂಗ್ಲಿಷ್ ನಾಟಕಗಳ ಕಡೆ ಗಮನ. ಮುಂದಿನದು ಸಾಮಾಜಿಕ ನಾಟಕಗಳ ಪರ್ವ. ಈ ಕಾಲದಲ್ಲಿ ಪೌರಾಣಿಕ ನಾಟಕಗಳೂ ಬಂದುವು. ಆಮೇಲೆ ದೇಸೀ ನಾಟಕಗಳ ಪರಿಷ್ಕೃತವಾದ ಶಿಷ್ಟೀಕೃತ ರೂಪಗಳು. ಈ ಕಾಲದಲ್ಲಿ ಐತಿಹಾಸಿಕ ನಾಟಕಗಳೂ ಬೆಳಕು ಕಂಡವು. ಅತೀವವಾದ ಜಾನಪದ ಪ್ರಭಾವದಿಂದ ಮುಂದಿನ ನಾಟಕಗಳು ಬಂದುವಾದರೂ ಸೊಬಗಿನ ರೂಪ ಪಡೆದು ಜನಮನವನ್ನು ಆಕರ್ಷಿಸಿದವು.

ಪ್ರತಿ ಪರ್ವವನ್ನೂ ಗಮನಿಸುವುದೇ ಆದರೆ ಮೈಸೂರಿನ ಚಾಮರಾಜ ಒಡೆಯರ ಕಾಲದಲ್ಲಿ ೧೮೮೨ರಲ್ಲಿ "ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ" ಸ್ಥಾಪಿತವಾಯಿತು. ಮಹಾರಾಜರ ನಾಟಕ ಪ್ರೀತಿಯೇ ಇದರ ಹುಟ್ಟಿಗೆ ಕಾರಣ. ಆ ಕಾಲದಲ್ಲೇ ಚುರುಮುರಿ ಶೇಷಗಿರಿರಾಯರು ಹಾಗೂ 'ಅಭಿನವ ಕಾಳಿದಾಸ' ಬಿರುದನ್ನು ಪಡೆದುಕೊಂಡ ಬಸವಪ್ಪ ಶಾಸ್ತ್ರಿಗಳು ಸಾಕಷ್ಟು ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ತಂದರು. ಚುರುಮುರಿಯವರ 'ಶಾಕುಂತಲಾ', ಸಿಂಗರಾರ್ಯನ 'ಮಿತ್ರವಿಂದಾ ಗೋವಿಂದ'ದ ನಂತರ ಬಂದ ಸಂಸ್ಕೃತ ನಾಟಕಗಳ ಕನ್ನಡ ಅನುವಾದಗಳ ಪೈಕಿ ಒಂದು ಮೈಲುಗಲ್ಲೆನಿಸಿದೆ. ಅವರು ಶೂದ್ರಕನ 'ಮೃಚ್ಛಕಟಿಕ'ವನ್ನು ಗದ್ಯ ರೂಪದಲ್ಲಿ

ಅವು ಇಲ್ಲಿ ಸೇರದೆ ಹೋಗಿವೆ. ಮುಂದೆ ಎಂದಾದರೂ ಆ ಎರಡು ನಾಟಕ ದೊರೆತು ಸೇರಿಸಿಕೊಳ್ಳುವಂತಾದರೆ ಚೆಂದ. ಉಳಿದೆಲ್ಲವನ್ನೂ ಇಲ್ಲಿ ಸೇರಿಸಿದೆ. ಹಿರಿಯರಾದ ಎಂ.ವಿ.ಸೀ ಕಿರಿಯರನ್ನೂ ಮರೆಯದೆ ಅವರ ಗೆಳೆಯರಾಗಿದ್ದ ಜಿ.ಪಿ. ರಾಜರತ್ನಂ ಅವರೊಂದಿಗೇ ಹೆಜ್ಜೆಯಿಟ್ಟು ಮಕ್ಕಳ ಸಾಹಿತ್ಯ ರಚನೆಗೆ ಮನಸ್ಸು ಮಾಡಿದುದು ಅವರ ಅವ್ಯಾಜ ಮಕ್ಕಳ ಪ್ರೀತಿಗೆ ದ್ಯೋತಕವಾಗಿದೆ.

ಅವರ ನಾಟಕ ಹಾಗೂ ಮಕ್ಕಳ ಸಾಹಿತ್ಯ ಕುರಿತಂತೆ 'ಪ್ರಸ್ತಾವನೆ'ಯನ್ನು ಪ್ರತ್ಯೇಕವಾಗಿ ಬರೆದಿದೆ. ಬದುಕಿನುದ್ದಕ್ಕೂ ಎಲೆಮರೆಯ ಕಾಯಿಯಂತೆ ದುಡಿದವರು ಎಂ.ವಿ.ಸೀ. ವಿದ್ವದ್ವಲಯದಲ್ಲಿ ಪರಿಚಿತರೇ ಹೊರತು ಕನ್ನಡ ಸಾಹಿತ್ಯಾಭಿಮಾನಿಗಳೆಲ್ಲರ ಗಮನಕ್ಕೆ ಅಷ್ಟಾಗಿ ಅವರು ಬರಲಿಲ್ಲ. ಬಹಳ ಕಡೆ ಅವರನ್ನು ಗಮನಿಸಿಲ್ಲ. ಕನ್ನಡಿಗರು ಈ ಸಂಪುಟಗಳನ್ನು ಓದಿ ಹರ್ಷಿಸಿದಲ್ಲಿ ಎಂ.ವಿ.ಸೀ. ಅವರಿಗೆ 'ಗೌರವ ಶ್ರದ್ಧಾಂಜಲಿ' ಸಲ್ಲಿಸಿದಂತೆ ಆಗುತ್ತದೆ ಎಂದು ನನ್ನ ಅನ್ನಿಸಿಕೆ.

**ಟಿ.ಎಸ್. ನಾಗರಾಜ ಶೆಟ್ಟಿ**
(ಸಂಪುಟ ಸಂಪಾದಕ)

ಎರಡು ಸಾವಿರಕ್ಕೂ ಹೆಚ್ಚು ಪ್ರಯೋಗಗಳನ್ನು ಕಂಡು ಇತಿಹಾಸ ನಿರ್ಮಿಸಿದವು. ಸತಿ ತುಳಸಿ, ಅವರ ಮತ್ತೊಂದು ನಾಟಕ.

ಹೊಸಗನ್ನಡದ ಮೊದಲ ಸಾಮಾಜಿಕ ನಾಟಕ 'ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ' ೧೮೮೭ರಷ್ಟು ಹಿಂದೆಯೇ ಬಂತು. ಬಹುಶಃ ಅದೇ ಕಾಲದಲ್ಲಿ ಪತ್ತಾರ ಮಾಸ್ತರರಿಂದ ರಚಿತವಾದ 'ಸಂಗ್ಯಾಬಾಳ್ಯಾ' ನಾಟಕವಂತೂ ಅತ್ಯಂತ ಜನಪ್ರಿಯ. ಉತ್ತರ ಕನ್ನಡದ ಈ ನಾಟಕ ಜನಮನ ಸೆಳೆಯುತ್ತ ಭಿನ್ನ ಭಿನ್ನ ರೂಪಗಳಲ್ಲಿ ಇವತ್ತಿಗೂ ಪ್ರದರ್ಶನಗೊಳ್ಳುತ್ತಲೇ ಇದೆ.

ವಿದೇಶಗಳಲ್ಲಿ ಪ್ರವಾಸ ಮಾಡಿ, ರಂಗಭೂಮಿಯ ಅಧ್ಯಯನ ನಡೆಸಿ ಕನ್ನಡದ ನಾಟಕಗಳನ್ನು ನಿರಪೇಕ್ಷ ಭಾವದಿಂದ ಬರೆದ ಖ್ಯಾತ ನಾಟಕಕಾರರೆಂದರೆ ಟಿ.ಪಿ. ಕೈಲಾಸಂ ಹಾಗೂ ಶ್ರೀರಂಗರು. 'ಕೈ' ಅವರ ಮೊದಲ ನಾಟಕ 'ಟೊಳ್ಳುಗಟ್ಟಿ' (೧೯೨೩), ಶ್ರೀರಂಗರ ಮೊದಲ ನಾಟಕ 'ಉದರ ವೈರಾಗ್ಯ'(೧೯೩೦). ಕೆಲ ಕಾಲ ಇವರಿಬ್ಬರ ನಾಟಕಗಳು ರಂಗದ ಮೇಲೆ ಮೆರೆದವು.

ಇವು 'ಹವ್ಯಾಸಿ ರಂಗಭೂಮಿ'ಗೆ ಸೇರಿದ ನಾಟಕಗಳು. ಇದೇ ಕ್ಷೇತ್ರಕ್ಕೆ ಮುಂದೆ ಪರ್ವತವಾಣಿ, ದಾಶರಥಿ ದೀಕ್ಷಿತ್, ಎ.ಎಸ್. ಮೂರ್ತಿ, ನಾ. ಕಸ್ತೂರಿ, ಎನ್ಕೆ, ಗುಂಡಣ್ಣ ಮುಂತಾದವರು ಕೊಡುಗೆಗಳನ್ನು ಕೊಟ್ಟು ಕನ್ನಡ ಪ್ರೇಕ್ಷಕರ ರಂಜನೆಗೆ ಕಾರಣೀಭೂತರಾದರು. ಶಿವರಾಮ ಕಾರಂತ, ಪು.ತಿ. ನರಸಿಂಹಾಚಾರ್ ಇಬ್ಬರೂ 'ಗೀತ ನಾಟಕ'ಗಳನ್ನು ರಚಿಸಿದ್ದು ವಿಶೇಷ. ಮಾಸ್ತಿಯವರ 'ಕಾಕನ ಕೋಟೆ'ಯೂ ಆಕರ್ಷಕ ನಾಟಕ.

ಸಂಸರ ಮೂಲ ಹೆಸರು ಸಾಮಿ ವೆಂಕಟಾದ್ರಿ ಐಯ್ಯರ್(೧೮೯೮–೧೯೩೯). ಅಲ್ಪ ಕಾಲ ಬದುಕಿದ ಅವರು ಮೈಸೂರು ಅರಸರ ಮನೆತನವನ್ನಾಧರಿಸಿ ಹಲವಾರು ಐತಿಹಾಸಿಕ ನಾಟಕಗಳನ್ನು ಬರೆದರು. ಭಾರತ ದೇಶದಲ್ಲೇ ಐತಿಹಾಸಿಕ ನಾಟಕಗಳ ಗಟ್ಟಿತನಕ್ಕೆ ಇವರ ನಾಟಕಗಳೇ ಅತ್ಯಂತ ಶಕ್ತ ನಾಟಕಗಳು ಎನ್ನುವ ಹೆಗ್ಗಳಿಕೆ ಅವರದು. ಇತಿಹಾಸವನ್ನು ವರ್ತಮಾನಕ್ಕೂ ಅಳವಡಿಸಿ ಹೊಸ ಬಗೆಯ ಭಾಷೆಯನ್ನು ಅವರು ಬಳಸಿದ್ದು ಇಂದು ಒಂದು ಚರಿತ್ರೆ.

ಇಂಗ್ಲಿಷಿನ ಪ್ರಭಾವದಿಂದಾಗಿ ಅಸಂಗತ ನಾಟಕಗಳೂ ಕನ್ನಡದಲ್ಲಿ ಬಂದುವು. ನ. ರತ್ನ (ಗೋಡೆ ಬೇಕೆ ಗೋಡೆ), ಚಂದ್ರಶೇಖರ ಪಾಟೀಲ (ಟಿಂಗರ ಬುಡ್ಡಣ್ಣ), ಪಿ. ಲಂಕೇಶ್(ತೆರೆಗಳು), ಚಂದ್ರಕಾಂತ ಕುಸನೂರ(ಆನಿ ಬಂತಾನಿ), ಚದುರಂಗ (ಇಲಿ ಬೋನು), ಸುಮತೀಂದ್ರ ನಾಡಿಗ (ಬಕ್ಕತಲೆಯ ನರ್ತಕಿ)–ಇವರೆಲ್ಲ ಬೀರಿದ ಪ್ರಭಾವ ಸ್ವಲ್ಪ ಕಾಲ ವಿಜೃಂಭಿಸಿತು. ನಂತರ ಆ ಬಗೆಯ ನಾಟಕಗಳು ಮರೆಯಾದವು. ಬ್ರೆಕ್ಟ್‌ನ 'ಎಪಿಕ್ ಥಿಯೇಟರ್' ಕೂಡ ಕೆಲ ಕಾಲ ಕನ್ನಡದ ನಾಟಕಕಾರರ ಮೇಲೆ ಅಪಾರ ಪ್ರಭಾವ ಬೀರಿತು. ಜಿ.ಬಿ. ಜೋಷಿ(ಕದಡಿದ ನೀರು), ಶ್ರೀರಂಗ (ಕತ್ತಲೆ ಬೆಳಕು) ಮುಂತಾದವರು 'ವಾಸ್ತವ ವಾದಿ' ನಾಟಕಗಳನ್ನು ಸೃಜಿಸಿದರು.

ತಂದರಲ್ಲದೆ ಹೆನ್ರಿ ಫೀಲ್ಡಿಂಗನ ಕೃತಿಯೊಂದನ್ನಾಧರಿಸಿದ 'ಸುಂದರ ನಾಟಕ' (ಏಕಾಂಕ ನಾಟಕ)ವನ್ನೂ ರಚಿಸಿ ಕನ್ನಡದ ಎರಡನೆಯ ನಾಟಕಕಾರರೆನಿಸಿದ್ದಾರೆ.

ಚಾಮರಾಜ ಒಡೆಯರ ಆಸ್ಥಾನ ಕವಿಗಳಾದ ಬಸವಪ್ಪ ಶಾಸ್ತ್ರಿಗಳು ಸಂಸ್ಕೃತದಿಂದ ಕನ್ನಡಕ್ಕೆ ತಂದ 'ಕರ್ಣಾಟಕ ಶಾಕುಂತಲಾ ನಾಟಕಂ' (೧೮೯೧) ಶ್ರೇಷ್ಠ ಅನುವಾದ ಎನ್ನುವ ಮೆಚ್ಚುಗೆಗೆ ಪಾತ್ರವಾಯಿತು; ಅನುವಾದ ಕಲೆಗೆ ಒಂದು ಉತ್ತಮ ಉದಾಹರಣೆಯಾಯಿತು. ಅಳಸಿಂಗರಾರ್ಯರು ಭಾಸನ ನಾಟಕಗಳನ್ನು ಕನ್ನಡಕ್ಕೆ ಬರಮಾಡಿದರು. ಮುಂದೆ ಹಲವರು ಹಲವು ಸಂಸ್ಕೃತ ನಾಟಕಗಳನ್ನು ಸತತವಾಗಿ ಭಾಷಾಂತರಿಸಿದರು. ಜೊತೆ ಜೊತೆಯಲ್ಲಿಯೇ ಇಂಗ್ಲಿಷಿನ ಪ್ರಸಿದ್ಧ ನಾಟಕಗಳೂ ಅನುವಾದಗೊಂಡವು.

ಕೆರೂರು ವಾಸುದೇವಾಚಾರ್ಯರು ೧೮೯೦ರಲ್ಲಿ ಷೇಕ್ಸ್‌ಪಿಯರನ 'ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್' ನಾಟಕವನ್ನು 'ವಸಂತಯಾಮಿನಿ ಸ್ವಪ್ನ' ಎನ್ನುವ ಹೆಸರಿನಲ್ಲಿ ಅನುವಾದಿಸಿದರು. ಅದೇ ಸುಮಾರಿಗೆ ಎಂ.ಎಲ್. ಶ್ರೀಕಂಠೇಗೌಡರು ಷೇಕ್ಸ್‌ಪಿಯರನ 'ಮ್ಯಾಕ್‌ಬೆತ್' ನಾಟಕವನ್ನು 'ಪ್ರತಾಪ ರುದ್ರದೇವ' ಎಂದೂ 'ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಂ' ನಾಟಕವನ್ನು 'ಪ್ರಮೀಳಾರ್ಜುನೀಯ' ಎಂದೂ ಅನುವಾದಿಸಿದರು. ಇದೇ ಸರಮಾಲೆಯಲ್ಲಿ ಮುಂದೆ ಅನೇಕರು ಇಂಗ್ಲಿಷ್ ನಾಟಕಗಳ ಅನುವಾದದತ್ತ ವಾಲಿದರು. ಮುಂದೆ ಬಿ.ಎಂ.ಶ್ರೀ (ಪಾರಸಿಕರು) ಡಿ.ವಿ.ಜಿ(ಮ್ಯಾಕ್‌ಬೆತ್) ಗುಂಡೋಕೃಷ್ಣ ಚುರಮುರಿ (ಒಥೆಲೊ) ಸಿ. ಆನಂದರಾಯರು (ರೋಮಿಯೋ ಜೂಲಿಯೆಟ್) ಕುವೆಂಪು (ಟೆಂಪೆಸ್ಟ್, ಹ್ಯಾಮ್‌ಲೆಟ್) ಹೀಗೆ ಬಂದವು.

ಈ ಪರಂಪರೆಯನ್ನು ಪಿ. ಲಂಕೇಶ್ (ಈಡಿಪಸ್ ಮತ್ತು ಅಂತಿಗೊನೆ), ಎಚ್.ಕೆ. ರಾಮಚಂದ್ರಮೂರ್ತಿ (ಗಾಜಿನಗೊಂಬೆ) ಕೆ.ಎಸ್. ನಿಸಾರ್ ಅಹಮದ್ (ಎ ಮಿಡ್ ಸಮ್ಮರ್ ನೈಟ್ಸ್ ಡ್ರೀಮ್) ರಾಮಚಂದ್ರ ದೇವ (ಮ್ಯಾಕ್‌ಬೆತ್) ಎಚ್.ಎಸ್. ಶಿವಪ್ರಕಾಶ್ (ಕಿಂಗ್ ಲಿಯರ್) ಮುಂತಾದವರು ಮುಂದುವರಿಸಿದ್ದಾರೆ.

ಶಾಂತಕವಿಗಳು ಸ್ವತಂತ್ರ ಪೌರಾಣಿಕ ನಾಟಕಗಳನ್ನು ಬರೆದು ಮೊದಲ ಸ್ವತಂತ್ರ ನಾಟಕಕಾರ ಎನಿಸಿಕೊಂಡರು. ಗಿರಿಜಾ ಕಲ್ಯಾಣ. ಉಷಾಹರಣ, ವತ್ಸಲಾಹರಣ ಮುಂತಾದವನ್ನು ರಚಿಸಿದರು. ರಂಗಭೂಮಿಗಾಗಿ, ಪ್ರದರ್ಶನಗಳ ಸಲುವಾಗಿಯೇ ನಾಟಕ ರಚನೆ ಮಾಡಿದವರೆಂದರೆ ಬೆಳ್ಳಾವೆ ನರಹರಿಶಾಸ್ತ್ರಿಗಳು. ಕೃಷ್ಣಲೀಲಾ, ರುಕ್ಮಿಣೀ ಸ್ವಯಂವರ, ತುಕಾರಾಂ ಇತ್ಯಾದಿ ಅವರ ನಾಟಕಗಳು. ನಂಜನಗೂಡು ಶ್ರೀಕಂಠಶಾಸ್ತ್ರಿಗಳು ಸೀತಾ ಪರಿಣಯ, ರಾಜಸೂಯ ಯಾಗ ಮುಂತಾಗಿ ಪಾಂಡಿತ್ಯಪೂರ್ಣ ನಾಟಕಗಳನ್ನು ಬರೆದರು.

ಬಿ. ಪುಟ್ಟಸ್ವಾಮಯ್ಯನವರ ಹೆಸರಂತೂ ಈ ದಿಸೆಯಲ್ಲಿ ಸ್ಮರಣೀಯವಾದುದು. ಅವರು ರಂಗಭೂಮಿಗಾಗಿಯೇ ಬರೆದ 'ಕುರುಕ್ಷೇತ್ರ', 'ದಶಾವತಾರ'ಗಳಂತೂ

**ಶಾಸ್ತಿ :**

'ಕವಿಯ ಹೆಂಡತಿ' : ನಾಟಕದ ಜೊತೆಯಲ್ಲೇ ಪ್ರಕಟವಾಗಿರುವ ಕಿರು ನಾಟಕ 'ಶಾಸ್ತಿ'. ಇಳಿ ವಯಸ್ಸಿನ ವಿಧುರ ರಾಮಶಾಸ್ತ್ರಿ ಮನೆಗೆಲಸದವಳಾದ ಶೂದ್ರ ಹೆಣ್ಣು ಕೆಂಪಿಯನ್ನು ಬಯಸುವ 'ಅತಿ ಭೋಗ'ದ ದುರಾಸೆ ನಾಟಕದ ವಸ್ತು. ಶಾಸ್ತ್ರಿಯೇ ಹೇಳುವ ಹಾಗೆ ಕೆಂಪಿ, 'ಹೆಸರು ಒಂದಲ್ಲ ಅವಳು ಇರೋದು ಒಂದಲ್ಲ'. ಅವಳಿಗಾಗಿ ಶಾಸ್ತ್ರಿ ಕಣವನ್ನು ಹೊಲಿಸಿ, ಧರ್ಮಾವರದ ಸೀರೆಯನ್ನೂ ತಂದಿಟ್ಟುಕೊಂಡಿದ್ದಾನೆ! ಗೆಳೆಯ ಸೀನಪ್ಪ ಸದಾ ಹಂಗಿಸುವ ಪ್ರಕ್ರಿಯೆ ನಾಟಕದಲ್ಲಿ ಚೆನ್ನಾಗಿ ಮೂಡಿಬಂದಿದ್ದು ಸದಾ ಶಾಸ್ತ್ರಿಗಳ ಬಂಡವಾಳವನ್ನು ಬಯಲು ಮಾಡುತ್ತಲೇ ಇರುತ್ತದೆ. ಅಂಥವರ ಪಾಡನ್ನು ನಮ್ಮ ಗಮನಕ್ಕೆ ತರುತ್ತ ಹಾಸ್ಯದ ಮೂಲಕವೇ ಚುಚ್ಚುವ ಪರಿ ಎಂ.ವಿ.ಸೀ. ಅವರ ಶೈಲಿಯಲ್ಲಿ ವ್ಯಕ್ತವಾಗುತ್ತದೆ. ಕೆಂಪಿ, ಅವಳ ಗಂಡ ಕೆಂಪ ಸೇರಿಕೊಂಡು ಶಾಸ್ತ್ರಿಗಳನ್ನು ಅಭಿನವ ಕೀಚಕನನ್ನಾಗಿ ಮಾಡುವ ದೃಶ್ಯ ಮಾರ್ಮಿಕ. ಮೊದಲ ನೋಟ, ನಡುನೋಟ, ಕಡೆಯ ನೋಟ–ಈ ಮೂರು ಭಾಗಗಳಲ್ಲಿ ಕಥಾ ವಸ್ತುವನ್ನು ಹಂಚಿ ಶಾಸ್ತ್ರಿಯ ದುರ್ಬುದ್ಧಿಯನ್ನು ಒರೆಗೆ ಹಚ್ಚಿ, ಕೊನೆಯಲ್ಲಿ ಆತ ಬುದ್ಧಿ ಕಲಿಯುವ ಹಾಗೆ ಮಾಡಲಾಗಿದೆ. ನಡೆದ ಮೇಲೆ ಈ ತತಂಗವನ್ನೆಲ್ಲ ಊಹಿಸಿಕೊಂಡ ಸೀನಪ್ಪನಿಗೆ ಶಾಸ್ತ್ರಿ, 'ಸೀನಪ್ಪ ನಿನ್ನ ಕೈ ಮುಗಿದು ಬೇಡಿಕೊಳ್ಳುತ್ತೇನೆ. ಅರ್ಥವಾದರೆ ಸಂತೋಷ. ವ್ಯಾಖ್ಯಾನ ಮಾಡಬೇಡ' ಎಂದು ದಮ್ಮಯ್ಯ ಗುಡ್ಡೆ ಹಾಕುವುದು ಅಂಥ ದುರುಳರ ವರ್ತನೆಗೆ ಹಿಡಿದ ಕನ್ನಡಿಯಾಗಿದೆ.

**ಸ್ವಯಂ–ವರ :**

ಈ ನಾಟಕವೂ ಅದೇ ದಿಕ್ಕಿನಲ್ಲಿ ಸಾಗುತ್ತದೆ. ಲಕ್ಷ್ಮೀನಾರಾಣಪ್ಪನವರು ಸಾಕಿಕೊಂಡಿದ್ದ ಸೀತೆ ಇಲ್ಲಿನ ವಧು. ಶ್ರೀಧರ(ಲಕ್ಷ್ಮೀನಾರಾಣಪ್ಪನವರ ಭಾವ ಮೈದುನ) ತನ್ನ ಗೆಳೆಯನಾದ ರಘುಪತಿಗೆ ಈಕೆಯನ್ನು ಗಂಟು ಹಾಕಲು ಯೋಚಿಸುತ್ತಿದ್ದಾನೆ. ಆದರೆ ಐವತ್ತು ವರ್ಷದ ಲಕ್ಷ್ಮೀನಾರಾಣಪ್ಪ, ಅರವತ್ತು ವರ್ಷ ವಯಸ್ಸಿನ ಜಗನ್ನಾಥ ರಾಯರು ತಾವೇ ಅವಳ ಕೈ ಹಿಡಿಯ ಬಯಸಿ 'ಸ್ವಯಂವರ'ಗಳಾಗಿದ್ದಾರೆ. ಸಾಕು ತಂದೆಯ ಸ್ಥಾನದಲ್ಲಿರುವ ಮುದುಕ ಒಬ್ಬರು; ಮಾವನ ಸ್ಥಾನದಲ್ಲಿರುವ ಮುದುಕ ಮತ್ತೊಬ್ಬರು. ಇಬ್ಬರಿಗೂ ಮುದಿ ಚಪಲ. ಸೀತೆಯ ಅಕ್ಕ ಲಕ್ಷ್ಮೀದೇವಮ್ಮನವರು ಹೇಳೊ ಹಾಗೆ, 'ಗಂಡಸರೆಲ್ಲ ಹೀಗೇ....ಮೇಲೆ ಸರಸ, ಒಳಗೆ ಗರಗಸ....'. ಗಣಪತಿ ಶಾಸ್ತ್ರಿಯ ಪ್ರಶ್ನೆ ಇದೇ 'ಮುದುಕರಾಗ್ತಾ ಆಗ್ತಾ ಏನು ಚಪಲ ಬೇಕಾದರೂ ಇಟ್ಟುಕೊಳ್ಳಲಿ, ಈ ಮದುವೆ ಚಪಲ ಯಾತಕ್ಕೆ ಈ ಮುದಿ ವಯಸ್ಸಿನಲ್ಲಿ?'. ಅತ್ಯಂತ ತಮಾಷೆಯೆಂದರೆ ಒಂದೇ ಎಡೆಯಲ್ಲಿ ಈ ಇಬ್ಬರು ಮುದುಕರನ್ನೂ ಮದುವೆಗೆ ಸಿದ್ಧವಾಗಿದ್ದ ಯುವಕ ರಘುಪತಿಯನ್ನೂ ಕೂಡಿಸಿ, ಸೀತೆಗೆ ಹೂ

ಅರವತ್ತರ ದಶಕದಿಂದ ಈಚೆಗೆ ಕನ್ನಡ ರಂಗಭೂಮಿ ಅತ್ಯಂತ ಶ್ರೀಮಂತವಾಗಿ ವೃದ್ಧಿಸುತ್ತಿದೆ. ಗಿರೀಶ ಕಾರ್ನಾಡ, ಪಿ. ಲಂಕೇಶ, ಚಂದ್ರಶೇಖರ ಕಂಬಾರ, ಪೂರ್ಣಚಂದ್ರ ತೇಜಸ್ವಿ, ಎಚ್.ಎಸ್. ಶಿವಪ್ರಕಾಶ್, ಎಚ್.ಎಸ್. ವೆಂಕಟೇಶ ಮೂರ್ತಿ, ಕೆ.ವಿ. ಸುಬ್ಬಣ್ಣ, ಅಕ್ಷರ, ವೈದೇಹಿ ಮುಂತಾದವರ ನಾಟಕಗಳು ಜನಮನವನ್ನು ಆಕರ್ಷಿಸುತ್ತಿವೆ. ನವ್ಯತೆಯ ಮಾರ್ಗವನ್ನು ಹಾದು, ಆಧುನಿಕ ಜಾನಪದ ಮತ್ತಿತರ ಮಾದರಿಗಳನ್ನು ಅಳವಡಿಸಿಕೊಳ್ಳುತ್ತ ಕನ್ನಡ ರಂಗಭೂಮಿ ಹೊರಳು ದಾರಿಗಳನ್ನು ಕಂಡುಕೊಳ್ಳುತ್ತಲೇ ಇದೆ. ವೃತ್ತಿ ನಾಟಕ ಕಂಪೆನಿಗಳಂತೂ ಇತ್ತೀಚಿನವರೆವಿಗೂ ಜನಮನವನ್ನು ಸೂರೆಗೊಂಡಿದೆ. ಈಗ ಅವು ಸೊರಗುತ್ತಿವೆ; ಕೆಲವಂತೂ ನಿಂತೇ ಹೋಗಿವೆ.

ಈ ಹಿನ್ನೆಲೆಯಲ್ಲಿ ಎಂ.ವಿ. ಸೀತಾರಾಮಯ್ಯ ಅವರ ನಾಟಕಗಳನ್ನು ನಾವು ಅವಲೋಕಿಸಬಹುದು.

**ಕವಿಯ ಹೆಂಡತಿ:**

ಸಾಹಿತ್ಯ ರಚನೆ ಒಂದು ಹುಚ್ಚು ಎನ್ನುವುದನ್ನು ಬಹುತೇಕ ಎಲ್ಲರೂ ಒಪ್ಪುತ್ತಾರೆ. ಈ ನಾಟಕದ ಯುವ ಕವಿಗೂ ಬರೆಯುವ ಹುಚ್ಚು. ಪತ್ರಿಕೆಗಳೂ ತನ್ನ ಕೃತಿಗಳನ್ನು ಪ್ರಕಟಿಸುವ ಕನಸು ಕಾಣುತ್ತಾನೆ. ಅದಕ್ಕೆ ಸಿಲುಕಿ ಸಂಸಾರ ನಿರ್ವಹಣೆಯ ಜವಾಬ್ದಾರಿಯನ್ನು ಮರೆತಿರುತ್ತಾನೆ. ಆತನ ಅತಿ ಭಾವುಕತೆ ಹಾಗೂ ಹೆಂಡತಿಯ ವಾಸ್ತವ ಪ್ರಜ್ಞೆ ಇವುಗಳ ತಿಕ್ಕಾಟವೇ ನಾಟಕದ ವಸ್ತು. ಆತನ ಹೆಂಡತಿ ಸದಾ ಅವನನ್ನು, ಅವನ ಕವಿತಾ ಶಕ್ತಿಯನ್ನು ಹೀಗಳೆಯುತ್ತ ಗೇಲಿ ಮಾಡುತ್ತಿರುತ್ತಾಳೆ. ಕೊನೆಯಲ್ಲಿ ಸ್ವಲ್ಪ ಲೋಕ ಪ್ರಜ್ಞೆ ಪಡೆದು ಹೆಂಡತಿಗೆ ಆಕೆಯ ಅಪ್ಪ ಕಳುಹಿಸಿದ್ದ ಹಣವನ್ನು ಪಡೆಯುವುದರಲ್ಲಿ ಯಶಸ್ವಿಯಾಗುತ್ತಾನೆ.

ನಾಟಕದ ಅಂತ್ಯದಲ್ಲಿ, 'ನಾವು ನೆಮ್ಮದಿಯಾಗಿದ್ದರೆ ಅದೇ ಗೌರಿ ಹಬ್ಬ.' ಎನ್ನುವ ಶಾರದೆಯ ಮಾತಾಗಲಿ 'ನೆಮ್ಮದಿಯಾದ ಸರಳಜೀವನವೇ ಒಂದು ಸುಂದರ ಕಾವ್ಯ' ಎನ್ನುವ ಗುಂಡೂರಾಯರ ಮಾತಾಗಲಿ ನಮ್ಮ ಮನಸ್ಸಿಗೆ ನಾಟುತ್ತವೆ; ನಮ್ಮನ್ನು ಯೋಚನೆಗೆ ಹಚ್ಚುತ್ತವೆ. ನಾಟಕದ ನಿರೂಪಣೆಯ ಉದ್ದಕ್ಕೂ ಹಾಸ್ಯದ ಲೇಪ ಹರಿಯುತ್ತದೆ. ಈ ನಾಟಕದ ಜೀವಾಳವೇ ನಗು. ಈ ನಗೆಯ ಹಿಂದೆ ವಾಸ್ತವತೆಯ ಹೊಗೆಯೂ ಇದೆ ಎನ್ನುವುದು ಗಮನಾರ್ಹ. ಕವಿಗೆ ಬಿರುದು ಸಂಪಾದಿಸುವ ಯೋಚನೆ; ಹೆಂಡತಿಯಿಂದ ಹಣ ವಸೂಲಿ ಮಾಡಬೇಕೆನ್ನುವ ಯೋಚನೆ. 'ಕವಿಯ ಮಗನ ಹುಟ್ಟು ಹಬ್ಬದ ವೆಚ್ಚಕ್ಕೆ ಕೊಡಲಿಲ್ಲದಿದ್ದರೂ 'ಕವಿ ಪುತ್ರನ ವರ್ಷದ ಹೆಚ್ಚು' ಎನ್ನುವ ಕವನ ಬರೆದು ಅವನ ಕೈಲಿ ಕೊಟ್ಟರಿ' ಎನ್ನುವಲ್ಲಿನ ಹೆಂಡತಿಯ ವ್ಯಂಗ್ಯ ಮನಸ್ಸಿಗೆ ಇರಿಯುವಂತಿದೆ. ಕವಿ ಇಲ್ಲದ ಸ್ಥಾನ ಮಾನ ಕೊಚ್ಚಿಕೊಳ್ಳುವುದಕ್ಕಿಂತ ಇರುವ ಬದುಕನ್ನು ಹಚ್ಚಿಕೊಳ್ಳುವುದು ಮೇಲು ಎಂದು ನಾಟಕದಲ್ಲಿ ಮಾರ್ಮಿಕವಾಗಿ ನಿರೂಪಿಸಲಾಗಿದೆ.

ತೋಡಿಕೊಂಡಾಗ ಲೀಲಾ ಸಾರಾ ಸಗಟಾಗಿ ತಿರಸ್ಕರಿಸುತ್ತಾಳೆ. 'ಒಂದು ಮಗುವಾಯಿತೋ ಹೆಣ್ಣಿನ ಸೌಂದರ್ಯ, ಸ್ವಾತಂತ್ರ್ಯ ಎರಡೂ ಹಾಳು' ಎನ್ನುವುದು ಆಕೆಯ ಅಂಬೋಣ. ಕೇಶವನ ಅಭಿಪ್ರಾಯವಾದರೋ, 'ತೊಟ್ಟಿಲು ತೂಗಲು ಒಲ್ಲದ ಹೆಣ್ಣಿನ ಕೈ, ಹುಣ್ಣಿನ ಕೈಯಿ...'

ಇದರ ಫಲವಾಗಿ ಕೇಶವ ವಿಮಲಾ ಎನ್ನುವ ಮತ್ತೊಂದು ಹೆಣ್ಣನ್ನು ಮದುವೆಯಾಗುತ್ತಾನೆ. ಕೊನೆಯಲ್ಲಿ ಲೀಲಾವತಿ ಮಗುವನ್ನು ಹೊತ್ತು ತಂದು ಅದೇ ತೊಟ್ಟಿಲಿಗೆ ಹಾಕಿ, ತನ್ನ ನಡವಳಿಕೆಗೆ ಬೇಸತ್ತು ವಿಷಪ್ರಾಶನ ಮಾಡಿ ಆತ್ಮ ಹತ್ಯೆ ಮಾಡಿಕೊಳ್ಳುತ್ತಾಳೆ. ವಿಮಲ ಆ ತೊಟ್ಟಿಲನ್ನು ತೂಗುವುದರೊಂದಿಗೆ ನಾಟಕ ಮುಗಿಯುತ್ತದೆ. ನಾಟಕ ಹೆಣ್ಣಿನ ಗೌರವಯುತ ನಡೆಯನ್ನು ಸಮರ್ಥವಾಗಿ ಪ್ರತಿಪಾದಿಸಿದೆ. ವಿಮಲಳ ಪಾತ್ರದಲ್ಲಿ ಗಂಡ ಹಾಗೂ ಲೀಲಾ ಇಬ್ಬರನ್ನೂ ಕ್ಷಮಿಸುವ ಔದಾರ್ಯವನ್ನು ನಿರೂಪಿಸಿದ್ದಾರೆ. ನಾಗರಿಕತೆಯ ತಳುಕು ಬಳುಕುಗಳಿಗೆ ಮರುಳಾಗಿ ಹೆಣ್ಣು ಕುಟುಂಬ ಸೌಖ್ಯವನ್ನೂ ನೆಮ್ಮದಿಯನ್ನೂ ಹಾಳು ಮಾಡಬಾರದು ಎನ್ನುವ ಸಂದೇಶವನ್ನು ನಾಟಕ ಸದ್ದಿಲ್ಲದೆ ಹೊರಡಿಸುತ್ತದೆ. ಆದರೆ ಕೊನೆಯಲ್ಲಿ ದಿಢೀರನೆ ಲೀಲಾಳ ಆಗಮನ, ಅವಳ ಪಶ್ಚಾತ್ತಾಪ ಇವುಗಳ ಸ್ಪಷ್ಟ ಚಿತ್ರಣ ಸಿಗದೇ ಹೋಗುತ್ತದೆ. ಹೀಗೆ ನಾಟಕವನ್ನು ಆತುರದಿಂದ ಮುಗಿಸಿರುವ 'ಧಾವಂತ' ಒಂದು ದೋಷ ಎನ್ನಿಸುತ್ತದೆ.

ನಾಟಕದ ತಂತ್ರಗಾರಿಕೆ ನಾವೀನ್ಯತೆಯನ್ನು ಹೊಂದಿದೆ. ನಾಟಕಕಾರರು 'ಬಿನ್ನಹದಲ್ಲಿ ಹೇಳಿರುವ ಹಾಗೆ, ವ್ಯಕ್ತಿಗಳ ಮನೋಧರ್ಮವನ್ನು ಯಶಸ್ವಿಯಾಗಿ ಹೊರಗೆಡಹುವ ಒಳನೋಟಗಳು, "ಪಾತ್ರದ ಮನಸ್ಸಿನ ಹೋರಾಟವನ್ನು ನಿರೂಪಿಸುವ ಪುರುಷ–ಸ್ತ್ರೀ ಧ್ವನಿಗಳ ಯೋಜನೆ, ದೃಶ್ಯದ ಪ್ರಧಾನ ಭಾವಕ್ಕೆ ಹೊಂದುವಂತೆ ಬಣ್ಣ ಬಣ್ಣದ ತೆರೆಯ ಬಳಕೆ, ಉಚಿತವೆನಿಸಿದೆಡೆಯಲ್ಲಿ ಪದ್ಯಗಂಧಿಯಾದ ಗದ್ಯ, ಆದರೂ ತಂತ್ರವೇ ಮೇಲುಗೈಯಾಗಿ ನಾಟಕದ ಸಾಹಿತ್ಯ ರೂಪಕ್ಕೆ ಊನವಾಗದಂತೆ ಎಚ್ಚರಿಕೆ ವಹಿಸಿದ್ದೇನೆ' ಎನ್ನುವ ಮಾತುಗಳನ್ನು ನಾವು ಒಪ್ಪಬಹುದಾಗಿದೆ.

**ತಿರುಕಿಯ ಕನಸು:**

ವೈದಿಕರ ಮನೆಯಲ್ಲಿ (ಶ್ರೀಕಂಠ ಶರ್ಮ ಅವರಿಗೆ) ಮಗನಾಗಿ ಹುಟ್ಟಿದ ಚಂದ್ರಶೇಖರ ಆಧುನಿಕ ವೈಚಾರಿಕ ಕ್ರಾಂತಿಕಾರ; ಅಷ್ಟೇ ಭಾವುಕ ಕೂಡ. ಇವನ ಆದರ್ಶ, ಭಾವುಕತೆಗಳನ್ನು ಕಂಡಾಗ ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಕಾದಂಬರಿಯ ಹೂವಯ್ಯನ ಪಾತ್ರ ನೆನಪಾಗುತ್ತದೆ. ಸಮಾಜ ಸುಧಾರಣೆಗಾಗಿ ಒಲವನ್ನೂ ಅಮಾನತ್ತಿನಲ್ಲಿಡಬಲ್ಲ ಪ್ರಾಮಾಣಿಕ ವಿಚಾರವಾದಿಯಾಗಿ ಈತನ ಪಾತ್ರ ಮನಸೆಳೆಯುತ್ತದೆ. ಅವನ ಅಪ್ಪನ ಪಾಲಿಗೆ ಆತ 'ಪಟಿಂಗ'ನಾದರೂ ತಿರುಕಿಯ ಪಾಲಿಗೆ ಪ್ರೀತಿಯ ಅಣ್ಣನಾಗಿ, ಶಶಿವದನೆಗೆ ಒಲವಿನ ಪ್ರೇಮಿಕನಾಗಿ

ಮಾಲೆ ನೀಡಿ 'ಸ್ವಯಂವರವನ್ನು ಆ ಪದ್ಧತಿಯಲ್ಲಿ ಆರಿಸಲು ತಿಳಿಸುತ್ತಾರೆ. ಆಕೆ, ರಘುಪತಿಗೇ ತೊಡಿಸುವುದರ ಮೂಲಕ ನಾಟಕ ಮುಗಿದು ಸುಖಾಂತವಾಗುತ್ತದೆ. ಮುದುಕರಿಬ್ಬರೂ ಮನಸ್ಸಿನಲ್ಲೇ ಮಂಡಿಗೆ ಮೆಲ್ಲುತ್ತ ಒದಗಿ ಬಂದ ಸಂದರ್ಭಗಳನ್ನೆಲ್ಲ ತಮ್ಮ ಮೂಗಿನ ನೇರಕ್ಕೇ ಅರ್ಥೈಸಿಕೊಳ್ಳುತ್ತ ವಾದಿಸುವುದು ಓದುಗರ ಮನಸ್ಸಿನಲ್ಲಿ ನಗೆಯನ್ನು ಉಕ್ಕಿಸುವುದರಲ್ಲಿ ಯಶಸ್ಸು ಪಡೆದಿದೆ. ಈ ನಾಟಕದಲ್ಲೂ ಮುದಿ ಚಾಪಲ್ಯವನ್ನು ವಿಡಂಬಿಸಲಾಗಿದೆ.

**ತೊಟ್ಟಿಲು ತೂಗದ ಕೈ:**

'ಮಕ್ಕಳಿರಲವ್ವ ಮನೆತುಂಬ' ಎಂದು ಮಹಿಳೆಯರಿಗೆ ಆಶೀರ್ವದಿಸುತ್ತಿದ್ದ ದೇಶ ನಮ್ಮದು. 'ಆರತಿಗೆ ಒಂದು ಕೀರುತಿಗೆ ಒಂದು' ಎಂದು ಈಚೆಗೆ ತೀರ್ಮಾನಕ್ಕೆ ಬಂದಿದ್ದರೂ ಸಂತಾನ ಭಾಗ್ಯಕ್ಕೆ ಹಪಹಪಿಸುವುದು ಇದ್ದೇ ಇದೆ. ಐವತ್ತೆರಡು ವರ್ಷಗಳ ಹಿಂದೆ ರಚಿತವಾದ ಈ ನಾಟಕ ಸಾಂಪ್ರದಾಯಿಕ ಕುಟುಂಬವೊಂದು ಸಂತಾನಕ್ಕೆ ನೀಡುವ ಪ್ರಾಮುಖ್ಯತೆಯನ್ನು ಕುರಿತಿದೆ. ಕೇಶವ ಲೀಲಾವತಿಯ ಮೈಬಣ್ಣಕ್ಕೆ ಮರುಳಾಗಿ ಆಕೆಯನ್ನು ಮದುವೆಯಾಗುತ್ತಾನೆ. ಮುತ್ತೈದೆ ತುಳಸಮ್ಮ ಹೇಳುವ ಹಾಗೆ ಲೀಲಾವತಿ, 'ಪಾಚಿ ಕಟ್ಟಿಕೊಂಡ ಕೆರೇಲಿ ತಾವರೆ ಇದ್ದ ಹಾಗಿತ್ತು, ನಡತೆ ನುಡಿತೆ ಹೇಗಾದರೂ ಇರಲಿ, ಎಂಥೋರ ಮನಸ್ಸನ್ನೂ ಭಸ್ಮ ಮಾಡೋ ಮೋಹಿನಿ.' ಆದರೆ ನವ ನಾಗರಿಕತೆಯ ಆ ಮಿಟುಡಿ ಹೆಣ್ಣು ಆಧುನಿಕತೆಯ ಕಲಾ ಸೋಗಿನಲ್ಲಿ ಪರಪುರುಷನ ಜೊತೆ ಚಲನಚಿತ್ರಕ್ಕೆ ಹೋಗಲೂ ತಯಾರು. ತುಳಸಮ್ಮನದೇ ಮತ್ತೊಂದು ಮಾತು, 'ನಡತೆ ಕೆಟ್ಟ ಮೇಲೆ ಆ ಹಾಳು ರೂಪ ಇದ್ರೇನು, ಬಿಟ್ರೇನು? ತಿಪ್ಪೇ ಮೇಲೆ ಬಿದ್ದ ಬೆಳದಿಂಗಳ ಹಾಗೆ?....'

ಬಯಸಿ ಬಯಸೀ ಮದುವೆಯಾದ ಕೇಶವನ ಲೀಲಾವತಿ ಆಧುನಿಕತೆಯ ಸೋಗನ್ನು ಧರಿಸುತ್ತಾಳೆ; ಅದರ ಅಪಾಯವನ್ನೂ ಅರಿಯದೆ. ಅವಳ ಕ್ಲಬ್ಬಿನ ಓಡಾಟ, ಗಂಡನನ್ನೂ ಅತ್ತೆಯನ್ನೂ ಪುರಸ್ಕರಿಸದ ಮನೋಧರ್ಮ, ತಾನು ಈ ಮನೆಯ ಪಂಜರದ ಗಿಣಿಯಲ್ಲ ಎನ್ನುವ ಹಮ್ಮು, ಹೆಂಡತಿ ಕಾರ್ಯೇಶು ದಾಸಿ ಅನ್ನೋ ಹಳೇ ಶ್ಲೋಕ ಮರೆತುಬಿಡಿ ಎಂದು ಗಂಡನಿಗೇ ತಾಕೀತು ಮಾಡುವ ಬಿಮ್ಮುಗಳೆಲ್ಲ ನಾಟಕದಲ್ಲಿ ಸಮರ್ಥವಾಗಿ ಮೂಡಿಬಂದಿವೆ. ಗಂಡ ಕೇಶವನೇ ಹೇಳುವ ಹಾಗೆ, ಅವಳ ಭಾಗಕ್ಕೆ ನಮ್ಮ ತಾಯಿ ಮನೆಯನ್ನು ಚೊಕ್ಕಟವಾಗಿಡುವ ಪೊರಕೆಯಾದರು. ನಾನು, ಅವಳ ಬೀದಿಯ ಅಲೆತಕ್ಕೆ ರಕ್ಷಣೆ ನೀಡುವ ಎಕ್ಕಡವಾದೆ; ಅತಿ ಆಧುನಿಕತೆಯ ಉಡುಪು, ಥಳುಕು ಬಳುಕು ನೋಡಿ ಗಂಡನಾದ ಕೇಶವ, 'ಈ ಫ್ಯಾನ್ಸಿ ಡ್ರೆಸ್‌ನ ಪ್ರದರ್ಶನ ಈ ಮನೆಯಲ್ಲಿ ಬೇಡ' ಅಂದರೆ ಆಕೆ, 'ನಿಮ್ಮದು ಕ್ಲೋಸ್ ಕಾಲರ್ ಕೋಟ್ ಕಲ್ಚರ್' ಎಂದು ಹಂಗಿಸುತ್ತಾಳೆ!

ಅತ್ತೆ ಭಾಗೀರಥಮ್ಮ ತಮ್ಮ ಮನೆಯಲ್ಲಿ ಪಾರಂಪರಿಕವಾಗಿ ತೂಗು ಹಾಕಿರುವ ತೊಟ್ಟಿಲು ತುಂಬಬೇಕೆಂದು ಕನಸು ಕಾಣುತ್ತಾಳೆ. ಸೊಸೆಯ ಬಳಿ ತನ್ನ ಅಪೇಕ್ಷೆಯನ್ನು

ಎಲ್ಲ ನಾಟಕಗಳನ್ನೂ ಸ್ಥೂಲವಾಗಿ ಪರಿಶೀಲಿಸಿದಾಗ ಎಂ.ವಿ.ಸೀ. ಅವರ ಆರೋಗ್ಯಕರ ಆಲೋಚನೆಗಳು ಮನದಟ್ಟಾಗುತ್ತವೆ; ಸಾಮಾಜಿಕ ನೆಮ್ಮದಿಯ ಕಾಳಜಿ ಕಂಡು ಬರುತ್ತದೆ; ಮಾನವೀಯತೆಯ ಕಳಕಳಿ ಸ್ಪಷ್ಟವಾಗಿ ತಿಳಿದುಬರುತ್ತದೆ. ಮಾನವ ಸಹಜ ದೋಷಗಳನ್ನು ಗೇಲಿ ಮಾಡುತ್ತಲೇ ಸರಿದಾರಿಯಲ್ಲಿ ಎಲ್ಲರೂ ನಡೆಯಬೇಕೆನ್ನುವ ಸಂದೇಶ ಅರಿವಿಗೆ ಬರುತ್ತದೆ.

**ಮಕ್ಕಳ ಸಾಹಿತ್ಯ:**

ಕನ್ನಡದಲ್ಲಿ ಮಕ್ಕಳ ಸಾಹಿತ್ಯ ರೂಪುಗೊಂಡದ್ದೇ ಮಕ್ಕಳ ಶಿಕ್ಷಣದ ಮಹದುದ್ದೇಶದ ಅಂಗವಾಗಿ. ಭಾಷಾ ಕಲಿಕೆ ಹಾಗೂ ನೀತಿ ಬೋಧನೆ ಆ ರಚನೆಗಳ ಹಿಂದಿನ ಮನೋಭೂಮಿಕೆಯಾಗಿತ್ತು. ಹಳಬರು ರಂಜನೆಯನ್ನು ಮರೆಯದೆ ಹದವಾದ ರಚನೆಗಳನ್ನು ಮಾಡಿದ್ದು ಈಗ ಒಂದು ಇತಿಹಾಸ. ೧೮೩೩ರಲ್ಲಿ ಧಾರವಾಡ ವಿಭಾಗದ ಅಸಿಸ್ಟೆಂಟ್ ಕಲೆಕ್ಟರ್ ಆಗಿದ್ದ ವಾಲ್ಟರ್ ಎಲಿಯಟ್ ಮಾಡಿದ ಈಸೋಪನ ಕತೆಗಳ ಮುದ್ರಣ ಮೊದಲನೆಯದು. ೧೮೩೯ರಲ್ಲಿ 'ಸಂಣ ಹಿತೋಪದೇಶ' ಎಂಬ ಪುಸ್ತಕ ಕಲ್ಲಚ್ಚಿನ ಮೂಲಕ ಪ್ರಕಟವಾಯಿತು. ಇದಕ್ಕೂ ಮುನ್ನ ೧೮೧೦ರಲ್ಲಿ ಬಳ್ಳಾರಿಯಲ್ಲಿ ನೆಲೆಸಿದ್ದ ಪ್ರೊಟೆಸ್ಟೆಂಟ್ ಮಿಷನರಿ 'ರೆ', ಜಾನ್ ಹ್ಯಾಡ್ಸ್ ಆ ನಂತರ ಬಂದ ರೀವ್ ಅವರುಗಳೇ ಕನ್ನಡಾಂಗ್ಲ ಶಬ್ದಕೋಶ, ವ್ಯಾಕರಣ, ಬೈಬಲ್ಲುಗಳ ಕನ್ನಡಾನುವಾದಗಳಿಗೆ ಪ್ರಯತ್ನಿಸಿ, ಹೊಸಗನ್ನಡ ಅರುಣೋದಯಕ್ಕೆ ಮೂಲ ಪುರುಷರೆನ್ನಿಸಿಕೊಂಡರು. (ಡಾ. ಬೆಳವಾಡಿ ಮಂಜುನಾಥ, 'ಕನ್ನಡದಲ್ಲಿ ಮಕ್ಕಳ ಸಾಹಿತ್ಯ.' ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೦).

ವಿದೇಶೀಯರ ಪ್ರಯತ್ನಗಳ ಜೊತೆಗೆ ಕಾಣಿಸಿಕೊಂಡ ಕನ್ನಡ ಪ್ರತಿಭೆಗಳೆಂದರೆ ವೆಂಕಟರಂಗೋ ಕಟ್ಟಿ (ಅರೇಬಿಯನ್ ನೈಟ್ಸ್ ಅನುವಾದ), ಚ. ವಾಸುದೇವಯ್ಯ (ಬಾಲಬೋಧೆ), ಎಂ.ಎಸ್. ಪುಟ್ಟಣ್ಣ, ಎಸ್.ಜಿ. ನರಸಿಂಹಾಚಾರ್ಯರು, ಜಯರಾಯಾಚಾರ್ಯರು, ಸೋಸಲೆ ಅಯ್ಯಾ ಶಾಸ್ತ್ರಿಗಳು, ಎಂ.ಎಲ್. ಶ್ರೀಕಂಠೇಗೌಡರು, ಗಂಗಾಧರ ಮಡಿವಾಳೇಶ್ವರ ಚುರಮರಿ, ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿ(ಗೌರೀಶ), ಗದ್ದಿಗೆಯ್ಯ ಹೊನ್ನಾಪುರ ಮಠ, ಡೆಪ್ಯೂಟಿ ಚನ್ನಬಸಪ್ಪ, ಶಾಂತಕವಿಗಳು ಮುಂತಾದವರು ಪ್ರಾತಃಸ್ಮರಣೀಯರು. ಮುಂದೆ ಪಂಜೆ ಮಂಗೇಶರಾಯರ ಪ್ರವೇಶವಾಯಿತು. ಅವರು 'ಬಾಲ ಸಾಹಿತ್ಯದ ಪಿತಾಮಹ' ಎನ್ನಿಸಿಕೊಂಡರು. ನಾಗರ ಹಾವೇ, ಉದಯ ರಾಗ, ಮುಂತಾದ ಶ್ರೇಷ್ಠ ಕವನಗಳನ್ನಷ್ಟೇ ಅಲ್ಲದೆ ಕೆಲವು ಪುಟ್ಟ ಪುಟ್ಟ ಮಕ್ಕಳ ಕತೆಗಳನ್ನೂ ಬರೆದರು. ಅವರೊಂದಿಗೆ ನೆನಪಿಸಿಕೊಳ್ಳಬೇಕಾದ ದಕ್ಷಿಣ ಕನ್ನಡದ ಇತರರೆಂದರೆ ತೋನ್ಸೆ ಮಂಗೇಶ ರಾವ್, ಎಂ.ಎಸ್. ಕಾಮತ್ ಮತ್ತು ಉಳ್ಳಾಲ ಮಂಗೇಶರಾಯರು.

ಮರೆಯುತ್ತಾನೆ. ಅವನಪ್ಪನ ಪ್ರಕಾರ ಅವನು 'ಸುತರಾಂ ಕೆಟ್ಟುಹೋಗಿದ್ದಾನೆ; ಮನೆಯ ಆಚಾರ ವಿಚಾರಕ್ಕೆಲ್ಲ ತರ್ಪಣ ಕೊಟ್ಟಿದ್ದಾನೆ'; ನಿಜ, ಆದರೆ ಸಮಾಜ ಸುಧಾರಣೆಯ ಕಂಕಣ ತೊಟ್ಟಿದ್ದಾನೆ. ಪ್ರಾಯೋಗಿಕವಾಗಿಯೇ ಜೀವನವನ್ನು ಆದರ್ಶದ ನೆರಳಿನಲ್ಲಿ ಕಟ್ಟಬಯಸುವ ಅವನ ತಾಳ್ಮೆ, ಸೌಜನ್ಯ, ಸೌಹಾರ್ದತೆಗಳು ನಾಟಕದ ಪ್ರಮುಖ ಅಂಶಗಳಾಗಿವೆ. ಹೌದು, ಅವನು ಕನಸುಗಾರ. ಅಷ್ಟೇ ವಾಸ್ತವವಾದಿ ಕೂಡ. 'ಶಶಿವದನೆಯನ್ನು ಕೈ ಹಿಡಿದು ಪ್ರೇಮ ದಾಂಪತ್ಯಕ್ಕೆ ಜಾತಿ ಮತ ಕುಲ ಗೋತ್ರಗಳ ಗಣನೆಯಿಲ್ಲವೆಂದು ಸಾರುವೆನು; ಆ ಹುಡುಗಿಯನ್ನು (ತಿರುಕಿ) ಕೈಕೊಂಡು–ಒಡಹುಟ್ಟು ಮುಖ್ಯವಲ್ಲ ಸೋದರ ಸೋದರೀಭಾವಕ್ಕೆ–ಎಂದು ಸಾರುವೆನು' ಎಂಬ ಅವನ ಮಾತನ್ನು ಪರಿಪಾಲಿಸಲು ನಾಟಕದ ಉದ್ದಕ್ಕೂ ಅವನು ಪಡುವ ಪರಿಪಾಟಲು ಗಮ್ಯ ಸೇರಿದ ಮೇಲೆ ಹಗುರವಾಗಿಬಿಡುತ್ತದೆ. ಆವರೆವಿಗೆ ಶ್ರಮವೇ ಸರಿ. ಅವನಿಗೆ ಸಮಾನಾಂತರವಾಗಿ ವ್ಯಾಪಾರೀಕರಣದ, ಭೋಗ ಭಾಗ್ಯಗಳ ಕನಸಿಗನಾಗಿ ನಾಗೇಂದ್ರನ ಪಾತ್ರ ಜೊತೆಜೊತೆಗೇ ಬಂದು ಸಾದೃಶ್ಯಕ್ಕೆ ಅವಕಾಶ ಮಾಡಿಕೊಡುತ್ತದೆ. ಚಂದ್ರಶೇಖರನ ಮೇಲ್ಮೆಯನ್ನು ಸ್ಪಷ್ಟಪಡಿಸುತ್ತದೆ. ಅಲ್ಲಲ್ಲಿ ಅತಿಭಾವುಕತೆ ಸುಳಿದರೂ ನಾಟಕಕಾರರು ಅವರ ಉದ್ದೇಶವನ್ನು ಈಡೇರಿಸಿಕೊಳ್ಳುವಲ್ಲಿ ಸಫಲರಾಗಿದ್ದಾರೆ. 'ಅವನು ಹೋದ ದಾರಿಗೆ ಬಿಡುವುದು ಒಳ್ಳೆಯದು. ಎಲ್ಲಾದರೂ ತಣ್ಣಗೆ ಬದುಕಿರಲಿ' ಎನ್ನುವ ಚಂದ್ರನ ತಾಯಿ ನಂಜಮ್ಮನ ಪಾತ್ರವೂ ಒಳ್ಳೆಯ ಸುಧಾರಣಾವಾದಿ ಪಾತ್ರವಾಗಿ ಆಕರ್ಷಿಸುತ್ತದೆ. ಆದರ್ಶವನ್ನು ಬರಿ ಮಾತಾಗಿಸದೆ ಸದಾ ಕಾರ್ಯಕ್ಕೆ ತಿರುಗಿಸುವ ಚಂದ್ರಶೇಖರನ ಹವಣಿಕೆ ಭಿಕ್ಷುಕನಾದಾಗ ಕೂಡ ಅವರಲ್ಲೇ ಒಂದು ಸಂಘ ಕಟ್ಟುವ ತ್ಯಾಗದ, ದುಡಿಮೆಯ ಮೂಲಕ ಭಿಕ್ಷುಕರೆಲ್ಲರಿಗೆ ನೆಮ್ಮದಿಯ ಮಾರ್ಗ ತೋರಿಸುವ ಘಟನೆ ನಾಟಕದ ಒಂದು ಪ್ರಮುಖ ಘಟ್ಟ. ಆದರ್ಶ–ವಾಸ್ತವತೆ; ತ್ಯಾಗ–ಭೋಗ; ಸಹನೆ–ಅಸಹನೆ; ಹಾರಾಟ–ಹೋರಾಟಗಳ ಘರ್ಷಣೆ ನಾಟಕದ ತುಂಬ ಹರಡಿಕೊಂಡು ಮೌಲ್ಯಗಳನ್ನು ಎತ್ತಿ ಹಿಡಿಯುವ ಒಂದು ಒಳ್ಳೆಯ ಪ್ರಯತ್ನವಾಗಿ ಈ ನಾಟಕ ಗಮನ ಸೆಳೆಯುತ್ತದೆ.

ಸಮಾಜವನ್ನು ಎದುರಿಸಿ ನಿಲ್ಲುವ, ಗೆಲ್ಲುವ ಚಂದ್ರಶೇಖರನ ಪ್ರೇಮ ಮೀಮಾಂಸೆ, ಸಮಾಜ ವಿಮರ್ಶೆ, ದುಡಿಮೆಯ ಮಹತ್ವ, ವೈಚಾರಿಕ ವಾದಗಳೆಲ್ಲವೂ ಎಂ.ವಿ.ಸೀ. ಅವರು ಸಮರ್ಥಿಸುವ ಆದರ್ಶಗಳೇ ಆಗಿವೆ ಎಂದು ನೆನಪಿಸಿಕೊಳ್ಳಬಹುದು. ಡಾ. ವಿಜಯಾ ಸುಬ್ಬರಾಜ್ ಅವರು 'ಪ್ರಸ್ತಾವನೆ'ಯಲ್ಲಿ ಅಭಿಪ್ರಾಯಿಸಿರುವಂತೆ, "ರಂಗ ತಂತ್ರಜ್ಞತೆಯ ಅಧ್ಯಯನದ ಹೊರಗುಳಿದೂ, ಸಹಜ ಪ್ರತಿಭೆ, ಅನುಭವಗಳ ಮೂಲಕ ನಾಟಕದ ಸಂವಿಧಾನ ಶಿಲ್ಪಕ್ಕೆ ಲೋಪವಿಲ್ಲದಂತೆ, ರಚಿತವಾದ ಈ ನಾಟಕ ಅತಿಯಾದ ಆದರ್ಶಗಳನ್ನೂ ಅಂತರ್ಗತವಾಗಿರಿಸಿಕೊಂಡೂ ಒಂದು ಉತ್ತಮ ನಾಟಕ ಕೃತಿ ಎನಿಸಿಕೊಂಡಿದೆ...."

೧೯೪೫ರಲ್ಲಿ ಪ್ರಕಟವಾದ 'ಹೂವಾಡಿಗಿತ್ತಿ' ಸಂಕಲನದ ಈ ಸಾಲುಗಳು ಮಕ್ಕಳ ನಾಲಗೆಯ ಮೇಲೆ ಕುಣಿದವು. ಹೂವುಗಳ ವೈವಿಧ್ಯತೆಯನ್ನು, ಅವುಗಳ ಬಗೆಬಗೆಯ ಬಣ್ಣಗಳನ್ನು ಪರಿಚಯಿಸುವ ಈ ಪದ್ಯ ಮಕ್ಕಳ ಮನೋಲೋಕದ ಮುಂದೆ ಹೂವಾಡಿಗಿತ್ತಿಯ ಚಿತ್ರವನ್ನು ನಿಲ್ಲಿಸಿಬಿಡಬಲ್ಲುದು.

ಮಕ್ಕಳ ತುಂಟತನವನ್ನು ನಿರೂಪಿಸುವ ಕೆಲವು ಕವನಗಳು ಚಿತ್ತಾಕರ್ಷಕವಾಗಿವೆ. 'ತುಂಟರು', 'ಕಳ್ಳ ಸಿದ್ದ', 'ಪಟಿಂಗ ರಂಗ', 'ನಂ ಚಿಕ್ಕ' ಈ ಬಗೆಯವು. 'ಕಳ್ಳ ಸಿದ್ದ'ದಲ್ಲಿ ಸಿದ್ದ ಕದ್ದು ಬೆಲ್ಲ ಮೆದ್ದ, ಆದರೆ ಅದರಲ್ಲಿನ ಗೊದ್ದ ಕಚ್ಚಿ ಪೆದ್ದ ಅಳುತ ಇದ್ದ, ಅಮ್ಮ ಬರಲು ಕಳ್ಳ ಸಿಕ್ಕಿ ಬಿದ್ದ! ದಕಾರದ ಒತ್ತಕ್ಷರಗಳ ಪ್ರಾಸ ಅರ್ಥಪೂರ್ಣವಾಗಿದ್ದು ಪರಿಣಾಮಕಾರಿಯಾಗಿದೆ. ಅವುಗಳಲ್ಲೂ 'ನಂ ಚಿಕ್ಕ' ಅಂತೂ ಪಕ್ಕಾ ಪಟಿಂಗ ಮಗುವಿನ ಚಿತ್ರಣವಾಗಿದೆ. ಅವನಿಗೆ ಲೆಕ್ಕ ಅಂದರೆ ಬಲು ದುಕ್ಕ. ಹೀಗಾಗಿ ಕವಡೆ ಕಲ್ಲು ಕೂಡುತ್ತಾನೆ, ಪುಸ್ತಕ ಬಳಪ ಕಳೆಯುತ್ತಾನೆ. ಗೋಡೆಯ ಮೇಲೆ ಚಿತ್ರಗಳನ್ನು ಗುಣಿಸುತ್ತಾನೆ; ಬಾಯಿಯಲ್ಲಿ ಭಾಗಿಸ್ತಾನೆ, ಕೊನೆಗೆ ಅವನ ಗಣಿತವೆಲ್ಲ ಬೀದಿಯ ಕುಣಿತವೇ ಸೈ! ಮನೆಯಲಿ ಜೋರು ಕೈಯಿ ಬಾಯಿ, ಇದೆಲ್ಲದರ ಪರಿಣಾಮವಾಗಿ ಪರೀಕ್ಷೆಯಲ್ಲಿ ಕುಂಬಳಕಾಯಿ! ಹಾಸ್ಯಮಯವಾಗಿ ಸಾಗಿ, ಹಾಗೆಯೇ ಮುಕ್ತಾಯವಾಗುವ ಈ ಪದ್ಯ ಪುಟ್ಟದಾದರೂ ಮಕ್ಕಳ ಮನಸ್ಸಿನಲ್ಲಿ ನಿಂತುಬಿಡುತ್ತದೆ.

'ಇಲಿಯ ಬಾಲ', 'ಹಾವು', 'ಗಂಟೆ', 'ಕಿರೀಟ'–ಈ ನಾಲ್ಕು ಕವಿತೆಗಳು ಹೆಸರಿಗೆ ತಕ್ಕ ಹಾಗೆ ಅಕ್ಷರ ಜೋಡಣೆ ಮಾಡಿರುವುದರಿಂದ ಆಯಾ ಚಿತ್ರಗಳು ಆಯಾ ಆಕಾರದಲ್ಲಿ ಮೂಡಿ ಬಂದು ಮಕ್ಕಳ ಮನಸೆಳೆಯುತ್ತವೆ.

**'ಹಾವಾಡಿಗ':**

ಮೊದಲ ಸಂಕಲನ ಪ್ರಕಟವಾದ ಹದಿಮೂರು ವರ್ಷಗಳ ಬಳಿಕ(೧೯೫೮) ಬಂದ ಸಂಕಲನ. ಶೀರ್ಷಿಕಾ ಪದ್ಯ ಹಾವಾಡಿಗನ ವೇಷ ಭೂಷಣಗಳನ್ನೂ, ಚಲನವಲನಗಳನ್ನೂ ಕ್ರಿಯೆ ಪ್ರಕ್ರಿಯೆಗಳನ್ನೂ ಯಶಸ್ವಿಯಾಗಿ ಚಿತ್ರಿಸುತ್ತದೆ. 'ನೋಟ ನೋಡಿದವರು ನೂರಾರು ಜನ, ಕಾಸು ಕೊಟ್ಟವರು ಹತ್ತು ಜನ' ಎನ್ನುವ ವಾಸ್ತವ ಸಂಗತಿಯಂತೂ ಮಾರ್ಮಿಕವಾಗಿದೆ. 'ಜಾಗರವಾಡೆಲೆ ನವಿಲೆ' ಪದ್ಯದಲ್ಲಿ 'ಜಾಗರ' ಪದದ ಎರಡೂ ಅರ್ಥಗಳನ್ನು ಚಮತ್ಕಾರಿಕವಾಗಿ ತಿಳಿಸುತ್ತಾರೆ. 'ಬಾರಯ್ಯ ಬಾ ಗಾಳಿ' ಪದ್ಯದಲ್ಲಿ ಎಷ್ಟು ಬಗೆಯ ಗಾಳಿಗಳಿವೆ ಎಂದು ಅವುಗಳ ಸ್ವರೂಪದೊಂದಿಗೇ ವಿವರಿಸುವ ರೀತಿ ಚೆನ್ನಾಗಿದೆ.

'ಜೋಗದ ಜಲಪಾತ'ದಲ್ಲಿ ಪದಗಳು ಅರ್ಥಲಯವನ್ನು ಪಡೆದುಕೊಂಡಿವೆ. ಇದನ್ನೋದುವಾಗ ಸಹಜವಾಗಿಯೇ ಪಂಜೆಯವರ 'ತೆಂಕಣಗಾಳಿಯಾಟ' ಪದ್ಯ ನೆನಪಾಗುತ್ತದೆ. ಜೋಗದ ಜಲಪಾತಕ್ಕೆ ಬರುವ ಮುನ್ನವೇ ಆ ನೀರಿನ ರಾಜಸ

ಮದ್ರಾಸ್ ಪ್ರಾಂತ್ಯದ ಕೊರಡ್ಕಲ್ ಶ್ರೀನಿವಾಸ ರಾವ್, ಉಗ್ರಾಣ ಮಂಗೇಶರಾಯರು, ಐರೋಡಿ ಶಿವರಾಮಯ್ಯ, ಕೆ. ಶಿವರಾಮ ಕಾರಂತರು ಇವರೆಲ್ಲರೂ ಪ್ರಸಿದ್ಧರು; ಮಕ್ಕಳಿಗೆ ಇವರು ನೀಡಿದ ಕೊಡುಗೆ ಮನನೀಯವಾದುದು. ಹೊಯ್ಸಳರಂತೂ (ಆರಗಂ ಲಕ್ಷ್ಮಣರಾಯರು) ಗದ್ಯ ಪದ್ಯಗಳೆರಡರಲ್ಲೂ ಯಶಸ್ವೀ ರಚನೆಗಳನ್ನು ನೀಡಿ ಮಕ್ಕಳನ್ನು ನಲಿಸಿದರು. ಎ.ಆರ್. ಕೃಷ್ಣಶಾಸ್ತ್ರಿಗಳ 'ನಿರ್ಮಲ ಭಾರತೀ' ಮಹಾಭಾರತ ಕತೆಯ ಹೊಸಗನ್ನಡ ರೂಪವಾಗಿದ್ದು ಮರೆಯಲಾಗದ ಕೃತಿಯಾಗಿದೆ. ಸುಬೋಧ ರಾಮರಾಯರಂತೂ ಮಹಾಪುರುಷರನೇಕರ ಬಗ್ಗೆ ಒಂದು ಪುಸ್ತಕ ಮಾಲೆಯನ್ನೇ ತಂದು ಮಕ್ಕಳಿಗೆ ಉಣಬಡಿಸಿ ಅವರಿಗೆ ಅನೇಕ ಹಿರಿಯ ಶಕ್ತಿಗಳ ಪರಿಚಯ ಮಾಡಿಸಿಕೊಟ್ಟರು. ಅವೆಲ್ಲವೂ ಆದರ್ಶಪ್ರಾಯವೂ ಬೋಧಪ್ರದವೂ ಆಗಿರುವುದು ವಿಶೇಷ. ನಂತರ ನೆನಪಾಗುವ ಹೆಸರೆಂದರೆ ಕನ್ನಡ ಸಾಹಿತ್ಯ ಜಗತ್ತಿಗೆ ರಾಜನೂ ರತ್ನವೂ ಆಗಿರುವಂತಹ ಜಿ.ಪಿ. ರಾಜರತ್ನಂ. ಸವಿಸವಿಯಾದ ಸಾಹಿತ್ಯ ರಾಶಿಯನ್ನೇ ಸೃಜಿಸಿ ಕನ್ನಡ ಮಕ್ಕಳಿಗೆ ಉಣಬಡಿಸಿ, ಮಕ್ಕಳ ಸಾಹಿತ್ಯವನ್ನೂ ದಷ್ಟಪುಷ್ಟವಾಗಿಸಿದರು. ಅಲ್ಲಿಂದ ಮುಂದೆ ದಿನಕರ ದೇಸಾಯಿ, ಮೇವುಂಡಿ ಮಲ್ಲಾರಿ, ಜಿ.ಎನ್. ಲಕ್ಷ್ಮಣ ಪೈ, ಕುವೆಂಪು, ಶಿವರಾಮ ಕಾರಂತ ಇವರೆಲ್ಲರೂ ಸೇವೆ ಸಲ್ಲಿಸಿದರು. ಮುಂದಿನ ತಲೆಮಾರಿನಲ್ಲಿ ವೈ.ಎಸ್. ಗುಂಡಪ್ಪ, ಬಿ.ಎಸ್. ಪಾಂಡುರಂಗರಾಯರು ಇಂಥವರ ಸಾಲಿನಲ್ಲಿ ಬಂದು ಮಿಂಚಿದವರೇ ನಮ್ಮ 'ಹೂವಾಡಿಗಿತ್ತಿ'ಯ ಎಂ.ವಿ.ಸೀ. ಅವರು.

ಆ ಅವಧಿಗಾಗಲೇ ಮಕ್ಕಳ ಕಾವ್ಯದ ಭಾಷೆ ಸರಳವಾಗಿತ್ತು; ಬಲು ಹಿಂದಿನಿಂದ ಪ್ರಯೋಗದಲ್ಲಿದ್ದ ಕಂದಪದ್ಯ, ಸೀಸಪದ್ಯ, ಷಟ್ಪದಿಗಳ ಥರದ ಕಾವ್ಯ ತೆರೆಮರೆಗೆ ಸರಿದಿತ್ತು. ಹೊಸಗನ್ನಡ ಭಾಷೆ ಹೊಸಗನ್ನಡ ಮಟ್ಟುಗಳಲ್ಲಿ ಇಣುಕತೊಡಗಿತ್ತು. ಈ ಅನುಕೂಲ ಎಂ.ವಿ.ಸೀ. ಅವರಿಗೆ ದಕ್ಕಿತು.

"ಕೀರ್ತಿ, ಹಣ ಸಂಪಾದನೆ, ಪ್ರಶಂಸೆ–ಇವು ಯಾವುದನ್ನೂ ಬಯಸದೆ, ಕೇವಲ ಆತ್ಮಸಂತೋಷಕ್ಕಾಗಿ ಕೃತಿ ರಚನೆ ಮಾಡಿದೆ" ಎಂದು ಅವರೇ ಒಂದೆಡೆ ಹೇಳಿಕೊಂಡಿದ್ದಾರೆ. ನಿಸ್ಸಂಶಯವಾಗಿ ಅವರ ಸಾಹಿತ್ಯ ಸೇವೆ ನಿಸ್ವಾರ್ಥತೆಯಿಂದ ಕೂಡಿದ್ದು ರಚನೆಗಳೂ ನಿರ್ಲಿಪ್ತತೆಯಿಂದಲೇ ಆಗಿವೆ. ಮಕ್ಕಳ ಸಾಹಿತ್ಯ ರಚನೆಗೂ ಈ ಮಾತು ಅನ್ವಯಿಸುತ್ತದೆ.

**'ಹೂವಾಡಿಗಿತ್ತಿ':**

ಹೂವನು ಮಾರುತ ಹೂವಾಡಿಗಿತ್ತಿ
ಹಾಡುತ ಬರುತಿಹಳು
ಘಮ ಘಮ ಹೂಗಳು ಬೇಕೇ ಎನ್ನುತ
ಹಾಡುತ ಬರುತಿಹಳು

'ಬೀದಿ ಮಾರಿ' ಎಂದು ವಿಶಿಷ್ಟ ರೀತಿಯಲ್ಲಿ 'ಲಾರಿ'ಯನ್ನು ಪರಿಚಯಿಸುವ ಬಗೆ ಮನಸೆಳೆಯುತ್ತದೆ. ಲಾರಿಯ ಧಾವಂತ, ಅದರಿಂದ ನಮಗಾಗುವತೊಂದರೆ, ಉಂಟಾಗುವ ಭೀತಿ, ಅದರ ದೈತ್ಯಾವತಾರಗಳನ್ನೆಲ್ಲ ಹೇಳುತ್ತ, 'ಕುಡುಕನದರ ಪೂಜಾರಿ' ಎಂದು ಡ್ರೈವರನನ್ನು ಗೇಲಿ ಮಾಡುತ್ತ ಕೊನೆಯಲ್ಲಿ ಆ ಮಾರಿ ಯಾರೆಂದು ಗುಟ್ಟು ರಟ್ಟು ಮಾಡುತ್ತಾರೆ.

ಯಾರು ಗೊತ್ತೇ ಈ ಮಾರಿ?
ಭಾರಿ ಲಾರಿ ಇರು ಹುಷಾರಿ

ಎನ್ನುತ್ತ ನಾವು ವಹಿಸಬೇಕಾದ ಎಚ್ಚರವನ್ನೂ ಸೂಚಿಸಿದ್ದಾರೆ. 'ಅಳಿಲು ಸೇವೆ'ಯಲ್ಲಿ ಇಡೀ ರಾಮಾಯಣವನ್ನೇ ಸಂಗ್ರಹವಾಗಿ ತಿಳಿಸಿ, ಅಳಿಲು ಸೇವೆಯ ಮಳಲು ಭಕ್ತಿಯನ್ನು ನಿರೂಪಿಸುತ್ತಾರೆ. 'ತಬ್ಬಲಿ ಕಮಲೆ' ಕಥನ ಕವನ ವರ್ಡ್ಸ್‌ವರ್ತ್ ಕವಿಯ 'ಲೂಸಿ ಗ್ರೇ' ಪದ್ಯದ ಪ್ರೇರಣೆಯಿಂದ ರಚಿತವಾಗಿದೆ. ಕಮಲೆ ತಂದೆ ಹಾಗೂ ಮಲತಾಯಿಯ ಕಾಟದಿಂದಾಗಿ, ಕಾಡನ್ನು ಏಕಾಂಗಿಯಾಗಿ ಹೊಕ್ಕು ಸಾವಿನ ದುರಂತಕ್ಕೆ ಈಡಾಗುವ ಕತೆ ಮಕ್ಕಳ ಮನವನ್ನು ಕಲಕುತ್ತದೆ.

'ಪ್ರತಿಜ್ಞೆ' ಕವಿತೆಯಲ್ಲಿ ರೈತ, ಕೂಲಿಕಾರ, ಕಾರಕೂನ, ಝಾಡಮಾಲಿ, ವರ್ತಕ, ನಾವಿಕ, ಸಿಪಾಯಿ, ವೈಮಾನಿಕ, ಕವಿ, ಕೊನೆಯಲ್ಲಿ ಗಾಯಕ ಇವರೆಲ್ಲರ ಬಾಯಲ್ಲಿ ಸಂಕ್ಷಿಪ್ತವಾಗಿ ಅವರವರ ಸೇವೆಯ ವಿವರಗಳನ್ನು ಅರ್ಥಪೂರ್ಣವಾಗಿ, ಪ್ರಾಸಬದ್ಧವಾಗಿ ಹೇಳಿಸಿರುವ ಪರಿ ಮಕ್ಕಳ ಮನ ತಟ್ಟುತ್ತದೆ. ಕೊನೆಯಲ್ಲಿ ಎಲ್ಲರೂ ಒಟ್ಟಿಗೆ,

ನಾವು ಭಾರತೀಯರು
ನಾವೆಲ್ಲರು ಒಂದೆ ಜನ;
ಭಾರತ ಮಾತೆಗಾಗಿ ಮುಡಿಪು
ನಮ್ಮ ತನು ಧನ ಮನ

ಎಂದು ಐಕ್ಯ ಮಂತ್ರವನ್ನು ಹೇಳುವುದು ದೇಶ ಭಕ್ತಿ ಮೂಡಿಸುವಲ್ಲಿ ಪ್ರಚೋದಕವಾಗಿದೆ. ಇದರ ಜೊತೆ 'ಕೋಲಾಟದ ಪದ' ವಾದ 'ಹಸು ಸಾಕಬೇಕು, ದೇಶ ಕಟ್ಟಬೇಕು' ಕವನವನ್ನು ಕೂಡ ದೇಶಭಕ್ತಿಯ ಈ ದೃಷ್ಟಿಯಿಂದ ಗಮನಿಸಬಹುದಾಗಿದೆ.

**ದಾದಿ ರನ್ನೆ:**

ಇದು ಹದಿನಾಲ್ಕು ಪುಟಗಳಲ್ಲಿ ಹರಡಿಕೊಂಡಿರುವ ಒಂದು 'ಮಕ್ಕಳ ಪದ್ಯಕಥೆ'. ರಾಜಕುಮಾರ ಉದಯಸಿಂಹನನ್ನು ಉಳಿಸುವ ಸಲುವಾಗಿ ತನ್ನ ಕಂದನನ್ನೇ ಬಲಿಕೊಟ್ಟ ತ್ಯಾಗಮಯಿ ಧಾತ್ರಿ(ದಾದಿ)ಯ ಕತೆ. ಶತ್ರುವಾದ ದುಷ್ಟ ಬನಬೀರನ ಬರವನ್ನು ತಿಳಿದು ನಿಜವಾದ ರಾಜಕುಮಾರನನ್ನು ಹಣ್ಣಿನಬುಟ್ಟಿಯಲ್ಲಿ ಹೊರಕ್ಕೆ ಕಳುಹಿಸಿ, ಅವನ ಹಾಸಿಗೆಯಲ್ಲಿ ತನ್ನ ಮಗನನ್ನೇ ಮಲಗಿಸುತ್ತಾಳೆ;

ರಭಸದ ಚಿತ್ರಣ ಕಣ್ಣಿಗೆ ಕಟ್ಟುವಂತಿದೆ:

ಕುಣಿಯುತ ಮಣಿಯುತ ತಣಿಯುತ ದಣಿಯುತ
ನುಗ್ಗುತ ಬಗ್ಗುತ ಹಿಗ್ಗುತ ತಗ್ಗುತ
ತೆರಳುತ ಮರಳುತ ಹೊರಳುತ್ತುರುಳುತ
ಸರಸರಸರಿಯುತ ಭರಭರ ಹರಿಯುತ
ಬಾಗುತ ಬಳುಕುತ ತೂಗುತ ತುಳುಕುತ
ಹೊಂಗಿ ಹೊಮ್ಮುತ ಚಂಗನೆ ಚಿಮ್ಮುತ

–ದಿಟ್ಟ ಶರಾವತಿ ಓಡಿ ಬರುತ್ತಿದ್ದಾಳೆ ಎಂದು ಸಚಿತ್ರವಾಗಿ ವರ್ಣಿಸಿರುವುದು ಆಕರ್ಷಕವಾಗಿದೆ. ಇಡೀ ಕವಿತೆ ಹೀಗೇ ಪದಗಳ ಓಟದಲ್ಲಿ ಜಲಪಾತದ ನಮೂನೆಗಳನ್ನು ಚಿತ್ರಿಸಿದೆ. 'ನವ ಭಾರತ ರತ್ನ ಜವಹರ್' ಪದ್ಯ ನೆಹರು ಅವರ ಅಗ್ಗಳಿಕೆಯನ್ನು ಮಕ್ಕಳಿಗೆ ಸಾರಿ ಹೇಳುತ್ತದೆ. ಹಿಂದಿನ ಸಂಕಲನಕ್ಕಿಂತ ಈ ಸಂಕಲನದ ಕವನಗಳು ಪ್ರೌಢವಾಗಿರುವುದನ್ನು ಗಮನಿಸಬಹುದು.

**ಕೋಡಂಗಿ:**

ಈ ಸಂಕಲನ ೧೯೭೭ರಲ್ಲಿ ಹೊರಬಂದಿತು. ಇದರಲ್ಲಿನ ಪದ್ಯಗಳು ಮತ್ತಷ್ಟು ಪ್ರೌಢವಾಗಿವೆ. ಇದರಲ್ಲಿನ ಹದಿನೇಳು ಕವಿತೆಗಳಲ್ಲಿ ಕೆಲವಾದರೂ ನೆನಪಿನಲ್ಲಿ ಉಳಿಯುವಂತಹುವಾಗಿವೆ. ಕೋಡಂಗಿ ಕವನದಲ್ಲಿ 'ನಕಲಿಯು ನಾಗ', ನಗಿಸುತ್ತಲಿದ್ದರೂ ಕೌಟುಂಬಿಕವಾಗಿ ಅವನು ಎಷ್ಟು ಬಡವ ಎನ್ನುವುದನ್ನು ಮಾರ್ಮಿಕವಾಗಿ ಮುಂದಿರಿಸಲಾಗಿದೆ. 'ಹಲ್ಲಿ' ಕವನದಲ್ಲಿ ಹಳಗನ್ನಡದ 'ಪಲ್–ಇಲಿ' ಶಬ್ದಗಳ ಅರ್ಥ 'ಹಲ್ಲು ಇಲ್ಲದ್ದು' ಎಂದು. ಇದನ್ನು ಚಮತ್ಕಾರಿಕವಾಗಿ ತಿಳಿಸುತ್ತ ಹಲ್ಲಿಯ ಉಪಕಾರವನ್ನು ಸ್ಮರಿಸುತ್ತಾರೆ; ನಮ್ಮೊಡನೆ ಬದುಕಿರುವ ಅದು ಅನ್ನಪಾನೀಯಗಳಿಗೆ ಬೀಳದಂತೆ ವಹಿಸಬೇಕಾದ ಎಚ್ಚರದ ಬಗ್ಗೆಯೂ ಪ್ರಸ್ತಾಪಿಸುತ್ತಾರೆ. ಋತುಗಳ ರೀತಿ ಮಕ್ಕಳಿಗೆ ಆರೂ ಋತುಗಳ ಪ್ರಾಕೃತಿಕ ವಿಶೇಷಗಳನ್ನೂ ಅವುಗಳ ಪ್ರಯೋಜಕತೆಯನ್ನೂ ತಿಳಿಸುವ ಒಳ್ಳೆಯ ಪ್ರಯತ್ನ.

'ಹಬ್ಬದ ಗುಟ್ಟು' ಪದ್ಯದಲ್ಲಿ ಹಬ್ಬಗಳ ವಿಶೇಷಗಳನ್ನು ಪರಿಚಯಿಸುತ್ತ ಮಕ್ಕಳಿಗೆ ಇಷ್ಟವಾಗುವ ಹಾಗೆ ಆಯಾ ಹಬ್ಬಗಳ ವಿಶಿಷ್ಟ ಖಾದ್ಯಗಳನ್ನು ನೆನಪಿಸುತ್ತ ಬಾಯಲ್ಲಿ ನೀರು ತರಿಸುತ್ತಾರೆ; ಹಾಗೆಯೇ ಕೊನೆಯಲ್ಲಿ,

'ತಿನ್ನದ ದೇವರ ಮುಂದಿಟ್ಟು
ತಿನ್ನುವುದೇ ಹಬ್ಬದ ಗುಟ್ಟು'

ಎಂದು ನೈವೇದ್ಯದ ರಹಸ್ಯವನ್ನು ಬಯಲಿಗೆಳೆದಿದ್ದಾರೆ. ತೆಲುಗಿನ ಒಂದು ಲೋಕೋಕ್ತಿ ನೆನಪಾಗುತ್ತದೆ. 'ಚೂಪು ನೀದಿ; ಮೇಪು ಮಾದಿ' ಅಂದರೆ ಅರ್ಥ, 'ನೋಟ ನಿನ್ನದು; ಊಟ ನಮ್ಮದು' ಎಂದು!

ಅದನ್ನೂ ಮೀರಿ ನಾಟಕದ ಕೊನೆಯಲ್ಲಿ ಬರುವ ಅಜ್ಜನ ಮಾತು, "ಈ ಕೋಲು ಮರದ ಕಟ್ಟಿಗೆ, ಜೀವ ಇಲ್ಲದ್ದು; ಮುದುಕರ ಕೋಲು. ಮನುಷ್ಯನಿಗೆ–ಗಂಡಸರು ಹೆಂಗಸರು ಮಕ್ಕಳು ಎಲ್ಲರಿಗೂ ಸಾಯೋವರೆಗೂ ಕೈಗೆ ಆಧಾರವಾದ ಕೋಲು ಅಂದ್ರೆ–ಸತ್ಯ, ದಯೆ, ಪರೋಪಕಾರ ಬುದ್ಧಿ" ನಿಜ. ಭಿಕ್ಷುಕಿ ಹೇಳುವ ಹಾಗೆ ಮುಪ್ಪಿನಲ್ಲಿ ಮಕ್ಕಳು ಪೋಷಕರಿಗೆ ಕೈಕೋಲು ಆಗಬೇಕು ಎನ್ನುವ ನೀತಿಯೂ ವಾಸ್ತವವೇ.

**೨. ಕುಮಾರ ಗೌತಮ:**

'ಬೆಳೆಯ ಸಿರಿ ಮೊಳಕೆಯಲ್ಲಿ ನೋಡು' ಎನ್ನುವಂತೆ ಬುದ್ಧ ಬಾಲಕ ಗೌತಮನಾಗಿದ್ದಾಗ ನಡೆದ ಘಟನೆಗಳು ಕೆಲವನ್ನು ಈ ನಾಟಕದಲ್ಲಿ ನಿರೂಪಿಸಲಾಗಿದೆ. ಚಿಕ್ಕಪ್ಪನ ಮಗ ದೇವದತ್ತನನ್ನು ಪ್ರದರ್ಶನದಲ್ಲಿ ಸೋಲಿಸಿದ್ದರೂ ಸೋತವನ ಕಣ್ಣಿನಲ್ಲಿನ ದ್ವೇಷವನ್ನು ಓದಿದ ಗೌತಮನು ಮನಸ್ಸಿನಲ್ಲಿ ಕರುಣೆಯನ್ನೇ ತಳೆಯುತ್ತಾನೆ. 'ಒಬ್ಬನ ಗೆಲವಿನಿಂದ ಇನ್ನೊಬ್ಬನಿಗೆ ಸೋಲು, ಒಬ್ಬನ ಸುಖದಿಂದ ಇನ್ನೊಬ್ಬನ ಅಸುಖ. – ಈ ಬಗೆಯ ಗೆಲವು ಗೆಲವಲ್ಲ; ಸುಖ ಸುಖವಲ್ಲ....ಎಲ್ಲ ಹುಸಿ' ಎನ್ನುವ ಅವನ ಮಾತುಗಳು ಮನದಾಳಕ್ಕೆ ನಾಟುತ್ತವೆ. ವಿನೋದಕ್ಕಾಗಿ ಮೃಗಗಳನ್ನು ಕೊಲ್ಲುವ ಬೇಟೆಯನ್ನು ಕಲಿಯಲೂ ಆತ ತಿರಸ್ಕರಿಸುತ್ತಾನೆ. ಗಿಡಗಳಿಗೆ ಹಿಂಸೆ ಮಾಡಿ ಕುಯ್ದು ತಂದ ಹೂವುಗಳಿಂದ ಕಟ್ಟಿದ ವಿಜಯ ಮಾಲಿಕೆಯ ಗೌರವವನ್ನೂ ತಿರಸ್ಕರಿಸುತ್ತಾನೆ. ಪುರಸ್ಕಾರ ರೂಪದಲ್ಲಿ ಬಂದ ಪಂಜರದ ಎರಡು ಗಿಣಿಗಳನ್ನೂ ಹಾರಬಿಟ್ಟು ಬಂಧನದಿಂದ ಅವುಗಳಿಗೆ ಬಿಡುಗಡೆ ದೊರಕಿಸಿಕೊಡುತ್ತಾನೆ.

ಪ್ರಕೃತಿಯ ಚೆಲುವಿನಲ್ಲೂ ಹಿಂಸೆ ಕಾಣುವ ಆತನ ಮನಸ್ಸಿನ ಕರುಣೆ ಮಾರ್ಮಿಕವಾಗಿ ಚಿತ್ರಿತವಾಗಿದೆ. ಬಿಸಿಲಿನಲ್ಲಿ ಉಳುತ್ತಿದ್ದ ಒಕ್ಕಲು ಮಗನಲ್ಲಿ ದಣಿವು ಕಾಣುತ್ತದೆ. ನೇಗಿಲು ಎಳೆಯುತ್ತಿದ್ದ ಎತ್ತುಗಳಲ್ಲಿ ಏದುಬ್ಬಸ ಕಾಣುತ್ತದೆ. ಹಾರಿ ಬಂದ ಹಕ್ಕಿಗಳು ರೆಕ್ಕೆ ಹುಳಗಳನ್ನು ಮುಕ್ಕಿ ಮುಕ್ಕಿ ಮೆಲ್ಲುತ್ತಿದ್ದಿದು ಹಿಂಸಾತ್ಮಕವೆಂದು ಅನ್ನಿಸುತ್ತದೆ.

**೩. ಕರುಣೆಯ ಕುಡಿ:**

ಕುಮಾರ ಗೌತಮನ ಇದೇ ಕರುಣೆಯ ಕತೆಯನ್ನು ಈ ನಾಟಕದಲ್ಲಿ ಸರಳ ರಗಳೆಯಲ್ಲಿ ಕಾವ್ಯಮಯವಾಗಿ ಚಿತ್ರಿಸಲಾಗಿದೆ. ಕಥೆಯಾಗಲಿ, ಘಟನೆಗಳ ಅನುಕ್ರಮಣಿಕೆಯಾಗಲಿ, ನಿರೂಪಣಾ ವಿಧಾನವಾಗಲಿ ಯಾವುದೇ ವ್ಯತ್ಯಾಸವಾಗದೆ ಯಥಾವತ್ತಾಗಿ ಇಲ್ಲಿ ಸೊಗಸಾದ ಪದ್ಯರೂಪವನ್ನು ಪಡೆದಿರುವುದನ್ನು ನೋಡಬಹುದು.

ಶುದ್ಧೋದನ ತನ್ನ ಮಗ ಗೌತಮನ ವಿದ್ಯಾ ಪಾರಂಗತತೆಯನ್ನು ಕುರಿತು ಹೇಳುವ ಈ ಸಾಲುಗಳನ್ನು ಗಮನಿಸಿ:

ಬನವೀರ ಬಂದು ಬಲಿತೆಗೆದುಕೊಳ್ಳುತ್ತಾನೆ. ದಾದಿ ರನ್ನೆ 'ವೀರ ರಕ್ತದ ಪೆರ್ಮೆ ಮೆರೆದ' ಮಗನ ಬಗ್ಗೆ ಹೆಮ್ಮೆ ಪಡುತ್ತಾಳೆ. ಆದರೆ ಒತ್ತರಿಸಿಕೊಂಡು ಬರುವ ನೋವು ದುರ್ಭರವಾದಾಗ ದುಃಖಿಸುವ ಪರಿ ಮಕ್ಕಳ ಕಣ್ಣಿನಲ್ಲಿ ನೀರು ಚಿಮ್ಮಿಸಿದರೂ ಅಚ್ಚರಿಯಲ್ಲ. 'ಮಡಿದ ಎಳಗರುವನ್ನು ನೋಡಿದ ಆವು ಸುಮ್ಮನೆ ಅರಚುವಂದದಿ' ಚೀರಿದಳು ತಾಯಿ. ಆಕೆಯ ನೋವು ಹೇಳತೀರದು:

"ಎನ್ನ ಬಾಳಿನ ಬೆಳಕು ನಂದಿತೆ,
ಎನ್ನ ಕಣ್ಣಿನ ಹಾಹೆ ಸಿಡಿಯಿತೆ?
ಎನ್ನ ನೆತ್ತರು ತಣ್ಣಗಾದುದೆ
ಮಣ್ಣುಗೂಡುತಲಿ
ಇನ್ನು ಯಾರಿಗೆ ಬದುಕಿರಲಿ, ನಾ–
ಇನ್ನು ಯಾರನು ಕಂದನೆನ್ನಲಿ?"

ವೀರ ಧಾತ್ರಿ ಪನ್ನೆಯ ಮನ ಮಿಡಿಸುವ ಈ ಕಥೆ ಕುರಿತು ಈಶ್ವರ ಚಂದ್ರ ಅವರು, "ಪನ್ನೆಯ ತ್ಯಾಗವನ್ನೂ ದೇಶ ಭಕ್ತಿಯನ್ನೂ ಖಚಿತವಾಗಿ ಮಕ್ಕಳ ಮನದಲ್ಲಿ ಸ್ಥಾಪಿಸುವಲ್ಲಿ ರಾಘವರು ಯಶಸ್ವಿಯಾಗಿದ್ದಾರೆ..."

ಒಟ್ಟಾರೆ ಎಂ.ವಿ.ಸೀ.ಅವರ ಮಕ್ಕಳ ಕಾವ್ಯ ಮಕ್ಕಳ ಮನಸ್ಸಿಗೆ ಎಟುಕುವಂತಿದ್ದು ರಂಜಿಸಬಲ್ಲುದು. ಮಕ್ಕಳ ಮನೋವಿಜ್ಞಾನಿಯಾಗಿಯೇ ಅವರು ಕಾವ್ಯ ರಚಿಸಿದ್ದಾರೆ. ಮಕ್ಕಳ ಮೇಲೆ ಅವರಿಗಿದ್ದ ಕಾಳಜಿಯೇ ಈ ಯಶಸ್ಸಿಗೆ ಕಾರಣ. ಅವರ ಮೇಲಿನ ಪ್ರೀತಿಯನ್ನು, ಭರವಸೆಯನ್ನು, ಹಾರೈಕೆಯನ್ನು ಕವಿ ಕಾವ್ಯವಾಗಿಸಿದ್ದಾರೆ.

**ಮಕ್ಕಳ ನಾಟಕಗಳು :**

**೧. ಕೈಕೋಲು:**

ಕಾಮಣ್ಣನ ಹಬ್ಬದ ದಿನ ಹುಡುಗರ ದಂಡು, 'ಕಾಮಣ್ಣ ಕಟ್ಟಿಗೆ, ಭೀಮನ ಬೆರಣಿ...' ಹಾಡು ಹೇಳಿಕೊಂಡು ಕಟ್ಟಿಗೆ, ಬೆರಣಿ, ಹಳೇ ಮೊರ ಮಕ್ಕರಿ, ಬಂಬು, ಗಳಗಳನ್ನು ವಸೂಲು ಮಾಡುವುದು ಅನೂಚಾನವಾಗಿ ನಡೆದುಕೊಂಡು ಬಂದಿರುವ ಪದ್ಧತಿ. ಜೊತೆಗೆ ಕಾಣಿಕೆಯನ್ನೂ ವಸೂಲು ಮಾಡಿ ಕಾಮಣ್ಣನನ್ನು ಸುಟ್ಟು ಹುಡಿ ಹಾರಿಸುತ್ತಾರೆ. ಗುಂಡ ಕುರುಡು ಭಿಕ್ಷುಕಿಯೊಬ್ಬಳು ಹಣ್ಣು ಹಣ್ಣು ಮುದುಕಿಯಾದರೂ ಲೆಕ್ಕಿಸದೆ ಆಕೆಯ ಊರುಗೋಲನ್ನು ಕಿತ್ತುಕೊಂಡು ಬಂದುಬಿಡುತ್ತಾನೆ. ಆಕೆಯ ಫಜೀತಿಯನ್ನು ಅರಿತ ಅದೇ ಗುಂಪಿಗೆ ಸೇರಿದ ಸೋಮು ತನ್ನ ತಾತನ ಊರುಗೋಲನ್ನೇ ಕದ್ದು ತಂದು ಆಕೆಗೆ ಕೊಟ್ಟುಬಿಡುತ್ತಾನೆ. ತಾತನ ಬಳಿ ಸತ್ಯವನ್ನೇ ಹೇಳಿದಾಗ ಆತ ಮೆಚ್ಚಿಕೊಳ್ಳುತ್ತಾನೆ. ಸ್ಕೌಟ್ ರಘು ಸೋಮುವಿಗೆ ಬೈಗುಳ ಆಗಬಾರದೆಂದು ಸ್ಕೌಟ್ ಕೋಲನ್ನೇ ಕೊಟ್ಟುಬಿಡುವುದು ಸ್ನೇಹಕ್ಕೆ ತಾರ್ಕಾಣವಾಗುತ್ತದೆ. ಕಾಮಣ್ಣನ ಮಕ್ಕಳೂ ಶಿಸ್ತಿನ ಸಿಪಾಯಿಗಳಾಗಿರಬೇಕು ಎನ್ನುವ ಸಂದೇಶ ಹೊರಡುತ್ತದೆ.

'ಶ್ರೀ'ಯವರ ಜೀವನ ಪರಿಚಯವನ್ನು ಐದು ಪುಟಗಳಲ್ಲಿ ಸಂಕ್ಷೇಪಿಸಿ ಬರೆಯಲಾಗಿದೆ.

'ಕನ್ನಡಮ್ಮನ ಕೊರಗು' ಒಂದು ವಿಶಿಷ್ಟ ಬರೆಹ. ಕನ್ನಡಿಗರ ಪರಭಾಷಾ ವ್ಯಾಮೋಹ ಕುರಿತ ಸಮರ್ಪಕ ವಿಡಂಬನೆ. ಕಾವ್ಯ ಕವನದ ಕುಟೀರ ಬಿಟ್ಟು ತನ್ನ ಮಕ್ಕಳನ್ನು ನೋಡಿಕೊಂಡು ಬರಬೇಕೆನ್ನುವ ಹಂಬಲ ಉಂಟಾಗುತ್ತದೆ, ಕನ್ನಡಮ್ಮನಿಗೆ. ಅವಳ ಕಣ್ಣ ಮುಂದೆ ಹಲವು ದೃಶ್ಯಗಳು ಹಾದು ಬರುತ್ತವೆ. ಬೀದಿಯಲ್ಲಿ ಕನ್ನಡದ ತಾಯಿಯೊಬ್ಬಳು ಮಗುವನ್ನು 'ಬೇಬಿ' ಎಂದು ಕರೆಯುತ್ತಾಳೆ. ಶಾಲೆಯಲ್ಲಿ ವ್ಯಾಯಾಮದ ಮಾಸ್ತರರೂ 'ಏಕ್ ದೋ ತೀನ್' ಹೇಳುತ್ತಿದ್ದಾರೆ! ತೋಟವೊಂದಕ್ಕೆ ಹೋದರೆ, 'ಕರು ನಾಡ ಕಂಪುವೂ ಗಿಡಗಳು' ಕಾಣೆಯಾಗಿವೆ; ಹೊರನಾಡ ಹೂಗಳೇ ವಿಜೃಂಭಿಸುತ್ತಿವೆ. ಬಯಲಿನಲ್ಲಿ ಹುಲ್ಲುಗಾವಲ ನಡುವೆ 'ಕೇರ್ ಆಫ್ ಗ್ರಾಸ್' ಎನ್ನುವ ಇಂಗ್ಲಿಷಿನ ಫಲಕ ರಾರಾಜಿಸುತ್ತಿದೆ. ನಗರದ ಹೆದ್ದಾರಿಯಲ್ಲಿ ಹೊರಟಾಗ ನಾಯಿಯನ್ನೂ ಇಂಗ್ಲಿಷ್ ಹೆಸರಿನಿಂದಲೇ (ಟಾಮಿ) ಕರೆಯುತ್ತಿದ್ದಾರೆ; ಯುವಕ ಯುವತಿಯರ ಸಂಭಾಷಣೆಯೂ ಇಂಗ್ಲಿಷಿನಲ್ಲೇ ನಡೆದಿದೆ!

"ಹೊರಗೆ ಕನ್ನಡತನವಿಲ್ಲ; ಒಳಗಿಲ್ಲ; ನಡೆಯಲ್ಲಿಲ್ಲ, ನುಡಿಯಲ್ಲಿಲ್ಲ... ನಾಡಿನ ಒಬ್ಬೊಬ್ಬ ಕನ್ನಡಿಗ ಕನ್ನಡತಿಯೂ ಮುದ್ದಣ ಮನೋರಮೆಯರಾಗುವವರೆಗೂ ನನ್ನ ನುಡಿ ಮುಂದಾಗದು, ನಾಡು ಒಂದಾಗದು" ಎಂದು ಹಲುಬುತ್ತಾಳೆ. ಮಗುವಿಗೆ ಇಷ್ಟವಿಲ್ಲದಿದ್ದರೂ ಪೋಷಕರು ಇಂಗ್ಲಿಷ್ ಮಾಧ್ಯಮದಲ್ಲೇ ಸೇರಿಸಬಯಸುತ್ತಿದ್ದಾರೆ; ಇಡೀ ರೂಪಕ ಉಸಿರು–೧, ಉಸಿರು–೨ –ಹೀಗೆ ೧೨ ಉಸಿರುಗಳನ್ನು ಒಳಗೊಂಡಿದೆ. ಇವುಗಳಲ್ಲಿ ಹತ್ತರಷ್ಟು ಉಸಿರುಗಳು ಕನ್ನಡಮ್ಮನಿಗೆ 'ನಿಟ್ಟುಸಿರು'ಗಳೇ ಆಗಿವೆ! ಉಸಿರು ಉಸಿರಿನಲ್ಲೂ 'ನಾಡಿನ ಮನೆಮನೆಯಲ್ಲಿಯೂ ಕನ್ನಡದ ಮಮತೆ ಪ್ರಜ್ವಲಿಸುವವರೆಗೂ ನನ್ನ ನಾಡು ಬೆಳಗದು, ನುಡಿ ಬೆಳಗದು" ಎನ್ನುವ ಕೊರಗಿನ ಮಾತುಗಳೇ ಹೊಮ್ಮಿವೆ.

ಈ ಕೃತಿಯ 'ಮುನ್ನುಡಿ'ಯಲ್ಲಿ ನನ್ನ ವಿದ್ಯಾಗುರುಗಳಾದ ಡಾ.ಎಂ. ಚಿದಾನಂದ ಮೂರ್ತಿ ಅವರು ಹೇಳಿರುವಂತೆ, "ಬರೆಹದ ಹಿಂದೆ ಕನ್ನಡದ ಬಗ್ಗೆ ಅವರು ಎಷ್ಟು ನೊಂದಿದ್ದಾರೆ ಎಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಇಂತಹ ಲೇಖನಗಳು ಬಂದು ಮತ್ತೆ ಮತ್ತೆ ಕನ್ನಡಿಗರನ್ನು ಎಚ್ಚರಗೊಳಿಸಬೇಕಾಗಿದೆ; ಅವರ ಮನಸ್ಸಿನ ಸೂಕ್ಷ್ಮ ತಂತಿಯನ್ನು ಮಿಡಿಯಬೇಕಾಗಿದೆ". ಕೃತಿಯ ಕೊನೆಯಲ್ಲಿ ಕನ್ನಡಮ್ಮ, 'ನನ್ನ ಮನೆ ಹಾಳು, ನನ್ನ ನುಡಿ ಬೀಳು' ಎಂಬ ಕೊರಗನ್ನೇ ವ್ಯಕ್ತಪಡಿಸಿದಾಗ 'ನಕ್ಕಳಾ ತಾಯಿ' ಎಂದು ನಾಟಕಕಾರರು ವಿಷಾದವನ್ನು ವ್ಯಕ್ತಪಡಿಸಿದ್ದರೂ ಹೊಸತಾಗಿ ಸೇರಿಸಿರುವ 'ಈ ಕರುನಾಡಿದು ನನ್ನ ಮನೆ' ಒಂದು ಪುಟದ ಬರೆಹದ ಮುಕ್ತಾಯ ಭಾಗದಲ್ಲಿ ಕನ್ನಡದ ಮುಂದಾಳು ಒಬ್ಬರು, "ನಿನ್ನ ಮನೆಗೆ ನಿನ್ನನ್ನು ಒಡತಿಯನ್ನಾಗಿ ಮಾಡುತ್ತೇವೆ. ನಿನ್ನನ್ನು ಬದುಕಿಸಿ ನಾವು ಬಾಳುತ್ತೇವೆ. ಹರಸಮ್ಮ ಹರಸು ತಾಯೆ" ಎಂದು ಹೇಳುವಂತೆ ಬರೆದು ನಮ್ಮೆಲ್ಲರಲ್ಲಿ 'ಆಶಾವಾದ' ಮೂಡಿಸಿದ್ದಾರೆ.

....ಓದಾಟವೇ ಕಾವ್ಯ
ಶಾಸ್ತ್ರವಂಗೈನೆಲ್ಲಿ, ನಾಲಗೆಯ ಜೇನುಮಳೆ;
ಗಣಿತವೇ, ನಕ್ಷತ್ರವೆಣಿಸುವನು ಕೋಟಿಯಲಿ
ಪದ್ಮದಲಿ, ಹುಬ್ಬೆತ್ತಿನಲಿ ಹಿಮಾಲಯವನಳೆಯುವನು;
ಇವನೆಣಿಕೆಗೊಳಗು ಸಾಗರದ ಹನಿ; ಮರದೆಲೆ,
ಚಕ್ರ ನೆಲಸೋಂಕದೊಲು ರಥ ಬಿಡುವ ಕೌಶಲ
ವಾಘೆಯಿಲ್ಲದೆ ಕುದುರೆಯೋಡಿಸುವ ಬಲ್ಮೆ, ಶರ
ವೇಗವನು ಮುಂಚಿ; ನೆರೆ ತೆಗೆದು ಬಾಣವ ಬಿಟ್ಟು
ಗುರಿ ಹೊಡೆವ ಗರಿಮೆ–"

ಈ ಕಾವ್ಯ ನಾಟಕವನ್ನು ಓದಿದಾಗ ನನ್ನ ಮನಸ್ಸಿಗೆ ಅನ್ನಿಸಿತು. " 'ರಾಘವ' ಅವರು ಮನಸ್ಸು ಮಾಡಿದ್ದರೆ ಒಂದು ಖಂಡಕಾವ್ಯವನ್ನೋ, ಅಷ್ಟೇ ಏಕೆ, ಒಂದು ಮಹಾಕಾವ್ಯವನ್ನೋ ರಚಿಸುವ ಅರ್ಹತೆ, ಪಾಂಡಿತ್ಯ, ಕಲ್ಪನಾ ಶಕ್ತಿಗಳನ್ನು ಹೊಂದಿದ್ದರು" ಎಂದು. ಇದು ಅತಿಶಯೋಕ್ತಿಯಾಗಲಾರದು.

**ಕನ್ನಡದ ಕತೆ:**

೧೯೭೯ನೇ ವರ್ಷವನ್ನು ಜಗತ್ತಿನಾದ್ಯಂತ ಅಂತಾರಾಷ್ಟ್ರೀಯ ಮಕ್ಕಳ ವರ್ಷವನ್ನಾಗಿ ಆಚರಿಸಲಾಯಿತು. ಆಗ ಕನ್ನಡ ಸಾಹಿತ್ಯ ಪರಿಷತ್ತು ಒಂದು ನೂರಕ್ಕೂ ಹೆಚ್ಚು ಮಕ್ಕಳ ಪುಸ್ತಕಗಳನ್ನು ಪ್ರಕಟಿಸಿತು. ಆ ಮಾಲೆಗಾಗಿ ಎಂ.ವಿ.ಸೀ. ಅವರು ಬರೆದ ಒಂದು ಕಿರು ಪುಸ್ತಕ 'ಕನ್ನಡದ ಕತೆ', ನಾಡು ನುಡಿಯ ಅಭಿಮಾನಿಯೂ ಶಿಷ್ಯ ವತ್ಸಲನೂ ಆದ ಗುರು ಶಿವರಾಮಯ್ಯ ಮಕ್ಕಳಿಗೆ ಕನ್ನಡ ಭಾಷೆ ಹಾಗೂ ಸಾಹಿತ್ಯಗಳ ಕುರಿತು ಸರಳವಾಗಿ ತಿಳಿಸುವ ತಂತ್ರವನ್ನು ಅಳವಡಿಸಲಾಗಿದೆ. ಭಾಷೆ ಉಳಿದು ಬೆಳೆದು ಬಂದ ಬಗೆ, ಪಂಪನಿಂದ ಇಂದಿನವರೆಗೆ ರಚಿತವಾದ ಸಾಹಿತ್ಯದ ಸಂಕ್ಷಿಪ್ತ ವಿವರಣೆ ಈ ಕೃತಿ. ಈ ಅಲ್ಪವೂ ಕೂಡ ಕನ್ನಡದ ಮಕ್ಕಳೆಲ್ಲ ತಿಳಿಯಬೇಕಾದ ಕಲ್ಪವೇ ಆಗಿದೆ ಎನ್ನುವುದನ್ನು ಮರೆಯಬಾರದು. ಆ ಮಟ್ಟಿಗೆ ಇದು ಸಾರ್ಥಕ ಕೃತಿ.

**ಈ ಕರುನಾಡಿದು ನನ್ನ ಮನೆ:**

'ಕನ್ನಡದ ಕಣ್ವ', 'ಆಚಾರ್ಯ ಬಿ.ಎಂ.ಶ್ರೀ' ನಮ್ಮನ್ನಗಲಿದ ಸಂದರ್ಭದಲ್ಲಿ ಎಂ.ವಿ.ಸೀ. ಅವರು ಪ್ರಕಟಿಸಿದ್ದ 'ಹಿಡಿಹೂವು' ಕೃತಿಯ ಮರುಮುದ್ರಣ ಇದು. ಕೊನೆಯಲ್ಲಿನ 'ಈ ಕರುನಾಡಿದು ನನ್ನ ಮನೆ' ಮಾತ್ರ ಹೊಸದಾಗಿ ಬರೆದು ಸೇರಿಸಿದ್ದು. ಬಿ.ಎಂ.ಶ್ರೀ ಅವರಿಗೆ ಅರ್ಪಿಸಿದ 'ಹಿಡಿಹೂವು'ನಲ್ಲಿ 'ಕಂಬನಿ ಕಾಣಿಕೆ' ಎನ್ನುವ ಪದ್ಯ ಸಮರ್ಥವಾಗಿ 'ಶ್ರೀ' ಅವರನ್ನು ಚಿತ್ರಿಸುತ್ತದೆ. ನಂತರದ ಗದ್ಯದಲ್ಲಿ

"ಗದಾಯುದ್ಧದಲ್ಲಿ.... ಓದುಗರು ಮತ ವಿಚಾರ ಶಾಸ್ತ್ರದ ಮರುಭೂಮಿಯಲ್ಲಿ ಪ್ರಯಾಣ ಮಾಡಿ ಬಳಲಬೇಕಾಗಿಲ್ಲ. ಮೊದಲಿಂದ ಕಡೆಯವರೆಗೆ ವೀರ, ಕರುಣ, ರೌದ್ರ, ಅದ್ಭುತ ರಸಗಳ ಪ್ರವಾಹದಲ್ಲಿ ರನ್ನ ನಮ್ಮನ್ನು ತೇಲಿಸಿಕೊಂಡು ಹೋಗುತ್ತಾನೆ. 'ರಸಘಟ್ಟಿ' ಎಂಬ ಮಾತು ಅಜಿತಪುರಾಣಕ್ಕಿಂತ ಹೆಚ್ಚಾಗಿ ಈ ಕಾವ್ಯಕ್ಕೆ ಸಲ್ಲುತ್ತದೆ."

"ರನ್ನ ಗದಾಯುದ್ಧವನ್ನು ಮೊದಲು ನಾಟಕವಾಗಿ ಬರೆದು, ಆಮೇಲೆ ಅದನ್ನು ಕಾವ್ಯವಾಗಿ ತಿರುಗಿಸಿದನೆಂದು ಕಾಣುತ್ತದೆ." (ಈ ಮಾತು ಹೊಸದು.)

"ಕಥಾನಾಯಕನೇನೋ ಸಾಹಸ ಭೀಮನೆ. ಆದರೆ, ಈ ಕೃತಿ ರತ್ನದಲ್ಲಿ ನಮ್ಮ ಮೆಚ್ಚುಗೆಯನ್ನೂ ಮರುಕವನ್ನೂ ಸೆಳೆದುಕೊಂಡು ನಾಯಕರತ್ನವಾಗಿ ಮೆರೆಯುವವನು ದುರ್ಯೋಧನ."

ಈ ಮೆಲು ಮಾತುಗಳು ಇಡೀ ಕಾವ್ಯದ ಬಂಡವಾಳವನ್ನೇ ಬಯಲಿಗಿಡುವ ವಿವರಣೆಗಳಾಗಿವೆ.

**ಯುಧಿಷ್ಠಿರ :**

ಇದು ಕೂಡ ರಾಷ್ಟ್ರೋತ್ಥಾನ ಸಾಹಿತ್ಯ ಮಾಲೆಯ 'ಭಾರತ ಭಾರತಿ ಪುಸ್ತಕ ಸಂಪದ' ಮಾಲಿಕೆಗಾಗಿ ಸಿದ್ಧಪಡಿಸಿದ್ದು. 'ರನ್ನ' ಪುಸ್ತಕಕ್ಕೆ ಹೇಳಿದ ಎಲ್ಲ ಮೆಚ್ಚುಗೆಯ ಮಾತುಗಳೂ ಇದಕ್ಕೂ ಅನ್ವಯಿಸುತ್ತವೆ.

ಮಹಾಭಾರತದ ಮುಖ್ಯ ಪ್ರಸಂಗಗಳನ್ನು ಸ್ವಾರಸ್ಯಕರವಾಗಿ ನಿರೂಪಿಸುತ್ತ ಆ ಮೂಲಕ ಧರ್ಮರಾಯನ ವ್ಯಕ್ತಿತ್ವವನ್ನು ಕಟ್ಟಿಕೊಟ್ಟಿರುವ ಪರಿ ಚೆನ್ನಾಗಿದೆ. ಕೃತಿಯ ಕೊನೆಯಲ್ಲಿ ಸ್ವರ್ಗಾರೋಹಣ ಪರ್ವದಲ್ಲಿ ತನ್ನೊಡನೆ ಬಂದ ನಾಯಿಗೆ ಸ್ವರ್ಗ ನೀಡದಿದ್ದರೆ ಅ ಸುಖ ನನಗೂ ಬೇಡ ಎನ್ನುವ ಆತನ ಮಾತು ಮೆಚ್ಚಿ ತಂದೆಯಾದ ಯಮ ಹೇಳುತ್ತಾನೆ. 'ನಿನ್ನ ನಡತೆ ಭೂಲೋಕದವರಿಗೆ ಮೇಲ್ಪಂಕ್ತಿಯಾಗಿ ಉಳಿಯುತ್ತದೆ.' ಈ ಮಾತಿನ ನಿರೂಪಣೆಯೇ ಈ ಕೃತಿಯ ಸಾರಸರ್ವಸ್ವ,

ವನವಾಸ ಕಾಲದಲ್ಲಿ ಪಾಂಡವರು ದ್ವೈತವನದಲ್ಲಿದ್ದಾಗ ಅವರ ಕಷ್ಟವನ್ನು ನೋಡಲೆಂದೋ, ಅವರಲ್ಲಿ ಈರ್ಷ್ಯೆ ಹುಟ್ಟಿಸಲೆಂದೋ ಅಲ್ಲಿಗೆ ವಿಹಾರಾರ್ಥವಾಗಿ ಬಂದ ದುರ್ಯೋಧನ ಗಂಧರ್ವರಿಗೆ ಸೆರೆ ಸಿಕ್ಕುತ್ತಾನೆ. ಆ ಸಂದರ್ಭದಲ್ಲಿ ಧರ್ಮರಾಯ ಹೇಳುವ ಮಾತು, 'ನಾವೂ ಕೌರವರೂ ದಾಯಾದಿಗಳು. ಆದ್ದರಿಂದ ರಾಜ್ಯಕ್ಕಾಗಿ ಅವರು ನಮ್ಮ ಮೇಲೆ ಹಗೆತನ ಬೆಳೆಸಿದರು. ಇಷ್ಟೇ ಹೊರತು ಹೊರಗಿನ ಶತ್ರುಗಳ ವಿಷಯದಲ್ಲಿ ನಾವೂ ಅವರೂ ಒಂದೇ ಕುಟುಂಬ.' ಈ ಮಾತು ಆತನ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿ. ದಾಯಾದಿಗಳ ಐಕ್ಯತೆಯನ್ನು ಕುರಿತ ಈ ಮಾತು ಮತ್ತೆ ಮತ್ತೆ ಮೆಲುಕು ಹಾಕಬೇಕಾದುದೇ ಸರಿ. ಯಕ್ಷಪ್ರಶ್ನೆಯ ಸಂದರ್ಭದ ಆತನ ಉತ್ತರಗಳು ನಮ್ಮ ಊಹೆಗೂ ನಿಲುಕಲಾರದ ವಷ್ಟೇ ಅಲ್ಲದೆ ಖಚಿತ ಮೌಲ್ಯಗಳಾಗಿವೆ.

ಕರ್ನಾಟಕ ಸರ್ಕಾರ ಮೊದಲ ವಿಶ್ವ ಕನ್ನಡ ಸಮ್ಮೇಳನ ನಡೆಸಿದ ಸಂದರ್ಭದಲ್ಲಿ ಹೊರತಂದ ಪುಸ್ತಕ ರಾಶಿಯಲ್ಲಿ ಒಂದು 'ಮಕ್ಕಳ ಸಾಹಿತ್ಯ'. ಇದನ್ನು ಸಂಪಾದಿಸುವ ಕೆಲಸವನ್ನು ಎಂ.ವಿ.ಸೀ. ಅವರು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಅದಕ್ಕೆ ಅವರು ಬರೆದ 'ಪೀಠಿಕೆ' ಅಭ್ಯಾಸಯೋಗ್ಯವಾಗಿದೆ. ಅದರಲ್ಲಿ ಅವರು ಹೇಳುತ್ತಾರೆ, "ನಮ್ಮ ಹೊಸ ಲೇಖಕ... ಚಿಕ್ಕ ಮಕ್ಕಳನ್ನು ತನ್ನ ಕಡೆಗೆ ಒಲಿಸಿಕೊಂಡು ಅವರಿಗೆ ಬೇಕಾದ ಪುಟ್ಟವಾದ, ಚಿತ್ರಗಳಿಂದ ಕೂಡಿರುವ, ಮುದ್ದಾದ ಬಾಲ ಶೈಲಿಯಲ್ಲಿ ಬರೆದಿರುವ ಸಾಹಸ ಕತೆಗಳು, ಆಶ್ಚರ್ಯ ಕತೆಗಳು, ದೇಶ ಸಂಚಾರಗಳು, ಸಮುದ್ರಯಾನಗಳು, ಪ್ರಕೃತಿ ಶಾಸ್ತ್ರದ ಅದ್ಭುತ ನಿರ್ಮಾಣಗಳು, ಭರತ ಖಂಡದ ಪೂರ್ವ ಚರಿತ್ರೆಯ ಸಾರಾಂಶಗಳು, ವೀರರ ನೈಜ ವೃತ್ತಾಂತಗಳು ಮುಂತಾದುವನ್ನು ಮೊದಲು ಸಿದ್ಧಮಾಡುವನು." ಈ ಅಭಿಪ್ರಾಯದಂತೆ ಅವರೂ ತೊಡಗಿಕೊಂಡಿರುವುದನ್ನು ನಾವು ಗಮನಿಸುತ್ತಿದ್ದೇವೆ. ಇಂದಿನ ಮಕ್ಕಳ ಸಾಹಿತಿಗಳೂ ರಚನೆಯ ಸಂದರ್ಭದಲ್ಲಿ ಈ ಮಾತುಗಳನ್ನು ನೆನಪಿಸಿಕೊಂಡರೆ ಖಂಡಿತ ಒಳಿತಾಗುತ್ತದೆ.

**'ರನ್ನ' :**

ರಾಷ್ಟ್ರೋತ್ಥಾನ ಸಾಹಿತ್ಯದ 'ಭಾರತ ಭಾರತಿ ಪುಸ್ತಕ ಸಂಪದ' ಪ್ರಕಟಣಾ ಮಾಲೆಗಾಗಿ ಬರೆದ ಕಿರು ಹೊತ್ತಗೆ ಇದು. ರನ್ನ ಮಹಾಕವಿಯ ಬದುಕು, ಬರೆಹ, ವರ್ತನೆ, ಸಾಧನೆಗಳನ್ನು ಇದಕ್ಕಿಂತ ಅಚ್ಚುಕಟ್ಟಾಗಿ ಯಾರೂ ಹೇಳಲಾರರು. ಮಕ್ಕಳಿಗಾಗಿ ಬರೆದದ್ದಾದರೂ ಹಿರಿಯರಿಗೂ ಪ್ರಯೋಜಕವಾಗುವಂತೆ ಸುಲಭ ಪದಗಳ ಸರಳ ಶೈಲಿಯಲ್ಲಿ ಪಾರದರ್ಶಕ ವಾಕ್ಯಗಳಲ್ಲಿ ನಿರೂಪಿಸಿರುವುದು ಎಂ.ವಿ.ಸೀ. ಅವರ ಭಾಷಾ ಸಾಮರ್ಥ್ಯಕ್ಕೆ ಸಾಕ್ಷಿ.

ಕನ್ನಡದಲ್ಲಿ ಮೂವರು ಕವಿರತ್ನರು, ಮೂವರು ಕವಿ ಚಕ್ರವರ್ತಿಗಳು ಇದ್ದರು. ಪಂಪ, ಪೊನ್ನ, ರನ್ನ ಮೂವರೂ ಕವಿ ರತ್ನರು; ಪೊನ್ನ, ರನ್ನ, ಜನ್ನ ಈ ಮೂವರೂ ಕವಿಚಕ್ರವರ್ತಿಗಳು. ಹೀಗೆ ಹೇಳುತ್ತ ರನ್ನನ ಮನೆತನ, ವಿದ್ಯಾಭ್ಯಾಸ, ಚಾವುಂಡರಾಯ ಹಾಗೂ ಅತ್ತಿಮಬ್ಬೆಯರ ಆಶ್ರಯ, ಮಡದಿ ಮಕ್ಕಳ ವಿವರಗಳನ್ನೆಲ್ಲ ಕೆಲ ಕೆಲವೇ ಸಾಲುಗಳಲ್ಲಿ ಸ್ಪಷ್ಟಪಡಿಸುತ್ತ, ಅವನ ಕೃತಿಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿದ್ದಾರೆ. 'ಉಪಕಾರ ಸ್ಮರಣೆ ಒಂದು ದೊಡ್ಡ ಗುಣ', 'ಆತ್ಮ ವಿಶ್ವಾಸವಿಲ್ಲದ ಕವಿ ಶ್ರೇಷ್ಠವಾದ ಕಾವ್ಯವನ್ನು ರಚಿಸಲಾರ, ಇಂಥ ಗುಣಾತ್ಮಕ ವಾಕ್ಯಗಳು ಅಲ್ಲಲ್ಲೆ ಕಾಣಿಸುತ್ತವೆ. ಇದಕ್ಕಿಂತ ಹೆಚ್ಚಿನದೆಂದರೆ ಅವರು ಕಾವ್ಯಗಳನ್ನು ಕುರಿತು ಮಾಡುವ 'ತಿಳಿಯಾದ ವಿಮರ್ಶೆ'.

"ರನ್ನನ ಕವಿತಾ ಶಕ್ತಿ ಒಂದೇ ಸಮನಾಗಿ ಇಲ್ಲಿ (ಅಜಿತ ಪುರಾಣ) ಕಾಣಿಸಿಕೊಳ್ಳಲು ಅವಕಾಶವಿಲ್ಲ. ಆದರೂ, ಇಲ್ಲಿ ಕನ್ನಡ ಭಾಷೆ ತಿಳಿಯಾಗಿದೆ. ಹೇಳಿದ ಅರ್ಥವನ್ನು ಒತ್ತಿ ಒತ್ತಿ ಮನಸ್ಸಿಗೆ ಹಿಡಿಸುವಂತೆ ಮಾಡುತ್ತಾನೆ."

ಸದಸ್ಯರಾಗಿದ್ದರು. ೧೯೩೨ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೇ ಭಾರತ ವಾಚನ ಸ್ವರ್ಧೆಯಲ್ಲಿ ಚಿನ್ನದ ಪದಕವನ್ನು ಗಳಿಸಿದ್ದರು. ಗಮಕ ಕಲೆಯಲ್ಲೂ ಪರಿಣತರಾಗಿದ್ದುದರಿಂದ ಅವರು 'ಸಂಗೀತ ಕೃತಿಗಳನ್ನು ಹಾಡುವಾಗ ಸಾಹಿತ್ಯಕ್ಕೆ ಅಪಚಾರವಾಗದ ಹಾಗೆ ಹಾಡಬಲ್ಲ ಕೆಲವೇ ಗಾಯಕರಲ್ಲಿ ರಾಜಾರಾಯರೂ ಒಬ್ಬರಾಗಿದ್ದರು. ನೋಡಲು ಚೆಲುವರಾಗಿದ್ದ ರಾಯರು ಹಲಕೆಲವು ನಾಟಕಗಳಲ್ಲೂ ಅಭಿನಯಿಸಿದ್ದರು' ಸಂಗೀತ ಕ್ಷೇತ್ರದಲ್ಲಿ ಸಾಧನೆ ಮಾಡದೆ ಸಿದ್ಧಿ ದೊರಕದು. ಅದರಂತೆ ಸಾಧನೆಯನ್ನು ಅವರು ಮಾಡಿದರು. ಅವರು ಸ್ವತಃ ಸಂಗೀತ ಕೃತಿಗಳನ್ನು ರಚಿಸಿರುವರಲ್ಲದೆ ಹರಿದಾಸರ ಹಲವಾರು ಕೀರ್ತನೆಗಳಿಗೆ ಸ್ವರ ಸಂಯೋಜನೆ ಮಾಡಿ, ಆ ಕೃತಿಗಳನ್ನು ಪ್ರಕಟಿಸಿದ್ದಾರೆ.

ಮೈಸೂರಿನ ಶ್ರೀಮನ್ ಮಹಾರಾಜರವರು ನಾಲ್ಮಡಿ ಕೃಷ್ಣರಾಜ ಒಡೆಯರು ಮತ್ತು ಶ್ರೀ ಜಯಚಾಮರಾಜ ಒಡೆಯರು– ಬೆಂಗಳೂರಿಗೆ ಬಂದಿದ್ದಾಗ ರಾಜಾರಾವ್ ಹಾಗೂ ಅವರ ಸೋದರ ಗೋಪಾಲ ರಾವ್ ಇಬ್ಬರನ್ನೂ ಬರಮಾಡಿಕೊಂಡು 'ಜೋಡಿ ವಾದನ'ವನ್ನು ಆಲಿಸಿ, ಆನಂದಿಸಿ ಶ್ಲಾಘಿಸಿದ್ದರು. ಧಾರವಾಡದ ಪಂಚಾಕ್ಷರಿ ಗವಾಯಿಗಳು (ಅಂಧರು), ಡಿ.ವಿ.ಜಿ., ಬಿ.ಎಂ.ಶ್ರೀ ಇಂಥ ದಿಗ್ಗಜರೆಲ್ಲ ಇವರ ಸಂಗೀತಕ್ಕೆ ಮಾರುಹೋದವರೇ ಆಗಿದ್ದರು. ಇವರಿಗೆ 'ಗಾನಕಲಾ ಭೂಷಣ', 'ರಾಗರಸ ಭಾಗ್ಯ' 'ಗಾನ–ವಾದನ–ಪ್ರವೀಣ' ಮುಂತಾದ ಬಿರುದುಗಳು ದೊರೆತಿವೆ. ೧೯೭೪ರಲ್ಲಿ 'ಕರ್ನಾಟಕ ಗಾನ ಕಲಾ ಪರಿಷತ್ತು' ನಡೆಸಿದ ಸಮ್ಮೇಳನದಲ್ಲಿ ಸಂಗೀತೋತ್ಸವದ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ಅವರು ಹೇಳಿದ್ದ ಒಂದು ಮುಖ್ಯ ಮಾತೆಂದರೆ 'ಸಂಗೀತ ಹೃದಯದ ಭಾಷೆ' ಎನ್ನುವುದು. ಅವರ ಕೆಲವು ಕೃತಿಗಳೆಂದರೆ, 'ಸಂಗೀತ ಶಾಸ್ತ್ರ ಸಾರ' (೧೯೬೨), 'ಸಂಗೀತ ಶಾಸ್ತ್ರ ಚಂದ್ರಿಕೆ' (೧೯೬೫), 'ಹರಿದಾಸ ಕೃತಿ ಮಂಜರಿ' (೧೯೫೨) ಮುಂತಾದುವು. ಇವೆಲ್ಲಕ್ಕೂ ಕಿರೀಟಪ್ರಾಯ ರಚನೆಯೆಂದರೆ ೧೯೯೯ರಲ್ಲಿ ಪ್ರಕಟವಾದ 'ಭಾರತೀಯ ಸಂಗೀತ ವಾದ್ಯಗಳು'. ಇದನ್ನು ಬೆಂಗಳೂರು ವಿಶ್ವವಿದ್ಯಾಲಯ ಪ್ರಕಟಿಸಿದೆ.

ಇಂತಹ ಸಾಧಕರಾದರೂ ರಾಜಾರಾಯರು, ಲೇಖಕರೇ ಹೇಳುವ ಹಾಗೆ, 'ಹೊರಗೊಂದು ಒಳಗೊಂದು ಇಲ್ಲದ ಮುಗ್ಧ, ಪ್ರಾಮಾಣಿಕ ಸರಳ ಜೀವ...... ಇಷ್ಟೊಂದು ಕಲಾ ಸಂಪತ್ತು ಒಂದೆಡೆ ಮೇಳೈಸಿರುವ ವ್ಯಕ್ತಿ ಸಂಗೀತ ಪ್ರಪಂಚದಲ್ಲಿ ದುರ್ಲಭ. ಎಲ್ಲಕ್ಕಿಂತ ಮೇಲಾಗಿ ಶುದ್ಧ ಚರಿತ್ರರು. ಈ ಬಗೆಯ ಸಾಧಕರ ಒಡನಾಟದಲ್ಲಿದ್ದರಾದರೂ ಎಂ.ವಿ.ಸೀ. ಅವರು ಈ ಪುಸ್ತಿಕೆಯನ್ನು, ನಿಸ್ಪೃಹತೆಯಿಂದ ರಚಿಸಿ ಒಬ್ಬ ಸಿದ್ಧನ ಸಾಧನೆಯನ್ನು ಲೋಕಕ್ಕೆ ನಿರ್ಲಿಪ್ತತೆಯಿಂದ ಪರಿಚಯಿಸಿದ್ದಾರೆ.

**ರಾಬಿನ್ಸನ್ ಕ್ರೂಸೊ :**

ಡ್ಯಾನಿಯಲ್ ಡೀಫೋ ಬರೆದ ಈ 'ರಾಬಿನ್ಸನ್ ಕ್ರೂಸೊ' ಒಂದು ಸಾಹಸಮಯ ಕಥಾನಕ. ಪಾರಂಪರಿಕವಾಗಿ ಕಂಡು ಬರುವ ಹಾಗೆ ಇದನ್ನು

ಧರ್ಮರಾಯ ಜೂಜಾಡಿದ್ದು ದೋಷವಲ್ಲವೇ? ಎನ್ನುವ ಪ್ರಶ್ನೆಗೆ ಯುಧಿಷ್ಠಿರನ ಮಾತುಗಳನ್ನೇ ನೋಡಬಹುದು. 'ನಾನಾಗಿ ಜೂಜಾಡುವುದಿಲ್ಲ; ಜೂಜಿಗೆ ಕರೆದರೆ ಒಲ್ಲೆ ಎನ್ನುವುದಿಲ್ಲ. ಇದು ಕ್ಷತ್ರಿಯ ಧರ್ಮ'. ೧೨ ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸಗಳಿಗೆ ಕಾರಣವಾದ ಅ ಜೂಜಾಟವನ್ನು ಸಮರ್ಥಿಸಿಕೊಳ್ಳುವಾಗ ಆತನ ಧರ್ಮ ಪಕ್ಷಪಾತ ನಿಚ್ಚಳವಾಗಿ ವ್ಯಕ್ತವಾಗುತ್ತದೆ. ಚಂದ್ರವಂಶದಲ್ಲಿ ಹುಟ್ಟಿ ಭರತ ವಂಶಕ್ಕೆ ಕಿರೀಟಪ್ರಾಯನಾದ ಯುಧಿಷ್ಠಿರನು ಅಸಾಮಾನ್ಯನೇ ಸರಿ ಎನ್ನುವುದನ್ನು ರೂಪಿಸಲಾಗಿದೆ. ಈ ಪುಸ್ತಕ ಕುರಿತು ಈಶ್ವರಚಂದ್ರ ಅವರು ಹೀಗೆ ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತಿಸಿದ್ದಾರೆ:

"ಧರ್ಮರಾಯನ ಬದುಕಿನಲ್ಲಿ ಮೂರು ದೊಡ್ಡ ಕುಂದಕಗಳೆಂದರೆ ದ್ಯೂತವ್ಯಸನ, ಅಭಿಮನ್ಯುವನ್ನು ಚಕ್ರವ್ಯೂಹ ಭೇದನೆಗೆ ಕಳುಹಿಸಿದ್ದು ಹಾಗೂ 'ಅಶ್ವತ್ಥಾಮೋ ಹತ: ಕುಂಜರ:' ಎಂದು ತಿಳಿದೂ ತಿಳಿದೂ ರಣರಂಗದಲ್ಲಿ ಘೋಷಿಸಿದ್ದು. ಮೊದಲನೆಯದಕ್ಕೆ ಕ್ಷತ್ರಿಯ ಧರ್ಮದ ಸಮಜಾಯಿಷಿಯಾಯಿತು. ಆದರೆ ಅನಂತರದ ಎರಡು ಪ್ರಸಂಗಗಳನ್ನು ಲೇಖಕರು ಪ್ರಸ್ತಾಪಿಸಿಯೇ ಇಲ್ಲ." ಈ ಅಭಿಪ್ರಾಯದೊಂದಿಗೆ ನಾವೂ ಏಕೀಭವಿಸಬಹುದು.

**ವೈಣಿಕ ವಿದ್ವಾನ್ ಎಲ್. ರಾಜಾರಾವ್ :**

ಎಂ.ವಿ.ಸೀ. ಅವರು ನಾಟಕಕಾರರೂ ಹೌದು. ಸಾಹಿತಿಯೂ ಹೌದು, ಚಿತ್ರಕಲಾವಿದರೂ ಹೌದು. ಇವರ ಬಹುಮುಖ ಪ್ರತಿಭೆಯ ಮತ್ತೊಂದು ಮುಖ್ಯ ಭಾಗ, ಇವರು ಪ್ರಸಿದ್ಧ ಮೃದಂಗ ವಾದಕರೂ ಹೌದು ಎನ್ನುವುದು. ಮೈಸೂರಿನ ಪ್ರಮುಖ ವೈಣಿಕ ವಿದ್ವಾನ್ ಎಲ್. ರಾಜಾರಾವ್ ಇವರ ಅಪ್ತ ಸ್ನೇಹಿತರು. ಅವರ ಸಂಗೀತ ಕಛೇರಿಗಳಲ್ಲಿ ಎಂ.ವಿ.ಸೀ. ಮೃದಂಗ ನುಡಿಸಿ ಸಾಥ್ ನೀಡಿದ್ದಾರೆ ಕೂಡ. ರಾಜಾರಾವ್ ಅವರೇನೂ ಕಡಿಮೆಯವರಲ್ಲ. ವಾದಕ, ಗಾಯಕ, ಗಮಕಿ, ಲೇಖಕ ಸಾಲದೆಂಬಂತೆ ವಾಗ್ಗೇಯಕಾರ ಕೂಡ. ಅವರ ಕೆಲವೇ ಕೃತಿಗಳು ಸಂಗೀತ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಗಳಾಗಿವೆ.

ಮೈಸೂರಿನ ಸಂಗೀತ ಪರಂಪರೆಯಲ್ಲಿ ಖ್ಯಾತ ನಾಮರ ಗುರು ಶಿಷ್ಯ ಪರಂಪರೆಯಲ್ಲಿ ಮೂಡಿಬಂದವರು ಎಲ್. ರಾಜಾರಾವ್. ಇವರ ತಂದೆ ಲಕ್ಷ್ಮೀ ನಾರಾಣಪ್ಪನವರ ಮನೆ ಸಾಧಾರಣವಾದ ಹೆಂಚಿನ ಮನೆಯಾಗಿದ್ದರೂ ಒಂದು ಚಿಕ್ಕ ಗಂಧರ್ವ ಲೋಕವೇ ಆಗಿತ್ತು. ಪ್ರಸಿದ್ಧ ವಿದ್ವಾಂಸರನೇಕರು ಭೇಟಿ ಕೊಟ್ಟು ಹಾಡು ಕೇಳಿ, ತಾವೂ ಹಾಡಿ ಹೋಗುತ್ತಿದ್ದರು. ಬಾಲಕ ರಾಜಾರಾವ್ ಇವರೆಲ್ಲರಿಂದ ಪ್ರೇರಿತರಾಗುತ್ತ ತಂದೆಯಿಂದ ದೊರೆತ ಶಿಕ್ಷಣಕ್ಕೆ ಸಾಣೆ ಹಿಡಿಯುತ್ತಿದ್ದ!

ಕಾಲೇಜಿನ ದಿನಗಳಲ್ಲೇ 'ಯೂನಿಯನ್' ಆಶ್ರಯದಲ್ಲಿ ಸಂಗೀತ ಗೋಷ್ಠಿ (ಅರ್ಕೆಸ್ಟ್ರಾ) ನಡೆಯುತ್ತಿತ್ತು. ರಾಜಾರಾವ್ ಅವರು ಅದರಡಿ ವೀಣೆ ನುಡಿಸುವ

ವಿವಿಧ ಮಜಲುಗಳಲ್ಲಿ ಮಕ್ಕಳ ಮನ ತಟ್ಟುವ, ಬುದ್ಧಿಯನ್ನು ಮುಟ್ಟುವ ಗುಣ ಅವುಗಳಲ್ಲಿದೆ" ಎನ್ನುವ ಈಶ್ವರಚಂದ್ರ ಅವರ ಮಾತು (ಪುಟ ೨೦೪, 'ಆಸ್ವಾದ' ಎಂ.ವಿ.ಸೀ. ಅಭಿನಂದನ ಗ್ರಂಥ ೧೯೮೩) ಸರಿಯಾಗಿಯೇ ಇದೆ.

ಎಂ.ವಿ.ಸೀ. ಅವರು ಸಾಹಿತ್ಯ ರಚನೆಯಲ್ಲಿ ಕಂಡುಕೊಂಡ ಕೃತಕೃತ್ಯತೆ ಕುರಿತ ಅವರವೇ ಮಾತುಗಳೊಂದಿಗೆ ಈ ಪ್ರಸ್ತಾವನೆಯನ್ನು ಮುಗಿಸುತ್ತೇನೆ.

"ಇಂತಹ ಸಂಸಾರದ ತಾಪತ್ರಯವನ್ನು ನೀಗಿ ಆತ್ಮ ಸಂಸ್ಕಾರಕ್ಕೆ ಸಾಧಕವಾಗುವ ಸಂಜೀವಿನಿ ಸಾಹಿತ್ಯ. ಓದುಗ, ಕೃತಿಕಾರ ಇಬ್ಬರಿಗೂ ಅನ್ವಯಿಸುವ ಮಾತಿದು. ಅರ್ಧ ಶತಮಾನ ಕಾಲ ಈ ಸಂಜೀವಿನಿಯನ್ನು ಸೇವಿಸಿರುವ ನಾನು 'ಧನ್ಯೋಽಸ್ಮಿ' ಎಂದು ನಮ್ರತೆಯಿಂದ ಹೇಳುತ್ತೇನೆ." ಸದಾ ನಾವೆಲ್ಲರೂ ನೆನಪಿನಲ್ಲಿಟ್ಟುಕೊಳ್ಳಬಹುದಾದ ಮಾತುಗಳು ಇವು.

**– ಟಿ.ಎಸ್. ನಾಗರಾಜ ಶೆಟ್ಟಿ.**

ನಿರ್ಮಲ ಪ್ರಕಾಶನ
೯೫೭, ೫ನೆಯ ಅಡ್ಡರಸ್ತೆ
ಗೋವಿನಪುರ ಬಡಾವಣೆ
ತಿಪಟೂರು – ೫೭೨ ೨೦೨
ಮೊ. : ೯೪೪೮೯೭೯೫೩೭

ಬರೆದಾಗ ಆತನಿಗೆ ಶಿಷ್ಟ ಸಮಾಜದ ಗೌರವ ದೊರಕಲಿಲ್ಲ. ಜನ ಮೆಚ್ಚಿದರಾದರೂ ವಿಮರ್ಶಕರು ತಿರಸ್ಕರಿಸಿದರು. ಅವನು ಖಿನ್ನನಾಗದೆ ದಿಟ್ಟತನದಿಂದ ಏಕಾಂಗಿಯಾಗಿ ಬದುಕಿದ. ಅನುವಾದಕರಾದ ಎಂ.ವಿ.ಸೀ. ಅವರೂ 'ಮುನ್ನುಡಿ'ಯಲ್ಲಿ ಹೇಳಿರುವಂತೆ, 'ಒಂದು ವಿಧದಲ್ಲಿ ರಾಬಿನ್ಸನ್ ಕ್ರೂಸೊ ಡೀಫೋವಿನ ಆತ್ಮ ವೃತ್ತಾಂತವನ್ನೇ ಒಳಗೊಂಡ ಒಂದು ರೂಪಕ ಕಥೆ ಎನ್ನಬಹುದೇನೊ." ಆತ ಜೀವನವಿಡೀ ಕಷ್ಟ ಕಾರ್ಪಣ್ಯಗಳಲ್ಲೇ ಕಳೆದು ೧೭೩೧ ರಲ್ಲಿ ತೀರಿಕೊಂಡ. ಈಗ ಆ ಕೃತಿ ಎಷ್ಟು ಜನಪ್ರಿಯವಾಗಿದೆಯೆಂದರೆ ಒಂದು ಶತಮಾನಕ್ಕೂ ಹಿಂದೆ ಇಂಗ್ಲೆಂಡ್ ದೇಶದ ಬಾಲಕ ಬಾಲಕಿಯರೆಲ್ಲರೂ ಸೇರಿ ಚಂದಾ ಹಣ ಸಂಗ್ರಹಿಸಿ ಲೇಖಕ ಸಮಾಧಿಯಾಗಿದ್ದ ಬನ್‌ಹಿಲ್ ಫೀಲ್ಡ್ಸ್ (ಲಂಡನ್)ನಲ್ಲಿ ಒಂದು ಸ್ಮಾರಕ ಸ್ತಂಭವನ್ನು ನಿಲ್ಲಿಸಿದ್ದಾರೆ!

ಸಾಹಸ ಕೃತ್ಯಗಳ ನಿರೂಪಣೆಯ ಜೊತೆಜೊತೆಯಲ್ಲೇ ನೀತಿ ಬೋಧೆಯೂ ಸೇರಿರುವುದು ಈ ಗ್ರಂಥದ ವೈಶಿಷ್ಟ್ಯ. ಸುಪ್ರಸಿದ್ಧ ಸಾಹಿತಿಗಳನೇಕರು ಇದನ್ನು ಮುಕ್ತವಾಗಿ ಮೆಚ್ಚಿಕೊಂಡಿದ್ದಾರೆ. ವಾಲ್ಟರ್ ಸ್ಯಾವೇಜ್ ಲ್ಯಾಂಡರ್ ಎನ್ನುವವನಂತೂ ಕ್ರೂಸೋನನ್ನು ಅಕಿಲಿಸನಿಗೂ ಡೀಫೋನನ್ನು ಹೋಮರನಿಗೂ (ಇಲಿಯೆಡ್ ಮಹಾಕಾವ್ಯದ ಒಬ್ಬ ವೀರ ಹಾಗೂ ಅದರ ಲೇಖಕ) ಹೋಲಿಸಿ ಇವರ ಮುಂದೆ ಅವರಿಬ್ಬರೂ ಮರೆತುಹೋಗುತ್ತಾರೆ ಎನ್ನುವಷ್ಟರಮಟ್ಟಿಗಿನ ಉತ್ಪ್ರೇಕ್ಷೆಯ ಅಭಿಪ್ರಾಯವನ್ನು ವ್ಯಕ್ತಪಡಿದ್ದಾನೆ.

೧೬೩೨ರಲ್ಲಿ ಯಾರ್ಕ್ ಪಟ್ಟಣದಲ್ಲಿ ಒಂದು ಸದ್ವಂಶದಲ್ಲಿ ಹುಟ್ಟಿದ ಕ್ರೂಸೊ (ರಾಬಿನ್ಸನ್ ಎನ್ನುವುದು ಅವನ ತಾಯಿಯ ಮನೆತನದ ಹೆಸರು) ತಂದೆ ತಾಯಿಯರ ಮೂರನೆಯ ಮಗ. ಮೊದಲ ಮಗ ಬೇಡ ಬೇಡವೆಂದರೂ ಕೇಳದೆ ಸೈನ್ಯಕ್ಕೆ ಸೇರಿ ಯುದ್ಧವೊಂದರಲ್ಲಿ ಸಾವನ್ನಪ್ಪುತ್ತಾನೆ. ಎರಡನೆಯ ಮಗ ಎಲ್ಲಿಗೆ ಹೋಗಿ ಏನಾದನೋ ಯಾರಿಗೂ ತಿಳಿಯದು. ಉಳಿದ ಈ ಮಗನಿಗೂ ಕಡಲ ಪಯಣದ ಹುಚ್ಚು! ಅದರಿಂದ ಅವನನ್ನು ತಡೆಯಲು ತಂದೆ ತಾಯಿಯರಿಗೂ ಸಾಧ್ಯವಾಗಲಿಲ್ಲ. ಅಂತಹ ಅದಮ್ಯ ಬಯಕೆ ಅವನದು. ಅಪ್ಪನ ಬುದ್ಧಿವಾದದಿಂದ ಕೂಡಿದ ಎಚ್ಚರಿಕೆಯನ್ನೂ ಅಮ್ಮನ ಮಮತೆಯ ಮಾತನ್ನೂ ಅಲ್ಲಗಳೆದು ಹಡಗನ್ನು ಹತ್ತೇಬಿಡುತ್ತಾನೆ. ಅಲ್ಲಿಂದ ಮುಂದೆ ಅವನು ಪಟ್ಟ ಪಾಡು. ಕೈಗೊಂಡ ಸಾಹಸದ ಪ್ರಸಂಗಗಳು, ಜೀವನ್ಮರಣ ಹೋರಾಟಗಳು ಎದುರಿಸಿದ ಅಪಾಯಗಳು– ಹೀಗೆ ಕತೆ ಪುಟಪುಟಗಳಲ್ಲೂ ತೆರೆದುಕೊಳ್ಳುತ್ತ ಹೋಗುತ್ತದೆ. ಇವೆಲ್ಲ ಕಿಶೋರ ಕಿಶೋರಿಯರ ಮನ ಸೆಳೆಯಬಲ್ಲವು. ಸಾಹಸ ಪ್ರಿಯರ ಕುತೂಹಲವನ್ನು ತಣಿಸಿ ನಲಿವು ನೀಡಬಲ್ಲವು.

ನಾಡ ಮಕ್ಕಳ ನಲಿವಿಗಾಗಿ ೧೧೦ ಪುಟಗಳಷ್ಟು ಸುದೀರ್ಘವಾದ ಈ ಕಥಾನಕವನ್ನು ನೀಡಿರುವುದು ಅನುವಾದಕರಲ್ಲಿನ ಮಕ್ಕಳ ಪ್ರೀತಿಗೆ ಮತ್ತೊಂದು ಉದಾಹರಣೆಯೇ ಆಗಿದೆ. "ರಾಘವರು ಮಕ್ಕಳಿಗೆ ಬರೆದದ್ದು ಕೆಲವೇ ಕೃತಿಗಳಾದರೂ

# ಅನುಬಂಧ

## ಕೃತಿಗಳ ಮುದ್ರಣ ಹಾಗೂ ಮರುಮುದ್ರಣಗಳು

| | | | |
|---|---|---|---|
| ೧. | ಕವಿಯ ಹೆಂಡತಿ ಮತ್ತು ಶಾಸ್ತಿ | ಎಂ.ವಿ. ಸೀತಾರಾಮಯ್ಯ, ರಾಘವ ಪ್ರಕಾಶನ | ೧೯೪೮ |
| | ಮರು ಮುದ್ರಣ | ರಾಘವ ಪ್ರಕಾಶನ | ೧೯೫೫ |
| ೨. | ಸ್ವಯಂವರ (ಪ್ರಹಸನ) | ರಾಘವ ಪ್ರಕಾಶನ | ೧೯೫೩ |
| ೩. | ತೊಟ್ಟಿಲು ತೂಗದ ಕೈ (ಮೂರಂಕದ ಸಾಮಾಜಿಕ ನಾಟಕ) | ಶಾರದಾ ಪ್ರಕಟನಾಲಯ | ೧೯೫೯ |
| ೪. | ತಿರುಕಿಯ ಕನಸು | ಎಂ.ವಿ.ಸೀ ಶತಮಾನೋತ್ಸವ ಸಮಿತಿ ಬೆಂಗಳೂರು | ೨೦೧೦ |

**ಮಕ್ಕಳ ಸಾಹಿತ್ಯ**

| | | | |
|---|---|---|---|
| ೫. | ಕೈಕೋಲು (ನಾಟಕ) | ಕಾವ್ಯಾಲಯ, ಮೈಸೂರು | ೧೯೭೯ |
| ೬. | ಕುಮಾರ ಗೌತಮ (ಮಕ್ಕಳ ನಾಟಕ) | ಹಂಸಧ್ವನಿ ಪ್ರಕಾಶನ ಜಯ ನಿವಾಸ, ಬೆಂಗಳೂರು | ೧೯೭೮ |
| | ಮರು ಮುದ್ರಣ | ಜಯ ನಿವಾಸ | ೧೯೭೯ |
| ೭. | ಕರುಣೆಯ ಕುಡಿ | ರಾಘವ ಪ್ರಕಾಶನ, ಬೆಂಗಳೂರು | ೧೯೮೧ |
| ೮. | ಹೂವಾಡಿಗಿತ್ತಿ | ಮೊದಲ ಮುದ್ರಣ ಕಾವ್ಯಾಲಯ, ಮೈಸೂರು | ೧೯೪೬ |
| | ಎರಡನೆಯ ಮುದ್ರಣ (೧೧ ಹೊಸ ಕವನಗಳನ್ನು ಸೇರಿಸಿ) | | ೧೯೫೮ |
| | ಮೂರನೆಯ ಮುದ್ರಣ | | ೧೯೬೮ |
| ೯. | ಹಾವಾಡಿಗ | ಕಾವ್ಯಾಲಯ, ಮೈಸೂರು | ೧೯೫೮ |
| | ಎರಡನೆಯ ಮುದ್ರಣ | ಕಾವ್ಯಾಲಯ, ಮೈಸೂರು | ೧೯೬೮ |
| ೧೦. | ಕೋಡಂಗಿ (ಮಕ್ಕಳಿಗಾಗಿ ೧೭ಪದ್ಯಗಳು) | ಕಾವ್ಯಾಲಯ, ಮೈಸೂರು | ೧೯೭೯ |
| ೧೧. | ದಾದಿ ರನ್ನೆ (ಮಕ್ಕಳ ಪದ್ಯ ಕಥೆ) | ಹಂಸಧ್ವನಿ ಪ್ರಕಾಶನ ಜಯ ನಿವಾಸ, ಬೆಂಗಳೂರು | ೧೯೭೮ |
| | ಮರು ಮುದ್ರಣ | | ೧೯೭೯ |

**ಮಕ್ಕಳಿಗಾಗಿ ಗದ್ಯ**

| | | | |
|---|---|---|---|
| ೧೨. | ಕನ್ನಡದ ಕತೆ | ಕನ್ನಡ ಸಾಹಿತ್ಯ ಪರಿಷತ್ತು, ಬೆಂ. | ೧೯೭೯ |
| ೧೩. | ಈ ಕರುನಾಡಿದು ನನ್ನ ಮನೆ | ರಾಘವ ಪ್ರಕಾಶನ, ಬೆಂಗಳೂರು | ೧೯೮೨ |

# ಎಂ.ವಿ.ಸೀ ಅವರ ಜೀವನಪಥ

| | |
|---|---|
| ೧೯೧೦ | ಜನನ ಸೆಪ್ಟೆಂಬರ್ ೯, ೧೯೧೦. (ತಂದೆ ವೆಂಕಟದಾಸಪ್ಪ, ತಾಯಿ ಸಾವಿತ್ರಮ್ಮ) |
| ೧೯೧೦–೨೬ | ಪ್ರಾಥಮಿಕ, ಪ್ರೌಢ ಹಾಗೂ ಕಾಲೇಜು ಶಿಕ್ಷಣ ಮೈಸೂರಿನಲ್ಲಿ. |
| ೧೯೨೦ | ಮೃದಂಗ ಅಭ್ಯಾಸ ಪ್ರಾರಂಭ. ಎಲ್. ರಾಜಾರಾಯರೊಂದಿಗೆ ಮುಂದಿನ ಅಭ್ಯಾಸ. |
| ೧೯೨೧ | ಚಾಮರಾಜ ಚಿತ್ರಕಲಾ ಶಾಲೆಯಲ್ಲಿ ಚಿತ್ರಕಲಾಭ್ಯಾಸ. |
| ೧೯೨೨–೨೩ | ದಸರಾ ವಸ್ತುಪ್ರದರ್ಶನ (ಮೈಸೂರು) ಹಾಗೂ ಕಾಂಗ್ರೆಸ್ ವಸ್ತುಪ್ರದರ್ಶನ (ಮದರಾಸು) – ಚಿತ್ರಗಳಿಗೆ ಪ್ರಶಸ್ತಿ. |
| ೧೯೨೮ | ಸೌ॥ ಸಾವಿತ್ರಮ್ಮ ಅವರೊಂದಿಗೆ ವಿವಾಹ. |
| ೧೯೩೧ | ಬಿ.ಎ. ಪದವಿ (ಕನ್ನಡ, ಇಂಗ್ಲಿಷ್, ಚರಿತ್ರೆ) |
| ೧೯೩೨ | ಚಿತ್ರಕಲಾಭ್ಯಾಸಕ್ಕೆ ಕೆ. ವೆಂಕಟಪ್ಪನವರಲ್ಲಿ ಶಿಷ್ಯತ್ವ. |
| ೧೯೩೩ | ಎಂ.ಎ. ಪದವಿ (ಕನ್ನಡ), ಶ್ರೀ ಚಿನ್ನದ ಪದಕದೊಂದಿಗೆ |
| ೧೯೩೪–೩೯ | ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕಾರ್ಯದರ್ಶಿ |
| ೧೯೩೯–೪೬ | ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ಕೋಶದ ಸಹ ಸಂಪಾದಕ |
| ೧೯೪೬ | ಬೆಂಗಳೂರಿನ ಸರ್ಕಾರಿ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ. |
| ೧೯೫೧ | ಸ್ವಂತ ಪ್ರಕಟನೆಗಳಿಗಾಗಿ 'ರಾಘವ ಪ್ರಕಾಶನ' ಪ್ರಾರಂಭ. |
| ೧೯೫೯ | ಕಾಲೇಜಿನಲ್ಲಿ ಜಿ.ಪಿ. ರಾಜರತ್ನಂರಿಂದ ಆರಂಭಗೊಂಡಿದ್ದ ಕರ್ಣಾಟಕ ಸಂಘದ ಪುನರಾರಂಭ. |
| ೧೯೬೧ | ಆಕಾಶವಾಣಿಯ ರಾಷ್ಟ್ರೀಯ ಕವಿಸಮ್ಮೇಳನದಲ್ಲಿ ಭಾಗವಹಿಸಿದ್ದು. |
| ೧೯೬೩ | ಕನ್ನಡ ರೀಡರ್ ಆಗಿ ಬಡ್ತಿ. |
| ೧೯೬೪ | ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಮಕ್ಕಳ ಸಾಹಿತ್ಯದ ವಿಚಾರಗೋಷ್ಠಿಯಲ್ಲಿ ಭಾಗವಹಿಸಿದ್ದು. |
| ೧೯೬೫ | ಅಣ್ಣಾಮಲೈ ಹಾಗೂ ಮೈಸೂರು ವಿಶ್ವವಿದ್ಯಾನಿಲಯಗಳ ಆಶ್ರಯದಲ್ಲಿ ಭಾಷಾವಿಜ್ಞಾನ ಗೋಷ್ಠಿಯಲ್ಲಿ ಭಾಗವಹಿಸಿದ್ದು. |
| ೧೯೬೭ | ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವದ ಲೇಖಕರ ಸಮ್ಮೇಳನದಲ್ಲಿ ಭಾಗವಹಿಸುವಿಕೆ. |

೧೪. ರನ್ನ	ರಾಷ್ಟ್ರೋತ್ಥಾನ ಸಾಹಿತ್ಯ
ಭಾರತ ಭಾರತಿ ಪುಸ್ತಕ ಸಂಪದ
ಹಲವು ಮುದ್ರಣಗಳನ್ನು ಕಂಡಿದೆ. ಬೆಂಗಳೂರು–೧೯ ೧೯೭೬
೧೫. ವೈಣಿಕ ವಿದ್ವಾನ್ ಎಲ್. ರಾಜಾರಾವ್ ಐಬಿಎಚ್ ಪ್ರಕಾಶನ, ಬೆಂ. ೧೯೮೩
೧೬. ಯುಧಿಷ್ಠಿರ ಭಾರತಿ ಭಾರತಿ ಪುಸ್ತಕ ಸಂಪದ
ರಾಷ್ಟ್ರೋತ್ಥಾನ ಪರಿಷತ್ತು ೧೯೭೬
(ಹಲವು ಮುದ್ರಣಗಳನ್ನು ಕಂಡಿದೆ)
೧೭. ರಾಬಿಸೊನ್ ಕ್ರೂಸ್ಸ ಎಸ್.ಎಸ್.ಎನ್. ಬುಕ್ ಡಿಪೊ ೧೯೪೮

**ಅಲಭ್ಯ ನಾಟಕಗಳು :**

೧. ಹೂವಿನ ಆಸೆ
೨. ತೆರೆಮರೆಯ ಚಿತ್ರಗಳು

# ಪರಿವಿಡಿ

೨೪–೩–೧೯೬೭ ಅಧ್ಯಾಪಕ ವೃತ್ತಿಯಿಂದ ನಿವೃತ್ತಿ, ರಾಘವ ಸನ್ಮಾನ ಸಮಿತಿಯಿಂದ ಸನ್ಮಾನ

೧೯೬೭ ಶ್ರೀ ನಿಡುಮಾಮಿಡಿ ಶ್ರೀಗಳವರಾದ ಡಾ. ಜ.ಚ.ನಿ. ಅವರಿಂದ 'ವಿಚಾರ ರತ್ನಾಕರ' ಪ್ರಶಸ್ತಿ.

೧೯೬೮–೭೩ ಯು.ಜಿ.ಸಿ. ಪ್ರಾಧ್ಯಾಪಕರಾಗಿ ಬೆಂ.ವಿ.ವಿ.ಯಲ್ಲಿ ಸೇವೆ.

೧೯೭೯ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸ್ಥಾಪನೆ

೧೯೮೦ ರಾಜ್ಯ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ.

೧೯೮೨ ಗೋಕಾಕ್ ಚಳುವಳಿಯಲ್ಲಿ ಸಕ್ರಿಯ ಹೋರಾಟ, ಸಾಹಿತಿ ಕಲಾವಿದರ ಬಳಗಕ್ಕೆ 'ಕನ್ನಡಮ್ಮನ ಕೊರಗು' ಪುಸ್ತಕ ದಾನ.

೧೯೮೩ ಉದಯಭಾನು ಕಲಾ ಸಂಘದಿಂದ 'ಆಸ್ವಾದ' ಅಭಿನಂದನ ಗ್ರಂಥ ಸಮರ್ಪಣೆ

೧೯೮೫ ರಾಜ್ಯ ಪ್ರಶಸ್ತಿ ಗೌರವ

೧೯೮೯ ಸರ್ವಧರ್ಮ ಸಮ್ಮೇಳನ ಸಾಹಿತ್ಯ ಗೌರವ, ಧರ್ಮಸ್ಥಳ

೯–೯–೧೯೮೯ ಎಂ.ವಿ.ಸೀ ೮೦ ಸನ್ಮಾನ ಸಮಿತಿಯಿಂದ ಸನ್ಮಾನ ಮತ್ತು ಪುಸ್ತಕ ಸಮರ್ಪಣೆ.

೧೨–೩–೧೯೯೦ ನಿಧನ, ಬೆಂಗಳೂರಿನಲ್ಲಿ.

೯–೯–೧೯೯೦ 'ಕದಂಬ' ಎಂ.ವಿ.ಸೀ. ಸಂಸ್ಮರಣ ಸಂಪುಟ, 'ಕಲಾರಾಘವ' ಸಂಸ್ಮರಣ ಸಂಚಿಕೆ ಬಿಡುಗಡೆ.

ಪ್ರೊ. ಎಂ.ವಿ. ಸೀತಾರಾಮಯ್ಯ ಸಮಗ್ರ ಸಾಹಿತ್ಯ

# ಮಕ್ಕಳ ಸಾಹಿತ್ಯ ಮತ್ತು ನಾಟಕಗಳು

# ಕವಿಯ ಹೆಂಡತಿ

[ಕವಿಯ ಕೋಣೆ : ಪ್ರೇಕ್ಷಕರ ಎಡಬದಿಗೆ ಹೊರಗಡೆಯಿಂದ ಬರುವ ಬಾಗಿಲು ; ಎದುರಿನಲ್ಲಿ ಮತ್ತೊಂದು ಬಾಗಿಲು – ಹಜಾರ, ಮಲಗುವ ಮನೆ, ನಡುವೆ, ಎಲ್ಲ ಒಂದೇ ಆಗಿರುವ ವಿಭಾಗಕ್ಕೆ ಹೋಗುವದು.

ಗೋಡೆಯಮೇಲೆ ಕೆಲವು ಕವಿಗಳ ಸಣ್ಣ ಸಣ್ಣ ಚಿತ್ರಗಳು ಇವೆ. ದೂರಕ್ಕೆ ಸ್ವಲ್ಪಮಟ್ಟಿಗೆ ಗುರುತು ಹಿಡಿಯಬಹುದಾದ ಚಿತ್ರವೆಂದರೆ ರವೀಂದ್ರನಾಥ ಟಾಗೂರರದು. ಇಷ್ಟು ಬಿಟ್ಟರೆ, ಇನ್ನು ಯಾವ ರೀತಿಯಿಂದಲೂ ಇದನ್ನು ಕವಿಯ ಕೋಣೆ ಎಂದು ಊಹಿಸಲಾಗುವುದಿಲ್ಲ.

ಎದುರು ಬಾಗಿಲಿನ ಒಂದು ಪಕ್ಕದಲ್ಲಿ, ಒಂದು ಸ್ಟೂಲಿನಮೇಲೆ ಹಾಸಿಗೆ ಸುರುಳಿ ಇಟ್ಟಿದೆ; ಇನ್ನೊಂದು ಪಕ್ಕದಲ್ಲಿ ಮತ್ತೊಂದು ಸ್ಟೂಲಿನಮೇಲೆ ಒಂದು 'ಬುಕ್ ಷೆಲ್ಫ್'–ಅದರ ತುಂಬ ಪುಸ್ತಕಗಳು.

ಮೇಜಿನಮೇಲೆ ಕಾಗದದ ಹರದ ; ಒಂದೆರಡು ನೋಟ್‌ಪುಸ್ತಕಗಳು ; ಕಿಟೆಲ್ ಡಿಕ್ಷನರಿ ; ಒಂದು ಕನ್ನಡ ವೃತ್ತಪತ್ರಿಕೆ. ಮೇಜಿನ ಕೆಳಗೆ, ಒಂದು ಕಸದ ಬುಟ್ಟಿ ; ಅದರ ತುಂಬ ತುರುಕಿದೆ ಕಾಗದದ ಹಾಳೆಗಳು.

ತೆರೆ ಎದ್ದಾಗ ಕವಿ ಪದ್ಯ ಹೆಣೆಯುತ್ತ ಕುಳಿತಿರುವನು ; ಬರೆಯಲು ತುಂಬ ಪ್ರಯಾಸಪಡುತ್ತಿರುವನು ; ಬಾರಿ ಬಾರಿಗೆ ಕಿಟೆಲ್ ನಿಘಂಟು ತಿರುವಿಹಾಕುತ್ತಿರುವನು.]

ಕವಿ : (ಬರೆದ ಮೊದಲ ಸಾಲನ್ನು ಓದುತ್ತಾ) "ಗುಲಾಬಿಯಿದು ಹೂಗಳ ರಾಣಿ" (ಇದೇ ಸಾಲನ್ನು ಮತ್ತೆಮತ್ತೆ ಓದಿ, 'ರಾಣಿ' ಪದವನ್ನು ಎಂಟು ಹತ್ತು ಸಲ ಜಪಿಸಿ) ಎಷ್ಟು ಸೊಗಸಾಗಿ ಮೊದಲಾಗಿದೆ ಪದ್ಯ! ಮುಂದುವರಿಸೋಣ ಅಂದರೆ 'ರಾಣಿ'ಗೆ ಪ್ರಾಸವೇ ಸಿಕ್ಕೋದಿಲ್ಲವೆ! 'ರಾಣಿ, ರಾಣಿ' ; 'ವಾಣಿ'. ವಾಣಿ ಯಾಕೆ ಹಾಕಬಾರದು? ಹೂವಿನಲ್ಲಿ ವಾಣಿಯೆ? ಉ–ಹುಂ. ರಾಣಿ, ಏಣಿ, ಓಣೀ, ಕಾಣಿ, ಮಾಣಿ. ಉ–ಹುಂ. ಯಾವುದೂ ಸರಿಹೋಗುವುದಿಲ್ಲ. ಹಾಳಾದ್ದು ಸಿಕ್ಕುವುದೇ ಇಲ್ಲವೆ ಸರಿಯಾದ ಪ್ರಾಸ? ಅಲ್ಲ, ಯಾಕೀ ತ್ರಾಸ? ಇದುವರೆಗೆ ಬರೆದಿರುವ ಹಾಗೆ ಇನ್ನು ಮುಂದೂ ಪ್ರಾಸ ಇಲ್ಲದೆಯೇ Free verse ಬರೆದೂ ಬರೆದೂ ಬರೆದು, 'ಕನ್ನಡ ಸ್ವಚ್ಛಂದ ಪದ್ಯ ಪಿತಾಮಹ' ಅನ್ನುವ ಬಿರುದಾದರೂ ಯಾಕೆ ಸಂಪಾದಿಸಬಾರದು? Idea, idea;

ಕನ್ನಡ ಸಾಹಿತ್ಯ ಪರಿಷತ್ತಿನ ನಾಟಕ ಶಾಖೆಯ ಆಶ್ರಯದಲ್ಲಿ, ೧೯೪೪ನೆಯ ಇಸವಿ ಅಕ್ಟೋಬರ್ ೧೧ ಮತ್ತು ೧೭ನೆಯ ತಾರೀಖುಗಳಲ್ಲಿ ಬೆಂಗಳೂರಿನಲ್ಲೂ ೧೪ ಮತ್ತು ೧೫ನೆಯ ತಾರೀಖುಗಳಲ್ಲಿ ಗೋರಿಬಿದನೂರು ಮತ್ತು ಇಡಗೂರುಗಳಲ್ಲಿಯೂ ಅಭಿನಯಿಸಿದಾಗ ಪಾತ್ರ ವಹಿಸಿದ್ದವರು :

ಕವಿ : ಶ್ರೀ ಸಿ. ಆರ್. ಸುಂದರರಾಯರು
ಕವಿಯ ಹೆಂಡತಿ : ಶ್ರೀ ಎಂ.ವಿ. ಸೀತಾರಾಮಯ್ಯ
ಕಂಟ್ರಾಕ್ಟರ್ ಕೆಂಪಣ್ಣ : ಶ್ರೀ ಎಲ್. ರಾಜಾರಾಯರು
ಶ್ರೀ ಸಿ. ಕೆ. ನಾಗರಾಜರಾಯರು
ಅಂಚೆಯವನು : ಶ್ರೀ ಎಸ್. ಎಲ್. ಶಾಸ್ತ್ರಿಗಳು

ರೇಡಿಯೋ ಪ್ರಸಾರ : ಮೈಸೂರು ಆಕಾಶವಾಣಿಯಲ್ಲಿ :
ತಾ॥ ೯–೧೨–೧೯೪೪ : ಮೊದಲಸಲ.

ಕ.ಹೆಂ. (ಒಂದು ಸೀನು ಸೀನುವಳು)

ಕವಿ : ಇದೇನೆ ಅಪಶಕುನ? ! ಇನ್ನೊಂದು ಸೀನು ಸೀನೇ.

ಕ.ಹೆ. : ಅದೇನೊ ನೋಬೆಲ್ ಪ್ರೈಸು ಅಂದರಲ್ಲ, ಅದಾದರೂ ಬಂದೀತು. ನಿಮ್ಮಂಥ ಕವಿಗಳನ್ನ ಸತಾಯಿಸಿ ಸತಾಯಿಸಿ ಸ್ಫೂರ್ತಿಯಾದರೂ ಉಕ್ಕೀತು ಕೊನೆಗೆ. ಆದರೆ ಸುಮ್ಮಸುಮ್ಮನೆ ಹಾಗೆಲ್ಲ ಸೀನು ಬರುವುದಿಲ್ಲ ನೋಡಿ. ಅದಿರಲಿ, ಎಲ್ಲಿ ನಿಮ್ಮ ಕವಿತೆ ಓದಿ, ನೋಡೋಣ ಹೇಗಿದೆ?

ಕವಿ : ಓದಿದರೆ, ಓದಿದಮೇಲೆ, ಏನಾದರೂ ಕಾಫಿ ಗೀಫಿ ಕೊಡುವಹಾಗಿದ್ದರೆ ಓದುತೀನಿ. ಇಲ್ಲದೆ ಹೋದರೆ ಉಹುಂ.

ಕ.ಹೆಂ. : ಸರಿ. ಇರುವುದು ಒಂದು ಒಳಲೆ ಮಗುವಿನ ಹಾಲು. ಅದನ್ನೂ ಕಾಫಿಗೆ ಉಪಯೋಗಿಸಿಕೊಂಡುಬಿಟ್ಟರೆ ಮಗುವಿಗೆ ಏನು ಹಾಕಲಿ ಆಮೇಲೆ? ನಾನು ಹಾಲಿನ ಸಾಲ ಕೇಳುವುದಕ್ಕೆ ಖಂಡಿತ ಹೋಗುವುದಿಲ್ಲ.

ಕವಿ : ಏನೇ ಇದು ! ಇದು ಏನೂ ಅಂತೀನಿ?! ವಿದ್ಯಾವಂತೆ ಅಂತ ಅನ್ನಿಸಿಕೊಂಡು, ಅದಕ್ಕಿಂತ ಹೆಚ್ಚಾಗಿ ಕವಿಯ ಹೆಂಡತಿ ಅಂಬೋ ಅತ್ಯುನ್ನತ ಪದವಿಯಲ್ಲಿದ್ದುಕೊಂಡು, ಮಗುವಿಗೆ ಕೊಂಡ ಹಾಲು ಕುಡಿಸುತ್ತೀಯ? ಅದು ಹೆಸರಿಗೆ ಹಸುವಿನ ಹಾಲು; ನೀರು ಬೆರಸಿದ ಬರಿಯ ಎಮ್ಮೆ ಹಾಲು, ಅಷ್ಟೆ. ಅದನ್ನ ಮಗುವಿಗೆ ಕುಡಿಸಿಕುಡಿಸಿ ಅದಕ್ಕೆ ಎಮ್ಮೆ ಬುದ್ಧಿ ಬಂದುಬಿಟ್ಟರೆ ಏನು ಮಾಡುವುದೆ? ಮೊದಲು ಹುಯ್‌ಹಾಲು ತಪ್ಪಿಸು; ಆಮೇಲೆ ನೋಡು, ನಿನ್ನ ಮಗ–ಕವಿಯ ಹೆಂಡತಿಯಾದ, ಕವಯಿತ್ರಿಯಾಗಲುಳ್ಳ ನಿನ್ನ ಮಗ–ಕವಿ ಕುಮಾರನಾಗುತ್ತಾನೆ ; ಆಗುತ್ತಾನೆ ಯಾಕೆ, ಆಗೇ ಇದಾನೆ. ಮುಂದೆ ಕವಿಶೇಖರನಾಗುತ್ತಾನೆ.

ಕ.ಹೆಂ. : ನಿಮ್ಮ ವಂಶದಲ್ಲಿ ನಿಮ್ಮ ತಲೆಗೇ ಸಾಕು ಈ ಕವಿತೆಯ ಹುಚ್ಚು.

ಕವಿ : ನೋಡು, ಯಾರು ಏನು ಮಾಡಿದರೂ ತಪ್ಪಿಸುವುದಕ್ಕಾಗುವುದಿಲ್ಲ ಹಣೆಯ ಬರಹವನ್ನ. ಅವನು ಕವಿಯೇ ಆಗಬೇಕೂ ಅಂತ ಅವನ ಹಣೆಯಲ್ಲಿ ಬರೆದಿದ್ದರೆ, ಅವನು ಕವಿಯೇ ಆಗುತಾನೆ–

ಕ.ಹೆಂ. : ಹೌದು, ಹೌದು : ಕವಿಯೇ ಆಗುತಾನೆ ; ಕವಿತೆ ಬರೆದೇ ಬರೆಯುತಾನೆ; ಪುಸ್ತಕ ಅಚ್ಚು ಹಾಕೇ ಹಾಕುತಾನೆ; ಸಾಲ ಮಾಡೇ ಮಾಡುತಾನೆ; 'ಹುಚ್ಚ' ಅನ್ನಿಸಿಕೊಂಡೇ ಅನ್ನಿಸಿಕೊಳ್ಳುತಾನೆ.

this is really inspiration!- ಹೂವು ಬಾಡುವುದರೊಳಗೆ ಬರೆದೇಬಿಡಬೇಕು ಪದ್ಯವನ್ನ.

ಕವಿಯ ಹೆಂಡತಿ: (ಕ್ಷಣ ಮುಂಚೆಯೇ ಬಂದು ಹಿಂದೆ ನಿಂತಿದ್ದವಳು, ತಟ್ಟನೆ ಮುಂದೆ ಬಂದು) Inspirationನ್ನು! ನಿಮ್ಮ ತಲೆ! ಬರೀ Perspirationನ್ನು!

ಕವಿ : ಭೇಷ್, ಭೇಷ್ ! ನೀನೆ ನನಗಿಂತ ವಾಸಿ ಕಣೇ ಒಂದು ಪ್ರಾಸ ಜೋಡಿಸೇಬಿಟ್ಟೆ ; ಅದೂನು ಇಂಗ್ಲೀಷಿನಲ್ಲಿ ! ಎಷ್ಟೇ ಆಗಲಿ ಅಮಲ್ದಾರರ ಮಗಳೂ, ಕವಿಯ ಹೆಂಡತಿ !

ಕ.ಹೆಂ. : ಸಾಕು, ಸಾಕು! ಅದಿರಲಿ. ಈ ಬಿರುದು ಸಂಪಾದಿಸುವ ಯೋಚನೆ ಬಿಟ್ಟು ಹಣ ಸಂಪಾದಿಸುವ ಯೋಚನೆ ಮಾಡಿ. ಅಲ್ಲ, ನಿನ್ನೆ ನನ್ನ ಕೈಲಿ ನಾಲ್ಕಾಣೆ ಕಿತ್ತುಕೊಂಡು ಕವಿತೆ ಬರೆಯುವುದಕ್ಕೆ ಅಂತ ಕಾಗದ ಕೊಂಡು ಕೊಂಡಿರಲ್ಲ, ಇದೇನು ಮೇಜಿನಮೇಲೆ ಕಾಗದದ ಹರದ? ಕವಿತೆ ಬರೆದ ಮಾತ್ರಕ್ಕೆ ಇಷ್ಟು ಕಾಗದ ಹಾಳುಮಾಡುವುದೇ ಅಂದ್ರೆ? ಅದೂ ಈಗಿನ ಕಾಲದಲ್ಲಿ! ಕಾಗದ ಚಿನ್ನಕ್ಕಿಂತ ಬೆಲೆಯಾಗಿರುವಾಗ! ಅಷ್ಟೊಂದು ಬರೆದೂ ಬರೆದೂ ಬರೆಯುತ್ತೀರಲ್ಲ, ಆ ಕಾಗದಕ್ಕೆಲ್ಲ ಕೊನೆಗೆ ಗತಿ–ಆ ಕಸದ ಬುಟ್ಟಿ. ನಿಮ್ಮ ಕವಿತೆಗೆ ಕಾಗದದ ಬೆಲೆಯೂ ಹುಟ್ಟದೆ ಹೋದರೆ ಆ ಕವಿತೆ ಯಾಕೆ ಅಂದ್ರೆ? ಯಾವ ಪತ್ರಿಕೆಯವರೂ ನಿಮ್ಮ ಕವಿತೆಯನ್ನ ಅಚ್ಚು ಮಾಡುವುದಿಲ್ಲ.

ಕವಿ : (ಕುರ್ಚಿ ಬಿಟ್ಟೆದ್ದು, ಒಂದು ಪತ್ರಿಕೆ ಕೈಗೆ ತೆಗೆದುಕೊಂಡು) ಇದೇನೇ ಹೀಗಂತೀ? ನೋಡಿಲ್ಲಿ; ನೋಡೇ ಇಲ್ಲಿ. ಇದು ಯಾವುದು ಗೊತ್ತೋ? 'ಸಕಲ ಕರ್ಣಾಟಕ', ಉಜ್ವಲ ರಾಷ್ಟ್ರೀಯ ದಿನಪತ್ರಿಕೆ, ಚಂದಾ ತಿಂಗಳಿಗೆ ಒಂದೂವರೆ ರೂಪಾಯಿ; 'ನಿಖಿಲ ಕರ್ಣಾಟಕ'ಕ್ಕೆ ಒಂದೇ ರೂಪಾಯಿ; ಅಂಥ ಪತ್ರಿಕೆಯಲ್ಲಿ ಅಚ್ಚು ಹಾಕಿದ್ದಾರೆ ನನ್ನ ಪದ್ಯವನ್ನ. ಇಷ್ಟು ದಿನ ಕಾದದ್ದಕ್ಕೆ ನನ್ನ ಮೊದಲ ಕವನ ಪ್ರಸಿದ್ಧ ದಿನಪತ್ರಿಕೆಯಲ್ಲೇ ಅಚ್ಚಾಗಿದೆ; ಸಾವಿರಾರು ಜನ ಓದುತಾರೆ. ಹೀಗೆ ಹತ್ತು ಕವನ ಅಚ್ಚಾಗಲಿ ನೋಡು, ಆಮೇಲೆ ನನ್ನ ಪದ್ಯದ ಪುಸ್ತಕವನ್ನ ಅಚ್ಚು ಹಾಕಿಸುತ್ತೇನೆ. ಅದನ್ನ ಇಂಗ್ಲೀಷಿಗೂ ಭಾಷಾಂತರ ಮಾಡಿಸುತ್ತೇನೆ. ಮಾಡಿಸುವುದೇನು, ನಾನೇ ಖುದ್ದಾಗಿ ಮಾಡುತ್ತೇನೆ. ಏನೋ ಅದೃಷ್ಟ ಇದ್ದರೆ ಬಂದರೂ ಬಂತೆ ನೋಬೆಲ್‌ಪ್ರೈಸು.

ಅದು ಭ್ರಾಂತಿ ! ಬಿಟ್ಟು ಬಿಡು ಅದನ್ನ. ಒಂದು ದೃಷ್ಟಾಂತ ಹೇಳುತ್ತೇನೆ ಕೇಳು : ಅರಮನೆಯ ಪಟ್ಟದ ಕುದುರೆಯಾದರೂ ಕುದುರೆಯೇ ; ಯುದ್ಧಕ್ಕೆ ಹೋದರೂ ಕುದುರೆಯೇ; ಜೂಜೋಡಿದರೂ ಕುದುರೆಯೇ–

ಕ.ಹೆಂ. : ಜಟಕ ಎಳೆದರೂ ಕುದುರೆಯೇ

ಕವಿ : ಅದೇ ನಾನು ಹೇಳುವುದು : ಕುದುರೆಯ ಸ್ವಭಾವ ಇದ್ದೇ ಇರುತ್ತೆ. ನೀನು ನನ್ನನ್ನ ಜಟಕ ಎಳೀ ಅನ್ನುತ್ತಿ ; ನಾನು ಪಟ್ಟದ ಕುದುರೆ ಆಗುತ್ತೇನೆ ಅನ್ನುತೀನಿ. ಎಂತಿದ್ದರೂ ನಾನು ಕವಿ : ಸಾಕ್ಷಾತ್ ಅಗ್ನಿಸಾಕ್ಷಿಯಾಗಿ ನನ್ನ ಕೈಹಿಡಿದ ಹೆಂಡತಿ ನೀನು; ಎಂದಮೇಲೆ, ನೀನು ಕವಿಯ ಹೆಂಡತಿಯಾಗಿರದೆ ಹೇಗೆ ಸಾಧ್ಯ ? ಕವಿಯ ಹೆಂಡತಿ ಹೇಗಿರಬೇಕು ಗೊತ್ತೆ ?

ಕ.ಹೆಂ. : (ಸ್ವಲ್ಪ ಹೊತ್ತು ಮೌನ)

ಕವಿ : ಹೀಗೆ ಮೌನವಾಗಿದ್ದರೆ ಪ್ರಯೋಜನವಿಲ್ಲ. ನಿನಗೆ ಗೊತ್ತಿಲ್ಲ ಅಂತ ಕಾಣುತ್ತೆ. ನಾನು ಹೇಳುತ್ತೇನೆ ಕೇಳು : ಕವಿಯ ಹೆಂಡತಿ ಹೇಗಿರಬೇಕು ಅನ್ನುವುದನ್ನ ಹೇಳುತೇನೆ ಕೇಳು : ಅದರಲ್ಲಿ–ಕವಿತೆ ಬರೆಯುವುದಕ್ಕೆ ಮೊದಲು, ಬರೆಯುವಾಗ, ಬರೆದಮೇಲೆ ಅಂತ ಮೂರು ಹಂತಗಳಿವೆ; – ಕವಿತೆ ಬರೆಯುವುದಕ್ಕೆ ಮೊದಲು, ಕವಿಯಾದವನು ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸುತ್ತಿರುತ್ತಾನೆ. ಅಲ್ಲಿ ವಿಹರಿಸುತ್ತ, ಸ್ಫೂರ್ತಿದೇವಿಗಾಗಿ, ಕಾವ್ಯ ರಮಣಿಗಾಗಿ, ಕಾಯುತ್ತಿರುತ್ತಾನೆ. ಕವಿಯ ಹೆಂಡತಿ ಆಗ ಕರುಬಬಾರದು, ಕಾವ್ಯರಮಣಿಯೊಡನೆ ಅವನ ಸಮಾಗಮಕ್ಕೆ ಕಲ್ಲು ಹಾಕಬಾರದು. ಅದರ ಬದಲು, ಸ್ಫೂರ್ತಿದೇವಿ ಅರ್ಥಾತ್ ಕಾವ್ಯರಮಣಿ, ಕವಿಗೆ ಒಲಿದು ಬರಲು ಅವನಿಗೆ ಸಹಾಯಕಳಾಗಬೇಕು. ಹೇಗೆ ಅಂದರೆ, ಕಂಠವಿದ್ದರೆ–ನಿನಗೆ ಹೇಗೂ ಭೇಷಾದ ಕಂಠವಿದೆ – ರಾಗಾಲಾಪನೆ ಮಾಡಬೇಕು. ಕವಿ ಯಾವ ಬಗೆಯ ಭಾವಸಮಾಧಿಯಲ್ಲಿ ಇರುತ್ತಾನೆಯೊ –

ಕ.ಹೆಂ. : ಇದೇನೂ ಅಂದರೆ, ಹೀಗಂತೀರಿ! ಕವಿತೆ ಬರೆಯುವುದಕ್ಕೆ ಮುಂಚೆ ಎಲ್ಲಿ ಸಮಾಧಿಯಾಗುವುದು, ಬರೆದ ಮೇಲೆ ತಾನೆ ?

ಕವಿ : ಸಮಾಧಿ ಆಗುವುದಲ್ಲ ಕಾಣೇ ; ಸಮಾಧಿಯಲ್ಲಿ – ಭಾ–ವ–ಸ–ಮಾ–ಧಿ–ಯ–ಲ್ಲಿ––ಇರುವುದು. ನೋಡಿ ದೆಯಾ, ನಾನು ಹೇಳುತ

ಕವಿ : ಹಾಗಾದರೆ ನಾನು ಹುಚ್ಚ ಅನ್ನು ?

ಕ.ಹೆಂ. : ನೀವಿನ್ನೂ ಪುಸ್ತಕ ಅಚ್ಚು ಹಾಕಿಲ್ಲವಲ್ಲ ! ಅದಕ್ಕೂ ಪುಣ್ಯ ಬೇಕು. ನಿಮ್ಮಂಥ ಕವಿಗಳಿಗೆ ಸಾಲವೂ ಹುಟ್ಟುವುದಿಲ್ಲ. ಮಗುವಿನ ವರ್ಷದ ಹೆಚ್ಚು ಮಾಡೋಣ ಅಂದರೇ ನಿಮಗೆ ಸಾಲ ಹುಟ್ಟಲಿಲ್ಲ. ಅಪ್ಪನಿಗೆ ಕಾಗದ ಬರೆದು ತರಿಸಿಕೊಳ್ಳಿ ಅಂದರೆ ನಿಮಗೆ ಮಾನಕ್ಕೆ ಕಡಮೆ. ಇನ್ನೇನೂ ಬೇಡ, ಆರತಿ ಬೇಡ ಅಕ್ಷತೆ ಬೇಡ, ಹೇಗಾದರೂ ಮಾಡಿ ಮಗುವಿಗೆ ಒಂದು ಸೆಯ್‌ಲರ್ ಸೂಟಾದರೂ ತನ್ನಿ ಅಂದರೆ– ಅದಕ್ಕೂ ಇಲ್ಲ. “ಕವಿಪುತ್ರನ ವರ್ಷದ ಹೆಚ್ಚು” ಅಂತ ಒಂದು ಪದ್ಯ ಬರೆದು ಅದರ ಕೈಲಿ ಕೊಟ್ಟಿರಿ !

ಕವಿ : ನಾನು ಅದರ ಪ್ರತಿ ಒಂದು ಇಟ್ಟುಕೊಳ್ಳುವ ಹೊತ್ತಿಗೆ ಸರಿಹೋಯಿತು. ಅಲ್ಲ, ಈಗಲೂ ನೆನೆಸಿಕೊಂಡರೆ ಏನಾಗುತ್ತೆ ಅಂತ ! ಹೇಳೋದಕ್ಕಾಗುವುದಿಲ್ಲ. ಅಂಥ ಘನವಾದ ಪದ್ಯ ಬರೆದ ಕಾಗದವನ್ನ ಕಸ ಎತ್ತಿಹಾಕುವದಕ್ಕೇ ಉಪಯೋಗಿಸುವುದು ?

ಕ.ಹೆಂ. : ನೀವು ಗೀಚಿ ಬಿಸಾಡಿದ ಕಾಗದವೆಲ್ಲ ಇನ್ನು ಯಾವುದಕ್ಕೆ ಉಪಯೋಗಿಸುವುದಕ್ಕೆ ಆಗುತ್ತೆ ಅಂತ ತಿಳಿದುಕೊಂಡಿದ್ದೀರಿ?

ಕವಿ : (ಸಮಾಧಾನದಿಂದ) ಸದ್ಯ ಬದುಕಿದೆ. ನಾನು ಪೂರ್ತಿ ಮಾಡಿರುವ ಕವಿತೆ ಹಾಳೆಗಳನ್ನ ಆ ಕೆಲಸಕ್ಕೆ ಉಪಯೋಗಿಸುವುದಿಲ್ಲವಲ್ಲ.

ಕ.ಹೆಂ. : (ಮುಖ ಉರುಗಿಸಿಕೊಂಡು) ನಿಮ್ಮ ಕವಿತೆಗಳೆಲ್ಲ ಅಷ್ಟಕ್ಕೇ ಉಪಯೋಗ!

ಕವಿ : ಏನಂದೆ? ಏನಂದೆ ? ಏನಂದೇ ಅಂದೆ! ನೀನು ಕವಿಯ ಹೆಂಡತಿಯಾಗಿರುವುದಕ್ಕೆ ಲಾಯಕ್ಕಲ್ಲ ಕಣೇ.

ಕ.ಹೆಂ. : ಅದಕ್ಕೇ ನಿಮ್ಮ ಕವಿತೆ ಹುಚ್ಚು ಬಿಟ್ಟುಬಿಡಿ ಅಂತ ನಾನು ನಾಲಗೆ ಕಿತ್ತುಕೊಳ್ಳುವುದು. ನಾನು ಬಡ ಗುಮಾಸ್ತೆಯ ಹೆಂಡತಿಯಾಗಿರುವುದಕ್ಕೇ ಲಾಯಕ್ಕು. ಆದ್ದರಿಂದಲೇ ನಾನು ಹೇಳುತ್ತಿರುವುದು : ಒಂದು ಗುಮಾಸ್ತೆ ಕೆಲಸಕ್ಕಾದರೂ ಸೇರಿಕೊಳ್ಳಿ ಅಂತ.

ಕವಿ : ಕೆಲಸ ಮುಖ್ಯವಲ್ಲ ಕಣೇ. ನಾನು ಗುಮಾಸ್ತೆ ಕೆಲಸಕ್ಕೆ ಸೇರಿದರೂ ಕವಿಯಾಗಿರುವುದು ತಪ್ಪುವುದಿಲ್ಲ ; ನೀನು ಕವಿಯ ಹೆಂಡತಿಯಾಗಿರುವುದು ತಪ್ಪುವುದಿಲ್ಲ. ಯಾವುದಾದರೂ ಕೆಲಸಕ್ಕೆ ಸೇರಿದರೂ ಕವಿತೆ ಬರೆಯುವುದು ಬಿಡುತ್ತೇನೆ ಅಂತ ನೀನು ತಿಳಿದಿದ್ದರೆ

ಅದಕ್ಕೆ ಹಾಲು ಸಾಲದು ; ದಿನಕ್ಕೆ ಮೂರು ಪಾವು ಹಾಲು ಕುಡಿಸಿ; ನೀವೂ ಒಂದು ಪಾವು ಕುಡಿಯಿರಿ' ಅನ್ನುತ್ತಾರೆ ಡಾಕ್ಟರು. ನಾನು ಕುಡಿಯುವುದು ಹಾಗಿರಲಿ, ಈಗ ಮಗುವಿಗೆ ತೆಗೆದುಕೊಳ್ಳುತ್ತಿರುವ ಒಂದು ಪಾವಿಗೂ ಖೋತಾ ಹಾಕು ಅನ್ನುತೀರಿ ನೀವು.

ಕವಿ : ಮತ್ತೆ ಹಾಲಿನ ಪ್ರಪಂಚಕ್ಕೆ–ಅರ್ಥಾತ್ mundane (ಮುಂಡೇನ್) worldಗೆ ಬಂದೆಯಲ್ಲ !

ಕ.ಹೆಂ. : ಏನೂ ಅಂದ್ರೆ?! ಬಿಡುತು ಅನ್ನಿ. ಹಾಳು ಆಡಬಾರದ ಮಾತು ಆಡಬೇಡಿ.

ಕವಿ : ಓಹೋ ! ನಿನ್ನ ಇಂಗ್ಲಿಷ್ ಜ್ಞಾನದ ಇತಿಮಿತಿಯ ವಿಚಾರ ಮರೆತು, ನಿನಗೆ ಅರ್ಥವಾಗದ ಪದ ಉಪಯೋಗಿಸಿದ್ದಕ್ಕೆ ಕ್ಷಮಿಸು, ದೇವಿ. ನಾನು ಹೇಳಿದ್ದರ, ಅಥವಾ ಹೇಳಬೇಕು ಅಂತಿದ್ದುದರ ತಾತ್ಪರ್ಯ ಇಷ್ಟೆ : ಕವಿಯ ಹೆಂಡತಿಯಾದ ನೀನು ಕವಿತಾ ಪ್ರಪಂಚದಲ್ಲಿ ವಿಹರಿಸಬೇಕೇ ಹೊರತು ಈ ಕ್ಷುಲ್ಲಕವಾದ, ಕ್ಷಣಿಕವಾದ, ಕ್ಷೋಣಿಯಲ್ಲಿ ಕ್ಷಣಮಾತ್ರವಾದರೂ ಸಿಕ್ಕಿಕೊಂಡು ತೊಳಲುವುದು ಸರಿಯಲ್ಲ. ಹೋಗಲಿ. ನಿನಗೆ ಬೇಡದಿದ್ದರೂ, ಕವಿತಾ ಪ್ರಪಂಚದಲ್ಲಿ ವಿಹರಿಸಲು ಕವಿಗೆ ನೀನು ಸ್ವಾತಂತ್ರ್ಯ ಕೊಡಬೇಕು. ಹಾಲು, ಹೂವು, ತರಕಾರಿ, ತೆಂಗಿನಕಾಯಿ, ಉಪ್ಪು, ಸೊಪ್ಪು, ತಗಣೆ ಕಾಟ, ಸೊಳ್ಳೆಕಾಟ, ಸೀರೆ, ಕುಪ್ಪಸ, ರೇಷನ್ನು, ಮನೆ ಬಾಡಿಗೆ–ಇವುಗಳ ನೆನಪು ಕೊಟ್ಟು ಕವಿಯನ್ನು....

ಕ.ಹೆಂ. : (ಗಾಬರಿಗೊಂಡವಳಂತೆ) ಅಂದ್ರೇ..... ಅಂದ್ರೇ.....!!

ಕವಿ : ಏನೇ ಹೀಗೆ ಗಾಬರಿ ಬೀಳುತಿ?

ಕ.ಹೆಂ. : ನೀವು ಮನೆಯ ಬಾಡಿಗೆ ಅನ್ನುತ್ತಲು ಜ್ಞಾಪಕಬಂತು. ನಿನ್ನೆ ಬಂದಿದ್ದ ಕಂಟ್ರಾಕ್ಟರ್ ಕೆಂಪಣ್ಣ–ಮನೆ ಬಾಡಿಗೆ ಕೇಳುವುದಕ್ಕೆ. ಇವೊತ್ತು ಹನ್ನೊಂದು ಗಂಟೆಗೆ ಸರಿಯಾಗಿ ಬರುತ್ತೇನೆ ಅಂತ ಹೇಳಿದಾನೆ. ಹನ್ನೆರಡು ಗಂಟೆಯ ಮೇಲಾದರೆ ಸಿಕ್ಕುವುದಿಲ್ಲ ಅಂತ ನಾನು ಹೇಳಿದ್ದೆ.

ಕವಿ : ಯಾಕೆ ಸಿಕ್ಕುವುದಿಲ್ಲ ? ಕವಿಯಾದವನು ಸದಾ ಮನೆಯಲ್ಲೇ ಸಿಕ್ಕುತ್ತಾನೆ ಅನ್ನುವುದು ಅವನಿಗೆ ತಿಳಿಯದು ಅಂತ ಕಾಣುತ್ತೆ.

---

* ಸರಿಯಾದ ಉಚ್ಚಾರ : ಮಂಡೇನ್

ಇದ್ದದು ಮರೆತೇಹೋಯ್ತು. ಕವಿತೆ ಬರೆಯುವಾಗಲೂ ಹೀಗೆಯೇ ನಡುವೆ ಬಾಯಿ ಹಾಕಿಬಿಟ್ಟರೆ – ಅಂದಹಾಗೆ ಅದರ ವಿಚಾರ ಈಗ ಯಾಕೆ ? ಅದು ಎರಡನೆಯ ಹಂತ. ಹ್ಞಾ, ಜ್ಞಾಪಕ ಬಂತು : ಕವಿ ಯಾವ ಭಾವಸಮಾಧಿಯಲ್ಲಿ ಇರುತ್ತಾನೆಯೋ ಆ ಭಾವಕ್ಕೆ ಅನುಗುಣವಾದ ರಾಗವನ್ನು ಆಲಾಪನೆ ಮಾಡಬೇಕು. ಕವಿಯ ಹೆಂಡತಿ–ಅಂದರೆ, ಪ್ರಕೃತದಲ್ಲಿ ನೀನು.

ಕ.ಹೆಂ. : ನನಗೇನು ಸಂಗೀತ ಬರುತ್ತೆಯೆ ಅಂದರೆ? ಕಂಠವೇನೊ ಚೆನ್ನಾಗಿದೆ ಅಂತ ನೀವು ಹೇಳುತ್ತೀರಿ. ನನಗೆ ಬಂದಹಾಗೆ ಹಾಡುತೇನೆ ಬೇಕಾದರೆ.

ಕ.ವಿ. : ಆಹಾ ! ಈಗ ಹೊಳೆಯಿತು ! ಕವಿಯ ಹೆಂಡತಿಗೆ ಶಾಸ್ತ್ರೀಯವಾದ ಸಂಗೀತ ಬಂದಿರಬೇಕು. ಮೊದಲು, ಹಾಡಿ ಅವನಿಗೆ ಸ್ಫೂರ್ತಿ ತರುವುದಕ್ಕೆ ಅಥವಾ ಬಂದ ಸ್ಫೂರ್ತಿಗೆ ರೂಪ ಕೊಡುವುದಕ್ಕೆ. ಆಮೇಲೆ, ಅವನು – ಅಂದರೆ, ಸಾಕ್ಷಾತ್ ತನ್ನ ಪತಿ ದೇವ – ರಚಿಸಿದ ಕವಿತೆಗಳನ್ನು ಕೋಕಿಲ ಕಂಠದಲ್ಲಿ ಹಾಡಿ, ಜನರ ಮನಸ್ಸನ್ನು ಸೂರೆಮಾಡಿ, ಅವನ ಪ್ರತಿಭೆಯನ್ನು ಲೋಕದಲ್ಲೆಲ್ಲ ಬೆಳಗಿ, ಅವನಿಗೆ ಜನರ ಸನ್ಮಾನವನ್ನು, ಅದೃಷ್ಟವಿದ್ದರೆ ನೊಬೆಲ್ ಬಹುಮಾನವನ್ನು ಸಹ, ದೊರಕಿಸಿಕೊಡಲು ನೆರವಾಗಬೇಕು ಕವಿಪತ್ನಿ. ಇರಲಿ : ಇದೂ ಮೂರನೆಯ ಹಂತದ ವಿಷಯವೆ. ಮತ್ತೆ ಮೊದಲನೆಯದಕ್ಕೆ ಬರೋಣ. ಏನು ಹೇಳುತಾ ಇದ್ದೆ ?

ಕ.ಹೆಂ. : ಸಮಾಧಿಯಾಗುವ ವಿಚಾರ.

ಕವಿ : ಹುಂ, ಸಮಾಧಿಯಾಗುವ ವಿಚಾರ. ಛೆ, ಛೆ ! ಭಾವ ಸಮಾಧಿಯಲ್ಲಿರುವ ವಿಚಾರ. – ಕವಿಗೆ ನಿನ್ನಂಥ ಹೆಂಡತಿ ಇದ್ದುಬಿಟ್ಟರೆ ಅವನು ಜೀವಸಹಿತ ಸಮಾಧಿಯಾಗುವುದೇ ! ಇರಲಿ–ಅಂತೂ, ಭಾವ ಸಮಾಧಿಯಲ್ಲಿರುವಾಗ ನಿನ್ನಿಂದ ಯಾವ ಸಹಾಯವನ್ನೂ ನಾನು ನಿರೀಕ್ಷಿಸುವ ಹಾಗಿಲ್ಲ. ಆಗ, ನೀನು ಒಂದು ಉಪಕಾರ ಮಾಡು ಮತ್ತೆ : ನಿನ್ನ ರಾಗಾಲಾಪನೆ ಇಲ್ಲದಿದ್ದರೂ, ಮಗುವಿನ ರಾಗಾಲಾಪನೆ ಮಾತ್ರ ನನ್ನ ಕಿವಿಗೆ ಬೀಳದಹಾಗೆ ಮಾಡು.

ಕ.ಹೆಂ. : ಅದು ನನ್ನಿಂದ ಸಾಧ್ಯವಿಲ್ಲ. ಅದು ಹೊಟ್ಟೆಗೆ ಸಾಲದೆ ಹಾಗೆ ಅರಿಚಿಕೊಳ್ಳುತ್ತೆ. 'ಮಗು ಬಡವಾಗಿದೆ. ಆಸ್ಪತ್ರೆಗೆ ತೋರಿಸು' ಅನ್ನುತೀರಿ ನೀವು; ಆಸ್ಪತ್ರೆಗೆ ಹೋದರೆ, 'ನೀವು; ಬಡವು, ಮಗುವೂ ಬಡವು ;

ನೋಡಿದೆಯಾ, ಪೋಸ್ಟ್ ಅನ್ನುವ ಹೊತ್ತಿಗೆ ಸರಿಯಾಗಿ ಪೋಸ್ಟ್ ಬಂತು !

[ಎಂದು ಕವಿ ಬಾಗಿಲ ಕಡೆಗೆ ಆತುರ ಸಂತೋಷಗಳಿಂದ ಧಾವಿಸುತ್ತಿರುವಷ್ಟರಲ್ಲಿಯೇ "ಸ್ವಾಮಿ" ಎಂದು ಕಂಟ್ರಾಕ್ಟರ್ ಕೆಂಪಣ್ಣ ಕೂಗಿದ ಸದ್ದಾಗುವುದು. ಕವಿ ಗಾಬರಿಗೊಂಡು.....]

ಲೇ, ಏನು ಮಾಡಲೇ? ಕೆಂಪಣ್ಣ. ಕೆಂಪಣ್ಣ ಬಂದೇಬಿಟ್ಟ ಕಡೆಗೂ. ಏನು ಮಾಡಲೇ ?

ಕ.ಹೆಂ. : ರೂಮಿಗೆ ಹೋಗಿ ಬಾಗಿಲು ಹಾಕಿಕೊಳ್ಳಿ ......... ಯಾಕೆ ಸುಮ್ಮನೆ ನಿಂತಿದ್ದೀರಾ? ಕವಿ, ಕವಿ; ಕವಿಯಂತೆ ಕವಿ. ಏನು ಕವಿಯೋ ! ಇಷ್ಟೂ ಹೊಳೆಯುವುದಿಲ್ಲವೆ ? ಬೇಗ ಹೋಗಿ ಅಂದ್ರೇ.

[ಕವಿ ಒಳಕ್ಕೆ ಹೋಗಿ ಬಾಗಿಲು ಹಾಕಿಕೊಳ್ಳುವನು, ಮತ್ತೆ "ಸ್ವಾಮಿ" ಎಂದು ಕೂಗು.]

ಯಾರೂ ? ..... ಬಂದೆವಪ್ಪ (ಹೋಗಿ ಬಾಗಿಲು ತೆಗೆಯುವಳು)

[ಪ್ರವೇಶ : ಕಂಟ್ರಾಕ್ಟರ್ ಕೆಂಪಣ್ಣ, ಅಂಚೆಯವನು]

ಕೆಂಪಣ್ಣ: ಮನೆಯಲ್ಲಿದ್ದಾರೆಯೆ ತಾಯಿ ?

ಕ.ಹೆಂ. : ನಿನ್ನೆಯೇ ನಾನು ಹೇಳಲಿಲ್ಲವೆ ? ಹನ್ನೆರಡು ಗಂಟೆಯ ಮೇಲೆ ಬಂದರೆ ಸಿಕ್ಕುವುದಿಲ್ಲ ಅಂತ.

ಕೆಂಪಣ್ಣ: ಬಾಡಿಗೆ ಕೇಳುವುದಕ್ಕೆ ಬರಲಿಲ್ಲ ತಾಯಿ. ಇದೇ ಈ ಪೋಷ್ಟು ರಂಗಯ್ಯನವರಿಗೆ ಮನೆತೋರಿಸಿ ಹೋಗೋಣ ಅಂತ ಜೊತೆಯಲ್ಲಿ ಕರೆದುಕೊಂಡು ಬಂದೆ. ಹಾಗೇ.....

ಕ.ಹೆ. : ನಮ್ಮದೇನಾದರೂ ಕಾಗದಗಳಿವೆಯೇನಪ್ಪ?

ಅಂಚೆಯವನು : Gundu Rao, Poet, Kavya Kuteera, Contractor Kempanna's Poor House Quarters. –ನಿಮ್ಮ ಕಾಗದಗಳೇ ತಾಯಿ?

ಕ.ಹೆಂ. : ನನ್ನದಲ್ಲ. ನಮ್ಮ ಯಜಮಾನರದು. ನೀವು ಹೊಸಬರು ಅಂತ ಕಾಣುತ್ತೆ. ಕಾಗದ ಕೊಡಿ ಇಲ್ಲಿ.

ಅಂಚೆಯವನು : (ಕಾಗದಗಳನ್ನು ಕೊಟ್ಟು) ಹೌದು ತಾಯಿ. ಇಲ್ಲೇ ಯಾರು ಯಾರನ್ನೋ ಕೇಳಿದೆ ; ಅಡ್ರೆಸ್ ಪತ್ತೆ ಹಚ್ಚೋಕೆ ಆಗಲಿಲ್ಲ. ನಮ್ಮ ಕಂಟ್ರಾಕ್ಟರ್ ಕೆಂಪಣ್ಣನವರು ಹೀಗೇ ಬರುತಾ ಇದ್ದರು ; ಅವರನ್ನ ಕೇಳಿದೆ. ಯಾವ ಗುಂಡೂರಾಯರು ಅಂದರು. Poet ಗುಂಡೂರಾವ್ ಅಂದೆ. ಮೊದಲು ಗೊತ್ತಿಲ್ಲ ಅಂತಲೇ ಅಂದರು. ಆಮೇಲೆ Poet

ಕ.ಹೆಂ. : ಅವನಿಗೆ ಯಾಕೆ – ಪ್ರಪಂಚಕ್ಕೇ ತಿಳಿದಿದೆ : ಕವಿಯಾದವನು ಮನೆಮೂಳ, ಮನೆಹಾಳ, – ಅನ್ನುವುದು.

ಕವಿ : ಅಬ್ಬ ! ಅಬ್ಬಾ !! That's it ! ಅದೀಗ ಹೊಡೆತ ! ಎಂಥ ಅದ್ಭುತ ಪ್ರಾಸ ! ಭೇಷ್, ಕವಿಯ ಹೆಂಡತಿಯೇ, ಭೇಷ್ ! ಅದಿರಲಿ. ಮನೆಯಲ್ಲಿ ನಿಲ್ಲದೆ ಹಕ್ಕಿಯ ಹಾಗೆ ಬೇಕಾದೆಡೆಯಲ್ಲಿ ವಿಹರಿಸುವ ಕವಿಗಳೂ ಇರುತ್ತಾರೆ – ಎನ್ನುವ ವಿಷಯ ನಿನಗೆ ತಿಳಿಯದು ಪಾಪ. ಆದರೆ ನಾನು ಈ ಜಾತಿಯ ಕವಿಯಲ್ಲ.

ಕ.ಹೆಂ. : ಯಾವುದೋ ಒಂದು ಜಾತಿ. ಆಂತೂ ಕವಿ ಅಂತ ಕೆಂಪಣ್ಣನಿಗೆ ಹೇಳಿಕೊಂಡಿದ್ದೀರಿ ಅನ್ನಿ. ಇಲ್ಲದಿದ್ದರೆ, ಪಾಪ, ಅವನಿಗೆ ಹೇಗೆ ಗೊತ್ತಾಗಬೇಕು? "ಹನ್ನೆರಡು ಗಂಟೆಯಮೇಲೆ ಮನೆಯಲ್ಲಿ ಸಿಕ್ಕುವುದಿಲ್ಲ, ಕೆಲಸಕ್ಕೆ ಹೋಗಿರುತಾರೆ" ಅಂದಾಗ " 'ನನಗೆ ಕೆಲಸ ಇಲ್ಲ; ನಾನು ಕವಿ' ಅಂದರು ಸ್ವಾಮಿಗಳು" ಅಂದ. 'ಕೆಲಸ ಸಿಕ್ಕಿದೆ, ನಾಳೆಯಿಂದ ಹೋಗಬೇಕು?' ಅಂದೆ ನಾನು.

ಕವಿ : ಹಾಗಾದರೆ ಭಯವಿಲ್ಲ. ಹನ್ನೆರಡು ಆಯಿತು, ಅಲ್ಲವೇನೆ ?

ಕ.ಹೆಂ. : ಏನು ಕೈಗಡಿಯಾರ ತೆಗೆದುಕೊಟ್ಟಿದ್ದೀರ ನನಗೆ, 'ಹನ್ನೆರಡು ಆಯಿತಲ್ಲವೇನೆ' ಅಂತ ಅಮಲ್ದಾರರು ಕೇಳುವ ಹಾಗೆ ಕೇಳುವುದಕ್ಕೆ?

ಕವಿ : ನೀನು ಅಮಲ್ದಾರರ ಮಗಳು ಅನ್ನುವುದು ನನಗೆ ಗೊತ್ತು. ಸಾಕು ಸುಮ್ಮನಿರು. ಕವಿಯ ಹೆಂಡತಿ ಅನ್ನುವ ಹೆಮ್ಮೆಗಿಂತ ಅಮಲ್ದಾರರ ಮಗಳು ಅನ್ನುವ ಅಭಿಮಾನ – ದುರಭಿಮಾನ – ನಿನಗೆ ಅತಿಯಾಗಿದೆ. ಇವೊತ್ತಿನ ಪೋಸ್ಟು ಬರಲಿ, ಕವಿ ಯಾರಿಗೂ ಕಡಮೆಯಲ್ಲ ಅನ್ನುವುದು ಗೊತ್ತಾಗುತ್ತೆ. ಅಂದಹಾಗೆ, ಯಾಕೇ ಇಷ್ಟು ವಕ್ರವಾಗಿದ್ದೀಯಲ್ಲ ಇವೊತ್ತು? ........ ಓಹೋ, ಹಸಿವು. ಹಸಿದಿದ್ದರೆ ಎಲೆ ಹಾಕು ಹೋಗು, ನಾನೂ ಊಟಕ್ಕೆ ಎದ್ದು ಬಿಡುತ್ತೇನೆ. ಕವಿಯ ಹೆಂಡತಿಯ ಕರ್ತವ್ಯ ಕುರಿತು ಊಟವಾದಮೇಲೆ ಹೇಳುತ್ತೇನೆ. ಹಸಿದಿರುವಾಗ, ಹೊಟ್ಟೆಗೆ ಹಾಕಿಕೊಳ್ಳಬೇಕು ಅಂತ ನೀನು ಹಾತೊರೆಯುತ್ತಿರುವಾಗ, ಅದೆಲ್ಲವನ್ನೂ ನಿನ್ನ ತಲೆಗೆ ತುರುಕುವುದು ಕಷ್ಟ.

ಕ.ಹೆಂ. : ಊಟಕ್ಕೆ ಏನಿದೆ ಅಂತ ತಿಳಿದುಕೊಂಡಿದ್ದೀರಿ ?

ಕವಿ : ಹಾಗಾದರೆ....

[ಅಷ್ಟರಲ್ಲಿ ಹೊರಗೆ 'ಪೋಸ್ಟ್' ಎಂದು ಕೂಗಿದ ಧ್ವನಿ ಕೇಳ ಬರುವುದು]

ಕೆಂಪಣ್ಣ: ತೊಂದರೆ ತೆಗೆದುಕೊಳ್ಳದೆ ಏನು ಮಾಡುವುದು ತಾಯಿ? ಏನೇನೋ ಭಾರಿ ಭಾರಿ ಕಂಟ್ರಾಕ್ಟ್ ಕೆಲಸ ಒಪ್ಪಿಕೊಂಡುಬಿಟ್ಟಿದೆ. ಈ ಹಾಳು ಯುದ್ಧ ಬರ್ತದೆ ಅಂತ ಯಾರು ಕಂಡಿದ್ದೋರು? ಇದ್ದಕ್ಕಿದ್ದಹಂಗೆ ಸಾಮಾನಿನ ಬೆಲೆ ಒಂದಕ್ಕೆ ಮೂರು ಆಗಿಹೋಯ್ತು. ಯಿಪರೀತ ನಷ್ಟ ಆಗಿಹೋಯ್ತು ನನಗೆ. ಅದೇನೊ ಗಾದೆ ಹೇಳ್ತಾರಲ್ಲ– 'ಹೊಟ್ಟೆಗಿಲ್ಲದ ಶಾನುಭೋಗ ಹಳೇ ಕಡತ ಹುಡುಕಿದ' ಅಂತ – ಹಂಗೆ ಕಂತ್ರಾಕ್ಟ್ ಬುಟ್ಟು ಬಾಡಿಗೆ ಬಾಕಿ ವಸೂಲಿ ಮಾಡೋಕೆ ಹೊಂಟಿವಿನಿ. ಈ ಮನೆ ಕಟ್ಟಿ ಬಾಡಿಗ್ಗೆ ಕೊಟ್ಟು ಬಾಡಿಗೆ ವಸೂಲಿ ಮಾಡೋ ಕೆಲಸ ಇದೆ ನೋಡಿ, ಇದಕ್ಕಿಂತ–ಹೋಗಲಿ ಬಿಡಿ ; ನಿಮ್ಮ ಮುಂದೆ ಹೇಳಿಕೊಂಡು ಏನು ಪ್ರಯೋಜಣ !

ಕ.ಹೆ. : ಅದು ದಿಟ ಅನ್ನಿ. ನಾನೇನು ಬಾಡಿಗೆ ಕೊಡೋಳಲ್ಲ ಏನೂ ಅಲ್ಲ. ನೀವು ಉಂಟು ನಿಮ್ಮ ರಾಯರುಂಟು.

ಕೆಂಪಣ್ಣ: ನಿಮ್ಮ ಯಜಮಾನರನ್ನ ಕೇಳಿ ಕೇಳಿ ಸಾಕಾಯ್ತು. ಅವರಲ್ಲಿ ಒಂದು ಒಳ್ಳೇ ಗುಣ ಐತೆ ನೋಡಿ: ಸುಳ್ಳು ಹೇಳನಿಲ್ಲ. "ನನಗೆ ಕೆಲಸ ಇಲ್ಲ. ನಾನು ಕೆಲಸಕ್ಕೆ ಸೇರೋನಲ್ಲ. ನಾನು ಕವಿ" ಅಂದರು. ರಂಗಯ್ಯನೋರು ತಂದುಕೊಟ್ಟ ಕಾಗದದಮೇಲೂ ಹಂಗೇ ಬರೆದೈತಂತಲ್ಲ; ನಿಜವೇ ಇರಬೇಕು. ಹಂಗಂದರೆ ಏನೋ ನಂಗೊತ್ತಾಗ್ನಿಲ್ಲ. ನಮ್ಮ ಪಕ್ಕದ ಮನೆ ರಾಮಾಸಾಸ್ತರಿಗಳನ್ನ ಕೇಳಿದೆ. ಅವರು ಹೇಳಿದರು: "ಪೂರ್ವಕಾಲದಲ್ಲಿ ಕವಿಗಳನ್ನ ರಾಜರು:ಹಾಸ್ತಾನ (ಆಸ್ಥಾನ)ದಲ್ಲಿ ಮಡಿಕ್ಕೊಂಡು ಮರ್ವದೆ ಮಾಡ್ತಾ ಇದ್ದರು. ಈಗಲೂ ಅಳೇ ಕವಿಗಳನ್ನ ಮಡಿಕ್ಕೋತಾರೆ. ಈಗಿನ ಕಾಲದ ಒಸ ಕವಿಗಳನ್ನ ಮಡಿಕ್ಕೊಳ್ಳೊದಿಲ್ಲ" ಅಂತ. ಅದೇನೊ ನಂಗೂ ಅರ್ತ ಆಗ್ನಿಲ್ಲ. 'ಇದೇನು ಹಿಂಗೆ ಹೇಳ್ತವರೆ ಸಾಸ್ತರಿಗೋಳು (ಶಾಸ್ತ್ರಿಗಳೂ)? ಒಸ ಕವಿಗಳೂ ಅಳೇ ಕವಿಗಳಿಗಿನ್ನ ಮೇಲಲ್ವಾ?' ಅಂದುಕೊಂಡೆ. ಅದು ಹೆಂಗಾದರೂ ಇರಲಿ, ಒಸ ಕವಿಗಳಿಗೆ ಸಂಬಳ ಇಲ್ಲ ಅನ್ನೋದು ಕಂಡಿತವಾಯ್ತು. ಮುಖ್ಯ ಏನೂ ಅಂದ್ರೆ, ಈಗ ನೀವು ಮನೆಗೆ ಬಂದು ಹತ್ತಿರ ಹತ್ತಿರ ನಾಲ್ಕು ತಿಂಗಳಾದೊ. ಎರಡು ತಿಂಗಳ ಬಾಡಿಗೆ ಬಾಕಿ ನಿಂತದೆ ಅನ್ನೋ ಯಿಚಾರ ನಿಮಗೂ ಗೊತ್ತಿರಬಹುದು. ರಂಗಯ್ಯನೋರು ಏನೋ ಮಣಿಯಾರ್ಡರು ಇದೆ ಅಂದರು. ಏನಾದರೂ ಗಿಟ್ಟತದೇನೋ

ಅಂದರೆ ಏನು ಅಂತ ಕೇಳಿದರು. ಕವಿ ಅಂದೆ. ಕರೆದುಕೊಂಡುಬಂದರು ನನ್ನ ಪುಣ್ಯಕ್ಕೆ. ಇಲ್ಲದೆ ಹೋಗಿದ್ದರೆ ಓ ಲಕ್ಷ್ಮಣಾ ಅಂತ ಹೋಗಬೇಕಾಗಿತ್ತು ಹುಡುಕುತ್ತ. ನನ್ನಂಥ ಬಡ ಬ್ರಾಹ್ಮಣನಿಗೆ ಹೇಳಿದ್ದಲ್ಲ ಅಂಚೆ ಬಟವಾಡೆ ಕೆಲಸ. – ಸದ್ಯ ಅಡ್ರೆಸ್ ಸಿಕ್ಕಿತಲ್ಲ, ಬದುಕಿದೆ. ಒಂದು ಮನಿಯಾರ್ಡರೂ ಇದೆ ತಾಯಿ Sharadamma, ೧/೧ K.V. Gundu Rao. ಇದೂ ನಿಮ್ಮದೇ ತಾನೇ ?

ಕ.ಹೆಂ. : ನನ್ನ ಸ್ವಂತದ್ದೇ ಕಣಪ್ಪ. (ಅಂಚೆಯವನಿಂದ ಫಾರಂ ತೆಗೆದುಕೊಂಡು ರುಜು ಹಾಕಿ ಕೊಡುವಳು.)

ಅಂಚೆ : ಒಂದು ಸಾಕ್ಷಿ ಹಾಕಿಬಿಡಿ ಕೆಂಪಣ್ಣನವರೆ (ಫಾರಂ ಕೆಂಪಣ್ಣನ ಕೈಗೆ ಕೊಡುವನು.)

ಕೆಂಪಣ್ಣ: ಅದೇನೊ 'ಕೆ–ವಿ' ಗುಂಡೂರಾಯರು ಅಂದಿರಿ ಈಗ ? ನಾನು ಮೊದಲು ಕೇಳಿದಾಗ 'ಕ–ವಿ' ಗುಂಡೂ ರಾಯರು ಅಂದಿರಿ ? ಎಲ್ಲ ಒಂದೇ ತಾನೆ?

ಕ.ಹೆಂ. : ಅದೇನು ಪರವಾಯಿಲ್ಲ; ಒಂದು ಸಾಕ್ಷಿ ಹಾಕಿ. ಕವಿ ಕೆವಿ ಕಿವಿ ಎಲ್ಲಾ ಒಬ್ಬರೇ–ನಮ್ಮ ಯಜಮಾನರು.

ಕೆಂಪಣ್ಣ: (ರುಜು ಹಾಕಿ ಫಾರಮ್ಮನ್ನು ಅಂಚೆಯವನ ಕೈಗೆ ಕೊಟ್ಟು) ರುಜು ಸರಿಯಾಗಿದೆಯೊ ರಂಗಯ್ಯನವರೆ?

ಅಂಚೆ : ಅದಕ್ಕೇನು ಭೇಷಾಗಿದೆ. ಕಂಟ್ರಾಕ್ಟರ್ ಕೆಂಪಣ್ಣ ಅಂತ ಇಂಗ್ಲಿಷಿನಲ್ಲೆ ರುಜು ಮಾಡಿಬಿಟ್ಟಿದೀರಿ, ಇನ್ನು ಕೇಳಬೇಕೆ? ..........ನಿಮ್ಮಿಂದ ತುಂಬ ಉಪಕಾರ ಆಯ್ತು.... ಸರಿ. ತೆಗೆದುಕೊಳ್ಳಿ ತಾಯಿ–ಹಣ (೧೦ ರೂ. ಗಳ ೫ ನೋಟು, ಹರಿದ ಕೂಪನ್ ಕೊಡುವನು). ಹಾಗಾದರೆ ನಾನು ಬರುತ್ತೇನೆ. ಕೆಂಪಣ್ಣನವರೆ, ನೀವು ಬರ್ತೀರೋ ಇಲ್ಲ.........?

ಕೆಂಪಣ್ಣ: ನೀವು ಹೋಗಿ ರಂಗಯ್ಯನವರೆ, ಸ್ವಲ್ಪ ಕೆಲಸ ಇದೆ; ಗುಂಡೂರಾಯರನ್ನು ಕಂಡು ಮಾತನಾಡಬೇಕಾಗಿದೆ.

[ರಂಗಯ್ಯ ಹೊರಡುವನು.]

ಕೆಂಪಣ್ಣ: ರಾಯರು ಮನೆಯಲ್ಲಿಲ್ಲವೆ ತಾಯಿ?

ಕ.ಹೆಂ. : ಇಲ್ಲ ಕೆಂಪಣ್ಣನವರೆ. ಆಗಲೇ ಹೇಳಲಿಲ್ಲವೆ ? ಪಾಪ, ನಿಮಗೂ ಊಟದ ಹೊತ್ತು ; ವಯಸ್ಸಾದವರು : ಬಿಸಿಲಿನಲ್ಲಿ ಯಾಕೆ ತೊಂದರೆ ತೆಗೆದುಕೊಂಡು ಬಂದಿರೊ ಪಾಪ!

ಕ.ಹೆಂ. : ಕೆಂಪಣ್ಣನವರೆ, ಒಂದು ವಿಷಯ ಕೇಳುತೀನಿ. ಗಂಡಸಿಗೇಕೆ ಗೌರಿಯ ದುಃಖ ಅನ್ನುವಹಾಗೆ ಹೆಂಗಸಿಗೇಕೆ ಹಣದ ವಿಚಾರ ಅಂತ ಕೋಪಿಸಿಕೊಳ್ಳಬೇಡಿ ದಯವಿಟ್ಟು, ನೀವು ಅವರಿವರಿಗೆ ಕಟ್ಟಿಸಿರುವ ಮನೆಗಳ ವಿಚಾರ ಬಿಟ್ಟುಬಿಡಿ. ನಿಮ್ಮ ಸ್ವಂತ ಮನೆಗಳು ಎಷ್ಟಿವೆಯೊ?

ಕೆಂಪಣ್ಣ: (ದೇಶಾವರಿ ನಗೆ ನಗುತ್ತ) ಇದೇ–ನಿಮ್ಮಂಥ–ಬಡವರಿಗಾಗಿ ಕಟ್ಟಿಸಿರೋದು–ನನ್ನ ಕೈಲಾದ ಉಪಕಾರ ಅನ್ನಿ – ನನ್ನ ಹೆಸರಿನಲ್ಲೆ – ನನ್ನ ಕೈಲಾದ ಉಪಕಾರ ಅನ್ನಿ – ನನ್ನ ಹೆಸರಿನಲ್ಲೆ ಇದೆಯಲ್ಲ – ಇದೇ – ಪೂರ್ ಕೆಂಪಣ್ಣ ಕ್ವಾಟ್ರರ್ಸು – ಇಷ್ಟೇ ಮನೆಗಳು. ಉಳಿದೋವೆಲ್ಲ ಬಂಗ್ಲೆಗಳು ಅನ್ನಿ. ಈ ವೂರಿನಲ್ಲಿ ಒಂದು ಮೂರು, ಮೈಸೂರಿನಲ್ಲಿ ಒಂದೆರಡು, ತುಮಕೂರಿನಲ್ಲಿ ಒಂದೆರಡು.....

ಕ.ಹೆಂ. : ಎಲ್ಲಾ ಒಂದು ಐವತ್ತು ಅರುವತ್ತು......

ಕೆಂಪಣ್ಣ: ಅಷ್ಟೆಲ್ಲಿ ಬಂತು ತಾಯಿ ? ಏನೋ ಒಂದು ಒಂದೂವರೆಲಕ್ಷ– ಹೆಚ್ಚೂ ಅಂದರೆ ಎರಡು–ಅಬ್ಬಬ್ಬಾ ಅಂದರೆ ಮೂರು. ಅಂದರೆ, ನಾ ಹೇಳೋದು ಹಿಂದಿನ ಬೆಲೆ ಅಂತ ಮಡಿಕ್ಕೊಳ್ಳಿ.

ಕ.ಹೆಂ. : ಸರಿ ಅನ್ನಿ. ಅದಿರಲಿ ; ಈ ಆಸ್ತಿಪಾಸ್ತಿ ಇದರ ಲೆಕ್ಕಪಕ್ಕ ಎಲ್ಲ ನಿಮ್ಮ ಮಕ್ಕಳೇ ನೋಡಿಕೊಳ್ಳುತಾರೆ ಅಂತ ಕಾಣುತ್ತೆ.

ಕೆಂಪಣ್ಣ: ಅಯ್ಯೋ, ಹಂಗಿದ್ರೆ ಇಷ್ಟೊತ್ತಿಗೆ ಐದಾರು ಲಕ್ಷ ಆದರೂ ಆಗಬೇಕಿತ್ತು – ಹಿಂದಿನ ಬೆಲೇಲಿ ಅಂತ ಮಡಿಕ್ಕೊಳ್ಳಿ. ನಾನೂನು ಒಂದು ಲಕ್ಷಾನಾದರೂ ಯಾತಕ್ಕಾದರೂ ದಾನಮಾಡ್ತಾ ಇದ್ದೆ. ಅದಕ್ಕೆಲ್ಲ ನನ್ನ ಮಗ ಹಾಯ್ಗೊಗ್ಡಾಕಿಲ್ಲ. ನಿನ್ನ ಹೆಸರ್ನಲ್ಲೆ ದಾನಮಾಡು, ಬಹದ್ದೂರ ಅನ್ನಿಸಿಕೊ, ದರ್ಮಪ್ರಕಾಸ ಆಗು, ಅಂದರೆ ಅದನೂ ಕೇಳಾಕಿಲ್ಲ. ಊರೂರು ತಿರಕ್ಕೊಂಡು ಮಜಾ ಮಾಡ್ತಾ ಅವ್ನೆ. ಸುದ್ಧ ಸುಂಟಿಕಾಯಿ. ನಾನಂತೂ ಅಕ್ಸರ ಕಲೀನಿಲ್ಲ ಅಂತ ಅವನನ್ನ ಇಸ್ಕೂಲಿಗೆ ಹಾಕ್ದೆ : ಷೋಕಿ ಕಲ್ತ, ಜೂಜು ಕಲ್ತ, ಎಲ್ಲಾ ಕಲ್ತ. ವಿದ್ಯೆ ಮತ್ರ ಕಲೀನಿಲ್ಲ. ನನ್ನ ಕೆಲ್ಸಕ್ಕಾದ್ರೂ ಹಾಕ್ಕೊಂಡಿದ್ರೆ ಚೆಂದಾಗಿತ್ತು. ವಿದ್ಯಗಿದ್ಯ ಎಲ್ಲ ನಿಮ್ಮ ಬ್ರಾಂಬ್ರರಿಗೇ ಸರಿ – ನಮಗೇಳಿದ್ದಲ್ಲ. ಈಗ ನೋಡಿ, ಕಂತ್ರಾಕ್ಟ್ ಕೆಲ್ಸಾನೂ ನಾನೇ ಮಾಡಬೇಕು, ಬಾಡಿಗೆ ವಸೂಲು ಮಾಡೋಕೂ ನಾನೇ ಬರಬೇಕು. ಮುದುಕನಾಗ್ತಾ ಬಂದೆ. ಸುತ್ತೋಕಾಗೋಕಿಲ್ಲ. ಮಡಗಿರೋಮೋಟಾರ್ ಗಾಡಿ ಮಗನ ಸುತ್ತಾಟಕ್ಕೇ ಸಾಲ್ದು. ಹಿಂಗೈತೆ

ಅಂತ ಅವರ ಜೊತೇಲೇ ಹಿಂಗೇ ಬಂದೆ. ದೊಡ್ಮನಸ್ಸು ಮಾಡಿ–

ಕ.ಹೆಂ. : ಮನಿಯಾರ್ಡರೇನೋ ಬಂತು ಅನ್ನಿ. ಆದರೆ, ನನ್ನ ಹೆಸರಿಗೆ ಬಂದಿದೆ ನೋಡಿ. ನೀವೆ ಸಾಕ್ಷಿ ಹಾಕಿದ್ದೀರಲ್ಲ.

ಕೆಂಪಣ್ಣ: ಹೌದು, ಅದು ಸರಿಯೆ, ಆದರೆ, ಬಾಡಿಗೆ ಬಾಕಿ ನಿಂತಿದೆ ನೋಡಿ. ನಿಮ್ಮ ಯಜಮಾನರಿಗೆ ಕೊಡೋ ಸಕ್ತಿ ಇಲ್ಲದೆ ಇರೋವಾಗ–

ಕ.ಹೆಂ. : ಶಕ್ತಿ ಇದೆಯೊ ಇಲ್ಲವೊ ಅದೆಲ್ಲ ನನಗೆ ಗೊತ್ತಿಲ್ಲ ಕೆಂಪಣ್ಣನವರೆ. ನೀವುಂಟು. ಈ ಹಣ ನಮ್ಮ ತಂದೆ ಗೌರಿಹಬ್ಬಕ್ಕೆ ಹೆಣ್ಣುಮಗಳಿಗೆ ಅಂತ ಕಳಿಸಿದಾರೆ ನೋಡಿ. ಇಲ್ಲದೆ ಹೋಗಿದ್ದರೆ ಏನಾದರೂ ಕೊಡಬಹುದಾಗಿತ್ತು. ನೀವೇ ಹೇಳಿ, ಈ ಹಣ ನಿಮಗೆ ಕೊಡಬಹುದೆ? ಕೊಡುವುದು ನ್ಯಾಯವೆ ?

ಕೆಂಪಣ್ಣ : ನ್ಯಾಯವಾಗಿ ಬರಬೇಕಾಗಿರೋ ಹಣ ಕೇಳ್ತಾ ಇದೇನೆಯೇ ವಿನಾಯ್ಸಿ ಅನ್ಯಾಯದ ಹಣ ಕೇಳ್ತಾ ಇಲ್ಲ ತಾಯಿ. ನ್ಯಾಯವಾಗಿ ಬರಬೇಕಾದ್ದನ್ನ ಕೇಳೋದು ನ್ಯಾಯ ಅಲ್ವೆ ತಾಯಿ ? ಇದೇನು ಹಿಂಗೆ ಕೇಳ್ತೀರ ?

ಕ.ಹೆಂ. : ಅದಲ್ಲ ಕೆಂಪಣ್ಣನವರೆ ನಾನು ಹೇಳಿದ್ದು. ಹಣ ನನ್ನದು; ನನಗೆ ಬಂದಿದೆ; ನಮ್ಮ ಯಜಮಾನರದ್ದಲ್ಲ. ಆದ್ದರಿಂದ ಈ ಹಣದಿಂದ ಬಾಡಿಗೆ ಕೊಡುವುದಕ್ಕಾಗುವುದಿಲ್ಲ ಅಂತ ನಾನು ಹೇಳಿದ್ದರ ಅರ್ಥ.

ಕೆಂಪಣ್ಣ: ಅದೆಲ್ಲ ನಂಗೊತ್ತಿಲ್ಲ ತಾಯಿ ; ನಂಗೆ ಅರ್ಥಾನೂ ಆಗೋಕಿಲ್ಲ. ಆದರೆ ಒಂದು ನೋಡಿ : ನಿಮ್ಮ ಯಜಮಾನರು ನಿಮ್ಮ ಹೆಸರಿಗೆ ಹಣ ತರಿಸಿಕೊಂಡಿರಬಹುದಲ್ಲ ?

ಕ.ಹೆಂ. : ನಮ್ಮ ಯಜಮಾನರಾದರೂ ಸುಳ್ಳು ಹೇಳಬಹುದು – ಅಥವಾ ಸುಳ್ಳು ಬರೆಯಬಹುದು. ಆದರೆ ನಾನು ಹೇಳುವುದು ಸತ್ಯ ಕೆಂಪಣ್ಣನವರೆ. ಬೇಕಾದರೆ ಈ ಕೂಪನ್ ನೋಡಿ (ಎಂದು ಮನಿಯಾರ್ಡರ್ ಕೂಪನನ್ನು ಕೆಂಪಣ್ಣನ ಕೈಗೆ ಕೊಡುವಳು)

ಕೆಂಪಣ್ಣ: (ಓದಿದಂತೆ ನಟಿಸಿ, ಅರ್ಥವಾಗದೆ) ಇಷ್ಟು ಕಾಜಗದಲ್ಲಿ ಅದೇನು ರಾಯಸ ಬರೆದವರೆ ! ಅಬ್ಬ! ಏನು ಬರೆದವರೆ ತಾಯಿ ?

ಕ.ಹೆ. : ಯಾಕೆ, ನಿಮಗೆ ಓದೋಕೆ ಬರುವುದಿಲ್ಲವೆ ? ಎಲ್ಲಿ ಕೊಡಿ ಇಲ್ಲಿ.

ಕೆಂಪಣ್ಣ: ಇಂಗ್ಲೀಸ್ನಲ್ಲೆ ರುಜು ಹಾಕ್ತೀನಿ ಅನ್ನಿ. ಓದೋಕೆ ...... ಓದೋಕೆ .... ನನ್ನ ಮಗನ್ನೂ ಹಾಕ್ದೆ ಓದೋಕೆ. ಅದೆಲ್ಲ ಏನು ಪ್ರಯೋಜಣ ? ಬಿಡಿ ಅದನ್ನ (ಕೂಪನ್ ಹಿಂದಕ್ಕೆ ಕೊಡುವನು)

ನಟಿಸುತ್ತ) ಇನ್ನು ಕೊಂಚ ಹೊತ್ತು ಇಲ್ಲೇ ಇದ್ದರೆ ಅವರೇ ಬಂದರೂ ಬರಬಹುದು. ಮೇಷ್ಟರ ಕೆಲಸ. ಮಧ್ಯೆಮಧ್ಯೆ ಬಿಡುವು ಇರುತ್ತೆ. ನೋಡಿ, ಮಾತಿನಲ್ಲಿ ಅಡಿಗೆ ಕೆಲಸವೇ ಮರೆತುಹೋಯಿತು. ದಯವಿಟ್ಟು ಸ್ವಲ್ಪ ಕುಳಿತುಕೊಳ್ಳಿ ..... (ಮನಿಯಾರ್ಡರು ಕೂಪನನ್ನು ಸರ‍್ರನೆ ಮನಸ್ಸಿನಲ್ಲೇ ಓದಿಕೊಳ್ಳುವಳು) ..... ಸಂಕೋಚ ಯಾಕೆ, ಕುಳಿತುಕೊಳ್ಳಿ. ಮನೆ ನಿಮ್ಮದೇ. (ಮತ್ತೆ ಸರ‍್ರನೆ ಕಾರ್ಡನ್ನು ಓದಿಕೊಳ್ಳುವಳು). ಪಾಪ, ನಿಮಗೆ ಹೊತ್ತಾದರೆ ಹೋಗಿ, ಅವರು ಬಂದಮೇಲೆ ಹೇಳಿ ಅವರನ್ನ ಕಳಿಸಿಕೊಡುತೇನೆ ....... ಬಾಗಿಲು ಹಾಕಿ ಕೊಳ್ಳುತ್ತೇನೆ, ಇರಲಿ ಬಿಡಿ ...... ಖಂಡಿತ ಮರೆಯುವುದಿಲ್ಲ ; ನೀವು ಬಂದಿದ್ದಿರಿ ಅಂತ ತಿಳಿಸುತ್ತೇನೆ. (ಕ್ಷಣ ಹೊತ್ತಾದಮೇಲೆ ಹೋಗಿ ಧಡಾರನೆ ಬಾಗಿಲು ಹಾಕುವಳು. ಕೂಪನನ್ನೂ ಕಾರ್ಡನ್ನೂ ಮೇಜಿನಮೇಲೆ ಹಾಕಿ, "ಉಸ್ಸಪ್ಪಾ" ಎಂದು ಕುರ್ಚಿಯಮೇಲೆ ಕುಳಿತುಕೊಳ್ಳುವಳು. ಇನ್ನೊಂದು ಕವರನ್ನು ಕೈಲಿ ಹಿಡಿದುಕೊಂಡು ಒಡೆಯುವುದೋ ಬೇಡವೋ ಎಂದು ಅನುಮಾನಿಸುತ್ತಿರುವಷ್ಟರಲ್ಲಿ, ಒಳಗಿನಿಂದ ಕವಿ "ಬಂದನಾ ಹುಲಿರಾಯನು" ಎನ್ನುವಂತೆ ಹಲ್ಲು ಹಲ್ಲು ಕಡಿಯುತ್ತ ಬರುವನು.)

ಕವಿ : ಲೇ, ಲೇ, ನಿನಗೆ ಬುದ್ಧಿಗಿದ್ಧಿ ಇದೆಯೋ ಇಲ್ಲವೋ ? ಎಲ್ಲವನ್ನೂ ಕಿವಿ ಕೊಟ್ಟು ಕೇಳುತಾ ಇದ್ದೆ.

ಕ.ಹೆಂ. : ಕವಿಗಳಿಗೆ ಕಿವಿಯೂ ಉಂಟೆ ?

ಕವಿ : ನೋಡು, ಹೊಟ್ಟೆ ಹಸಿದಿದೆ. ಸುಮ್ಮನೆ ರೇಗಿಸಬೇಡ.

ಕ.ಹೆಂ. : ಕವಿಗಳಿಗೆ ಹೊಟ್ಟೆಯೂ ಹಸಿಯುತ್ತೆಯೆ? ಅಯ್ಯೋ ಪಾಪ. ಹಸಿದರೂ ಹಸಿದೀತೆ. ನಮಗಂತೂ ನಿಮ್ಮ ಕವಿತಾಮೃತಪಾನದಲ್ಲೆ ಹೊಟ್ಟೆ ತುಂಬಿಸುತ್ತ ಇದೀರಿ. ನಿಮಗೊಬ್ಬರಿಗೇ ಉಪವಾಸವಾಗುತ ಇದೆ ಪಾಪ.

ಕವಿ : ಇನ್ನು ನನಗೆ ತಡೆಯುವುದಕ್ಕಾಗುವುದಿಲ್ಲ. ಇನ್ನು ಹೆಚ್ಚು ರೇಗಿಸಿದರೆ ಮನೆ ಬಿಟ್ಟು ಹೊರಡು ಅನ್ನುತೀನಿ.

ಕ.ಹೆಂ. : ನಿಮ್ಮ ಮನೆಯಾಗಿದ್ದರೆ ಹಾಗನ್ನಬಹುದಾಗಿತ್ತು. ನಿಮ್ಮದಲ್ಲವಲ್ಲ.

ಕವಿ : ಬಾಡಿಗೆ ಕೊಟ್ಟಮೇಲೆ ನನ್ನದೇ.

ಕ.ಹೆಂ. : ಎರಡು ತಿಂಗಳ ಬಾಡಿಗೆ ಬಾಕಿ ಅನ್ನುವುದು ಮರೆತುಹೋಯಿತೇನೊ

ನೋಡಿ ನನ್ನ ಪಾಡು, ನನ್ನ ಕಂತ್ರಾಕ್ಟ್‌ಗಿರಿ.

ಕ.ಹೆಂ. : ಯಾರನ್ನಾದರೂ ಕೆಲಸಕ್ಕೆ ಇಟ್ಟುಕೊಳ್ಳಿ – ಲೆಕ್ಕ ಪಕ್ಕ ನೋಡಿಕೊಳ್ಳುವುದಕ್ಕಾದರೂ.

ಕೆಂಪಣ್ಣ: ನಂಬಿಕೆಯಾಗಿ ಕೆಲ್ಸ ಮಾಡೋರು ಸಿಕ್ಕೋಕಿಲ್ಲ ತಾಯಿ, ಸಿಕ್ಕಿದರೆ ತಿಂಗಳಿಗೆ ಮೂವತ್ತಲ್ಲ, ಐವತ್ತು ರೂಪಾಯಿ ಸಂಬಳ ಕೊಟ್ಟೇನು ; ನಾನು ಮನೇಲಿ ಹಾಯಂತ ಕುಳಿತುಕೊಂಡೇನು.

ಕ.ಹೆಂ. : ಕೇಳುವುದಕ್ಕೆ ನಾಚಿಕೆಯಾಗುತ್ತೆ ನೋಡಿ. ಆದರೂ ಯತ್ನವಿಲ್ಲ. ನಮ್ಮವರೆ ಇದಾರೆ ; ಬಿ. ಎ. ಪ್ಯಾಸಾಗಿದೆ ; ನಂಬಿಕೆಯಾಗಿ ಕೆಲಸ ಮಾಡುತಾರೆ; ಅದಕ್ಕೆ ನಾನು ಖಾತ್ರಿ ಕೊಡುತೇನೆ. ನೀವು ದೊಡ್ಡ ಮನಸ್ಸುಮಾಡಿ ಕೆಲಸಕ್ಕೆ ಇಟ್ಟುಕೊಂಡರೆ – ನಿಮ್ಮ ಬಾಡಿಗೆ ಬಾಕಿಯನ್ನ ಮೊದಲ ತಿಂಗಳ ಸಂಬಳದಲ್ಲೆ ಪೂರ್ತಿಯಾಗಿ ಹಿಡಿದುಕೊಂಡು–ಪ್ರತಿ ತಿಂಗಳ ಬಾಡಿಗೆಯನ್ನೂ ಆಯಾ ತಿಂಗಳ ಸಂಬಳದಲ್ಲೆ ಹಿಡಿದುಕೊಂಡು– ಉಳಿದದ್ದನ್ನು ಕೊಡಬಹುದು. ದೊಡ್ಡ ಉಪಕಾರವಾಗುತ್ತೆ. ನಿಮಗೂ ಸಹಾಯವಾಗುತ್ತೆ.

ಕೆಂಪಣ್ಣ: ಅದೇನೋ ಕೆಲ್ಸ ಸಿಕ್ಕೈತೆ ಅಂದ್ರಿ ?

ಕ.ಹೆಂ. : ಅದೇನೂ ಸುಖವಿಲ್ಲ. ನಿವೇನಾದರೂ ಇಟ್ಟು ಕೊಳ್ಳುವುದಕ್ಕೆ ಸಾಧ್ಯವೇ ಯೋಚನೆ ಮಾಡಿ ನೋಡಿ.

ಕೆಂಪಣ್ಣ: ಯೋಚನೆಯೇನು ತಾಯಿ, ಯೋಚನೆ ? ನಿಮ್ಮ ಯಜಮಾನ್ರು ಮನೆಗೆ ಬರುತ್ತಲೂ ಹೇಳಿ ನಮ್ಮ ಮನೆಗೆ ಬರೋಹಾಗೆ. ನಾಳೆಯಿಂದಲೆ ಕೆಲಸಕ್ಕೆ ಸುರುಮಾಡ್ಲಿ. ಬಾಡಿಗೆ ಬಾಕಿ ವಿಚಾರ ಮಾತ್ರ ನೆಪ್ಪು ಕೊಡೋದು ಮರೀಬೇಡಿ ತಾಯಿ.

ಕ. ಹೆಂ. : ಆಗಲಿ ಕೆಂಪಣ್ಣನವರೆ, ತುಂಬ ಉಪಕಾರವಾಯ್ತು ನಿಮ್ಮಿಂದ. ನಿಮ್ಮ ಅಡ್ರೆಸ್ಸು ಏನು ?

ಕೆಂಪಣ್ಣ: ಈ ಕಾಲ್ಡು ಕೊಡಿ, ವೆಜಿಟಿಂಗು ಕಾಲ್ಡು ; ಇದರಲ್ಲಿ ಫ್ಲಿಂಟ್ (ಪ್ರಿಂಟ್) ಮಾಡವ್ನೆ ನನ್ನಹಡ್ರಸ್ಸು (ಅಡ್ರೆಸ್ಸು) ಎಲ್ಲಾನೂ. (ವಿಸಿಟಿಂಗ್ ಕಾರ್ಡು ಕೊಟ್ಟು) ಇನ್ನು ನಾನು ಬರ್ತೀನಿ ತಾಯಿ.

ಕವಿ ಹೆಂ. : ("ಒಳ್ಳೆಯದು" ಎನ್ನುವಂತೆ ತಲೆಯಲ್ಲಾಡಿಸುವಳು)

[ಕೆಂಪಣ್ಣ ಹೊರಡುವನು.]

(ಕ್ಷಣ ಹೊತ್ತಾದಮೇಲೆ, ಕೆಂಪಣ್ಣನೊಡನೆ ಮಾತಾಡುತ್ತಿರುವಂತೆ

ಕವಿ : ನನ್ನ ಹತ್ತಿರ ಢೋಂಗಿ ಹೊಡೆಯಬೇಡ–ಕವಿಯ ಹತ್ತಿರ. "ರವಿ ಕಾಣದ್ದನ್ನ ಕವಿ ಕಂಡ" ಅಂತ ಕೇಳಿಲ್ಲವೆ?

ಕ.ಹೆಂ. : ಕವಿ ಏನೇನು ಬೇಕಾದರೂ ಕಾಣಬಹುದು, ನೋಡಿ; ಆದರೆ, ಮನಿಯಾರ್ಡರು ಕಾಣುವುದು ಕಷ್ಟ. ಮನಿಯಾರ್ಡರು ಬಂದಿರುವುದು ಕವಿಗಲ್ಲ – ಕವಿಯ ಹೆಂಡತಿಗೆ, ತಿಳಿಯಿತೆ?

ಕವಿ : ಹೋಗಲಿ, ಎಷ್ಟು ಬಂದಿದೆ?

ಕ.ಹೆಂ. : ಅದೆಲ್ಲಾ ಕಟ್ಟಿಕೊಂಡು ನಿಮಗೇನು? ಗೌರಿಯ ಹಬ್ಬಕ್ಕೆ ಅಂತ ಕಳಿಸಿರುವ ಹಣ, ನಿಮಗೆ ಒಂದು ಕಾಸೂ ಕೊಡುವುದಿಲ್ಲ. ಕಂಡಿರಾ?

ಕವಿ : (ಮೇಜಿನಮೇಲಿದ್ದ ಮನಿಯಾರ್ಡರ್ ಕೂಪನ್, ಕಾರ್ಡುಗಳನ್ನು ಆತುರದಿಂದ ತೆಗೆದುಕೊಂಡು) ನೀನು ಹೇಳದೆ ಇದ್ದರೆ ಪರವಾಯಿಲ್ಲ–

ಕ.ಹೆಂ. : ಹಾಗೆಲ್ಲ ತೆಗೆದುಕೊಳ್ಳಬೇಡಿ ಅಂದ್ರೆ. ನಮ್ಮ ತಂದೆ ಏನೇನೋ ಬರೆದಿದಾರೆ ನನಗೆ. ಕೊಡಿ ಅಂದ್ರೆ ಇಲ್ಲಿ (ಎಂದು ಕಿತ್ತುಕೊಳ್ಳಹೋಗುವಳು)

ಕವಿ : (ಅವಳಿಗೆ ಕೊಡದೆ ಸತಾಯಿಸಿ, ಗಟ್ಟಿಯಾಗಿ ಓದುವನು ಓದತೊಡಗಿದಕೂಡಲೆ ಅವನ ಇನ್ನೊಂದು ಕೈಲಿದ್ದ ಕಾರ್ಡನ್ನು ಸೇಡಿಗಾಗಿ ಎಂಬಂತೆ ಕಿತ್ತುಕೊಳ್ಳುವಳು) ಓಹೋ, ಐವತ್ತು ರೂಪಾಯಿ! ಅಬ್ಬ ! ..... "ಚಿ॥ ಸೌ॥ ಶಾರದೆಗೆ–ಆಶೀರ್ವಾದ. ನಿನ್ನ ಕಾಗದ ತಲಪಿ ಅಭಿಪ್ರಾಯವಾಯ್ತು. ವಿಚಾರ ತಿಳಿದು ವ್ಯಥೆಯಾಯ್ತು. ಇದರೊಡನೆ ೫೦ ರೂ. ಕಳಿಸಿದ್ದೇನೆ. ಹಬ್ಬದ ಕಣ, ಖರ್ಚು ಮುಂತಾದ್ದಕ್ಕೆ ೧೦ ರೂ. ಮಗುವಿನ ವರ್ಷದ ಹೆಚ್ಚಿನ ಸಂಬಂಧದಲ್ಲಿ ಮಗುವಿಗೆ ೨೫ ರೂ., ನಿನ್ನ ಇಷ್ಟ ಬಂದಂತೆ ಖರ್ಚು ಮಾಡಬಹುದು. ಉಳಿದ ೧೫ ರೂ.ಗಳನ್ನು ನಿನ್ನ ಕಷ್ಟಕಾಲಕ್ಕೆ ಇಟ್ಟುಕೊ. ಹೆಚ್ಚಿನ ವಿಚಾರಕ್ಕೆ ನಿಮ್ಮ ಯಜಮಾನರಿಗೆ ಆಲಾಯಿದ ಬರೆಯುತ್ತೇನೆ. ಆಶೀರ್ವಾದಗಳು."–ಎಷ್ಟು ಸಣ್ಣಗೆ ಕುರುಕಿ ಬರೆದಿದ್ದಾರೆ! ಮಗಳು, ಮೊಮ್ಮಗು ಅಂದರೆ ಆದೆಷ್ಟು ಪ್ರೀತಿ! .... ನೋಡು, ಮಗುವಿನ ವರ್ಷದ ಹೆಚ್ಚು ಮಾಡು ; ನಿನ್ನ ಇಷ್ಟ, ನಿಮ್ಮ ತಂದೆಯ ಸಂತೋಷ. ಅವರಿಗೂ ಕಾಗದ ಹಾಕು, ಬರಲಿ. ಕಣ ತೆಗೆದುಕೊ, ನಿನ್ನ ಖುಷಿ. ಉಳಿದ ದುಡ್ಡಿದೆಯಲ್ಲ. ೧೫ ರೂಪಾಯಿ, ಅದರ ವಿಚಾರ: ಸಂಸಾರ ಅಂದಮೇಲೆ ನಿನ್ನ ಕಷ್ಟಕಾಲವೇನು ನನ್ನ ಕಷ್ಟಕಾಲವೇನು? ಸದ್ಯ,

ಪಾಪ. ಕಂಟ್ರಾಕ್ಟರ್ ಕೆಂಪಣ್ಣನಿಗೆ ಹೆದರಿಕೊಂಡು ರೂಮಿನಲ್ಲಿ ಅಡಗಿಕೊಂಡಿದ್ದಂತೂ ಮರೆತಿರಲಾರಿರಿ.

ಕವಿ : ಯಾಕೆ ಸುಮ್ಮನೆ ಗೋಳುಹೊಯ್ದುಕೊಳ್ಳುತೀಯೆ?

ಕ.ಹೆಂ. : ಹಾಗೆ ಬನ್ನಿ ದಾರಿಗೆ.

ಕವಿ : ಅಲ್ಲಾ, ನಾನು ಕವಿ. ಕವಿಯಾದವನು ಕಂಟ್ರಾಕ್ಟ್ ಕೆಲಸ ಮಾಡುವುದು ಅಂದರೇನೆ? ನಾನು ರೂಮಿನಿಂದಲೇ ಎಲ್ಲಾ ಕೇಳುತಾ ಇದ್ದೆ.

ಕ.ಹೆಂ. : ಆ ಪುಣ್ಯ ನಿಮಗೆಲ್ಲಿದೆ : ಕಂಟ್ರಾಕ್ಟರ ಕೈಕೆಳಗೆ ಕೆಲಸ ಮಾಡುವುದು ಅನ್ನಿ.

ಕವಿ : ಇನ್ನೂ ಹೀನಾಯವಾದ ಕೆಲಸ. ಅದನ್ನ ಮಾಡು ಅನ್ನುತೀಯಲ್ಲ! – ಮಾಡಬೇಕೂ ಅಂತ ಗೊತ್ತು ಮಾಡಿಬಿಟ್ಟಿದ್ದೀಯಲ್ಲ! – ನಿನಗೇನಾದರೂ ಸ್ವಲ್ಪವಾದರೂ ವಿವೇಚನೆ ಇದೆಯೇನೆ? ಕವಿ ಅಂದರೆ ಏನು, ಸಮಾಜದಲ್ಲಿ ಅವನ ಸ್ಥಾನಮಾನವೇನು? – ಅನ್ನುವುದು ನಿನಗೇನಾದರೂ ತಿಳಿದಿದೆ ಅಂತ ತಿಳಿದಿದ್ದೀಯಾ?

ಕ.ಹೆಂ. : ನಿಮಗೇನಾದರೂ ಸ್ಥಾನ – ಮಾನ ಇದ್ದರಲ್ಲವೆ ತಿಳಿಯುವುದು? ನಿಮ್ಮ ಸ್ಥಾನ ಮನೆಯಲ್ಲಿ – ಕಂಟ್ರಾಕ್ಟರ್ ಕೆಂಪಣ್ಣನ ಮನೆಯಲ್ಲಿ. ನಿಮ್ಮ ಮಾನ – ಪುರೋಹಿತರು ಉರುಟಣೆಯಲ್ಲಿ ಹೇಳಿಕೊಟ್ಟರು ನೋಡಿ ಅದೇನೋ–ಅದಕ್ಕೆ ಸಮಾನ. ಸುಮ್ಮನೆ ನನ್ನನ್ನ ರೇಗಿಸಬೇಡಿ.

ಕವಿ : ನನ್ನ ಕವಿತೆ ಪುಸ್ತಕ ಪ್ರಕಟವಾಗಲಿ, ನೋಡು ; ಆಗ ನನ್ನ ಸ್ಥಾನ, ಮಾನ ತಿಳಿಯುತ್ತೆ.

ಕ.ಹೆಂ. : ನಿಮ್ಮ ಕವಿತೆಯ ಪುಸ್ತಕ ನೀವೇ ಅಚ್ಚುಹಾಕಿಕೊಳ್ಳಬೇಕು ಅಷ್ಟೆ. ಆದರೆ ಅದಕ್ಕೆ ನಾನು ಅವಕಾಶ ಕೊಡುವುದಿಲ್ಲ.

ಕವಿ : ಹಾಗೇ ತಿಳಿದುಕೊಂಡಿರು. ಬೆಂಗಳೂರಿನ ಯಾರೋ ಬೆಪ್ಪರು ಒಬ್ಬಿಬ್ಬರು ನನ್ನ ಪುಸ್ತಕವನ್ನ ಪ್ರಕಟಿಸದೆಹೋದ ಮಾತ್ರಕ್ಕೆ ಅಖಿಲ ಕರ್ನಾಟಕದಲ್ಲಿ ಬೇರೆ ಪ್ರಕಾಶಕರೇ ಇಲ್ಲ ಅಂತ ತಿಳಿದುಕೊಂಡೆಯ? ಧಾರವಾಡದ "ಮನೋ ರಂಜಿನೀ ಗ್ರಂಥಮಾಲೆ"ಗೆ ಕವಿತೆಯ ಪುಸ್ತಕ ಕಳಿಸಿದೇನೆ. ಅದರಿಂದ ಉತ್ತರ ಬರಲಿ, ನೋಡುತಿರುವೆಯಂತೆ– ಅಂದಹಾಗೆ, ಮನಿಯಾರ್ಡರ್ ಜೊತೆಗೆ ಕಾಗದ ಏನಾದರೂ ಬಂತೇನೂ?

ಕ.ಹೆಂ. : ಕಾಗದ ಇರಲಿ. ಮನುಯಾರ್ಡರು ಯಾವುದು ಮನಿಯಾರ್ಡರು?

ಕ.ಹೆಂ. : (ಕಾಗದ ಬೀಸಾಡಿ) ನಾನೇನು ಕಾಗದ ತಿಂದುಕೊಳ್ಳುವುದಿಲ್ಲ. ಕಾಗದ ತಿನ್ನುವುದಕ್ಕೆ ನಾನೇನು ಕತ್ತೆಯಲ್ಲ ; ಕವಿಯೂ ಅಲ್ಲ. (ತುಸ ಹೊತ್ತು ಹುಬ್ಬು ಗಂಟಿನ ಮೌನ). ಕವನ ಅಂದರೆ ಅವರಿಗೆ ಅರ್ಥವಾಗುವುದಿಲ್ಲ; ಜೀವನ ಅಂದರೇನು ಅನ್ನುವುದು ನಿಮಗೆ ಅರ್ಥವಾಗುವುದಿಲ್ಲ. (ಅಷ್ಟುಹೊತ್ತಿಗೆ ಮಗುವಿನ ಆಳು ಒಳಗಿನಿಂದ ಕೇಳಿ ಬರುವುದು) ನೀವೇನೊ ಕವಿಗಳು, ಸರಿಯೆ : ಯಾರೂ ಅದನ್ನ ಒಪ್ಪದಿದ್ದರೂ. ನಾನು ಒಪ್ಪುತ್ತೇನೆ ; ಒಪ್ಪಬೇಕಾಗಿ ಬಂದಿದೆ. ಯಾಕೆ ಅಂತೀರೋ, ನೀವು ಕವಿಯಾಗಿರುವುದರ ಫಲ ನಾವು ಅನುಭವಿಸುತಾ ಇದೇವೆ. ಕವಿಗಳು ಮದುವೇನೇ ಮಾಡಿಕೊಳ್ಳಬಾರದು. ಮಾಡಿಕೊಂಡಮೇಲೆ, ತನಗೆ ಒಬ್ಬಳು ಹೆಂಡತಿ ಅನ್ನುವ ಜೀವ, ಹಳೆಯ ಜೀವ, ಬೇಡದ ಜೀವ – ಆದರೂ ಹೊಟ್ಟೆಗೆ ಹಾಕಬೇಕಾದ ಜೀವ ಇದೆ ಅನ್ನುವುದನ್ನ ಮರೆಯಬಾರದು. ಒಂದು ಹೊಸ ಜೀವ ಹುಟ್ಟಿದೆ–ಏನೂ ಅರಿಯದ್ದು–ಕವಿತೆಯ ಹಾಲಲ್ಲ, ಹಸುವಿನ ಹಾಲು ಕುಡಿಯೋದು–ಅನ್ನುವುದನ್ನ ಸದಾ ನೆನಪಿನಲ್ಲಿಟ್ಟುಕೊಂಡಿರಬೇಕು !

ಕವಿ : ಮುಗಿಯಿತೊ ನಿನ್ನ ಉಪನ್ಯಾಸ ? ಇಲ್ಲ – (ಎಂದು ಕೆಳಗೆ ಬಿದ್ದಿದ್ದ ಕಾಗದ ಕೈಗೆ ತೆಗೆದುಕೊಳ್ಳುವನು)

ಕ.ಹೆಂ. : ಮುಗಿಸ್ತೇನೆ. ನೀವು ಕೆಲಸಕ್ಕೆ ಬಾರದ ಕವಿತೆ ಕಟ್ಟಬಹುದಂತೆ. ನಾನು – ಕವಿಯ ಹೆಂಡತಿ, ಉಪನ್ಯಾಸ ಮಾಡಕೂಡದೊ ? ನನ್ನ ಉಪನ್ಯಾಸ ಬೇಕಿಲ್ಲದೆ ಹೋದರೆ ಆ ಕಾಗದವನ್ನಾದರೂ ನೀವು ಓದಿ–ನಾನು ಕೇಳ್ತೇನೆ : ಅದರಲ್ಲಿ ನಿಮ್ಮ ಕವಿತೆ ಕೊಂಡಾಡಿರಬಹುದು.

ಕವಿ : (ಅವನ ಮುಖದಲ್ಲಿ ಅರ್ಧ ಸಂತೋಷದ ಮುಗುಳುನಗೆ, ಇನ್ನು ಅರ್ಧ ಆಶ್ಚರ್ಯದ ನೋಟ) ಹಾಗಂತೀಯ.... ಹ್ಞು....ಇರಲಿ.....ನೀನೆ ಓದು, ನಾನು ಕೇಳ್ತೇನೆ (ಕಾಗದ ಕೊಡಹೋಗುವನು)

ಕ.ಹೆಂ. : (ಹುಸಿ ಬಿಗುಮಾನದಿಂದ) ಇನ್ನೊಬ್ಬರ ಗುಟ್ಟು ನಮಗೇಕೆ ಅಂದ್ರೆ, ನೀವೇ ಓದಿಕೊಳ್ಳಿ.

ಕವಿ : (ಪುಸಲಾಯಿಕೆಯ ದನಿಯಲ್ಲಿ) ಇರಲಿ ಕಂಡಿದೀನಿ ಓದೆ ; ಓದೇ.

ಕ.ಹೆಂ. : ಮೊದಲಿಂದ ಕಡೆಯವರೆಗೆ ಕೇಳುವಹಾಗಿದ್ದರೆ ಓದುತೀನಿ. ಮಧ್ಯ ಕಿತ್ತುಕೊಳ್ಳಕೂಡದು.

ಕವಿ : ಹೂ ಕಣೆ ಮಹಾರಾಯಿತಿ. ಕವಿತೆ ಓದಿಸುವುದಕ್ಕಿಂತ ಕಷ್ಟವಾಗಿದೆಯಲ್ಲ

ಸಮಯಕ್ಕೆ ಸಹಾಯ ಒದಗಿಬಂತು ಸಾಲ ಕೊಟ್ಟಿರು ಮಹಾರಾಯ್ತಿ.

ಕ.ಹೆಂ. : ಅದೆಲ್ಲ ಕಟ್ಟಿಟ್ಟುಬಿಡಬೇಕು. ಕೈಗೆ ಕೂಪನ್ ಸಿಕ್ಕಿದಷ್ಟು ಸುಲಭವಾಗಿ ಕಾಸು ಸಿಕ್ಕುತ್ತೆ ಅಂತ ತಿಳಿದಿದ್ದೀರೇನು? ಅದಿರಲಿ. ನನ್ನ ಕೂಪನ್ ನೀವು ಓದಿ ಕೊಂಡಿರಿ. ನಿಮ್ಮ ಕಾರ್ಡು ನಾನು ಓದಿಕೊಳ್ಳುತ್ತೇನೆ (ಎಂದು ಮನಸ್ಸಿನಲ್ಲಿ ಓದಿಕೊಳ್ಳುವಂತೆ ನಟಿಸುವಳು)

ಕವಿ : ಬರೆದಿರುವುದು ಕಾರ್ಡು. ಗುಟ್ಟೇನು ಬಂತು ಗುಟ್ಟು, ಗಟ್ಟಿಯಾಗೇ ಓದು. ಓದುವ ಶ್ರಮವೇ ತಪ್ಪಿತು.

ಕ.ಹೆಂ. : (ತಡವರಿಸುತ್ತ ಓದುವಳು) "ಶ್ರೀಯುತ ಕೆ.ವ್ಹಿ. ಗುಂಡೂರಾಯರಿಗೆ ವಿನಂತಿ. ನಿಮ್ಮ ಕವಿತಾ ಹೊತ್ತಗೆಯನ್ನು ನಮ್ಮ ಸಂಪಾದಕ ಮಂಡಲದವರ ಮುಂದೆ ಇಟ್ಟೆವು. ಕವಿತಾಪುಸ್ತಕ ಪ್ರಕಟನೆ ಆರ್ಥಿಕ ದೃಷ್ಟಿಯಿಂದ ನಮಗೆ ನಷ್ಟಕರವಾದ್ದರಿಂದ ಮಾಲೆಯಲ್ಲಿ ಕವಿತಾ ಹೊತ್ತಗೆ ಪ್ರಕಟಿಸಲು ಸದ್ಯಕ್ಕೆ ಸಾಧ್ಯವಿಲ್ಲವೆಂದೂ ಆದ್ದರಿಂದ ಉಭಯತ್ರರಿಗೂ, ಪ್ರಯೋಜಕವಾಗುವಂತೆ ೧೫೦ ಪುಟದಷ್ಟು ಪರಿಮಿತಿಯಲ್ಲಿ ಏನಾದರೊಂದು ಸುರಸ ಸಾಮಾಜಿಕ ಕಾದಂಬರಿ ಬರೆದು ಕಳಿಸಿದರೆ, ಅದು ಯೋಗ್ಯವಿದ್ದಲ್ಲಿ, ಯೋಚನೆ ಮಾಡಲಾಗುವುದೆಂದೂ ಅಭಿಪ್ರಾಯಪಟ್ಟಿದ್ದಾರೆ. ಪ್ರಕಟಿಸುವ ಉದ್ದೇಶವಿಲ್ಲದ್ದರಿಂದ ನಿಮ್ಮ ಕವಿತೆಗಳನ್ನು ಓದುವ ಶಕ್ಯವಿಲ್ಲವೆಂದೂ ಮಂಡಲ ಠರಾವು ಮಾಡಿದೆ. ಆದ್ದರಿಂದ, ಕಾದಂಬರಿಯೊಂದನ್ನು ಬರೆದು ಕಳಿಸುತ್ತೀರೆಂದು ನಂಬೋಣವೆ?"–ಸರಿ ; ಯಾವನೋ ರುಜು ಮಾಡಿದ್ದಾನೆ. ಸರಿಯಾಗಿ ಅರ್ಥವಾಗುವುದಿಲ್ಲ.

ಕವಿ : ಅಲ್ಲ, ಪ್ರಕಟಿಸದೆಹೋದರೆ ಚಿಂತೆಯಿಲ್ಲ : ಓದುವುದಕ್ಕೇನು ಬಂದಿತ್ತು ಅವರಿಗೆ ಧಾಡಿ? ಅದೇನು ಅಹಂಕಾರ? ಹ್ಞ! ತುಚ್ಛರು ! ಅಲ್ಪಜ್ಞರು! ಕವಿತೆಯ ಮಹತ್ವ ಅವರಿಗೇನು ತಿಳಿದೀತು ! ಮಹತ್ವ ಇರಲಿ, ಅರ್ಥವಾದರೂ ಆದೀತೆ ಅವರಿಗೆ? (ಎಂದು ಶತಪಥ ತಿರುಗಾಡತೊಡಗುವನು ; ಯೋಚನೆಯಲ್ಲಿರುವಂತಿರುವನು)

ಕ.ಹೆಂ. : (ಈ ಹೊತ್ತಿನಲ್ಲಿ ಕವರು ಹರಿದು ಅಲ್ಲೊಂದು ವಾಕ್ಯ ಇಲ್ಲೊಂದು ವಾಕ್ಯದಂತೆ ಮನಸ್ಸಿನಲ್ಲಿ ಓದಿ ಕೊಳ್ಳುತ್ತಿರುವಳು)

ಕವಿ : (ಸರ್ರನೆ ತಿರುಗಿ) ಅದು ಯಾವುದು ಕಾಗದ? (ಕಿತ್ತು ಕೊಳ್ಳಹೋಗುವನು)

ವಿದ್ಯಾವತಿಯಾಗಿದ್ದ ಪಕ್ಷದಲ್ಲಿ, ಕಡೆಗೆ ಹೆಂಡತಿಗಾದರೂ ಓದಿ ಹೇಳಬೇಕು. ಈ ದೃಷ್ಟಿಯಿಂದ ಕವಿಯ ಹೆಂಡತಿಗೂ ಒಂದು ಸ್ಥಾನವಿದೆ.....

ಕವಿ : ಸಾಕುಮಾಡೆ ಸದ್ಯ. ಉಪದೇಶ ಮಾಡ್ತಾನೆ, ಉಪ ದೇಶಾನ. ಕೊಡಿಲ್ಲಿ (ಎಂದು ಕಾಗದ ಕಿತ್ತುಕೊಳ್ಳ ಹೋಗುವನು)

ಕ.ಹೆಂ. : ಮರೆತಿರಲ್ಲಾ ಕೊಟ್ಟ ಮಾತು. ಕವಿ ವಚನ ಭ್ರಷ್ಟನಾಗಬಹುದೆ? ಎಲ್ಲೋ ಇನ್ನು ಕೊಂಚ ಇದೆ. ದಯವಿಟ್ಟು ಲಾಲಿಸಿ ಅಂದ್ರೆ.

ಕವಿ : (ಹೆಂಡತಿಯನ್ನು ತಿಂದುಬಿಡುವಂತೆ ದುರಗುಟ್ಟಿಕೊಂಡು ನೋಡಿ, ಕುಕ್ಕರಿಸಿಕೊಳ್ಳುವನು)

ಕ.ಹೆಂ. : (ಮುಂದುವರಿಸುವಳು) "ಮುಖ್ಯ ವಿಚಾರ ಏನೆಂದರೆ : ನಿಮ್ಮ ಕವಿತೆಗಳ ಕಾವ್ಯಗುಣ ಹೇಗಾದರೂ ಇರಲಿ ; ನಿಮ್ಮ ಭಾಷಾಜ್ಞಾನ ಚೆನ್ನಾಗಿದೆ, ಶಬ್ದ ಸಂಪತ್ತು ವಿಪುಲವಾಗಿದೆ. ನೀವು ನಿಮ್ಮ ಕಾಗದದಲ್ಲಿ ಸೂಚಿಸಿರುವಂತೆ ನಮ್ಮ ಕಚೇರಿಯಲ್ಲಿ ಕೆಲಸ ಮಾಡಲು ಇಷ್ಟವುಳ್ಳವರಾಗಿದ್ದರೆ ನಾಳೆ ಸಂಜೆ ನಮ್ಮನ್ನು ಬಂದು ಕಾಣಬಹುದು. ಸಂಬಳ ಮುಂತಾದ ವಿವರಗಳನ್ನು ಮುಖತಃ ತೀರ್ಮಾನ ಮಾಡೋಣ. ನಮ್ಮ ಕಚೇರಿಯಲ್ಲಿ ಕೆಲಸ ಮಾಡಿ ಲೋಕಾನುಭವ ಪಡೆದರೆ, ನೀವು ನಿಜವಾದ ಕವಿಗಳಾದರೂ ಆಗಬಹುದು--ಇತಿ ನಿಮ್ಮ ಶ್ರೇಯೋಭಿಲಾಷಿ, ನೀಲಕಂಠ ಶರ್ಮಾ, ಸಂಪಾದಕ, ಸಕಲ ಕರ್ಣಾಟಕ." (ತುಸ ನಿಲ್ಲಿಸಿ) ........ ಓಹೋ, ಮರೆತೇ ಹೋಯ್ತು, ಕಡೆಯಲ್ಲಿ ಒಂದು ವಾಕ್ಯ ಸೇರಿಸಿದ್ದಾರೆ : "ನಿಮ್ಮ ಒಂದು ಕವಿತೆ ಕೈ ತಪ್ಪಿನಿಂದ ಸ್ಟಾಪ್‌ಪ್ರೆಸ್ ಕಾಲಮಿನಲ್ಲಿ ಅಚ್ಚಾಗಿಹೋಗಿದೆ! ಅದನ್ನು ಪ್ರಕಟಿಸುವ ಉದ್ದೇಶ ನಮಗೆ ಇರಲಿಲ್ಲ. ನಿಮ್ಮ ಕವಿತೆಗಳನ್ನು ಬೇಕಾದಾಗ ಬಂದು ತೆಗೆದುಕೊಂಡು ಹೋಗಬಹುದು."

ಕವಿ : ಓದಿದ್ದು ಮುಗಿಯಿತು ತಾನೆ? (ಎಂದು ಕೋಪದಿಂದ ಎದ್ದು ನಿಲ್ಲುವನು)

ಕ.ಹೆಂ. : ಈಗಲಾದರೂ ನನ್ನ ಮಾತು ಕೇಳುತ್ತೀರೋ ಹೇಗೆ? ಕಂಟ್ರಾಕ್ಟರ್ ಕೆಂಪಣ್ಣನ ಮನೆಗೆ ಹೋಗಿ, ಇಲ್ಲ 'ಸಕಲ ಕರ್ಣಾಟಕ' ಕಚೆರೀಗೆ ಹೋಗಿ. ಎರಡೂ ಬೇಡವಾದರೆ, ಕೆಲಸವಿಲ್ಲದವರ ಕಾಮಧೇನು ಹೊಸದಾಗಿ ಬಂದಿದೆಯಲ್ಲ–ಏರ್‌ಕ್ರಾಫ್ಟು–ಅದಕ್ಕೆ ಸೇರಿಕೊಳ್ಳಿ. ಈಗಿನ

ನಿನ್ನ ಕೈಲಿ ಕಾಗದ ಓದಿಸುವುದು. ಇರಲಿ, ಓದು (ಕಾಗದ ಕೊಟ್ಟು ಆರಾಮವಾಗಿ ಕುಳಿತುಕೊಳ್ಳುವನು)

ಕ.ಹೆಂ. : (ಕಾಗದ ಓದಲು ಪ್ರಾರಂಭಿಸುವಳು) ಕೊಟ್ಟ ಮಾತು ಮರೆಯದೆ ಲಾಲಿಸಿ : "ಮ॥ ರಾ॥ (ಗುಂಡೂರಾಯರಿಗೆ ವಿಜ್ಞಾಪನೆ. (ಕವಿಯ ಮುಖ ಸಂಪೂರ್ಣವಾಗಿ ವಿಕಸಿತವಾಗಿರುವುದು) ನಿಮ್ಮ ಹಿತಕ್ಕಾಗಿ ಈ ಕಾಗದ ಬರೆಯುತ್ತಿದ್ದೇವೆ. ಆದ್ದರಿಂದ ನಮ್ಮ ಮಾತುಗಳನ್ನು ಅಪಾರ್ಥ ಮಾಡಿಕೊಳ್ಳಬಾರದು. (ಕವಿಯ ಮುಖದಲ್ಲಿ ಪ್ರಶ್ನಾರ್ಥಕ–ಕುತೂಹಲ ಸೂಚಕ ಹುಬ್ಬಗಂಟು ಮೂಡುವುದು). ಕವಿ ಎಂದು ನೀವೇನೊ ನಿಮ್ಮ ವಿಳಾಸದಲ್ಲಿ ಕೆರೆದುಕೊಂಡುಬಿಟ್ಟದ್ದೀರಿ. ; ನಿಮ್ಮ ಲೆಟರ್‌ಹೆಡ್ಡಿನಲ್ಲೂ ಅಲಂಕಾರಾಕ್ಷರಗಳಲ್ಲಿ ಆ ಪವಿತ್ರನಾಮ ಮೆರೆಯುತ್ತಿದೆ. ನಿಜವಾದ ಕವಿಗೆ ವಿನಯ ಸಹಜ ಗುಣ. ನಿಮ್ಮ ಕವಿತೆಗಳನ್ನು ನಾವೇನೊ ಬಹು ಶ್ರಮಪಟ್ಟು, ವಿಮರ್ಶನ ದೃಷ್ಟಿಯಿಂದ, ನಿಷ್ಪಕ್ಷಪಾತ ಬುದ್ಧಿಯಿಂದ ಪರಿಶೀಲಿಸಿದೆವು. ಕವಿತಾ ಪ್ರಪಂಚದಲ್ಲಿ ನೀವು ಸ್ವಯಮಾಚಾರ್ಯ ಪಂಥಕ್ಕೆ ಸೇರಿದವರಾಗಿ ಕಾಣುತ್ತೀರಿ. (ಹುಬ್ಬುಗಂಟು ಸಡಿಲವಾಗುವುದು). ಕವಿಗೆ ಸ್ವಾತಂತ್ರ್ಯವೇನೊ ಬೇಕು; ಆದರೆ ಸ್ವಾಚ್ಛಂದ್ಯ ಸಲ್ಲದು. ಗದ್ಯದಲ್ಲಿ ಪದ್ಯದ ಗಂಧವಿದ್ದರೆ ಕೆಲವು ವೇಳೆ ಅದೂ ಒಂದು ಸೊಬಗು ; ಆದರೆ ಇಡಿಯ ಪದ್ಯವೇ ಗದ್ಯವಾಗಿಬಿಟ್ಟರೆ, ಪಾದಗಳನ್ನು ಒಂದೇ ಅಳತೆಗೆ ಕತ್ತರಿಸಿ ಬರೆದಮಾತ್ರಕ್ಕೆ, ಅದು ಪದ್ಯವಾಗದು. ನಿಮ್ಮ ಕವಿತೆಗಳಲ್ಲಿ ನಿಜವಾಗಿಯೂ ಚೆನ್ನಾಗಿರುವ ಕೆಲವು ಪ್ರಸಿದ್ಧ ಕವಿಗಳಾದ ಮಾರ್ತಾಂಡರ ಕವಿತೆಗಳನ್ನು ನೆನಪಿಗೆ ತರುತ್ತವೆ. (ಮುಖ ಪೆಚ್ಚಾಗುತ್ತ ಬರುವುದು). ಕವಿಯಾಗಬಯಸುವವನು ತನ್ನ ಕಿರುಸೊಡರು ಹೊತ್ತಿಸಿದರೂ ಸಾಕು ; ಕದ್ದ ಎಲೆಕ್ಟ್ರಿಕ್ ಬಲ್ಬು ತಂದು ಸ್ವಿಚ್ಚು ಹಾಕಬಾರದು. ಕದ್ದ ಬಲ್ಬುಗಳು ಗುಜರಿಗೆ ಬಂದಾಗ ಚಾಣಾಕ್ಷರು ಅವನ್ನು ಸುಲಭವಾಗಿ ಪತ್ತೆ ಹಚ್ಚಬಹುದು (ತಡೆಯಾಲಾರದೆ ನಗುವಳು; ಕವಿ ಕಿಡಿ ಕಿಡಿಯಾಗಿರುವುದು ವ್ಯಕ್ತವಾಗುವುದು).

"ಕೊನೆಯದಾಗಿ ಒಂದು ಮಾತು : ಕವಿ ತನ್ನ ಕವಿತೆಗಳನ್ನು ಪ್ರಕಟನೆಗೆ ಕಳಿಸುವ ಮುನ್ನ ಯಾರಾದರೊಬ್ಬರು ಕಾವ್ಯ ತಿಳಿದ ಆಪ್ತರಿಗೆ ತೋರಿಸುವುದು ಲೇಸು ; ಮದುವೆಯಾಗಿದ್ದು, ಹೆಂಡತಿ

ಕವಿ : ದುಡ್ಡು, ನನ್ನ ಚಿನ್ನ !

ಕ.ಹೆಂ. : ಖಂಡಿತವಾಗಿ ಪತ್ರಿಕಾ ಕಚೇರಿಗೆ ಹೋಗುತ್ತೀರೋ ?

ಕವಿ : ನನ್ನಾಣೆಗೂ, ನಿನ್ನಾಣೆಗೂ.

ಕ.ಹೆಂ. : ಬಿಡ್ತು ಅನ್ನಿ ; ಹಾಗೆಲ್ಲ ಅನ್ನಬೇಡಿ (ಎಂದು ಮುಗಳು ನಗೆ ನಗುತ್ತ, ಪ್ರಸನ್ನವದನಳಾಗಿ, ಹಣವಷ್ಟನ್ನೂ ಕೊಟ್ಟುಬಿಡುವಳು)

ಕವಿ : ಇದೇನು! ಅಷ್ಟೂ ಕೊಟ್ಟು ಬಿಟ್ಟೆ! ಕಣಕ್ಕೆ? ಗೌರಿ ಹಬ್ಬದ ವಚ್ಚಕ್ಕೆ? ಮಗುವಿನ ಹುಟ್ಟಿದ ಹಬ್ಬಕ್ಕೆ?

ಕ.ಹೆಂ. : ನಾವು ನೆಮ್ಮದಿಯಾಗಿದ್ದರೆ ಅದೇ ಗೌರೀಹಬ್ಬ : ಮಗುವಿನ ಹೊಟ್ಟೆ ತುಂಬ ಹಾಲು ಹಾಕಿದರೆ ಅದೇ ಅದರ ವರ್ಷದ ಹೆಚ್ಚು, ಆಯುಸ್ಸಿನ ಹೆಚ್ಚು.

ಕವಿ : ನಿಜ, ಶಾರದೆ ಇನ್ನು ಮೇಲೆ ನಮಗೆ ನಿತ್ಯ ಹಬ್ಬ – ದೇವರ ದಯವಿದ್ದರೆ. ನೆಮ್ಮದಿಯಾದ ಸರಳ ಜೀವನವೇ ಒಂದು ಸುಂದರ ಕಾವ್ಯ!

– ತೆರೆ –

ಕಾಲದಲ್ಲಿ ಹಾಗೆ ಕರೆದು ಕೆಲಸ ಕೊಡುವವರು ಯಾರೂ ಅಂದ್ರೆ– ಅದರಲ್ಲೂ ಕವಿಗೆ ! (ನಗುವಳು)

ಕವಿ : (ರೇಗಿ ರೇಗಿ ಬೀಳುತ್ತ) ಯಾಕೇ, ಸುಮ್ಮನೆ ಕವಿ ಕವಿ ಕವಿ ಅಂತ ನನ್ನ ಮೋರೆ ತಿವಿಯುತ್ತೀ? ನಾನು ಕವಿಯಾದರೆ ನೀನು ಕವಿಯ ಹೆಂಡತಿ–

ಕ.ಹೆಂ. : ಕಂಟ್ರಾಕ್ಟರಾದರೆ ಕಂಟ್ರಾಕ್ಟರ ಹೆಂಡತಿ !

ಕವಿ : (ನಡುವೆ ಬಾಯಿಹಾಕಿ) ಹೌದು. ನಾನು ಏನು ಆಡಿದರೂ ಮಾಡಿದರೂ ಅದಕ್ಕೆ ವಿರುದ್ಧವಾದ ಸ್ತ್ರೀ ಜಾತಿ ನೀನು. ಸಾಮಾನ್ಯ ಸ್ತ್ರೀಯೆ ? ಪತ್ರಿಕಾ ಸಂಪಾದಕರು ನಿನಗೆ ಒಂದು ಘನವಾದ ಪದವಿ ಬೇರೆ ಕೊಟ್ಟುಬಿಟ್ಟಿದಾರೆ. ಅದು ಬೇರೆ ಒಂದು ಜಂಬ. (ದನಿಯನ್ನು ಸಾಮಾನ್ಯ ಮಟ್ಟಕ್ಕೆ ತಿರುಗಿಸಿ) ಹೋಗಲಿ, ನಾನು ಕೇಳಿದ್ದು ಕೊಡುತೀಯೋ– 'ಸಕಲ ಕರ್ಣಾಟಕ' ಕಚೇರಿಗೆ ಹೋದರೆ ?

ಕ.ಹೆಂ. : ಯಾಕೆ, ಕೆಂಪಣ್ಣನ ಹತ್ತಿರ ಕೆಲಸ ಮಾಡುವುದಿಲ್ಲವೆ ? ಅವನು ಸಂಬಳ ಹೆಚ್ಚಾಗಿ ಕೊಟ್ಟಾನು ಅಂತ ಕಾಣುತ್ತೆ. ಅಲ್ಲದೆ, ಕಾಲಾನುಕಾಲಕ್ಕೆ ನೀವೆ ಕಂಟ್ರಾಕ್ಟರ್ ಆದರೂ ಆಗಬಹುದು; ಭಾರಿ ಮನೆ ಕಟ್ಟಿಕೊಳ್ಳಬಹುದು. ಹೇಗೂ ಯುದ್ಧ ಕಾಲ ; ಅದೃಷ್ಟವಿದ್ದರೆ ಲಕ್ಷಾಂತರ ರೂಪಾಯಿಸಂಪಾದಿಸಬಹುದು. ಅದು ಬೇಡದೆ ಹೋದರೆ ಏರ್‌ಕ್ರಾಫ್ಟಿಗಾದರೂ ಹೋಗಿ. ಕಡೆಯಪಕ್ಷ, ತಿಂಗಳಿಗೆ ೧೦೦ ರೂಪಾಯಿಯಾದರೂ ಸಿಕ್ಕಬಹುದು.

ಕವಿ : ಅಯ್ಯೋ ಹುಚ್ಚೀ ! ನನ್ನ ಕಲ್ಪನಾಶಕ್ತಿ ಒಂದು ಕಾಲಿನಲ್ಲಿ ಕುಂಟಿದರೆ ನಿನ್ನದು ನಾಗಾಲೋಟದಲ್ಲಿ ಓಡುತ್ತೆ ! ಭಲಾ ! ಅಲ್ಲವೇ, ನಾನು ಕವಿಯಾಗಬೇಕೂ ಅಂತ ಹಣೆಯಲ್ಲಿ ಬರೆದಿರುವಾಗ ಕಂಟ್ರಾಕ್ಟರಾಗು ಅಂತೀಯಲ್ಲ ನೀನು ? Poetcraft ಬಿಟ್ಟು Aircraftಗೆ ಹೋಗು ಅಂತೀಯಲ್ಲ ?

ಕ.ಹೆಂ. : ನೀವು ಈಗಾಗಲೇ ಕವಿಯಾಗಿದ್ದೀರಲ್ಲವೆ ?

ಕವಿ : ಹಾಗಾದರೆ ನೀನು ಕವಿಯ ಹೆಂಡತಿಯಾಗಿದ್ದೀಯಲ್ಲವೆ ? (ನಾಟಕೀಯವಾದ ದೀನ ದನಿಯಲ್ಲಿ) ದಯವಿಟ್ಟು ನಾನು ಕೇಳಿದ್ದನ್ನು ಕೊಡು ದೇವಿ ?

ಕ.ಬೆಂ. : ಏನನ್ನ ?

# ಮೊದಲ ನೋಟ

[ರಾಮಶಾಸ್ತ್ರಿಯ ಮಲಗುವ ಕೋಣೆ. ಮಂಚದ ಮೇಲೆ ಹಾಸಿಗೆಯ ಸುರುಳಿ; ಕೆಳಗೆ ಪಕ್ಕದಲ್ಲಿ, ಒಂದೆರಡು ಪೆಟ್ಟಿಗೆಗಳು; ಒಂದು ಬಟ್ಟೆಯ ನಿಲು, ಅದರ ಮೇಲೆ ಬಟ್ಟೆ ಮುಂತಾದ್ದು. ರವಿವರ್ಮನ ತಿಲೋತ್ತಮೆ ಮೊದಲಾದ ಒಂದೆರಡು ಚಿತ್ರಗಳನ್ನು ಗೋಡೆಗೆ ತೂಗ ಕಟ್ಟಿದೆ.

ಎದುರುಗಡೆ, ಮಂಚದ ಪಕ್ಕದಲ್ಲಿ ಒಂದು ಬಾಗಿಲು–ಹಜಾರಕ್ಕೆ ಹೋಗುವದು; ರಂಗದ ಬಲಭಾಗದಲ್ಲಿ ಮತ್ತೊಂದು ಬಾಗಿಲು–ಹೊರಗಡೆಯಿಂದ ಬರುವದು.

ರಾಮಶಾಸ್ತ್ರಿ ಮಂಚದಮೇಲೆ ಕುಳಿತು, ಏನೋ ಲೆಕ್ಕಾಚಾರ ಹಾಕುತ್ತಿರುವನು]

ಕೆಂಪಿ : (ಪೊರಕೆ ಹಿಡಿದುಕೊಂಡು ಒಳಕ್ಕೆ ಬಂದು) ಬುದ್ಯೋರ, ಯಾರೋ ಬಂದವ್ರೆ. ನಿಮ್ಮನ್ನ ಕೇಳದ್ರು.

(ರಾಮ) ಶಾಸ್ತ್ರಿ : ಯಾರು ?

ಕೆಂಪಿ : ಯಾರೋ ಕಾಣೆ. ಒಳ್ಳೆ ದೊಡ್ಡಾಳು.

ಶಾಸ್ತ್ರಿ : ಎಲ್ಲಿ, ಈ ಕಡೆ ಬಾಗಿಲು ತೆಗಿ. ಅವರನ್ನ ಒಳಕ್ಕೆ ಕರಿ.

[ಕೆಂಪಿ ಪಕ್ಕದ ಬಾಗಿಲು ತೆಗೆದು, ಹೊರಕ್ಕೆ ಹೋಗುವಳು. ಸೀನಪ್ಪ ಪ್ರವೇಶಿಸುವನು.]

ಓಹೋಹೋ, ಏನು ಸೀನಪ್ಪ ! ಬಹಳ ಅಪರೂಪ. ಜೋನ್‌ಟಿಕೆಟ್ (Zone Ticket) ಪ್ರಯಾಣ ಎಲ್ಲ ಪೂರೈಸಿತೋ? ಎಂದು ಬಂದೆ? ಏನು ಕಥೆ ?

ಸೀನಪ್ಪ : ನಿನ್ನೆ ಬಂದೆ ಶಾಸ್ತ್ರಿ. ಬೊಂಬಾಯಲ್ಲಿ ನಿನ್ನ ಪೂರ ನೆನಸಿಕೊಂಡೆ ನೋಡು. ಕಣ್ಣಿಗೆ ಹಬ್ಬ ಕಣಯ್ಯ ಅಲ್ಲಿ ! ನೀನು ಶಾಸ್ತ್ರಿ ಅಂತ ಕಾಶಿ ರಾಮೇಶ್ವರದ ಯಾತ್ರೆ ಮಾಡೋ ಶಾಸ್ತ್ರಿ ಅಲ್ಲ; ಅಚ್ಚು ಕಟ್ಟಾಗಿ ಶಾಲು ಹೊದೆದುಕೊಂಡು ಗಂಧಾಕ್ಷತೆ ಇಟ್ಟುಕೊಳ್ಳೋಕೆ ಮಾತ್ರ ಶಾಸ್ತ್ರಿ ಅಷ್ಟೆ. ಮಿಕ್ಕದ್ದರಲ್ಲೆಲ್ಲ ನನ್ನ ಮೀರಿಸಿಬಿಟ್ಟಿದ್ದೀಯೆ ನೀನು! ನಿನ್ನಂಥ ರಸಿಕ ಬೊಂಬಾಯಿಗೆ ಹೋಗ ಬೇಕಯ್ಯ ! ನಿನಗೇನು ದುಡ್ಡಿಗೆ ಕಡಮೆಯೆ? ಮುಂದುಗಡೆ ಬಂಗಲೆ ಬಾಡಿಗೇನೇ ತಿಂಗಳಿಗೆ ಮೂವತ್ತೈದುರೂಪಾಯಿ ಬರುತ್ತೆ; ಜೊತೆಗೆ ಬಡ್ಡಿಗಳು.

**ಪಾತ್ರಗಳು**

ರಾಮಶಾಸ್ತ್ರಿ ೪೦–೪೫ ವರ್ಷ ವಯಸ್ಸಿನ ವಿಧುರ
ಸೀನಪ್ಪ ಈತನ ಗೆಳೆಯ
ಕೆಂಪಿ ರಾಮಶಾಸ್ತ್ರಿಯ ಮನೆಗೆಲಸದವಳು
ಕೆಂಪ ಕೆಂಪಿಯ ಗಂಡ

ಕಾಲ : ೧೯೪೨ ಮಾರ್ಚಿ.
ಸ್ಥಳ : ಬೆಂಗಳೂರು.

ಒಂದು ಗಂಟನ್ನು ನೋಡಿ) ಇದೇನು, ಏನೋ ಹೊಸಬಟ್ಟೆಯ ಗಂಟು ಇದ್ದಹಾಗೆ ಇದೆ ? ಏನು ಪಂಚೆಯೋ ? ಅಲ್ಲ ಬಣ್ಣಬಣ್ಣವಾಗಿ ಕಾಣ್ತಾ ಇದೆ........

ಶಾಸ್ತ್ರಿ : ಇದು..........ಹಾಗೇ ಸುಮ್ಮನೆ ತಂದಿದ್ದೇನೆ.......... ವಾಪಸು ಕೊಡಬೇಕು.

ಸೀನಪ್ಪ : (ಗಂಟು ಬಿಚ್ಚೇಬಿಡುವನು)

ಶಾಸ್ತ್ರಿ : ಸೀರೆ....ಕುಪ್ಪಸ........ನನ್ನ ಅಕ್ಕನ ಮಗಳ ಲಗ್ನ.....

ಸೀನಪ್ಪ : ಅಕ್ಕ ! ಎಲ್ಲಿಯ ಅಕ್ಕನೋ, ನನಗೆ ಗೊತ್ತಿಲ್ಲದವಳು ? ಕಣ ಹೊಲಿಸಿಬಿಟ್ಟಿದ್ದಿ !

ಶಾಸ್ತ್ರಿ : ನಮ್ಮ ದೊಡ್ಡಪ್ಪನ ಮಗಳು ಕಣಯ್ಯ. ನನ್ನ ಕಂಡರೆ ಅವಳಿಗೆ ತುಂಬಾ ವಿಶ್ವಾಸ. ಮದುವೆಗೆ ಬರಬೇಕು ಅಂತ ಕಾಗದ ಹಾಕಿದಾಳೆ. ಅದಕ್ಕೇ ಸೀರೆ ತಂದೆ. ಚೆನ್ನಾಗಿದೆಯೋ?

ಸೀನಪ್ಪ : ನೀನು ಆರಿಸಿ ತಂದಮೇಲೆ ಕೇಳಬೇಕೇನಯ್ಯ, ಝೋಕಾಗಿದೆ. ವಾಪಸೂ ಕೊಡಬೇಕಾಗಿಲ್ಲ, ಏನೂ ಇಲ್ಲ ಸುಮ್ಮನೆ ಇಟ್ಟುಕೋ. ಆದರೆ........ಒಂದೇ ನೋಡು ನಿನಗೇನಯ್ಯಾ ಧಾಡಿ ಬಂದಿರೋದು? ಸ್ವಂತ ಅಕ್ಕನ ಮಗಳಿಗೆ ಒಂದು ಜರಿಯ ಸೀರೆ ಕುಪ್ಪಸ ಓದಿಸಿದರೆ ನಿನಗಾಗುವ ನಷ್ಟವೇನು? ಹೇಗಿದ್ದರೂ ಒಳ್ಳೇ ಧರ್ಮಾವರದ ಸೀರೆ ತಂದಿದ್ದೀ. ಇನ್ನು ಹತ್ತು ಹದಿನೈದು ಜಾಸ್ತಿ ಕೊಟ್ಟಿದ್ದರೆ ಒಳ್ಳೇ ಜರಿಯ ಕಾಶೀ ಪೀತಾಂಬರ ಬರುತ್ತಿತ್ತು. (ಹೊರಡಲುದ್ಯುಕ್ತನಾಗಿ ಏಳುವನು).

ಶಾಸ್ತ್ರಿ : ನೋಡು, ನನ್ನ ಭಾವ ಬಡವ. ಮದುವೆಗೂ ಏನಾದರೂ ಸಹಾಯ ಮಾಡಬೇಕು ಅಂತ ಇದೀನಿ. ಭಾರಿ ಸೀರೇನೂ ತರೋದು ಅಂದ್ರೆ– ಈಗಿನ ಕಾಲದಲ್ಲಿ........

ಸೀನಪ್ಪ : ಸರಿಯೆ, ನೀನು ಹೇಳೋದು (ಹೊರಟು ನಿಲ್ಲುವನು.)

ಶಾಸ್ತ್ರಿ : ಏನು, ಹೊರಟೇ ಬಿಟ್ಟೆಯಲ್ಲ? ನಿನ್ನ ಟ್ರಿಪ್ ವಿಚಾರ ಒಂದೂ ಹೇಳಲೇ ಇಲ್ಲ?

ಸೀನಪ್ಪ : ಹಾಗೇ ಸ್ವಲ್ಪ ಸುತ್ತಾಡಿಕೊಂಡು ಬೇಗ ಮನೆಯ ಕಡೆಗೆ ಹೋಗಬೇಕು. ನಾಳೆ ಬೆಳಗ್ಗೆ ಠಾಕೋಠಾಕ್ ಏಳು ಗಂಟೆಗೇ ಬಂದುಬಿಡುತ್ತೇನೆ........

ಶಾಸ್ತ್ರಿ : (ತಲೆ ಕೆರೆಯುತ್ತ) ಅಷ್ಟು ಹೊತ್ತಿಗೆ ಮುಂಚೆಯೆ?.....ಎಂಟಕ್ಕೆ ಬಂದುಬಿಟು..... ಕಾಫಿಗೀಫಿ ಕಾಸಿ ಸಿದ್ಧವಾಗಿಟ್ಟಿರುತ್ತೀನಿ (ಎಂದು ಪಕ್ಕದ ಬಾಗಿಲು ತೆಗೆಯುವನು)

ಶಾಸ್ತ್ರಿ : ಏನು ಬಂಗಲೆಯೋ, ಏನು ಬಡ್ಡಿಯೋ. ಬಂಗಲೆ ಮೂರು ತಿಂಗಳಿಂದ ಖಾಲಿ. ಯಾರೂ ಬಂದಿಲ್ಲ. ಬಡ್ಡಿ ಕೊಡೋರೆಲ್ಲ ಸರಿಯಾಗಿ ಬಡ್ಡಿ ಕೊಟ್ಟರಲ್ಲವೆ?

ಕೆಂಪಿ : (ಪೊರಕೆ ಹಿಡಿದುಕೊಂಡೇ ಒಳಕ್ಕೆ ಬಂದು) ಬುದ್ದಿ. ಮನೆ ಎಲ್ಲ ಗುಡಿಸಾಯ್ತು ; ಓಟು ಅಂಗೇ ಒರಕ್ಕೋದ್ರೆ ಇಲ್ಲೀ ಕಸಾನೂ ಬಳಕೊಂಡು ಬುಡ್ತೀನಿ.

ಶಾಸ್ತ್ರಿ : ಆತುರ ಏನು. ಸ್ವಲ್ಪ ಹೊರಗಿರು. ಬಂದೋರನ್ನ ಏಳಿಸುತ್ತಾರೆಯೆ?

ಕೆಂಪಿ : ಆಗಲಿ ಬುದ್ದಿ. (ಹೊರಕ್ಕೆ ಹೋಗುವಳು)

ಸೀನಪ್ಪ : ಒಳ್ಳೆ ರಸಿಕ ಕಣೋ ಶಾಸ್ತ್ರೀ, ನೀನು; ಅಲ್ಲ, ನೋಡಿ ನೋಡಿ ಒಳ್ಳೆ ಪಡ್ಡೆ ಹುಡುಗೀನೇ ಮನೆಗೆಲಸಕ್ಕೆ ಇಟ್ಟುಕೊಂಡಿದ್ದೀಯೆ! ಶೂದ್ರೋಳಾದರೂ ಒಳ್ಳೆ ಚೆನ್ನಾಗಿದಾಳೆ ಕಣೋ!

ಶಾಸ್ತ್ರಿ : ಏ ಸೀನಪ್ಪ, ಮೆಲ್ಲಗೆ ಮಾತಾಡೋ. ಅವಳು ಏನಂದುಕೊಂಡಾಳು ನನ್ನ ವಿಷಯದಲ್ಲಿ (ಎಂದು ಎದ್ದುಹೋಗಿ ಎರಡು ಬಾಗಿಲುಗಳನ್ನೂ ಹಾಕಿಕೊಂಡು ಬಂದು ಕುಳಿತುಕೊಳ್ಳುವನು.) ನೋಡು ಸೀನು, ನನಗೂ ಹೆಂಡತಿ ಹೋಗಿ ಐದಾರು ವರ್ಷ ಆಯಿತು. ಮಕ್ಕಳೂ ಆಗಲಿಲ್ಲ. ವಯಸ್ಸು ನಲವತ್ತರ ಮೇಲಾಯಿತು. ಸರಿಯಾದ ಹೆಣ್ಣುಗಳೂ ಬಂದಿಲ್ಲ. ಹತ್ತುಹನ್ನೆರಡು ವರುಷದ ಹೆಣ್ಣುಗಳನ್ನು ಕಂಡೂ ಕಂಡೂ ಕೈಹಿಡಿಯೋಕೆ ನನ್ನ ಮನಸ್ಸೂಪ್ಪೊಲ್ಲ. ಆದರೂ...........ಆಪಾತ್ರದಲ್ಲಿ ಹರಿಯುವಷ್ಟು ನನ್ನ ಮನಸ್ಸು.........ಆದರೂನು,................ನೀನು ಹೇಳಿದ್ದು ನಾನು ಒಪ್ಪುತೀನಿ ಅನ್ನು. ಅಲ್ಲ, ಎಷ್ಟು ಚೆನ್ನಾಗಿದ್ದಾಳೆ ಕೆಂಪಿ! ಹೆಸರು ಒಂದಲ್ಲ ಅವಳೂ ಇರೋದು ಒಂದಲ್ಲ. ಅವಳು ಗಂಡನಿಗೆ ಎರಡನೇ ಹೆಂಡತಿಯಂತೆ. ಮದುವೆಯಾಗಿ ಮೂರು ವರ್ಷವಾಯಿತಂತೆ. ಇನ್ನೂ ಮಕ್ಕಳಿಲ್ಲವಂತೆ, ಪಾಪ. ನಾನು ಕೊಡೋ ಮೂರು ರೂಪಾಯಿ ಎಷ್ಟೋ ಅಷ್ಟೆ. ಗಂಡ ಸೌದೆ ಒಡೆದು ಏಳೆಂಟು ರೂಪಾಯಿ ಸಂಪಾದಿಸುತ್ತಾನಂತೆ. ಎಲ್ಲಾದರೂ ಒಂದು ಜವಾನನ ಕೆಲಸ ಕೊಡ್ಸಿ ಅಂತ ಕೇಳ್ತಾ ಇದಾಳೆ. ಎಲ್ಲಾದರೂ ಗಮನಕ್ಕೆ ಬಂದರೆ ಹೇಳಯ್ಯ.

ಸೀನಪ್ಪ : ಅಂದಹಾಗೇ ನಮ್ಮ ಬ್ಯಾಂಕಿನಲ್ಲಿ ಒಂದು ಕೆಲ್ಸ ಖಾಲಿಬೀಳುವ ಹಾಗಿದೆಯಯ್ಯ. ನಾಳೆ ವಿಚಾರಿಸಿ ನೋಡ್ತೇನೆ. (ಮಂಚದಮೇಲೆ

ಅದೇನು ಹೇಳಬಾರದ? ನನ್ ಕೆಲ್ಸ ಒಪ್ಪದೆ ಇದ್ದರೆ ಬುಡಸ್ಬುಡಿ, ಇಲ್ಲಿಗಂಟ ಗೆಯ್ದಿದ್ದಕ್ಕೆ ಸಂಬಳ ಕೊಟ್ಬುಡಿ. ಹೊಂಟೋಗ್ತೀನಿ.

ಶಾಸ್ತ್ರಿ : ಕೆಂಪಿ, ನಿನ್ನ ಕೆಲಸ ನನಗೆ ಪೂರ್ತಿಯಾಗಿ ಒಪ್ಪಿದೆ ನೋಡು. ನನ್ನ ಹೆಂಡ್ತಿ ಮಾಡ್ತಿದ್ದ ಕೆಲ್ಸಾನೆಲ್ಲ ಈಗ ನೀನೇ ಮಾಡ್ತಾಇದ್ದೀ. ಅಡಿಗೆ ಒಂದಿಲ್ಲ ಅಷ್ಟೆ. ಹಾಸಿಗೆ ಕೂಡ ಹಾಸಿಕೊಡ್ತಾಇದ್ದೀ.... ಆದ್ರೂನೂ, ನೋಡು.....(ಮಧ್ಯೇ ಕೆಂಪಿ ಗುಡಿಸತೊಡಗುವಳು. ಶಾಸ್ತ್ರಿ ಸ್ವಲ್ಪಹೊತ್ತು ಮೌನವಾಗಿದ್ದು ಮತ್ತೆ) ಬಹಳ ದಿವಸದಿಂದಲೂ ನಿನ್ನ ಏನೋ ಕೇಳಬೇಕು ಅಂತ ಮನಸ್ಸು ತುಡೀತ ಇದೆ. ಎಷ್ಟು ಬಿಗಿ ಹಿಡಿದುಕೊಂಡರೂ ಸಾಧ್ಯವಾಗಿಲ್ಲ. ಹಾಳು ಪ್ರೀತಿ ಅನ್ನೋದು ಕೆಟ್ಟದು ಕೆಂಪಿ. ಹೆಂಗಸರಿಗೆ ಅಂಗಡೀಲಿ ನೋಡಿದ ಒಂದು ಸೀರೇ ಮೇಲೆ ಪ್ರೀತಿ ಹುಟ್ಟಿತೂ ಅನ್ನು – ಅದನ್ನ ಗಂಡನ ಕೈಲಿ ತರಿಸಿಕೊಳ್ಳೋವರೆಗೂ ಅವರ ಜೀವ ಎಲ್ಲ ಸೀರೇ ಮೇಲೇ ಇರುತ್ತೆ. ಆ ಸೀರೆ ಉಡೋವರೆಗೂ ಗಂಡನ ಮೇಲಿನ ಪ್ರೀತಿ ಸಹ ಗೈರುಹಾಜರು. ನಿನಗೆ ಹಾಗನ್ಸೊಲ್ಲವೆ ಕೆಂಪಿ?

ಕೆಂಪಿ : (ಇಷ್ಟುಹೊತ್ತಿಗೆ ಕೆಂಪಿ ಕಸ ಗುಡಿಸುವುದು ಮುಗಿದಿರುತ್ತೆ) ಕೆಳೀಕ್ ಬಂದ್ರೆ ಹಾಸಿಗೆ ಹಾಸ್ಬುಡ್ತೀನಿ ಹಂಗೇ..........

ಶಾಸ್ತ್ರಿ : ಹಾಸುವೆಯಂತೆ, ಇರಲಿ. ನಾನು ಹೇಳಿದ್ದು ತಿಳಿಯಿತೆ, ಕೆಂಪೀ? ಕೆಂಪೀ........

ಕೆಂಪಿ : ಅಲ್ಲ ಬುದ್ಧಿ, ನಮ್ಮ ಯಜಮಾನ್ರು ಸೀರೆ ತಂದು ಕೊಟ್ರೇನು ಬುಟ್ರೇನು? ಗಂಡ ಹೆಂಗೆ ನಡಕೊಂಡ್ರೂ ಅವನನ್ನ ದೇವರು ಕಂಡುಕೊಂಡ ಹಂಗೆ ಕಂಡುಕೋ ಬೇಕ್ರು. ಅವರು ಸೀರೆ ತಂದ್ಕೊಟ್ಟಿಲ್ಲ ಅಂತ ನನಗೇನೂ ದುಕ್ಕ ಇಲ್ಲ. ನಿಮ್ಮಂತ ದಣಿಗೋಳ ಸೇವೆ ಮಾಡ್ತಾ ಇರಬೇಕಿದ್ರೆ, ಸೀರೇದೇನು ದೊಡ್ಡ ವಿಷಯ ಬುಡಿ ಬುದ್ಧಿ.

ಶಾಸ್ತ್ರಿ : ಹಾಗಾದರೆ ನಾನು ನಿನಗೆ ಸೀರೆ ತೆಕ್ಕೊಡಬೇಕೂ ಅನ್ನು?

ಕೆಂಪಿ : ಏನ್ ಬುದ್ಧಿ ನೀವು ಹೇಳೋದು? ನಾನು ಯಾವ ಬಾಯ್ಲಿ ಅಂಗೆ ಕೇಳ್ಲಿ? ಮನೇಲಿ ಲಕ್ಷ್ಮಿ ಇಲ್ದೆ ಬಿಮ್ಮಂತೀರೋವಾಗ ನಾನು ಸೀರೆ ಕೇಳಾನಾ?

ಶಾಸ್ತ್ರಿ : ನೋಡು ಕೆಂಪಿ : ಈ ಮನೇಗೇ, ..........ಸದ್ಯಕ್ಕೆ.....ನಿನ್ನ ದಯ ಇದ್ರೆ.....

ಸೀನಪ್ಪ : (ಹೊರಕ್ಕೆ ಹೊರಡುತ್ತ) ಹಾಗೇ ಆಗಲಿ, ಶಾಸ್ತ್ರಿ. ಸರಿಯಾಗಿ ಎಂಟು ಗಂಟೆಗೆ ಬಂದುಬಿಡುತ್ತೇನೆ (ಎಂದು ಹೊರಡುವನು).

ಶಾಸ್ತ್ರಿ : (ಬಂದು ಮಂಚದ ಮೇಲೆ ಕುಳಿತು) ಸದ್ಯಕ್ಕೆ ತೊಲಗಿದ ಶನಿ (ಎಂದು ಮಂಚದಿಂದಿಳಿದು ಏನೋ ಆತಂಕದಲ್ಲಿರುವಂತೆ ಅತ್ತಿಂದಿತ್ತ ತಿರುಗಾಡುವನು)

ಅಲ್ಲ, ಕಸ ಗುಡಿಸೋಕೆ ಬರ್ತೀನಿ ಅಂದೋಳು ಇನ್ನೂ ಬರಲೇ ಇಲ್ಲ (ಶತಪಥ ತಿರುಗಾಡುತ್ತ) ಬೇಸ್ತು ಬಿದ್ದ ಸೀನಪ್ಪ ! ದೇವರ ದಯದಿಂದ, ನಮ್ಮ ದೊಡ್ಡಪ್ಪನಿಗೆ ಎಲ್ಲಾ ಗಂಡುಗಳೇ ಅನ್ನೋ ವಿಚಾರ ಅವನಿಗೆ ಗೊತ್ತಿಲ್ಲವೋ, ನಾನು ಬಚಾವಾದೆ. ಇಷ್ಟೇ ಸಾಕು, ಶುಭಸೂಚನೆ. (ನಿಂತು) ಓಹೋ, ಬಲಗಣ್ಣು ಬೇರೆ ಶುಭಶಕುನ ನುಡಿಯುತ್ತ ಇದೆ. ಭೇಷ್ ! ಶುಭಸ್ಯ ಶೀಘ್ರಂ... ಕೆಂಪೀ, ಕೆಂಪೀ ! (ಎಂದು ಕೂಗುವನು)

ಕೆಂಪಿ : (ಪೊರಕೆ ಹಿಡದುಕೊಂಡು ಬಂದು) ಇಕೋ ಬಂದೆ, ಗುಡಿಸ್ಕೊಂತೀನಿ–ಅಪ್ರಿನ್ನೂ ಅವ್ರೆನೋ ಅಂತ ಅಂಗೇ ಹೊರಗೇ ಇದ್ದೆ (ಎಂದು ಗುಡಿಸತೊಡಗುವಳು)

ಶಾಸ್ತ್ರಿ : ಕೆಂಪೀ.....

ಕೆಂಪಿ : (ಗುಡಿಸುತ್ತಲೇ) ಏನು ಬುದ್ದಿ ?

ಶಾಸ್ತ್ರಿ : (ಕೊಂಚ ಮೆಲುದನಿಯಲ್ಲಿ) ಕೆಂಪೀ.....

ಕೆಂಪಿ : ಅದೇನಾ ಬುದ್ದಿ ? (ಎಂದು ಗುಡಿಸುವುದನ್ನು ನಿಲ್ಲಿಸಿ, ಶಾಸ್ತ್ರಿಯ ಕಡೆ ನೋಡುತ್ತ ನಿಲ್ಲುವಳು)

ಶಾಸ್ತ್ರಿ : (ಶೃಂಗಾರಸೂಚಕ ಧ್ವನಿಯಲ್ಲಿ) ಕೆಂಪೀ....... (ಎಂದು, ಮಂಚದ ಮೇಲೆ ಕುಳಿತು, ಕೈಕೈ ಹಿಸುಕಿಕೊಳ್ಳುತ್ತ, ಶೃಂಗಾರ ಚೇಷ್ಟೆಗಳನ್ನು ಮೆರೆಯುವನು) ಪೊರಕೆ ಕೊಂಚ ಅಲ್ಲಿ ಮಡಗು. ಒಸಿ ಹಿಂಗೆ ಬಾ ಇತ್ತ.

ಕೆಂಪಿ : ಅದೇನಾ ಬುದ್ದಿ, ಹೇಳ್ಬಾರದಾ ?

ಶಾಸ್ತ್ರಿ : ನೀನು ಒಸಿ ಹಂಗೇ ಹತ್ತಿರಕ್ಕೆ ಬರಬಾರದಾ? ನಾನೇನು, ಹಾವಾ ಹಂಗೆ ಹೆದರಿಕೊಂಡು ನಿಲ್ಲೋಕೆ ? ನಾನೊಬ್ಬ ಹಾರುವ, ಬಡ ಹಾರುವ.

ಕೆಂಪಿ : ಹೆದರ್ಕೆ ಯಾಕ್ ಬುದ್ದಿ ? ಹೆದರ್ಕೇನೂ ಇಲ್ಲ, ಏನೂ ಇಲ್ಲ.

ಗೊತ್ತಾಯಿತೆ ಕೆಂಪಿ ನಾನು ಹೇಳಿದ್ದು?

ಕೆಂಪಿ : (ಬಿಗಿದ ಮೌನ)

ಶಾಸ್ತ್ರಿ : ನೋಡು ಕೆಂಪಿ, ಇದರಲ್ಲಿ ಬಲವಂತವೇನೂ ಇಲ್ಲ. ಪ್ರೀತಿಯ ವಿಷಯದಲ್ಲಿ ಬಲವಂತ ಇರಕೂಡದು ಕೆಂಪಿ. ನಿನ್ನಲ್ಲಂತೂ ನಾನು ಪ್ರೀತಿಯೆಲ್ಲವನ್ನೂ ಒಪ್ಪಿಸಿಬಿಟ್ಟಿದ್ದೇನೆ. ನಿನ್ನ ಪ್ರೀತಿಗೆ ನಾನು ಯೋಗ್ಯ ಅಂತ ನಿನಗೆ ಕಂಡುಬಂದರೆ.....ನಾನು ಹೇಳಿದ ಹಾಗೆ.....ರಾತ್ರಿ ಬಾ. ನೀನು ಬಂದರೂ ನಿನಗೇನೇ, ಬಾರದಿದ್ದರೂ ನಿನಗೇನೇ, – ಈ ಸೀರೆ. ಬಂದರೆ, ಒಡವೆಗಳೂ ದೊರೆಯುತ್ತೆ. ನೀನು ಕೇಳಿದಷ್ಟು ಸಂಬಳ ಅಲ್ಲ ಸಂಭಾವನೆ ಅಂತ ಬೇಕಾದರೂ ತಿಳಿದುಕೋ ನೀನು ಕೇಳಿದಷ್ಟು ಕೊಡ್ತೇನೆ. ನಿನ್ನ ಗಂಡನಿಗೆ ಎಲ್ಲಾದರೂ ಸರಿಯಾದ ಕಡೆ ಕೆಲಸ ಮಾಡಿಸಿ ಕೊಡ್ತೇನೆ. ನೀನು ನಿನ್ನ ಮನೆಯಲ್ಲಿ ಗೃಹಿಣಿ : ಇಲ್ಲಿ – ರಾಣಿ !... (ಬೇಡಿಕೆಯ ದನಿಯಲ್ಲಿ) ಕೆಂಪೀ, ಕೆಂಪೀ, ಒಲ್ಲೆ ಅನ್ನ ಬೇಡ ; ಇಲ್ಲ ಅನ್ನಬೇಡ ; ನಾಳೆ ಅನ್ನ ಬೇಡ.... ನನ್ನ ಜೀವ ಉಳಿಸೋದು ಬಿಡೋದು ನಿನ್ನ ಕೈಯಲ್ಲಿದೆ.... ನಿನಗೆ ಅಷ್ಟು ಸೋತುಬಿಟ್ಟಿದ್ದೇನೆ ಕೆಂಪಿ.......ಕೆಂಪಿ, ಕೆಂಪೀ....(ಎಂದು ಅವಳ ಕೈಹಿಡಿದುಕೊಳ್ಳ ಹೋಗುವನು)

ಕೆಂಪಿ : (ಕೈ ಹಿಡಿದುಕೊಳ್ಳಲಾಗದಂತೆ ದೂರ ಸರಿದು) ಬುದ್ಧಿ, ಬಿಡಿ ಬುದ್ಧಿ....ರಾತ್ರಿಗಂಟ ಸುಮ್ಕಿರ್ತೀರೋ....ಇಲ್ಲ... ಕಿರಿಚಿಕೊಂಡು ಬಿಡ್ಲೊ?

ಶಾಸ್ತ್ರಿ : ಆತುರವಿಲ್ಲ ಕೆಂಪಿ, ರಾತ್ರಿಯಾಗಲಿ; ನೀನು ಹೇಳಿದ ಹಾಗೆ ಕೇಳ್ತೀನಿ. ಹೊರಗಡೆ ಎಲ್ಲೂ ಚಿಲಕ ಹಾಕಿರೋದಿಲ್ಲ. ಹತ್ತುಗಂಟೆಗೆ ಸರಿಯಾಗಿ ಬಂದುಬಿಡು. ಬರ್ತಾ ಹೊರಗಡೆ ಚಿಲಕ ಹಾಕಿಕೊಂಡು ಬಾ. ನಾನು ತಂದು ಕೊಟ್ಟ ಸೀರೆ ಉಟ್ಟುಕೊಂಡುಬರೋದನ್ನ ಮರೆಯ ಬೇಡ... ತೆಗೆದುಕೋ (ಎಂದು ಜೇಬಿನಿಂದ ಒಂದು ಮೈ ಸಾಬೂನನ್ನೂ ಸೆಂಟು ಶೀಸೆಯನ್ನೂ ತೆಗೆದುಕೊಂಡು) ಹಿಡಿ, ಇದನ್ನ – ಒಂದು ಸಾಬೂನು, ಸ್ನಾನ ಮಾಡೋದಕ್ಕೆ ; ಇನ್ನೊಂದು ಸೆಂಟು, ಸ್ನಾನ ಮಾಡಿದ ಮೇಲೆ....... ಅಂಗೈಗೆ ಸ್ವಲ್ಪಹಾಕಿಕೊಂಡು ಚೆನ್ನಾಗಿ ಮೈಗೆಲ್ಲ ಸವರಿಕೊಳ್ಳುವುದಕ್ಕೆ.....ನೀನು ಬೀದೀಲಿ ಬರ್ತಾ ಇದ್ರೇನೆ ನೀನು ಬರೋದು ನನಗೆ ಇಲ್ಲಿ ತಿಳೀಬೇಕು–"ಪರಿಮಳದ ಜಂಗಮಭರಣಿ!" ......ಗೊತ್ತಾಯಿತೆ ?

ಕೆಂಪಿ : ನನ್ ದಯ ಏನ್ ಬುದ್ದಿ ? ದೇವರ ದಯ ಇದ್ರೆ ಮನೇಗೆ ಲಕ್ಷ್ಮಿ ಬಂದೇ ಬರ್ತಾಳೆ.

ಶಾಸ್ತ್ರಿ : ಅದು ಸರಿ ಕೆಂಪಿ. ಎಲ್ಲಾತಕ್ಕೂ ದೇವರ ದಯ ಇದ್ದೇ ಇರಬೇಕೂ ಅನ್ನು. ಆದರೂ, ನಿನ್ನ ದಯವೂ ಇರಬೇಕು. ನಿನ್ನ ದಯ ಒಂದಾದರೆ, ಬೇರೆ ಲಕ್ಷ್ಮಿ ಯಾಕೆ ಬರಬೇಕು?

ಕೆಂಪಿ : (ಸ್ವಲ್ಪ ಶಂಕಿತಳಾಗಿ, ಚಕಿತಗೊಂಡ ದನಿಯಲ್ಲಿ) ಏನು ಬುದ್ದಿ ನೀವಾಡೋ ಮಾತು ?

ಶಾಸ್ತ್ರಿ : ಇರಲಿ ಕೆಂಪಿ, ಆಮೇಲೆ ಹೇಳ್ತೇನೆ. ಈ ಗಂಟು ಬಿಚ್ಚಿ ನೋಡು (ಎಂದು ಮಂಚದ ಮೇಲೆ ಇಟ್ಟಿದ್ದ ಗಂಟನ್ನು ಕೆಂಪಿಯ ಮುಂದೆ ಬೀಳುವಂತೆ ಕೆಳಕ್ಕೆ ಹಾಕುವನು. ಕೆಂಪಿ ಬಿಚ್ಚಿ, ಸೊಗಸಾದ ಸೀರೆಯನ್ನೂ ಕುಪ್ಪಸವನ್ನೂ ಕಂಡು ಬೆರಗಾಗುವಳು) ಅದೆಲ್ಲ ನಿನಗೇನೇ ಕೆಂಪೀ (ಎಂದು ಕಿಸಿನಗೆಯೊಡನೆ, ಬಾಯಿತುಂಬ ಹೇಳುವನು)

ಕೆಂಪಿ : ಏನ್ ಬುದ್ದಿ ! ನನಗೆ ! ನನಗೇ ಇದೆಲ್ಲ ! ಹೊಸ ಶಾಲೆ ! ಮುಸುರೆ ತಿಕ್ಕೋ ಮುಕ್ಕ ಇಂತ ಪಟ್ಟೇಶಾಲೇನಾದ್ರೂ ಉಡಬೋದ ?

ಶಾಸ್ತ್ರಿ : ಇನ್ನು ಮೇಲೆ ನೀನು ಮುಸುರೇನೂ ತಿಕ್ಕಬೇಕಾಗಿಲ್ಲ ಏನೂ ಇಲ್ಲ, ಗೊತ್ತಾಯಿತೆ ? ಈಗ ನನಗೆ ಹೆಚ್ಚಾಗಿ ಹೇಳೋಕೆ ಮಾತೇ ಹೊರಡೊಲ್ಲ. ಈ ಸೀರೆ ತೆಗೆದುಕೊಂಡು ಹೋಗಿ, ನಿನ್ನ ಗಂಡನಿಗೆ, ನಾನು ಕೊಟ್ಟೇ ಅಂತ ಹೇಳು. ಏನೂ ಸಂಕೋಚಪಟ್ಟುಕೋಬೇಡ....... ಆಮೇಲೆ.... ಇವೊತ್ತುರಾತ್ರಿ.....ಹತ್ತುಗಂಟೆ ಹೊತ್ತಿಗೆ..... ಚೆನ್ನಾಗಿ ಸ್ನಾನಮಾಡಿಕೊಂಡು........ಹಜಾರದಲ್ಲಿ ಬುಟ್ಟೀಲಿ ಹೂವಿಟ್ಟಿದ್ದೀನಿ,....ಅದನ್ನ ತೆಗೆದುಕೊಂಡುಹೋಗಿ, ಮುಡಿದುಕೊಂಡು.....ಬಾ ಕೆಂಪಿ ಇವೊತ್ತು ರಾತ್ರಿ. ನಿನ್ನ ಗಂಡನಿಗೆ ಹೇಳಿಯೇ ಬಾ. ಹೆದರಿ ಕೊಳ್ಳಬೇಡ. ನೀನು ಬಂದರೆ, ನೋಡು, ನನ್ನ ಹೆಂಡತಿ ಹಾಕಿಕೊಳ್ಳುತ್ತಿದ್ದ ಒಂದೆರಡು ಒಡವೆಗಳನ್ನ....... ಕೂಡಲೇ....ನಿನಗೆ ಒಪ್ಪಿಸಿಬಿಡ್ತೇನೆ. .... ಸಾಧ್ಯವಾದರೆ, ಇದನ್ನೆಲ್ಲ ನಿನ್ನ ಗಂಡನಿಗೆ ಹೇಳದೇನೆ ನಡಸೋದಾದರೆ ಬಹಳ ಉತ್ತಮ ನೋಡು. ಹೇಳಿದರೂ ಸಹ, ಅವನನ್ನ ಒಪ್ಪಿಸುವ ರೀತಿಯಲ್ಲಿ ಹೇಳಬೇಕು ನೋಡು. ಗೊತ್ತಾಯಿತೆ? (ಕೆಂಪಿ ಬಹಳ ಆಳವಾಗಿ ಆಲೋಚಿಸುತ್ತಿರುವಂತೆ ಕಾಣುವಳು. ಅವಳಿಂದ ಉತ್ತರ ಬಾರದಿರಲು)

# ನಡುನೋಟ

[ಅದೇ ಕೋಣೆ. ರಾತ್ರಿ ೧೦ ಗಂಟೆಯ ಸಮಯ. ಮಂಚದ ಬಳಿ ಒಂದು ಸ್ಟೂಲಿನಮೇಲೆ ತಟ್ಟೆಯಲ್ಲಿ ಎಲೆಯಡಕೆ, ಹಣ್ಣು ಹಂಪಲು, ಹೂವು.

ಮಂಚದ ಮೇಲೆ ಹಾಸಿಗೆ ಹಾಸಿ ಸಿದ್ಧವಾಗಿದೆ. ಶಾಸ್ತ್ರಿ ಜುಟ್ಟಿಗೆ ಸ್ವಲ್ಪ ಹೂವು ಸುತ್ತಿಕೊಂಡಿದ್ದಾನೆ. ಬರಿಯ ಬನೀನು ತೊಟ್ಟುಕೊಂಡು, ಹೆಗಲ ಮೇಲೆ ಚೌಕ ಹಾಕಿಕೊಂಡಿದ್ದಾನೆ.]

ಶಾಸ್ತ್ರಿ : (ಶತಪಥ ತಿರುಗಾಡುತ್ತ) ಹಾಳು ಕೆಂಪಿ ಎಷ್ಟು ಹೊತ್ತಿಗೂ ಬರಲೇ ಇಲ್ಲವೇ! (ಕೈಗಡಿಯಾರ ನೋಡಿಕೊಂಡು) ಆಗಲೇ ಹತ್ತಾಗುತ ಬಂತು.....ನನಗೆ ಚಕ್ಕರ್ ಕೊಡೋಕೆ ಬೇಕೂಂತ ಒಪ್ಪಿಕೊಂಡ ಹಾಗೆ ನಟಿಸಿದಳೋ ಏನೊ...ಅಲ್ಲ, ಎಂಥ ಬೆಪ್ಪ ನಾನು. ಸೀರೇನೂ ಕೊಟ್ಟುಬಿಡೋದೆ ! ಅದನ್ನೂ ಎತ್ತಿಕೊಂಡು ಹಳ್ಳೀಗೆ ಎದ್ದುಬಿಟ್ಟರೆ? ....ಅಲ್ಲ ...ಎಂಥ ಬೇಸ್ತುಬಿದ್ದೆ ... ಇಲ್ಲ, ಇಲ್ಲ... ಕೆಂಪಿ ಎಂದಿಗೂ ಹಾಗೆ ಮೋಸ ಮಾಡೋಳಲ್ಲ. ಬಲು ಒಳ್ಳೆಯವಳು. ಇನ್ನೂ ಒಂದು ಯೋಚನೆ : ನಾನು ಮಾಡ್ತಾ ಇರೋ ಕೆಲಸ ಸರಿಯಾದ್ದೇ?– ನಾನು ಬ್ರಾಹ್ಮಣ; ಅವಳು ಶೂದ್ರರೋಳು... ಅದೇನೋ ಪರವಾಯಿಲ್ಲ. ಅದಕ್ಕೆ ಶಾಸ್ತ್ರವಾಕ್ಯ ಹುಡುಕಬಹುದು. ಆದರೆ, ಅವಳಿಗೆ ಮದುವೆಯಾಗಿದೆ..ಅನ್ಯಸ್ತ್ರೀ.... ಅಕ್ರಮ ಪ್ರಣಯ, ಪಾಪಕೃತ್ಯ ಆಗೋದಿಲ್ಲವೆ?.... ಆದರೆ, ಅವಳೂ ಒಪ್ಪಿದ್ದಾಳಲ್ಲ? ಇಬ್ಬರೂ ಒಟ್ಟಿಗೆ ನರಕಕ್ಕೆ ಹೋಗ್ತೇವೆ, ಅಷ್ಟೇ....ಅಯ್ಯೋ, ಮುಂದಿನ ನರಕ ಯಾರು ಕಂಡಿರೋರು? ಈ ನರಕ ಸ್ವರ್ಗ ಎಲ್ಲ ವೇದಾಂತದಲ್ಲೆಲ್ಲಿ ಬಂತು....ಎಲ್ಲ ಈಚಿನವರ ಸೃಷ್ಟಿ. ಈ ಯೋಚನೆಗಳನ್ನೆಲ್ಲ ಇಟ್ಟುಕೊಂಡರೆ ಬದುಕೋ ಹಾಗೇ ಇಲ್ಲ ಪ್ರಪಂಚದಲ್ಲಿ. ನಾವು ಮಾಡುವ ಪಾಪ ಕೃತ್ಯಗಳಿಗೆಲ್ಲ ಈ ಜನ್ಮದಲ್ಲೆ (ಬಾಗಿಲು ಕಟಕಟ ಎಂದು ಸದ್ದಾಗುವುದು)....ಕೆಂಪೀ, ಕೆಂಪೀ (ಉತ್ತರವಿಲ್ಲ).... ಈ ಜನ್ಮದಲ್ಲೇ ಶಿಕ್ಷೆ ಉಂಟಾಗುವ ಹಾಗಿದ್ದರೆ....ಪಾಪ ಕಾರ್ಯ ಮಾಡಬಾರದು ; ಶಿಕ್ಷೆ ಅನುಭವಿಸದಿರುವುದಕ್ಕಾದರೂ ಮಾಡಬಾರದು–ಎಂಬ ಬುದ್ಧಿ

ಕೆಂಪಿ : (ಶಾಸ್ತ್ರಿ ಹೇಳಿದ್ದಕ್ಕೆಲ್ಲ ಒಪ್ಪಿದವಳಂತೆ) ಆಗಲಿ ಬುದ್ಧಿ.... ರಾತ್ರಿ ಹತ್ತು ಗಂಟೆಗೆ ಸರಿಯಾಗಿ ಬರ್‍ತಿವಿನಿ. ಎಲ್ಲಿಗೂ ಹೋಗಬೇಡಿ. ಕಂಡಿತಾ ಬರ್‍ತಿವಿನಿ. ನಿಮ್ಮುಪ್ಕಾರ ಎನಾರೆ ಕೊಂಡಾಡ್ಲಿ (ಎಂದು ಹುಸಿನಗೆಯೊಂದನ್ನು ಬೀರಿ, ಸೀರೆಯ ಗಂಟು ತೆಗೆದುಕೊಂಡು, ತಟ್ಟನೆ ಹೊರಟು ಹೋಗುವಳು).

ಶಾಸ್ತ್ರಿ : (ಅತಿಶಯ ಆನಂದದಿಂದ) ಶಾಸ್ತ್ರಿ, ಗೆದ್ದೆ ! ಭಲಾ ಶಾಸ್ತ್ರಿ. ......ಇನ್ನೂ ಆರು ಗಂಟೆ ಕೂಡ ಆಗಿಲ್ಲವಲ್ಲಾ? ಇನ್ನು ನಾಲ್ಕು ಗಂಟೆ ಕಾಲ ಹೇಗಪ್ಪ ಕಳೆಯೋದು? ಇಲ್ಲಿ ಕುಳಿತು ಕಾಯುವುದು ಕಷ್ಟ. ಸ್ವಲ್ಪ ಸುತ್ತಾಡಿ ಕೊಂಡಾದರೂ ಬರೋಣ. ಹೇಗಿದ್ದರೂ ಮಾರ್ಕೆಟ್ಟಿಗೆ ಹೋಗಿ ಒಳ್ಳೇ ಮೈಸೂರು ಮಲ್ಲಿಗೆ, ವೀಳೆಯದೆಲೆ, ಹೂವು, ಹಣ್ಣು, ಎಲ್ಲ ತರಬೇಕು. (ಶಾಲು ಹೊದೆದುಕೊಂಡು ಹೊರಡಲು ಸಿದ್ಧನಾಗಿ) ಇನ್ನೂ ರಾಹುಕಾಲ ಕೊಂಚ ಇದೆಯೇನೋ. ಹುಂ, ಪರವಾ ಇಲ್ಲ. ಇಷ್ಟಕ್ಕೂ ನಾನು ಯಾವ ಕಾರ್ಯದ ಮೇಲೆ ಹೋಗಬೇಕಾಗಿದೆ? ನಡೆಯೋ ವೈಭವವೆಲ್ಲ ಇಲ್ಲಿ – ವಾಪಸು ಬಂದ ಮೇಲೆ ತಾನೆ ? [ಹೊರಡುವನು.]

– ತೆರೆ –

ಕೆಂಪಿ : (ಇನ್ನೊಂದು ಕೈಯನ್ನೂ ನೀಡುವಳು)

ಶಾಸ್ತ್ರಿ : (ತೊಡಿಸಿ) ಎಲ್ಲಿ, ಇನ್ನು ಎದ್ದುಬಾ ಇಲ್ಲಿ. ಬೆಳಕಿನಲ್ಲಿ ನಿನ್ನ ಮುಖ ನೋಡೋಣ.

ಕೆಂಪಿ : (ಎದ್ದು ನಿಲ್ಲುವಳು)

ಶಾಸ್ತ್ರಿ : ಕೆಂಪೀ, ಕೆಂಪೀ (ಎಂದು ಅಪ್ಪಿಕೊಳ್ಳಹೋಗುವನು)

ಕೆಂಪಿ : (ಶಾಸ್ತ್ರಿ ತನ್ನನ್ನು ಅಪ್ಪಿಕೊಳ್ಳುವುದಕ್ಕೆ ಮೊದಲೇ ಅವನನ್ನು ಅಪ್ಪಿಕೊಳ್ಳುವಳು)

ಶಾಸ್ತ್ರಿ : ಇದೀಗ ಸರಿ. ಎಷ್ಟು ಬಲವಾಗಿದ್ದೀಯೇ ಕೆಂಪಿ! .........ಅಷ್ಟು ಬಿಗಿಯಾಗಿ ಅಪ್ಪಿಕೊಳ್ಳಬೇಡವೇ........ಅಯ್ಯೋ.......ಬಿಡೇ.....ಏನೇ ಇದು......ಹುಡುಗಾಟ......ನನಗಿಂತಲೂ ನೀನೆ ಬಲ ಅಂತ ಒಪ್ಪಿಕೊಳ್ಳುತೀನಿ ಬಿಡೆ........ಅಯ್ಯೋ ...ಎಲ್ಲಿ...ಬಿಡು........ಅಪ್ಪಿಕೊಳ್ಳೋದು ಹೇಗೆ ತೋರಿಸಿಕೊಡುತೀನಿ...ಬಿಡೇ...ಕೆಂಪೀ....ಕೆಂಪೀ....

ಕೆಂಪಿ : ಕೆಂಪಿ ಅಲ್ಲ.....ಕೆಂಪ.....ಬುದ್ಧೀ.....ಕೆಂಪ.... ಕೆಂಪೀ ಗಂಡ ಕೆಂಪ.... (ಎಂದು ಕೆಂಪಿಯ ವೇಷದಲ್ಲಿದ್ದ ಕೆಂಪ ಶಾಸ್ತ್ರಿಯನ್ನು ಬಿಗಿಯಾಗಿ ಹಿಡಿದುಕೊಂಡಿರುವನು) ಕೆಂಪೀನೂ ಬಂದವಳೇ. ತಮ್ಮ ಪಾದಸೇವೆ ಮಾಡೋಕೆ...ಬಾ ಇಲ್ಲಿ ಕೆಂಪಿ.... ನಿಮ್ಮ ದಣಿಗಳ ಪಾದಸೇವೆ ಮಾಡು, ಬಾ ಇಲ್ಲಿ.

[ಶಾಸ್ತ್ರಿ ಬೆಕ್ಕಿನ ಬಾಯಿಗೆ ತಲೆ ಮುಂದಾಗಿ ಸಿಕ್ಕಿ ಇನ್ನೂ ಸಾಯದಿರುವ ಇಲಿಯಂತೆ ಒದ್ದಾಡುತ್ತಿರುವನು. ಕೈಲಿ ಒಂದು ನೂಲು ಹಗ್ಗ ಹಿಡಿದುಕೊಂಡು ಕೆಂಪಿ ಬರುವಳು]

ಕೆಂಪ : ದಣಿಗಳ ಪಾದಸೇವೆ ಮಾಡು.....ಅವರ ಕಾಲಿಗೆ ಬಿಗಿ ಹಗ್ಗಾನ.

ಕೆಂಪಿ : (ಸುಮ್ಮನಿರುವಳು)

ಕೆಂಪ : ಬಿಗೀತೀಯೆ ಇಲ್ವೆ ? ಇಲ್ಲ ನಿನಗೆರಡು ಬಿಗೀಲೋ?

ಕೆಂಪಿ : (ಶಾಸ್ತ್ರಿಯ ಕಾಲು ಬಿಗಿಯುವಳು)

ಶಾಸ್ತ್ರಿ : ಕೆಂಪಮ್ಮಾ....ಕೆಂಪಯ್ಯಾ....ಸೀರೇನೂ ತಗೋಳಿ..... ನನ್ನನ್ನ ಅವಮಾನಕ್ಕೆ ಗುರಿಮಾಡಬೇಡಿ......ನಿಮ್ಮ ಕಾಲಿಗೆ ಬೀಳ್ತೇನೆ.

ಕೆಂಪ : ಬಲವಾಗಿ ಬಿಗಿಯೇ ಕೆಂಪಿ. ಶಾಸ್ತ್ರಿಗೋಳೆ..... ನೀವ್ಯಾಕೆ ನಮ್ಮ ಕಾಲಿಗೆ ಬಿದ್ದೀರಾ. ನಾವೇ ನಿಮ್ಮ ಕಾಲಿಗೆ ಎರಗ್ತೇವೆ. ಏಟು ಕೆಟ್ರೂ ನೀವು ಹಾರುವರು. ಹಿಂದಿನ ಕಾಲ್ದಾಗೆಲ್ಲ ಹಾರುವರು ಪರಪಂಚ ಉದ್ಧಾರ

ಉಂಟಾಗುತ್ತೆ.....ಏನೋ ಈ ವಿಚಾರವನ್ನೆಲ್ಲ ಯೋಚನೆ ಮಾಡಿದಷ್ಟೂ ಬುದ್ಧಿಕೆಡುತ್ತೆ, ಇಷ್ಟೆ ಉಹು, ಪ್ರಯೋಜನವಿಲ್ಲ, ಏನೂ ಪ್ರಯೋಜನವಿಲ್ಲ. ಜೇನುಹುಳುವಿಗೆ ಹೆದರಿಕೊಂಡು ಹಿಂದೆಗೆದರೆ, ಜೇನುತುಪ್ಪ ಕಾಡುಪಾಲು ತಾನೆ ! ನಾನು ಅಷ್ಟು ಮೂರ್ಖನೆ? (ಮತ್ತೆ ಬಾಗಿಲು ಕಟಕಟ ಎಂದು ಸದ್ದಾಗುವುದು) ಕೆಂಪೀ ಕೆಂಪೀ.... (ಹೊರಗಡೆ ಕೆಂಪಿ, 'ಬುದ್ಧೀ, ಒಳಕ್ಕೆ ಬರಲಾ' ಎಂದು ನಾಚಿಕೆಯ ದನಿಯಲ್ಲಿ ಕೇಳುವಳು) ಬರಲಾ ಎಂದು ಕೇಳುತೀಯಲ್ಲ ಕೆಂಪಿ. ನಿನಗಾಗಿಯೇ ಇಷ್ಟು ಹೊತ್ತು ಕಾದಿದ್ದೇನೆ. ಬಾಗಿಲು ಹಾಕಿಲ್ಲ. ಬೇಗ ಬಾ ಕೆಂಪಿ. ನಾಚಿಕೊಳ್ಳಬೇಡ, ಬಾ ಕೆಂಪಿ.

ಕೆಂಪಿ : (ಒಳಗೆ ಬಂದು ಮಂಚದ ಬಳಿ ನಿಲ್ಲುವಳು ; ಮುಖಮುಚ್ಚ ಸೆರಗಿನ ಮುಸುಕು)

ಶಾಸ್ತ್ರಿ : (ಮಂಚದ ಮೇಲೆ ಕುಳಿತು) ಬಾ, ಕೆಂಪಿ, ಕುಳಿತುಕೋ.

ಕೆಂಪಿ : (ಬಂದು ಕುಳಿತುಕೊಳ್ಳುವಳು)

ಶಾಸ್ತ್ರಿ : ಇದೇಕೆ, ಮುಖಕ್ಕೆ ಮುಸುಕು? ಮುಸುಕು ತೆಗೆಯೇ ಮಾಯಾಂಗಣಿ, ಎಲ್ಲ ಕಂಡಿವ್ನಿ ನಿನ್ನ ಬೆಡಗ!

ಕೆಂಪಿ : (ಇನ್ನು ಬಲವಾಗಿ ಮುಸುಕು ಎಳೆದುಕೊಳ್ಳುವಳು)

ಶಾಸ್ತ್ರಿ : ಏಕೆ ಮುಸುಕು ತೆಗೆಯೋದಿಲ್ವಾ? ನನ್ನ ಮೇಲೆ ಮುನಿಸಾ ನಿನಗೆ?

ಕೆಂಪಿ : (ಮೌನ)

ಶಾಸ್ತ್ರಿ : ಏನು, ಮೊದಲು ಒಡವೆ ಕೊಡಬೇಕೊ?

ಕೆಂಪಿ : ('ಹೂಂ' ಎಂಬಂತೆ ತಲೆಯಲ್ಲಾಡಿಸುವಳು)

ಶಾಸ್ತ್ರಿ : ಒಡವೆ ಕೊಟ್ಟ ಮೇಲೆ ನಾನು ಹೇಳಿದ ಹಾಗೆ ಕೇಳುತಿ ತಾನೆ?

ಕೆಂಪಿ : ('ಆಗಲಿ' ಎಂಬಂತೆ ತಲೆಯಲ್ಲಾಡಿಸುವಳು)

ಶಾಸ್ತ್ರಿ : (ಎದ್ದು ಹೋಗಿ ಅಂಗಿಯ ಜೇಬಿನಿಂದ ಎರಡು ಚಿನ್ನದ ಬಳೆ ತೆಗೆದುಕೊಂಡು ಬಂದು) ಎಲ್ಲಿ, ಕೈ ನೀಡು.

ಕೆಂಪಿ : (ಒಂದು ಕೈಲಿ ಸೆರಗನ್ನು ಹಾಗೆಯೇ ಬಿಗಿಯಾಗಿ ಹಿಡಿದುಕೊಂಡು, ಕೈ ನೀಡುವಳು)

ಶಾಸ್ತ್ರಿ : (ಒಂದುಬಳೆ ತೊಡಿಸುತ್ತ) ಕೈ ಎಷ್ಟು ಒರಟೆ ಕೆಂಪಿ... ಪಾಪ, ನೀನು ಏನು ಮಾಡೀಯೆ, ಮುಸುರೆ ತಿಕ್ಕೋ ಕೈ. ಅಲ್ಲ, ಬಳೆ ನಿನಗೆ ಹೇಳಿ ಮಾಡಿಸಿದ ಹಾಗಿದೆ, ನೋಡು. ಎಲ್ಲಿ ಇನ್ನೊಂದು ಕೈ ಕೊಡು.

# ಕಡೆಯ ನೋಟ

[ಅದೇ ಕೋಣೆ : ಬೆಳಗ್ಗೆ ೮ ಗಂಟೆಯ ಸಮಯ. ಮಂಚದ ಮೇಲೆ ಕೈಕಾಲು ಬಿಗಿದ ಶಾಸ್ತ್ರಿ ಬಿದ್ದುಕೊಂಡಿದ್ದಾನೆ. ಅವನಿಗೆ ಎಚ್ಚರವಾಗಿದೆ. ಆದರೆ, ಎಷ್ಟು ಪ್ರಯತ್ನಪಟ್ಟರೂ ಕಟ್ಟಿದ್ದ ಹಗ್ಗ ಬಿಚ್ಚಿಕೊಳ್ಳಲಾಗಿಲ್ಲ. ಪೇಚಾಡುತ್ತಿದಾನೆ]

ಶಾಸ್ತ್ರಿ : (ತನ್ನಲ್ಲಿ ತಾನು) ಅಯ್ಯೋ ದೇವರೇ. ಏನು ಮಾಡಲಪ್ಪಾ ಈಗ. ಹಾಲಿನವಳು ಬಂದು ಕೂಗಿ ಕೂಗಿ ಹೊರಟುಹೋದಳು. ನನ್ನ ಪುಣ್ಯಕ್ಕೆ ಬಾಗಿಲು ತೆಗೆದುಕೊಂಡು ಒಳಕ್ಕೆ ಬರಲಿಲ್ಲ. ಏಳೂವರೆ ಗಂಟೆಗೆ ಕ್ಷೌರದವನನ್ನು ಬರಹೇಳಿದ್ದೆ. ದೇವರ ದಯದಿಂದ ಅವನು ಇನ್ನೂ ಬಂದಿಲ್ಲ. ಸೀನಪ್ಪನನ್ನ ಎಂಟು ಗಂಟೆಗೆ ಸರಿಯಾಗಿ ಬಾ ಅಂತ ಹೇಳಿದ್ದೆ. ಅವನು ಬಂದುಬಿಟ್ಟು ನನ್ನನ್ನು ಈ ಸ್ಥಿತಿಯಲ್ಲಿ ಕಂಡುಬಿಟ್ಟರೆ ಏನು ಮಾಡುವುದು?! ಬಿಚ್ಚಿಕೊಳ್ಳೋಣ ಅಂದರೆ, ಹೆಣ ಬಿಗಿಯೋ ಹಾಗೆ ಬಿಗಿದುಬಿಟ್ಟಿದಾನೆ. ದೇವರ ದಯದಿಂದ ಮಂಚಕ್ಕೆ ಸೇರಿಸಿ ಬಿಗಿದಿಲ್ಲ. (ಸಾಸಹಪಟ್ಟು ಮೆಲ್ಲನೆ ಎದ್ದು ಕುಳಿತುಕೊಳ್ಳುವನು. ಬಹಳ ಮೆಲುಕಾಡಿ, ಮಂಚದ ಮೇಲೆ ಕಾಲು ಇಳಿಯಬಿಟ್ಟು ಕುಳಿತುಕೊಂಡು, ಎದ್ದು ನಿಲ್ಲುವನು.) ಸೀನಪ್ಪ ಬರುವುದಕ್ಕೆ ಮುಂಚೆ ಹಾಗೆಯೇ ಸರಿದುಕೊಂಡು ಹಜಾರಕ್ಕೆ ಹೊರಟು ಹೋದರೆ ಮೇಲು (ಎಂದು ಕಟ್ಟಿದ ಕಾಲುಗಳಿಂದಲೇ ಸರಿದುಕೊಂಡು ಹೋಗಲು ಪ್ರಯತ್ನಿಸುವನು) ಅಲ್ಲಿಗೆ ಹೋದರೆ ತಾನೆ ಏನು ಪ್ರಯೋಜನ, ಬಿಚ್ಚಿಕೊಳ್ಳೋದಕ್ಕೆ ಆಗದೆಹೋದಮೇಲೆ?....ಅಯ್ಯೋ, ಎಂಥ ಸ್ಥಿತಿ ಬಂತಪ್ಪ ! ಎಂಥ ಅಪಮಾನ ! (ಜೋರಾಗಿ) ಲೋ, ಕೆಂಪ...ಇರಲಿ, ನಿನಗೆ ತಕ್ಕ ಶಾಸ್ತಿಮಾಡ್ತೇನೆ....ತಕ್ಕ ಶಾಸ್ತಿ ಮಾಡ್ತೇನೆ (ಅಷ್ಟುಹೊತ್ತಿಗೆ ಬಾಗಿಲು ಕಟಕಟ ಎಂದು ಶಬ್ದವಾಗುವುದು) (ಮೆಲ್ಲನೆ) ಅಯ್ಯೋ, ದೇವರೇ, ಸೀನಪ್ಪ ಬಂದ ಅಂತ ಕಾಣುತ್ತೆ. ಈಗ ಬರೋನು ಕೆಂಪನೇ ಆದರೆ....ದಮ್ಮಯ್ಯ ಅಂದಾದರೂ.....

[ಕೆಂಪಿ ಕೆಂಪ ಒಳಕ್ಕೆ ಬರುವರು, ಹಿಂದಿನ ರಾತ್ರಿ ಶಾಸ್ತ್ರಿ ತಂದಿದ್ದ ಸೀರೆ ಉಟ್ಟಿರುವಳು ಕೆಂಪಿ]

ಮಾಡೋವೊತ್ಗೆ ಅಲ್ವ ಪರಪಂಚ ಇನ್ನೂ ಇರೋದು. ನಿಮ್ಮಂತ ಒಬ್ಬೊಬ್ಬ ಹಾರುವಯ್ಯ ಕೆಟ್ಟೋನು ಅಂದ್ರೆ ಹಾರುವರೆ ಕೆಟ್ಟೋರಾದಾರ?...ಎಲ್ಲಿ, ಕುಕ್ಕರಬಡ್ಕೊ ಮಂಚದ ಮ್ಯಾಗೆ (ಶಾಸ್ತ್ರಿ ಬಾಯಿಬಿಡದೆ, ಕುಂಟುತ್ತ ಹಿಂದಕ್ಕೆ ಸರಿದು, ಕುಕ್ಕರಿಸಿಕೊಳ್ಳುವನು) ಎಲ್ಲಿ, ಕೈ ನೀಡು (ಶಾಸ್ತ್ರಿ ಎರಡು ಕೈಗಳನ್ನೂ ನೀಡುವನು) (ಕೈಗಳನ್ನು ಕಟ್ಟುತ್ತ) ಪಾಪದ ಕೆಲ್ಸ ಮಾಡದ್ರೆ ಸಿಕ್ಸೆ ಅನುಬೋಗ್ಸೋಕೆ ಮುಂದಿನ ಜಲ್ಮದ ಗಂಟ ಯಾಕೆ ಕಾಯ್ಬೇಕು ಬುದ್ದಿ? ದೇವ್ರು ಈ ಜಲ್ಮದಲ್ಲೆ ಸಿಕ್ಸೆ ಕೊಡ್ತವ್ನೆ (ಕೈಗಳನ್ನು ಕಟ್ಟಿ ಉಳಿದ ಹಗ್ಗದಿಂದ ಕೈ ಮೈ ಕಾಲು ಎಲ್ಲಕೂ ಸುತ್ತು ಬಿಗಿಯುವನು) ಈ ವಿಷಯ ನಿಮಗೆ ಗೊತ್ತಾಗ್ದೇ ಹೋಯ್ತಲ್ಲಾ ಅಂತ ಯಸನ. ಹೋಗ್ಲಿ, ಈಗ್ಲಾದರೂ ಗೊತ್ತಾಯ್ತಲ್ಲ. ಚೆನ್ನಾಗಿ ನಿದ್ದೆಮಾಡಿ (ಎಂದು ಶಾಸ್ತ್ರಿಯನ್ನು ಮಂಚದ ಮೇಲೆ ಉರುಳಕೆಡವಿ, ಹೊದ್ದಿಗೆ ಹೊದಿಸಿ) ಹೆದರ್ಕೋಬೇಡಿ, ಬುದ್ದಿ. ಈಗ ಕಿರಿಚಿಕೊಂಡರೆ ಪ್ರಯೋಜನ ಇಲ್ಲ. ಕಿರಿಚಿಕೊಂಡು ಬೀದಿರಂಪ ಯಾಕೆ ಮಾಡ್ಕೋತೀರ? ಬೆಳಗ್ಗೆ ಯಾರಾದ್ರೂ ಬಂದಾರು, ಬಿಚ್ಚಾರು; ನಾನೇ ಬಂದು ಬಿಚ್ಚಿದರೂ ಬಿಚ್ಚುತೀನಿ ಹಗ್ಗಾನ. ರಾತ್ರಿ ಹಾಗೇ ಮಲಗಿರಿ. ಅಷ್ಟೆ ಸಿಕ್ಸೆ ಸಾಕು. ಚೆನ್ನಾಗಿ ನಿದ್ದೆಮಾಡಿ ಬುದ್ದಿ. ದೀಪ ಆರಿಸಿ ಹೋಗ್ತೀನಿ. ನಿಮ್ಮ ಪಾದಕ್ಕೆ ಅಡ್ಡಬಿದ್ದೆ ಬುದ್ದಿ (ಎಂದು ದೀಪ ಆರಿಸಿ ಕೆಂಪಿಯನ್ನೂ ಕರೆದುಕೊಂಡು, ಬಾಗಿಲು ಎಳೆದುಕೊಂಡು ಹೋಗುವನು)

ಶಾಸ್ತ್ರಿ : ಅಯ್ಯೋ, ದೇವರೇ...ನಾನು ಪಾಪಿ, ಚಂಡಾಲ....ನನ್ನ ಮರ್ಯಾದೆ ಕಾಪಾಡಪ್ಪ...ನಂಜುಂಡೇಶ್ವರಾ... ನಿನಗೆ ಬೇಕುಬೇಕಾದ ಸೇವೆಗೆ ಏರ್ಪಾಡು ಮಾಡುತೀನಿ......ಮರ್ಯಾದೆ ಕಾಪಾಡಪ್ಪಾ.

–ತೆರೆ–

ಶಾಸ್ತ್ರಿ : (ಕಪಟ ದುಃಖದ ದನಿಯಲ್ಲಿ) ಕಳ್ಳರು ಹೊತ್ತುಕೊಂಡು ಹೋದರು ಸೀನಪ್ಪ, ಕಳ್ಳರು ಹೊತ್ತುಕೊಂಡು ಹೋದರು.

ಕೆಂಪ : (ಸೀನಪ್ಪನ ಕಡೆ ತಿರುಗಿ) ಹೌದು, ಬುದ್ಧಿ. ಹಂಗಂತ ಹೇಳದ್ರು, ಕೇಳಿ ನನಗೆ ಬಲೇ ಯಸನ ಆಯ್ತು.

ಸೀನಪ್ಪ: ಕೇಳಿ, ನನಗೂ ವ್ಯಸನವೇ. ಆದರೂ, .......ಆಶ್ಚರ್ಯ !

ಶಾಸ್ತ್ರಿ : ಆಶ್ಚರ್ಯ ?

ಸೀನಪ್ಪ: ಕಳ್ಳ ಕದ್ದ ಸೀರೆ ಕೆಂಪಮ್ಮನ ಮೈಮೇಲೆ ಹೇಗೆ ಬಂತು ಅಂಥ ? ಈ ಪ್ರಕರಣಕ್ಕೂ ಕೆಂಪನಿಗೂ ಅಥವಾ ಕೆಂಪಮ್ಮನಿಗೂ, ಇಲ್ಲವೆ ಇಬ್ಬರಿಗೂ ಏನಾದರೂ ಸಂಬಂಧ ಉಂಟೋ ಹೇಗೋ ಅಂತ.....

ಶಾಸ್ತ್ರಿ : ಛೇ, ಛೇ, ಛೇ, ಛೇ, ಛೇ ! ಪಾಪ, ಕೆಂಪನ ಮೇಲೆ ನೀನು ಗುಮಾನಿ ಇಡಬಹುದೆ ? ಕೆಂಪಮ್ಮನಿಗೆ ಒಂದು ಒಳ್ಳೆ ಸೀರೆ ತೆಕ್ಕೊಡಬೇಕು ಅಂತ ಕೆಂಪ ಹೇಳುತಾ ಇದ್ದ.....

ಕೆಂಪ : ಹೌದು ಬುದ್ದೀ ಹೌದು.....ಹಹ್ಹಹಾ.....ಹಹ್ಹಾಹ....ಹಾಹಹ್ಹಹಾ ..........ಕೀಚಕಪ್ಪನ ಯಿಚಾರ ಜ್ಞಾಪ್ಕ ಬರ್‍ತೈತೆ ? (ಎಂದು ಗೊಳ್ಳನೆ ನಗುವನು)

ಸೀನಪ್ಪ: ಏನು ಕೆಂಪ ? ನಿನಗೇನೋ ಸುಮಾನ ಹೀಗೆ ನಗುವುದಕ್ಕೆ ? ಕೀಚಕಪ್ಪ ಯಾರೋ?

ಕೆಂಪ : (ಮತ್ತೆ ನಗುತ್ತ) ನಿನ್ನೆ ಜೈಲಾಟ ಆಡದ್ರು ಬುದ್ಧಿ.... ನಾನೂನು ಕೆಂಪೀನೂ ನೋಡಾಕ್ಹೋಗಿದ್ವು .... ಬಲೇ ಚೆಂದಾಗಿತ್ತು....ಅಂದ್ರೆ ಕೀಚಕಪ್ಪ ಸಾಯ್ಲಿಲ್ಲ ಅಂತನ್ನಿ....ಬಾ, ಕೆಂಪೀ ಹೋಗಾನೆ....ಬುದ್ದಿಯೋರ ಆಸೀರ್ವಾದದಿಂದ ನಿಂಗೂ ಒಂದು ಭರ್ಜರಿ ಸೀರೆ ಸಿಕ್ತು ! ನಂಗೆ ಸೀನಪ್ಪನೋರು ಕೆಲಸ ಕೊಡಸ್ತಾರೆ ! ಸುಮಾನ ಅಲ್ದೆ ಇನ್ನೇನು ಬುದ್ದಿ ? ....ಬಾ ಕೆಂಪಿ, ಹೋಗಾನೆ (ಕೆಂಪಿ ಮುಂದೆ ಹೋಗುವಳು. ಕೆಂಪ ಹಿಂದೆ ಹೋಗುತ್ತ, ಹಿಂದಿರುಗಿ) ಬುದ್ದೀ, ಹೋಗ್ತಾ ದಾರೀಲಿ ಪೋಲೀಸಿಗೆ ಕಂಪ್ಲೇನ್ ಗಿಂಪ್ಲೇನ್ ಕೊಡೋಣೋ ಹೆಂಗೆ..........?

ಶಾಸ್ತ್ರಿ : ಕಂಪ್ಲೇಂಟು ಗಿಂಪ್ಲೇಂಟು ಏನೂ ಕೊಡಬೇಡ ಮಹಾರಾಯ. ನೀನು ಹೋಗು ಪಾಪ, ಹೊತ್ತಾಯ್ತು (ಕೆಂಪ ಮತ್ತೆ ಗೊಳ್ಳನೆ ನಗುತ್ತ ಹೊರಟುಹೋಗುವನು)

ಸೀನಪ್ಪ: ಶಾಸ್ತ್ರಿ.....ಶಾಸ್ತ್ರೀ

ಕೆಂಪ : ಏನು ಬುದ್ದಿ? ಯಾರಿಗೆ ಬುದ್ದಿ ಶಾಸ್ತಿ ? ರಾತ್ರಿ ಚೆನ್ನಾಗಿ ನಿದ್ದೆ ಬಂತು ತಾನೆ ?

ಶಾಸ್ತ್ರಿ : ನಿದ್ದೆ ಮನೆ ಹಾಳಾಗ. ಬೇಗ ಬಿಚ್ಚೋ. ಸೀನಪ್ಪ ಬಂದರೆ ನನ್ನ ಮಾನಾ ಹೋಗುತ್ತೆ....ನಿನ್ನ ದಮ್ಮಯ್ಯ ..... ಬೇಗ ಬಿಚ್ಚೊ ಕೆಂಪ. (ಕೆಂಪ ಬಿಚ್ಚತೊಡಗುವನು) ಬರೋನು ಬಂದೆ, ಇನ್ನು ಸ್ವಲ್ಪ ಹೊತ್ತಿಗೆ ಮುಂಚೆ ಬಂದು ಬಿಚ್ಚಬಾರದಾಗಿತ್ತೇನೋ ? ಯಾರಾದರೂ ಬಂದಿದ್ದರೆ ಏನು ಗತಿಯೋ !

ಕೆಂಪ : ಏನೋ ಹೋಗಲಿ ಪಾಫ ಅಂತ ಹೊರಕ್ಕೆ ಬೀಗ ಹಾಕಿಕೊಂಡು ಹೋಗಿದ್ದೆ ಬುದ್ದಿ.

[ಪ್ರವೇಶ : ಸೀನಪ್ಪ]

ಶಾಸ್ತ್ರಿ : ಅಯ್ಯೋ, ಸೀನಪ್ಪ ಬಂದೇ ಬಿಟ್ಟ ಕೊನೆಗೂ.

ಸೀನಪ್ಪ : ಏನು ಶಾಸ್ತ್ರಿ, ಏನು ಅವತಾರ : ಇದೇನು ಹಗ್ಗದ ಬಿಗಿತ ! ಇದೇನು, ಕೆಂಪ ? ಏನು ಶಾಸ್ತ್ರಿ !

ಶಾಸ್ತ್ರಿ : (ಸಮಯಸ್ಫೂರ್ತಿಯಿಂದ) ಏನು ಹೇಳಲಿ ಸೀನಪ್ಪ, ಏನು ಹೇಳಲಿ...ಏನೂ ಅಂತ ಹೇಳಲಿ!...ಕಳ್ಳರು ನುಗ್ಗಿ.... ನೋಡು ನನಗೆ ಈ ಅವಸ್ಥೆ ಬಂತು. ಕೆಂಪಾ, ಕೆಂಪಾ ಕೆಂಪಾ (ಎಂದು ಮೊರೆಯಿಟ್ಟುಕೊಳ್ಳುವ ದನಿಯಲ್ಲಿ ಅವನ ಕಡೆ ನೋಡುವನು)

ಕೆಂಪ : (ನಿಧಾನವಾಗಿ ಬಿಚ್ಚುತ್ತ) ಹೌದು ಬುದ್ದಿ ! ಯಾನಾರ ಹೇಳಲಿ ನಾನು! ಬುದ್ದಿಯೋರ್ನ ಬಿಗಿದುಬಿಟ್ಟವ್ರೆ ಅಂತ ಕೆಂಪಿ ಓಡಿಬಂದು ಹೇಳಿದ್ಲು........ನಾನೂ ಬಿರ್ರನೆ ಹೊಂಟು ಬಂದೆ........ಬಂದು ನೋಡ್ತೀನಿ, ಬುದ್ಯೋರ ಅವಸ್ತೆ ಹಿಂಗಾಗದೆ. (ಬಿಚ್ಚಿ ಮುಗಿಸುವನು)

ಶಾಸ್ತ್ರಿ : ಬಾ, ಸೀನಪ್ಪ, ಕುಳಿತುಕೊ ಬಾ. (ಸೀನಪ್ಪ ಕೆಂಪಿ ಉಟ್ಟಿರುವ ಸೀರೆ, ತೊಟ್ಟಿರುವ ಕುಪ್ಪಸ ಇವನ್ನೆ ದಿಟ್ಟಿಸಿ ನೋಡುತ್ತಿರುವನು.) ಬಾ ಕುಳಿತುಕೊ (ಎಂದು ಸೀನಪ್ಪನನ್ನು ಮಂಚದ ಮೇಲೆ ಕುಳ್ಳಿರಿಸಿ, ತಾನೂ ಕುಳಿತುಕೊಳ್ಳುವನು.) ನೋಡು, ಕೆಂಪ ದೊಡ್ಡ ಉಪಕಾರಮಾಡಿದ. ಅವನಿಗೆ ಖಂಡಿತ ಕೆಲಸ ಕೊಡಿಸಬೇಕು ನೋಡು, ಹೇಗಾದರೂ ಮಾಡಿ.

ಸೀನಪ್ಪ : (ಸುತ್ತಲೂ ಅತ್ತಇತ್ತ ನೋಡಿ) ಎಲ್ಲಿ, ನಿನ್ನೆ ಸಂಜೆ ತಂದಿದ್ದ ಸೀರೆ ಗಂಟು?

ಶಾಸ್ತ್ರಿ : ಕೂತುಕೋ ಸೀನಪ್ಪ, ಹೊರಟುಹೋಗಬೇಡ (ಎಂದು ಒಳಕ್ಕೆ ಹೋಗುವನು)

ಸೀನಪ್ಪ : ಏನೋ ಅಂತಿದ್ದೆ, ಒಳ್ಳೆ ಅಭಿನವ ಕೀಚಕ ! ಅಂದ್ರೆ, ಪುಣ್ಯಮಾಡಿದ್ದ, ಪ್ರಾಣದಿಂದ ಬದುಕಿ ಕೊಂಡ. ಒಳ್ಳೆ ಶಾಸ್ತಿ ಶಾಸ್ತ್ರೀಗೆ ! ಒಳ್ಳೆ ಶಾಸ್ತಿ ! (ಗೊಳ್ಳನೆ ನಗುತ್ತಿರುವಾಗ)

–ತೆರೆ–

ಶಾಸ್ತ್ರಿ : ಏನ್ ಸೀನಪ್ಪ ? ಅದಿರಲಿ...ಇನ್ನು ಸ್ವಲ್ಪ ಕಾಫಿ ಗೀಫಿ ಕಾಸೋಣ, ಹೋಗಿ.......

ಸೀನಪ್ಪ : ಕಾಫಿಗೇನು ಆತುರ. ಕುಳಿತುಕೊಳ್ಳಯ್ಯ.

ಶಾಸ್ತ್ರಿ : ಸರಿ, ನಿನಗೇನು, ಪಟ್ಟಾಗಿ ಕುಡಿದುಕೊಂಡು ಬಂದು ಬಿಟ್ಟಿದ್ದೀ. ನನಗೆ ತಾನೇ ಆಹ್ಹಹಾ.......ಅಯ್ಯಪ್ಪ (ಎಂದು ಮೈಕೈ ತಡವರಿಸಿಕೊಳ್ಳುವನು)

ಸೀನಪ್ಪ : ಶಾಸ್ತ್ರಿ....

ಶಾಸ್ತ್ರಿ : ಏನು?

ಸೀನಪ್ಪ : ಕೆಂಪ, ಕೆಂಪಿ, ಸೀರೆ, ಹಗ್ಗ, ಕಳ್ಳತನ.........ಏನೋ ರಹಸ್ಯ ಇದೆ. ಅಂದರೆ ನನಗೆ ಸ್ವಲ್ಪ ಸ್ವಲ್ಪ ಅರ್ಥವೂ ಆಗ್ತಾ ಇದೆ.

ಶಾಸ್ತ್ರಿ : ಸೀನಪ್ಪ, ನಿನ್ನ ಕೈಮುಗಿದು ಬೇಡಿಕೊಳ್ಳುತ್ತೇನೆ. ಅರ್ಥವಾದರೆ ಸಂತೋಷ. ವ್ಯಾಖ್ಯಾನ ಮಾಡಬೇಡ.

ಸೀನಪ್ಪ : ಅಲ್ಲ, ನಿನಗೆ ಈ ದುರ್ಬುದ್ಧಿ ಯಾಕೆ ಬಂತು ?

ಶಾಸ್ತ್ರಿ : ಏನು ದುರ್ಬುದ್ಧಿ ? ನನಗೆ ಅರ್ಥವಾಗೋದಿಲ್ಲ.

ಸೀನಪ್ಪ : ಬಿಡಿಸಿ ಹೇಳಲೇನು ? ಹೇಳಬೇಕೇನು?

ಶಾಸ್ತ್ರಿ : ಮಹಾರಾಯಾ, ಸಾಕು, ಮತ್ತೊಂದುಸಲ ಕೈ ಮುಗಿದು ಬೇಡಿಕೊಳ್ಳುತ್ತೇನೆ ನಿನ್ನ (ಮಂಡಿಯೂರಿ ಕುಳಿತು, ಕೈಮುಗಿದುಕೊಂಡು) ನಿನಗೆ ಅರ್ಥವಾಗಿದೆ......... ಸಮ್ತಾ ಹೊಡೀತೀನಿ......... ಅದನ್ನು ಹರಡಿ ಅನರ್ಥಮಾಡಬೇಡ, ಮಿತ್ರಾ !

ಸೀನಪ್ಪ : ಏಳಯ್ಯಾ, ಏಳು (ಶಾಸ್ತ್ರಿ ಏಳುವನು) ಏನೂ ಮಾಡೋದಿಲ್ಲ, ಹೆದರಿಕೊಳ್ಳಬೇಡ. ಮೊದಲು ಹೋಗಿ, ಕೈಕಾಲು ಮುಖ ತೊಳೆದುಕೊ........ ಕಾಫಿ ಕಾಯಿಸು....... ಬೆಚ್ಚಗೆ ಮಾಡಿಕೋ ನೊಂದ ದೇಹಾನ.........ಆಮೇಲೆ ಸ್ವಲ್ಪ ಮದುವೆ ಮಾತು ಆಡೋಣ..........ಆವೊತ್ತು ನಾನು ಹೇಳಿದೆನಲ್ಲ, ಆ ಗೌರಮ್ಮನವರ ಮಗಳು, ಕಪ್ಪಗಿದ್ದರೂ ಪರವಾಯಿಲ್ಲ ಕೆಂಪಿಗಿಂತ ಮೇಲು....... (ನಗತೊಡಗುವನು)

ಶಾಸ್ತ್ರಿ : ಸೀನಪ್ಪಾ, ಸೀನಪ್ಪಾ........ ನಿನ್ನ ದಮ್ಮಯ್ಯ ಕಣೋ....... ಸುಮ್ಮನಿರೋ..........

ಸೀನಪ್ಪ : ಸುಮ್ಮನಿರುತೀನಿ ............ ನೀನು ಹೋಗು ಮೊದಲು ಒಳಕ್ಕೆ.

# ದೃಶ್ಯ ೧

[ಸ್ಥಳ : ಲಕ್ಷ್ಮೀನಾರಣಪ್ಪನ ಮನೆಯಲ್ಲಿ ಆತನ ಕೋಣೆ. ಚಿತ್ರಪಟಗಳಿಂದಲೂ ಪೀಠೋಪಸ್ಕರಗಳಿಂದಲೂ ಸುಸಜ್ಜಿತವಾಗಿದೆ. ಲಕ್ಷ್ಮೀನಾರಣಪ್ಪ ಯೋಚನೆಯಲ್ಲಿ ಮುಳುಗಿ ಕುಳಿತಿರುವನು. ಲಕ್ಷ್ಮೀದೇವಮ್ಮ ಪ್ರವೇಶಿಸುವಳು.)

ಲ. ದೇ. – ಏನು, ಹೀಗೆ ಗಲ್ಲದ ಮೇಲೆ ಕೈಯಿಟ್ಟು ಕುಳಿತುಬಿಟ್ಟಿದೀರಿ? ಅಂಗಡಿಗೆ ಹೋಗೋದಿಲ್ಲವೆ?

ಲ. ನಾ.–ಹೋದರಾಯ್ತು. ಏನು ಕೊಳ್ಳೇಹೋಗೋದು? ಹೊತ್ತು ಕಳೆಯೋಕೆ ಒಂದು ಅಂಗಡಿ ಅಂತ ಇಟ್ಟಿದೀನಿ. ಅಲ್ಲಿ ಆಗೋ ವ್ಯಾಪಾರ ಅಷ್ಟರಲ್ಲೇ ಇದೆ. ನಾನು ಸಂಪಾದನೆ ಮಾಡಿ ಯಾರಿಗೆ ಇಟ್ಟು ಹೋಗಬೇಕಾಗಿದೆ? ನನ್ನ ಹಣೆಯಬರಹಕ್ಕೆ ನಿನಗೂವೆ.....

ಲ. ದೇ. – ಸರಿ, ಸರಿ. ಹತ್ತು ವರ್ಷದಿಂದಲೂ ಈ ಮಾತು ಆಡುತ್ತಾ ಇದೀರಿ. ಈ ಹೊತ್ತೇ ಯಾಕೆ ಆ ನೆನಪು?

ಲ. ನಾ. – ನಾಳೇನೇ ಅಲ್ಲವೆ ಸೀತೆಯ ಹುಟ್ಟಿದಹಬ್ಬ?

ಲ. ದೇ. – ಹೌದು.

ಲ. ನಾ. – ಅವಳ ಹುಟ್ಟಿದಹಬ್ಬ ಬಂದಾಗಲೆಲ್ಲಾ ನೆನಪು ಬಂದೇ ಬರುತ್ತೆ. ಇದು ಒಂಬತ್ತನೇ ವರ್ಷ. ಪ್ರತಿವರ್ಷವೂ ನಾನು ನನ್ನ ದುರ್ಗತಿಯನ್ನು ನೆನಸಿಕೊಂಡು ಇದೇ ಕುರ್ಚಿಯ ಮೇಲೆ ಹೀಗೇ ಕೂತುಕೊಂಡು, ಮುಖ ಜೋತು ಹಾಕಿ ಕೊಳ್ಳೋದು, ನೀನು ಬಂದು "ಅಂಗಡೀಗೆ ಹೋಗೋದಿಲ್ಲವೆ, ಸೀತೇಗೊಂದು ಸೀರೆ ತರೋದಿಲ್ಲವೆ?" ಅಂತ ಕೇಳೋದು, ನಾನು "ಯಾರಿಗೋ ಸೀರೆ ಏನೋ ಸಂಸಾರ" ಅಂತ ಗೊಣಗೋದು, ನೀನು ನನಗೆ–ಐವತ್ತು ವರ್ಷ ತುಂಬಿದ ನನಗೆ–ತೃಪ್ತಿ ತಾಳ್ಮೆ ಸಮಾಧಾನ ವೈರಾಗ್ಯ ಇವನ್ನ ಉಪದೇಶಮಾಡುವುದು–ಇದೆಲ್ಲ, ನನಗೆ, ಜ್ಞಾಪಕಕ್ಕೆ ಬರುತ್ತೆ; ನಿನಗೆ ಮರೆತು ಹೋಗುತ್ತೆ. ಈ ಸಲ, ಈ ಸೀರೇ ವಿಚಾರಾನೂ ನಾನೇ ಜ್ಞಾಪಿಸಿಕೊಂಡಿದೀನಿ. ನೀನೇನೂ ಜ್ಞಾಪಿಸಬೇಕಾಗಿಲ್ಲ.

ಲ. ದೇ. – ನಿಮ್ಮ ಜ್ಞಾಪಕ ಶಕ್ತಿ ಕಂಡು, ನನಗೂ ಸಂತೋಷಾನೇ ಆಂದ್ರೆ. ನಮ್ಮ ತಂದೆ ತಾಯಿಗಳು, ಎರಡನೇ ವರ ಅಂತ ತಿಳಿದೂ ತಿಳಿದು,

## ಪಾತ್ರ ಪರಿಚಯ

**ಲಕ್ಷ್ಮೀನಾರಣಪ್ಪ :** ಗೃಹಪತಿ; ಸುಮಾರು 50 ವರ್ಷ; ಬ್ರಾಹ್ಮಣ ಜಾತಿಯಾದರೂ ವೈಶ್ಯವೃತ್ತಿ–ಜವಳೀ ವರ್ತಕ.

**ಲಕ್ಷ್ಮೀದೇವಮ್ಮ :** ಗೃಹಿಣಿ ; ಎರಡನೆಯ ಹೆಂಡತಿ ; ಸುಮಾರು 30 ವರ್ಷ.

**ಗಣಪತಿಶಾಸ್ತ್ರಿ :** ಲಕ್ಷ್ಮೀನಾರಣಪ್ಪನ ಅಂಗಡಿಯಲ್ಲಿ–ಗುಮಾಸ್ತೆ; ಮನೆಯಲ್ಲಿ–ಪೂಜಾರಿ, ಮಂತ್ರಿ, ಆಪ್ತ, ಬಂಧು ಬಳಗ, ಇತ್ಯಾದಿ; ಜೊತೆಗೆ ಜ್ಯೋತಿಷ್ಕ. ಆಬಾಲ ಬ್ರಹ್ಮಚಾರಿ, ಸುಮಾರು 35-40 ವರ್ಷ.

**ಸೀತೆ :** ಲಕ್ಷ್ಮೀದೇವಮ್ಮನ ಚಿಕ್ಕಮ್ಮನ ಮಗಳು; ವಾವೆಯಲ್ಲಿ ತಂಗಿ ; ವಾಸ್ತವವಾಗಿ ಸಾಕುಮಗಳು. ಸುಮಾರು 18 ವರ್ಷದ ಬೆಳೆದ ಕನ್ಯೆ.

**ಶ್ರೀಧರ :** ಲಕ್ಷ್ಮೀದೇವಮ್ಮನ ತಮ್ಮ; ಬಿ.ಎ. ಗುಮಾಸ್ತೆ. ಮದುವೆಯಾಗಿದೆ. ಸುಮಾರು 25 ವರ್ಷ.

**ರಘುಪತಿ :** ಶ್ರೀಧರನ ಗೆಳೆಯ, ಸಹಪಾಠಿ; ಬಿ ಎಸ್‌ಸಿ. ಯಾತ್ರೆಯ ನಿತ್ಯಪ್ರವಾಸಿ. ಮದುವೆಗೆ ಎಂದೊ ಸಿದ್ಧನಾದ ವರ; ಶ್ರೀಧರನ ಸಮ ವಯಸ್ಕ.

**ಜಗನ್ನಾಥರಾಯರು :** ರಿಟೈರಾದ ನೌಕರರು; ವಿಧುರರು; ಮದುವೆಗೆ ಸಿದ್ಧನಾಗಿರುವ ವರನ ತಂದೆ; ಲಕ್ಷ್ಮೀನಾರಾಣಪ್ಪನವರ ಇತ್ತೀಚಿನ ಆಪ್ತ ಸ್ನೇಹಿತರು.

ಲ. ನಾ.–ಇಲ್ಲಾ, ಇಲ್ಲಾ, ಇಲ್ಲ.

ಲ.ದೇ.–ಹಾಗಾದರೆ, ಗಣಪತಿಶಾಸ್ತ್ರಿಗಳ ಮುಂದೆ ಅದೇನು ಜಾತಕದ ರಾಶಿ? ನಾನು ಕೇಳಿದ್ದಕ್ಕೆ ಹೆಣ್ಣುಗಳ ಜಾತಕ ಅಂದರು? ನಿಮ್ಮ ಜಾತಕವೂ ಇದೆಯೇ ಅಂತ ಕೇಳಿದ್ದಕ್ಕೆ, "ಅವರದ್ದೂ ಇದೆ. ನೋಡ್ತಾ ಇದೀನಿ. ನೀವೇನು ಅಷ್ಟು ಯೋಚನೆ ಮಾಡಬೇಡಿ" ಅಂದರು....ಯೋಚನೆ ಏನಿಲ್ಲ, ನನಗೆ, ನೀವು ಈ ಯೋಚನೆ ಬಿಡಿ ಅಂತ, ನಿಮ್ಮಲ್ಲಿ ಯಾಚನೆ ಮಾಡೋಣ ಅಂತ, ಬಂದೆ.

ಲ. ನಾ.–ಬಿಡೋಕೆ, ಯೋಚನೆಯೇ ಇಲ್ಲವಲ್ಲೆ! ನೀನು ತಪ್ಪು ತಿಳಿದುಕೊಂಡಿದ್ದಿ. ಆ ಜಾತಕಗಳ ಪೈಕಿ ಗಂಡಿನ ಜಾತಕ ಒಂದು ಇದೆಯೇ ಅಂತ ಶಾಸ್ತ್ರಿಯನ್ನು ನೀನು ಯಾಕೆ ಕೇಳಲಿಲ್ಲ ?

ಲ. ದೇ.–ಕೇಳಿದೆನಲ್ಲ–'ಅವರ ಜಾತಕ ಇದೆಯೆ' ಅಂತ? ನಾನು ಅಂದುಕೊಂಡಿದ್ದ ಉತ್ತರವೂ ಬಂತಲ್ಲ?

ಲ.ನಾ.–ಓಹೋ, ನಾನೇ ಗಂಡು ಅಂತ ಭಾವಿಸಿಕೊಂಡು ಬಿಟ್ಟೆಯೋ ನೀನು! (ಗಟ್ಟಿಯಾಗಿ ನಗುವನು)

ಲ. ದೇ–ಯಾಕಾಗಬಾರದು? ಎರಡುಸಲ ಗಂಡಾಗಿ ಹಸೆ ಮಣೆ ಮೆಟ್ಟಿಲ್ಲವೆ? ಮೆಟ್ಟಿದ್ದಕ್ಕೆ ಮೂರುಸಲ ಆಗಲಿ ಅಂತ ನಿಮ್ಮ ಇಷ್ಟ ಇರಬಹುದು.

ಲ. ನಾ.–ನೋಡು, ನಿಜವಾಗಿ ಹೇಳುತೀನಿ: ಕನಸಿನಲ್ಲಿ ಕೂಡ ಇನ್ನೊಬ್ಬಳನ್ನು ಕೈಹಿಡಿಯೋ ಇಷ್ಟ ನನಗೆ ಇಲ್ಲ ಏನೋ ಮಾತಿಗೆ ಮಾತು ಬಂದು, ಒಂದನೇ ಬೀದಿಯಲ್ಲಿದಾರಲ್ಲ–ಆ ಜಗಳೂರಿನ ಜಗನ್ನಾಥರಾಯರು, ಈಚೆಗೆ ಅವರ ಪರಿಚಯ ಆಯ್ತು ನನಗೆ–ಅವರಿಗೆ ಹೇಳಿದೆ, ಜಾತಕ ನೋಡೋದರಲ್ಲಿ ಗಟ್ಟಿಗ ನಮ್ಮ ಗಣಪತಿಶಾಸ್ತ್ರಿ ಅಂತ. ಅವರ ಮಗನಿಗೆ ಹೆಣ್ಣು ಕೊಡಬೇಕೂ ಅಂತ ಯಾರುಯಾರೋ ಬಂದು ಜಾತಕಗಳನ್ನು ಕೊಟ್ಟು ಹೋಗಿದಾರಂತೆ. ಆ ಹೆಣ್ಣಿನ ಜಾತಕಗಳನ್ನೂ ಅವರ ಮಗನ ಜಾತಕಾನೂ ನೋಡಿಸಬೇಕೂ ಅಂತ ನನ್ನ ಕೈಗೆ ಕೊಟ್ಟರು. ಅವರ ಗ್ರಹಚಾರವೂ ಏನೋ ಚೆನ್ನಾಗಿಲ್ಲವಂತೆ. ಸ್ವಂತ ಜಾತಕಾನೂ ಕೊಟ್ಟರು. ಆಗ, ನನ್ನ ಗ್ರಹಚಾರಫಲ ಹೇಗಿದೆಯೋ ತಿಳಿದುಕೊಳ್ಳೋಣ ಅಂತ ನನಗೂ ಚಪಲ ಆಯ್ತು. ಅವರು ಕೊಟ್ಟ ಜಾತಕಗಳು, ನನ್ನ ಜಾತಕ, ಎಲ್ಲಾನೂ ಶಾಸ್ತ್ರಿಯ ಕೈಗೆ ಕೊಟ್ಟಿದೇನೆ. ಇದೇ, ಅವನ ಮುಂದೆ, ನೀನು ಕಂಡ ಜಾತಕಗಳ ರಾಶಿ.

ಲ. ದೇ.–ಅದು ಯಾರು, ನೀವು ಹೇಳಿದ್ದು, ಜಗಳೂರು...?

ಲ ನಾ.–ಜಗನ್ನಾಥರಾಯರು.

ಯತ್ನವಿಲ್ಲದೆ ನಿಮ್ಮ ಕೈಗೆ ನನ್ನನ್ನ ಕೊಟ್ಟಾಗ, ತಿಳೀದ ನಾನು, ಹಿಗ್ಗುತಾನೇ ನಿಮ್ಮ ಮನೆಗೆ ಬಂದೆ. ತಿಳಿದಮೇಲೆ, ಏನಾದರೂ ಕೊರಗಿದೆನೆ, ಕೋಪಿಸಿಕೊಳ್ಳುತ್ತಾ ಇದ್ದೆನೆ? ನಿಮಗೆ ಯಾವ ಯೋಚನೆಯೋ ನನಗೂ ಅದೇ ಯೋಚನೆ ಇರಲಿಲ್ಲವೆ? ಆದರೂ ಸಂತೋಷವಾಗೇ ಇರಲಿಲ್ಲವೆ? ಈಗಂತೂ, ನಿಮಗೆ ವಯಸ್ಸಾದರೂ, ಅರುಳುಮರಳು ಇಲ್ಲವಲ್ಲಾ ಅಂತ ಇನ್ನೂ ಸಂತೋಷ. (ಕ್ಷಣ ಬಿಟ್ಟು) ಅದಿರಲಿ, ನಾನು ಹೇಳಿದ್ದ ಮುಖ್ಯ ವಿಚಾರಾನೇ ನೀವು ಮರೆತ ಹಾಗೆ ಕಾಣುತ್ತೆ.

ಲ. ನಾ. – ಏನದು ?

ಲ. ದೇ. – ಸೀತೆಯ ಮದುವೆಯ ವಿಚಾರ.

ಲ. ನಾ. – ಆಗುತ್ತೆ. ಅದೇನು ಅಷ್ಟು ಆತುರದ ವಿಷಯವೆ?

ಲ. ದೇ. – (ಸ್ವಲ್ಪ ಮುನಿಸಿನಿಂದ) ಹಾಗಾದರೆ ನಿಮ್ಮ ಮದುವೆ ವಿಚಾರ ಆತುರವಾಗಿದೆಯೇನೋ?

ಲ.ನಾ.–ಹಾಗೆಂದರೇನೆ? ನನ್ನ ಮದುವೆಯ ವಿಚಾರವೇ! ನನ್ನ ಮದುವೆ! ರಾಮ ರಾಮ! ನೀನು ಬದುಕಿರುವ ಹಾಗೆಯೇ ನನಗೆ ಇನ್ನೊಂದು ಮದುವೆಯೆ! ಈ ಹುಳು ನನ್ನ ತಲೆಗೇ ಹೊಕ್ಕಿಲ್ಲ, ನಿನ್ನ ತಲೆಗೆ ಹೇಗೆ ಹೊಕ್ಕಿತು!

ಲ ದೇ.–ಯೋಚನೆ ಇಲ್ಲದೆ ಪ್ರಯತ್ನ ನಡೆಯುತ್ತ ಇದೆಯೆ?

ಲ. ನಾ.–ಪ್ರಯತ್ನ! ಇದೇನು ಹೀಗೆ ಮಾತನಾಡುತಿ, ನನ್ನ ರತ್ನ?

ಲ. ದೇ.–ಸಾಕು ಅಂದ್ರೆ, ಈ ಸುಳ್ಳು ಸರಸ. ಗಂಡಸರೆಲ್ಲ ಹೀಗೇ. ಮೇಲೆ ಸರಸ, ಒಳಗೆ ಗರಗಸ. ನಾನು ಸತ್ತ ಮೇಲೆ ಬೇಕಾದರೆ ಯೋಚನೆ ಮಾಡಿ ಅಂದ್ರೆ. ನಾನು ಬದುಕಿರೋವಾಗಲೇ, ಹೀಗೆ, ನನ್ನ ಕತ್ತು ಕುಯ್ಯಬೇಡಿ.

ಲ. ನಾ.–ನೀನು ಸಾಯೋದು, ನಿನ್ನ ಕತ್ತು ಕುಯ್ಯೋದು–ರಾಮ ರಾಮ! ಇದೇನೇ ನಿನ್ನ ತಲೆಯೊಳಗೆ ಈ ಅವಾಂತರ?

ಲ. ದೇ.–ಏನೇ? ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದ ಹಾಗೆ. ಮನೆಯೊಳಗೇ ನಡೀತಾ ಇದೆ, ನಿಮ್ಮ ಅವಾಂತರ, ಮರೆಯಲ್ಲಿ?

ಲ. ನಾ.–ಹ್ಞಾ ! ಏನೇ ನೀನು ಹೇಳೋದು?

ಲ. ದೇ–ಸತ್ಯವಾಗಿ ಹೇಳಿ ಅಂದ್ರೆ. ನೀವು–

ಲ. ನಾ.–ನೋಡು, ನಿನ್ನಾಣೆಗೂ–

ಲ. ದೇ.–ಹಾಗನ್ನಿ. ನನ್ನಾಣೆ ! ನಾನು ಸತ್ತರೆ, ನಿಮ್ಮ ಮದುವೆಗೆ ನಿರ್ವಿಘ್ನ.

ಲ. ನಾ.–ಬಿಡುತು ಅನ್ನು. ನನ್ನಾಣೆಗೂ, ನಿನ್ನ ಹೊರತು–

ಲ. ದೇ.–ಇನ್ನೊಬ್ಬಳನ್ನು ಕಟ್ಟಿಕೊಳ್ಳುವುದಿಲ್ಲವೋ?

ಲ. ನಾ.–ಸದ್ಯ, ನಿನ್ನ ಬೇಳೆ ಈಗ ಬೆಂದಹಾಗಾಯಿತಲ್ಲ. (ಲ. ದೇ. ಹೋಗುವಳು.)

[ಪ್ರವೇಶ: ಗಣಪತಿ ಶಾಸ್ತ್ರಿ]

ಗಣಪತಿ–ರಾಯರೆ, ಮಂಗಳಾರತಿ.

ಲ. ನಾ.–(ಮಂಗಳಾರತಿ ತೆಗೆದುಕೊಂಡು) ಶಾಸ್ತ್ರಿ, ನಿನ್ನ ಕೂಡ ಒಂದು ವಿಚಾರ ಪ್ರಸ್ತಾಪಮಾಡಬೇಕಾಗಿದೆ. ಪೂಜೆ ಮುಗಿಯಿತು ತಾನೆ?

ಗ–ಮಂಗಳಾರತಿ ಆದಮೇಲೇನು ಎಲ್ಲ ಮುಗಿದ ಹಾಗೇ.

ಲ. ನಾ.–ಸರಿ, ಹಾಗಾದರೆ ಬಟ್ಟೆ ಹಾಕಿಕೊಂಡು, ಸ್ವಲ್ಪ ಬಾ. [ಗಣಪತಿ ಶಾಸ್ತ್ರಿ ಹೋಗುವನು.]

[ಪ್ರವೇಶ: ಸೀತೆ]

ಸೀತೆ, ಎಲ್ಲಿಗೆ ಹೋಗಿದ್ದೆಯಮ್ಮ?

ಸೀತೆ–ಇಲ್ಲೆ, ಪಕ್ಕದ ಮನೆಗೆ ಹೋಗಿದ್ದೆ ಮಾವಯ್ಯ.

ಲ ನಾ.–ಕುತುಕೊ, ನಿನಗೆ ಒಂದು ಮಾತು ಹೇಳಬೇಕು.

ಸೀ–(ನಿಂತುಕೊಂಡೆ) ಅದೇನು ಮಾವಯ್ಯ?

ಲ. ನಾ.–ನಿನ್ನ ಮದುವೆಯ ವಿಚಾರ ಕಣಮ್ಮಾ.

ಸೀ–(ತಲೆ ಬಗ್ಗಿಸಿ, ನಾಚಿಕೆ ನಟಿಸುವಳು).

ಲ. ನಾ.–ನೋಡು ಸೀತಾ, ನೀನು ಚಿಕ್ಕವಳಾಗಿದ್ದಾಗಲೇ ನಿನ್ನ ತಂದೆ ತೀರಿಕೊಂಡುಬಿಟ್ಟರು ನಿನ್ನ ತಾಯಿ ಅವಳಿಗೆ ಚಿಕ್ಕಮ್ಮ. ನೀನು ಅವಳಿಗೆ ತಂಗಿಯಹಾಗೆ. ನಿನ್ನ ತಾಯಿ ಇದ್ದಾಗಲೇ ನಿನ್ನನ್ನು ಇಲ್ಲಿ ಬಿಟ್ಟುಹೋದರು. ಆಗ ನಿನಗೆ ಏಳೋ ಎಂಟೋ. ಆಮೇಲೆ ಅವರೂ ಕಣ್ಣು ಮುಚ್ಚಿಕೊಂಡರು. ಅವಳು ನಿನ್ನನ್ನ ಮಗಳು ಅಂತಲೇ ತಿಳಿದು ಸಾಕಿದಾಳೆ. ನಾನೂ ಹಾಗೇ ಭಾವಿಸಿದೇನಮ್ಮ. ನನ್ನ ಮನಸ್ಸಿನಲ್ಲಿ ಒಬ್ಬ ವರ ಇದಾನೆ, ಜಾತಕಾನುಕೂಲ ಆದರೆ, ನೀನು ಒಪ್ಪಿಕೊಳ್ಳಬೇಕಮ್ಮ. ಈಗಿನ ಕಾಲದ ಹುಡುಗಿಯರ ಹಾಗೆ ಆಡಬೇಡಮ್ಮ.

ಸೀ–ಥೂ, ಬಿಡಿ ಮಾವಯ್ಯ. ಎಂದು ಸರಸರನೆ ಹೋಗುವಳು.

[ಪ್ರವೇಶ: ಗಣಪತಿ ಶಾಸ್ತ್ರಿ : ಹೊರಕ್ಕೆ ಹೋಗುವ ಉಡುಪಿನಲ್ಲಿ: ಪಂಚೆ ಷರಟು, ಉತ್ತರೀಯ]

ಲ. ನಾ.–ಬಾ, ಶಾಸ್ತ್ರಿ. ಕೂತುಕೊ.

ಗ–(ಪಕ್ಕದ ಕುರ್ಚಿಯ ಮೇಲೆ ಕುಳಿತು) ಏನು, ಅಪ್ಪಣೆ ಆಗಬೇಕು.

ಲ. ನಾ–ನೋಡು, ಶಾಸ್ತ್ರಿ: ನೀನು ಹಣಕ್ಕೆ, ಹೆಸರಿಗೆ, ಜಾತಕ ನೋಡುವ

ಲ. ದೇ. ಜಗನ್ನಾಥರಾಯರೆ? ನಮ್ಮ ತಾಯಿಗೆ ದೂರದ ಸಂಬಂಧ ಅಂತ ಕಾಣುತ್ತೆ ಅಂದ್ರೆ. ನನ್ನ ಮದುವೆ ಮುಂದೆ ನಮ್ಮ ಮನೆಗೆ ಒಂದೆರಡು ಸಲ ಬಂದಿದ್ದ ಹಾಗೂ ನನಗೆ ಜ್ಞಾಪಕ.

ಲ. ನಾ.–ಮೊಳಕಾಲ್ಮುರುವಿಗೇ?

ಲ. ದೇ.–ಹ್ಞೂ ಅಂದ್ರೆ!

ಲ. ನಾ.–ಇರಬಹುದು. ಮೊಳಕಾಲ್ಮುರುವಿನಲ್ಲೂ ಒಂದೆರಡು ವರ್ಷ ಇದ್ದೇ ಅಂತ ಹೇಳಿದರು.

ಲ. ದೇ.–ಹಾಗಾದರೆ ಅವರೇ ಅಂದ್ರೆ. ಹೇಗಿದ್ರೂ ಶಾಸ್ತ್ರಿಗಳು ಜಾತಕ ನೋಡುತಾ ಇದಾರೆ. ನಮ್ಮ ಸೀತೇ ಜಾತಕಾನೂ ಅವರ ಕೈಗೆ ಕೊಡಿ. ಜಗನ್ನಾಥರಾಯರ ಮಗನ ಜಾತಕಕ್ಕೆ ಅವಳ ಜಾತಕ ಕೂಡಿ ಬಂದರೆ ಪ್ರಸ್ತಾಪ ಮಾಡಬಹುದಲ್ಲ?

ಲ. ನಾ.–ಅದಕ್ಕೇನು, ಅಗತ್ಯವಾಗಿ ಆಗಬಹುದು. ನಿರಾಯಾಸವಾಗಿ ಗಂಡು ಸಿಕ್ಕಿದರೆ ನನಗೂ ಸಂತೋಷ. (ಒಳಗೆ ಗಂಟೆಯ ಸದ್ದು). ನೋಡಿದೆಯೋ, ಶುಭಶಕುನ. ನಿನ್ನ ಇಷ್ಟವೇ ನಡೆದರೂ ನಡೆಯಬಹುದು. ಅದಿರಲಿ, ಸೀತೆಯ ಜಾತಕ ಒಂದು ಇದೆಯೇನು?

ಲ. ದೇ–ನನ್ನ ಟ್ರಂಕಿನಲ್ಲಿ ಇದೆ ಅಂತ ಕಾಣುತ್ತೆ. ಹುಡುಕಿ ನೋಡ್ತೇನೆ.

ಲ. ನಾ.–ಬಹು ಮುಂದಾಲೋಚನೆ ನಿನ್ನದು. ಹಗ್ಗದ ಸಮೇತ ಹಸು ಹೊಡೆದುಕೊಂಡು ಬರುವ ಹಾಗೆ, ಜಾತಕ ಸಮೇತ ಸೀತೆಯನ್ನು ಕರೆದುಕೊಂಡು ಬಂದು ಸಾಕುತಾ ಇದೀಯೆ.

ಲ. ದೇ.–ನಮಗಂತೂ ಮಕ್ಕಳಿಲ್ಲ ಅಂತ, ಸೀತೆಯನ್ನ ಕರೆದುಕೊಂಡು ಬಂದು ಸಾಕಿದ್ದಾಯಿತು. ನನ್ನ ಸಂಬಂಧ ಅಂತ ಅವಳನ್ನು ಕಂಡರೆ ನಿಮಗೆ ಸ್ವಲ್ಪ ತಾತ್ಸಾರ. ಅವಳು ನನ್ನ ಮಗಳಿಗಿಂತ ಹೆಚ್ಚು. ಅವಳ ಹೊಣೆ ಎಲ್ಲ ಹೊತ್ತ ಮೇಲೆ ಮುಂದಿನ ಆಲೋಚನೆ ಇಟ್ಟುಕೊಳ್ಳದಿದ್ದರೆ ಆಗುತ್ತೆಯೆ ಅಂದ್ರೆ? 'ಅವಳ ಮದುವೆ ಮಾಡುವುದು ನನ್ನ ಭಾರ' ಅಂತ ನೀವೂ ಒಪ್ಪಿಕೊಳ್ಳಲಿಲ್ಲವೆ? ನನ್ನ ತಮ್ಮನಿಗೆ ಹೇಳಿ ಅವಳ ಜಾತಕ ತರಿಸಿಟ್ಟುಕೊಂಡೆ.

ಲ. ನಾ.–ಒಳ್ಳೇ ಕೆಲಸವೇ ಆಯ್ತು ಬಿಡು. (ಮತ್ತೆ ಗಂಟೆಯ ಸದ್ದು.) ಶುಭಮಸ್ತು.

ಲ. ದೇ.–ಸರಿ, ನಾನು ಹೋಗ್ತೇನೆ. ಬೇಳೆಹಾಕಿ ತುಂಬ ಹೊತ್ತಾಯ್ತು. ಇಷ್ಟು ಹೊತ್ತಿಗೆ ಬೆಂದಿರಬಹುದು.

ಗ.–ಅವರ ಜಾತಕದಲ್ಲಿ ಶೂನ್ಯ, ನಿಜ ಆದರೇನು? ನಿಮ್ಮ ಜಾತಕದಲ್ಲಿ ಆ ಯೋಗ ಇದೆಯಲ್ಲ?

ಲ. ನಾ.–ನೀನು ಹೇಳೋದು, ಬಾವಿ ಇದೆ, ಬಿಂದಿಗೆಯೂ ಇದೆ. ಹಗ್ಗ ಮಾತ್ರ ಇಲ್ಲ ಅಂದಹಾಗೆ. ಏನು ಪ್ರಯೋಜನ? ಜಾತಕಫಲ ಹೇಗೆ ಸಿದ್ಧಿಸುತ್ತೆ?

ಗ–ಹಗ್ಗ ಹವಣಿಸಿಕೊಳ್ಳಬೇಕು ರಾಯರೆ.

ಲ. ನಾ.–ನೇಣು ಹಾಕಿಕೋ ಅಂತೀಯೇನು?

ಗ–ಛೆ, ಛೆ, ಛೆ! ಶಾಂತಂ ಪಾಪಂ ಶಾಂತಂ ಪಾಪಂ! ಬಿಡುತು ಅನ್ನಿ. ನಿಮಗೆ ಮನಸ್ಸಿದ್ದರೆ, ಧೈರ್ಯ ಇದ್ದರೆ......

ಲ. ನಾ.––ಏನು, ನೇಣು ಹಾಕಿಕೊಳ್ಳೋಕೆ ತಾನೆ?

ಗ–ಮತ್ತೆ ಅದೇ ಮಾತು ಆಡುತೀರಲ್ಲ ರಾಯರೆ? ಬಿಡುತು ಅನ್ನಿ. ಇನ್ನೊಂದು ಮಾಂಗಲ್ಯ ಕಟ್ಟೋಕೆ!

ಲ. ನಾ.–ಏನಂದೆ! ನಿನಗೆಲ್ಲೋ ಭ್ರಾಂತು. ಅವಳಿರೋ ಹಾಗೇನೆ....

ಗ–ಲಕ್ಷ್ಮೀದೇವಮ್ಮನಿಗೆ ನನ್ನ ಕಂಡರೆ ತುಂಬ ಆದರ. ಅವರಿಗೆ ಕೇಡು ಬಯಸೋನಲ್ಲ ನಾನು. ಆದರೆ, ನಿಮ್ಮ ವಂಶ ಬೆಳೆಯಬೇಕು ಅಂತಲೂ ನನ್ನ ಆಶೆ. ಅದಕ್ಕೆ ನಾನು ಹೇಳಿದ್ದೊಂದೇ ಮಾರ್ಗ. ಎಲ್ಲಾನೂ ನಿಮ್ಮ ಜಾತಕ ನೋಡಿಯೇ ನಾನು ಹೇಳುತಾ ಇರೋದು. ನನ್ನ ಮಾತಿನಲ್ಲಿ ನೀವು ನಂಬಿಕೆ ಇಡಬೇಕು.

ಲ. ನಾ–ನಿನಗೆ ಭ್ರಾಂತು ಶಾಸ್ತ್ರಿ. ನನಗೆ ಐವತ್ತಾಯಿತು. ಅವಳು ಬದುಕಿರುವ ಹಾಗೆಯೇ ನನಗೆ ಯಾರು ಹೆಣ್ಣು ಕೊಡೋದಕ್ಕೆ ಒಪ್ಪುತಾರೆ ಅಂತೀಯ?

ಗ–ನೋಡೋಣ, ದೇವರಿದ್ದಾನೆ. ಎಲ್ಲ ಅವನ ಇಚ್ಛೆ.

ಲ. ನಾ.–ಹ್ನು, ನೋಡೋಣ....ಅದಿರಲಿ, ಅವಳ ಹತ್ತಿರ ಸೀತೆಯ ಜಾತಕ ಇದೆ. ಅದನ್ನ ಇಸುಕೊಂಡು ಗಂಡಿನ ಜಾತಕ ಒಂದು ಇದೆಯಲ್ಲ, ನಿನ್ನ ಹತ್ತಿರ, ಅದಕ್ಕೆ ಕೂಡಿ ಬರುತ್ತೆಯೇ ನೋಡು.

ಗ–ಅದಕ್ಕೇನು, ಆಗಬಹುದು. ನಿಮ್ಮ ಅಪ್ಪಣೆ. ಆದರೆ, ನನ್ನ ಹತ್ತಿರ ಇರುವ ಹೆಣ್ಣುಗಳ ಜಾತಕಗಳನ್ನ ನಿಮ್ಮದಕ್ಕೆ ಹೊಂದಿಬರುತ್ತೆಯೆ ಇಲ್ಲವೆ ಅದನ್ನೂ ನೋಡಿಬಿಡುತ್ತೇನೆ.

ಲ. ನಾ.–[ಎದ್ದು ಕೋಟು ಪೇಟ ಧರಿಸುತ್ತ] ನಾನು ಬೇಡ ಅಂದರೂ ನೋಡುತೀಯೆ. ನೋಡು, ನೋಡು, ನಿನ್ನ ಚಪಲ ತೀರಿಸಿಕೊ. ಜಾತಕಗಳ ಮದುವೆ ಮಾಡಿಸೋನು ಜೋಯಿಸ; ಗಂಡು ಹೆಣ್ಣುಗಳ ಮದುವೆ ಮಾಡಿಸೋನು

ಜೋಯಿಸನಲ್ಲ. ಅದನ್ನು ಒಂದು ವಿದ್ಯ ಅಂತ ಕಲಿತಿದ್ದೀಯೆ.

ಗ.–ಕಲೀತಾ ಇದೀನಿ, ಅನ್ನಿ.

ಲ. ನಾ.–ವಿದ್ಯಕ್ಕೆ ಕೊನೆ ಎಲ್ಲಿ ಮೊದಲೆಲ್ಲಿ? ಹೇಗಿದ್ದರೂ ಕೊನೆಮುಟ್ಟುವುದಿಲ್ಲ ಅಂತ ನಾನು ಮೊದಲೇ ಮಾಡಲಿಲ್ಲ. ಹ್ಹ ಹ್ಹ ಹ್ಹ.

ಗ.–ಒಳ್ಳೇ ಕೆಲಸವಮಾಡಿದಿರಿ. ವಿದ್ಯೆಗೆ ಅಂತ ಇರೋ ಹಣ ಹಾಳುಮಾಡುವುದನ್ನು ಕಲಿಯೋಕಿಂತ, ನಿಮ್ಮ ಹಾಗೆ, ಇರೋ ಹಣವನ್ನು ರೂಡಿಸುವುದನ್ನ ಕಲಿಯೋದು ನಿಜವಾದ ವಿದ್ಯೆ ಈಗಿನ ಕಾಲಕ್ಕೆ. ಈಗ ಬೀಯೇ ಯೆಮ್ಮೆ ಆಗುವುದಾದರೂ ಯಾಕೆ? ಹಣ ಸಂಪಾದನೆಗೆ ಅಂತ; ಹಣ ಸಂಪಾದಿಸೋ ಅಷ್ಟರಲ್ಲಿ ಹೆಣವಾಗಿಬಿಡುತ್ತಾರೆ. ಇದ್ದ ಹಣವನ್ನ ಹತ್ತರಷ್ಟು ಹೆಚ್ಚಿಸುವುದಕ್ಕೆ ಹೋಗಿ ಹಳ್ಳಕ್ಕೆ ಬಿದ್ದು ಹಾಹಾಕಾರ ಪಡುವುದಕ್ಕಿಂತ, ಇದ್ದದ್ದನ್ನ ಭದ್ರಪಡಿಸಿಕೊಂಡು ಬದುಕುವುದು ದೊಡ್ಡವಿದ್ಯೆ–ನನ್ನ ಅಭಿಪ್ರಾಯದಲ್ಲಿ.

ಲ. ನಾ.–ನನ್ನ ಅಭಿಪ್ರಾಯವೂ ಅದೇಯೆ. ಅದಿರಲಿ, ಅದೇನೋ ನನ್ನ ಜಾತಕದ ವಿಚಾರದಲ್ಲಿ "ನೀವೇನೂ ಯೋಚನೆ ಮಾಡಬೇಡಿ" ಅಂತ ಅವಳಿಗೆ ಹೇಳಿದೆಯಂತೆ.

ಗ.–ಹೌದೂ.

ಲ. ನಾ.–ಅಂದರೆ, ನಿನ್ನ ಅಭಿಪ್ರಾಯ ಏನು?

ಗ.–ನಿಮಗೆ ಸಂತಾನ ಯೋಗ ಇದೆ. ಗುರುಭಾವ ಚೆನ್ನಾಗಿದೆ.

ಲ. ನಾ.–ಹಹ್ಹಹ್ಹಹಾ! ಅಯ್ಯೋ ಶಾಸ್ತ್ರಿ, ಹತ್ತು ವರ್ಷ ಆಯ್ತು. ಇನ್ನೂ ಆ ಯೋಗ ಬಾಕಿ ಇದೆಯೇನು?

ಗ.–ಜಾತಕ ಅಂದರೆ ಜೀವನದ ಕನ್ನಡಿ ರಾಯರೆ. ಆದರೆ ಏನು ಮಾಡೋದು? ನಿಮ್ಮ ಜಾತಕದಲ್ಲಿ ಇದೆ. ಅವರ ಜಾತಕದಲ್ಲಿ ಇಲ್ಲ.

ಲ.ನಾ.–ಅವಳ ಜಾತಕ ನಿನ್ನ ಹತ್ತಿರ ಹೇಗೆ ಬಂತು?

ಗ._ಹಿಂದೆ ಒಂದು ಸಲ ನೀವೇ ಕೊಟ್ಟಿದ್ದಿರಲ್ಲ?

ಲ. ನಾ.–ಹೌದು, ಹೌದು, ಮರೆತು ಹೋಗಿತ್ತು. ಹಾಗಾದರೆ ಸಂತಾನಯೋಗ ಇದೆ ಅಂತೀಯ!

ಗ.–ಬರೀ ಸಂತಾನ ಯೋಗವಲ್ಲ, ರಾಯರೆ, ಪುತ್ರಯೋಗ, ಪುತ್ರಯೋಗ–ಇದೇ ಬರುವ ಜ್ಯೇಷ್ಠದಿಂದ ಬುಧ ದಶೆಯಲ್ಲಿ ಗುರುಭುಕ್ತಿ ಪ್ರಾರಂಭ. ಇಬ್ಬರೂ ಪುತ್ರಕಾರಕರು. ಗುರುವಿನ ದೃಷ್ಟಿ ಕಳತ್ರ ಸ್ಥಾನದ ಮೇಲೆ ಬಲವಾಗಿದೆ.

ಲ. ನಾ.–ಆದರೆ, ಅವಳ ಜಾತಕದಲ್ಲಿ ಶೂನ್ಯ ಅಂತೀಯಲ್ಲ?

ಕೂಡಿ ಬಂದರೆ ಮದುವೆ ಅಂದರೆ ಮೂವತ್ತು ವರ್ಷ ಕೂಡಿ ಬರುತ್ತೆ ಈ ಮುದುಕರಿಗೆ ... ನಮ್ಮ ರಾಯರ ಜಾತಕಕ್ಕಾದರೂ ಯಾವುದಾದರೂ ಕೂಡಿ ಬರುತ್ತೆಯೆ ನೋಡೋಣ [ಮತ್ತೆ ಜಾತಕ ಪರಿಶೀಲನೆಯಲ್ಲಿ ತೊಡಗುವನು]

ಲ. ದೇ.–[ಪ್ರವೇಶಿಸಿ] ಎಲ್ಲಿ ಅವರು?

ಗ–ಅಂಗಡಿಗೆ ಹೋದರು.

ಲ. ದೇ.–ಹೋಗೋದಿಲ್ಲ ಅಂತ ಹೇಳಿದ್ದರು. ಅವರಿಗೆ ಸೀತೆಯ ಜಾತಕ ಕೊಡೋಣ ಅಂತ ಬಂದೆ. ಜಾತಕಗಳನ್ನೆ ನೋಡುತಾ ಇರೋಹಾಗೆ ಕಾಣುತ್ತೆ. ಇದನ್ನೂ ನೋಡಿ, ಯಾವುದಾದರೂ ಗಂಡಿನ ಜಾತಕಕ್ಕೆ ಕೂಡಿ ಬರುತ್ತೆಯೆ ಅಂತ. [ಜಾತಕ ಕೊಟ್ಟು ಹೋಗುವಳು. ಗಣಪತಿ ಮತ್ತೆ ಜಾತಕಗಳ ಪರಿಶೀಲನೆಯಲ್ಲಿ ತೊಡಗುವನು. ಅಷ್ಟರಲ್ಲಿ, ಹೊರಗಿನಿಂದ "ಭಾವ ಭಾವ" ಎಂದು ಕೂಗಿದ ಸದ್ದು ಕೇಳುವುದು]

ಗ–ಶೀಧರ ಅಂತ ಕಾಣುತ್ತೆ. (ಎಂದು ಜಾತಕಗಳನ್ನೆಲ್ಲ ಮತ್ತೆ ವಸ್ತ್ರದಲ್ಲಿ ಕಟ್ಟಿ ಕಂಕುಳಿಗೆ ಸೇರಿಸಿ, ಎದ್ದು ನಿಲ್ಲುವನು)

[ಪ್ರವೇಶ : ಶ್ರೀಧರ ಮತು ರಘುಪತಿ; ಶ್ರೀಧರನ ಕೈಯ್ಯಲ್ಲಿ ಬಟ್ಟೆ ತುಂಬಿದ ಚೀಲ]

ಗ–ಓಹೋಹೋಹೊ! ಯಾವಾಗ ಬಂದೆ ಶ್ರೀಧರ? ಕ್ಷೇಮವೇನಯ್ಯ?

ಶ್ರೀಧರ–ಇಷ್ಟರಮಟ್ಟಿಗೆ.....ಎಲ್ಲಿ, ಭಾವ ಕಾಣುವುದಿಲ್ಲ? ಅಂಗಡಿಗೆ ಹೋಗಿದಾರೆಯೋ....ಕೂತುಕೋ ರಘೂ.

[ರಘುಪತಿ ಕುಳಿತುಕೊಳ್ಳುವನು. ಪ್ರವೇಶ : ಲಕ್ಷ್ಮೀದೇವಮ್ಮ ಮತ್ತು ಸೀತೆ]

ಲ. ದೇ.–[ಔತ್ಸುಕ್ಯದಿಂದ ಪ್ರವೇಶಿಸುವುದರಲ್ಲಿದ್ದು, ಅಪರಿಚಿತನಾದ ರಘುಪತಿಯನ್ನು ಕಂಡು, ದೂರದಲ್ಲಿ ನಿಂತು] ನಿನ್ನ ಧ್ವನಿ ಕೇಳಿ ಬಂದೆವು. ಯಾವಾಗ ಬಂದೆ?

ಶ್ರೀ–ಇದೇ ತಾನೆ.

ಗ–ಈಗ ರೈಲು ಬರುತ್ತೆಯೆ? ಬಸ್ಸಿನಲ್ಲಿ ಬಂದೆಯೋ ಹೇಗೆ?

ಶ್ರೀ–ರೈಲಿನಲ್ಲೆ ಬಂದೆ. ದಾರಿಯಲ್ಲಿ ಈ ರಘು, ನನ್ನ ಹಳೆಯ ಸ್ನೇಹಿತ, ಸಿಕ್ಕಿದ. ಮನೆಗೆ ಎಳೆದುಕೊಂಡು ಹೋದ. ಕಾಫಿ ತಿಂಡಿ ಎಲ್ಲ ಆಯಿತು. ತಡವಾಗಿ ಬಂದದ್ದಕ್ಕೆ ಸಾಕ್ಷಿಗೋಸ್ಕರ ಅವನನ್ನೂ ಇಲ್ಲಿಗೆ ಎಳೆದುಕೊಂಡು ಬಂದೆ. ಅಲ್ಲವೇನಯ್ಯ?

ರಘುಪತಿ–[ಹೌದು ಎನ್ನುವಂತೆ ತಲೆಯಲ್ಲಾಡಿಸಿ, ಮುಗುಳುನಗೆ ನಕ್ಕು,

ದೇವರು. [ಕಂಕುಳಿಗೆ ಕೊಡೆ ಇರುಕಿಕೊಳ್ಳುವನು]

ಗ–ಅದು ನಿಜ ಅನ್ನಿ.

ಲ. ನಾ.–ಇವೊತ್ತು ಅಂಗಡಿಗೆ ಹೋಗೋದಿಲ್ಲ ಅಂತ ಮಾಡಿಕೊಂಡಿದ್ದೆ. ಮನೆಯಲ್ಲಿ ಕೂತು ಏನು ಮಾಡಬೇಕು. ಸೀತೆಗೆ ಒಂದು ಸೀರೆ ಆಗಬೇಕಂತೆ. ನನ್ನ ಅಂಗಡಿಯಲ್ಲಿ ತೀರ ಕಳಪೆ, ಇಲ್ಲ ತೀರ ಭಾರಿ. ನಡು ತೆರದ್ದಿಲ್ಲ. ನೀನು ಹೋಗಿ, ಕಾಳಿಂಗಶೆಟ್ಟರ ಅಂಗಡೀಲಿ ೧೬ ಮೊಳದ ಎರಡು ಮೂರು ಫಿಲೇಚರ್ ಸೀರೆಗಳನ್ನ ಅಮಾನತ್ತಿನಲ್ಲಿ ಬರೆಸಿ ತೆಗೆದುಕೊಂಡು ಬಾ. ನೀನೇನೂ ಇವೊತ್ತು ಅಂಗಡಿಗೆ ಬರಬೇಕಾದ್ದಿಲ್ಲ. ಸೀರೆ ತೆಗೆದುಕೊಂಡು ಮನೆಗೆ ಬಂದುಬಿಡು. ಅವಳಿಗೆ ಬೇಕಾದ್ದನ್ನ ನೋಡಿ ಇಟ್ಟುಕೊಳ್ಳಲಿ. ಇನ್ನು ನಾನು ಬರ್ತೇನೆ. ಎಲ್ಲಿ, ಅಂಗಡಿ ಬೀಗದಕೈ ಕೊಡು. [ಜೇಬನ್ನು ತಟ್ಟಿ] ಇಲ್ಲ, ಇಲ್ಲ. ನನ್ನ ಹತ್ತಿರವೇ ಇದೆ. [ಹುಡುಕಾಡುತ] ನನ್ನ ಕೊಡೆ ಎಲ್ಲಿ ಹೋಯಿತು?

ಗ–[ನಗುವನ್ನು ತಡೆದುಕೊಳ್ಳುತ್ತ] ಕಂಕುಳಲ್ಲೆ ಇದೆಯಲ್ಲ, ರಾಯರೇ.

ಲ. ನಾ.–[ನೋಡಿಕೊಂಡು] ಹಾಳಾದ್ದು ಆಗಲೇ ಅರವತ್ತು ವರ್ಷದ ಅರಳು ಮರುಳು. [ಹೊರ ಹೊರಟು ಮತ್ತೆ ಒಳಕ್ಕೆ ಬಂದು]

[ಹೊರಡುವನು]

ಗ–[ಕರವಸ್ತ್ರದಲ್ಲಿ ಸುತ್ತಿಟ್ಟುಕೊಂಡಿದ್ದ ಜಾತಕಗಳನ್ನು ಮೇಜಿನ ಮೇಲೆ ಇಟ್ಟು, ಕುರ್ಚಿಯ ಮೇಲೆ ಕುಳಿತು, ಕನ್ನಡಕ ಏರಿಸಿ, ನಶ್ಯ ಹಾಕಿ, ಅವುಗಳ ಪರಿಶೀಲನೆಯಲ್ಲಿ ತೊಡಗುವನು] ಒಂದು ಜಗನ್ನಾಥರಾಯರ ಜಾತಕ; ಅದು ಯಾವುದು? [ಹುಡುಕಿ ತೆಗೆದು]ಇದು, ಇನ್ನೊಂದು, ಅವರ ಮಗನ ಜಾತಕ. ಅದೆಲ್ಲಿ? [ಹುಡುಕಿ] ಸರಿ, ಇದೇ ಅದು. [ಇನ್ನೊಂದನ್ನು ತೆಗೆದು] ಇದು ರಾಯರ ಜಾತಕ. ಮೂರು ಗಂಡಿನ ಜಾತಕ, ಐದು ಹೆಣ್ಣಿನ ಜಾತಕ. ಅಲ್ಲ, ರಾಯರು, ಒಂದೇ ಮಾತಿನಲ್ಲಿ, ನಾನು ಹಣಕ್ಕೆ ಜಾತಕ ನೋಡೋನಲ್ಲ ಅಂದುಬಿಟ್ಟರಲ್ಲ! ನಾನೇನು ಮನುಷ್ಯನಲ್ಲವೆ, ನನಗೆ ಹಣ ಬೇಡವೇ? ಯಾರ ಯಾರದ್ದೋ ಜಾತಕಗಳನ್ನ ಬಿಟ್ಟಿ ಯಾಕೆ ನೋಡಬೇಕು? ಇನ್ನು ಮೇಲೆ ಒಂದು ಫೀಸು ಗೊತ್ತು ಮಾಡಬೇಕು.....ರಾಯರಿಗಂತೂ ಮಕ್ಕಳಿಲ್ಲ; ಇನ್ನೊಂದು ಮದುವೆ ಮಾಡಿಕೊಳ್ಳಿ ಅಂತ ನಾನೇ ಒತ್ತಾಸೆ ಕೊಡುತಾ ಇದೀನಿ. ಈ ಜಗನ್ನಾಥರಾಯರಿಗೇಕೆ ಇನ್ನೊಂದು ಮದುವೆಯ ಹುಚ್ಚು, ಈ ವಯಸ್ಸಿನಲ್ಲಿ? ಅವರಿಗೆ ಆಚೇ ವರ್ಷ ರಿಟೈರಾಯಿತು ಅಂತ ರಾಯರ ಅಂಬೋಣ. ಜಾತಕ ತೋರಿಸುತ್ತೆ–ಮುಂದಿನ ವರ್ಷ ಉಗ್ರಶಾಂತಿ ಅಂತ. ಸರ್ವಿಸ್ಸಿಗೆ ಮೂರು ವರ್ಷ

ಗ–ಓಹೋ, ಹಾಗಾದರೆ ಇವರಿಗೆ ಇನ್ನೂ ಮದುವೆ ಆಗಿಲ್ಲ. ಯಾವ ಜಾತಿ?

ಶ್ರೀ– 'ಗಂಡು' ಜಾತಿ.

ಗ–ಏನು ಶ್ರೀಧರ, ನನ್ನನ್ನೆ ಕಕ್ಕಾಬಿಕ್ಕಿ ಹಿಡಿಸುವ ಹಾಗೆ ಮಾತಾಡುತಿ? ಈ ವಾಚಾಳತ್ವ ಹೊಸದಾಗಿ ಎಲ್ಲಿಂದ ಬಂತು? ಅದಿರಲಿ, ನಾನು ಕೇಳೋದು ಏನೂ ಅಂದ್ರೆ....

ಶ್ರೀ–ನಾನು ಹೇಳೋದು ಏನೂ ಅಂದ್ರೆ, 'ಮದುವೆಗೆ ಸಿದ್ಧವಾಗಿರುವ **'ಗಂಡು'**, ಅಂತ. ಅವನಿಗೂ ಅನೇಕರು ಹೆಣ್ಣು ಕೊಡುತ್ತೀನಿ ಅಂತ ಬರುತ್ತಿರುತ್ತಾರೆಂತೆ. ಎಲ್ಲ ಹೆಣ್ಣುಗಳೂ ಇಂಟರ್‌ಮೀಡಿಯಟ್ ಇಲ್ಲವೆ ಬಿ.ಎಸ್‌ಸಿ. ಅಂದರೆ ಸಮ ಇಲ್ಲವೆ ಮೇಲು. ಓದದವನು, ಸ್ವಲ್ಪ ಓದಿದ ಹೆಣ್ಣು ಮದುವೆಮಾಡಿಕೊಂಡರೆ 'ಹೆಣ್ಣುಪೆಕ್ಡಾ'ಗ್ತಾನೆ (Henpecked); ತನ್ನಷ್ಟೆ, ಇಲ್ಲವೆ ತನಗಿಂತ ಹೆಚ್ಚು ಓದಿದ ಹೆಣ್ಣು ಮದುವೆಯಾದರೆ, ಹೆಣ್ಣು ಕುಕ್ಡಾಗ್ತಾನೆ (ಹೆಣ್ cooked)–ಇದು ಅವನ ಸಿದ್ಧಾಂತ. ಆದ್ದರಿಂದ. ತನಗಿಂತ ಬಹು ಕಡಮೆ ಓದಿರುವ, ಸಾಧ್ಯವಾದರೆ ತಂದೆ ತಾಯಿ ಇಲ್ಲದ, ತನಗಿಂತ ಚೆನ್ನಾಗಿ ಹಾಡದ, ರಂಭೆ ಊರ್ವಶಿ ಮೇನಕೆಯರಷ್ಟು, ತನ್ನನ್ನೂ ಸೇರಿಸಿಕೊಂಡು ಎಲ್ಲರನ್ನೂ ಹಾಳುಮಾಡುವಷ್ಟು, ಚೆಂದವಲ್ಲದ, ಕೂದಲು ತುಂಬ ಇದ್ದರೂ ಕವಲುಜಡೆ ಹಾಕಿ ಕೊಳ್ಳದ, ನಗರದಲ್ಲಿ ಬೆಳೆದರೂ ಹಳ್ಳಿಯಲ್ಲಿ ಹುಟ್ಟಿದ ಬಡ ಹುಡುಗಿಯನ್ನು ಸ್ವಯಂವರ ಪದ್ಧತಿಯ್ಲಲಿ ಮದುವೆಯಾಗಬೇಕೂ ಅಂತ, ಅವನ ಸಂಕಲ್ಪ.

ಗ–ಇಷ್ಟೊಂದು 'ಕ್ವಾಲಿಫಿಕೇಷನ್ನು'ಗಳ ಹೂಮಾಲೆ ಹಿಡಿದು ನಿಂತಿರುವ ಹುಡುಗಿ ನನ್ನ ದೃಷ್ಟಿಗೆ ಯಾರೂ ಬಿದ್ದಿಲ್ಲವಲ್ಲಪ್ಪ! ...ಅಂತೂ, ಗಂಡು ಅಂತ ನನ್ನ ದೃಷ್ಟಿಗೆ ಒಂದು ಬಿದ್ದ ಹಾಗಾಯಿತು. ಅಷ್ಟೆ ಸಾಕು. ಅವರ ಗೋತ್ರ ಯಾವುದು?

ಶ್ರೀ–ಮೊದಲೇ ಹೇಳಿದೆನಲ್ಲ: ಸ್ವಯಂವರ ಪದ್ಧತಿ. ಅದರಲ್ಲಿ, ನಿಮ್ಮ, ಕುಲ ಗೋತ್ರ ಜೋಯಿಸ ಜಾತಕ ಯಾವುದಕ್ಕೂ ಜಾಗ ಇಲ್ಲ.

ಗ– 'ಸ್ವಯಂವರ' ಅನ್ನೋ ಮಾತು ಯಾಕೆ ಹೇಳುತೀಯಪ್ಪ? ಹೆಣ್ಣುಗಳ ಮೇಲೆ ಒಂದು ಕಣ್ಣಿಟ್ಟಿರುವುದು ಅನ್ನು. ಆ ಹೆಣ್ಣಿನ ಕಣ್ಣೂ ತನ್ನ ಮೇಲೆ ಬಿದ್ದರೆ, ಅಪ್ಪ ಅಮ್ಮ ಬಂಧು ಬಳಗ ಎಲ್ಲರನ್ನೂ ಬಿಟ್ಟು, ಇಬ್ಬರೂ ಒಟ್ಟಿಗೆ ಓಡಿ ಹೋಗಿ, 'ನಾವು ಗಂಡ ಹೆಂಡಿರು' ಅಂದುಕೊಳ್ಳುವುದು. ಇಷ್ಟು ತಾನೆ?

ಶ್ರೀ–ಅಷ್ಟಕ್ಕೆಲ್ಲ ಅವಕಾಶ ಇಲ್ಲ ಶಾಸ್ತ್ರಿಗಳೆ. ಅವನಿಗೆ ತಾಯಿ ಇಲ್ಲ. ತಂದೆ

ಸೀತೆಯ ಕಡೆಗೆ ದಿಟ್ಟಿಸಿ ನೋಡುವನು. ಅವಳು ತಲೆ ತಗ್ಗಿಸಿ, ಬಳಿಕ ತಟ್ಟನೆ ಹೊರಟು ಹೋಗುವಳು.]

ಲ. ದೇ–ಕೂತುಕೊ ಶ್ರೀಧರ. ಸುಧಾರಿಸಿಕೊ. ಒಲೆಯ ಮೇಲೆ ಬಿಸಿನೀರು ಇದ್ದೇ ಇದೆ. ಒಂದಿಷ್ಟು ಕಾಫಿ ಮಾಡಿ ತರುತ್ತೇನೆ.

ಶ್ರೀ–ಈಗ ತಾನೆ ಆಯಿತು. ಆದರೂ ಪರವಾಯಿಲ್ಲ. ರಘುಪತಿಗೋಸ್ಕರ ನಾನೂ ಈಗ ಇನ್ನೊಂದು ಸಲ ಕಾಫಿ ಕುಡಿಯಲೇಬೇಕು. [ಶಾಸ್ತ್ರಿ ಕುಳಿತಿದ್ದ ಕುರ್ಚಿಯ ಮೇಲೆ ಕುಳಿತುಕೊಳ್ಳುವನು] ನಿಂತೇ ಇದ್ದೀರಲ್ಲ ಶಾಸ್ತ್ರಿಗಳೆ, ಕುಳಿತುಕೊಳ್ಳಿ.

ಗ–ಪರವಾ ಇಲ್ಲ. ನಾನು ಇದೇ ತಾನೆ ಹೊರಕ್ಕೆ ಹೊರಡುವುದರಲ್ಲಿದ್ದೆ. ಇವರು ಯಾರು, ನಿನ್ನ ಜೊತೆಯಲ್ಲಿ ಓದಿದವರೋ.

ಶ್ರೀ–ಇಂಟರ್‌ಮೀಡಿಯಟ್ ವರೆಗೆ ಜೊತೆಯಲ್ಲಿಯೇ ಓದಿದೆವು. ಆಮೇಲೆ ಅವನು ಬಿ.ಎಸ್‌ಸಿ. ಬೆಂಗಳೂರು, ನಾನು ಬಿ.ಎ. ಮೈಸೂರು.

ಗ–ಓಹೋ, ಬಿ.ಎಸ್‌ಸಿ ಮಾಡಿಕೊಂಡು ಕೆಲಸದಲ್ಲಿದಾರೇನೋ?

ಶ್ರೀ–ಬಿ. ಎಸ್ ಸಿ....ಈ ವರ್ಷವೂ ಕಟ್ಟಿದ್ದೀ ಅಲ್ಲವೆ ರಘು? ಅವರಪ್ಪನಿಗೆ ಅವನೊಬ್ಬನೇ ಮಗ. ಹತ್ತು ಸಲ ಬೇಕಾದರೂ ಪರೀಕ್ಷೆ ಕಟ್ಟೆ ಹತ್ತಬಹುದು. ನನ್ನ ಹಾಗೆ ಒಂದು ಸಲಕ್ಕೇ ಸುಸ್ತಾಗಿ ಗುಮಾಸ್ತೆ ನೊಗಕ್ಕೆ ಹೆಗಲು ಕೊಡಬೇಕಾಗಿಲ್ಲ. ಅವನು ಬುದ್ಧಿವಂತ ಶಾಸ್ತ್ರಿಗಳೇ. ಸಂಗೀತ ಕೇಳ್ತೀರ, ಟೆನಿಸ್ ಕೇಳ್ತೀರ. ನಾಟಕದಲ್ಲಿ ಬಣ್ಣ ಬಳಿದು ಕೊಳ್ಳೋದು, ಡಿಬೇಟುಗಳಲ್ಲಿ 'ಅಪೋಸ್' ಮಾಡೋದು, ಕಾಫಿ ತಿಂಡಿ ಕೊಡಿಸೋದು, ಇತ್ಯಾದಿ, ಇತ್ಯಾದಿ. ಎಲ್ಲದರಲ್ಲೂ ಮುಂದು. ಇವನು ಎಷ್ಟು ಮುಂದುವರಿದಿದಾನೆ ಅಂತ– 'ಸ್ತ್ರೀ ವಿದ್ಯಾಭ್ಯಾಸದಿಂದಲೇ ದೇಶದ ಮುಕ್ತಿ', 'ವಿಷಮ ವಿವಾಹಗಳು ನಿಲ್ಲಬೇಕಾದರೆ ತರುಣ ತರುಣಿಯರಲ್ಲಿ ಸ್ವಯಂವರ ಪದ್ಧತಿ ರೂಢಿಗೆ ಬರಬೇಕು' ಈ ಅಭಿಪ್ರಾಯಗಳನ್ನೆಲ್ಲ, ಬಹು ಚೆನ್ನಾಗಿ, ಪೊಗದಸ್ತಾಗಿ ವಿರೋಧಿಸುತ್ತಾನೆ–ಚರ್ಚೆಗಳಲ್ಲಿ. ಪ್ರತಿವರ್ಷವೂ ಇವನೇ ಯೂನಿಯನ್ ಕಾರ್ಯದರ್ಶಿ. ಹತ್ತು ವರ್ಷವಾದರೂ ಕಾರ್ಯದರ್ಶಿ ಕೆಲಸ ಮಾಡಬೇಕು ಅಂತ ಅವನ ಆಶೆ. ಕಾಲೇಜು ವಿದ್ಯಾರ್ಥಿ ಜೀವನ ಬಹು ಸೊಗಸು, ನಡೆಯುವಷ್ಟು ಕಾಲ ಅದು ನಡೆಯಲಿ, ಅಂತ ಅವನ ಸಂಕಲ್ಪ. ನನಗೂ, ಪ್ರತಿ ವರ್ಷ ಪ್ರತಿ ತಿಂಗಳೂ ಫೀಸು ಕೊಡುವ ಅಪ್ಪನೋ ಮಾವನೋ ಇದ್ದಿದ್ದರೆ, ನಾನೂ ಅವನ ಹಾಗೇ ಮಾಡ್ತಾ ಇದ್ದೆ. ಅವನಿಗೆ ಪರೀಕ್ಷೆಯಲ್ಲಿ ಪ್ಯಾಸು ಮಾಡುವ ಮನಸ್ಸಿಲ್ಲ ಅಷ್ಟೆ; ಮದುವೆ ಮಾಡಿಕೊಳ್ಳುವ ಹೊತ್ತಿಗೆ ಪರೀಕ್ಷೆಯಲ್ಲಿ ಪ್ಯಾಸು ಮಾಡಿದರಾಯಿತು ಅಂತ ಮಾಡಿಕೊಂಡಿದಾನೆ.

ರ–ಈಗ 'ಅಪ್ಪೋಸ್' ಮಾಡೋದು ಪ್ರಯೋಜನವಿಲ್ಲ; 'ಅಡ್ಮಿಟ್'ಮಾಡೋದೇ ಅನುಕೂಲ. ನಮ್ಮ ಪಕ್ಕದ ಮನೆಯಲ್ಲಿ ಅವಳ ಸ್ನೇಹಿತೆ ಇದಾಳೆ ಅಂತ ಕಾಣುತ್ತೆ. ಆಗಾಗ್ಗೆ ಅಲ್ಲಿಗೆ ಬರುತಿರುತಾಳೆ. ಒಬ್ಬರನೊಬ್ಬರು ಇಬ್ಬರೂ ನೋಡಿರುವುದುಂಟು. ಅವಳೂ ನಿನ್ನ ಅಕ್ಕನ ಮಗಳು ಅಂತ ಈಗಲೇ ನನಗೇ ಗೊತ್ತಾದದ್ದು.

ಶ್ರೀ–ನಿಮ್ಮ ದೃಷ್ಟಿಗಳಂತೂ ಕೂಡಿವೆ. ಮನಸ್ಸೂ ಕೂಡಿದರೆ, ಜಾತಕ ಕೂಡಿಸುವ ಕೆಲಸವನ್ನ ಗಣಪತಿಶಾಸ್ತ್ರಿಗಳಿಗೆ ಮುಂದೆ ವಹಿಸುವುದಕ್ಕೆ ಅನುಕೂಲವಾಗಲಿ ಅಂತ ಅವರಿಗೆ ಅಷ್ಟು ಹೇಳಿದ್ದು. ಅವರು ಎಲ್ಲ ಅರ್ಥಮಾಡಿಕೊಂಡಿದ್ದಾರೆ, ಪರವಾಗಿಲ್ಲ. ಸ್ವಯಂವರ ಎಂದ ಮೇಲೆ ವರದಕ್ಷಿಣೆ ವಿಚಾರವೇ ಇಲ್ಲವಲ್ಲ. ನಮ್ಮ ಭಾವನಿಗೂ ಸಂತೋಷವಾಗುತ್ತೆ.

ರ–ನಿಮ್ಮ ಭಾವ ಸಾಹುಕಾರರು ಅಂತ ಕಾಣುತ್ತೆ? ವರದಕ್ಷಿಣೆ ಕೊಡಲಾರರೋ ಅಥವಾ ಕೊಡುವುದಕ್ಕೆ ಇಷ್ಟವಿಲ್ಲವೋ?

ಶ್ರೀ–ನಿನಗೆ ಇನ್ನೂ ಪೂರ್ತಿ ಹೇಳಿಲ್ಲ. ಸೀತೆ ನಮ್ಮ ಅಕ್ಕನ ಮಗಳು ಎಂದರೆ ಸಾಕುಮಗಳು, ಅಷ್ಟೆ, ತಂದೆ ತಾಯಿ ಇಲ್ಲದ ತಬ್ಬಲಿ. ಹಣವಂತರ ಮನೆಯ ಹುಡುಗಿ ಅಂತ ತಿಳಿದರೆ ಹಣದ ಗಂಟು ಇಡದೆ ಅವಳ ಕಡೆ ತಿರುಗಿ ನೋಡುವ ಗಂಡು ಯಾರು? ನಿನಗೆ ಸೀತೆಯನ್ನ ತೋರಿಸಬೇಕು ಅನ್ನುವ ಉದ್ದೇಶವಾಗಲಿ ಮದುವೆಯ ವಿಚಾರ ಎತ್ತಬೇಕು ಅಂತ ಮನಸ್ಸಾಗಲಿ ನನಗೆ ಖಂಡಿತ ಇರಲಿಲ್ಲ. ಅದು ಹೇಗೋ ಆ ಮಾತು ಬಂತು. ನಿನ್ನ ಮನಸ್ಸು ಹೇಗೆ?

ರ–ವರ್ಷ ವರ್ಷವೂ ಫೇಲಾಗುವ ಫೂಲನ್ನು ನಿನ್ನ ಅಕ್ಕನ ಮಗಳು ಒಪ್ಪಬೇಕಲ್ಲ? ಸ್ವಯಂವರದಲ್ಲಿ ಹೆಣ್ಣು ತಾನೆ ವರಿಸಬೇಕಾದವಳು? ಅವಳು ಒಪ್ಪದೆ ಬಲವಂತದಿಂದ ನನ್ನ ಕುತ್ತಿಗೆಗೆ ಕಟ್ಟುವುದಾದರೆ ಬೇಡ.

ಶ್ರೀ–ಅವಳು ಮೊದಲು ನಿನ್ನನ್ನು ನೋಡಿ ತಲೆತಗ್ಗಿಸಿ ಹೊರಟಾಗ, ಕಾಫಿ ತಂದು ಕೊಡುವಾಗ, ನಾಚಿಕೆಯ ನಗೆ ಬೀರುತ್ತ ಕಾಫಿ ನೀಡಿದಾಗ, ನಿನಗೆ ಹೇಗೆ ಅನ್ನಿಸಿತು?

ರ–ಘಾಟಿ ಎನ್ನುವುದು, ಗಣಪತಿಶಾಸ್ತ್ರಿಗಳಿಗಿಂತ ನಿನಗೆ ಹೆಚ್ಚು ಒಪ್ಪುತ್ತೆ ಶ್ರೀಧರ.

ಶ್ರೀ–ಅಷ್ಟೇ ಅಲ್ಲ. ಹೋದಸಲ ನಾನು ಇಲ್ಲಿಗೆ ಬಂದಿದ್ದಾಗ ನಮ್ಮಕ್ಕ ಸೀತೆಯ ಮದುವೆಯ ಮಾತೆತ್ತಿ, 'ಅವರು ಈ ವಿಚಾರ ತಲೆಗೇ ಹತ್ತಿಸಿಕೊಂಡಿಲ್ಲ. ನೀನಾದರೂ ಒಂದು ಗಂಡು ನೋಡಪ್ಪ' ಅಂತ ಹೇಳಿದ್ದರು. ನಾನು,

ಒಬ್ಬರೆ. ನೀನು ಒಪ್ಪಿದ ಹೆಣ್ಣನ್ನ ಮದುವೆ ಮಾಡಿಕೊ ಅಂತ ಬಿಟ್ಟುಬಿಟ್ಟಿದ್ದಾರೆ. ಅವನು ಮದುವೆ ಮಾಡಿಕೋಬೇಕು ಅಂತ ಇರುವ ಹೆಣ್ಣೂ ತಬ್ಬಲಿಯಾಗಿರಬೇಕು. ಇನ್ನು ತಂದೆ ತಾಯಿಗಳನ್ನ ಬಿಟ್ಟು ಓಡಿ ಹೋಗುವುದೆಲ್ಲಿ ಬಂತು?

ಗ–ಶುಭಸ್ಯ ಶೀಘ್ರಂ. ಈ ವಿಚಾರಕ್ಕೂ ನನಗೂ ಸಂಬಂಧ ಇಲ್ಲ. ನಾನು ಜಾತಕಗಳ ಮದುವೆಮಾಡಿಸೋನು. ಸರಿ, ನನಗೂ ಹೊತ್ತಾಯಿತು, ಅಂಗಡಿಗೆ ಹೋಗಬೇಕು. ಬರ್ತೇನೆ. [ಹೊರಡುವುದರಲ್ಲಿರುವನು. ಅಷ್ಟರಲ್ಲಿ ಸೀತೆ ಮೂವರಿಗೂ ಕಾಫಿ ತರುವಳು]

ನನಗೂ ಕಾಫಿ ಬಂದಹಾಗೆ ಕಾಣುತ್ತೆ. ಕುಡಿದೇ ಹೋಗೋಣ. ನಾನು ಬೇಡ ಅಂದರೆ ಸೀತೆ ಬಿಡೋದಿಲ್ಲ. [ಗಣಪತಿ, ಶ್ರೀಧರ ಕಾಫಿ ಕುಡಿಯ ತೊಡಗುವರು. ರಘು ಕಾಫಿ ಕುಡಿಯದೆ, ನಿಷ್ಕ್ರಮಿಸುತ್ತಿದ್ದ ಸೀತೆಯನ್ನೇ ನೋಡುತ್ತಿರುವನು. ಇದನ್ನು ಗಣಪತಿ ಗಮನಿಸುವನು.]

ಶ್ರೀ–ಆರಿಹೋಗುತ್ತೆ, ಕುಡಿಯಯ್ಯ ರಘು.

ಗ–(ನಗುತ್ತ) ಹಾರಿಹೋಗುತ್ತೆ ಅಂತಲೇ ಅವರೂ ನೋಡ್ತಾನೇ ಇದ್ದರು! [ತಟ್ಟನೆ ಹೊರಡುವನು.]

ಶ್ರೀ–ಈ ನಮ್ಮ ಗಣಪತಿಶಾಸ್ತ್ರಿಗಳಿದಾರಲ್ಲ, ಘಾಟಿಗಳು ರಘು.

ರ–ಯಾರು ಅವರು?

ಶ್ರೀ–ನಮ್ಮ ಭಾವನ ಅಂಗಡಿ ಗುಮಾಸ್ತರು – ಹೆಸರಿಗೆ. ಜ್ಯೋತಿಷ್ಕ, ಪೂಜಾರಿ, ಮಂತ್ರಿ, ಆಪ್ತ, ಬಂಧು, ಬಳಗ ಎಲ್ಲ ಅವನೆ. ಅವನ ಊಟ ಉಪಚಾರ ಠಿಕಾಣಿ ಎಲ್ಲ ಇಲ್ಲೆ. ಸಂಬಳ ತೆಗೆದುಕೊಳ್ಳುವುದಿಲ್ಲ. ನನ್ನ ಅಕ್ಕನಿಗಿಂತ ಇವನಲ್ಲಿ ನಂಬಿಕೆ ಹೆಚ್ಚು ನಮ್ಮ ಭಾವನಿಗೆ. ಆ ನಂಬಿಕೆಯನ್ನ ಉಳಿಸಿಕೊಂಡೂ ಇದಾನೆ. ಆಬಾಲಬ್ರಹ್ಮಚಾರಿ ಎಂದರೆ ನಂಬುತ್ತೀಯೋ ಇಲ್ಲವೊ ನೀನು. 'ಮದುವೆಯಾಗುವುದಿಲ್ಲವೆ?' ಅಂದರೆ, ನನ್ನ ಜಾತಕದಲ್ಲಿ ಬರೆದಿಲ್ಲ, ಅಂತಾನೆ. ಅಂತೂ ವಿಚಿತ್ರ ವ್ಯಕ್ತಿ.

ರ–ಅದಿರಲಿ, ಅವರ ಮುಂದೆ ನನ್ನ ವಿಚಾರ ಏಕೆ ಅಷ್ಟು ಒದರಿದೆ?

ಶ್ರೀ–ನಮ್ಮ ಅಕ್ಕನ ಮಗಳನ್ನು ನೀನು ನೋಡಿದೆಯೋ ಇಲ್ಲವೋ ನೀನು ಇಲ್ಲ ಅಂದರೂ ನೀನು ನೋಡಿದ್ದನ್ನ ನಾನು ನೋಡಿದೆ. ಅವಳು ನಿನ್ನನ್ನು ನೋಡಿದ್ದನ್ನೂ ನೋಡಿದೆ. ಹಾಗೆ ನೋಡಿದ್ದರಲ್ಲಿ ನೀವು ಒಬ್ಬರನ್ನೊಬ್ಬರು ಅನೇಕ ಸಲ ನೋಡಿರಬೇಕೂ ಅಂತಲೂ ಊಹಿಸಿದೆ. ನಿಜ ಹೇಳು, ಸುಳ್ಳು ಹೇಳಬೇಡ.

# ದೃಶ್ಯ ೨

[ಜಗನ್ನಾಥರಾಯರ ಮನೆಯ ಹಜಾರ. ಮಧ್ಯದಲ್ಲಿ ಒಂದು ಮೇಜು. ಮುಂಭಾಗ ಬಿಟ್ಟು, ಮೂರು ಕಡೆ ಮೂರು ಕುರ್ಚಿಗಳು.]

ಜಗನ್ನಾಥ–ಏನು ಶಾಸ್ತ್ರಿಗಳೇ, ನಾನು ಕೊಟ್ಟಿದ್ದ ಹೆಣ್ಣಿನ ಜಾತಕಗಳ ಪೈಕಿ ಒಂದೂ ಸರಿಹೋಗಲಿಲ್ಲವೆ ನಮ್ಮ ಹುಡುಗನ ಜಾತಕಕ್ಕೆ?

ಗ–ನೀವು ಕೊಟ್ಟಿದ್ದ ಜಾತಕಗಳ ಪೈಕಿ ಒಂದೂ ಕೂಡಿ ಬರಲಿಲ್ಲ. ಆದರೆ....

ಜ–ಏನೂ ತಿಳಿದುಕೊಳ್ಳಬೇಡಿ ಶಾಸ್ತ್ರಿಗಳೇ. ನೀವು ಲಕ್ಷ್ಮೀನಾರಣಪ್ಪನವರಿಗೆ ತುಂಬ ಬೇಕಾದವರು, ನಿಮ್ಮಲ್ಲಿ ಅವರಿಗೆ ತುಂಬ ನಂಬಿಕೆ ಅಂತ ಕೇಳಿದೇನೆ. ಈಚೆಗೆ ಅವರು ನನಗೆ ತುಂಬ ಆಪ್ತರಾಗಿದಾರೆ; ಆದ್ದರಿಂದ ನಿಮ್ಮನ್ನು ನನ್ನ ಆಪ್ತರು ಅಂತಲೇ ಭಾವಿಸಿದೇನೆ. ಅವರಿಗೆ ಒಂದು ವಿಚಾರ ಹೇಳಿದ್ದೆ; ಅವರು ಅದನ್ನು ನಿಮಗೆ ಹೇಳಿದಾರೋ ಇಲ್ಲವೋ ನಾನು ಕಾಣೆ. ಅವರು ನಿಮಗೆ ಆ ವಿಚಾರ ತಿಳಿಸಿಲ್ಲದೆ ಹೋದರೆ–ನಿಮಗೆ ಸ್ವಲ್ಪ ತೊಂದರೆ ಕೊಡಬೇಕಾಗುತ್ತೆ. ಏನೂ ಅಂದರೆ–

ಗ–ನಿಮ್ಮ ಜಾತಕದ ವಿಚಾರ ತಾನೆ?

ಜ–ಹೌದು, ಹೌದು.

ಗ–ಬಹು ಕೂಲಂಕಷವಾಗಿ ಪರಿಶೀಲಿಸಿದೆ. ಅಂತಹ ದೋಷವೇನೂ ಕಂಡುಬರಲಿಲ್ಲ.

ಜ–ಸಂತೋಷ.

ಗ–ನಿಮಗೆ ಈಗ ೬೦ನೆಯ ವರ್ಷ ನಡೀತಾ ಇದೆ.

ಜ–ಅರುವತ್ತೆ! ನಾನು ಇನ್ನೂ ಐವತ್ತಾರು ಅಂದು ಕೊಂಡಿದ್ದೆ. ರಿಟೈರಾಗದೆ ಇದ್ದರೆ ನನಗೆ ವಯಸ್ಸಾಯಿತೂ ಅಂತಲೇ ನನಗೆ ತೋರುತ್ತಿರಲಿಲ್ಲ, ಸರ್ಕಾರದವರು ಶಕ್ತಿ ಇರುವವರನ್ನೂ ಯಾಕೆ ರಿಟೈರುಮಾಡಿಬಿಡುತ್ತಾರೆಯೋ ನಾನು ಕಾಣೆ. ಸಂಬಳವನ್ನೂ ಅರ್ಧಮಾಡಿ, ನಿಮಗೆ ಮುಪ್ಪು ಸಮೀಪಿಸಿತು ಅಂತ ನೆನಪುಮಾಡಿಕೊಟ್ಟು, ಉಳಿದ ಆಯುಸ್ಸನ್ನೂ ಅರ್ಧಮಾಡಿಬಿಡುತ್ತಾರೆ. ಇನ್ನು ಹತ್ತುವರ್ಷ ಎಕ್ಸ್ಟೆನ್‌ಷನ್ ಕೊಟ್ಟಿದ್ದರೂ ನಾನು ದುಡೀತಾ ಇದ್ದೆ. ಈಗ ನಾನು ಅರುವತ್ತು ವರ್ಷದ ಮುದುಕನ ಹಾಗೆ ಕಾಣುತ್ತೇನೆಯೇ? ನೀವೆ ಹೇಳಿ.

'ಮುಂದಿನಸಲ' ಬರುವಾಗ ಗಂಡನನ್ನು ಜೊತೆಯಲ್ಲೆ ಕರೆದು ತರುತ್ತೇನೆ' ಅಂತ ಸೀತೆಯ ಮುಂದೆಯೇ ಜಂಬ ಹೊಡೆದಿದ್ದೆ. ಈಗ ನೀನು ನನ್ನ ಜೊತೆ ಬಂದದ್ದು ನೋಡಿ, ನಾನು ಅವಳಿಗೆ ಗೊತ್ತುಮಾಡಿದ ವರನೆ ನೀನು ಅಂತ ಅವಳು ತಿಳಿದಿದಾಳೆ. ಒಂದು ಮಾತಿನಲ್ಲಿ, ಅವಳು, ನಿನ್ನನ್ನು ವರಿಸಿಬಿಟ್ಟಿದಾಳೆ. ಅಂದಹಾಗೆ, ನೀನು ಹೊಯ್ಸಳ ಕರ್ಣಾಟಕನೋ, ಕಮ್ಮೆಯೋ, ಮಾಧ್ವನೋ, ಮೈಸೂರು ಅಯ್ಯರೋ–ಯಾವುದು?

ರ–ಸ್ವಯಂವರದಲ್ಲಿ ಇದಕ್ಕೆಲ್ಲ ಜಾಗ ಇಲ್ಲ ಅಂತ, ನೀನೇ ಹೇಳಿದೆಯಲ್ಲೊ, ಈಗ ತಾನೆ?

ಶ್ರೀ–ಹಾಗಾದರೆ ಅದರ ಕುಲಗೋತ್ರ ಬೇಡಲೇ ಬೇಡ. ಎಲ್ಲಿ, ನಿನ್ನ ಹಾಡು ಕೇಳಿ ತುಂಬ ದಿನ ಆಯಿತು. ಹಾಗೆ ಸ್ವಲ್ಪ ಏನಾದರೂ ಅನ್ನು.

ರ–ಕನ್ಯೆ ಕೈಯ್ಯಲ್ಲಿ ಹಾಡಿಸುವುದು ಬಿಟ್ಟು ವರನ ಕೈಯಲ್ಲೆ ಹಾಡಿಸುವುದು?

ಶ್ರೀ–ನಮ್ಮ ಕನ್ಯೆ ಹಾಡುವುದು ಕೈಯಲ್ಲೆ; ನೀನು ಸ್ವಲ್ಪ ಬಾಯಲ್ಲಿ ಹಾಡು ಮತ್ತೆ.

[ರಘು ಹಾಡತೊಡಗುವನು. ಅರ್ಧಹಾಡಿನಲ್ಲಿ 'ಸ್ವಲ್ಪ ಬಂದೆ. ನಿನ್ನ ಪಾಡಿಗೆ ನೀನು ಹಾಡುತ್ತಿರು, ಬಂದೆ. ಭಯ ಪಡಬೇಡ. ಬಾಗಿಲು ಹಾಕಿಕೊಂಡು ಹೋಗುತ್ತೇನೆ' ಎಂದು ಶ್ರೀಧರ ಹೊರಡುವನು. ಅವನು ಹೋದಕೂಡಲೆ ರಘು ಹಾಡು ನಿಲ್ಲಿಸುವನು. ಶ್ರೀಧರ ಬಾರದಿರಲು, ರಘು ಸ್ವಲ್ಪ ಮೆಲ್ಲನೆ ಮತ್ತೆ ಹಾಡು ಮುಂದುವರಿಸುವನು]

ಶ್ರೀಧರ–(ಪ್ರವೇಶಿಸಿ) ನಿನ್ನ ಹಾಡು ಬಾಗಿಲುಹಾಕಿದ್ದರೂ ಒಳಕ್ಕೆ ಕೂಡ ಎಷ್ಟು ಚೆನ್ನಾಗಿ ಕೇಳುತ್ತ ಇತ್ತು ಅಂತ!

ರ–ಅದಕ್ಕೇ ನಿನ್ನ ಘಾಟಿ ಅಂದದ್ದು, ನಾನು.

ಶ್ರೀಧರ–ಕಂಡವರ ಮನೆಯಲ್ಲಿ, ಹಾಡು ಅಂತ ಹೇಳಿದ್ದೆ ಸಾಕು ಅಂತ, ನಿನ್ನ ಹಾಗೆ ನಾಚಿಕೆಯಿಲ್ಲದೆ ಯಾರಯ್ಯ ಹಾಡುತಾರೆ? ಒಳಕ್ಕೆ ಕೇಳಲಿ ಅಂತಲೇ ನೀನು ಹಾಡಿದೆ. ನೀನೋ ಘಾಟಿ, ನಾನೋ?

ಲ. ದೇ.–(ಪ್ರವೇಶಿಸಿ) ಶ್ರೀಧರ, ನಾಳೆ ಸೀತೆಯ ಹುಟ್ಟಿದಹಬ್ಬ. ನಿಮ್ಮ ಸ್ನೇಹಿತರಿಗೂ ಇಲ್ಲಿಗೇ ಊಟಕ್ಕೆ ಬರುವ ಹಾಗೆ ಹೇಳಪ್ಪ. [ಹೊರಡುವರು]

ರ–ಏನಾದರೂ ಆಗಲಿ, ಮುಖ್ಯ ಹಬ್ಬದ ಊಟದ ಪ್ರಾಪ್ತಿ ಇತ್ತು ನನಗೆ.

ಶ್ರೀ–ಕಂಕಣಪ್ರಾಪ್ತಿ ರಘು, ಕಂಕಣಪ್ರಾಪ್ತಿ!

–ತೆರೆ–

ಜ–ಏನು ಶಾಸ್ತ್ರಿಗಳೆ ನೀವು ಹೇಳೋದು, ಮಗನಿಗೆ ಮದುವೆಯಾಗದಿರುವುದು ನನ್ನ ಅದೃಷ್ಟವೇ?

ಗ–ಹಾಗಲ್ಲ ರಾಯರೆ, ನನ್ನ ಅಂಬೋಣ. ನನ್ನ ಮಾತು ತೆಗೆದುಕೊಳ್ಳುವುದಾದರೆ, ನನ್ನದೊಂದು ಸಲಹೆ ಇದೆ.

ಜ–ಹಾಸ್ಯವಲ್ಲದಿದ್ದರೆ ಹೇಳಿ.

ಗ–ಹಾಸ್ಯವಲ್ಲ ರಾಯರೆ, ಖಂಡಿತ ಹಾಸ್ಯವಲ್ಲ. ನಮ್ಮ ರಾಯರಿಗೆ ಮಕ್ಕಳಿಲ್ಲ. ಚಿಕ್ಕಂದಿನಿಂದ ಒಂದು ಹುಡುಗಿಯನ್ನ ಸಾಕಿಕೊಂಡು ಗಿಣೀಹಾಗೆ ಬೆಳಸಿದಾರೆ. ಬೆಳಸೋದೇನು, ತಬ್ಬಲಿ ಹುಡುಗಿಯಾದರೂ ತಂಗಳನ್ನ ತಿನ್ನದೆ, ಮನೆಯ ಮಗಳಿಗಿಂತ ಚೆನ್ನಾಗಿ ಬೆಳೆದಿದಾಳೆ. ರಾಯರ ಹೆಂಡತಿಯ ಸಂಬಂಧದ ಹುಡುಗಿ ಅಂದಮೇಲೆ ಕೇಳಬೇಕೆ? ಈಗ ನಾನು ಮುಖ್ಯವಾಗಿ ಬಂದಿರುವುದಾದರೂ ಆ ಹುಡುಗಿಯ ಮದುವೆಯ ಪ್ರಸ್ತಾಪಕ್ಕೆ. ಆ ಹುಡುಗಿಯ ಜಾತಕವೂ ನಿಮ್ಮ ಹುಡುಗನ ಜಾತಕವೂ ಹೇಳಿ ಬರಸಿದ್ದಕ್ಕಿಂತ ಚೆನ್ನಾಗಿ ಹೊಂದುತ್ತೆ.

ಜ–(ಸಂತೋಷದಿಂದ) ಹಾಗೇನೂ!

ಗ–ಹೌದು, ಬಹು ಚೆನ್ನಾಗಿ ಹೊಂದುತ್ತೆ. ನೀವು ದೊಡ್ಡಮನಸ್ಸುಮಾಡಿ ಆ ಹೆಣ್ಣು ತಂದುಕೊಂಡರೆ, ನಿಮ್ಮ ಮಗ ಸೊಸೆಗೆ ಬೇರೆಯ ಏರ್ಪಾಡುಮಾಡಿ, ಬೇಕಾದರೆ ನೀವೂ, ಒಂದು ಮದುವೆ....

ಜ–ನನ್ನ ಮಗನ ಮದುವೆ ಒಂದಾದರೆ ಸಾಕು ಶಾಸ್ತ್ರಿಗಳೆ. ಅವನು ಖಂಡಿತ ಒಲ್ಲೆ ಅಂದರೆ, ಆಗ ಆ ಮಾತು.

ಗ–ಅದನ್ನೂ ಯೋಚನೆ ಮಾಡಿರುವುದು ಒಳ್ಳೆಯದು. ನೀವು ಕೊಟ್ಟಿದ್ದ ಜಾತಕಗಳ ಪೈಕಿ ಒಂದು ಜಾತಕವಂತೂ ನಿಮ್ಮ ಜಾತಕಕ್ಕೆ ಬಹು ಪ್ರಶಸ್ತವಾಗಿ ಕೂಡಿ ಬರುತ್ತೆ. (ಎಂದು ವಸ್ತ್ರದ ಕಟ್ಟಿನಿಂದ ಜಾತಕಗಳನ್ನೆಲ್ಲ ಹೊರಕ್ಕೆ ತೆಗೆದು ಮೇಜಿನಮೇಲೆ ಹಾಕಿ, ಒಂದನ್ನು ಆರಿಸಿ ಜಗನ್ನಾಥರಾಯರ ಕೈಗೆ ಕೊಡುವನು.)

ಜ–(ಜಾತಕವನ್ನು ಪರೀಕ್ಷಿಸಿ ನೋಡಿ) ಓಹೊ, ಇದು ಶಾಮರಾಯರು ಕಳಿಸಿಕೊಟ್ಟ ಜಾತಕ. ತಮ್ಮನ ಮಗಳು. ತಂದೆಯಿಲ್ಲದ ಹುಡುಗಿ. ಹೊಣೆಯೆಲ್ಲ ಅವರದ್ದೆ. ಎರಡನೆ ವರ ಅಂತ ಅಷ್ಟು ಯೋಚನೆ ಮಾಡಲಾರರು.

ಗ–ಎಲ್ಲಿ, ಜಾತಕ ತೋರಿಸಿ? [ಜಗನ್ನಾಥರಾಯರು ತೋರಿಸುವರು]

(ನೋಡಿ) ಓಹೋ, ಹುಡುಗಿಗೆ ಇಪ್ಪತ್ತು ವರ್ಷ ಸ್ವಾಮಿ. ಅಲ್ಲದೆ, ಅತ್ತೆ ಮಾವ ಇಲ್ಲದ ಮನೆಯಾಗಬೇಕು. ಅವರಿಗೆ ತಾನೆ ನಿಮ್ಮನ್ನ ಬಿಟ್ಟರೆ ಬೇರೆ ವರ ಎಲ್ಲಿ ಸಿಕ್ಕುತಾರೆ ?

ಗ–ಛೆ, ಛೆ, ಛೆ! ಅಬ್ಬಬ್ಬ ಅಂದ್ರೆ ಐವತ್ತು ಹೇಳಬಹುದು ಅಷ್ಟೆ. ನಮ್ಮ ತಂದೆ ಅರಮನೆಯ ಸೇವೆ ಮಾಡಿದವರು. ಅವರು ಅರುವತ್ತೈದನೆಯ ವಯಸ್ಸಿನಲ್ಲಿ ತಾವಾಗಿಯೇ ಕೇಳಿಕೊಂಡು ರಿಟೈರುಮಾಡಿಸಿಕೊಂಡರು. ರಿಟೈರಾದಮೇಲೆ ಮೂರನೆಯ ಮದುವೆ ಮಾಡಿಕೊಂಡರು. ನಾನು ಎರಡನೆಯ ಹೆಂಡತಿಯ ಮಗ.

ಜ–ಪೂರ್ವಕಾಲದವರೇ ಹಾಗೆ ಅಂದ್ರೆ. ಊಟ, ಮದುವೆ, ಮಕ್ಕಳು ಮರಿ, ಖರ್ಚುವೆಚ್ಚ–ಎಲ್ಲದರಲ್ಲೂ, ಪುಷ್ಕಳವಾದ ಜೀವನ. ನಾನೂ ಸ್ವಲ್ಪ ಪೂರ್ವಕಾಲದವನು ಅಂತಲೇ ಇಟ್ಟುಕೊಳ್ಳಿ. ಪೂರ್ವಕಾಲದ ಸಂಪ್ರದಾಯಗಳೇ ಒಳ್ಳೆಯವು.

ಗ–ಅದು ಸರಿ ಅನ್ನಿ. ಪೂರ್ವಕಾಲದಲ್ಲಿ ಮೂವತ್ತೈದಕ್ಕೂ ನಲವತ್ತಕ್ಕೂ ಎರಡನೆಯ ಮದುವೆಮಾಡಿಕೊಳ್ಳುತ್ತಿದ್ದರು. ಕೆಲವರು ಎರಡನೆಯ ವರ ಅಂತ ಹಾಸ್ಯಾನೂ ಮಾಡುತ್ತಿದ್ದರು. ಈಗಲೂ ಹಾಸ್ಯಮಾಡುತ್ತಾರೆ. ಈಗ ಮೊದಲನೆಯ ವರಕ್ಕೇ ಎರಡನೆಯ ವರನಷ್ಟು ವಯಸ್ಸಾಗಿರುತ್ತೆ. ಅದಕ್ಕೂ ಇದಕ್ಕೂ ಏನು ವ್ಯತ್ಯಾಸ ಅಂತೀನಿ?

ಜ–ಒಬ್ಬಳು ಹೆಂಡತಿ ಇಲ್ಲ ಅನ್ನೋದು ಎಷ್ಟೋ ಅಷ್ಟೆ. ಈಗ ನಮ್ಮ ಹುಡುಗ ಇದಾನೆ ನೋಡಿ. ಅವನಿಗೆ ಆಗಲೇ ಇಪ್ಪತ್ತೈದು ವರ್ಷ. ಅವನಿಗೆ ಹದಿನೆಂಟಾದಾಗಲೇ ಮದುವೆ ಮಾಡಿಕೊಳ್ಳೊ ಅಂತ ಹೇಳಿದೆ. ಕೇಳಲಿಲ್ಲ. ಇಂಟರ್‌ಮೀಡಿಯಟ್ ಆಗಲಿ, ಅಂದ. ಇಂಟರ್ ಮೀಡಿಯಟ್ ಎರಡುಸಲ ಹೋಯಿತು. ಬಿ. ಎಸ್‌ಸಿ.ಗೆ ಬಂದಾಗ ಬಲವಂತಮಾಡಿದೆ. ಬಿ.ಎಸ್‌ಸಿ. ಆಗಲಿ ಅಂದ. ಅವನಿಗೆ ಬಿ. ಎಸ್‌ಸಿ. ಆಗಲಿ ಅಂತ ನಾನು ಎಷ್ಟು ವರ್ಷ ಕಾಯಲಿ? ಬಂದ ಒಳ್ಳೆಯ ಕಡೆಯ ಹೆಣ್ಣುಗಳನ್ನೆಲ್ಲ ಬೇಡ ಅಂದಾಯಿತು. ಈಗ ಯಾವ ಯಾವುವೊ ಕಳಪೆ ಹೆಣ್ಣುಗಳು ಬರತೊಡಗಿವೆ. ನಾನು ಹೇಗಾದರೂ ಮಾಡಿ, ಹೆದರಿಸಿ, ಬೆದರಿಸಿ, ಆಶೆ ತೋರಿಸಿ, ಮಗನಿಗೆ ಮದುವೆ ಮಾಡೋಣ ಅಂತಿದ್ದರೆ, ನೀವು ಒಂದು ಜಾತಕವೂ ಕೂಡಿಬರೋದಿಲ್ಲ ಅಂತೀರಿ. ಮಗನಿಗೆ ಮದುವೆ ಅಂತ ಒಂದಾದರೆ, ಒಂದು ಹೆಣ್ಣು ದಿಕ್ಕಾಗುತ್ತೆ ಅಂತ ನೋಡಿ ನೋಡಿ, ಕಾದು ಕಾದು, ನನಗೂ ಸಾಕಾಯಿತು. 'ನನಗೆ ಇಷ್ಟ ಬಂದಾಗ ಇಷ್ಟವಾದ ಹೆಣ್ಣನ್ನ ಮದುವೆಮಾಡಿಕೊಳ್ಳುತೀನಿ' ಅಂತಾನೆ. ಅದಕ್ಕೆ ತಕ್ಕಹಾಗೆ, ನನ್ನ ದುರದೃಷ್ಟಕ್ಕೆ, ಒಂದು ಜಾತಕವೂ ಕೂಡಿ ಬರಲಿಲ್ಲ ಅಂತೀರಿ, ನೀವು.

ಗ–ದುರದೃಷ್ಟ ಅನ್ನಬೇಡಿ. ಅದೃಷ್ಟ ಅನ್ನಿ.

ಅರ್ಪಣೆಮಾಡಿದ್ದಾರೆ. ಆಗಬಹುದು ತಾನೆ?

ಜ–ಅಗತ್ಯವಾಗಿ ಆಗಬಹುದು.

ಗ–ನಿಮ್ಮ ಚಿರಂಜೀವಿಗಳೆಲ್ಲೋ ಕಾಣಲಿಲ್ಲ.

ಜ–ಎಲ್ಲೋ ಹಾಳಾಗಿ ಹೋಗಿದಾನೆ. ಅಂದಹಾಗೆ, ಈ ಮಾತುಕತೆಯ ಅವಸರದಲ್ಲಿ ಅಡಿಗೆಯವನಿಗೆ ಹೇಳಿ ಒಂದು ಲೋಟ ಕಾಫಿ ಮಾಡಿಸಿ ಕೊಡುವುದೂ ಮರೆತು ಹೋಯಿತು.

ಗ–ಇರಲಿ ಬಿಡಿ. ನಮ್ಮ ಸೀತೆ ನಿಮ್ಮ ಮನೆಗೆ ಬರುವ ಹಾಗೆ ಆದರೆ ಆ ಅಡಿಗೆಯವನನ್ನ ಆಚೆಗೆ ಓಡಿಸಿ ಅವಳ ಕೈಲಿ ಕಾಫಿಮಾಡಿಸಿ ಕೊಡುವಿರಂತೆ.

ಜ–ನನ್ನ ಮನಸ್ಸಿನಲ್ಲಿ ಇರುವುದೂ ಅದೇ–ನನ್ನ ಮಗ ಒಪ್ಪಲಿ ಬಿಡಲಿ, ಅಡಿಗೆಯವನನ್ನು ಅಚೆಗೆ ಓಡಿಸಬೇಕು; ಮನೆಗೆ ಒಂದು ಹೆಣ್ಣು ದಿಕ್ಕಾಗಬೇಕು.

ಗ–ನೋಡೋಣ. ದೇವರಿದ್ದಾನೆ. ಎಲ್ಲ ಅವನ ಇಚ್ಛೆ. (ಹೊರಡಲೇಳುವನು)

ಜ–(ಜೇಬಿನಿಂದ ಹತ್ತು ರೂಪಾಯಿನ ನೋಟು ತೆಗೆದು) ಏನೂ ತಿಳಿದುಕೊಳ್ಳಬೇಡಿ. ಜಾತಕಗೀತಕ ನೋಡಿ ಮೆಹನತ್ತು ಮಾಡಿದೀರಿ. ಈ ಅಲ್ಪ ಸಂಭಾವನೆ ಸ್ವೀಕರಿಸಬೇಕು.

ಗ–ಬೇಡ ಬೇಡ, ಖಂಡಿತ ಬೇಡ. ನಮ್ಮ ರಾಯರು ಏನಂದುಕೊಂಡಾರು!

ಜ–ಅವರಿಗೆ ಹೇಳಲೇಬೇಡಿ. ನನ್ನ ಸಂತೋಷ. ನನಗೆ ಅಸಮಾಧಾನ ಮಾಡುವುದಕ್ಕೆ ಇಷ್ಟವಿದ್ದರೆ, ಒಲ್ಲೆ ಅನ್ನಿ. (ಎಂದು ನೋಟನ್ನು ಕೈಗೆ ತುರುಕುವನು)

ಗ_ನಿಮ್ಮ ಸಂತೋಷ. ಹಾಗಾದರೆ, ನಾನು ಬರಲೆ?

ಜ–ನಮಸ್ಕಾರ. ವಿಶ್ವಾಸ ಇರಬೇಕು.

ಗ–ಬಹಳ ದೊಡ್ಡಮಾತು. ತಮ್ಮ ಕೃಪೆ. ನಾನು ಬರ್ತೇನೆ. ನಮಸ್ಕಾರ.

–ತೆರೆ–

ಜ–ಇರಲಿ. ಈಗ ಲಕ್ಷ್ಮೀನಾರಾಣಪ್ಪನವರ ಮಗಳ ವಿಚಾರ ಏನು?

ಗ–ಆಗಲೇ ಹೇಳಿದೆನಲ್ಲ ನೀವು ದೊಡ್ಡ ಮನಸ್ಸುಮಾಡಬೇಕು. ನಿಮ್ಮ ಮಗನ್ನ ಒಪ್ಪಿಸಬೇಕು. ಸಾಕುಮಗಳು ಅಂತಹೇಳಬೇಡಿ. ಅವರ ಒಬ್ಬಳೇ ಮಗಳು ಅಂತ ಹೇಳಿ. ಭಾರಿ ಜಮೀನುದಾರರು ಅನ್ನಿ. ಆಸ್ತಿಪಾಸ್ತಿ ಎಲ್ಲ ಮುಂದೆ ನಿನಗೇ ಬರುತ್ತೆ ಅಂತ ಆಸೆ ಹುಟ್ಟಿಸಿ.

ಜ–ಅವನು ಒಪ್ಪಬೇಕಲ್ಲ. ಮೊಂಡು ಹಿಡಿದಿದಾನೆ, ಮೂರ್ಖ, ತಾನು ಮೆಚ್ಚಿದ ಮೋಹಿನಿಯನ್ನೆ ಮದುವೆಯಾಗಬೇಕು ಅಂತ.

ಗ–ರಾಯರೆ, ನೀವು, ಸೀತೆಯನ್ನ–ನಮ್ಮ ರಾಯರ ಮಗಳನ್ನ, ನೋಡಿದರೆ–ನೀವು, ಮೆಚ್ಚುವುದು ಹಾಗಿರಲಿ, ಹುಚ್ಚು ಹಿಡಿದು ಹೋಗುತ್ತೀರಿ. ಈ ಹುಡುಗಿ ನನ್ನ ಮಗನಿಗೆ ಬೇಡ ನನಗೇ ಇರಲಿ ಅಂದರೂ ಅಂದೀರಿ.

ಜ–ಒಂದು ವೇಳೆ ನನ್ನ ಮಗ ಒಪ್ಪಲಿಲ್ಲ ಅಂತ ಇಟ್ಟುಕೊಳ್ಳಿ. ಲಕ್ಷ್ಮೀನಾರಣಪ್ಪನವರು ನನಗೆ ಕೊಡುವುದಕ್ಕೆ ಒಪ್ಪುತ್ತಾರೆಯೋ?

ಗ–ಅವರು ಒಪ್ಪಿದರೂ ಒಪ್ಪಬಹುದು. ಇನ್ನೊಂದು ಮದುವೆ ಮಾಡಿಕೊಳ್ಳಿ ಅಂತ ನಾನೇ ಅವರನ್ನ ಬಲವಂತ ಮಾಡುತ ಇದೇನೆ. ಆದರೆ, ಅವರ ಹೆಂಡತಿ–ಸೀತೆ ಅಂದರೆ ಮಗಳಿಗಿಂತ ಹೆಚ್ಚು ಅವರಿಗೆ–ಅವರು ಒಪ್ಪಲಾರರು.

ಜ–ಹಾಗೆ ಹೇಳಿ. ನಾನು ಒಪ್ಪಿದರೇನು ಬಿಟ್ಟರೇನು, ನನ್ನ ಮಗ ಒಪ್ಪಬೇಕಲ್ಲ.

ಗ–ಒಪ್ಪುವುದು ಬಿಡುವುದು ಮುಂದಿನ ಮಾತು. ಈಗ ಹೆಣ್ಣು ನೋಡೋದಕ್ಕೆ ಏನು ಅಡ್ಡಿ? ಅದಕ್ಕೂ ಒಲ್ಲೆ ಅಂತಾನೆಯೋ?

ಜ–ಬಹುಶಃ ಒಲ್ಲೆ ಅನ್ನಲಾರ. ಅಷ್ಟು ಅವಿಧೇಯನಾದರೆ, ಮನೆ ಬಿಟ್ಟು ಓಡಿಸಿಬಿಡುತ್ತೇನೆ.

ಗ–ಅಷ್ಟುಮಟ್ಟಿನ ಅಧಿಕಾರ ಚಲಾಯಿಸಬೇಕು, ರಾಯರೇ, ಈಗಿನ ಕಾಲದ ಹುಡುಗರ ಮೇಲೆ. ಇಲ್ಲದೆ ಹೋದರೆ ದಾರಿಗೆ ಬರುವುದಿಲ್ಲ. ಅಂತೂ, ಈ ಸಂಬಂಧ ಬೆಳಸುವುದಕ್ಕೆ ಈಗ ನೀವು ಒಪ್ಪಿದ ಹಾಗಾಯಿತು ಅನ್ನಿ.

ಜ–ಆಯಿತು.

ಗ–ಶುಭಸ್ಯ ಶೀಘ್ರಂ. ಈ ಹೊತ್ತು ನಮ್ಮ ಹುಡುಗಿಯ ಹುಟ್ಟಿದ ಹಬ್ಬ. ಅದೂ ಒಂದು ಶುಭ ಸಂದರ್ಭವೆ. ಸಂಜೆ ಆರೂ ಕಾಲುಗಂಟೆಯ ಮೇಲೆ–ಭಾನುವಾರ ನೋಡಿ, ಅಲ್ಲಿಯವರೆಗೆ ರಾಹುಕಾಲ–ಹೆಣ್ಣು ನೋಡುವ ಶಾಸ್ತ್ರ ಇಟ್ಟುಕೊಳ್ಳೋಣ ಅಂತ. ತಾವು ತಮ್ಮ ಚಿರಂಜೀವಿಗಳನ್ನೂ ಕರೆದುಕೊಂಡು ದಯಮಾಡಿಸಬೇಕು ಅಂತ, ತಮ್ಮನ್ನ ಪ್ರಾರ್ಥಿಸಿಕೊಳ್ಳುವಹಾಗೆ, ನಮ್ಮ ರಾಯರು

ಗ–ಒಳ್ಳೆಯದೇ ಆಯಿತು ಅನ್ನಿ, ಇದೇ ನೋಡಿ, ಕಾಕತಾಳ ನ್ಯಾಯ ಅನ್ನೋದು. ವೈದ್ಯ ಹೇಳಿದ್ದೂ ಹಾಲನ್ನ, ರೋಗಿ ಬಯಸಿದ್ದೂ ಅದನ್ನ ಅನ್ನೋಹಾಗೆ. ಪ್ರೋಗ್ರಾಮಿನಲ್ಲಿ ಸ್ವಲ್ಪ ಬದಲಾವಣೆಯಾಗಿ ನಿಮ್ಮನ್ನ ಐದು ಗಂಟೆಯ ಹೊತ್ತಿಗೇ ಬರುವ ಹಾಗೆ ತಿಳಿಸಿಬಿಡು ಅಂತ ಊಟದ ಮುಂದೆ ಹೇಳಿದ್ದರು ನಮ್ಮ ರಾಯರು. ನನಗೆ ಸಮಯವೇ ಆಗಲಿಲ್ಲ. ನಾನು ಅದೇ ಯೋಚನೆಯಲ್ಲಿದ್ದಾಗ ನೀವೇ ಬಂದಿರಿ–ನೆನದವರ ಮನದಲ್ಲಿ ಅನ್ನೋಹಾಗೆ. ನಿಮಗೆ ನೂರು ವರ್ಷ ಆಯುಸ್ಸು ರಾಯರೆ, ನೂರು ವರ್ಷ.

ಜ–ಈ ಒಂಟಿ ಬಾಳು ಬಾಳೋದಕ್ಕೆ ನೂರು ವರ್ಷ ಯಾಕೆ ಶಾಸ್ತ್ರಿಗಳೇ ನನ್ನ ಮಗನ ಮದುವೆಯಾದರೂ ಆಗಲಿ, ಆಮೇಲೆ ದೇವರ ಚಿತ್ತ ಅಂದರೆ– ಅವನು ಮೊಂಡು ಹಿಡಿದು ಕೂತಿದಾನೆ.

ಗ–ಅಂದಹಾಗೆ, ತಮ್ಮ ಮಕ್ಕಳು ಎಲ್ಲಿ, ಕಾಣಲೇ ಇಲ್ಲವಲ್ಲ? ಹಿಂದಿನಿಂದ ಬರುತ್ತಾರೋ, ಇಲ್ಲ ಆರುಗಂಟೆ ಹೊತ್ತಿಗೆ ಬರುತ್ತಾರೋ?

ಜ–ಅದನ್ನೇ ನಾನು ಹೇಳ ಹೊರಟದ್ದು. ಇವತ್ತು ಹೆಣ್ಣು ನೋಡೋದಕ್ಕೆ ಹೋಗಬೇಕು ಅಂತ ಹೇಳಿದರೆ, 'ನಾನು ಸಿನಿಮಾ ನೋಡೋದಕ್ಕೆ ಹೋಗಬೇಕು' ಅಂದ; 'ಮಾತು ಕೊಟ್ಟದ್ದಕ್ಕೋಸ್ಕರ ಬೇಕಾದರೆ ಹೆಣ್ಣು ನೋಡಿ ಕೊಂಡು ಬಂದ ಶಾಸ್ತ್ರ ಆಗಲಿ, ನಾನಂತೂ ಬರೋದಿಲ್ಲ' ಅಂದ. 'ಆಗಲಿ, ನಾನು ನೋಡಿ ಹೆಣ್ಣನ್ನ ಒಪ್ಪಿದರೆ–ನೀನು ಮದುವೆಯಾಗುತ್ತೀಯೋ' ಅಂತ ಕೇಳಿದರೆ, 'ನಾನು ಆಗಲೇ ಒಂದು ಹೆಣ್ಣು ನೋಡಿ ಮನಸ್ಸಿನಲ್ಲಿ ಒಪ್ಪಿ ನಿರ್ಧರಿಸಿಕೊಂಡಿದ್ದೇನೆ, ಈ ಹೆಣ್ಣನ್ನು ನೀನು ನೋಡಿ ನಿನಗೆ ಒಪ್ಪಿಗೆಯಾದರೆ ಆಮೇಲೆ 'ಕಂಪೇರ್' ಮಾಡಿ ನೋಡೋಣ' ಅಂತ ಹೇಳಿ ಬಿಟ್ಟ, ಹೆಣ್ಣು ನೋಡುವುದಕ್ಕೆ ಬರುವುದಿಲ್ಲವೇನೋ ಅಂದರೆ 'ಉಹ್ಹುಂ' ಅಂದುಬಿಟ್ಟ. ಈಗಿನ ಕಾಲದ ಹುಡುಗರಿಗೆ, ತಂದೆ ಅಂದರೆ, ಇಷ್ಟು ಭಕ್ತಿ!

ಗ–ನಿಮ್ಮ ಮಕ್ಕಳೂ ಬಂದಿದ್ದರೆ ಚೆನ್ನಾಗಿತ್ತು. ಈಗಲೂ ಕೆಟ್ಟದ್ದೇನು? ನೀವು ನೋಡಿ; ನಿಮಗೆ ಒಪ್ಪಿಗೆಯಾದರೆ, ಆಮೇಲೆ ಮುಂದಿನ ಆಲೋಚನೆ.

ಜ–ಅದೇ ಆಲೋಚನೆಯಿಂದಲೇ ನಾನು ಬಂದದ್ದು ಅಂತ ಇಟ್ಟುಕೊಳ್ಳಿ. ಅವನು ಒಪ್ಪಿದರೂ ಸರಿ, ಒಪ್ಪದಿದ್ದರೂ ಸರಿ.

ಲ. ನಾ–(ಪ್ರವೇಶಿಸಿ) ನಮಸ್ಕಾರ, ರಾಯರಿಗೆ ನಮಸ್ಕಾರ.

ಜ–(ಮೇಲೆದ್ದು) ನಮ್ಮಸ್ಕಾರ, ನಮಸ್ಕಾರ. ಈಗ ತಾನೆ ಎದ್ದಿರಿ ಅಂತ ಕಾಣುತ್ತೆ. (ಮತ್ತೆ ಕುಳಿತುಕೊಳ್ಳುವರು)

# ದೃಶ್ಯ ೩

[ಸ್ಥಳ : ಲಕ್ಷ್ಮೀನಾರಣಪ್ಪನ ಮನೆಯ ಕೋಣೆ. ಮೊದಲ ದೃಶ್ಯದಂತೆ. ಸಂಜೆ ಸುಮಾರು ಐದು ಐದೂವರೆ ಗಂಟೆಯ ಸಮಯ]

ಗ–ಒಳ್ಳೇ ಪೀಕಲಾಟಕ್ಕೆ ಬಂತಲ್ಲ ಈಗ! ಆರು ಗಂಟೆಯ ಮೇಲೆ ಬನ್ನಿ ಅಂತ ಜಗನ್ನಾಥರಾಯರಿಗೆ ಹೇಳಿಬಿಟ್ಟೆ. ಆ ಹೊತ್ತಿಗೆ ಸರಿಯಾಗಿ ಸೀತೆಯನ್ನ ಸಿನೀಮಾಕ್ಕೆ ಕರೆದುಕೊಂಡು ಹೋಗಬೇಕು ಅಂತ ಶ್ರೀಧರ ಪ್ಲ್ಯಾನ್ ಹಾಕಿಬಿಟ್ಟಿದಾನೆ. ರಾಯರೇನೋ, ಹಾಗಾದರೆ ಅವರನ್ನ ದಯವಿಟ್ಟು ೫ ಗಂಟೆಯ ಹೊತ್ತಿಗೇ ಬರುವ ಹಾಗೆ ತಿಳಿಸಿಬಿಡು ಅಂದುಬಿಟ್ಟರು. ರಾಹುಕಾಲವಲ್ಲವೇ ಅಂದದ್ದಕ್ಕೆ, ವಿಘ್ನವಾದರೆ ಆಯಿತು ಅಂದರಲ್ಲ, ಈ ಉಡಾಫೆ ನನಗೆ ಅರ್ಥವೇ ಆಗೋದಿಲ್ಲ. ಹೋಗಲಿ, ನಾನಾದರೂ ಹೋಗಿ ಅವರಿಗೆ ತಿಳಿಸಿದೆನೇ–ಊಟಮಾಡಿ ಮಲಗಿದವನು ಠಾಕೋಠಾಕ್ ನಾಲ್ಕೂ ಮುಕ್ಕಾಲಿಗೆ ಎದ್ದಿದ್ದೇನೆ. ಈಗಲೇ ಹೋಗಿ ಅವರನ್ನ ಕರೆದುಕೊಂಡಾದರೂ ಬಂದುಬಿಡಲೋ (ಎಂದು ಶತಪಥ ತಿರುಗತೊಡಗುವನು)

[ಹೊರಗೆ "ಶಾಸ್ತ್ರಿಗಳೇ" ಎಂದು ಕೂಗಿದ ಸದ್ದು ಕೇಳಿ ಬರುವುದು]

ಓಹೋ, ಜಗನ್ನಾಥರಾಯರ ಧ್ವನಿಯ ಹಾಗೇ ಇದೆ, ಸದ್ಯ, ನಾನು ಬಚಾವಾದೆ.

[ಜಗನ್ನಾಥರಾಯರು ಬಾಗಿಲ ಬಳಿ ಬಂದುದನ್ನು ಕಂಡು] ಓಹೋ, ನಮಸ್ಕಾರ ರಾಯರಿಗೆ! ದಯಮಾಡಿಸಬೇಕು, ರಾಯರು ದಯಮಾಡಿಸಬೇಕು!

ಜ–(ಪ್ರವೇಶಿಸಿ) ನಮಸ್ಕಾರ ಶಾಸ್ತ್ರಿಗಳೆ! ಎಲ್ಲಿ, ಯಜಮಾನರು ಕಾಣಿಸುವುದಿಲ್ಲವಲ್ಲ.

ಗ–ಇವತ್ತು ಊಟ ಆದದ್ದೆ ಹೊತ್ತಾಯಿತು. ಹಾಗೆಯೆ ಸ್ವಲ್ಪ ಮಲಗಿ ನಿದ್ದೆ ಹೋಗುತಾ ಇದಾರೆ ಅಂತ ಕಾಣುತ್ತೆ. ನಿಂತೇ ಇದ್ದೀರಲ್ಲ. ಕುಳಿತುಕೊಳ್ಳೋಣಾಗಲಿ. ಹೋಗಿ ಎಬ್ಬಿಸುತೀನಿ ಬೇಕಾದರೆ.

ಜ–ಬೇಡಿ ಬೇಡಿ. ಏನು ಅಂಥ ಸೂರೆ ಹೋಗೋದು. ನೀವು ಆರರ ಮೇಲೆ ಬಾ ಅಂದಿದ್ದಿರಿ; ನಾನು ಈಗಲೇ ಹೊರಟು ಬಂದುಬಿಟ್ಟೆ. (ಕುಳಿತುಕೊಳ್ಳುವರು)

ಲ.ನಾ.–ಇನ್ನೊಂದು ವಿಷಯ; ಏನೂ ಅಂದರೆ–ಯಾವುದೂ ಮುಚ್ಚುಮರೆ ಇರಕೂಡದು. ಹುಡುಗಿ ಎಸ್.ಎಸ್,ಎಲ್.ಸಿ. ಫೇಲಾಗಿದಾಳೆ; ನಮ್ಮ ಹೆಂಗಸರೇನಾದರೂ ಪ್ಯಾಸಾಗಿದೆ ಅಂದರೆ, 'ಸಂತೋಷ', ಅಂದುಬಿಡಿ.

ಜ–ನಮ್ಮ ಹುಡುಗನ ಪಾಡೂ ಅಷ್ಟೆ. ನಿಮ್ಮ ಹೆಂಗಸರಿಗೂ ಹುಡುಗಿಗೂ ಈಗ–ಸದ್ಯದಮಟ್ಟಿಗೆ–ಬಿ.ಎಸ್.ಸಿ.ಆಗಿದೆ ಅಂತಲೇ ತಿಳಿದಿರಲಿ. ಮುಂದೆ ಪರಸ್ಪರ ಎಲ್ಲಾ ಗೊತ್ತಾಗುತ್ತೆ–ನಮ್ಮ ಹುಡುಗ ಒಪ್ಪಿ ಮದುವೆಯಾದರೆ.

ಲ.ನಾ.–ನಮ್ಮ ಸೀತೆಗೆ ತಕ್ಕಮಟ್ಟಿಗೆ ಸಂಗೀತ ಹೇಳಿಸಿದೇವೆ. ಬಾಯಿಹಾಡಿಕೆ ಸುಮಾರು;ಹಾರ್ಮೋನಿಯಂ ಚೆನ್ನಾಗಿ ಬಾರಿಸುತ್ತಾಳೆ.

ಜ–ಈಗ ಹಾರ್ಮೋನಿಯಂ ಹಿಂದೆ ಬಿದ್ದುಹೋಯಿತು. ವೀಣೆಯನ್ನೋ ಪೀಟೀಲನ್ನೋ ಹೇಳಿಸಿದ್ದರೆ ಚೆನ್ನಾಗಿತ್ತು. ಅದಕ್ಕೇನು, ನಮ್ಮ ಮನೆಗೆ ಬಂದಮೇಲೆ ವೀಣೆ ಕಲಿಸುವ ಏರ್ಪಾಡು ಮಾಡಿದರಾಯಿತು. (ಕಾಫಿ ಕುಡಿಯತೊಡಗುವರು)

ಲ.ನಾ.–(ತಾವೂ ಕಾಫಿ ಕುಡಿಯುತ್ತ) ಒಂದೆರಡು ಹಾಡು ಬಾರಿಸುವಹಾಗೆ ಹೇಳಲೋ.......

ಜ–ಏನೂ ಬೇಡ. ನಮ್ಮ ಹುಡುಗ ಬಂದಿದ್ದರೆ ಅದೆಲ್ಲ. ಹುಡುಗಿಯನ್ನ ಕಣ್ಣಿಂದ ಒಂದುಸಲ ನೋಡಿಬಿಟ್ಟರೆ ಸಾಕು. ಹಾಗೇ ಇಲ್ಲಿಗೆ, ಒಂದು ಸಲ, ಬಂದು ಹೋಗಿಬಿಡಲಿ.

ಲ.ನಾ.–ಸೀತಾ, ಸೀತಾ, .... ಲೇ...... ಸ್ವಲ್ಪ ಸೀತೇನ ಕಳಿಸೇ........ ಸೀತಾ, ಹಾಗೇ ಸ್ವಲ್ಪ ಬಂದು ಹೋಗಮ್ಮ. ಇನ್ನೊಂದು ವಿಷಯ. ಏನೂ ಅಂದರೆ – ಮೊದಲೇ ಹೇಳಿದೆನಲ್ಲ, ಯಾವುದೂ ಮುಚ್ಚುಮರೆ ಇರಕೂಡದು ಅಂತ– ನಮ್ಮ ಹುಡುಗಿ......[ಗಟ್ಟಿಯಾದ ಪಿಸುಮಾತಿನಲ್ಲಿ] ದೊಡ್ಡವಳಾಗಿ....... ಎರಡುವರ್ಷ...

ಜ–ಒಳ್ಳೆಯದೆ ಆಯಿತು ಬಿಡಿ. ತಕ್ಷಣ ಮನೆಗೆ ಬರುತಾಳೆ, ಅಷ್ಟೇ ತಾನೆ. ನನಗೆ ಬೇಕಾದ್ದೂ ಅದೇ. ಹಹ್ಹಹ..... ಅಲ್ಲದೆ, ಈಗಿನ ಕಾಲದಲ್ಲಿ....

[ಪ್ರವೇಶ: ಸೀತೆ; ಹೊಸ ಸೀರೆ, ಹೊಸ ಕುಪ್ಪಸ ಧರಿಸಿ, ಸರ್ವಾಲಂಕಾರ ಭೂಷಿತೆಯಾಗಿರುವಳು.]

ಸೀತೆ–[ತಲೆ ಬಗ್ಗಿಸಿ] ಏನು ಮಾವಯ್ಯ?

ಲ. ನಾ.–ಏನೂ ಇಲ್ಲವಮ್ಮಾ. ಹಾಗೇ ಈ ತಟ್ಟೆ ಲೋಟಗಳನ್ನ ತೆಗೆದುಕೊಂಡು ಹೋಗಮ್ಮಾ.

[ಸೀತೆ ಅವುಗಳನ್ನು ತೆಗೆಯುವುದರಲ್ಲಿರುವಳು. ಗಣಪತಿ ಶಾಸ್ತ್ರಿ ನಡುವೆ

ಲ. ನಾ.–ಆಗಲೇ ಎದ್ದೆ. ಈ ಸಂಜೆಯ ಏರ್ಪಾಡಿದೆಯಲ್ಲ, ಅದರಲ್ಲಿ ತೊಡಗಿದ್ದೆ. ನಿಮ್ಮ ಧ್ವನಿ ಕೇಳಿಬಂತು. ಬಂದೆ. ಎಲ್ಲಿ, ನಿಮ್ಮ ಚಿರಂಜೀವಿಗಳು?

ಜ–ಆ ವಿಷಯ ಆಮೇಲೆ ಹೇಳ್ತೇನೆ. ನಾನು ಶಾಸ್ತ್ರಿಗಳಿಗೆ ಮಾತು ಕೊಟ್ಟಿದ್ದರಿಂದ ಈಗ ಬಂದೆ, ಅಷ್ಟೆ––ಹೆಣ್ಣು ನೋಡಿದ ಶಾಸ್ತ್ರ ಮಾಡೋಣ ಅಂತ.

ಲ. ನಾ.–ಹಾಗಾದರೆ ನಿಮ್ಮ ಮಕ್ಕಳು.........

ಜ–ಬಹುಶಃ ಒಪ್ಪಿಯಾನು. ಆದರೂ ಹೇಳುವುದಕ್ಕಿಲ್ಲ. ಈಗಿನ ಕಾಲದ ಹುಡುಗರ ವಿಷಯ ನಿಮಗೆ ತಿಳಿಯದೆ?

ಲ. ನಾ.–ಅದು ಸರಿ ಅನ್ನಿ. ಶಾಸ್ತ್ರಿ, ಒಳಕ್ಕೆ ಹೋಗಿ ತಿಂಡಿ ಕಾಫಿ ಸಿದ್ಧವಾಗಿದ್ದರೆ ತೆಗೆದುಕೊಂಡು ಬಾ. [ಶಾಸ್ತ್ರಿ ಒಳಕ್ಕೆ ಹೋಗುವನು.]

ಜ–ತಿಂಡಿ ಪಂಡಿ ಇದೆಲ್ಲಾ ಯಾಕೆ ಹಚ್ಚಿಕೊಂಡಿರಿ?

ಲ. ನಾ.–(ಕುರ್ಚಿಯಮೇಲೆ ಕುಳಿತು) ನಿಮಗೋಸ್ಕರ ನಾವೇನೂ ತೊಂದರೆ ತೆಗೆದುಕೊಂಡಿಲ್ಲ. ಇವತ್ತು ನಮ್ಮ ಹುಡುಗಿಯ ಹುಟ್ಟಿದ ಹಬ್ಬ. ಸಂಜೆ ಅದೇನೋ ಸಿನಿಮಾಕ್ಕೆ ಹೋಗೋ ಪ್ರೋಗ್ರಾಂ ಇಟ್ಟುಕೊಂಡಿದಾರೆ; ಅದಕ್ಕೋಸ್ಕರವೇ ನಿಮ್ಮನ್ನ ಐದು ಗಂಟೆಗೇ ಬರಮಾಡಿಕೊಂಡೆ. ನಿಮಗೆ ತೊಂದರೆಯಾಯಿತೇನೋ. ದಯವಿಟ್ಟು ಕ್ಷಮಿಸಬೇಕು.

ಜ–ದೊಡ್ಡ ಮಾತು, ದೊಡ್ಡ ಮಾತು. ತೊಂದರೆ ಏನು ಬಂತು ಹೇಳಿ; ಕೊಟ್ಟ ತಿಂಡಿ ತಿನ್ನುವುದು, ಕೊಟ್ಟ ಹೆಣ್ಣು ಮದುವೆಯಾಗುವುದು–ಇದೂ ಒಂದು ತೊಂದರೆಯೆ?

[ಪ್ರವೇಶ: ಗಣಪತಿಶಾಸ್ತ್ರಿ: ಒಂದು ತಟ್ಟೆಯಲ್ಲಿ ಬೋಂಡ, ಜಿಲೇಬಿ; ಎರಡುಲೋಟ ಕಾಫಿ–ಹಿಡಿದುತಂದು ತಿಂಡಿಯನ್ನು ಜಗನ್ನಾಥರಾಯರ ಮುಂದೆ ಇಡುವನು.

ಜಗನ್ನಾಥರಾಯರು ನಿಸ್ಸಂಕೋಚವಾಗಿ ಒಂದಾದಮೇಲೆ ಒಂದರಂತೆ ಬೋಂಡಗಳನ್ನು ತುರುಕಿಕೊಂಡು, ತಿನ್ನತಿನ್ನುತ್ತಲೇ ಮಾತನಾಡುತ್ತಿರುವರು]

ಲ.ನಾ.–ನಮ್ಮ ಗಣಪತಿಶಾಸ್ತ್ರಿ ನಿಮ್ಮ ಹುಡುಗನ ಜಾತಕವೂ ನಮ್ಮ ಹುಡುಗಿಯ ಜಾತಕವೂ ಪ್ರಶಸ್ತವಾಗಿ ಹೊಂದುತ್ತೆ ಅಂತ ಹೇಳ್ತಾನೆ. ನಿಮ್ಮ ಸಮಾಧಾನಕ್ಕಾಗಿ ನೀವು ಬೇರೆ ಯಾವ ಜೋಯಿಸರಿಗೆ ಬೇಕಾದರೂ ತೋರಿಸಿ ನೋಡಬಹುದು.

ಗ–ನಾನೂ ಅದನ್ನೇ ಹೇಳೋಣ ಅಂತಿದ್ದೆ. ಭೇಷಕ್ ಆಗಬಹುದು.

ಗ–ನಿಮ್ಮ ಹುಡುಗ ಒಪ್ಪುವ ಪಕ್ಷಕ್ಕೆ ನನ್ನ ಸಹಾಯ ಅನಾವಶ್ಯಕ, ತೀರ ಅನಾವಶ್ಯಕ.

ಜ–ನನ್ನ ತಾತ್ಪರ್ಯ ಅದಲ್ಲ. ನನ್ನ ಮಗ, ಅವನು ನೋಡಿಕೊಂಡಿರುವ ಹೆಣ್ಣನ್ನ ಅವನು ಮದುವೆಯಾಗಲಿ ಈ ಹುಡುಗಿಯನ್ನ .......ನೀವೇ ಅಂದಿದ್ದಿರಿ ನೋಡಿ....ಬೇಕಾದರೆ......ನಾನೇ ಮದುವೆಯಾಗೋದಕ್ಕೆ.....ಏನು ಅಡ್ಡಿ ಅಂತೇನೆ.

ಗ–(ಬೆಕ್ಕಸಬೆರಗಾಗಿ) ನೀವೆ! ನೀವು! ನಾನು ಹಾಗೆ ಹೇಳಿದೆನೆ!

ಜ–ಒಂದು ವೇಳೆ ಹೇಳಲಿಲ್ಲ. ಈಗ ಹೇಳಿ, ಯಾಕಾಗಬಾರದು.

ಗ–(ಬೆರಗಿನ ಮೌನ)

ಜ–ನಮ್ಮ ಹುಡುಗ ಅಂದರೆ.....ನಿಮ್ಮ ರಾಯರಿಗೂ ದುಬಾರಿಯಾಗುತ್ತೆ. ಸೈಕಲ್ಲು, ರಿಸ್ಟ್ ವಾಚು, ಸೂಟು, ಆಮೇಲೆ ಇಂಜನಿಯರಿಂಗೋ ಇಂಗ್ಲೆಂಡೋ....ಅದು ಏನೇನು ಕೇಳುತಾನೋ ಕಂಡಿರುವರು ಯಾರು. ಹೇಗೂ ಹುಡುಗಿ ನಿಮ್ಮ ರಾಯರ ಸ್ವಂತ ಮಗಳಲ್ಲ ಅಂತೀರಿ. ನನಗೇನೂ ಅಡ್ಡಿ ಕಾಣಲಿಲ್ಲ. ನೀವು ಇಷ್ಟುಮಾತ್ರ ಆಗಮಾಡಿಸಿಕೊಟ್ಟರೆ, ಶಾಸ್ತ್ರಿಗಳೇ......ನಾನು ನಿಮ್ಮನ್ನ ಮರೆಯೋದಿಲ್ಲ.

ಗ–(ಕ್ಷಣಕಾಲ ಆಲೋಚಿಸಿ) ಆಗಲಿ, ನೋಡೋಣ.....ಸಂತೋಷ, ಸಂತೋಷ......ನನಗೂ............

[ಪ್ರವೇಶ: ಲಕ್ಷ್ಮೀನಾರಣಪ್ಪ]

ಲ. ನಾ.–ನನಗೂ ಅವರೊಪ್ಪಿದ್ದು ಸಂತೋಷವೆ. ಇನ್ನು ಮುಂದಿನ ಏರ್ಪಾಡು ಮಾಡಬಹುದು ತಾನೆ, ರಾಯರೆ?

ಜ–(ಜೇಬಿನ ಗಡಿಯಾರ ತೆಗೆದು ನೋಡುತ್ತ) ಓಹೋ, ಆಗಲೆ ಐದೂವರೆಯ ಹತ್ತಿರಕ್ಕೆ ಬಂತು. ನಾನಿನ್ನು ಬರುತ್ತೇನೆ. ಗಣಪತಿ ಶಾಸ್ತ್ರಿಗಳ ಕೈಲಿ ಎಲ್ಲವನ್ನೂ ವಿವರವಾಗಿ ಹೇಳಿದೇನೆ. (ಕುರ್ಚಿಬಿಟ್ಟು ಏಳುವರು) ಅವರ ಕೂಡ.......ನಿಧಾನವಾಗಿ..........ನಿಮ್ಮ ಅಭಿಪ್ರಾಯ ಹೇಳಿ ಕಳಿಸಬಹುದು. ಇನ್ನು.......ಅಪ್ಪಣೆಯಾದರೆ ಬರುತೇನೆ ನಮಸ್ಕಾರ, ನಮಸ್ಕಾರ. ಅಭಿಮಾನವಿರಬೇಕು. (ಹೊರಡುವರು).

ಲ. ನಾ.–(ಅವರನ್ನು ಹಿಂಬಾಲಿಸುತ್ತ) ದೊಡ್ಡಮಾತು. ದೊಡ್ಡಮಾತು. ನಿಮ್ಮ ಅಭಿಮಾನ ನಮ್ಮ ಮೇಲಿರಬೇಕು ಅನ್ನಿ. ಇನ್ನು ನಿಧಾನ ಯಾಕೆ, ನಾಳೆ ಬೆಳಗ್ಗೆಯೇ ನಮ್ಮ ಶಾಸ್ತ್ರಿಗಳನ್ನ ಕಳಿಸಿಕೊಡುತೇನೆ....ಸರಿ, ಆಗಬಹುದು........ ಸಂತೋಷ........ನಮಸ್ಕಾರ.......(ಹಿಂತಿರುಗಿ ಬಂದು ಕುರ್ಚಿಯ ಮೇಲೆ

ಅಡ್ಡ ಬಂದು]

ಗ–ಅಮ್ಮಾ, ನಾನು ತೆಗೆದುಕೊಂಡು ಹೋಗುತ್ತೇನೆ, ನೀನು ಹೊಸ ಬಟ್ಟೆ ಉಟ್ಟಿದೀಯೆ, ಕೊಳೆಯಾದೀತು. [ಎಂದು ತಟ್ಟೆಲೋಟಗಳನ್ನು ತೆಗೆದುಕೊಂಡು ಹೋಗುವನು]

ಸೀ–ನಾನು ಹೋಗುತೀನಿ ಮಾವಯ್ಯ.

ಲ. ನಾ.–ಇವರು.......ಜಗನ್ನಾಥರಾಯರು ಕಣಮ್ಮಾ. ನಮಸ್ಕಾರ ಮಾಡು. [ಸೀತೆ ನಮಸ್ಕಾರ ಮಾಡಲಿರುವಳು]

ಜ–(ತಡೆದು) ಛೆ ಛೆ ಛೆ! ಬೇಡಿ ಬೇಡಿ. ಬೇಡವಮ್ಮ ಬೇಡವಮ್ಮ. ನೋಡಿದ್ದಾಯಿತು, ಇನ್ನು ಹೋಗಲಿ.

[ಸೀತೆ: ನಿಷ್ಕ್ರಮಣ]

ಲಕ್ಷ್ಮೀನಾರಣಪ್ಪನವರೆ, ನಿಮ್ಮ ಮಗಳನ್ನು ನಾನು ಒಪ್ಪಿದೆ. ಸಂಪೂರ್ಣವಾಗಿ ಒಪ್ಪಿದೇನೆ.

[ಪ್ರವೇಶ : ಗಣಪತಿಶಾಸ್ತ್ರಿ]

ಲ.ನಾ.–ಸರಿ ಹಾಗಾದರೆ, ಬಹಳ ಸಂತೋಷ. ಒಂದು ನಿಮಿಷ, ಬಂದೆ.

[ನಿಷ್ಕ್ರಮಣ: ಲ. ನಾ.]

ಜ–(ಸ್ವಲ್ಪ ಮೆಲುದನಿಯಲ್ಲಿ) ಹುಡುಗಿಯನ್ನ ನಾನು ಒಪ್ಪಿದೆ, ಶಾಸ್ತ್ರಿಗಳೆ. ಇನ್ನು....ಸ್ವಲ್ಪ......ನಿಮ್ಮ ಸಹಾಯವಾಗಬೇಕು.

ಗ–ನಿಮ್ಮ ಹುಡುಗನೂ ಒಪ್ಪಲಿ. ಆಮೇಲೆ ನನ್ನ ಸಹಾಯ ಅದೇನಾಗಬೇಕೋ ನಾನು ಬೇರೆ ಕಾಣೆ.

ಜ–ಹಾಗಲ್ಲ ಶಾಸ್ತ್ರಿಗಳೆ. ನನ್ನ ಮಗ ಶುದ್ಧ ಮೂರ್ಖ, ಅವಿಧೇಯ. ತನ್ನ ಹೆಣ್ಣನ್ನ ತಾನು ನೋಡಿಕೊಂಡಿದಾನೆಯಂತೆ. ಈಗ ಈ ಹೆಣ್ಣನ್ನ....ನನ್ನ ತೃಪ್ತಿಗಾಗಿ....ನೋಡುವುದಕ್ಕೆ........ಹಹ್ಹಹ್ಹ......ಬಂದೆ. ನನಗೇನೋ ತೃಪ್ತಿಯಾಯಿತು.

ಗ–ಹಾಗಾದರೆ.....

ಜ–ಒಂದುವೇಳೆ, ನನ್ನ ಹುಡಗ, ರತಿಯಂಥ ಈ ಹೆಣ್ಣನ್ನ ನೋಡಿ, ಒಪ್ಪಿದರೂ ಒಪ್ಪಬಹುದು. ಬಹುದೇನು, ತಾನು ಆಸೆಪಟ್ಟಿರುವ ಹೆಣ್ಣನ್ನ ಬಿಟ್ಟು, ಒಪ್ಪಿಯೇ ಒಪ್ಪುತಾನೆ. ನೀವು ಆವತ್ತು ಹೇಳಿದಿರಿ ನೋಡಿ, ಈ ಹುಡುಗಿಯನ್ನ ನೋಡಿದ ಕ್ಷಣವೇ, ನನಗೆ ಹುಚ್ಚುಹಿಡಿದಹಾಗೆ ಆಗಿಹೋಗಿದೆ. ಅದಕ್ಕೇ ನಿಮ್ಮ ಸಹಾಯಬೇಕು ಅಂದದ್ದು. ನೀವು, ನಿಮ್ಮ ರಾಯರಿಗೂ ಅವರ ಕುಟುಂಬಕ್ಕೂ ಹೇಳಿ, ಮನಸ್ಸೊಪ್ಪಿಸಬೇಕು.

ಗ–ಚೆನ್ನಾಗಿ ನೋಡಿದ್ದೇನೆ.

ಲ. ನಾ.–ಸಂತಾನ ಯೋಗ ಅವಳಿಗೆ ಇಲ್ಲ. ನನಗೆ ಇದೆ ಅಂದೆಯಲ್ಲವೆ?

ಗ–ಹೌದು.

ಲ. ನಾ.–ನನ್ನನ್ನ ಇನ್ನೊಂದು ಮದುವೆ ಮಾಡಿಕೊಳ್ಳಿ ಅಂತ ನಿನ್ನೆ ತಾನೆ ಹೇಳಿದೆಯಲ್ಲವೆ? ಹುಡುಗಾಟಕ್ಕೋ ಹೇಗೆ?

ಗ–ನಿಮ್ಮ ಕೂಡ ಹುಡುಗಾಟ ಆಡುತ್ತೇನೆಯೆ?

ಲ. ನಾ.–ಹಾಗಾದರೆ, ನನ್ನ ಜಾತಕಕ್ಕೆ........ಸೀತೆಯ ಜಾತಕ......

ಗ–ನಿಮ್ಮ ಜಾತಕಕ್ಕೆ ಸೀತೆಯ ಜಾತಕ ಕೂಡಿಬರುತ್ತೆಯೆ ಅಂತ ನೋಡಬೇಕೆ? ಸೀತೆಯ ಜಾತಕವೆ? ಯಾಕೆ? ಅದರಿಂದೇನು ಪ್ರಯೋಜನ?

ಲ. ನಾ.–ಅಯ್ಯೋ ಬೆಪ್ಪು ಶಾಸ್ತ್ರಿ, ಆ ಮುದುಕನಿಗೆ ಸೀತೆಯನ್ನ ಕೊಡುವ ಬದಲು ನಾನೇ ಅವಳನ್ನ ಯಾಕೆ ಮದುವೆಯಾಗಬಾರದು ಅಂತ?

ಗ–ಇದು ನಿಜವೋ ಹಾಸ್ಯವೋ?

ಲ. ನಾ.–ನಿಜವಾಗಿ. ಈ ವಿಚಾರದಲ್ಲಿ ನಿನ್ನ ಕೂಡ ಹಾಸ್ಯವೇ?

ಗ–ಹಾಸ್ಯವಲ್ಲ ತಾನೆ?

ಲ. ನಾ.–ಖಂಡಿತವಾಗಿಯೂ ಅಲ್ಲ.

ಗ–ಹಾಗಾದರೆ, ನನ್ನ ಮನಸ್ಸಿಗೇಕೋ....

ಲ. ನಾ.–ಬೇಡ ಅಂತಲೋ?

ಗ–ಮದುವೆಯನ್ನೇ ಬೇಡ ಅನ್ನುವುದಿಲ್ಲ. ಸೀತೆಯನ್ನ.......ಮಗಳು ಅಂತ ತಿಳಿದು ಬೆಳೆಸಿರುವ ಹುಡುಗಿ......ನನ್ನ ಮನಸ್ಸಿಗೇಕೋ ಅಷ್ಟು ವಿಹಿತವಾಗಿ......

ಲ. ನಾ.–ನೀನು ಹೇಳುವುದೂ ಒಂದು ದೃಷ್ಟಿಯಲ್ಲಿ ಸರಿಯೇ. ಯೋಚನೆ ಮಾಡೋಣ, ಅದಕ್ಕೇನು. ಹೇಗಾದರೂ ಆಗಲಿ, ಜಾತಕಗಳನ್ನು ಒಂದು ಸಲ ನೋಡಿಬಿಡು ಮತ್ತೆ.

ಗ–ಅದಕ್ಕೇನು ಆಗಬಹುದು.

–ತೆರೆ–

ಕುಳಿತುಕೊಳ್ಳುವನು. ಕೆಲಹೊತ್ತು ಮೌನ: ಬಳಿಕ ಪ್ರಸನ್ನಭಾವದಿಂದ) ಅಂತೂ ಅವರು ಒಪ್ಪಿದ್ದು ಸಂತೋಷ. ನೀನೇನು ಹೇಳುತಿ, ಶಾಸ್ತ್ರಿ?

ಗ–ಅವರೇನೋ ಒಪ್ಪಿದರು, ಸರಿ. ಆದರೆ....

ಲ. ನಾ.–ಏನು ಆದರೆ? ನಿನಗೆ ಒಪ್ಪಿಗೆ ಇಲ್ಲವೇನು?

ಗ–ನನ್ನ ಒಪ್ಪಿಗೆ ಹಾಗಿರಲಿ. ಸೀತೆಯ ಒಪ್ಪಿಗೆ ಕೇಳಬೇಕೋ ಇಲ್ಲವೋ?

ಲ. ನಾ.–ಒಪ್ಪದೆ ಏನು, ಎಲ್ಲ ಒಪ್ಪುತಾಳೆ. ನಾನು ಗೊತ್ತು ಮಾಡಿದ ಮೇಲೆ ಒಪ್ಪದೆ ಏನು?

ಗ–ಅವರ ಅಭಿಪ್ರಾಯ ನಿಮಗೆ ಸ್ಪಷ್ಟವಾಗಿ ವೇದ್ಯವಾಗಿಲ್ಲ ಅಂತ ಕಾಣುತ್ತೆ.

ಲ. ನಾ.–ಏನು, ಅವರ ಅಭಿಪ್ರಾಯ?

ಗ–ಅವರು.....ಸೀತೆಯನ್ನ ನೋಡಿ ಒಪ್ಪಿದ್ದು.......ಅವರ ಮಗನಿಗಾಗಿ ಅಲ್ಲ. ತಮಗಾಗಿ.

ಲ.ನಾ.–(ಜಗ್ಗನೆ ಮೇಲೆದ್ದು) ತಮಗಾಗಿ, ತಮಗಾಗಿ! ಇದೇನು ಶಾಸ್ತ್ರಿ, ನೀನು ಹೇಳುವುದು!

ಗ–ಹೌದು. ಅವರು ನನ್ನ ಕೂಡ ಸ್ಪಷ್ಟವಾಗಿ ತಿಳಿಸಿದರು. ಅವರ ಮಗ ಯಾವುದೋ ಬೇರೆಯ ಹೆಣ್ಣನ್ನ ಆಸೆಪಟ್ಟಿದ್ದಾನಂತೆ. ಆದ್ದರಿಂದ, ಸೀತೆಯನ್ನ ಅವರೇ ಮದುವೆ ಮಾಡಿಕೊಳ್ಳುತಾರಂತೆ–ನೀವು ಒಪ್ಪಿದರೆ. ಇದರಿಂದ ನಿಮಗೂ ಬಹಳ ಖರ್ಚು ಉಳಿತಾಯವಾಗುತ್ತಂತೆ.

ಲ. ನಾ.–(ನಿಟ್ಟುಸಿರು ಬಿಟ್ಟು) ಓಹೋ, ಹಾಗೋ! ಸರಿಹೋಯಿತು. ಬಹಳ ಚೆನ್ನಾಯಿತು. ಸರಿ ಸರಿ, ಈಗ ಅರ್ಥವಾಯಿತು, 'ನಿಧಾನವಾಗಿ ನಿಮ್ಮ ಅಭಿಪ್ರಾಯ ಹೇಳಿ ಕಳಿಸಬಹುದು' ಅಂತ ಅವರು ಹೇಳಿದ ಮಾತಿನ ಅರ್ಥ.

ಗ–ನೀವು, ನಾಳೇ ಬೆಳಗ್ಗೆಯೇ ನಿಮ್ಮ ಅಭಿಪ್ರಾಯವನ್ನ ಹೇಳಿ ಕಳಿಸುತೀನಿ ಅಂತ ಹೇಳಿಬಿಟ್ಟಿರಿ?

ಲ. ನಾ.–ಅದರಿಂದೇನು ಪ್ರಮಾದವಾದದ್ದು? ನಾಳೆ ಬೆಳಗ್ಗೆ ಅವರ ಮನೆಗೆ ಹೋಗಿ 'ಇನ್ನೊಂದು ವಾರ ಬಿಟ್ಟುಕೊಂಡು ಯಾವುದನ್ನು ನಿಶ್ಚಯವಾಗಿ ತಿಳಿಸುತ್ತಾರೆ' ಅಂತ ಹೇಳಿಬಿಡು. ಆಯಿತಲ್ಲ? ನಾನೂ ಆಲೋಚನೆ ಮಾಡದೆ ದುಡುಕುವುದು ಒಳ್ಳೆಯದಲ್ಲ.

[ಕೆಲಹೊತ್ತು ಮೌನ] ಶಾಸ್ತ್ರೀ?

ಗ–ಏನು? ಅಪ್ಪಣೆಯಾಗಬೇಕು.

ಲ. ನಾ.–ನೀನು ನನ್ನ ಜಾತಕ ಚೆನ್ನಾಗಿ ಪರಿಶೀಲಿಸಿದ್ದೀಯೆ ಅಲ್ಲವೆ?

ಗ–ಆಮೇಲೆ.......

ಲ. ನಾ.–ಇನ್ನೇನು?

ಗ–ಮುಂದಿನ ಭಾನುವಾರ ಬೆಳಿಗ್ಗೆ ಹತ್ತುಗಂಟೆ ಹೊತ್ತಿಗೆ ಇಲ್ಲಿಗೆ ಬರುತ್ತಾರಂತೆ–ನಿಮ್ಮ ಅಭಿಪ್ರಾಯ ಏನೂ ಅನ್ನೋದನ್ನ ತಿಳಿದುಕೊಂಡು ಹೋಗೋದಕ್ಕೆ.

ಲ. ನಾ–ಈಗೊಳ್ಳೆಯ ಪೀಕಲಾಟಕ್ಕೆ ಬಂತಲ್ಲ. ನಾನೇ ಮದುವೆ ಮಾಡಿಕೊಳ್ಳುತೇನೆ ಅಂತ ಹೇಳುವುದು ಚೆನ್ನಾಗಿರುವುದಿಲ್ಲ. ನಿರ್ದಾಕ್ಷಿಣ್ಯವಾಗಿ ಇಲ್ಲ ಎನ್ನುವುದಕ್ಕೆ ಸಾಧ್ಯವಿಲ್ಲ. ನಾನೇನಾದರೂ ಉಪಾಯ ಮಾಡಬೇಕಲ್ಲ ಶಾಸ್ತ್ರಿ?

ಗ–ಆಗಲಿ, ಅದಕ್ಕೇನು. ಇನ್ನೂ ಐದಾರು ದಿನಗಳ ಅವಕಾಶ ಇದೆಯೆಲ್ಲ; ಏನಾದರೂ ಮಾಡೋಣ.

ಲ. ನಾ.–ಸರಿ, ಹಾಗಾದರೆ ನಾನಿನ್ನು ಹೊರಡುತೇನೆ. ಶ್ರೀಧರ ಏನೋ ಒಂದೆರಡು ಸೀರೆ ಬೇಕು ಅಂದನಂತೆ, ಅವನ ಹೆಂಡತಿಗೆ. ಅಂಗಡಿ ಕಡೆ ಬರಹೇಳು.....ಎಲ್ಲಿ, ನನ್ನ ಕೊಡೆ ತಗೊಂಡು ಬಾ.

ಗ–[ನಗುತ್ತಾ] ಕಂಕುಳಲ್ಲೇ ಇದೆಯಲ್ಲಾ, ರಾಯರೇ!

ಲ. ನಾ.–[ಕಂಕುಳಿನ ಕೊಡೆ ಮುಟ್ಟಿನೋಡಿಕೊಂಡು] ಹಾಳಾದ್ದು ಐವತ್ತಕ್ಕೇ ಅರುಳು ಮರುಳು. [ನಿಷ್ಕ್ರಮಣ]

ಗ–ಮುದುಕರಾಗ್ತಾ ಆಗ್ತಾ ಚಪಲ ಹೆಚ್ಚುತ್ತೆ ಅಂತ ಕಾಣುತ್ತೆ. ಏನು ಚಪಲ ಬೇಕಾದರೂ ಇಟ್ಟುಕೊಳ್ಳಲಿ, ಈ ಮದುವೆ ಚಪಲ ಯಾತಕ್ಕೆ, ಈ ಮುದಿವಯಸ್ಸಿನಲ್ಲಿ? ಮುದುಕ ಹುಡುಗಿಯನ್ನ ಮದುವೆಯಾದರೆ, 'ನಿಮ್ಮ ಮೊಮ್ಮಗಳೇ?' ಅಂತ ಕೇಳಿಯಾರು ಅನ್ನೋ ಭೀತಿಯಾದರೂ ಬೇಡವೆ? ಅತ್ತ, ಆ ಜಗನ್ನಾಥರಾಯರು, ನಮ್ಮ ಸೀತೆಯನ್ನ ಮಗ ಒಲ್ಲದೆ ಹೋದರೆ ನನಗೇ ಇರಲಿ ಅಂತ, ಜಪ ಶುರು ಮಾಡಿದಾರೆ. ಇತ್ತ ನಮ್ಮ ರಾಯರು, ಸೀತೆಯನ್ನ ಯಾವನೋ ಒಬ್ಬ ಮುದುಕ ಮದುವೆಯಾಗೋ ಪಕ್ಷಕ್ಕೆ ನಾನೇ ಯಾಕೆ ಆಗಬಾರದು ಅಂತ ಆಶೆ ಹಚ್ಚಿಸಿಕೊಂಡಿದ್ದಾರೆ. ಪಡಬಾರದ ಆಶೆ ಕೊರಳಿಗೆ ಪಾಶವಾಗುತ್ತೆ ಅನ್ನೋ ಅರಿವೇ ಇದ್ದ ಹಾಗೆ ಕಾಣುವುದಿಲ್ಲ. ಆಶೆಯನ್ನ ಕೈಗೂಡಿಸಿಕೊಳ್ಳೋ ನಿರ್ಧಾರವನ್ನೇ ಮಾಡಿಬಿಟ್ಟಿದಾರೆ. ಈ ಮುದುಕರು ಹಟ ಹಿಡಿದರೆ ಮೂಳೆಮುಷ್ಟಿ, ಜಪ್ಪಯ್ಯ ಅಂದರೂ ಬಿಡೋದಿಲ್ಲ. ಅಂತೂ ತಮಾಷೆಯಾಗಿದೆ, ಈ ಇಬ್ಬರು ಮುದುಕರ ಢಕ್ಕಾಢಿಕ್ಕಿ! ಇವರೇ ಹೀಗೆ ಎಗರಾಡ್ತಾ

# ದೃಶ್ಯ ೪

[ಲಕ್ಷ್ಮೀನಾರಣಪ್ಪನವರ ಮನೆಯ ಕೋಣೆ. ಮೊದಲನೇ ದೃಶ್ಯದಂತೆ. ಲಕ್ಷ್ಮೀನಾರಣಪ್ಪ ಮತ್ತು ಗಣಪತಿ ಕೋಣೆಯಲ್ಲಿ ಇರುವರು.]

ಲ. ನಾ–ಶಾಸ್ತ್ರಿ, ನಾನು ಅಂಗಡಿಗೆ ಹೋಗುತ್ತೇನೆ, ಹೊತ್ತಾಯಿತು. ಈವೊತ್ತು ನೀನೇನೂ ಬರಬೇಕಾದ್ದಿಲ್ಲ. ಸರಿ ಅಂತ ಕಾಣುತ್ತೆ. ಆ ಮುದುಕನಿಗೆ ಕೊಡುವ ಬದಲು ಸೀತೆಯನ್ನ ನಾನೇ ಮದುವೆಮಾಡಿಕೊಂಡು ಬಿಡುತ್ತೇನೆ. ನೀನು ಜಗನ್ನಾಥರಾಯರ ಮನೆಗೆ ಹೋಗಿ..........

ಗ–ನಾನು ಬೆಳಗ್ಗೆ ಹೊತ್ತಿಗೆ ಮುಂಚೆಯೇ ಹೋಗಿ ಆ ಕೆಲಸ ಮಾಡಿಬಿಟ್ಯೆ.

ಲ. ನಾ.–ಸರಿ. ಒಳ್ಳೆಯ ಕೆಲಸ ಮಾಡಿದೆ. ಏನು ಹೇಳಿದರು ಅವರು?

ಗ–ಅವರ ಮಗನೂ ಮನೆಯಲ್ಲೇ ಇದ್ದ. ನನ್ನ ಎದುರಿಗೇನೇ ಕೇಳಿದರು. ಅವನು ಖಂಡಿತ ಒಲ್ಲೆ ಅಂದ. ಅವರು ನೋಡಿದ ಹೆಣ್ಣನ್ನ ಅವನು ಮದುವೆಯಾಗುವುದಿಲ್ಲವಂತೆ; ತಾನು ನೋಡಿರುವ ಹೆಣ್ಣನ್ನೆ ಮದುವೆಯಾಗುತಾನಂತೆ...........

ಲ. ನಾ.–ಹಾಗಿದ್ದಮೇಲೆ ಈಗ ನನ್ನ ನಿರ್ಧಾರವೇ ಖಾತರಿಯಾದ ಹಾಗಾಯಿತು.

ಲ. ನಾ.–ಯಾರು?

ಗ–ಇನ್ನು ಯಾರು, ಜಗನ್ನಾಥರಾಯರು.

ಲ. ನಾ.–ಹಾಗೇ ಅಂದರೆ ಹೇಗೆ?

ಗ–ತಮ್ಮ ನಿರ್ಧಾರವೇ ಖಚಿತವಾಯಿತು ಅಂದುಕೊಂಡರು. ಒಂದು ಮಾತು ವ್ಯತ್ಯಾಸ, ಅಷ್ಟೆ.

ಲ. ನಾ.–ಅಂದರೆ?

ಗ–ತಾವೇ ಸೀತೆಯನ್ನ ವರಿಸುವುದಕ್ಕೆ ಸಿದ್ಧವಾಗಿದಾರೆ.

ಲ. ನಾ.–ಅವರೇನೋ ಸಿದ್ಧ. ನಾನು ಕೊಡಬೇಕಲ್ಲ. ಈಗಲೂ ಅವರ ಮಗನ್ನ ಒಪ್ಪಿಸಲಿ. ನಾನು ಸಂತೋಷವಾಗಿ ನನ್ನ ನಿರ್ಧಾರವನ್ನ ಬದಲಾಯಿಸಿಬಿಡುತ್ತೇನೆ. ಅಲ್ಲ, ಮಗನಿಗೆ ಹೆಣ್ಣು ತಂದುಕೊಳ್ಳಲಿ ಅಂದರೆ "ನಾನೇ ಮದುವೆಯಾಗುತ್ತೇನೆ" ಅನ್ನೋದೆ ಆ ಮುದುಕ! ಚೆನ್ನಾಗಿದೆ, ಚೆನ್ನಾಗಿದೆ.

ಅನ್ನೋದು ತಾನೆ ಈ 'ಡಿಗ್ರಿ' ಇಲ್ಲದ ತಲೆಗೆ ಹೊಳೀತಾ ಇಲ್ಲ. 'ಡಿಗ್ರಿ' ತಲೇನ ಕೇಳೋಣ ಅಂತ.

ಶ್ರೀ–ಜೀವನದ ಗರಡೀಲಿ ಡಿಗ್ರಿ ಗಿಗ್ರಿ ನಡೆಯೋದಿಲ್ಲ ಅನ್ನೋದು ನನಗೆ ಈಗೀಗ ಗೊತ್ತಾಗುತಾ ಇದೆ.

ಗ–ಹೌದು ಹೌದು. ಈಗ ಡಿಗ್ರಿ ಅನ್ನೋದು ಕಡ್ಲೆ ಗುಗ್ರಿ ಆಗಿಹೋಗಿದೆ. ಅದಕ್ಕೇ ಇರಬೇಕು.

ಶ್ರೀ–ಗುಗ್ರಿ ತಿಂದೇ ನಿಮ್ಮ ತಲೆ ಡಿಗ್ರಿ ತಲೇನೂ ಮೀರಿಸಿರೋ ಹಾಗೆ ಕಾಣುತ್ತೆ. ಮೊನ್ನೆ ಬಂದಿದ್ದ ನೋಡಿ, ನಮ್ಮ ಫ್ರೆಂಡು, ಸ್ನೇಹಿತ, ರಘುಪತಿ – ಅವನು ನಿಮ್ಮನ್ನೆಲ್ಲಾ ಒಂದು ಐದು ನಿಮಿಷ ನೋಡಿರಬಹುದು, ಅಷ್ಟೆ. ಅವನು ನಿಮಗೊಳ್ಳೇ ಬಿರುದು ಕೊಟ್ಟಿದಾನೆ.

ಗ–ಏನು, ಗುಗ್ರಿಪತಿ ಅಂತಲೋ?

ಶ್ರೀ–(ಗೊಳ್ಳನೆ ನಕ್ಕು) ಅಲ್ಲ ಅಲ್ಲ. ನೀವು ಕೋಪಿಸಿ ಕೊಳ್ಳದೆ ಹೋದರೆ ಹೇಳುತ್ತೀನಿ.

ಗ–ಇದು ಕೋಪಿಸಿಕೊಳ್ಳೋ ಘಟಾನೆ?

ಶ್ರೀ–'ಜಗಜ್ಜಾತಕಾಧಿಪತಿ' ಅಂತ.

ಗ–ಅಂದರೆ?

ಶ್ರೀ–ಜಾತಕಗಳಿಗೆಲ್ಲಾ ನೀವೇ ಒಡೆಯ ಅಂತ.

ಗ–ಜಾತಕದ ನಕಲುಗಳ ದಫ್ತರ ಅಂತಲೋ?

ಶ್ರೀ–ಅಲ್ಲ. ಹಾಗಲ್ಲ. ಕೂಡಿಬರದೆ ಇರೋ ಜಾತಕಗಳನ್ನ ಕೂಡಿಬರೋಹಾಗೆ ಮಾಡ್ತೀರಿ; ಕೂಡಿರೋವನ್ನ ಕೂಡೋದಿಲ್ಲ ಅಂತೀರಿ.

ಗ–ನೋಡಿ, ಈ ಆಕ್ಷೇಪಣೆ ಮಾತ್ರ–ಹಾಸ್ಯಕ್ಕೂ ನಾನು ಸಹಿಸೋನಲ್ಲ. ಈಗ ನೋಡಿ, ನಿಮ್ಮ ಫ್ರೆಂಡು ರಘುಪತಿ ಇದಾರಲ್ಲ, ಅವರ ಜಾತಕ ನಮ್ಮ ಸೀತೆ ಜಾತಕ–ಫಸ್ಟ್‌ಕ್ಲಾಸಾಗಿ ಕೂಡಿ ಬರುತ್ತವೆ. ಕೂಡಿಬರೋದಿಲ್ಲ ಅಂತ ನಾನು ಹೇಳಬಹುದಾಗಿತ್ತಲ್ಲ?

ಶ್ರೀ–ಕೂಡಿಬರುತ್ತೆಯೆ, ನಿಜವಾಗಿ?

ಗ–ನಿಮ್ಮ ಅಕ್ಕನಿಗೆ ಗೊತ್ತಿದೆಯಲ್ಲ, ಹೇಳಲಿಲ್ಲವೆ? ಏನೂ ಟೋಕ್ ಅನ್ನೋಹಾಗಿಲ್ಲ. ಆದರೆ–ಏನು ಪ್ರಯೋಜನ? ಈ ಜಾತಕದ ಹುಡುಗಿಯನ್ನು ಮದುವೆ ಮಾಡಿ ಕೊಳ್ಳೋದಿಲ್ಲ ಅಂತ ಅವರ ತಂದೆ ಕೂಡ ಹೇಳಿಬಿಟ್ಟಿದಾನಂತೆ. ತಾನು ನೋಡಿ ಮೆಚ್ಚುವ ಹುಡುಗಿಯನ್ನೆ ಮದುವೆಯಾಗುತಾನಂತೆ. ಈ ರಘುಪತಿ

ಇರಬೇಕಾದರೆ, ನಾನೇ ಯಾಕೆ ಒಂದು ಕೈ ನೋಡಬಾರದು ಅನ್ನಿಸುತ್ತೆ. ನಾನು, ಅವರಷ್ಟು ಮುದುಕನೂ ಅಲ್ಲ; ಅಲ್ಲದೆ, ಬ್ರಹ್ಮಚಾರಿ. ಆದರೆ–ಛೆ ಛೆ– ಸೀತೆ ನನ್ನ ಕಣ್ಣ ಮುಂದಿನ ಹುಡುಗಿ. ಮದುವೆಯಾಗಿದ್ದಿದ್ರೆ ನನಗೇ ಆ ವಯಸ್ಸಿನ ಮಗಳಿರುತಾ ಇದ್ದಳು. ಹೀಗಿರೋವಾಗ, ಮಗಳ ಹಾಗೆ ಬೆಳಸಿ, ಈಗ ತಾವೇ ಮದುವೆಯಾಗಬೇಕು ಅಂತಿದಾರಲ್ಲ ಸೀತೆಯನ್ನ, ನಮ್ಮ ರಾಯರು! ಹೇಗೆ ತಾನೇ ಮನಸ್ಸು ಬರುತ್ತೆ? ತಪ್ಪು ನನ್ನದು ಅಂತ ಕಾಣುತ್ತೆ–ಅವರ ತಲೇಲಿ ಈ ಇನ್ನೊಂದು ಮದುವೆ ಅನ್ನೋ ಹುಳಾನ ಬಿಟ್ಟದ್ದು. ಇದಕ್ಕೆ ನಾನೇ ಏನಾದರೂ ಪರಿಹಾರ ಹುಡುಕಬೇಕು.

[ಪ್ರವೇಶ: ಶ್ರೀಧರ]

ಬಾರಯ್ಯ, ಬಾ ಬಾ. ಕಾಫಿ ಆಯ್ತೋ?

ಶ್ರೀ–ನಿಮ್ಮದು?

ಗ–ಅದಿಲ್ಲದೆ ಮುಂದಿನ ಕೆಲಸವೇ ಇಲ್ಲವಲ್ಲ, ದೇವತಾರ್ಚನೆ ಒಂದು ಬಿಟ್ಟು. ದೇವರಿಗೆ ಮಂಗಳಾರತಿ ಮಾಡಿ ಮುಗಿಸೋ ಹೊತ್ತಿಗೆ ಸರಿಯಾಗಿ ಬಿಸಿ ಬಿಸಿ ಕಾಫೀನ ರೆಡಿಯಾಗಿಟ್ಟಿರುತಾರೆ, ಲಕ್ಷ್ಮೀದೇವಮ್ಮ. ಅವರ ಹೊಟ್ಟೆ ತಣ್ಣಗಿರಲಿ. ಪಾಪ, ಅವರಿಗೆ ಒಂದು ಮಗು ಆಗಿದ್ರೆ ಚೆನ್ನಾಗಿತ್ತು.

ಶ್ರೀ–ಅದಕ್ಕೇನೋ, ನೀವು ಪರಿಹಾರ ಹುಡುಕುತಾ ಇರೋದು?

ಗ–ಅದಕ್ಕಲ್ಲ. ಅದೇನು, ಬಹು ಸುಲಭ. ಅದಕ್ಕೆ ಲಕ್ಷ್ಮೀದೇವಮ್ಮ ಒಪ್ಪದೆ ಹೋದರೆ ತಾನೆ ಅಷ್ಟು ವಿಹಿತವಲ್ಲ. ಅದಲ್ಲ, ನಾನೂ ಯೋಚನೆ ಮಾಡುತ ಇರೋದು ಈಗ. ನಿಮ್ಮ ಸೀತೆಯ ಮದುವೆಯ ವಿಚಾರ. ಪರಿಸ್ಥಿತಿ, ಸ್ವಲ್ಪ ಬಿಗಡಾಯಿಸಿಕೊಂಡಿದೆ. ಅದಕ್ಕೆ ಪರಿಹಾರ ಏನೂ ಅಂತ ಯೋಚನೆ ಮಾಡುತಾ ಇದ್ದೆ. ಯಾರೂ ಇಲ್ಲದೆ ಇದ್ದರೆ, ನನಗೆ ನಾನೇ ಮಾತನಾಡಿಕೊಳ್ಳೋದು ನನ್ನದೊಂದು ಚಾಳಿ.

ಶ್ರೀ–ಹಳೇಕಾಲದ ನಾಟಕಗಳಲ್ಲಿ ಮಾತಾಡಿಕೊಳ್ಳೋದಿಲ್ವೆ, ಪಾತ್ರಗಳು, ಸ್ಟೇಜ್ ಮೇಲೆ, ಹಾಗೆ ಅನ್ನಿ.

ಗ–ಸ್ವಲ್ಪ ಹೆಚ್ಚು ಕಡಮೆ ಹಾಗೇನೇ ಅಂದುಕೊಳ್ಳಿ. ಪ್ರಕೃತ, ಹಳೇ ಕಾಲದ ನಾಟಕ ಅಲ್ಲ, ಹಳೇ ಕಾಲದವರ ನಾಟಕ ನಡೀತಾ ಇದೆ. ನಾನೇ ಸೂತ್ರಧಾರ – ಯತ್ನವಿಲ್ಲ. ನಾಟಕ ಏನೂ ಅಂತ ಮೊದಲು ನನಗೇ ಸರಿಯಾಗಿ ಗೊತ್ತಿರಲಿಲ್ಲ. ಈಗ ಗೊತ್ತಾಯ್ತು. ಹೇಗೆ ಹೇಗೋ ತಿರುಗುತಾ ಇದೆ. ನಮ್ಮ ಇಷ್ಟದ ಪ್ರಕಾರ ತಿರುಗೋ ಹಾಗೆ, ಒಂದು 'ಕಟ್ ಸೀನ್' ಅರೇಂಜ್ ಮಾಡಬೇಕು. ಅದು ಹೇಗೆ

ಮಾಡೋದಕ್ಕಾಗೋದಿಲ್ಲ. ನೀವು ಸೂತ್ರಧಾರರಾಗಿರಿ, ಸಾಕು. ನಾವೇ ಪಾತ್ರಧಾರರು. ಬಟ್ಟೆ ಹಾಕಿಕೊಂಡು ಬರ್ತೇನೆ, ನೀವೂ ರೆಡಿಯಾಗಿರಿ ಮತ್ತೆ.

ಗ–ಎವರ್‌ರೆಡಿ ಬ್ಯಾಟರಿ (Everready Battery) ನಾನು ಸದಾಸಿದ್ಧಮೂರ್ತಿ–ಸರ್ವರ್ಕ್ಕೂ, ಸರ್ವರ ಮದುವೆಗೂ–ನನ್ನ ಮದುವೆ ಒಂದು ಬಿಟ್ಟು.

[ಶ್ರೀಧರ ನಗುತ್ತ ಸಷ್ಕ್ರಮಣ]

ಅಲ್ಲ, ನಾನು ಜಾತಕಗಳ ಮದುವೆ ಮಾಡಿಸೋನು ಅಂದರಲ್ಲ, ನಮ್ಮ ರಾಯರು. ಇರಲಿ; ಶ್ರೀಧರನ 'ಡಿಗ್ರಿ' ತಲೇಲಿ ಏನೋ ಗುಟ್ಟಿದೆ; ಏನೇ 'ಡಿಗ್ರಿ' ಮಾಡಿದರೂ ಕಟ್‌ಸೀನ್ ಪ್ಲ್ಯಾನ್ ಮಾಡೋದು ತುಂಬ ಕಷ್ಟ. ಆದರೆ, ಹೇಳೋಕಾಗೋದಿಲ್ಲ. ಶ್ರೀಧರನೂ ತುಂಬ ಘಾಟಿಯೇ. ಇರಲಿ, ನೋಡೋಣ, ನೋಡೋಣ.

–ತೆರೆ–

ಜಗನ್ನಾಥರಾಯರ ಮಗ ಅಂತ ಇವತ್ತು ನನಗೆ ಗೊತ್ತಾದದ್ದು. ಅವನು ಸೀತೆಯನ್ನ ಒಪ್ಪಿದ್ದಿದ್ದರೆ–ಇಷ್ಟೆಲ್ಲಾ ಬಿಗಡಾಯಿಸಿಕೊಳ್ಳುತ್ತಿರಲಿಲ್ಲ.

ಶ್ರೀ–ಈಗ ಬಿಗಡಾಯಿಸಿಕೊಂಡಿರೋದೇನು?

ಗ–ಏನೇ? ಅತ್ತ ಜಗನ್ನಾಥರಾಯರು, ಸೀತೆಗೆ, ಸ್ವಯಂ–ವರ; ಅವರಂತಲೂ ಹಾಗೆಂದುಕೊಳ್ಳುತಾ ಇದಾರೆ. ಅದನ್ನ ತಿಳಿದು, ಇತ್ತ, ನಮ್ಮ ರಾಯರೂ ಸ್ವಯಂ–ವರವಾಗಿಬಿಟ್ಟಿದಾರೆ.

ಶ್ರೀ–ಅಂದರೆ?

ಗ–ರಘುಪತಿ ಸೀತೆಯನ್ನ ಒಲ್ಲೆ ಅನ್ನುತ್ತಲೂ, ಅವಳನ್ನ ಮದುವೆಯಾಗೋದಕ್ಕೆ ಆ ಜನಮೇಜಯರಾಯರಿಗೂ ನಮ್ಮ ಸ್ವಕೀಯರಾಯರಿಗೂ ಒಂದು ಪೈಪೋಟಿ ನಡೀತಾ ಇದೆ.

ಶ್ರೀ–ಹೀಗೋ ಸಮಾಚಾರ.ಅದೇನೋ 'ಕಟ್‌ಸೀನ್' ಅಂದ್ರಲ್ಲ. ಅದನ್ನ 'ಅರೇಂಜ್' ಮಾಡೋದಕ್ಕಾಗೋದಿಲ್ಲವೋ?

ಗ–ನಿಮ್ಮ ರಘುಪತಿ ಒಪ್ಪಿದರೆ ಚೆನ್ನಾಗಿತ್ತು. ರುಕ್ಮಿಣೀ ಕಲ್ಯಾಣವೋ ಸುಭದ್ರಾಪರಿಣಯವೋ ಮಾಡಿಬಿಡಬಹುದಾಗಿತ್ತು.

ಶ್ರೀ–ಸೀತಾ ಸ್ವಯಂವರ ಮಾಡಿಬಿಡೋಣ!

ಗ–ಆ ಇಬ್ಬರು ಮುದುಕರಲ್ಲಿ ಒಬ್ಬರನ್ನ ಸೀತೆ ಸ್ವಯಂವರಿಸಲಿ, ಅವರ ಪೈಪೋಟಿ ಫೈಸಲಾಗಲಿ, ಅಂತಲೋ?

ಶ್ರೀ–ಜೊತೆಗೆ ನನ್ನಂಥ ಒಬ್ಬ ಯುವಕನೂ ಇರುತಾನೆ ಅಂತ ಇಟ್ಟುಕೊಳ್ಳಿ.

ಗ–ಅಕ್ಕನ ಸಾಕುಮಗಳು. ಆಗಬಹುದು, ಆಗ ಬಹುದು. ಆದರೆ, ಈಗ ಮದುವೆಯಾಗಿರೋ ಹೆಂಡತಿಯನ್ನ ಆಖೈರಾಗಿ ತವರುಮನೆಗೆ ರವಾನಿಸಿಬಿಡುತ್ತೀಯೋ, ಇಲ್ಲ ಸವತಿಯರ ಗರಗಸಕ್ಕೆ ಕೊರಳು ಕೊಡುತ್ತೀಯೋ, ಇರಲಿ, ಅದು ನಿನ್ನ ಹಣೆಯಬರಹ. ಒಂದು ರೀತ್ಯಾ, ನಿನ್ನ ಸಲಹೆಗೆ ನನ್ನ ಸಮ್ಮತ. ಆದರೆ, ಆ ಇಬ್ಬರ ಜಾತಕ ನೋಡಿಯಾಗಿದೆ. ಸೀತೆಯ ಜಾತಕದಲ್ಲಂತೂ ವೈಧವ್ಯ ಇಲ್ಲ, ನಿನ್ನ ಜಾತಕಾನೂ, ಒಂದು ಸಲ, ಹಾಗೇ–ನನ್ನ ಚಪಲ ನಿನಗೆ ಗೊತ್ತೇ ಇದೆಯಲ್ಲ.......

ಶ್ರೀ–(ನಡುವೆ ಬಾಯಹಾಕಿ) ನೋಡಿ, ಈಗ ಇಲ್ಲಿ ಹೆಚ್ಚು ಚರ್ಚೆಬೇಡ. ನನ್ನ ಭಾವನ ಅಂಗಡೀಗೆ ಹೋಗಿ ಸ್ವಲ್ಪ ಜವಳಿ ತೇಗೀಬೇಕು. ನೀವೂ ಜೊತೆಗೆ ಬನ್ನಿ. ದಾರಿಯಲ್ಲಿ ಎಲ್ಲಾ ವಿವರಿಸಿ ಹೇಳುತ್ತೇನೆ ಆ 'ಕಟ್‌ಸೀನ್' ಅರೇಂಜ್‌ಮಾಡಿಬಿಡೋಣ. ನಮ್ಮ ಅಕ್ಕನ ಒಪ್ಪಿಗೆ ಪಡೆಯದೆ ಏನೂ

ತಾನೆ?......ಸ್ವಲ್ಪ ಹೂವು ಹಣ್ಣು ತರಬೇಕೂ ಅಂತ ಒಳಗೆ ಹೇಳಿದಾರೆ. ತಗೊಂಡು ಜಗನ್ನಾಥರಾಯರು ಬರೋ ಹೊತ್ತಿಗೆ, ಬೇಗ ಬಂದು ಬಿಡುತ್ತೇನೆ.

[ಮುಖದ ಮೇಲೆ ತುಂಟ ನಗೆ: ನಿಷ್ಕ್ರಮಣ]

ಲ. ನಾ.–ಗಟ್ಟಿಗ ಗಣಪತಿಶಾಸ್ತ್ರಿ. ಏನೋ ಕಮಾಲ್ ಮಾಡಿದಾನೆ. ಜಗನ್ನಾಥರಾಯರಿಗೆ ಒಳ್ಳೇ ಜರಿ ಟೋಪಿ ಹಾಕ್ತಾನೆ ಅಂಥ ಕಾಣುತ್ತೆ.

ಲ. ದೇ.–(ಪ್ರವೇಶಿಸಿ) ಜಗನ್ನಾಥರಾಯರು ಬಂದಾಗ ಕಾಫಿ ಕಳಿಸಿಕೊಡಲೋ ಪಾನಕ ಕಳಿಸಿಕೊಡಲೋ?

ಲ. ನಾ.–ಕಾಫೀನೇ ಕಳಿಸಿಕೊಡು. ಅದಿರಲಿ. ನಿನಗೆ ಸಮ್ಮತವೋ, ಸೀತೆಯನ್ನ ಜಗನ್ನಾಥರಾಯರಿಗೆ ಕೊಡೋದು? ಹಬ್ಬದ ಅಡಿಗೆ ಏರ್ಪಾಡು, ಲಗ್ನಪತ್ರಿಕೆ ಏರ್ಪಾಡು–ಇದೆಲ್ಲ ನಿನ್ನ ಏರ್ಪಾಡು ಅಂತಲೆ ಶಾಸ್ತ್ರಿ ಹೇಳಿದ. ನಿನಗೆ, ಇನ್ನೊಂದು ಸಂಗತಿಯನ್ನು ನಾನು ತಿಳಿಸಿರಲಿಲ್ಲ. (ದೇಶಾವಾರದ ನಗೆ ನಗುತ್ತ) ನಿನ್ನ ಒಪ್ಪಿಗೆ ಇಲ್ಲದೆ ಇದ್ದರೆ, ಬೇಡ.

ಲ. ದೇ.–[ಮುಗುಳುನಗೆ ನಗುತ್ತ] ಇದರಲ್ಲಿ, ನನ್ನ ಒಪ್ಪಿಗೆ ಅಷ್ಟು ಮುಖ್ಯವಲ್ಲ, ನಿಮ್ಮ ಒಪ್ಪಿಗೆಯೂ ಅಷ್ಟು ಮುಖ್ಯವಲ್ಲ. ನಾನು ಸಾಕಿದ ಹುಡುಗಿ, ಸೀತೆ, ಮನಃಪೂರ್ವಕವಾಗಿ ಯಾರನ್ನ ಒಪ್ಪಿದರೂ ನನಗೆ ಸಂತೋಷ. ಹಾಗಾದರೆ, ಇನ್ನು ಮುಂದೆ, ಮಗಳೂ ಅಂತ ತಿಳೀತೀನಿ. ಹೀಗಾದರೆ, ತಂಗಿ ಅಂತ ಭಾವಿಸುತೀನಿ. ಸರಿ ತಾನೇ?

ಲ. ನಾ.–ಚಿನ್ನದಂಥ ಮಾತು, ಚಿನ್ನ!

ಲ. ದೇ.–ವರನಹಾಗೆ ಅಲಂಕಾರಮಾಡಿಕೊಂಡು ಕುಳಿತಿದೀರಿ. ಮನಸ್ಸಿನಲ್ಲೇ ಮಂಡಿಗೆ ಮುರೀತಾ ಇದೀರಿ. ಈ ಸುಳ್ಳು ಪ್ರೀತಿನ ಸಾಕುಮಾಡಿ, ಸದ್ಯ.

[ಹುಸಿಮುನಿಸುತೋರುತ್ತ ನಿಷ್ಕ್ರಮಣ]

ಲ. ನಾ.–ಸದ್ಯ, ಗೆದ್ದೆ. ಅವಳೂ ವಿರೋಧವಾಗಿಲ್ಲ. ಎಲ್ಲ ಸುಮುಖವಾಗಿಯೇ ಕಾಣುತಾ ಇದೆ.

[ಎದ್ದು ಶತಪಥ ತಿರುಗುತ್ತ ಇರುವಲ್ಲಿ ಹೊರಗಡೆ, "ಲಕ್ಷ್ಮೀನಾರಣಪ್ಪನವರೆ"..... ಎಂದು ಜಗನ್ನಾಥರಾಯರು ಕೂಗಿದ್ದು ಕೇಳಿಸುವುದು. ಲ. ನಾ., "ದಯಮಾಡಿಸಬೇಕು ರಾಯರು, ದಯಮಾಡಿಸಬೇಕು" ಎನ್ನುತ್ತ ಹೊರಗಡೆಗೆ ಹೋಗಿ, ಅವರನ್ನು ಕರೆತರುವನು ಜಗನ್ನಾಥರಾಯರು ಲ. ನಾ.–ಅವರಿಗಿಂತ ಹೆಚ್ಚು ಆಧುನಿಕರೀತಿಯಲ್ಲಿ, ಠಾಕು ಠೀಕಾಗಿ, ಉಡುಪು ಧರಿಸಿರುವರು]

# ದೃಶ್ಯ ೫

[ಅದೇ ಕೋಣೆ : ಲಕ್ಷ್ಮೀನಾರಣಪ್ಪ ಕೋಟು, ಪೇಟ, ಉತ್ತರೀಯ ಧರಿಸಿ, ಜಗನ್ನಾಥರಾಯರನ್ನು ಸ್ವಾಗತಿಸಲು ಸಿದ್ದನಾಗಿ ಕುಳಿತಿರುವನು. ಪಕ್ಕದಲ್ಲಿ ಸದಾ ಸಿದ್ಧಮೂರ್ತಿ ಶಾಸ್ತ್ರಿ–]

ಲ. ನಾ.–ಶಾಸ್ತ್ರೀ....

ಗ–ಏನು, ಅಪ್ಪಣೆಯಾಗಬೇಕು.

ಲ.ನಾ.–ಜಗನ್ನಾಥರಾಯರು ಬಂದರೆ ಅವರಿಗೆ ಏನು ಉತ್ತರ ಹೇಳಬೇಕು ಅನ್ನೋದು ನನಗೇನೂ ಹೊಳೆಯಲೊಲ್ಲದು. ನೀನು, ಅದೇನೋ ಉಪಾಯಮಾಡ್ತೀನಿ ಅಂದೆ. ಏನೂ ಮಾಡಲೇ ಇಲ್ಲ. ಕಡೆಗೂ ಅವರೇ ಇಲ್ಲಿಗೆ ಬರೋಹಾಗಾಯ್ತು. ಅವರಿಗೆ 'ಇಲ್ಲ' ಅಂತ ನಿಷ್ಠೂರವಾಗಿ ನಿಖಾಲಸ್ಸಾಗಿ ಹೇಗೆ ಹೇಳೋದು? ಅದೇ ಯೋಚನೆ, ಅಷ್ಟುಹೊತ್ತಿನಿಂದ.

ಗ–ನೀವೇನೂ ಯೋಚನೆ ಮಾಡಬೇಡಿ. ನೀವು ಮಾತಾಡಿ ನಿಷ್ಠೂರಕ್ಕೆ ಸಿಕ್ಕಬೇಕಾಗೇ ಇಲ್ಲ. ಮಾತಿಲ್ಲದೇನೇ ಈ ತೊಡಕೆಲ್ಲ ಕತ್ತರಿಸೋ ಹಾಗೆ, ಕಟ್ ಸೀನ್ ಅಂತಾರಲ್ಲ, ಹಾಗೆ, ಏರ್ಪಾಡು ಮಾಡಿಬಿಟ್ಟಿದ್ದೇನೆ. ಅವರು ಸ್ವಯಂ–ವರರಾಗಿ ಇಲ್ಲಿಗೆ ದಯಮಾಡಿಸುತಾರೆ. ನೀವೂನೂ, ಇಲ್ಲಿ, ಅಹ್ಹಹ್ಹ, ಸ್ವಯಂ–ವರರಾಗಿಯೇ ಮಂಡಿಸಿದ್ದೀರಿ. ಸೀತೆಯನ್ನ ತಮ್ಮ ಕುಟುಂಬದ ಅಪ್ಪಣೆ ಪಡೆದು ಬೇಕೂಂತಲೇ ಶ್ರೀಧರನ ಜೊತೆ ತುಮಕೂರಿಗೆ ಕಳಿಸಿದೆ. ಅವನ ಸ್ನೇಹಿತ ಬಹುಶಃ ಅವನ ಮಾತಿಗೂ ಬೆಲೆ ಕೊಡಲಾರ. ಈ ಮಧ್ಯೆ, ಶ್ರೀಧರ ಅವನ ಹೆಂಡತಿ ಇಬ್ಬರೂ ಸೀತೆಗೆ ಸಮಯೋಚಿತವಾದ ಬುದ್ಧಿವಾದ ಹೇಳಿರುತ್ತಾರೆ. ಇಲ್ಲಿ ಜಗನ್ನಾಥರಾಯರೂ ಇರೋವಾಗಲೇ ಬಹುಶಃ ಶ್ರೀಧರ ಕುಟುಂಬ ಪರಿವಾರ ಸಮೇತನಾಗಿ, ಸೀತೆಯನ್ನು ಕರೆದುಕೊಂಡು, ಇದೇ ಸಮಯಕ್ಕೆ ಬಂದರೂ ಬಂದನೆ. ಎಲ್ಲರ ಎದುರಿನಲ್ಲಿ ಸ್ವಯಂ–ವರ ನಡೆದೇ ಹೋಗಲಿ. ಒಳಗೆ ಹಬ್ಬದ ಅಡಿಗೆಯೂ ಏರ್ಪಾಡಾಗಿದೆ, ಹೇಗಿದ್ದರೂ. ಇವತ್ತೆ ಲಗ್ನಪತ್ರಿಕೆಯೂ ಆಗಿಹೋಗಲಿ; ಶಾಸ್ತ್ರೋಕ್ತವಾಗಿ ವಿವಾಹ ಸಮಾರಂಭವನ್ನ ನಿಧಾನವಾಗಿ ಜರುಗಿಸಿದರಾಯ್ತು. ನಾನು ಹೇಳಿದೆನಲ್ಲ, ನೀವೇನೂ ಯೋಚನೆ ಮಾಡಬೇಕಾಗಿಲ್ಲ. ಎಲ್ಲಾ ಸುಮುಖವಾಗೇ ನಡೆಯುತ್ತೆ. ನಡೀಲೇ ಬೇಕು. ಸರಿ

ನಮ್ಮ ವಯಸ್ಸು ಸ್ಥಿತಿಗತಿ ಇವಕ್ಕೆ ತಕ್ಕ ಹಾಗಿರಬೇಕು ಅಂತ ಇಟ್ಟುಕೊಳ್ಳಿ–ಆ ಹೆಣ್ಣನ್ನ, ಕಾರಣ ಏನಾದರೂ ಇರಲಿ, ಮೊದಲನೆ ವರ ಯಾರೂ ಮೋಹಿಸದೆ ಇರೋಣ; ಮೊದಲನೆ ವರ ಒಪ್ಪಲೂಬಹುದು ಅಂತಲೂ ಇಟ್ಟುಕೊಳ್ಳಿ, ವರೋಪಚಾರದ ಮಾತೂ ಹಾಗಿರಲಿ, ಮದುವೆ ಖರ್ಚುಕೂಡ ಮಾಡಲಾರದಷ್ಟು ತೀರ ಬಡವರ ಮನೆಯ ಹೆಣ್ಣಾಗಿರೋಣ; ತಬ್ಬಲಿಯಾಗಿರೋಣ; ರೂಪ ಅಷ್ಟಕ್ಕಷ್ಟೇ ಆಗಿರೋಣ–ಹೀಗೆ, ಇನ್ನೂ ಏನೇನೋ ಸಂದರ್ಭ ಇರುತ್ತವೆ ಅನ್ನಿ. ಇಂಥ ಹೆಣ್ಣುಗಳನ್ನ ನಮ್ಮಂಥವರು ಮದುವೆಮಾಡಿಕೊಂಡರೆ, ಅವರಿಗೂ ಸಮಾಜಕ್ಕೂ......

ಲ. ನಾ.–ಎಲ್ಲಾದರೂ ದ್ರೋಹವಾಗುತ್ತೆಯೆ? ಖಂಡಿತ ಇಲ್ಲ.

ಜ–ಉಪಕಾರ ಸ್ವಾಮಿ, ಮಹೋಪಕಾರ. ಆದರೆ ಮಾತ್ರ, ಎಲ್ಲಾ ಭಾಗದಲ್ಲೊ 'ಅಸ್ತ್ರಾಯ ಫಟ್' ಆಗಿರೋನು, ತನಗೇ ತಾನು ಹೊರೆಯಾಗಿರೋನು, ವೈಕುಂಠಯಾತ್ರೆಗೆ ಸಿದ್ಧವಾಗಿರೋನು, ಎರಡನೆ ಮೂರನೆ ಮದುವೆ ಮಾಡಿಕೊಂಡು, ಹುಡುಗಿಯ ತಲೇಮೇಲೆ ಚಪ್ಪಡಿ ಎಳೆಯಬಾರದು. ನಮ್ಮ ವಿಚಾರ ಹಾಗಲ್ಲ ನೋಡಿ. ನಾನು ಬೇಕಾದರೆ, ನನ್ನ ಮಗನಿಗೂ ಸ್ವಲ್ಪ ಇಟ್ಟು, ನನ್ನ ಆಸ್ತಿಯೆಲ್ಲಾನೂ ಹುಡುಗಿಯ ಹೆಸರಿಗೇ ಬರೆಯೋಕೆ ಸಿದ್ಧನಾಗಿದೇನೆ.

ಲ. ನಾ.–ಹೌದು, ಹೌದು. ಬಹು ಸಂತೋಷ, ಬಹು ಸಂತೋಷ. ಯಾರಿಗೂ ಅನ್ಯಾಯವಾಗಬಾರದು. ನಾನು ಮಾಡೋದು ಅದೇ.

ಜ–ಆದರೆ, ನಿಮಗೆ, ಅಂಥ ತುರ್ತಿನ ಪ್ರಮೇಯ.......ಏನೂ.... ಇದ್ದಹಾಗೆ.....

ಲ. ನಾ.–ಮಸಲ, ಮಸಲ.....ರೆ, ಮದುವೆಯಾಗೋದಾದರೆ. ಶಾಸ್ತ್ರೀನೂ ಬಲವಂತ ಮಾಡುತಾ ಇದಾನೆ. ಅವಳೂ ಒಪ್ಪಿದಾಳೆ ಅಂತಲೇ ಇಟ್ಟುಕೊಳ್ಳಿ; ವಂಶ ಉದ್ಧಾರವಾಗಲಿ ಅಂತ ಅವಳೂ ಅಪೇಕ್ಷೆಪಡುತಾ ಇದಾಳೆ. ಸೀತೇನ.... ನಾನೇ......(ಜಗನ್ನಾಥರಾಯರು ದಂಗು ಬಡಿದು ಬೆರಗುಗಣ್ಣಾಗುವರು).... ನಾನೇ..... ಮದುವೆ ಮಾಡಿಕೊಳ್ಳೋದಾದರೆ..... (ತಟ್ಟನೆ, ಕಾಫಿ ಹಿಡಿದುಕೊಂಡು ಲಕ್ಷ್ಮೀದೇವಮ್ಮ ಪ್ರವೇಶಿಸಿ ಬಾಗಿಲಲ್ಲೇ ನಿಲ್ಲುವಳು).... ಅವಳು, ಈ ಕ್ಷಣಾನೇ ಒಪ್ಪಿಬಿಡುತಾಳೆ. ನಾನು ಸಾಕಿದ ಮಗು, ಮಗಳಹಾಗೆ, ಮನಸ್ಸು ಹಿಂಜರೀತಾ ಇದೆ, ಅಷ್ಟೆ. (ಜಗನ್ನಾಥರಾಯರ ಮುಖದ ಬೆರಗು ತುಸು ತುಸ ಕಡಮೆಯಾಗುವುದು.) ಹುಡುಗೀಗೂ ಈ ಮನೆ ಬಿಟ್ಟುಹೋಗೋಕೆ ಇಷ್ಟವಿಲ್ಲ. ಏನು ಮಾಡೋದು ಅಂತ ನಾನೂ ಯೋಚನೆಮಾಡುತಾ ಇದೀನಿ.

(ಲಕ್ಷ್ಮೀದೇವಮ್ಮ ಒಳಕ್ಕೆಬಂದು ಕಾಫಿಕೊಡುವಳು) ನೀನೆ ತಂದೆಯಾ,

ಜ–(ಪ್ರವೇಶಿಸಿ) ಬೆಳಗ್ಗೆ ಶಾಸ್ತ್ರಿಗಳು ಬಂದಿದ್ದರು, ತಮ್ಮ ಆಹ್ವಾನವನ್ನ ತಿಳಿಸಿದರು. ಏನು, ಬಹಳ ದೊಡ್ಡ ಏರ್ಪಾಡನ್ನ ಹಚ್ಚಿಸಿಕೊಂಡಿರುವ ಹಾಗೆ ಕಾಣುತ್ತೆ.

ಲ. ನಾ.–(ಉಗುಳು ನುಂಗಿ) ಅಂಥಾದ್ದೇನು ದೊಡ್ಡ ಏರ್ಪಾಡೂ ಇಲ್ಲ ಏನೂ ಇಲ್ಲ. ಏನೋ, ಎಲ್ಲ ಸುಮುಖವಾಗಾದರೆ, ನಿಶ್ಚಿತಾರ್ಥ ಅಂತಲೆ ಇಟ್ಟುಕೊಳ್ಳಿ. ಒಮ್ಮೆ ಸಮ್ಮತವಾದರೆ, ಈ ಸಂಜೆಯೇ ಲಗ್ನಪತ್ರಿಕೇನೂ ಆಗಿಹೋಗೋದೆ. ಅವಳೂ ಒಪ್ಪಿದಾಳೆ. ಕನ್ಯೆ ಮಾತ್ರ ಇನ್ನೂ ತನ್ನ ಒಪ್ಪಿಗೆಯನ್ನ ಖಂಡಿತವಾಗಿ ತಿಳಿಸಿಲ್ಲ. ಈ ಹೊತ್ತು ಹಾಗೋ ಹೀಗೋ ಅಂತೂ ಆಖೈರಾಗಿ ತೀರ್ಮಾನವಾಗಿಬಿಡಲಿ ಅಂತ ನನ್ನ ಇಷ್ಟ. ಎಲ್ಲ ಭಗವಂತನ ಇಚ್ಛೆ. ನಿಮ್ಮ ಹುಡುಗ........

ಜ–ಅವನು ಊರಲ್ಲೇ ಇಲ್ಲ. ನಾನು ಹೇಳಿದ್ದನ್ನ ಶಾಸ್ತ್ರಿಗಳು ನಿಮಗೆ ತಿಳಿಸಿದರೋ ಇಲ್ಲವೋ?

ಲ. ನಾ.–ತಿಳಿಸಿದರು, ತಿಳಿಸಿದರು. ನನ್ನ ಮನಸ್ಸಿನಲ್ಲಿ ಎಲ್ಲ ನಿರ್ಧರವಾಗಿಹೋಗಿದೆ. ಹೆಂಗಸರು ಮಾತ್ರ ಇನ್ನೂ ನಿಮ್ಮ ಹುಡುಗನೇ ಅಂತ ತಿಳಿದಿರೋ ಹಾಗೆ ಕಾಣುತ್ತೆ. ಅಳಿಯನ ಕುರುಡು ಬೆಳಗಾದರೆ ಕಾಣುತ್ತೆ ಅನ್ನೊಲ್ಲವೆ, ಹಾಗೆ ಎಲ್ಲಾ ತಾನಾಗಿ ಗೊತ್ತಾಗುತ್ತೆ. ನಾವು ಯಾಕೆ ಆತುರಪಡಬೇಕು.

ಜ–ಏನಿಲ್ಲ, ಆತುರವೇನಿಲ್ಲ. ಇವತ್ತಲ್ಲದಿದ್ದರೆ ಇನ್ನೊಂದು ದಿನ..... ಈಗ, ಈ ಸಮಾಜ ಸುಧಾರಕರು, ಲೆಕ್ಚರು ಕೊಡೋರು, ಕಥೆ ಕಾದಂಬರಿ ನಾಟಕ ಬರೆಯೋರು–ಇವರೆಲ್ಲಾ ಒಂದೇ ಸಮನಾಗಿ ಪ್ರಚಾರಮಾಡೋದಕ್ಕೆ ಶುರುಮಾಡಿದಾರೆ–ಮುದುಕರಿಗೆ ಹುಡುಗಿಯರನ್ನ ಕಟ್ಟಿ ಅವರ ಕೊಲೆ ಮಾಡುತಾರೆ ಅಂತ. ಅದೆಲ್ಲಾ ಅರ್ಥವಿಲ್ಲದ್ದು ಅಂತ ನನ್ನ ಅಭಿಪ್ರಾಯ ನೀವೇನಂತೀರಿ?

ಲ. ನಾ.–ನನ್ನ ಅಭಿಪ್ರಾಯಾನೂ ಅದೇ. ಈಗ ನನ್ನ ವಿಷಯಾನೇ ತೆಗೆದುಕೊಳ್ಳಿ. ನನ್ನ ಈಗಿನ ಹೆಂಡತಿ ಬಡವರ ಮನೆಯಲ್ಲಿ ಹುಟ್ಟಿದವಳು. ನಾನಲ್ಲದೆ, ಇನ್ನು ಯಾರು ಅವಳನ್ನ ತಂದುಕೊಳ್ಳೋಕೆ ಸಿದ್ಧವಾಗಿರುತ್ತಿದ್ದೋರು?

ಜ–ಅಲ್ಲದೆ, ಇನ್ನೊಂದು ವಿಚಾರ, ನೋಡಿ. ಗಂಡಸರಿಗೆ ಬೇಗ ಹೆಂಡತಿ ತೀರಿಹೋದರೆ ಅವರು ಮತ್ತೆ ಮದುವೆಯಾಗದೆ ಇರೋದು ಅವರಿಗೂ ಒಳ್ಳೆಯದಲ್ಲ, ಸಮಾಜಕ್ಕೂ ಒಳ್ಳೆಯದಲ್ಲ. ನಮ್ಮಂಥ ನಿಮ್ಮಂಥ ಗೌರವಸ್ಥರು ಹದ್ದುಮೀರಿ ಹೋಗದೆ ಇರಬಹುದು. ಮರ್ಯಾದೆಗೆಟ್ಟವರಿಗೆ ಏನು ಹೇಳುತೀರಿ? ಅಂದರೆ, ಒಂದು ವಿಚಾರ–ನಮ್ಮಂಥವರು, ಮದುವೆ ಯಾಗಬೇಕಾದರೆ, ಹೆಣ್ಣು

ಜ–ಒಪ್ಪಿಬಿಟ್ಟಿದ್ದಿದ್ದರೆ, ನಾನು ಸಂತೋಷವಾಗೇ.....

ಶ್ರೀ–[ರಘುಪತಿಯನ್ನು ದಬ್ಬಿ ಕರೆತುರವಂತೆ ಕರೆತಂದು ಬಲವಂತದಿಂದ ತಾನು ಕುಳಿತಿದ್ದ ಕುರ್ಚಿಯಮೇಲೆ ಕೂರಿಸುವನು] ಈಗ ನಿಮ್ಮ ತಂದೆಯ ಮಾತಿಗೆ ಏನು ಉತ್ತರ ಹೇಳುತಿ ಹೇಳಯ್ಯ?

ರ–[ಮೌನ]

ಶ್ರೀ–ಅವನ ಮಾತು, ಅವನ ಹೃದಯ ಬಲ್ಲವನು, ನಾನೇ ಹೇಳುತೀನಿ, ಕೇಳಿ ಅವನಿಗೆ ನೀವು ನೋಡಿ ಮೆಚ್ಚಿದ ಹೆಣ್ಣು ಆಗದಂತೆ; ಅವನೇ ನೋಡಿ ಮೆಚ್ಚಿದ ಹೆಣ್ಣು ಆಗಬೇಕಂತೆ. ಒಂದು ಸಲ, ನಮ್ಮ ಸೀತೆಯನ್ನ ನೋಡಿಬಿಟ್ಟು ಏನಾದರೂ ಹೇಳು ಅಂತ ಬಲವಂತ ಮಾಡಿ ಕರೆದುಕೊಂಡು ಬಂದಿದೇನೆ.

ಜ–ನಿಮಗೆಲ್ಲಿ ಸಿಕ್ಕಿದ? ಊರಲ್ಲೇ ಇರಲಿಲ್ಲವಲ್ಲ?

ಶ್ರೀ–ನನ್ನ ಜೊತೆಯೇ ಬಂದಿದ್ದ ತುಮಕೂರಿಗೆ! ಈಗ ಇದಕ್ಕೋಸ್ಕರ ಕರೆದುಕೊಂಡೆ ಬಂದೆ. ನೀವು ಇಲ್ಲಿಗೆ ಬರುತೀರಿ ಅಂತ ಗೊತ್ತಾಯಿತು. ನಾನು ಮಾಡೋ ಪ್ರಯತ್ನ ಎಲ್ಲ ಮಾಡಿದೇನೆ. ನನ್ನ ಕೈ ತಟಾಯ್ತು, ಎಲ್ಲಾ ಸೀತೆಯ ಕೈಯ್ಯಲ್ಲಿದೆ ಈಗ.....ಸೀತಾ....

ಲ. ನಾ.–ಆತುರ ಏನು, ಊಟ ಆದಮೇಲೆ ಕೇಳಿದರಾಯಿತು.

ಶ್ರೀ–ಕೇಳೋ ವಿಚಾರ ಅಲ್ಲ ಇದು, ನೋಡೋ ವಿಚಾರ....ಸೀತಾ, ಸೀತಾ.....

[ಪ್ರವೇಶ: ಶಾಸ್ತ್ರಿ, ಲಕ್ಷ್ಮೀದೇವಮ್ಮ, ಸೀತೆ, ಶಾಸ್ತ್ರಿ ಹೂವಿನ ಪೊಟ್ಟಣ ಬಿಚ್ಚಿ, ಒಂದು ಹೂವಿನ ಹಾರವನ್ನು ಸೀತೆಯ ಕೈಗೆ ಕೊಡುವನು. ಲಕ್ಷ್ಮೀನಾರಣಪ್ಪ, ಜಗನ್ನಾಥರಾಯರು ಬೆರಗಾಗಿ ನೋಡುತ್ತಿರುವರು]

ಲ. ನಾ.–ಇದೇನಪ್ಪ ಇದು.........!!!

ಗ–ಇದು, ಸೀತಾಸ್ವಯಂವರ! ನಡೆಯಲಿ–ನೋಡಮ್ಮ, ಇವರು ರಘುಪತಿ. ಗೊತ್ತೇ ಇದೆಯಲ್ಲ–ಇವರೊಬ್ಬರು ವರ.

ಶ್ರೀ–(ಜಗನ್ನಾಥರಾಯರ ಕಡೆ ಕೈತೋರಿಸಿ) ನೋಡಮ್ಮ ಇವರೂ ಒಬ್ಬರು ವರ ಅಂತ ಶಾಸ್ತ್ರಿಗಳು ಹೇಳಿದಹಾಗೆ ನೆನಪು. ರಘುಪತಿ ಇಷ್ಟವಿಲ್ಲದೆ ಹೋದರೆ......

ಲ. ದೇ.–(ಲ. ನಾ. ನ ಕಡೆಗೆ ಕೈತೋರಿಸಿ) ಇವರೂ ಒಬ್ಬರು ವರ ಕಣ್ಣಮ್ಮ, ಮರೆಯಬೇಡ.

ಗ–ಎಲ್ಲಮ್ಮ, ನಿನಗೆ ಇಷ್ಟವಾದವರಿಗೆ ಈ ಹೂವಿನ ಹಾರ.....ಈಗ; ಆಮೇಲೆ, ಮುಂದಿನ ವ್ಯವಹಾರ.

(ಸೀತೆ–ಹುಸಿ ಲಜ್ಜೆ ನಟಿಸುತ್ತ, ತಲೆ ಬಗ್ಗಿಸಿ ಕುಳಿತಿದ್ದ ರಘುಪತಿಯ

ಕೂಗಿದ್ದರೆ ನಾನೇ ಎದ್ದು ಬರುತಾ ಇದ್ದೆ. (ಜಗನ್ನಾಥ ರಾಯರಿಗೆ ಒಂದು ಲೋಟ ಕೊಟ್ಟು, ತಾನೊಂದನ್ನು ತೆಗೆದುಕೊಳ್ಳುವನು. ಲಕ್ಷ್ಮಿದೇವಮ್ಮ ಮಾತನಾಡದೆ ನಿಷ್ಕ್ರಮಣ. ಪ್ರವೇಶ: ಗಣಪತಿಶಾಸ್ತ್ರಿ. ಹೂವಿನ ದೊಡ್ಡ ಪೊಟ್ಟಣವೊಂದನ್ನು ಮೇಜಿನಮೇಲೆ ಇರಿಸುವನು. ಹಣ್ಣು ವೀಳೆಯದೆಲೆ ಮುಂತಾದ್ದನ್ನು ಒಳಕ್ಕೆ ತೆಗೆದುಕೊಂಡು ಹೋಗುವನು.)

ಜ–ಎಲ್ಲಾ ಬಹಳ ಶುಭಕರವಾಗಿ ಕಾಣುತಾ ಇದೆ. ತುಂಬಾ ಸಂತೋಷ...... ಹ್ಹ ಹ್ಹ ಹ್ಹ.

ಲ. ನಾ.–ಹುಡುಗಿ ತುಮಕೂರಿಗೆ ಹೋಗಿದಾಳೆ. ನಮ್ಮ ಶ್ರೀಧರನ ಬಲವಂತ. ಅಲ್ಲಿ ಯಾವುದೋ ವರನಿಗೆ ತೋರಿಸಬೇಕಾಗಿತ್ತಂತೆ. ಬಹುಶಃ ವರ ಕನ್ಯೆಯನ್ನ ಒಪ್ಪಿರೋದಿಲ್ಲ. ಇನ್ನೇನು, ಅವರೂ ಬಂದಾರು ತುಮಕೂರಿಂದ, ಇದೇ ರೈಲಿಗೆ.

ಜ–[ಮುಖ ಸ್ವಲ್ಪ ಸಪ್ಪೆ ಬೀಳುವುದು] ಇಷ್ಟು ಹೊತ್ತಿಗಾಗಲೆ ಬಂದಿರಬೇಕಾಗಿತ್ತಲ್ಲ? [ಗಡಿಯಾರ ತೆಗೆದುನೋಡಿ] ಆಗಲೇ ಹನ್ನೊಂದು. ರೈಲು ಲೇಟು ಅಂತ ಕಾಣುತ್ತೆ.

[ಹೊರಗೆ ಗಾಡಿ ಬಂದು ನಿಂತ ಸದ್ದು]

ಗ–[ಹೊರಬಾಗಿಲಿಂದ ಪ್ರವೇಶಿಸಿ] ಶ್ರೀಧರ, ಸೀತೆ ಬಂದರು.

ಲ. ನಾ.–ಓಹೋ, ಬಂದರೋ, ಸಂತೋಷ. ಶುಭಸ್ಯ ಶೀಘ್ರಂ.

[ಪ್ರವೇಶ: ಶ್ರೀಧರ]

ಸೀತೆ ಎಲ್ಲಿ?

ಶ್ರೀ–ಒಳಕ್ಕೆ ಹೋದಳಲ್ಲ.

ಲ. ನಾ.–ಸರಿಯೆ. ಸ್ವಲ್ಪ ಸುದಾರಿಸಿಕೊಳ್ಳಲಿ. ಆಮೇಲೆ ಕೇಳಿದರಾಯಿತು, ಆತುರವೇನು.

ಶ್ರೀ–[ಕುಳಿತುಕೊಳ್ಳುತ್ತ] ಕೇಳೋದೇನು ಕೇಳೋದು, ಗೊತ್ತೇ ಇದೆ.

ಲ. ನಾ.–ಏನು, ನೀನು ಹೇಳಿದ ವರ ಸೀತೆಯನ್ನ ಒಪ್ಪಲಿಲ್ಲವೋ?

ಶ್ರೀ–[ತಲೆಯಲ್ಲಾಡಿಸುವನು]

ಜ–(ಮುಖ ಮತ್ತೆ ಗೆಲುವುಗೊಂಡಿರುವುದು) ಈಗಿನ ಕಾಲದ ಹುಡುಗರು ತಂದೆತಾಯಿ ಹೇಳಿದಹಾಗೆ ಎಲ್ಲಿ ಕೇಳುತ್ತಾರೆ. ಈಗ ನೋಡಿ, ನಮ್ಮ ರಘುಪತಿ, ನಿಮ್ಮ ಹುಡುಗಿಯ ವಿಚಾರದಲ್ಲಿ, ಒಪ್ಪಿಬಿಟ್ಟಿದ್ದಿದ್ದರೆ....

ಶ್ರೀ–ಅದು ಯಾಕಯ್ಯ, ಹೊರಗೇ ನಿಂತೆ? ಬಾರಯ್ಯ ಒಳಕ್ಕೆ [ಹೊರಕ್ಕೆ ಎದ್ದುಹೋಗುವನು]

ಕೊರಳಿಗೆ ಹಾರ ಹಾಕುವಳು)

ಲ. ನಾ.– ಬಹು ಸಂತೋಷ, ಬಹು ಸಂತೋಷ.

ಜಗನ್ನಾಥ– ನಾವು ಬಯಸಿದ್ದೂ ಇದೇ!

[ಸೀತೆ ಹೋಗುವುದರಲ್ಲಿರುವಳು]

ಗ....(ಅವಳನ್ನು ತಡೆದು) ಎಷ್ಟೋವೇಳೆ ನಾವು ಬಯಸೋದೊಂದು, ಅದು ಆಗೋದೊಂದು. ಆದರೆ, ದೇವರ ದಯದಿಂದ, ನಾವು ಬಯಸಿದ ಹಾಗೇ ಎಲ್ಲಾ ನಡೆಯಿತು. ತುಂಬ ಸಂತೋಷ... ಇಷ್ಟಕ್ಕೇ ಮುಗಿಯಲಿಲ್ಲವಮ್ಮ, ಹಿರಿಯರಿಗೆಲ್ಲಾ ನಮಸ್ಕಾರ ಮಾಡು.

[ಸೀತೆ ಜಗನ್ನಾಥರಾಯರಿಗೂ, ಲ. ನಾ. ರಿಗೂ ನಮಸ್ಕಾರಮಾಡುವಳು. ಇಬ್ಬರೂ ಕೈಯೆತ್ತಿ ಆಶೀರ್ವದಿಸುವರು. ಎದ್ದು, ಲ. ದೇ. ಬಳಿಗೆ ಹೋಗುತ್ತಿರುವಳು]

ಶ್ರೀ–ಶಾಸ್ತ್ರಿಗಳಿಗೂ ನಮಸ್ಕಾರಮಾಡಮ್ಮ, ಇದಕ್ಕೆ ಅವರೇ ಸೂತ್ರಧಾರರು.

ಗ–ಸರಿ ಸರಿ, ನನಗ್ಯಾಕೆ ಇಲ್ಲದ ಗೌರವ. ನಮ್ಮ ರಾಯರು ಹೇಳೋಹಾಗೆ ನಾನು ಜಾತಕಗಳ ಮದುವೆ ಮಾಡಿಸೋನು. ನೀವಾದರೆ....

[ಸೀತೆ ನಮಸ್ಕರಿಸುವಳು]

(ರಾಗವಾಗಿ) ಸುಮಂಗಲೀರಿಯಂ ವಧೂ
ರಿಮಾಂ ಸಮೇತ ಪಶ್ಯತ ।
ಸೌಭಾಗ್ಯಮಸ್ಯೈದತ್ವಾ
ಯಥಾಸ್ತಂ ವಿಪರೇತನ ।

(ನಿಧಾನವಾಗಿ ತೆರೆ)



# ಮೊದಲನೆಯ ಅಂಕ

[ಮಧ್ಯಮ ವರ್ಗದ ಉದ್ಯೋಗಸ್ಥನ ಮನೆಯ ಹಜಾರ. ಹೆಚ್ಚು ಅಲಂಕಾರ ಆಡಂಬರಗಳಿಲ್ಲದೆ ಸರಳತೆಯಿಂದ ಕೂಡಿದ್ದರೂ ಅಚ್ಚುಕಟ್ಟಾಗಿ, ಚೆಲುವಾಗಿ, ಕಾಣುತ್ತದೆ.

ಪ್ರಮುಖ ಲಕ್ಷಣಗಳು : ಪ್ರೇಕ್ಷಕರ ಬಲಬದಿಗೆ ಬೀದಿಯ ಕಡೆಗಿರುವ ಮುಂಬಾಗಿಲು; ಕಾಣುವುದಿಲ್ಲ. ಪ್ರೇಕ್ಷಕರ ಎಡಬದಿಗೆ,—ಅಡಿಗೆಯ ಮನೆ, ಬಚ್ಚಲು ಮನೆ, ಹಿತ್ತಿಲು—ಇವಕ್ಕೊಯ್ಯುವ ನಡವೆಯ ಬಾಗಿಲು : ಇದೂ ಕಾಣುವುದಿಲ್ಲ. ರಂಗದ ಅತ್ಯಂತ ಹಿಂಬದಿಯಲ್ಲಿ, ಪಟಗಳು, ಚಿತ್ರದ ಕ್ಯಾಲೆಂಡರುಗಳು, ತಾರೀಕು-ಕ್ಯಾಲೆಂಡರು—ಇವನ್ನು ತೋರುವ ಎದುರುಗೋಡೆಯ ನಟ್ಟ ನಡುವೆ ಒಂದು ಬಾಗಿಲು : ಮನೆಯ ಯಜಮಾನನ ಮಲಗುವ ಕೋಣೆಗೆ ಒಯ್ಯುವದು ; ಇದರ ಕದಗಳು ಸದಾ ತೆರೆದಿದ್ದರೂ, ಇಳಿಯಬಿಟ್ಟ ಬಾಗಿಲ ತೆರೆಯಿಂದಾಗಿ ಕೋಣೆಯ ಒಳಭಾಗವು ಮರೆಯಾಗಿರುತ್ತದೆ.

ಮೇಲೆ ಹೇಳಿದ ಎದುರುಗಡೆಯ ಬಾಗಿಲ ಬಲಪಕ್ಕದಲ್ಲಿ—ಎಂದರೆ, ಪ್ರೇಕ್ಷಕರ ಎಡ ಬದಿಗೆ—ಒಂದು ಕಿರು ಮೇಜು, ಅದರ ಮೇಲೊಂದು ಸಣ್ಣ ರೇಡಿಯೋ, ಪಕ್ಕದಲ್ಲಿ ಒಂದು ಆರಾಮ ಕುರ್ಚಿ ಹಾಗೂ ಒಂದು ಸ್ಟೂಲು ; ಸ್ವಲ್ಪ ಈ ಕಡೆ, ಸಣ್ಣ ಅಳತೆಯ ಬರೆಯುವ ಮೇಜು, ಅದರ ಮೇಲೆ ಕೆಲವು ಪುಸ್ತಕಗಳುಳ್ಳ ಬುಕ್ ಷೆಲ್ಫ್, ಮುಂದೆ ಒಂದು ಕುರ್ಚಿ. ಈ ಮೇಜಿನ ಮೇಲ್ಭಾಗದ ಗೋಡೆಯ ಮೇಲೆ, ಸ್ಟ್ಯಾಂಡಿನ ಮೇಲಿಟ್ಟ ಗಡಿಯಾರ: ಅದರ ಚಲಿಸುವ ಮುಳ್ಳಿನಿಂದ, ತಕ್ಕಮಟ್ಟಿಗೆ ದೂರದಿಂದಲೂ ಗಂಟೆ ನಿಮಿಷಗಳನ್ನು ಗುರುತಿಸುವಂತಿರಬೇಕು. ಎದುರು ಬಾಗಿಲ ಎಡ ಪಕ್ಕದಲ್ಲಿ, ಒಂದು ಬಟ್ಟೆಯ ಸ್ಟ್ಯಾಂಡು.

ಹಜಾರದ ಮಧ್ಯಭಾಗದಲ್ಲಿ, ಸರಪಣಿ ಹಾಕಿದ ಕರಿಯ ಮರದ ತೊಟ್ಟಿಲೊಂದು ತೂಗಬಿಟ್ಟಿದೆ. ಅದರೊಳಗೆ ಹಾಸಿಗೆ ಬಟ್ಟೆ ಏನೂ ಇಲ್ಲ, ಪೂರಾ ತೆರವು.

ಮುಂತೆರೆ ಸರಿದಾಗ, ಮೇಲ್ಕಂಡ ಹಜಾರವು ಕಂಡುಬರುವುದು. ಬೇಸಗೆಯಾದ್ದರಿಂದ, ಒಳಗೆ ಇನ್ನೂ ಸಂಜೆಮಬ್ಬು ಕವಿದಿಲ್ಲ ; ತಕ್ಕ ಮಟ್ಟಿಗೆ ಹೊಳವಾಗಿಯೆ ಇರುತ್ತದೆ.

ಗಡಿಯಾರ ಸಂಜೆ ೬ ಗಂಟೆ ೩೫ ನಿಮಿಷ ತೋರಿಸುತ್ತಿದೆ.]

**ವಿಮಲಾ :**

(ಸ್ಟೂಲಿನ ಮೇಲೆ ಕುಳಿತಿರುವಳು ; ರೇಡಿಯೋ ತಿರುಗಿಸುವಳು ; ಜನಪದ ಗೀತೆಯೊಂದು ಕೇಳಿ ಬರುವುದು ; ತಟ್ಟನೆ ಅದನ್ನು ನಿಲ್ಲಿಸಿ) ನಿಂಗೀ ನಿಂಗಮ್ಮಾ ! (ಎಂದು ಕೂಗಿ ಕರೆಯುವಳು.)

## ಪಾತ್ರ ಪರಿಚಯ

೧. ಕೇಶವಮೂರ್ತಿ : (ವಯಸ್ಸು : ಸು. ೩೨–೩೩) ತೊಟ್ಟಿಲು ತೂಗಾಡುತ್ತಿರುವ ಮನೆಯಾತ.

೨. ವಿಮಲಾ : (ವಯಸ್ಸು : ಸು. ೧೮–೧೯) ತೊಟ್ಟಿಲು ತೂಗುವ ಕೈ.

೩. ಲೀಲಾವತಿ : (ವಯಸ್ಸು : ಸು. ೨೫–೨೬) ತೊಟ್ಟಿಲು ತೂಗದ ಕೈ.

೪. ಭಾಗೀರಥಮ್ಮ : (ವಯಸ್ಸು : ಸು. ೫೫) ಕೇಶವಮೂರ್ತಿಯ ತಾಯಿ; ವಿತಂತು.

೫. ತುಳಸಮ್ಮ : ಕೂಲಿಯ ಮುತ್ತೈದೆ.

೬. ನಿಂಗಮ್ಮ : ಮನೆಯ ಕೆಲಸಗಿತ್ತಿ.

೭. ಸಿದ್ಧಪ್ಪ : ಒಬ್ಬ ಸೇವಕ.

೮. ಗೋಪಾಲರಾವ್ : ಕೇಶವಮೂರ್ತಿಯ ಸ್ನೇಹಿತ.

೯. ರಾಮರಾಯರು : ಎದುರುಮನೆಯ ಗೃಹಸ್ಥರು.

೧೦. ಡಾ॥ ನಾರಾಯಣರಾಯರು : ಅದೇ ಬೀದಿಯಲ್ಲಿರುವ ವೈದ್ಯರು.

೧೧. ಪುರುಷಧ್ವನಿ :

೧೨. ಸ್ತ್ರೀಧ್ವನಿ :*

ತೊಟ್ಟಿಲು
ಮತ್ತು
ಅದರಲ್ಲಿನ ಮಗು

---

* ಇದು ಲೀಲಾವತಿಯನ್ನು ಪ್ರತಿನಿಧಿಸುವ ಧ್ವನಿ. ಉಚಿತವೆನಿಸಿ, ಸೌಕರ್ಯವಿದ್ದರೆ, ಲೀಲಾವತಿ–ಪಾತ್ರಧಾರಿಯ ಧ್ವನಿಯನ್ನು 'ಟೇಪ್‌ರಿಕಾರ್ಡರ್' ಉಪಯೋಗಿಸಿ ಕೇಳಿಸಿದರೆ ಹೆಚ್ಚು ಪರಿಣಾಮಕಾರಿಯಾಗಬಹುದು.

ಅವ್ವಾ ! ಆಗ಼್ೆ ವರ್ಸ ತುಂಬೋಯ್ತಾ !.....ತೊಟ್ಲು ಮಾತ್ರ ತುಂಬ್ಲಿಲ್ಲ ! (ನಗುವಳು.)

**ವಿಮಲಾ :**

(ಹುಸಿ ಮುನಿಸಿನಿಂದ) ಹ್ಞೂ! ಹ್ಞೂ! ನಿನಗೆ ಸಲಿಗೆ ಹೆಚ್ಚಾಯ್ತು ಅಂತ ಕಾಣುತ್ತೆ. ನಿನ್ನನ್ನ ಕೆಲ್ಸಕ್ಕೆ ಇಟ್ಕೊಂಡು ಇನ್ನೂ ಮೂರು ತಿಂಗಳೂ ಆಗಿಲ್ಲ ; ಮೂವತ್ತು ವರ್ಷದಿಂದ ಕೆಲ್ಸ ಮಾಡಿಕೊಂಡಿರೋಳ ಹಾಗೆ ಹಾಸ್ಯಕ್ಕೆ ಶುರು ಮಾಡಿ ಬಿಟ್ಟೆಯಲ್ಲ ! ಹೋಗು ಹೋಗು, ಆಚೇ ಮನೆಗೆ ಹೋಗಿ ನಾಗಮ್ಮನೋರನ್ನ ಕೇಳಿಕೊಂಡು ಬಾ, ಅವರ ಯಜಮಾನರು ಫ್ಯಾಕ್ಟರಿಯಿಂದ ಮನೆಗೆ ಬಂದರೆ ಹೇಗೇ ಅಂತ....ದಾರೀಲೆ ಬಸ್ಸು ಕೆಟ್ಟು ಗಿಟ್ಟು ಹೋಗಿದೆಯೋ, ಏನೋ, ಯಾರಿಗೆ ಗೊತ್ತು.

**ನಿಂಗಮ್ಮ :**

ನಿಮಗ್ಯಾಕ್ರವ್ವ ಆತಂಕ, ಹೋಗಿ ಇಚಾರಿಸಿಕೊಂದು ಬರ್ತೀವ್ನಿ. (ಎಂದು ಹೊರಡುವಳು.)

[ವಿಮಲ ಗಡಿಯಾರದ ಕಡೆ ನೋಡುವಳು ; ೬. ೪೦ ತೋರಿಸುತ್ತಿದೆ. ರೇಡಿಯೋವನ್ನು ತಿರುಗಿಸ ಹೋಗಿ, ತಿರುಗಿಸದೆ ಸುಮ್ಮನಿರುವಳು. ಅಡಿಗೆಯ ಮನೆಯ ಒಳಕ್ಕೆ ಹೋಗಿ ಬರುವಳು. ತೂಗಬಿಟ್ಟಿರುವ ತೊಟ್ಟಲನ್ನು ಪರೀಕ್ಷಿಸಿ ನೋಡುವವಳಂತೆ ಮೇಲಿನಿಂದ ಕೆಳಕ್ಕೆ ದೃಷ್ಟಿಸಿ ನೋಡುತ್ತಾ ಕ್ಷಣಕಾಲ ನಿಲ್ಲುವಳು]

**ನಿಂಗಮ್ಮ :**

(ಹಿಂದಿರುಗಿ ಬಂದವಳು, ಪ್ರವೇಶಿಸಿ) ನಾನು ಹೇಳ್ಲಿಲ್ವಾ ಅವ್ವ? ಫ್ಯಾಕ್ಟರೀ ಬಸ್ಸು ಬರದೆ ನಿಲ್ಲೋಣ ಅಂದ್ರೇನು! ನಾಗಮ್ನೋರ ಯಜಮಾನ್ರು ಆಗ಼್ೆ ಬಂದು, ತಿಂಡಿ ಕಾಫಿ ಮಾಡ್ಕೊಂಡು ಈಗತಾನೆ ಹೊರಕ್ಕೆ ಹೊರಟ್ರಂತೆ. ಗಂಡ್ಸರ ಸ್ವಭಾವ ಎಲ್ಲಾ ಒಂದೇನೇ ಕಣ್ರವ್ವ.

**ವಿಮಲಾ :**

ಫ್ಯಾಕ್ಟರೀ ಬಸ್ಸು ಅಂದೆಯಲ್ಲಾ, ನಮ್ಮ ಮನೆಯ ಗಂಡಸರ ಸ್ವಭಾವಾನೂ ಹಾಗೇನೇ. ಏನೋ ವಿಶೇಷ ಕಾರಣ ಇಲ್ಲದೆ, ಹಾಗೆಲ್ಲಾ ಹೊತ್ತು ಮೀರಿ ಹೊರಗೆ ಉಳಿದುಕೊಳ್ಳೋರಲ್ಲ, ಅವರು.

**ನಿಂಗಮ್ಮ :**

ಹಂಗಾದ್ರೆ, ನೀವು ಪುಣ್ಯಾತ್ಗಿತ್ತಿ ಕಣ್ರವ್ವ—ಇನ್ನು ಬತ್ತೀನಿ ಹಿಂದಲ ಬೀದಿ ಗೌರವ್ವಾರ ಮನೆಗೆ ಹೋಗಬೇಕು, ಹೊತ್ತಾಯ್ತು. ಹಂಗೇ ಹೋಗ್ತಾ ಮತ್ತೆ

**ನಿಂಗಮ್ಮ :**

(ಎಡಗಡೆಯಿಂದ ಪ್ರವೇಶಿಸಿ) ಏನ್ರವ್ವಾ ?

**ವಿಮಲಾ :**

ಬಚ್ಚಲಮನೆ ಎಲ್ಲಾ ತೊಳೆದಾಯ್ತೆ, ನಿಂಗಮ್ಮಾ?

**ನಿಂಗಮ್ಮ :**

ಆಯ್ತು. ಕಾಫೀ ಪಾತ್ರೆ ಹಾಕೋಕಿಲ್ವಾ?

**ವಿಮಲಾ :**

ಹ್ಯಾಗೆ ಹಾಕೋದು ? ಆರೂವರೆಯ ಮೇಲಾದ್ರೂ ಇನ್ನೂ ಅವರು ಮನೆಗೆ ಬಂದೇ ಇಲ್ಲ. ಮಾಡಿದ ಉಪ್ಪಿಟ್ಟೆಲ್ಲಾ ತಣ್ಣಗಾಗುತಾ ಬಂತು, ಬಿಸಿ ನೀರಿನಲ್ಲಾದರೂ ಇಡಬೇಕು. ಫ್ಯಾಕ್ಟರಿ ಬಸ್ಸು ಇವತ್ತು ತಡವಾಗಿ ಬರುತ್ತೆಯೋ ಏನೋ.

**ನಿಂಗಮ್ಮ :**

ಫ್ಯಾಕ್ಟ್ರಿ ಬಸ್ಸು ತಡವಾಗೋದು ಉಂಟೇನ್ರವ್ವಾ, ಎಲ್ಲಾದ್ರೂ ? ನಿಚ್ಚಾ ಐದಕ್ಕೆ ಸರಿಯಾಗಿ ಬರ್ತದೆ, ಆ ಸರ್ಕಲ್ ತಾವ್ಕೆ? ಎಲ್ಲೋ ಬುದ್ಯೋರು ಬಸ್ಸು ಇಳಿದೋರೇ ಹಂಗಿಂದಂಗೇ ಯಾರದಾದ್ರೂ ಜೊತೇಲಿ ವೋಟ್ಲಿಗೋ ಸಿನಿಮಾಕ್ಕೋ ಹೊಂಟವರೆ ಅಂತ ಕಾಣ್ತದೆ. ಈ ಬೆಂಗ್ಳೂರು ಷಹರ್ನಲ್ಲಿ ಈಗಿನ ಕಾಲದ ಗಂಡಸರ್ಗೆ ಹೋಟ್ಲೇ ಮನೆ ಆಗೈತೆ. ಸಿನಿಮಾದಲ್ಲನಕಾ, ಆ ಬೆತ್ಲೆ ಕುಣಿಯೋ ಬೊಂಬಾಯಿ ವುಡ್ಗೀರ ನೆಳ್ಳುಬೊಂಬೆ ನೋಡ್ತಾ ಬಾಯ್ಬಿಟ್ಕೊಂಡು ಕುಂತುಬುಟ್ರೆ, ಮನೇಕಡೆ ನೆಪ್ಪು ಎಂಗಾರ ಆಗ್ಬೇಕು, ಅವರಿಗೆ? ನೀವೇ ಏಳೀ ತಾಯಿೊ?

**ವಿಮಲಾ :**

ನೀನಿನ್ನೂ ಈ ಮನೇಗೆ ಹೊಸಬಳು. ಅವರ ಸ್ವಭಾವಾನಾ ನೀನು ಇನ್ನೂ ಕಾಣೆ. ಅವರು ಅಂಥೋರಲ್ಲ.

**ನಿಂಗಮ್ಮ :**

ನೀವೇನು ಆಗಲೇ ಹಳಬರಾಗಿಬಿಟ್ರಾ ತಾಯಿ? ನೀವೇ ಹೇಳಿದ್ರಲ್ಲ ಆ ಜಿನ : ಇನ್ನೂ ಒಂದು ವರ್ಸ ಕೂಡ ಆಗಿಲ್ಲ, ನೀವು ಈ ಮನೇಗೆ ಬಂದು.

**ವಿಮಲಾ :**

ಮೊನ್ನೆ ಕಾಮನ ಹುಣ್ಣಿಮೆಗೆ ಒಂದು ವರ್ಷ ಆಯ್ತು.

**ನಿಂಗಮ್ಮ :**

**ವಿಮಲಾ :**

(ಆಲಿಸಿ, ಗಟ್ಟಿಯಾಗಿ) ಯಾರು ಅದು?....ಒಳಕ್ಕೆ ಬನ್ನಿ

[ಪ್ರವೇಶ : ತುಳಸಮ್ಮ; ಮಧ್ಯ ವಯಸ್ಸು ಮೀರಿದ ಮುತ್ತೈದೆ ದುಡಿದು ದುಡಿದು ಶುಷ್ಕವಾದ ದೇಹ.]

**ತುಳಸಮ್ಮ :**

ಭಾಗಮ್ನೋರು ಇಲ್ಲವೆ, ಅಮ್ಮಾ?

**ವಿಮಲಾ :**

ಬನ್ನಿ ಒಳಕ್ಕೆ, ಕೂತುಕೊಳ್ಳಿ.

**ತುಳಸಮ್ಮ :**

(ಬೆರಗಿನಿಂದ, ವಿಮಲೆಯ ಮುಖವನ್ನೇ ತುಸ ಹೊತ್ತು ದಿಟ್ಟಿಸಿ ನೋಡಿ) ಕೂತು ಕೊಳ್ಳೋದೇನು, ಇದ್ದೇ ಇದೆ : ಅಡಿಗೇಗೆ ಕೂತುಕೋಬೇಕು, ಮೆಣಸಿನ ಪುಡಿ ಕುಟ್ಟೋಕೆ ಕೂತುಕೋಬೇಕು, ಅದಕ್ಕೆ ಕೂತುಕೊಳ್ಳೋದು ಇದಕ್ಕೆ ಕೂತುಕೊಳ್ಳೋದು. ಕೂತೂಕೂತೇ ನನ್ನ ಸೊಂಟ ಎಲ್ಲ ಹಿಡಿದುಕೊಂಡು ಬಿಟ್ಟಿದೆ, ತಾಯೀ. ಕೂತೇ ಕಳೀತು ನನ್ನ ಆಯುಷ್ಯ ಎಲ್ಲ. ಇನ್ನು ಮಲಗಿ ಕಾಲು ಚಾಚೋದೊಂದೇ ಬಾಕಿ........ನನ್ನ ವಿಷಯ ಕಟ್ಟಿಕೊಂಡೇನು, ಭಾಗಮ್ನೋರೆಲ್ಲಿ, ಕಾಣೋದೇ ಇಲ್ಲವಲ್ಲಾ?

**ವಿಮಲಾ :**

ಅವರು ಊರಿನಲ್ಲಿ ಇಲ್ಲ. ಯಾರದ್ದೋ ಜೊತೆ ಸಿಕ್ಕಿತು. ಕಾಶೀಯಾತ್ರೆ ಮಾಡಿಕೊಂಡು ಬರೋಣ ಅಂತ ಹೊರಟಿದ್ದಾರೆ.

**ತುಳಸಮ್ಮ :**

ಅಯ್ಯೋ, ಎಂಥ ಕೆಲಸ ಆಗಿಹೋಯ್ತೇ ತಾಯೀ !

**ವಿಮಲಾ :**

ಅವರಿಂದ ಏನಾದರೂ ಆಗಬೇಕಾಗಿತ್ತೇನು?

**ತುಳಸಮ್ಮ :**

ಇಲ್ಲವಮ್ಮ—ಅಲ್ಲಾ, ಹೀಗೇ ಅಂತ ಗೊತ್ತಿದ್ದಿದ್ದ್ರೆ, ನಾನೂ ಅವರ ಜೊತೇಲಿ ಹೊರಟು ಬಿಡುತಾ ಇದ್ದೆನೇ ! ಬೇಕಮ್ಮಾ ಬೇಕು, ಅದಕ್ಕೂ ಲಭ್ಯ.....ಅದು ಹೋಗಲಿ, ಅಂತೂ ಅವರು ಇಲ್ಲಾ ಅನ್ನಿಸಲಿಲ್ಲವಲ್ಲಾ : 'ಒಳಕ್ಕೆ ಬನ್ನಿ, ಕೂತ್ಕೊಳ್ಳಿ' ಅಂತ ಬಾಯಿತುಂಬ ನಾಲ್ಕು ಉಪಚಾರದ ಮಾತು ಅಂದೆಯಲ್ಲೇ ತಾಯೀ, ಅಷ್ಟೇ ಸಾಕು. ಬದುಕಿ ಬಾಳೋ ಮನೇ ಅಂದ ಮೇಲೆ, ಗಂಡಸಿನ ಕೈಯಿ

ಬತ್ತೀನವ್ವ ಬೇಕಾದ್ರೆ ; ಅಂಜಿಕೆ ಗಿಂಜಿಕೆ ಆದ್ರೆ ಜೊತೆಗಿರ್ತೀನಿ, ನಿಮ್ಮ ಯಜಮಾನ್ರು ಬರೋಗಂಟ.

**ವಿಮಲಾ :**

ಏನೂ ಬೇಡಾ ಬಿಡು. ಈಗಿನ ಕಾಲದಲ್ಲಿ ರೇಡಿಯೋ ಇದೆಯಲ್ಲ ಒಂಟಿಯಾಗಿರೋರ ಜೊತೆಗೆ.

**ನಿಂಗಮ್ಮ :**

ಅದೇನು ರೇಡಿಯೋನೋ ಏನೋ, ನಾನು ಕೆಲಸಕ್ಕೆ ಹೋಗೋ ಮನೇಲೆಲ್ಲಾ ಅದು ಕಿರಿಚೋದು ಕೇಳಿ ಕೇಳಿ ನನಗೂ ಸಾಕಾಗದೆ ಕಣ್ರವ್ವ. ನಿಮ್ಮಂತ ಮಕ್ಕಿಲ್ಲದೋರ ಮನೇಲಿ ಒಂದ್ಸಮಯ ರೇಡಿಯೋ ಇದ್ರೂ ಸರಿ ಅನ್ನೋ ಬಹುದು. ಮನೆ ತುಂಬ ಮಕ್ಕಿರೋ ಮನೇಲಿ ಯಾಕ್ರವ್ವ ರೇಡಿಯೋ? ನಿಮಗೊಂದು ಮೊಗಾ ಆಗಲಿ, ನೋಡೀವ್ರಂತೆ, ಅದರ ಮುಂದೆ ಈ ರೇಡಿಯೋನ ನೀವಾಳ್ಸಿ ಎಸೀತೀರ.

**ವಿಮಲಾ :**

(ಹುಸಿ ಮನಸಿನಿಂದ) ಸುಮ್ನೆ ಹೋಗೆ, ಹಾಸ್ಯ ಮಾಡಬೇಡ.

[ನಿಂಗವ್ವ ನಿಷ್ಕ್ರಮಿಸುವಳು.]

[ವಿಮಲ ಮತ್ತೆ ರೇಡಿಯೋ ತಿರುಗಿಸುವಳು. ರೇಡಿಯೋವಿನಿಂದ—

"ಯಾಕಳುವೆ ಎಲೆ ರಂಗ ಬೇಕಾದ್ದು ನಿನಗಿದೆ
ನಾಕೆಮ್ಮೆ ಕರೆದ ನೊರೆಹಾಲು
ನೊರೆಹಾಲು ಸಕ್ಕರೆ ನೀ ಕೇಳಿದಾಗ ಕೊಡುವೆನು.
ಅಳುವ ಕಂದನ ತುಟಿ ಹವಳದ ಕುಡಿಯಂತೆ
ಕುಡಿಹುಬ್ಬು ಬೇವಿನೆಸಳಂತೆ ; ಕಣ್ನೋಟ
ಶಿವನ ಕೈಯಲಗು ಹೊಳೆದಂತೆ....."

ಎಂಬ ಜೋಗುಳದ ಹಾಡು ಇಂಪಾಗಿ ಅಲೆಅಲೆಯಾಗಿ ಕೇಳಿ ಬರುತ್ತಿರುವಾಗ— ವಿಮಲ ತಟ್ಟನೆ ರೇಡಿಯೋ ನಿಲ್ಲಿಸುವಳು ; ಬರಿಯ ತೊಟ್ಟಿಲನ್ನು ದಿಟ್ಟಿಸಿ ನೋಡುತ್ತಿದ್ದು, ನಿಟ್ಟುಸಿರು ಬಿಡುವಳು. ರೇಡಿಯೋ ಗೀತದ ಧಾಟಿಯಲ್ಲೆ ತಾನೊಂದು ಜೋಗುಳದ ಪದವನ್ನು ಮೆಲುದನಿಯಲ್ಲಿ ಹೇಳಿಕೊಳ್ಳುವಳು.....]

(ಹಾಡು ನಿಲ್ಲಿಸಿ) ನಿಂಗಿ ಹೇಳಿದ್ದು ನಿಜ. ಜೀವಂತ ರೇಡಿಯೋ ಅದರ ಮುಂದೆ ಈ ರೇಡಿಯೋ....[ಹೊರಗಿನಿಂದ, "ಭಾಗಮ್ನೋರೇ ಭಾಗಮ್ನೋರೇ" ಎಂಬ ಕೂಗು ಕೇಳಿ ಬರುವುದು.]

ಅಂದರೆ ಅಸಹ್ಯ . ನನ್ನ ಅತ್ತೆ ಆದಾಗ ಹಾಗೆ ಕರೆಯೋರಂತೆ' ಅಂದಳು. ಲೀಲಮ್ಮ ಆ ಹೊತ್ತಿನಿಂದ ಆ ಪುಣ್ಯಾತ್ಗಿತ್ತೀನ ಮಾತಾಡಿಸುತಾನೇ ಇರಲಿಲ್ಲ. ಎಷ್ಟಾಗಲಿ ಶ್ರೀಮಂತರ ಮಗಳಮ್ಮ ಅವಳು. ಆ ಬೆಡಗು, ಆ ಬಿಂಕ, ಆ ಬಿನ್ನಾಣ, ಆ ವಯ್ಯಾರ, ಆ ಅಲಂಕಾರ—ಸಿನಿಮಾದಲ್ಲಿ ನಾಟಕದಲ್ಲಿ ಪಾರ್ಟುಮಾಡೋರಿಗೂ ಇಲ್ಲವಮ್ಮ. (ವಿಮಲನ ಮುಖವನ್ನು ನೋಡಿ, ಎರಡು ಕ್ಷಣ ಮೌನವಾಗಿದ್ದು) ಸಿನಿಮಾಕ್ಕೆ ಹೋಗ್ತೀರಾ ನೀವು ಅಂತ ಕೇಳ್ತೀಯೇನೋ. ದುಡಿದು ದುಡಿದು ಸತ್ತು ಸುಣ್ಣವಾಗಿರುತ್ತಮ್ಮ, ಈ ದೇಹ. ಬೇಜಾರಾದಾಗ, ಕನ್ನಡದ್ದೋ ತೆಲುಗಿನದೋ ತಮಿಳಿನದೋ. ಚೆನ್ನಾಗಿದೆ ಅಂತ ಯಾರಾದರೂ ನೋಡಿದೋರು ಹೇಳಿದ್ರೆ ಹೋಗೋದುಂಟು, ತಾಯೀ, ಸಿನಿಮಾಕ್ಕೆ. ಯಾವಾಗಲಾದರೂ ಹಿಂದೀ ಸಿನಿಮಾಕ್ಕೂ ಹೋಗೋದುಂಟು; ಆದರೆ ಅದು ನನಗೆ ಹಿಡಿಸೋದಿಲ್ಲ. ಅಂದರೆ ಮಾತ್ರ. ಕಾಫೀ ಹಾಗೆ ಸಿನಿಮಾದ್ದು ಚಟ ಇಲ್ಲವಮ್ಮ, ನನಗೆ ಜೀವಾನಾದರೂ ಬಿಟ್ಟೇನು, ಕಾಫಿ ಬಿಟ್ಟಿರೋದಕ್ಕಾಗುವುದಿಲ್ಲವಮ್ಮ. ಮೆಣಸಿನ ಪುಡಿ ಕುಟ್ಟೋ ಮನೇಲೆಲ್ಲಾ ಕಾಫಿ ಕೊಡಿ ಅಂತ ನಿರ್ದಾಕ್ಷಿಣ್ಯವಾಗಿ ಕೇಳಿಬಿಡೋದೆ....

**ವಿಮಲಾ :**

(ಬೆರಗಿನೊಂದಿಗೆ, ದಿಗ್ಭ್ರಾಂತಮೌನದಿಂದ, ಆಲಿಸುತ್ತಿರುವಳು.)

**ತುಳಸಮ್ಮ :**

ನೀನೇನಾದರೂ ತಿಳಿದುಕೊಳ್ಳಮ್ಮ. ಇದ್ದದ್ದು ಇದ್ದಹಾಗೆ ಹೇಳಿಬಿಡೋದೆ ನನ್ನ ಸ್ವಭಾವ. ಯಾಕೆ ಹೇಳೋಕೆ ಬಂದೆ ಅಂದ್ರೆ, ನಿನ್ನ ಅತ್ತಿಗೆ ಇದಾಳಲ್ಲ, ತಿಳೀತೆ—

**ವಿಮಲಾ :**

(ಯತ್ನವಿಲ್ಲದೆ) ಹ್ಞೂ, ಲೀಲಮ್ಮ ತಾನೇ?

**ತುಳಸಮ್ಮ :**

ಅವಳೇ. ಕಾಫೀಗೆ ಕಲ್ಲು ಹಾಕಿಬಿಟ್ಟಳಮ್ಮ ಅವಳು. ಅಷ್ಟಕ್ಕೇ ಮುಗಿಯಿತು ಅಂದುಕೊಳ್ಳಬೇಡ. ವಾಡಿಕೆಯಾಗಿ ಕೊಡುತಾ ಇದ್ದ ಮೆಣಸಿನ ಪುಡಿ, ಕುಟ್ಟಿದ ಮೇಲೆ ಉಳಿಯೋ ಚರಲು, ಇದಕ್ಕೂ ಸೊನ್ನೆ ಸುತ್ತಿದಳು. 'ನಿಮಗೆ ಕುಟ್ಟಿದ್ದಕ್ಕೆ ಕೂಲಿ ಕೊಡೋದಿಲ್ವೆ? ನೀವು ತಗೊಳ್ಳೋ ಮೆಣಸಿನ ಪುಡೀಗೆ ಎಂಟಾಣೆ ಆಗುತ್ತೆ. ಒಂದು ಕಪ್ಪು ಕಾಫಿಗೆ ಒಂದೂವರಾಣೆ ಆಗುತ್ತೆ' ಅಂತ ರೇಗಿ ರೇಗಿ ಕೂಗಾಡಿಬಿಟ್ಟಳಮ್ಮ. ಮುಖಕ್ಕೆ ಮೊರ ಮೆಣಸಿನ ಪುಡಿ ಎರಚಿದ ಹಾಗಾಯ್ತು. ಆ ಹೊತ್ತಿನಿಂದ, ನಿಮ್ಮ ತಾಯಿ ಹೇಳಿ ಕಳಿಸಿದರೂ ಬರೋದೇ ಬಿಟ್ಟುಬಿಟ್ಟೆ.

ಹೆಂಗಸಿನ ಬಾಯಿ ಎರಡೂ ಚೆನ್ನಾಗಿರಬೇಕಮ್ಮಾ. ಊಟ ಬೇಡ ಉಡುಗೊರೆ ಬೇಡ, ಎರಡು ಒಳ್ಳೇ ಮಾತಿಗೇನಮ್ಮ ಬಂದಿರೋದು ಬರ? ಯಾಕೆ ಹೇಳೊಕೆ ಬಂದೆ ಅಂದ್ರೆ, ಇರಲಿ ಹೇಳ್ತೀನಿ.—ಲೀಲಮ್ಮ ಎಲ್ಲಿ?

**ವಿಮಲಾ :**

(ಬೆರಗಿನಿಂದ) ಲೀಲಮ್ಮ....ಲೀಲಮ್ಮನೇ? ಯಾರೋ ನಾನು ಕಾಣೆನೇ?

**ತುಳಸಮ್ಮ :**

ಕಾಣೆಯಾ ? ಇದೇನೇ ತಾಯೀ, ಹೀಗಂತೀ?—ನಿನ್ನನ್ನ ನಾನು ಕಾಣೆ, ನನ್ನನ್ನ ನೀನು ಕಾಣೆ. ಅದು ಸರಿ. ಭಾಗಮ್ನೋರೂ ಹೇಳುತಾನೇ ಇದ್ದರು, 'ಮಗಳನ್ನ ಗಂಡನ ಮನೆಗೆ ಕಳಿಸಿಕೊಟ್ಟದ್ದೇ ಕೊಟ್ಟದ್ದು, ಅವಳ ಮುಖಾನೇ ಕಾಣೆ' ಅಂತ. ಈಗಲಾದರೂ ನಿನ್ನ ಗಂಡ ದೊಡ್ಡ ಮನಸ್ಸು ಮಾಡಿ ತವರುಮನೆ ಅಂತ ನಿನ್ನನ್ನ ಇಲ್ಲಿಗೆ ಕಳಿಸಿಕೊಟ್ಟನಲ್ಲ, ಸಂತೋಷ.....(ಕ್ಷಣ ಬಿಟ್ಟು) ಬಸಿರಿ ಅಂತ ಕಾಣುತ್ತೆ, ಅದಕ್ಕೇ ಕಳಿಸಿ ಕೊಟ್ಟಿದಾನೆ.....

**ವಿಮಲಾ :**

(ನಗು ತಡೆಯಲಾರದೆ ಕೈಯಿಂದ ಬಾಯಿ ಮುಚ್ಚಿಕೊಳ್ಳುವಳು.)

**ತುಳಸಮ್ಮ :**

ನಿನ್ನ ಅತ್ತಿಗೇ ಹೆಸರು ಲೀಲಮ್ಮ ಅಲ್ಲವೇನೇ ತಾಯೀ?

**ವಿಮಲಾ :**

ನನ್ನ ಅತ್ತಿಗೆ !

**ತುಳಸಮ್ಮ :**

ಹೌದು ತಾಯೀ, ನಿನ್ನ ಅತ್ತಿಗೆ, ನಿಮ್ಮ ಅಣ್ಣನ ಹೆಂಡತಿ, ಲೀಲಮ್ಮ. ನಿಮ್ಮ ತಾಯಿ ಆಕೆಯನ್ನ 'ಲೀಲಮ್ಮಾ ಲೀಲಮ್ಮಾ' ಅಂತ ಕರೆಯೋರು. ನಿನ್ನ ಅಣ್ಣ, 'ಲೀಲಾ' ಅಂತ ಮೃದುವಾಗಿ ಕೂಗೋರು. ನಾನೂ ಎಷ್ಟೋ ದೊಡ್ಡ ಮನುಷ್ಯರ ಮನೇಗೆಲ್ಲ ಹೋಗ್ತಿನಮ್ಮ, ಕೂಲಿ ಕೆಲಸಕ್ಕೆ. ಹೆಂಡತಿಯನ್ನ ಅಷ್ಟೊಂದು ಅನುನಯವಾಗಿ ಮಾತಾಡಿಸೋರನ್ನ ನಾನು ಕಂಡಿಲ್ಲ. ನಾನೂನೂ ಪ್ರೀತಿಯಿಂದಲೇ, ಗ್ರಹಚಾರ ಕಮ್ಮಿಯಾಗಿ, ಒಂದು ಸಲ 'ಲೀಲಾ' ಅಂತ ಕೂಗಿಬಿಟ್ಟೆ ಕಣಮ್ಮ. 'ನನ್ನ ಹೆಸರು ಲೀಲಾವತಮ್ಮ. ಲೀಲಾವತೀ ಅನ್ನಿ ಬೇಕಾದರೆ— ಅಂತ ನನ್ನ ಮೇಲೆ ಮಾತಿನ ಮಳೇನೇ ಸುರಿಸಿ ಬಿಟ್ಟಳು. ಕಾದ ಮರಳನ್ನ ತಲೇಮೇಲೆ ಸುರಿದ ಹಾಗಾಯ್ತು. "ಹೋಗಲಿ, ನಿಮ್ಮ ಅತ್ತೆ ಕರೆಯೋಹಾಗೆ 'ಲೀಲಮ್ಮಾ' ಅಂತಲೇ ಕರೀತೇನೆ, ಆಗಬಹುದೇನಮ್ಮಾ?" ಅಂದೆ, ನಾನು. 'ನನಗೆ ಅಮ್ಮಗಿಮ್ಮ

ಗಂಗಾಮೃತ ಕೊಡುತೀಯ ತಾಯೀ? ನೀರುಮಜ್ಜಿಗೆ ಕೊಟ್ಟರೆ— ಇನ್ನೂ ಪುಣ್ಯ ಬರುತ್ತೆ, ನಿನಗೆ.

**ವಿಮಲಾ :**

ಅಷ್ಟು ಹೊತ್ತಿನಿಂದ ನಿಂತೇ ಇದೀರಲ್ಲಾ ಕೂತುಕೊಳ್ಳಿ, ತರ್‍ತೀನಿ. (ಒಳಕ್ಕೆ ಹೋಗುವಳು.)

ತುಳಸಮ್ಮ :

ಎಷ್ಟೇ ಆಗಲಿ, ಸೊಸೆ ಸೊಸೆಯೇ, ಮನೆ ಮಗಳು ಮನೆಮಗಳೇ ! ಅಂತೂ, ತುಂಬಾ ಬದಲಾಗಿ ಕಾಣಿಸುತ್ತೆ ಈ ತೊಟ್ಟಿ. ಆಗ ರೇಡಿಯೋ ಇರಲಿಲ್ಲ, ಬಾಗಿಲಿಗೆ ಈ ತೆರೆ ಇರಲಿಲ್ಲ, ಅಲಂಕಾರದ ತೋರಣ ಇರಲಿಲ್ಲ, ಬಟ್ಟೆ ಸ್ಟ್ಯಾಂಡು ಇರಲಿಲ್ಲ. ಶ್ರೀಮಂತರ ಮಗಳು ಆ ಲೀಲಮ್ಮ ಇಲ್ಲಿ ಇದ್ದದ್ದು, ಪಾಚಿಕಟ್ಕೊಂಡ ಕೆರೇಲಿ ತಾವರೆ ಇದ್ದಹಾಗಿತ್ತು. ನಡತೆ ನುಡಿತೆ ಹೇಗಾದರೂ ಇದ್ದುಕೊಂಡಿರಲಿ, ಒಳ್ಳೆ ರೂಪವಂತೆ ಆ ಲೀಲಮ್ಮ. ಎಂಥೋರ ಮನಸ್ಸನ್ನೂ ಭಸ್ಮ ಮಾಡೋ ಮೋಹಿನಿ!

**ವಿಮಲಾ :**

(ಪ್ರವೇಶಿಸಿ ಒಂದು ಲೋಟ ಕಾಫಿ ತಂದು ನೀಡುವಳು)

**ತುಳಸಮ್ಮ :**

(ಈಸಿಕೊಂಡು) ಅಬ್ಬಬ್ಬಬ್ಬಬ್ಬಾ ! ತಣ್ಣಗಿದೆ ಅಂದುಕೊಂಡಿದ್ರೆ ಎಷ್ಟು ಬಿಸಿ ಯಾಗಿದೆಯಮ್ಮಾ ಲೋಟ ! ನೀರುಮಜ್ಜಿಗೆ ಕೇಳಿದರೆ ಬಿಸಿ ಬಿಸಿ ಕಾಫಿ ತಂದು ಕೊಟ್ಟುಬಿಟ್ಟಿದ್ದೀಯೆ !

**ವಿಮಲಾ :**

ನಿಮಗೋಸ್ಕರ ಏನೂ ಮಾಡಲಿಲ್ಲ ಡಿಕಾಕ್ಷನ್ನು ಒಲೇಮೇಲೇನೆ ಇತ್ತು, ಮಾಡಿಕೊಂಡು ಬಂದೆ. ನಿಂತೇ ಇದ್ದೀರಲ್ಲ, ಕುಡಿಯೋದಾದರೂ ಕೂತು ಕೊಂಡು ಕುಡೀರಿ.

**ತುಳಸಮ್ಮ :**

ಆಗಲಮ್ಮ : ನಿನ್ನ ಹಾಗೆ, 'ಕೂತ್ಕೋ' ಅಂತ ಬಾಯಿ ತುಂಬ ಹೇಳೋರು ಯಾರು. ಅಲ್ಲದೆ, ಕೂತ್ಕೊಂಡೇ ಕುಡೀಬೇಕು, ಕಾಫೀನ. ನೀರುಮಜ್ಜಿಗೆಯಾಗಿದ್ರೆ ನಿಂತ್ಕೊಂಡು ಹೊಯ್ಕೋಬಹುದಾಗಿತ್ತು. (ಕುಳಿತುಕೊಂಡು, ಕುಡಿದಾದ ಮೇಲೆ) ಒಳ್ಳೆ ಬಿಸಿಬಿಸಿ ಕಾಫಿ ಕೊಟ್ಟಿದ್ದೀ, ಭಾಗಮ್ನೋರು ಇಲ್ಲ ಅನ್ನಿಸಲಿಲ್ಲ, ಅವರು ಕೊಡ್ತಾ ಇದ್ದದ್ದೂ ಈ ಲೋಟದಲ್ಲೇ. ಒಂದೂವರೆ ಪಾವಿನದು. ಕಾಫಿ ತುಂಬ ಚೆನ್ನಾಗಿತ್ತಮ್ಮಾ, ಬಿಸಿಬಿಸಿಯಾಗಿ ನಿನ್ನ ಹೊಟ್ಟೆ ತಣ್ಣಗಿರಲಿ. (ಕ್ಷಣ ಬಿಟ್ಟು)

ಈ ಕಡೆ ಸುಳಿದು ವರ್ಷಕ್ಕೆ ಬಂತಮ್ಮ. ಇವತ್ತೇ ಇಲ್ಲಿಗೆ ಕಾಲಿಟ್ಟಿರೋದು. (ಸುತ್ತ ತಿರುಗಿ ನೋಡಿ, ದನಿ ತಗ್ಗಿಸಿ) ಲೀಲಮ್ಮ ಇಲ್ಲ ತಾನೇ?

**ವಿಮಲಾ :**

ನಿಶ್ಚಿಂತೆಯಾಗಿರಿ. ಆ ಹೆಸರಿನಾಕೆ ಇಲ್ಲಿ ಯಾರೂ ಇಲ್ಲ. ಸದ್ಯ ಬದುಕಿದೆ.—ಈ ಮನೇಲಿ. ಮೊದಲು ತುಂಬಾ ಹಿಂದೆ ಕೆಲಸಕ್ಕಿದ್ದು, ತಿಮ್ಮಕ್ಕ ಅಂತ, ಅವಳು ಸಿಕ್ಕಿ ಹೇಳಿದಳು, ದಾರೀಲಿ, 'ಲೀಲವ್ವ ಎಲ್ಲೋ ಕಾಣೋಕೆ ಇಲ್ಲ' ಅಂತ. ಅವಳ ಮಾತು ನಂಬಿಕೊಂಡು ಬರೋದೇನೋ ಬಂದೆ, ಆದರೆ ಅನುಮಾನ ಇದ್ದೇ ಇತ್ತು. ನೀನು ಹೇಳಿದ ಮೇಲೆ ಇನ್ನು ನಿಶ್ಚಿಂತೆಯಾಗಿರಬಹುದು—ಇಷ್ಟೆಲ್ಲಾ ಆಯ್ತು. ನಿನ್ನ ಹೆಸರು ಕೇಳೋದೆ ಮರೆತು ಹೋಯ್ತಲ್ಲಮ್ಮ ನಿನ್ನ ತಾಯಿ ಆಗಾಗ್ಗೆ ನೆನಸಿಕೊಳ್ತಾನೆ ಇದ್ದರು, ನಿನ್ನನ್ನ. ವಿಶಾಲಾಕ್ಷಮ್ಮ ಅಲ್ಲವೇನಮ್ಮ, ನಿನ್ನ ಹೆಸರು?

**ವಿಮಲಾ :**

(ಮುಗುಳುನಗೆಯೊಂದಿಗೆ) ಅಲ್ಲ, ವಿಮಲಾ ಅಂತ.

**ತುಳಸಮ್ಮ:**

ನನಗೂ ವಯಸ್ಸಾಗುತ್ತ ಬಂತು ಕಣಮ್ಮ, ಹಾಳಾದ್ದು ಮರವು. ವಿಮಲಾ ಅಂತಲೇ ಹೇಳುತ ಇದ್ದರೇನೊ, ಮರೆತುಹೋಗಿದೆ. ಲೀಲಮ್ಮ ಇದ್ದಾಗಲೇ ನಾನು ಕಣ್ಣಾರೆ ಕಂಡ ಕೆಲವು ಸಂಗತಿಗಳನ್ನ ನಿಮ್ಮ ತಾಯಿಗೆ ತಿಳಿಸಬೇಕೂ ಅಂತ ಮನಸ್ಸು ತುಡಿದುಕೊಳ್ಳುತ ಇತ್ತು. ಅತ್ತೆಗೂ ಸೊಸೆಗೂ ವಿರಸ ಯಾಕೆ ತಂದುಹಾಕಲಿ ಅಂತ ನಾನು ಬಾಯಿ ಬಿಗಿ ಹಿಡಿದುಕೊಂಡಿದ್ದೆ. ಸಂಸಾರ ಒಡೆಯೋದು ಎಷ್ಟು ಹೊತ್ತು, ಕುದುರಿಸೋದೀಗ ಕಷ್ಟ......ನೀನು ಯಾರಿಗೂ ತಿಳಿಸೋದಿಲ್ಲ ಅಂತಂದ್ರೆ, ಹೇಳ್ತೀನಿ. ನಿಮ್ಮ ತಾಯಿಗೂ ತಿಳಿಸಕೂಡದು, ತಿಳಿಯಿತೆ?

**ವಿಮಲಾ :**

(ನಕ್ಕು) ಯಾರಿಗೆ ತಾನೆ ಯಾಕೆ ತಿಳಿಸಬೇಕು ಹೇಳಿ. ನನಗೂ ಹೊತ್ತೇ ಹೋಗುತ ಇರಲಿಲ್ಲ. ನೀವು ಹೇಳೋದನ್ನೆಲ್ಲ ಕೇಳುತ ನಾನೂ ಮಂಕು ಬಡಿದೋಳಹಾಗೆ ಕುಳಿತುಬಿಟ್ಟೆ. ನೀವು ಹೇಳುತ ಇರೋದು, ಒಳ್ಳೇ ಕತೆ ಇದ್ದಹಾಗೆ ಇದೆ.

**ತುಳಸಮ್ಮ :**

ಕತೆ ಮುಂದಿದೆ, ಹೇಳ್ತೀನಿ ಕೇಳೋವಿಯಂತೆ. ಹಾಗಂತ ಸುಳ್ಳು ಅಂತ ತಿಳಿದುಕೋಬೇಡ. ಎಲ್ಲ ನಾನು ಕಣ್ಣಾರೆ ಕಂಡದ್ದು. ಅದನ್ನ ನಿಧಾನವಾಗಿ ಹೇಳ್ತೀನಿ.—ತುಂಬ ಸೆಕೆ, ಬಾಯಾರಿಕೆಯಾಗುತ ಇದೆ ಕಣಮ್ಮ. ಒಂದು ಥಾಲಿ

ಬರುತ್ತಾ ಇದ್ದೋಳು, ಲೀಲೂ ಗಂಡನ್ನ, ಬಾಗಮ್ನೋರ ಮಗನ್ನ, ನಾನು ಕಾಣೆನೇ !

**ವಿಮಲಾ :**

(ತಡೆಯಲಾಗದೆ ನಗುವಳು.)

**ತುಳಸಮ್ಮ :**

ನನ್ನಾಣೆಗೂ ಹೇಳ್ತೀನಿ, ನಂಬಿದರೆ ನಂಬು ಬಿಟ್ಟರೆ ಬಿಡು. ನಾನು ಕಂಡಾಗಲೆಲ್ಲ ಯಾವಾಗ್ಲೂ ಮೂರ್ತೀ ಜೊತೇಲಿ ಬಂದಿರಲಿಲ್ಲ ಲೀಲಮ್ಮ—ಯಾರು ಅಂತೀಯ, ಜೊತೇಲಿದ್ದೋರು ?

**ವಿಮಲಾ :**

(ಕುತೂಹಲದ ಪ್ರಶ್ನಾರ್ಥಕ ನೋಟದ ನಟನೆ.)

**ತುಳಸಮ್ಮ :**

ಜರೀ ಪೇಟದ ದೊಡ್ಡ ಮನುಷ್ಯರು, ಹುರೀಮೀಸೆ ಹನುಮಂತರಾಯರು! ಆಮೇಲೆ ನನಗೆ ಗೊತ್ತಾಯ್ತು, ಅದು ಯಾವುದೋ ಸುಡುಗಾಡು ಸ್ತ್ರೀ ಸಮಾಜವಂತೆ, ಅದರ—ಮೇನೇಜ್ರೋ ಪಾನೇಜ್ರೋ. ಅದು ಏನೋ ಕನ್ನಡದಲ್ಲೇ ಹೇಳಿದರಮ್ಮ....ಎಂಥದ್ದೋ ಯಕ್ಷಿಣಿ ಅಂತ..

**ವಿಮಲಾ :**

(ನಕ್ಕು) ಅಧ್ಯಕ್ಷಿಣಿ ಅಂತಲೇ?

**ತುಳಸಮ್ಮ :**

ಹ್ಞೂ ಕಣೇ ತಾಯಿ, ಅಧ್ಯಕ್ಷಿಣಿ ಅಂತ—ಆಕೇ ಯಜಮಾನ್ರಂತೆ, ಅವರ ಜೊತೇಲಿ—ಜೊತೇಲಿ ಅಂದ್ರೆ ಇಲ್ಲಿ ನಾನು ನೀನು ಕೂತಿರೋ ಹಾಗಲ್ಲವೇ ತಾಯೀ,—ಪಕ್ಕಪಕ್ಕದಲ್ಲಿ, ಒತ್ತೊತ್ತೀಲಿ, ಗಂಡಹೆಂಡಿರ ಹಾಗೆ—ಹಿಂದಾಗಡೆ ಎರಡು ರೂಪಾಯಿ ಜಾಗದಲ್ಲಿ ಕುಳಿತಿದ್ದಳಮ್ಮ ! ಅಲ್ಲೇ ಪಕ್ಕದಲ್ಲೇ ನನ್ನಂಥ ಗತಿಗೆಟ್ಟ ಹೆಂಗಸರಿಗೇ ಅಂತಲೇ ಒಂದು ಮೂಲೆ ಮಾಡಿದಾರಮ್ಮ, ಸಿನಿಮಾ ಮನೇಲಿ—ಸ್ತ್ರೀಯರಿಗೆ ಪ್ರತ್ಯೇಕ ಸ್ಥಳ ಅಂತ ಮರ್ಯಾದೆಯಾಗಿ ಕರೀತಾರೆ ಅದನ್ನ. ಒಂದು ವಿಷಯಕ್ಕೆ, ಅದು ಒಳ್ಳೇದೇ ಅನ್ನು. ಮನೇಲೇ ಆಗಲಿ ಹೊರಗೇ ಆಗಲಿ, ಹೆಂಗಸರಿಗೆ ಒಂದು ಮೂಲೇ ಇರೋದೇ ಒಳ್ಳೇದು ತಾಯಿ, ಮೂಲೇ ಬಿಟ್ಟು ಬೀದೀಗೆ ಬಂದರೆ, ಸೂಳೆಯಾಗಿ ಬಿಡ್ತಾಳೆ ಹೆಂಗಸು!—

**ವಿಮಲಾ :**

ಎಲ್ಲೋ ಸಾವಿರಕ್ಕೊಬ್ಬರು ಹಾಗಾಗಬಹುದು. ಎಲ್ಲರೂ ಹಾಗಾಗುತಾರೆ

ಬಾಣಂತನಕ್ಕೆ ಬಂದಿದ್ದೀ ಅಂತ ಕಾಣುತ್ತೆ. ಮನೆತನದ ತೊಟ್ಟಿಲಮ್ಮ ಇದು, ಖಾಲಿ ಇರಬಾರದು, ಹೀಗೆ.

**ವಿಮಲಾ :**

(ನಗುತ್ತ) ಅಂಥಾದ್ದೇನಿಲ್ಲ !

**ತುಳಸಮ್ಮ :**

ಹೋಗಲಿ ಬಿಡು. ಸುಮ್ಮನೆ ಬಂದಿದ್ದೀ ಅಂತ ಕಾಣುತ್ತೆ, ತವರು ಮನೇಗೆ— ಇರಲಿ, ಆ ಲೀಲಮ್ಮನ ವಿಚಾರ ಕೇಳು—

**ವಿಮಲಾ :**

(ಮುಗುಳುನಗೆ ನಗುತ್ತ) ಅದೇನು ಹೇಳೇ ಬಿಡಿ. ಕೇಳೇಬಿಡೋಣ.

**ತುಳಸಮ್ಮ :**

ಕೇಳಮ್ಮ ಕೇಳು, ಹೇಳ್ತೀನಿ, ಆ ಚಿತ್ರಾಂಗೀ ಕತೇನ—ನಾನು ಆಗಲೇ ಹೇಳಿದೆನಲ್ಲ. ಒಂದೊಂದು ಸಲ ಸೀನೀಮಾಕ್ಕೆ ಹೋಗೋದು ಉಂಟು ಅಂತ. ಲೀಲಮ್ಮನ್ನ ಎರಡು ಮೂರು ಸಲ ಕಂಡಿದ್ದೆ ಕಣೇ ತಾಯೀ ಸಿನಿಮಾ ಮನೇಲಿ (ಕ್ಷಣ ಬಿಟ್ಟು) ಅವಳು ಸೀನೀಮಾಕ್ಕೆ ಹೋದದ್ದರಲ್ಲಿ ತಪ್ಪೇನು ಅಂತ ಕೇಳ್ತೀಯೇನೋ ನೀನು? ಮಹರಾಯ್ತಿಯಾಗಿ ಹೋಗಲಿ, ಬೇಡ ಅಂದೋರು ಯಾರು? ಈಗ, ನೀನು—ನಿನ್ನ ಗಂಡನ ಜೊತೆ ಹೋದರೆ ಯಾರು ಬೇಡ ಅಂತಾರೆ? ನಿನ್ನ ಗಂಡ ಇಲ್ಲಿ ಇಲ್ಲ ಅಂತೀಯೇನೋ—ನಿನ್ನ ತಾಯಿಯ ಜೊತೇಲೋ ಅಣ್ಣನ ಜೊತೇಲೋ ಹೋದರೆ ವೈನವಾಗಿರುತ್ತೆ. ಒಬ್ಬಳೇ ಹೋದರೂ ಚೆನ್ನಲ್ಲ. ಯಾರು ಯಾರದೋ ಜೊತೆ ಹೋದರೂ ಭೂಷಣವಲ್ಲ. ಋಷಿಪಂಚಮಿ ಮಾಡಿ ಆಯ್ತಮ್ಮ, ನಾನು ಕೂಡ ಒಬ್ಬಳೇ ಹೋಗೋದಿಲ್ಲ....

**ವಿಮಲಾ :**

(ತಡೆಯಲಾಗದೆ ನಗುವಳು)

**ತುಳಸಮ್ಮ :**

ನಮ್ಮದೇ ಒಂದು ತಂಡ ಇದೆ. ಹರಿಕಥೆ, ಪುರಾಣ. ಸಿನೀಮಾ ನೋಟ ನುಡಿಗೆ ಎಲ್ಲಾತಕ್ಕೂ ನಾವು ಜೊತೆ, ಹೆಂಗ್ಹೆಂಗಸರು. ಅಂಥಾದ್ದರಲ್ಲಿ, ಆ ಲೀಲಮ್ಮ—ಒಬ್ಬಳೇನೂ ಅಲ್ಲ!......

**ವಿಮಲಾ :**

ಅವಳೂ ತನ್ನ ಗಂಡನ ಜೊತೇನೇ ಹೋಗಿರಬಹುದಲ್ಲ?

**ತುಳಸಮ್ಮ :**

ಇದೇನಮ್ಮ ಹೀಗಂತೀ ! ನಾಚಿಗ್ಗೇಡು ! ಈ ಮನೇಗೆ ಲಾಗಾಯಿತಿನಿಂದ

ಜರೀಪೇಟದೋನ ಜೊತೇನೇ ಹೋದದ್ದನ್ನೂ ಕಂಡೆ. ಇಷ್ಟೆಲ್ಲಾ ನಡೆದದ್ದು, ಎರಡು ಮೂರು ವರ್ಷದ ಹಿಂದೆ.

**ವಿಮಲಾ :**

ಇಷ್ಟೇ ತಾನೆ?

**ತುಳಸಮ್ಮ :**

ಇಷ್ಟಕ್ಕೇ ಮುಗೀಲಿಲ್ಲ, ಕೇಳು ಇವತ್ತು ಏನಾಯ್ತು ಅಂತೀಯ?

**ವಿಮಲಾ :**

ಏನಾಯ್ತು?

**ತುಳಸಮ್ಮ :**

ನಾನು ಇದೇ ಬೀದೀಲಿ ಕಡೇಮನೆ ವೆಂಕಮ್ನೋರ ಮನೆಗೆ ಹೋಗುತಾ ಇದ್ದೆ, ಕುಂಟ್ಕೊಂಡ್ ಕುಂಟ್ಕೊಂಡು. ದಾರೀಲಿ ಯಾರು ಸಿಕ್ಕಿದರು, ಗೊತ್ತೆ ?

**ವಿಮಲಾ :**

ಜರೀ ಪೇಟದ ಹುರೀಮೀಸೆಯೋರೇ?

**ತುಳಸಮ್ಮ :**

ಅಲ್ಲವಮ್ಮ, ಅವರಲ್ಲ. ಈ ಬೀದಿಗೆ ಬಂದಾರೇ, ಅವರು ? ಅವರಲ್ಲ. ಅವಳೊಬ್ಬಳೇನೇ ಸಿಕ್ಕಿದಳು. ಆದರೆ, ಹಿಂದಿನ ಲೀಲಮ್ಮನ ಹಾಗೆ ಇರಲೇ ಇಲ್ಲ ಅವಳು ಅಂದರೆ, ಅವಳ ರೂಪ ಎಲ್ಲೂ ಹೋಗಿಲ್ಲ. ನಡತೆಗೂ ರೂಪಕ್ಕೂ ಏನು ಸಂಬಂಧ ಹೇಳು? ನಡತೆ ಕೆಟ್ಟ ಮೇಲೆ, ಆ ಹಾಳು ರೂಪ ಇದ್ರೇನು ಬಿಟ್ರೇನು ತಿಪ್ಪೇಮೇಲೆ ಬಿದ್ದ ಬೆಳದಿಂಗಳ ಹಾಗೆ ?

**ವಿಮಲಾ :**

ಅನೇಕವೇಳೆ. ನಡತೆ ಕೆಡೋಕೆ ಆ ರೂಪೇ ಕಾರಣವಾಗಿಬಿಡುತ್ತೆ, ವೆಂಕಮ್ನೋರೆ?

**ತುಳಸಮ್ಮ :**

ನಾನು ವೆಂಕಮ್ಮ ಅಲ್ಲ ಕಣೇ, ತಾಯೀ. ಆಕೆ ಆ ಕಡೇಮನೇ ಮಡೀ ಹೆಂಗಸರು. ಇಷ್ಟಕ್ಕೂ ಹೆಸರೇನು ಮಾಡುತ್ತೆ ಅಂತ ಇಟ್ಕೋ. ಆ ಹೆಸರಿನಿಂದ ಕೂಗಿದರೆ ನಾನೂ ಹಾಗೇ ಆಗಿಹೋಗ್ತೇನೆಯೇ? ನಮ್ಮ ಯಜಮಾನ್ರು ಕಲ್ಲುಗುಂಡಿನಹಾಗೆ ಮನೇಲಿ ಸುಖವಾಗಿದಾರಮ್ಮ. ಸೋಮಾರಿಗಳಾಗಿದ್ರೂ ನನ್ನ ಮಾಂಗಲ್ಯಾನ ಭದ್ರವಾಗಿ ಕಾಪಾಡಿಕೊಂಡು.......

ಅನ್ನೋದಕ್ಕಾಗುತ್ತೆಯೇ? ಎಲ್ಲರೂ ಘೋಷಾಪದ್ಧತಿ ಅನುಸರಿಸೋದಕ್ಕಾಗುತ್ತೆಯೇ? ಹೆಂಗಸು ಬೀದಿಯಲ್ಲಿ ನಡೆದಾಡೋದೇ ತಪ್ಪೆ ?

**ತುಳಸಮ್ಮ :**

ಬೀದೀಲಿ ನಡೆದಾಡದೆ ಬೀಗ ಹಾಕ್ಕೊಂಡು ಬಾಗಿಲೊಳಗೇ ಕುಕ್ಕರಿಸಿ ಕೊಂಡಿರಬೇಕು ಅಂತ ಯಾರು ಹೇಳ್ತಾರೆ ? ನನ್ನೇ ತಗೊಳ್ಳಿ : ಆ ಬೀದಿ ಈ ಬೀದಿ ಅಂತ ತಿರುಗದೆ ಹೋದರೆ ನನ್ನ ಹೊಟ್ಟೇ ಪಾಡೇ ನಡೆಯೋದಿಲ್ಲವಲ್ಲೇ, ತಾಯೀ ? ಘೋಷಾ ಇಲ್ಲ ಅಂತಂದ್ಬಿಟ್ಟು ವೇಷಾ ಹಾಕಿಕೊಂಡು, ನಟುವರೋಳ ಹಾಗೆ ನಲಿದಾಡುತ ಬೀದಿಬೀದಿ ಅಲೆದರೆ ಚೆನ್ನಾಗಿರುತ್ತೆಯೆ?

**ವಿಮಲಾ :**

(ಮೌನ.)

**ತುಳಸಮ್ಮ :**

ನಾನು ಹೇಳಿದ್ದು ಸರಿ ತಾನೆ? ಇರಲಿ, ಮುಂದಕ್ಕೆ ಕೇಳು—ಯಾಕೆ ಹೇಳೋಕೆ ಬಂದೆ ಅಂದ್ರೆ—ಅದು ಏನು ಹೇಳುತಾ ಇದ್ದೆ?

**ವಿಮಲಾ :**

ಅದೇ, ಸಿನಿಮಾದಲ್ಲಿ—

**ತುಳಸಮ್ಮ :**

ಹ್ಞಾ—ಸಿನಿಮಾ ಮನೇಲಿ, ಲೀಲಮ್ಮನ್ನ, ಆ ಜರೀ ಪೇಟದ ಹುರಿ ಮೀಸೆಯೋನ ಸಂಗಡ, ಒಂದು ಸಲ ಅಲ್ಲ, ಎರಡು ಸಲ ಅಲ್ಲ, ಮುಟ್ಟಿದ್ದಕ್ಕೆ ಮೂರು ಸಲ ಅಂತಾರಲ್ಲ ಹಾಗೆ, ಮೂರು ಸಲ ಕಂಡೆ ಕಣೇ, ತಾಯೀ.

**ವಿಮಲಾ :**

ಸಿನಿಮಾ ಅಂದ್ರೆ ಮೊದಲೇ ಕತ್ತಲೇ ಮನೆ. ನೀವು ಯಾವುದೋ ಗಮನದಲ್ಲಿ ಯಾರನ್ನೋ ಕಂಡು ಯಾರೋ ಅಂತ ಮೋಸ ಹೋಗಿರಬಹುದಲ್ಲ?

**ತುಳಸಮ್ಮ :**

ಏನು ಉದ್ದಕ್ಕೂ ಕತ್ಲೆ ಮನೆಯೆ? ಮೊದಲು ದೀಪ ಹಚ್ಚಿರೋದಿಲ್ವೆ? ಮಧ್ಯದಲ್ಲಿ ದೀಪ ಬಿಡೋದಿಲ್ವೆ?—ಕಳ್ಳತನ ಮೋಸ ಮಾಡಬಾರದ ಕೆಲಸ ಮಾಡೋರೆಲ್ಲ, ಯಾರಿಗೂ ಕಾಣೋದಿಲ್ಲ, ಕತ್ಲೇ ಮನೇ ಆಟ ಅಂತಲೇ ಮನಸೋ ಇಚ್ಛೆ ಆಡ್ತಾರೆ, ತಾಯೀ; ಇದ್ದಕ್ಕಿದ್ದ ಹಾಗೆ ದೀಪ ಹೊತ್ಕೊಂಡಾಗಲಲ್ವೆ, ಅವರಿಗೆ ಗೊತ್ತಿಲ್ಲದ ಹಾಗೆ, ಎಲ್ಲಾನೂ ಬೆಳ್ಳಂಬೆಳಕಾಗೋದು?—ಲೀಲಮ್ಮನ ಕತ್ಲೇ ಮನೆ ಆಟ ಬಯಲಾದದ್ದೂ ಹಾಗೇನೇ. ಸಿನೀಮಾ ಮುಗಿದ ಮೇಲೆ, ಹುರೀಮೀಸೆ

**ವಿಮಲಾ :**

ಹರಿಕಥೆಗೆ ಹೋಗಿದ್ದಿರೋ?

**ತುಳಸಮ್ಮ :**

ಅದೂ ಇಲ್ಲವಲ್ಲಾ !......ಯಾಕೆ ?

**ವಿಮಲಾ :**

ನಿದ್ದೆಗಿದ್ದೆ ಕೆಟ್ಟಿದ್ದೀರೇನೋ ಅಂತ ಕೇಳಿದೆ, ಅಷ್ಟೆ.

**ತುಳಸಮ್ಮ :**

ಚೆನ್ನಾಗಿ ನಿದ್ದೆ ಮಾಡಿದೆನಲ್ಲೇ ತಾಯೀ, ನಿನ್ನೆ ರಾತ್ರಿ. ಒಂದು ಕನಸು ಕೂಡ ಬೀಳಲಿಲ್ಲ. ರಟ್ಟೆ ಮುರಿಯ ದುಡಿಯೋಳಿಗೆ ರಾತ್ರಿ ನಿದ್ರೆ ಬರದೆ ಇರುತ್ತೆಯೆ?

**ವಿಮಲಾ :**

ಹಾಗಾದರೆ, ನೀವು ಯಾರಮನೆಗೋ ಹೋಗಬೇಕು ಅಂತ ಮರೆತು ನಮ್ಮ ಮನೆಗೆ ಬಂದುಬಿಟ್ಟಿದೀರಿ ಅಂತ ಕಾಣುತ್ತೆ—ಲೀಲಮ್ಮನ್ನ ಕಂಡಹಾಗೆ! (ನಗುವಳು)

**ತುಳಸಮ್ಮ :**

ಈ ಮನೇನ, ಭಾಗಮ್ನೋರ ಮನೇನ. ಎರಡು ಮೂರು ವರ್ಷಕಾಲ ತಪ್ಪದೆ ತಿಂಗಳಿಗೊಂದುಸಲ ಎರಡು ತಿಂಗಳಿಗೊಂದುಸಲ ಕಾಫಿ ಕುಡಿದ ಮನೇನ, ಮರೆಯೋಣ ಅಂದ್ರೇನೇ ತಾಯಿ಼, ನಾಚಿಗ್ಗೇಡು ! ನೀನು ಆಗ ಇರಲಿಲ್ಲ, ದಿಟ—ಈ ರೇಡಿಯೋನೂ ಇರಲಿಲ್ಲ, ದಿಟ—ಆದರೆ, ಈ ತೊಟ್ಲು, ಈ ಖಾಲಿ ತೊಟ್ಲು, ಈ ದೆಯ್ಯ ತೊಟ್ಲು, ಕರೀಮರದ್ದು, ಇದನ್ನ ಹೇಗಮ್ಮ ಮರೆಯಲಿ? ಹೊಗಲಿ, ನಿಮ್ಮ ತಾಯಿಯ ಹೆಸರು ಭಾಗಮ್ನೋರು ಹೌದೋ ಅಲ್ಲವೋ?

**ವಿಮಲಾ :**

ಅವರ ಹೆಸರು ಭಾಗಮ್ಮನೋರು, ದಿಟ—ಆದರೆ, ಅವರು ನನ್ನ ತಾಯಿ ಅಲ್ಲ, ಅತ್ತೆ ; ಸ್ವಂತ ಅತ್ತೆ.

**ತುಳಸಮ್ಮ :**

(ಬೆರಗಾಗಿ) ನೀನು ಭಾಗಮ್ನೋರ ಸೊಸೇನೇ?

**ವಿಮಲಾ :**

ಹೌದು ; ಖಂಡಿತವಾಗಿಯೂ ಸೊಸೆ. ಅವರು ನನ್ನ ಅತ್ತೆ. ಆದರೆ, ತಾಯಿಗಿಂತ ಹೆಚ್ಚು ಪ್ರೀತಿಯಿಂದ ಕಂಡುಕೊಂಡರು, ಇದ್ದ ಮೂರು ದಿನ......

**ತುಳಸಮ್ಮ :**

**ವಿಮಲಾ :**

ಆಮೇಲೆ?

**ತುಳಸಮ್ಮ :**

ಏನು ಹೇಳುತಾ ಇದ್ದೆ?

**ವಿಮಲಾ :**

ಅದೇ, ಲೀಲಮ್ಮ ಮೊದಲಿನ ಹಾಗೇ ಇದ್ದಳು ಅಂತ.

**ತುಳಸಮ್ಮ :**

ಹ್ಞೂ, ಮೊದಲಿನ ಹಾಗೇ ಇದ್ದಳು. ಅದೇ ಪ್ರಜ್ವಲಿಸೋ ರೂಪ. ಆದ್ರೆ, ಆ ಬೆಡಗು ಬಿನ್ನಾಣ ಉಡಿಗೆ ತೊಡಿಗೆ ಎಲ್ಲಾ ಎಲ್ಲೋ ಮಾಯವಾಗಿತ್ತು. ಕೂದಲೆಲ್ಲಾ ಕೆದರಿತ್ತು. ಒಳ್ಳೇ ಹುಚ್ಚೀ ಹಾಗೆ ಕಾಣುತ ಇದ್ದಳು. ಒಂದು ಮಗೂನ ಎತ್ತಿಕೊಂಡು ಈ ಮನೇ ಹತ್ತಿರಾನೇ ಬರುತಾ ಇದ್ದಳು. "ಲೀಲಮ್ಮ ಅಲ್ವೇ ತಾಯೀ?" ಅಂತ ಮೆಲ್ಲಗೇನೇ ಕೇಳಿದೆ. "ಲೀಲಮ್ಮ? ಲೀಲಮ್ಮ ಎಲ್ಲಿದಾಳೆ. ಅವಳು ಸತ್ತುಹೋದಳು. ಇನ್ನು ಮೇಲೆ ಬೀದೀಲಿ ಕಂಡಕಂಡೋರನ್ನೆಲ್ಲ ಹಾಗೆ ಮಾತಾಡಿಸಬೇಡಿ, ತಿಳಿಯಿತೆ?" ಅಂತ ನನ್ನ ಮೇಲೆ ಉರಿದುಬಿದ್ದಳು. ಮುಖಾನಾದರೂ ಮರೆತುಹೋಗಬಹುದು. ಧ್ವನಿ ಮಾತ್ರ ಮರೆಯೋದಿಲ್ಲ ತಾಯೀ. ಲೀಲಮ್ಮನ ಧ್ವನೀನೇ, ನನಗೆ ಎಳ್ಳಷ್ಟೂ ಸಂದೇಹವೇ ಇಲ್ಲ. ಹಾಗಾದರೆ ತಿಮ್ಮಕ್ಕ ಹೇಳಿದ್ದು ಸುಳ್ಳೇ ಅಂತ ಅನ್ನಿಸಿತು. ಲೀಲಮ್ಮನೇ ಯಾವಾಗ 'ನಾನು ಲೀಲಮ್ಮ ಅಲ್ಲ' ಅಂತ ಇಲ್ಲಿ ಬರೋದಕ್ಕೆ ಅಂತ ನಿಂತಿದ್ದೋಳು ಮುಂದಕ್ಕೆ ಹೊರಟು ಹೋದಳೋ ಇಲ್ಲವೋ, ನನಗೂ ಏನೋ ಒಂದು ತರಹ ಆಯ್ತು. ಹೇಗಿದ್ರೂ ನಿಮ್ಮ ಮನೇ ಕಡೇನೇ ಬರುತಾ ಇದ್ದೆನಲ್ಲಾ—ಭಾಗಮ್ನೋರನ್ನ ವಿಚಾರಿಸಿಕೊಂಡೇ ಹೊರಟುಹೋಗೋಣ ಅಂತಲೇ ಧೈರ್ಯಮಾಡಿ ಬಂದು ಬಿಟ್ಟೆ. ಅವಳು ಲೀಲಮ್ಮ ಆಗಿರದೆ, ಲೀಲಮ್ಮ ಇಲ್ಲೇ ಇದ್ದು ಬದುಕಿದ್ರೆ, ಬಯ್ಸಿಕೊಂಡು ಹೋಗೋದು, ಸತ್ತಿದ್ರೆ—ಅದೇ– ನನಗೆ ಸ್ವಲ್ಪ ಗಾಬರಿ ಯಾದ್ದು.........

[ಎರಡು ಕ್ಷಣ ಮೌನ.]

**ವಿಮಲಾ :**

ನೀವು ಹೇಳಿದ್ದೆಲ್ಲಾ ಕಥೆ ಹಾಗೇನೇ ಇದೆ ತುಳಸಮ್ಮ, ರಾತ್ರಿ ಸಿನಿಮಾಕ್ಕೇನಾದ್ರೂ ಹೋಗಿದ್ದಿರಾ?

**ತುಳಸಮ್ಮ :**

ಇಲ್ಲವಲ್ಲಮ್ಮಾ !

ಮಾಡಿಕೊಟ್ಟೆ, ನಿನ್ನ ಹೊಟ್ಟೆ ತಣ್ಣಗಿರಲಿ....ಬರ್ತಿನಮ್ಮ (ಎಂದು ಮೇಲೆದ್ದು ಹೊರಡಲನುವಾಗುವರು.)

**ವಿಮಲಾ :**

ನಿಂತ್ಕೊಳ್ಳಿ.....ಸಂಜೆಹೊತ್ತು.........ಮುಪ್ಪಿನ ಮುತ್ತೈದೆ........ಕುಂಕುಮ ಇಟ್ಟುಕೊಂಡು ಹೋಗುವಿರಂತೆ (ಎಂದು ಒಳಕ್ಕೆ ಹೋಗುವಳು.)

**ತುಳಸಮ್ಮ :**

ಹೆಣ್ಣು ಮಕ್ಳು ಅಂದ್ರೆ ಹೀಗಿರಬೇಕು. ಆ ಲೀಲಾ ಹಾಗೆ...

[ಈ ಹೊತ್ತಿಗೆ ಸರಿಯಾಗಿ ಪೂರ್ತ ಹೊದಿಸಿದ ಮಗುವನ್ನು ಹೆಗಲ ಮೇಲೆ ಹಾಕಿಕೊಂಡು, ತಲೆ ಕೆದರಿದ್ದರೂ, ಮುಖ ಮಾಸಿದ್ದರೂ, ಉಡುಪು ಅಸ್ತವ್ಯಸ್ತವಾಗಿದ್ದರೂ, ರೂಪೋಜ್ಜ್ವಲೆಯಾದ ಹೆಂಗಸೊಬ್ಬಳು ಬೀದಿಯ ಬಾಗಿಲಿನಿಂದ ನುಗ್ಗಿ ಬಂದು, ತೊಟ್ಟಿಲಬಳಿ ನಿಲ್ಲುವಳು.]

.................(ಬಂದವಳನ್ನು ಕಂಡು ಬೆಚ್ಚಿ) ಅಯ್ಯೋ, ಅಯ್ಯೋ, ಕಡೆಗೂ ಬಂದೇ ಬಿಟ್ಟಳು, ಬಂದೇ ಬಿಟ್ಟಳು, ಆ.....ಹಾಳು ಲೀಲಾ.......ಮನೆಹಾಳಿ ಲೀಲಾ.......ಸತ್ತು ಸಂಪಗೆ ಮರವಾಗದೆ.....ದೆವ್ವ......ದೆವ್ವ......(ಎಂದು ಕಿರಿಚಿ ಕೊಳ್ಳುತ್ತ ಹೊರಕ್ಕೆ ಧಾವಿಸುವಳು.)

**ವಿಮಲಾ :**

(ಒಳಗಿನಿಂದಲೇ ಮಾತಾಡುತ್ತ, ತಾಂಬೂಲ ತೆಂಗಿನಕಾಯಿ ಹಿಡಿದು ಬರುತ್ತ) ಏನಾಯ್ತು ತುಳಸಮ್ನೋರೆ? ಏನಾಯ್ತು.......ಏನು, ಏನು! (ಎಂದು ಭರಭರನೆ ಪ್ರವೇಶಿಸುವಳು.)

[ಅಷ್ಟರಲ್ಲಿ—ಬಂದ ಸ್ತ್ರೀವ್ಯಕ್ತಿ, ವಿಮಲನ ಧ್ವನಿ ಕೇಳಿ, ತಾನು ತೊಟ್ಟಿಲಲ್ಲಿ ಮಲಗಿಸಲಿದ್ದ ಮಗುವನ್ನು ಮತ್ತೆ ಬೇಗನೆ ಎತ್ತಿಕೊಂಡು, ಎದುರು ಕಾಣುವ ಮಲಗುವ ಕೋಣೆಗೆ ಧಾವಿಸಿ, ಅಲ್ಲಿ ಅಡಗಿಕೊಳ್ಳುವಳು.

ಮಗುವನ್ನು ಎತ್ತಿಕೊಂಡ ರಭಸಕ್ಕೆ ಬರಿಯ ತೊಟ್ಟಿಲು ತೂಗಾಡುತ್ತಿರುವುದು]

ಅಯ್ಯೋ ಪಾಪ! ಯಾಕೆ ಹೆದರಿಕೊಂಡರೋ ಏನೋ..... (ತೂಗಾಡುತ್ತಿರುವ ತೊಟ್ಟಿಲನ್ನು ಗಮನಿಸಿ)ಇದೇನಿದು!...... ತೊಟ್ಟಿಲು ತಾನಾಗಿ ತೂಗಿಕೊಳ್ಳುತಾ ಇದೆ!...... ಗಾಳಿ ಕೂಡ ಇಲ್ಲ !....... ಇದೇನಾಶ್ಚರ್ಯ !...... ತುಳಸಮ್ನೋರು ಹೇಳಿದ್ದು......ನಿಜ ಇರಬಹುದೆ?.....ಯಾರನ್ನಾದರೂ..... ಜೊತೆಗೆ....ಹ್ನೂ..... ಇಷ್ಟಕ್ಕೂ ರೇಡಿಯೋ ಇದೆಯಲ್ಲ, ಜೊತೆಗೆ, ಜೊತೆಗೆ, ಭಯವೇನು........

ಹಾಗಾದರೆ, ನೀನು ಅವರ ಎರಡನೇ ಸೊಸೆಯೇ ತಾಯಿೊ ? ಅಂದರೆ.........

**ವಿಮಲಾ :**

ಅಲ್ಲ ಅಲ್ಲ, ಮೊದಲನೇ ಸೊಸೇನೇ : ಒಬ್ಬರೇ ಮಗ ಅವರು, ನಮ್ಮ ಅತ್ತೆಗೆ.

**ತುಳಸಮ್ಮ :**

ಹಾಗಿದ್ದರೆ, ಲೀಲಮ್ಮ ಸತ್ತೇಹೋಗಿರಬೇಕು. ಹೌದು, ಹೌದು, ಖಂಡಿತ ಸತ್ತುಹೋಗಿದ್ದಾಳೆ. ಲೀಲಮ್ಮನೇ ಹೇಳಿದಳಲ್ಲ, ಅವಳು ಸತ್ತುಹೋಗಿದಾಳೆ. ಅಂದರೆ, ನನ್ನನ್ನ ಮಾತನಾಡಿಸಿದವಳು. ಲೀಲಮ್ಮನಲ್ಲ ! ಅವಳ........ಅವಳ....... ಹುಷಾರಾಗಿರಮ್ಮ, ಸವತೀ ಕಾಟ ! ನನಗೇಕೋ ಗಾಬರಿಯಾಗುತ ಇದೆ......ಸಂಜೆಗತ್ತಲು ಕವೀತಾಬಂತು......ಸದ್ಯ, ಕತ್ಲೇಲಿ ಎಲ್ಲಾದರೂ ಅಡ್ಡ ಗಿಡ್ಡ ಗಟ್ಟೀತು........ಬರ್ತಿನಮ್ಮ........ಜೋಕೆ, ಜೋಕೆ........ಬೇಕಾದರೆ.........ಜೊತೆಗೆ...... ಯಾರನ್ನಾದರೂ.....

**ವಿಮಲಾ :**

ಜೊತೆಗೇ?......ಜೊತೆಗೆ ರೇಡಿಯೋ ಇದೆಯಲ್ಲಾ.....(ಎಂದು ಹೋಗಿ ರೇಡಿಯೋ ತಿರುಗಿಸುವಳು.)

**ತುಳಸಮ್ಮ :**

(ಹಾಡು ಕೇಳಬರುವಷ್ಟರಲ್ಲಿ ತನ್ನಲ್ಲಿಯೆ) ಭಾಗವ್ನೋರ ಮನೆ ಅಲ್ವೇ ಇದು? ಬೇರೆ ಸೊಸೆ, ಎಲ್ಲ ಬೇರೆ ಬೇರೆ......ಮೂರ್ತೀನಾದರೂ ಕಂಡಿದ್ದರೆ ನಂಬಿಕೆಯಾಗುತ ಇತ್ತು.......ಆದರೆ, ಆದರೆ.....ಅದೇ ತೊಟ್ಲು....ಅದೇ.....ಅದೇನೇ....ಸ್ವಲ್ಪವೂ ಅನುಮಾನ ಇಲ್ಲ.......

**ವಿಮಲಾ :**

ನಿಮಗೆ ಮೈಗೆ ಸರಿಯಿಲ್ಲ ಅಂತ ಕಾಣುತ್ತೆ.......ಏನೇನೋ ಕನವರಿಸಿಕೊಳ್ಳುತಾ ಇದ್ದೀರಿ..........ಪಾಪ, ಬೇಗ ಹೋಗಿ, ಮನೆ ಸೇರ್ಕೊಂಡು, ಹಾಯಂತ ಮಲಗಿಕೊಳ್ಳಿ.

**ತುಳಸಮ್ಮ :**

ನೀನು ಹೇಳಿದಹಾಗೆ, ಮೈಗೇ ಸರಿಯಿಲ್ಲವೋ ಏನೋ.....ಉಷ್ಣ ಪಿತ್ತ ಕೆರಳಿದೆ ಅಂತ ಕಾಣುತ್ತೆ.......ನೀನು ಹೇಳಿದಹಾಗೇ ಮಾಡ್ತೀನಮ್ಮ....... ಏನಾದರೂ ಆಗಲಿ, ನೀನು ಲೀಲಮ್ಮನ ಹಾಗಲ್ಲ........ಬಿಸಿಬಿಸಿಯಾಗಿ ಕಾಫಿ

ಹೋಗಿದ್ದ ಖಾಕಿ ಉಡುಪಿನಲ್ಲಿ. ಗಾಬರಿಯಲ್ಲಿರುವವನಂತೆ ಧಡಧಡನೆ ಪ್ರವೇಶಿಸುವನು.]

.....ನೋಡಿದ್ರಾ, ನೆನೆದೋರ ಮನದಲ್ಲಿ ಅನ್ನೋ ಹಂಗೆ ಬಂದೇಬಿಟ್ಟರು, ರಾಯರು. ಅದರಲ್ಲೂ ಹೆಂಡ್ರು ನೆನಸ್ಕೊಂಡಾಗ ಗಂಡಸರು ಬರದೇ ಇದ್ದಾರ! (ನಗುವಳು.)

**ವಿಮಲಾ :**

(ಹುಸಿ ಮುನಿಸಿನಿಂದ) ಸಮಯದಮಯ ಒಂದೂ ಇಲ್ಲ ನಿನ್ನ ಹಾಸ್ಯಕ್ಕೆ. ನಡಿ ಆಚೆಗೆ, ಇನ್ನು.

**ನಿಂಗಮ್ಮ :**

ಆಚೆಗೆ ನಡೀದೆ ಇನ್ನು ಯಾಕಾರ ಇಲ್ಲಿ ನಿಲ್ಲಲಿ ? ಜೊತೆಗೆ ಐತಲ್ಲ ರೇಡಿಯೋ, ಮಾತಾಡ್ಸೋ ರೇಡಿಯೋ ! ಇದೋ ಹೊಂಟೆ (ಎಂದು ನಗುತ್ತ ನಿಷ್ಕ್ರಮಿಸುವಳು.)

**ಕೇಶವಮೂರ್ತಿ:**

ಹುಶ್ಯಪ್ಪಾ ! (ಎಂದು ಈಸೀಚೇರಿನ ಮೇಲೆ ಕುಳಿತುಕೊಳ್ಳುವನು.)

**ವಿಮಲಾ :**

ಯಾಕೇ ಅಂದ್ರೆ, ಇವತ್ತು ಇಷ್ಟು ಹೊತ್ತು ಮಾಡಿಬಿಟ್ರಿ ?

**ಕೇಶವಮೂರ್ತಿ :**

ಅಪುರೂಪವಾಗಿ ಯಾರೋ ಸ್ನೇಹಿತರು ಸಿಕಿದ್ದರು. ಹೋಟಲಿಗೆ ಎಳೆದುಕೊಂಡು ಹೋದರು.

**ವಿಮಲಾ :**

ಸರಿ, ನಿಂಗಮ್ಮ ಹೇಳಿದ್ದು ನಿಜವಾಯ್ತು (ನಗುವಳು). ಇವತ್ತು ಹೋಟಲಿಗೆ ಎಳೆದುಕೊಂಡು ಹೋಗುತಾರೆ, ನಾಳೆ......(ಅಷ್ಟಕ್ಕೇ ನಿಲ್ಲಿಸುವಳು).

**ಕೇಶವಮೂರ್ತಿ :**

ಅದು ಯಾಕೆ ನಿಲ್ಲಿಸಿಬಿಟ್ಟೆ? ಹೇಳಿಬಿಡು.

**ವಿಮಲಾ :**

ಹೋದಾಗ ಆ ಮಾತು. ಈಗ ಯಾಕೆ?.......ಅದಿರಲಿ, ಅದು ಯಾಕೆ ಹಾಗೆ ಗಾಬರಿಯಾಗಿ ಬಂದಿರಲ್ಲಾ? ಮುಖ ಯಾಕೆ ಇಷ್ಟು ಬೆವರಿದೆ? ಏನು ಸಮಾಚಾರ?

**ಕೇಶವಮೂರ್ತಿ :**

ಆಗಲೇ ಹೇಳಿದೆನಲ್ಲಾ, ಸಮಾಚಾರಾನ. ನೀನು ಎಲ್ಲಿ ಹೆದರಿ ನಡುಗುತಾ

[ರೇಡಿಯೋವನ್ನು ತಿರುಗಿಸುವಳು, ಪುರಂದರ ದಾಸರ ಜೋಗುಳದ ಪದವೊಂದು ಸ್ತ್ರೀಕಂಠದಲ್ಲಿ ಮಧುರವಾಗಿ ತೇಲಿಬರುವುದು. ಮುಂಬಾಗಿಲನ್ನು ಮುಂದು ಮಾಡಿಕೊಂಡು ಬಂದು, ಮೇಜಿನ ಮುಂದೆ ಕುರ್ಚಿಯ ಮೇಲೆ ಕುಳಿತು, ಪುಸ್ತಕವೊಂದನ್ನು ಕೈಗೆತ್ತಿಕೊಳ್ಳುವಳು. ಅಷ್ಟು ಹೊತ್ತಿಗೆ ಸರಿಯಾಗಿ ನಿಂಗಮ್ಮ ಮುಂಬಾಗಿಲಿನಿಂದ ಒಳಕ್ಕೆ ಪ್ರವೇಶಿಸುವಳು.]

**ನಿಂಗಮ್ಮ :**

ಅಯ್ನೋರು ಬಂದಿಲ್ರೇನ್ರವ್ವಾ ಇನ್ನಾನೂ?

**ವಿಮಲಾ :**

ಇಲ್ಲ ಕಣೆ. ನೋಡು, ಆಗಲೆ ಏಳೂವರೆ ಹತ್ತಿರಕ್ಕೆ ಬಂತು. ಎಂದೂ ಹೀಗೆ ಮಾಡಿರಲಿಲ್ಲ.

**ನಿಂಗಮ್ಮ :**

ಅವರು ಬರೋಗಂಟ ಇರ್ತೀನಿ ಬುಡ್ರವ್ವ. ಹೆದರಿಗಿದರಿಕೊಂಡಿರೋ ಹ್ಯಾಗೆ ?

**ವಿಮಲಾ :**

ಅಂಥಾದ್ದೇನೂ ಇಲ್ಲ.

**ನಿಂಗಮ್ಮ :**

ಆ ರೇಡಿಯೋ ನಿಲ್ಲಿಸರವ್ವ–ನಂಗೆ ಅದರ ತಲೆ ಕಂಡರೆ ಆಗೋಕಿಲ್ಲ.

**ವಿಮಲಾ :**

(ನಗುತ್ತ) ಅದಕ್ಕೆ ತಲೆಯೇ ಇಲ್ಲವಲ್ಲೇ !

**ನಿಂಗಮ್ಮ :**

ಕಾಣದೆ ಇದ್ರೂನು, ಅದಕ್ಕೆ ಒಂದಲ್ಲ, ಹತ್ತು ತಲೆ ಅದಾವೆ, ರಾವಣಾಸುರನ ಹಂಗೆ.....ಅದ್ಕೇನೆ, ಹತ್ತು ತರಾ ಕಿರಿಚಿಕೊಳ್ತದೆ.....ರೇಡಿಯೋ ಕೇಳ್ದಾಗಲೆಲ್ಲ, ನಂಗೆ, ನಮ್ಮೂರ ಬಯಲಾಟದಲ್ಲಿ ಕಿರಚಿಕೋಳ್ತಾ ಇದ್ದ ಯಾಲಕ್ಕಾಚಾರಿ, ಅವನ ದೆವ್ವದ ಕಾಟ ಜ್ಞಾಪ್ತಿಗೆ ಬರ್ತದೆ......

**ವಿಮಲಾ :**

ರೇಡಿಯೋ ನಿಲ್ಲಿಸುತೀನಿ ಮಹರಾಯ್ತಿ. ಸದ್ಯ, ನನಗೆ ಆ ಯಾಲಕ್ಕಾಚಾರಿ ಕತೆಗಿತೆ ಬೇಡ....

**ನಿಂಗಮ್ಮ :**

ಅದನ್ನ ನೆನಸ್ಕೊಂಡ್ರೆ ನನಗೇನೇ ಮೈ ಜುಂ ಅಂತದೆ, ಇನ್ನ....

[ಅಷ್ಟು ಹೊತ್ತಿಗೆ ಸರಿಯಾಗಿ ಕೇಶವಮೂರ್ತಿ, ಫ್ಯಾಕ್ಟರಿ ಕೆಲಸಕ್ಕೆ ಹಾಕಿಕೊಂಡು

ನೀವು ಬಂದ ಮೇಲೆ ಬೇರೆ ಮಾಡಿಕೊಟ್ಟರಾಯ್ತು ಅಂತ......

**ಕೇಶವಮೂರ್ತಿ :**

ಹೋಗಲಿ ಬಿಡು, ಒಳ್ಳೆಯದೆ ಆಯ್ತು. ತುಳಸಮ್ಮನಿಗೆ ನಮ್ಮ ತಾಯಿ ಕಾಫಿ ಕೊಟ್ಟು ಕೊಟ್ಟು ಅಭ್ಯಾಸ ಮಾಡಿಬಿಟ್ಟಿದಾರೆ. ನೀನು ಕೊಡದೆ ಇದ್ದಿದ್ದರೆ, ನಿನ್ನನ್ನು ಶಪಿಸಿಕೊಂಡು ಹೋಗುತ ಇದ್ದಳು.

**ವಿಮಲಾ :**

(ಆಶ್ಚರ್ಯಗೊಂಡು) ಓ, ಹಾಗೇನೂ ! ಹಾಗಾದರೆ, ತುಳಸಮ್ಮನೋರು.....ಈ ಮನೇಗೆ........ತುಂಬ ಹಳಬರು.......

**ಕೇಶವಮೂರ್ತಿ :**

ಹೌದು. ಈಚೆಗೆ ಮಾತ್ರ ಬರುತಾ ಇಲ್ಲ, ಅಷ್ಟೆ.

**ವಿಮಲಾ :**

ಹಾಗಾದರೆ.....ಆಕೆಗೆ ಬುದ್ಧಿಭ್ರಮಣೆ ಅಂತ ನಾನು ಅಂದುಕೊಂಡಿರೋದು ತಪ್ಪು ಅಂತ ಕಾಣುತ್ತೆ.....ಅವಳು ಬಡಬಡಿಸಿದ್ದೆಲ್ಲ......ನಿಜಾನೇ ಇರಬಹುದೋ ಏನೋ.......(ಬೆರಗಿನ ಭಾವದ ಬಿಟ್ಟ ಕಣ್ಣು.)

**ಕೇಶವಮೂರ್ತಿ :**

(ಕುತೂಹಲಿಯಾಗಿ) ಏನು ಸಮಾಚಾರ ?

**ವಿಮಲಾ :**

ಈ ತೊಟ್ಟಿಲು, ಈ ತೊಟ್ಟೀಲಿ, ಎಂದಿನಿಂದ ಯಾವಾಗಲೂ ಹೀಗೇನೇ ತೂಗಹಾಕಿದೆಯೆ?

**ಕೇಶವಮೂರ್ತಿ :**

ಅದೇನು ಮಹಾ ದೊಡ್ಡ ವಿಚಾರ ಅಂತ ?

**ವಿಮಲಾ :**

ನಾನು ಕೇಳಿದ್ದಕ್ಕೆ ಮೊದಲು ಉತ್ತರ ಹೇಳಿ, ಆಮೇಲೆ ಎಲ್ಲಾ ತಾನಾಗಿ ಗೊತ್ತಾಗುತ್ತೆ.

**ಕೇಶವಮೂರ್ತಿ :**

ಯಾವಾಗಲೂ ತೂಗಹಾಕಿದೆ. ಇದು ನಮ್ಮ ಸ್ವಂತ ಮನೆ ಅನ್ನೋದು ನಿನಗೆ ಗೊತ್ತಷ್ಟೆ ?

**ವಿಮಲಾ :**

ನಿಮ್ಮ ತಾಯಿ ಹಾಗಂತ ಹೇಳಿದ್ದಹಾಗೆ ನೆನಪು.

ಇರುತೀಯೋ ಅಂತ ಬೇಗ ಬೇಗ ಬಂದೆ. ಬೇಸಗೆ ಬೇರೆ, ಕೇಳಬೇಕೆ. ಅದಕ್ಕೋಸ್ಕರ ಬೆವರಿದೆ. ಗಾಳಿಗೆ ಕೂಡ ಆಯಾಸ, ಅದಕ್ಕೇ ಬೀಸುತಾ ಇಲ್ಲ. ನಾನು ಊಹಿಸಿದಹಾಗೆ, ನೀನು ಹೆದರಿದ್ದೀ ಅನ್ನೋದು ನಿನ್ನ ಮುಖದಿಂದಲೇ ಗೊತ್ತಾಗುತ ಇದೆ. (ಎಂದು ಉಡುಪು ಕಳಚತೊಡಗುವನು. ವಿಮಲಾ ಬಟ್ಟೆ ಸ್ಟ್ಯಾಂಡಿನ ಮೇಲಿಂದ ಮನೆಯುಡುಪು—ದಟ್ಟಿ, ಜುಬ್ಬ, ಟವಲು ತಂದುಕೊಡುವಳು, ಉಡುಪು ಬದಲಾಯಿಸುತ್ತಿರುವಾಗಲೇ.....) ನಿಜವಾಗಿ ಹೆದರಿಕೆ ಏನೂ ಆಗಲಿಲ್ಲ ತಾನೇ?

**ವಿಮಲಾ:**

ಅಂಥದ್ದೇನೂ ಹೆದರಿಕೆ ಆಗ್ಲಿಲ್ಲ. ಸಂಜೆ ನಿಂಗಮ್ಮ ಬಂದು ಹೋದ ಮೇಲೆ——ಈಗಲ್ಲ, ಇದಕ್ಕೆ ಮುಂಚೆ ಮನೇ ಕೆಲಸಕ್ಕೆ ಬಂದಿದ್ದಾಗ—ತುಳಸಮ್ಮನೋರು ಅಂತ ಬಂದಿದ್ದರು.....ಸ್ವಲ್ಪ ತಲೆ ಕೆಟ್ಟಿದೆ ಅಂತ ಕಾಣುತ್ತೆ, ಏನೇನೋ ಬಡಬಡಿಸುತ್ತ ಕುಳಿತಿದ್ದರು. ಇದೆಲ್ಲಿಯ ಹುಚ್ಚಿಯ ಸಹವಾಸ ಗಂಟುಬಿತ್ತು ಅಂತ ಸ್ವಲ್ಪ, ಸ್ವಲ್ಪ ಅಂದರೆ ಸ್ವಲ್ಪ, ಹೆದರಿಕೆ ಆದರೂನೂ ಹೊತ್ತು, ಹೋಯ್ತು. ಆದರೆ,....

**ಕೇಶವಮೂರ್ತಿ :**

(ಕುತೂಹಲಗೊಂಡು ಆಲಿಸತೊಡಗುವನು.)

**ವಿಮಲಾ :**

.......ಆದರೆ.....ಹೋಗುವಾಗ, ಯಾಕೋ ಏನೋ, ಕಿಟಾರನೆ ಕಿರಿಚಿಕೊಂಡು ಹೋದರು. ಆಗ ಮಾತ್ರ, ಎಲ್ಲೋ ಒಂದು ಕ್ಷಣ, ನಿಜವಾಗಿಯೂ ಹೆದರಿಕೆ ಆಯ್ತು.

**ಕೇಶವಮೂರ್ತಿ :**

ಹಾಗೇನು !

**ವಿಮಲಾ :**

ಸದ್ಯ, ನನಗೆ ಹೆದರಿಕೆ ಆಯ್ತು ಅಂತ ನೀವು ಹೆದರಿಕೊಳ್ಳಬೇಡಿ......ಇನ್ನೊಂದು ಕೆಲಸ ಏನು ಆಗಿಹೋಯ್ತು ಅಂತ....?

**ಕೇಶವಮೂರ್ತಿ :**

ಏನಾಯ್ತು ?

**ವಿಮಲಾ :**

ನಿಮಗೆ ಅಂತ ಇಟ್ಟಿದ್ದ ಕಾಫಿಯನ್ನು ತುಳಸಮ್ಮನೋರಿಗೆ ಕೊಟ್ಟುಬಿಟ್ಟೆ,

ಭಾವಿಸಿಕೊಂಡು ನಿಮ್ಮ ತಂಗಿ ಮಾಡಿಬಿಟ್ಟಿದ್ದರು !........

[ಇಬ್ಬರೂ ನಗುವರು.]

.......ನಿಮ್ಮ ಅಣ್ಣ ಒಬ್ಬರು.....

**ಕೇಶವಮೂರ್ತಿ :**

ಅಣ್ಣ!....ನನಗೆ ಅಣ್ಣನೂ ಇಲ್ಲ ತಮ್ಮನೂ ಇಲ್ಲ. ಏಕಮೇವಾದ್ವಿತೀಯ ಬ್ರಹ್ಮ!.....(ನಗುವನು.)

**ವಿಮಲಾ :**

(ತಾನೂ ನಕ್ಕು) ಮಾತುಮಾತಿಗೂ ಒಳ್ಳೇ ವೇದಾಂತ ತೆಗೀತೀರಲ್ಲ.....ಇಲ್ಲಿ ಕೇಳಿ.......ಭಾಗಮ್ಮನೋರ ಸೊಸೆ.........ಲೀಲಾವತಮ್ಮ........

[ಕೇಶವಮೂರ್ತಿಯ ಮುಖ ಗಂಭೀರವಾಗುವುದು.]

.......ಹ್ಞೂ, ಲೀಲಾವತಮ್ಮ ಅಂತ ಪಲ್ಲವಿ ಹೇಳಿದ ಹಾಗೆ ಹೇಳ್ತಾನೇ ಇದ್ದರು. 'ನಾನೇ ಭಾಗಮ್ಮನೋರ ಸೊಸೆ' ಅಂದಾಗ, ನುಂಗಲಾಗದೆ ಇರೋ ತುತ್ತನ್ನ ನುಂಗೋ ಹಾಗೆ, ಗಾಬರಿಯಾಗಿ ಎದ್ದು ಹೊರಟು ಹೋದರು......ಹೋಗಲಿ, ನಿಮ್ಮನ್ನ ಏನಂತ ಕೂಗುತ ಇದ್ದರು, ಆಕೆ.........?

**ಕೇಶವಮೂರ್ತಿ :**

ನಮ್ಮಮ್ಮ ಒಂದೊಂದು ಸಲ ಕೂಗುತ ಇದ್ದಹಾಗೆ, 'ಮೂರ್ತಿ' ಅಂತ.—ಅದು ಸರಿ, ಇಷ್ಟೆಲ್ಲಾ ಯಾಕೆ ಪ್ರಶ್ನೆ, ಲಾಯರು ಅಪರಾಧಿಯನ್ನ ಪ್ರಶ್ನಿಸುವ ಹಾಗೆ ? (ಟೊಳ್ಳು ನಗೆ ನಗುವನು.)

**ವಿಮಲಾ :**

(ತುಸ ಗಂಭೀರ ಮೌನ. ಬಳಿಕ, ಸೆಟೆತು) ತುಳಸಮ್ಮನೋರಿಗೆ ಬುದ್ಧಿಭ್ರಮಣೆ ಅಂತ ಇದ್ದೆ. ಬುದ್ಧಿಭ್ರಮಣೆ ಇಲ್ಲ, ಖಂಡಿತಾ ಇಲ್ಲ. ಅವರು ಹೇಳಿದ್ದು ಏನೂ ಅಂತ ನನಗೆ ಸರಿಯಾಗಿ ಅರ್ಥವಾಗದೆ ಇರಬಹುದು, ಅಷ್ಟೆ. ಆದರೆ, ಇಷ್ಟು ಮಾತ್ರ ಖಂಡಿತ : ಅವರು ಹೇಳಿದ್ದರಲ್ಲಿ ಏನೋ ಒಳಮರ್ಮ ಹುದುಗಿದೆ. ಅದು ಏನು, ಹೇಳಿ. ಆ ಲೀಲಮ್ಮ ಲೀಲಾವತಿ, ಲೀಲಾ, ಅವಳು ಯಾರು ಹೇಳಿ........ಖಂಡಿತ ಹೇಳಿ.... 'ಸೊಸೆ' ಅಂತ ನನ್ನ ತಲೇಮೇಲೆ ಕುಕ್ಕಿ ಹಾಸ್ಯ ಮಾಡಿದರು.....ನನಗೆ ಹೀಗೆ ಅಂತ ತಿಳಿದಿರಲಿಲ್ಲ..... 'ಸೊಸೆ'— ಪಟ್ಟ ಕಟ್ಟಿಸಿಕೊಂಡ ಆ 'ಸೂಳೆ' ಯಾರು, ಮೊದಲು ಹೇಳಿ....ನಾನು ಏನಾಗಿದ್ದೇನೆ, ನನ್ನಲ್ಲಿ ಏನು ಕೊರತೆ ಕಂಡಿರಿ, ಆ ಸೂಳೆಯ ಸಹವಾಸ ಮಾಡೋದಕ್ಕೆ......ಅಯ್ಯೋ........ (ಕುಸಿದು ಕುರ್ಚಿಯ ಮೇಲೆ ಕುಳಿತು ಕೊಳ್ಳುವಳು)

**ಕೇಶವಮೂರ್ತಿ :**

ಸರಿ. ನಮ್ಮಜ್ಜನ ಕಾಲದ್ದು ಅಂತ ಕಾಣುತ್ತೆ ಈ ತೊಟ್ಟಿಲು. ನಮ್ಮಪ್ಪನಂತೂ ಇದರಲ್ಲಿ ಮಲಗಿದ್ದರು, ಹಾಗಂತ ಕೇಳಿದ್ದೀನಿ. ಆಮೇಲೆ ಮಹಡೀಗೆ, ಅಂದರೆ ಅಟ್ಟಕ್ಕೆ, ಹೋಗಿತ್ತು. ಮತ್ತೆ, ನಾನು ಹುಟ್ಟಿದಾಗ ಕಟ್ಟಿದ್ದು ಹಾಗೇ ತೂಗಾಡುತಾ ಇದೆ ಅಂತ ಕಾಣುತ್ತೆ. ನಮ್ಮ ತಾಯಿ ಮೊಮ್ಮಗನನ್ನ ಕಾಣುವ ನಿರೀಕ್ಷೆಯಲ್ಲಿ ಇದನ್ನ ಬಿಚ್ಚಿಸದೆ ಹಾಗೆಯೇ ಇಲ್ಲಿ ತೂಗಬಿಟ್ಟಿದ್ದಾರೆ ಅಂತ ತೋರುತ್ತೆ. (ನಗುವನು: ಕ್ಷಣ ಮೌನ) ಆಶೆ ಅನ್ನುವ ತೊಟ್ಟಿಲು, ಇದರ ಹಾಗೆ, ಬರಿಯದಾಗಿ ಕಂಡರೂ ಅದರಲ್ಲಿ ಬದುಕಿನ ನಿರಾಶೆಯೆಲ್ಲಾ ಮಲಗಿ ನಿದ್ರಿಸುತ್ತಲೇ ಇರುತ್ತೆ ; ಅದು ಎಚ್ಚರಗೊಂಡು ಕಿರಿಚಿದಾಗ, ಬದುಕಿನ ದುರಂತ ಪ್ರಾರಂಭವಾದಹಾಗೆ..

**ವಿಮಲಾ :**

(ಜುಗುಪ್ಸೆ ತೋರಿಸಿ) ನಾನು ಏನೋ ಕೇಳಬೇಕು ಅಂತ ಇದ್ದರೆ, ಅದು ಏನೋ ತತ್ವ ತೆಗೆದಿರಿ....

**ಕೇಶವಮೂರ್ತಿ :**

ಇನ್ನೇನು ಕೇಳಬೇಕು ಅಂತ ಇದ್ದೆ ?

**ವಿಮಲಾ :**

ನಿಮ್ಮ ತಂಗಿ ನಮ್ಮ ಮದುವೆಗೆ ಬಂದಿರಲಿಲ್ಲ, ಅಲ್ಲವೆ ?

**ಕೇಶವಮೂರ್ತಿ :**

ಹೌದು. ಬಂದಿರಲಿಲ್ಲ.

**ವಿಮಲಾ :**

ನಿಮ್ಮ ತಾಯಿ ಹೇಳಿದ್ದು ಮರೆತುಹೋಗಿದೆ. ಅವಳ ಹೆಸರೇನು?

**ಕೇಶವಮೂರ್ತಿ :**

ಅದು ಯಾಕೆ, ಈಗ ?

**ವಿಮಲಾ :**

ನೀವು ಹೇಳಿ, ಆಮೇಲೆ ನಾನು ಹೇಳ್ತೀನಿ.

**ಕೇಶವಮೂರ್ತಿ :**

ವಿಶಾಲಾಕ್ಷಿ.

**ವಿಮಲಾ :**

ಓ೯ !! ತುಳಸಮ್ಮನೋರ ಮಾತು ಸುಳ್ಳು ಅಂತ ಇದ್ದೆ. ಆಕೆ, ನನ್ನನ್ನೆ— ಎರಡು ಹೆಸರೂ 'ವಿ' ಇಂದಲೆ ಮೊದಲಾಗುತ್ತೆ ನೋಡಿ—ವಿಶಾಲಾಕ್ಷಿ ಅಂತ

# ಎರಡನೆಯ ಅಂಕ

[ಮೊದಲ ಅಂಕದ ದೃಶ್ಯವೇ : ಎಲ್ಲ ಮೊದಲಿನಂತೆಯೇ, ಏನೂ ಹೆಚ್ಚಿನ ವ್ಯತ್ಯಾಸವಿಲ್ಲ. ಗಡಿಯಾರ ಮಾತ್ರ ೮.೧೫ ಗಂಟೆ ತೋರಿಸುತ್ತಿರುತ್ತದೆ.

ಕೇಶವಮೂರ್ತಿ ಆರಾಮ ಕುರ್ಚಿಯ ಮೇಲೆ ಕಾಲು ನೀಡಿಕೊಂಡು ಕುಳಿತಿರುವನು. ಮುಂಗಡೆ ಸಣ್ಣ ಸ್ಟೂಲು ; ಅದರ ಮೇಲೆ ತಾಂಬೂಲದ ತಟ್ಟೆ.

ವಿಮಲಾ ತಾಂಬೂಲ ಮಡಿಸಿ ಕೊಡುತ್ತಿರುವಳು. ಅದನ್ನು ಕೇಶವಮೂರ್ತಿ ನಿಧಾನವಾಗಿ ಅಗಿಯುತ್ತಿರುವನು.]

**ಕೇಶವಮೂರ್ತಿ :**

(ಶಾಂತನಾಗಿ, ಗಂಭೀರವಾಗಿ) ತುಳಸಮ್ಮ, ನಿನಗೆ ಹೇಳಿದ್ದೆಲ್ಲ ಬಹುಮಟ್ಟಿಗೆ ದಿಟ, ವಿಮಲಾ.

**ವಿಮಲಾ :**

ಹಾಗಾದರೆ, ಲೀಲಾವತಿ........

**ಕೇಶವಮೂರ್ತಿ :**

ಗಾಬರಿಯಾಗಬೇಡ : ಅವಳು ಸೂಳೆ !

**ವಿಮಲಾ :**

(ನೊಂದು) ಅಯ್ಯೋ ಹಾಗಿದ್ದರೆ ಅವಳ ಸಹವಾಸ ಯಾಕೆ ಮಾಡಿದಿರಿ? ಯಾಕೆ ಮಾಡಿದಿರಿ, ಹೇಳಿ ?

**ಕೇಶವಮೂರ್ತಿ :**

ಅವಳನ್ನು ಮದುವೆಯಾದ ತಪ್ಪಿಗೋಸ್ಕರ.

**ವಿಮಲಾ :**

ಅವಳನ್ನ ? ಮದುವೆ ? ನಾನಿರುವಾಗ..... ?

**ಕೇಶವಮೂರ್ತಿ :**

ನಿನಗಿಂತ ಮೊದಲು, ಅವಳನ್ನ ಮದುವೆಯಾದದ್ದು.

**ವಿಮಲಾ :**

ಆ್ಞ ! ಎಂಥ ಮೋಸ !

**ಕೇಶವಮೂರ್ತಿ :**

(ಮೇಲೆದ್ದು, ವಿಮಲನ ಬಳಿಸಾರಿ, ಅವಳ ಮುಂಗುರುಳು ತಿದ್ದಿ, ಅವಳನ್ನೆಬ್ಬಿಸಿ ತಬ್ಬಿಕೊಂಡು, ಮೃದುವಾಗಿ) ಏನೇನೋ ಮನಸ್ಸಿಗೆ ಹಚ್ಚಿಸಿಕೊಂಡು ತೊಳಲಬೇಡ, ವಿಮಲಾ. ನನ್ನ ಮಾತನ್ನ ನಂಬು : ಅವಳು ಖಂಡಿತ 'ಸೂಳೆ' ಅಲ್ಲ. ನಿನ್ನ ಸುಖಕ್ಕೋಸ್ಕರ, ನಮ್ಮಿಬ್ಬರ ಸುಖಕ್ಕೋಸ್ಕರ, ಕಾಪಾಡಿಕೊಂಡಿದ್ದ ಗುಟ್ಟು ಇಂದು ರಟ್ಟಾಗಬೇಕಾದ ಕಾಲ ಸನ್ನಿಹಿತವಾಗಿದೆಯೆಂದು ತೋರುತ್ತೆ. ಹುಲ್ಲುಮೆದೆಯಲ್ಲಿ ಕೆಂಡ ಬಚ್ಚಿಡಲು ಸಾಧ್ಯವೇ? ಎಂದಿಗೂ ಇಲ್ಲ.....ಎಲ್ಲವನ್ನೂ ನಿಧಾನವಾಗಿ ಹೇಳ್ತೀನಿ.....ನಾನು ಹೋಟಲಿಗೂ ಹೋಗಿರಲಿಲ್ಲ, ಏನೂ ಇಲ್ಲ....ಹೊಟ್ಟೆ ಹಸಿಯುತ್ತಾ ಇದೆ......ಮೊದಲು ತಟ್ಟೆ ಹಾಕು.......ಊಟವಾದ ಮೇಲೆ...

**ವಿಮಲಾ :**

(ಸಮಾಧಾನಗೊಂಡು) ಖಂಡಿತ ನಿಜ ಹೇಳ್ತೀರ?

**ಕೇಶವಮೂರ್ತಿ :**

ಖಂಡಿತ. ನಿನ್ನಾಣೆಗೂ, ನನ್ನಾಣೆಗೂ......

**ವಿಮಲಾ :**

ಇಷ್ಟು ಹೊತ್ತಿನ ಮೇಲೆ !

**ವಿಮಲಾ :**

ಹಾಗಿದ್ದರೆ ತಟ್ಟೆ ಇಡಲೇ ? ಇನ್ನೂ ೭.೩೦, ಅಷ್ಟೆ.

**ಕೇಶವಮೂರ್ತಿ :**

ಪರವಾಇಲ್ಲ, ಇಡು. ಹೇಗಿದ್ದರೂ ತಿಂಡಿ ತಿಂದಿಲ್ಲ, ಹಸಿಯುತ್ತಾ ಇದೆ.__ ತುಳಸಮ್ಮ ತಿಳಿಸಿದ್ದನ್ನೆಲ್ಲಾ ಮೊದಲು ನೀನು ಹೇಳು. ಮೊದಲು. ಊಟ ಮಾಡುತ್ತ ನಾನು ಕೇಳುತೀನಿ. ಊಟವಾದಮೇಲೆ. ನಾನು ಹೇಳುವುದನ್ನ ನಿಧಾನವಾಗಿ ಹೇಳುತೀನಿ, ನೀನು ಕೇಳುವಿಯಂತೆ.

**ವಿಮಲಾ :**

ಅಗಲಿ. ತಟ್ಟೆ ಹಾಕಿ ಬಡಿಸಿರುತ್ತೀನಿ, ಕೈ ಕಾಲು ತೊಳೆದುಕೊಂಡು ಬನ್ನಿ (ಎಂದು ಒಳಕ್ಕೆ ಹೋಗುವಳು.)

**ಕೇಶವಮೂರ್ತಿ :**

(ಕುಳಿತು ಎರಡು ಕೈಗಳಿಂದಲೂ ಕಣ್ಣುಗಳನ್ನು ಮುಚ್ಚಿಕೊಂಡು) ಲೀ__ಲಾ! ಲೀ__ಲಾ! (ಎಂದು ನಿಧಾನವಾಗಿ ಉಚ್ಚರಿಸಿ, ನಿಟ್ಟುಸಿರು ಬಿಡುತ್ತಿರುವಾಗ)

ಮುಂದೆರೆ

## ಒಳ ದೃಶ್ಯ : ಒಂದು

**ಲೀಲಾವತಿ :**

ಇದೇನು ಭಾಗೀರಥಮ್ಮ, ಈ ಹಾಳು ತೊಟ್ಟಿಲು ಇಲ್ಲಿ ಸದಾ ತೂಗಾಡುತ್ತಾ ಇರಬೇಕೆ ?

**ಭಾಗೀರಥಮ್ಮ :**

ಹಾಳು ತೊಟ್ಟಿಲು ಅನ್ನಬೇಡವಮ್ಮ, ವಂಶ ಉದ್ಧಾರ ಮಾಡುವ ತೊಟ್ಟಿಲನ್ನ.

**ಲೀಲಾವತಿ :**

(ನಕ್ಕು) ತೊಟ್ಟಿಲಿಗೆ ಆ ಶಕ್ತಿ ಇದೆ ಅಂತ ನಾ ತಿಳಿದಿರಲಿಲ್ಲ ! ಪಾಪ, ಮೊದಲು ಅದನ್ನ ಎಲ್ಲಿಗಾದರೂ 'ಉದ್ಧಾರ' ಮಾಡಿಸಿ.

**ಭಾಗೀರಥಮ್ಮ :**

ಆಗಲಮ್ಮ, ಕೇಶವನಿಗೆ ಹೇಳಿ, ಅದನ್ನ ಬಿಚ್ಚಿ ಮಹಡೀ ಮೇಲಕ್ಕೆ ಇಡು ಅಂತ ಹೇಳುತೀನಿ.

**ಲೀಲಾವತಿ :**

ಮಹಡಿ ! 'ಸ್ಟುಪಿಡ್!' (Stupid). ಅಟ್ಟ ಅನ್ನಿ. ಅಂದ ಹಾಗೆ, ಬೇಗ ಈ ಪ್ರಾಚೀನ ಕರ್ಮದ ಮನೆಯನ್ನ ಮಾರೋಹಾಗೆ ನಿಮ್ಮ ಮಕ್ಕಳಿಗೆ ಹೇಳಿ. ಬಂದ ದುಡ್ಡಿಗೆ—ಏನು ಬರುತ್ತೆ ಮಹಾ. ಜೊತೆಗೆ ಸಾಲಾನಾದರೂ ಮಾಡಿ, ಯಾವುದಾದರೂ ಒಳ್ಳೇ ಎಕ್ಸ್‌ಟೆನ್‌ಷನ್ನಿನಲ್ಲಿ ಒಂದು 'ಕಾಟೇಜ್'—ಅಂದರೆ, ಗುಡಿಸಲಲ್ಲ, ಒಂದು ಪುಟ್ಟ ಬಂಗ್ಲೆ—ಕೊಂಡುಕೊಳ್ಳೋಹಾಗೆ ಹೇಳಿ.

**ಭಾಗೀರಥಮ್ಮ :**

ಬಡವರಿಗೆ ಈ ಗುಡಿಸಲೇ ಸಾಕಮ್ಮ. ಇಷ್ಟಕ್ಕೂ, ಮಾರೋದು ಕೇರೋದು ಗಂಡಸರಿಗೆ ಸೇರಿದ್ದು. ಅಷ್ಟು ಬೇಕಾದರೆ, ನಿನ್ನ ಗಂಡನಿಗೆ ಹೇಳಿ ಬೇಕಾದ್ದು ಮಾಡಿಸಿಕೋ ತಾಯಿ, ನಾನು ಬೇಡ ಅನ್ನೋದಿಲ್ಲ, ಕಂಡ್ಯಾ.

**ಲೀಲಾವತಿ :**

ನಿಮ್ಮ ಮಕ್ಕಳು ಮಾತೃವಾಕ್ಯ ಪರಿಪಾಲಕರು. ನನ್ನ ಮಾತು ಕೇಳ್ತಾರೆಯೇ, ಭಾಗೀರಥಮ್ಮ ?

**ಭಾಗೀರಥಮ್ಮ :**

ಲೀಲಾ, ನೀನೂ ಮನೆಗೆ ಬಂದು ವರ್ಷಕ್ಕೆ ಬಂತಮ್ಮ. ನಾನೇನು ಹೊರಗಿನವಳೆ ನಿನಗೆ, ನಿತ್ಯ ನನ್ನನ್ನ ಹೀಗೆ ಹೆಸರು ಹಿಡಿದು ಕೂಗೋಕೆ ? ಅತ್ತೆ ಅನ್ನಬಾರದೆ ?

**ಕೇಶವಮೂರ್ತಿ :**

ಎಂಥ ಮೋಸ ? ಯಾರಿಗೆ ?

**ವಿಮಲಾ :**

(ಸಾತ್ವಿಕ ಕೋಪದಿಂದ) ನನಗೆ, ನಮ್ಮ ತಂದೆತಾಯಿಗಳಿಗೆ, ನಿಜವನ್ನ ಮರೆಮಾಚಿ ನನ್ನನ್ನು ಮದುವೆಯಾಗಿದ್ದೀರಿ! ಇದು ಮೋಸವಲ್ಲವೆ? ಯಾರೂ ಎಂದಿಗೂ ಕ್ಷಮಿಸಲಾಗದಂಥ ಅಪರಾಧ !

**ಕೇಶವಮೂರ್ತಿ :**

ಮೊದಲು ನಾನು ಹೇಳುವುದನ್ನ ಪೂರ್ತಿ ಕೇಳು, ಶಾಂತವಾಗಿ ಕೇಳು. ಆಮೇಲೆ ಕ್ಷಮಿಸುವುದು, ಬಿಡುವುದು ನಿನಗೆ ಸೇರಿದ್ದು. ಮೋಸವೇನೋ ನಡೆದಿದೆ, ಒಪ್ಪಿಕೊಳ್ಳುತ್ತೀನಿ ಆದರೆ, ಮೊದಲು ಮೋಸವಾದದ್ದು ನನಗೆ : ಲೀಲಾವತಿಯ ರೂಪು ರಂಗುಗಳಿಗೆ ಮರುಳಾಗಿ ನಾನು ಮೋಸಹೋದೆ. ಅವಳು ಈ ಮನೆಗೆ ಕಾಲಿಟ್ಟ ದಿನದಿಂದ ಅವಳೊಂದಿಗೆ ಸುಖ ಅನ್ನುವುದು ಬಿಸಿಲುಗುದುರೆಯ ಬೇಟೆಯಾಯಿತು. ನನ್ನ ಅನುನಯವೆಲ್ಲ ವ್ಯರ್ಥವಾಯಿತು. ನಾನು, ನನ್ನ ಮಾತೃದೇವತೆ—ಇಬ್ಬರೂ ಲೆಕ್ಕಕ್ಕೆ ಬರಲಿಲ್ಲ ಅವಳಿಗೆ ಅವಳ ಭಾಗಕ್ಕೆ. ನಮ್ಮ ತಾಯಿ. (ಗದ್ಗದ ಕಂಠದಿಂದ) ಮನೆಯನ್ನು ಚೊಕ್ಕಟವಾಗಿಡುವ ಪೊರಕೆಯಾದರು; ನಾನು, ಅವಳ ಬೀದಿಯಲೆತಕ್ಕೆ ರಕ್ಷಣೆ ನೀಡುವ ಎಕ್ಕಡವಾದೆ : ನಾವಿಬ್ಬರೂ ಲೆಕ್ಕಕ್ಕೆ ಬರಲಿಲ್ಲ ಅವಳಿಗೆ. ಒಂದೊಂದು ದಿನವೂ ಒಂದೊಂದು ರಾದ್ಧಾಂತ. ನಮ್ಮ 'ಆದರ್ಶ ದಾಂಪತ್ಯ'ದ ಕೆಲವು ಸಂಗತಿ ಹೇಳುತೀನಿ, ಕೇಳು—

[ಮುನ್ನೆಲೆಯಲ್ಲಿ ಕಪ್ಪು ತೆರೆಯೊಂದು ಸರಿದು ಬಂದು, ಹಿಂದಿನ ದೃಶ್ಯವನ್ನು—ಕಥನ ಮತ್ತು ಕಥನ ಶ್ರವಣದಲ್ಲಿ ಮಗ್ನರಾದ ಗಂಡ ಹೆಂಡಿರನ್ನು–ಮರೆ ಮಾಡುವುದು. ಅರ್ಧ ನಿಮಿಷವಾದ ಮೇಲೆ, ಈ ಕಪ್ಪು ತೆರೆ ಹಿಂದಕ್ಕೆ ಸರಿದು, ಅಂಕ–ದೃಶ್ಯವನ್ನು ಮರೆಮಾಡಿರುವ ತೆಳುಗೆಂಪಿನ ತೆರೆಯೊಂದನ್ನು ಕಾಣಗೊಡುವುದು. ತೆರೆಯ ಮುಂದೆ ಭಾಗೀರಥಮ್ಮ ಮತ್ತು ಲೀಲಾವತಿ ಸಂವಾದ ಮಾಡುತ್ತಿರುವರು.

ಭಾಗೀರಥಮ್ಮ ವಿತಂತು, ಸಾಂಪ್ರದಾಯಿಕವಾದ ಕೆಂಪುಡೆಯಲ್ಲಿರುವರು. (ನರೆ ಕೂದಲ 'ಸಕೇಶಿ'ಯಂತೆ ತೋರಿ, ಅಚ್ಚ ಬಿಳಿಯುಡುಪಿನಲ್ಲಿರುವಂತೆ ಬೇಕಾದರೂ ತೋರಬಹುದು.) ಹಣೆಗೆ ವಿಭೂತಿ, ಕೊರಳಿಗೆ ತುಲಸೀಮಣಿ, ಸ್ಫಟಿಕ ಮಣಿಗಳ ಸರಗಳು.

ಲೀಲಾವತಿ ಹೊರ ಹೊರಡಲು ಸಿದ್ಧಳಾಗಿ, ಆಧುನಿಕತೆಯನ್ನು ಎತ್ತಿ ತೋರುವ ಸೊಗಸಿನ ವೇಷ ಭೂಷಗಳನ್ನು ಧರಿಸಿರುವಳು.

ರಂಗಸ್ಥಳವೆಲ್ಲಾ ಕತ್ತಲಾಗಿದ್ದು, ಮಾತಾಡುವವರ ಮೇಲೆ ಮಾತ್ರ ಬೆಳಕು ಬೀಳುತ್ತಿರುವುದು; ಇನ್ನೊಂದು ಕಡೆ, ಹಿಂದುಗಡೆಯಿಂದ ತೆರೆಯ ಮೇಲೆ, ತೂಗುತೊಟ್ಟಿಲ ನೆರಳು ಬಿದ್ದಿರುವುದು.]

**ಲೀಲಾವತಿ :**

(ನಗುತ್ತ) ಮೊಮ್ಮಗ ಹುಟ್ಟೋತನಕ ಕಾದಿದ್ರೆ, ಮುಂದಿನ ಜನ್ಮದಲ್ಲೇ ನಿಮ್ಮ ಕಾಶೀಯಾತ್ರೆ.

**ಭಾಗೀರಥಮ್ಮ :**

ದೇವರಿದ್ದಾನೆ. ನೋಡೋಣ.

**ಲೀಲಾವತಿ :**

ದೇವರೇನು ಮಾಡ್ತಾನೆ ? ಸೀನೋದಕ್ಕೂ ಕೆಮ್ಮೋದಕ್ಕೂ ದೇವರನ್ನ ಹೊಣೆ ಮಾಡಿದರೆ ಆಗುತ್ತೆಯೇ ? ಎಲ್ಲಾ ನಮ್ಮ ಕೈಲೇ ಇದೆ. (ಕ್ಷಣ ಬಿಟ್ಟು) ನಾನು, ಮಗು ಆಗಬಾರದು ಅಂತ ನಿಶ್ಚಯಮಾಡಿಕೊಂಡಿದೇನೆ.

**ಭಾಗೀರಥಮ್ಮ :**

ಹಾಗಂದ್ರೇನೇ ನಾಚಿಕ್ಕೇಡು ! ಆಗಬೇಕು ಅಂತ ಹಣೇಲಿ ಬರೆದಿದ್ದರೆ ತಡೆಯೋದಕಾಗುತ್ತೆಯೇ? ಸದ್ಯ, ಮಾಡಬಾರದ್ದೇನಾದರೂ ಮಾಡಿಕೊಳ್ಳೋದಕ್ಕೆ ಹೋಗಿ, ಜೀವಕ್ಕೆ ಅಪಾಯ ತಂದುಗಿಂದುಕೊಂಡೀಯ ?

**ಲೀಲಾವತಿ :**

ಅಪಾಯ ಮಾಡಿಕೊಳ್ಳುವಷ್ಟು ಅವಿವೇಕದ ಮುದ್ದೆಯಲ್ಲ ನಾನು. ನಿಮ್ಮ ಅಜ್ಞಾನದ ಕಾಲವಲ್ಲ ಇದು ; ವಿಜ್ಞಾನ ಯುಗ. ನೀವು ಮೂರರ ಚಳಿ ನಾಲ್ಕರ ಚಳೀಗೆ 'ತಡೆ' ಕಟ್ಟೋದಿಲ್ಲವೆ, ಹಾಗೆ, ಮಗು, ಆಗದ ಹಾಗೆ ತಡೆಗಟ್ಟಿಕೊಳ್ಳೋದು ಸಾಧ್ಯ. ನಾನು ಇಷ್ಟಪಡುವವರೆಗೂ ನನಗೆ ಮಗು ಆಗುವ ಹಾಗಿಲ್ಲ.

**ಭಾಗೀರಥಮ್ಮ ;**

ಮೂರೂ ಬಿಟ್ಟೋರು ಏನೇನೋ ಗುಸುಗುಸು ಅನ್ನೋದು ನನ್ನ ಕಿವಿಗೂ ಬಿದ್ದಿದೆಯಮ್ಮ. ನಾನು ಈಗಿನ ಕಾಲದ ವಿದ್ಯೆ ಕಲಿತೋಳಲ್ಲದಿದ್ದರೂ, ಈಗಿನ ಕಾಲದ ವೈಪರೀತ್ಯ ಎಲ್ಲಾನೂ ಕಿವಿ ತುಂಬ ಕೇಳ್ತಾ ಇದ್ದೀನಮ್ಮಾ, ಕಣ್ತುಂಬ ಕಾಣ್ತಾ ಇದ್ದೀನಮ್ಮ! ಹೊಲಸಿನ ಮೇಲೆ ಹೋಗಿ ಕುಳಿತುಕೊಳ್ಳೋ ನೊಣಗಳು ಹೋಗಿ ಕುಳಿತುಕೊಳ್ಳಲಿ, ನಮಗೆ ಯಾಕಮ್ಮ ಅದರ ನಾತ? ಇಂಥ ವಿಚಾರ ಎಲ್ಲ ಆಡೋದು ಕೇಳೋದು ಕೂಡ ಅಸಹ್ಯ, ಪಾಪಕರ ಕಣೇ ತಾಯಿ. ಈ ಮಾತು ಸತ್ಯ ನೋಡು : ಈ ಮುದುಕಿ ಏನು ಹೇಳಿದಳು ಅಂತ ನೀನೇ ನೆನಸಿಕೊಳ್ಳುತ್ತೀ, ಒಂದಲ್ಲ ಒಂದು ದಿನ. ನಿನ್ನಿಂದ ನಮ್ಮ ವಂಶ ಬೆಳೀಬೇಕು ಅಂತ ದೈವಸಂಕಲ್ಪ ಇದ್ದರೆ, ನೀನು ದೇವರಲ್ಲಿ ನಂಬಿಕೆ ಇಡು ಬಿಡು, ಅಜ್ಞಾನಾನ ಆಚೆಗೆ ನೂಕಿ ವಿಜ್ಞಾನವನ್ನ ತಬ್ಕೊಂಡು ಏನಾದರೂ ಮಾಡು ಏನೇನು ಬೇಕಾದರೂ

**ಲೀಲಾವತಿ :**

ನಮ್ಮ ತಾಯೀನೇ ನಾನು 'ಸೀತಾ' ಅಂತ ಕೂಗುತೀನಿ. 'ಅತ್ತೇ, ಅತ್ತೆಮ್ಮ' ಅಂತ ಕೂಗೋದಕ್ಕೆ ನಾನು 'ಓಲ್ಡ್‌ಫ್ಯಾಷನ್ಡ್ (old fashioned) ಸೊಸೆ ಅಲ್ಲ. ಅದು ನಿಮಗೂ ಗೊತ್ತಾಗಿರಬೇಕು, ಈ ಹೊತ್ತಿಗೆ; ನೀವೆ ಹೇಳಿದಹಾಗೆ, ವರ್ಷವಾಗುತ ಬಂತಲ್ಲ, ನಾನು ಬಂದು. ಗೌರವಕ್ಕೋಸ್ಕರ, 'ಭಾಗೀರಥಮ್ಮ' ಅಂತ ಕರೀತೀನಿ. ನಿಮಗೆ ಹಾಗಂತ ಹೆಸರು ಹಿಡಿದು ಕೂಗೋದು ಇಷ್ಟವಿಲ್ಲದೆ ಹೋದರೆ, ಸುಮ್ಮನೆ 'ಹೋಗಿ, ಬನ್ನಿ' ಅಂತೀನಿ. ನೀವೂನೂ ಅಷ್ಟೆ, ನನ್ನನ್ನ 'ಲೀಲಾ' ಅಂತ ಕರೀಬೇಡಿ 'ಲೀಲಾವತಿ' ಅನ್ನಿ, ಇಲ್ಲ ಸುಮ್ಮನೆ 'ಹೋಗು, ಬಾ' ಅನ್ನಿ.

**ಭಾಗೀರಥಮ್ಮ :**

ಆಗಲಮ್ಮ. ಇಟ್ಟ ಹೆಸರು ಕಟ್ಟಿದ ಬುತ್ತಿ. ಹಾಗೇ ಆಗಲಿ. (ತುಸ ವ್ಯಂಗ್ಯವಾಗಿ) ನೀನು 'ಹೋಗಿಬನ್ನಿ' ಅನ್ನೋದೇನಮ್ಮಾ—ನಾನೇ ಹೋಗಬೇಕು ಅಂತ ಮಾಡಿಕೊಂಡಿದೀನಿ. ನೀನು ಬೇಕಾದ್ದು ಹೇಳಿಕೋ, ಶ್ರೀನಿವಾಸದೇವರ ದಯದಿಂದ ನಿನಗೂ ಒಂದು ಗಂಡುಮಗು ಆಗಿ, ಆ ಮಗುವನ್ನ ಪೂರ್ವಿಕರು ಕಟ್ಟಿದ ಈ ಮನೆಯಲ್ಲಿ, ಇದೇ ತೊಟ್ಟಲಿನಲ್ಲಿ, ನೀನು ಮಲಗಿಸಿ ತೂಗೋದನ್ನ ಕಣ್ಣು ತುಂಬ ನೋಡಿಕೊಂಡು, ಕಾಶೀರಾಮೇಶ್ವರ ಯಾತ್ರೆಗೆ ಹೋಗಿ— ಅದೃಷ್ಟ ಆಯುಸ್ಸು ಆಸೆ ಎಲ್ಲ ಇದ್ದರೆ—ಹಿಂತಿರುಗಿ ಬರಬೇಕು ಅಂತ ಮಾಡಿಕೊಂಡಿದೇನಮ್ಮ.

**ಲೀಲಾವತಿ :**

ಇದು, ತೊಟ್ಟಿಲು ತೂಗೋ ಕೈ ಅಲ್ಲ : ಟೆನ್ನಿಸ್ ಆಡಿದ ಕೈ, ವೀಣೆ ಬಾರಿಸಿದ ಕೈ ; ಅದೃಷ್ಟ ಇದ್ದರೆ, ದೇಶ ಆಳೋ ಕೈ; ಸೌಟು ಹಿಡಿದು ಮನೆ ಆಳೋ ಕೈ ಅಲ್ಲ. ಅವು ಯಾವುದಕ್ಕೂ ಈ ಬೋಳು ಮನೆಯಲ್ಲಿ ಜಾಗ ಇಲ್ಲ. ಕಲೆ. ವಿದ್ಯೆ ಬೆಳಸಿಕೊಳ್ಳೋದಕ್ಕೆ ಇಲ್ಲಿ ತಕ್ಕ 'ಎನ್‌ವಿರನ್‌ಮೆಂಟಾ'ದರೂ (Environment : ವಾತಾವರಣ) ಇದೆಯೇ? ನೀವೋ, ಪುರಾಣ ಪ್ರಿಯರು; ನಿಮ್ಮ ಮಕ್ಕಳಂತೂ ಕಚೇರಿ 'ಕಾರ್ಟ್' ಎಳೆಯೋ ಗುಮಾಸ್ತೆತ್ತು.

**ಭಾಗೀರಥಮ್ಮ :**

(ಅಸಮಾಧಾನವನ್ನು ತೋರಗೊಡದೆ ನುಂಗಿಕೊಂಡು) ಏನು ಮಾಡೋದಮ್ಮ, ಪಡೆದಷ್ಟೆ ಲಭ್ಯ ; ನನ್ನ ಹೊಟ್ಟೆ ಪುಣ್ಯ. ನಿನ್ನ ಹೊಟ್ಟೆ ಪುಣ್ಯ ಚೆನ್ನಾಗಿದ್ದು, ನಿನ್ನ ಮಗ ಹುಟ್ಟಿದ ಮೇಲಾದರೂ ಈ ಮನೆ ನಂದನವಾಗಬಹುದಮ್ಮ.

**ಕೇಶವಮೂರ್ತಿ :**

ಇದುವರೆಗೆ ನಾನು ಹಲ್ಲುಮುಡಿ ಕಚ್ಚಿಕೊಂಡಿದ್ದೆ, ಇನ್ನು ಸಾಧ್ಯವಿಲ್ಲ, ಲೀಲಾ.

**ಲೀಲಾವತಿ :**

(ತುಂಟನಗೆ ನಗುತ್ತ) ಕೋಪಿಸಿಕೊಳ್ಳೋ ಅಷ್ಟು ಶಕ್ತಿ ಇದೆಯೆ ನಿಮಗೆ?

**ಕೇಶವಮೂರ್ತಿ :**

ಶಕ್ತಿಪರೀಕ್ಷೆಮಾಡಬೇಡ. ಕೋಪಿಸಿಕೊಳ್ಳುವುದಕ್ಕೆ ಇಷ್ಟವಿಲ್ಲ, ಅಷ್ಟೆ.

**ಲೀಲಾವತಿ :**

ಇಷ್ಟ ಇರಬಹುದು ; ಆದರೆ, ಅಧಿಕಾರ ಇಲ್ಲ.

**ಕೇಶವಮೂರ್ತಿ :**

(ಬಿಡಿಸಿ ಬಿಡಿಸಿ, ಒತ್ತಿ ಒತ್ತಿ) ನನಗೆ—ನಿನ್ನ ಕೈಹಿಡಿದ ಗಂಡನಿಗೆ, ಅಧಿಕಾರ, ಇಲ್ಲಾ ?

**ಲೀಲಾವತಿ :**

(ಕೊಂಕು ನಗೆಯೊಂದಿಗೆ) ಅಧಿಕಾರವೂ ಇಲ್ಲ, ಯೋಗ್ಯತೆಯೂ ಇಲ್ಲ.

**ಕೇಶವಮೂರ್ತಿ :**

ಏನಂದೆ ! ಯೋಗ್ಯತೆ ! ಇದೇನು ಲೀಲಾ, ಇದ್ದಕ್ಕಿದ್ದ ಹಾಗೆ ಇಷ್ಟು ಬದಲಾಯಿಸಿಬಿಟ್ಟೆ ?

**ಲೀಲಾವತಿ :**

I have not changed (ನಾನು ಬದಲಾಯಿಸಿಲ್ಲ.) ಇಲ್ಲಿಗೆ ಬಂದ ದಿನ ಹೇಗೆ ಇದ್ದೆನೋ ಹಾಗೆಯೇ ಇದೇನೆ.

**ಕೇಶವಮೂರ್ತಿ :**

ನನಗೂ ಇಂಗ್ಲೀಷ್ ಬರುತ್ತೆ ಲೀಲಾ A leopard cannot change his spots........nor, a woman, her wiles ! ಚಿರತೆಯ ಚುಕ್ಕೆ, ಹೆಂಗಸಿನ ಚಾಳಿ—ಎರಡೂ ಬದಲಾಗಲಾರವು.) ನೀನು ಹೇಳುವುದು ದಿಟ; ನೀನು ಸ್ವಲ್ಪವೂ ಬದಲಾಯಿಸಿಲ್ಲ. ನಿನ್ನ 'ದೊಡ್ಡ ಕುದುರೆ ಚೇಷ್ಟೆ' ಹಾಗೆಯೇ ಮುಂದುವರಿಯುತ್ತ ಇದೆ. ಒಪ್ಪಿಕೊಳ್ಳುತ್ತೀನಿ. ನೀನು ಬಲ್ಲಹಾಗೆ ನಾನು ಬಡಗುಮಸ್ತೆ; ಅಥವಾ, ನನ್ನ ತಾಯಿಯ ಕೂಡ ನೀನು ಹೇಳಿದಹಾಗೆ, ಗುಮಾಸ್ತೆತ್ತು, ಜಟಕಾ ಬಂಡಿಯ ಕುದುರೆ. ನಿನ್ನ ಫ್ಯಾಷನ್ನು, ಥಳಕುಪಳಕು ಸಿನಿಮಾ ನಾಟಕ, ಹೊಟ್ಲು ಕ್ಲಬ್ಬು—ಇವಕ್ಕೆಲ್ಲಾ ನಾನು ಬೆವರು ಸುರಿಸಿ ದುಡಿದ ಹಣದಿಂದ ಒಂದು ಬಿಡಿ

ಮಾಡಿಕೋ, ಒಂದು ಹೊಸ ಕೊನೆ ಒಡೆದೇ ಒಡೆಯುತ್ತೆ ನಮ್ಮ ವಂಶದ ವೃಕ್ಷದಲ್ಲಿ! ಅದು ಚಿಗುರುತ್ತೆ, ಹೂ ಬಿಡುತ್ತೆ, ಹಣ್ಣೂ ಬಿಡುತ್ತೆ ! ದೈವಸಂಕಲ್ಪವನ್ನ ಮೀರೋದಕ್ಕೆ ಯಾರಿಂದಲೂ ಸಾಧ್ಯ ಇಲ್ಲ ಕಣಮ್ಮ. ಇದು ಶತಸ್ಸಿದ್ಧ !

**ಲೀಲಾವತಿ :**

ಆದರೆ ನನ್ನ ಸಂಕಲ್ಪ ಬೇರೆ ಆಗಿದೆ. ನೋಡಿ ! ಈಗ ನೀವು ಪುರಾಣಕ್ಕೆ ಹೊರಟಿದ್ದೀರಿ ಅಂತ ಕಾಣುತ್ತೆ, ದೈವಸಂಕಲ್ಪದ ಪ್ರಕಾರ : ಕ್ಲಬ್ಬಿಗೆ ಹೋಗಬೇಕು ಅಂತ ನಾನು ಸಂಕಲ್ಪಮಾಡಿದೇನೆ. (ಅಡಿಗೆ ಮನೆ ಕಡೆ ಕೈ ತೋರಿಸಿ) ನಿಮ್ಮ ದಾರಿ ನಿಮಗೆ, (ಬೀದಿಯ ಬಾಗಿಲ ಕಡೆ ಕೈ ತೋರಿಸಿ) ನನ್ನ ದಾರಿ ನನಗೆ—

[ಎಂದು ಒಂದು ಬಗೆಯ ಬಿಂಕದಿಂದ ಬಲಗಡೆ ನಿಷ್ಕ್ರಮಿಸುವಳು.]

**ಭಾಗೀರಥಮ್ಮ :**

(ಮೇಲಕ್ಕೆ ಮುಖವೆತ್ತಿ, ಕೈಗಳನ್ನೆತ್ತಿ) ಅಯ್ಯೋ ದೇವರೇ ! ಏನಪ್ಪ ಬಂತು ಕಲಿಗಾಲ ! ಏನು ಹಮ್ಮು, ಅದೇನು ಬಿಮ್ಮು ! ನಮ್ಮ ಮನೇಲಿ ಒಂದರಲ್ಲೇ ಅಲ್ಲ ಈ ಕಥೆ, ಅಷ್ಟೇ ಸಮಾಧಾನ !.....ಸಾರಿ ಸಾರಿ ಹೇಳಿದೆ, ದೊಡ್ಡ ಮನುಷ್ಯರ ಮನೆಯ ಹುಡುಗಿಯನ್ನ ತಂದುಕೊಳ್ಳಬೇಡಿ ಅಂತ. ಜ್ಯೇಷ್ಠಾ ನಕ್ಷತ್ರ, ಜ್ಯೇಷ್ಠ ಪುತ್ರ ಆಗಬೇಕು ಅಂತ ಈ ದೊರೆಸಾನಿಯನ್ನ ಕೇಶವನ ಕೊರಳಿಗೆ ತಂದು ಬಿಗಿದರು, ಯಾವುದೋ ಹಳೇ ಬಾಂಧವ್ಯ ಹೇಳಿಕೊಂಡು, ಆ ಮಂಡ್ಯದ ಲೊಡ್ಡು ಲಾಯರು. ಜ್ಯೇಷ್ಠಪುತ್ರ ಈಗ ಕನಿಷ್ಠನಾಗಿದಾನೆ, ಅವಳು ಕುಣಿ ಅಂದಹಾಗೆ ಕುಣಿಯೋಕೆ ತ್ರಾಣ ಇಲ್ಲದೆ. ಎತ್ತು ಏರಿಗೆ ಎಳೀತಾ ಇದೆ, ಎಮ್ಮೆ ನೀರಿಗೆ ಎಳೀತಾ ಇದೆ, ಯಾವಾಗ ಮಗುಚಿಕೊಳ್ಳುತ್ತೋ ಗಾಡಿ. ದೇವರ ಚಿತ್ತ ಇದ್ದಹಾಗೆ ಆಗಲಿ, ಅವರವರ ದಾರಿ ಅವರವರಿಗೆ !

[ಎಂದು ಎಡಕ್ಕೆ ನಿಷ್ಕ್ರಮಿಸುತ್ತಿರುವಾಗ : ಕಪ್ಪುತೆರೆ]

## ಒಳ ದೃಶ್ಯ : ಒಂದು

[ಕಪ್ಪುತೆರೆ ಸರಿದು, ಹಿಂದಿನ ದೃಶ್ಯದ ತೆಳುಗೆಂಪಿನ ಹಿನ್ನೆಲೆಯ ತೆರೆಯೆಡೆಯಲ್ಲಿ ಹೆಚ್ಚು ಕೆಂಪಿನ ತೆರೆ ಕಾಣಬರವುದು.

ಕೇಶವಮೂರ್ತಿ–ಲೀಲಾವತಿ ಸಂಭಾಷಣೆಯಲ್ಲಿರುವರು. ಅವರ ಉಡಿಗೆ ತೊಡಿಗೆಯಲ್ಲಿ ಸಂದರ್ಭೋಚಿತ ಮಾರ್ಪಾಟುಗಳು ಆಗಿರಬೇಕು.]

ಒಪ್ಪಿಕೊಂಡು, ಅದರಂತೆ ನಡೆಸಿಕೊಂಡು ಬಂದಿದಾರೆ, ಅವರು ಬರೆದ ಕಾಗದ ತೋರಿಸಲೇನು?

**ಲೀಲಾವತಿ :**

ನಮ್ಮ ತಂದೆಗೆ ಅಳಿಯನಿಗಿಂತ ಮಗಳು ಹೆಚ್ಚು. ಅವರು ಲೋಕ ಬಲ್ಲವರು. ನಿಮ್ಮ ಮಾತಿಗೆ ಒಪ್ಪಿಕೊಂಡಂತೆ ನಟಿಸಿ, ನನಗೆ ಗುಟ್ಟಿನಲ್ಲಿ ಕಳಿಸುತ್ತಿದಾರೆ.

**ಕೇಶವಮೂರ್ತಿ :**

ಇರಬಹುದು. ಆದರೆ, ಮನೆಗೆ ಯಾವ ಮನಿಯಾರ್ಡರ್ರೂ ಬರುತ್ತಿಲ್ಲವಂತೆ, ನಿನ್ನ ಹೆಸರಿಗೆ ?

**ಲೀಲಾವತಿ :**

ಯಾರು ಹೇಳಿದರು ?

**ಕೇಶವಮೂರ್ತಿ :**

ನಮ್ಮ ತಾಯಿ

**ಲೀಲಾವತಿ :**

ಓಹೋ, ಇಷ್ಟೆಲ್ಲಾ investigation (ತನಿಖೆ) ನಡೆದಿದೆಯೋ ಆಗಲೆ? ....ನಿಮಗೆ ನಿಜವಾದ ಸಂಗತಿ ಗೊತ್ತಿಲ್ಲ, ಪಾಪ. ಹೇಳುತ್ತೀನಿ ಕೇಳಿ : ನಮ್ಮ ಕ್ಲಬ್ಬಿನ ಪ್ರೆಸಿಡೆಂಟರ ಅಡ್ರೆಸ್ಸಿಗೆ ತರಿಸಿಕೊಳ್ಳುತ್ತಿದೀನಿ, ಮನಿಯಾರ್ಡರನ್ನ. ತೃಪ್ತಿಯಾಯಿತೋ?

**ಕೇಶವಮೂರ್ತಿ :**

ನಿಮ್ಮ ಪ್ರೆಸಿಡೆಂಟರು ಗಂಡಸರೋ ಹೆಂಗಸರೋ ?

**ಲೀಲಾವತಿ :**

ಸಂಬಂಧಪಡದ ಪ್ರಶ್ನೆಗಳಿಗೆಲ್ಲಾ ಉತ್ತರ ಹೇಳೋದಕ್ಕೆ ನಾನು ಕೈ ಕಟ್ಟಿಕೊಂಡು ಸಿದ್ಧವಾಗಿ ನಿಂತಿಲ್ಲ, ಇಲ್ಲಿ, ನಿಮ್ಮ ಆಳಿನ ಹಾಗೆ. 'ಕಾರ್ಯೇಷು ದಾಸೀ' ಅನ್ನುವ ಆ ಹಳೇ ಶ್ಲೋಕವನ್ನು ಮರೆತುಬಿಡಿ.

**ಕೇಶವಮೂರ್ತಿ :**

ಇದು ಸಂಬಂಧಪಟ್ಟ ಪ್ರಶ್ನೆಯೇ : ನಿನ್ನ ಮಾತಿಗಿಂತ ನಿಮ್ಮ ತಂದೆಯ ಮಾತಿನಲ್ಲಿ ನನಗೆ ಹೆಚ್ಚು ವಿಶ್ವಾಸ, ತಿಳಿಯಿತೆ ? ಹೀಗಿರುವಾಗ, ನಿನ್ನ ವೈಭೋಗಕ್ಕೆಲ್ಲಾ ಬೇರೆಯ ಕಡೆಯಿಂದ ಹಣ ಹರಿದು ಬರುತ್ತ ಇದ್ದರೆ, ಅದರ ಮೂಲ ಯಾವುದು ಅಂತ ಆಲೋಚಿಸಬಾರದ್ದನೆಲ್ಲ ಆಲೋಚಿಸಬೇಕಾಗುತ್ತೆ. ಊಹಿಸಬಾರದ್ದನ್ನೆಲ್ಲಾ ಊಹಿಸಬೇಕಾಗುತ್ತೆ, ತಿಳಿಯಿತೆ ?

ಕಾಸನ್ನೂ ಒದಗಿಸಲಾರೆ. ನಮ್ಮ ಮನೆಯ ಬದುಕಿನ ಮಟ್ಟ, ರೀತಿನೀತಿ, ಸಂಪ್ರದಾಯ ಇವಕ್ಕೆ ತಕ್ಕಹಾಗೆ ನೀನು ಬದಲಾಯಿಸಿಕೊಳ್ಳಬೇಕು ಅಂತ ಎಂದಿನಿಂದಲೂ ಸಾರಿಸಾರಿ ಹೇಳುತ್ತಿದ್ದೀನಿ. ನೀನು ಕೇಳಿಲ್ಲ, ಬದಲಾಯಿಸಿಲ್ಲ. ಇದನ್ನ ಒಪ್ಪಿಕೊಳ್ಳುತೀನಿ.

**ಲೀಲಾವತಿ :**

ನಿಮ್ಮ ಯೋಗ್ಯತೆಯನ್ನ.......

**ಕೇಶವಮೂರ್ತಿ :**

ಯೋಗ್ಯತೆ ಗೀಗ್ಯತೆ ಅಂತ ಸಿಕ್ಕಾಬಟ್ಟೆ ಮಾತನಾಡಬೇಡ, ತಿಳಿಯಿತೆ ?

**ಲೀಲಾವತಿ :**

ನಿಮಗೆ ಇಂಗ್ಲಿಷು ಬರುವಷ್ಟು ಚೆನ್ನಾಗಿ ನನಗೆ ಕನ್ನಡ ಬರುವುದಿಲ್ಲ, ನಾನೇನು ಮಾಡಲಿ ? Excuse me. (ಕ್ಷಮಿಸಿ.) ಹಣಕಾಸಿನ ಸಾಮರ್ಥ್ಯ, Capacity to pay ಅನ್ನೋ ಅರ್ಥದಲ್ಲಿ ನಾನು ಕೇಳಿದ್ದು.

**ಕೇಶವಮೂರ್ತಿ :**

ನೀನೂ ನನ್ನ ಹಾಗೇ ಬಿ. ಎಸ್‌ಸಿ. ಅನ್ನೋದು ನನಗೆ ಗೊತ್ತಿದೆ. ನಿನ್ನ ಇಂಗ್ಲಿಷಿನ ಪ್ರದರ್ಶನ ನನ್ನ ಮುಂದೆ ಬೇಡ ; ನಿನ್ನ ಈ ಫ್ಯಾನ್ಸಿ ಡ್ರೆಸ್ಸಿನ ಪ್ರದರ್ಶನವೂ ಈ ಮನೆಯಲ್ಲಿ ಬೇಡ.

**ಲೀಲಾವತಿ :**

ನನ್ನದು ಫ್ಯಾನ್ಸಿ ಡ್ರೆಸ್ಸಾದರೆ, ನಿಮ್ಮದು ಕ್ಲೋಸ್–ಕಾಲರ್–ಕೋಟ್–ಕಲ್ಚರ್! ಸುಮ್ಮನೆ ಮಾತಿಗೆ ಮಾತು ಆಡೋ ಹಾಗೆ ಮಾಡಿ, ಆಮೇಲೆ ನನ್ನನ್ನ ಆಕ್ಷೇಪಿಸಬೇಡಿ. ಇಷ್ಟಕ್ಕೂ, ನನ್ನ ಫ್ಯಾನ್ಸಿ ಡ್ರೆಸ್ಸಿಗೆ ಹಣ ಕೊಡಿ ಅಂತ ನಿಮ್ಮನ್ನ ನಾನು ಎಂದೂ ಕೇಳಿಲ್ಲವಲ್ಲ ?

**ಕೇಶವಮೂರ್ತಿ :**

ಅದೇ ನನಗೆ ಆಶ್ಚರ್ಯವಾಗಿರೋದು : ನೀನು ಕೇಳಿಲ್ಲ, ನಾನು ಕೊಟ್ಟಿಲ್ಲ; ನಿನ್ನ ಮೆರೆತಕ್ಕೆಲ್ಲ ಯಾವ ಖಜಾನೆಯಿಂದ ಹಣ ಪಾವತಿಯಾಗುತ್ತ ಇದೆ ಅಂತ?

**ಲೀಲಾವತಿ :**

(ಆತ್ಮಗೌರವ ಭಾವದಿಂದ) ನಮ್ಮ ತಂದೆಗೆ ಬರೆದು ತರಿಸಿಕೊಳ್ಳುತ್ತ ಇದೇನೆ.

**ಕೇಶವಮೂರ್ತಿ :**

'ನಿಮ್ಮ ಮಗಳಿಗೆ ಹಣ ಕಳಿಸಿ ಕೊಬ್ಬಿಸಬೇಡಿ, ನನಗೆ ಅವಮರ್ಯಾದೆ ಮಾಡಬೇಡಿ' ಅಂತ ನಿಮ್ಮ ತಂದೆಗೆ ಬರೆದು ವರ್ಷ ಆಯಿತು. ಅವರೂ,

**ಕೇಶವಮೂರ್ತಿ :**

ನಿನ್ನ ಮಾತಿಗೆ ಪ್ರಮಾಣ ? ಹೇಗೆ ನಂಬಲಿ ?

**ಲೀಲಾವತಿ :**

ನಮ್ಮ ಕ್ಲಬ್ಬಿನ ಪ್ರೆಸಿಡೆಂಟರು ಅಷ್ಟೇನೂ ವಿದ್ಯಾವಂತೆಯಲ್ಲ. ಸರಳ ಸ್ವಭಾವದವರು. ಕ್ಲಬ್ಬಿನಲ್ಲಿ ಅವರ ಕೆಲಸವನ್ನೆಲ್ಲ ನಾನು ಮಾಡಿಕೊಡ್ತೇನೆ ; ಅವರ ಭಾಷಣ ಬರೆದುಕೊಡ್ತೇನೆ. ನಮ್ಮ ಯಜಮಾನರು ತಮಗೆಂದು ಕೊಡುವ ಹಣವನ್ನೆಲ್ಲಾ ಅವರು ನನಗೆ ಕೊಟ್ಟುಬಿಡುತಾರೆ. ನಂಬಿದರೆ ನಂಬಿ, ಬಿಟ್ಟರೆ ಬಿಡಿ.

**ಕೇಶವಮೂರ್ತಿ :**

ನಾನು ನಂಬಲಾರೆ.

**ಲೀಲಾವತಿ :**

ನಂಬದೆ ಹೋದರೆ, ನಿಮಗೆ ಇಷ್ಟಬಂದಂತೆ ಮಾಡಿಕೊಳ್ಳಿ. ಬೇಕಾದರೆ 'ಡೈವೋರ್ಸ್' ಮಾಡಿಬಿಡಿ, ನನ್ನನ್ನ. ಹೇಗೂ ಹೊಸದಾಗಿ ಕಾನೂನಿನ ವರ ದೊರಕಿದೆಯಲ್ಲಾ, ನಿಮ್ಮಂಥವರಿಗೆ.

**ಕೇಶವಮೂರ್ತಿ :**

ನಿನ್ನನ್ನ ನಾನು 'ಡೈವೋರ್ಸ್' ಮಾಡುವುದಿಲ್ಲ. ಅಷ್ಟು ಬೇಕಾದರೆ ನೀನೇ ನನ್ನನ್ನ 'ಡೈವೋರ್ಸ್' ಮಾಡು. ಅದಕ್ಕೆ ನನ್ನ ಆಕ್ಷೇಪಣೆಯಿಲ್ಲ. ಈ ಪವಿತ್ರಗೃಹದಲ್ಲಿ ನೀನು ಇರಬೇಕಾದರೆ, ಕಷ್ಟವೋ ನಿಷ್ಠುರವೋ, ನನ್ನ ಇಷ್ಟಾನುಸಾರ ಇರಬೇಕು; ಇಲ್ಲದಿದ್ದರೆ ಇಂದೇ ಈ ಮನೆ ಬಿಟ್ಟು, ನಿನ್ನ ಇಷ್ಟಬಂದ ಕಡೆಗೆ ಹೋಗಿ, ನಿನ್ನ ಇಷ್ಟಾನುಸಾರ ಇರಬಹುದು. 'ಡೈವೋರ್ಸಿ'ನ ಹೆಸರಿನಲ್ಲಿ ನಿನ್ನ ದುರ್ವ್ಯಾಪಾರಕ್ಕೆ ಸಮರ್ಥನಾಪತ್ರ ದೊರಕಿಸಿ ಕೊಡಲು ಸಾಧನವಾಗಲಾರೆ ನಾನು.

**ಲೀಲಾವತಿ :**

ಈ ಮನೆಯಲ್ಲಿ, ಪವಿತ್ರಗೃಹದಲ್ಲಿ, ನಿಮ್ಮ ಇಷ್ಟ ಎನ್ನುವುದು ನನಗೆ ಚೆನ್ನಾಗಿ ಮಂದಟ್ಟಾಗಿದೆ : ನಿಮ್ಮ ಇಷ್ಟದ ಸಂಕೇತ—ತೊಟ್ಟಿಲು, ಮತ್ತು ಸೌಟು; ಈ ಕೈಲಿ ತೊಟ್ಟಿಲು ತೂಗಬೇಕು, ಸೌಟು ಹಿಡಿಯಬೇಕು. ಶತಶತಮಾನಗಳಿಂದ ನಮ್ಮ ಕೈಗಳನ್ನು ಕಟ್ಟಿಹಾಕಿರುವ ಬೇಡಿಗಳವು. ಅಡಿಗೆಮನೆ, ಅದು ತಪ್ಪಿದರೆ ಹೆರಿಗೆಮನೆ—ಹೆಂಗಸಿನ ಸೆರೆಮನೆ, ಇವು. ಒಂದು ಮಗುವಾಯಿತೋ, ಹೆಣ್ಣಿನ ಸೌಂದರ್ಯ ಸ್ವಾತಂತ್ರ್ಯ ಎರಡಕ್ಕೂ ಸರ್ವನಾಶ ಸಿದ್ಧ. ಇವೆರಡನ್ನೂ ಕಾಪಾಡಿಕೊಳ್ಳಬೇಕೆಂದು ನಾನು ಸಂಕಲ್ಪಿಸಿದ್ದೇನೆ. ನಿಮ್ಮ ಇಷ್ಟ ನಡಸಲು ನಾನು ಸಿದ್ಧಳಾಗಿಲ್ಲ.

**ಲೀಲಾವತಿ :**

ಅಂಥ ಆಲೋಚಿಸಬಾರದ್ದು, ಊಹಿಸಬಾರದ್ದು, ಅದು ಯಾವುದು, ಆ ಮಹಾಪ್ರಮಾದ ?

**ಕೇಶವಮೂರ್ತಿ :**

ನನ್ನ ಭಾಗಕ್ಕೆ ಊಹೆ : ನಿನಗೆ ಅದು ಅನುಭವದ ವಿಷಯ. ಇನ್ನದನ್ನ ಬಿಡಿಸಿ ಹೇಳಬೇಕೆ ? ನಿನ್ನ ಆಂತರ್ಯವನ್ನ ಪರಮಾತ್ಮ ಬಲ್ಲ. ಅದಕ್ಕೆ ನಾನು ಹೊಣೆಯಲ್ಲ. ನಿನ್ನ ಹೊರಗಿನ ನಡವಳಿಕೆಯನ್ನ ಇನ್ನಾದರೂ ನೀನು ತಿದ್ದಿಕೊಳ್ಳದೆ ಹೋದರೆ, ನಾನಾದರೂ ನಿನ್ನನ್ನ ನನ್ನ ಹೆಂಡತಿಯಹಾಗೆ ಕಾಣುವುದು, ನಡಸಿಕೊಳ್ಳುವುದು, ಸಾಧ್ಯವಿಲ್ಲ.

**ಲೀಲಾವತಿ :**

ನನ್ನ ನಡವಳಿಕೆ ಕೆಟ್ಟಿದೆಯೋ, ನಿಮ್ಮ ದೃಷ್ಟಿ ಕೆಟ್ಟಿದೆಯೋ? ಸ್ವಲ್ಪ ನಿಧಾನವಾಗಿ ಆಲೋಚನೆ ಮಾಡಿ.

**ಕೇಶವಮೂರ್ತಿ :**

ನಿನ್ನ ತಂದೆಯ ಹಣವಲ್ಲ, ನಿನ್ನ ಗಂಡ ಎನ್ನಿಸಿಕೊಂಡ ನಾನು ಕೊಟ್ಟ ಹಣವಲ್ಲ, ಸ್ವಂತ ಸಂಪಾದನೆಯ ಹಣವಲ್ಲ. ಯಾವುದೋ ಹಣದಿಂದ ನಡಸುವ ನಿನ್ನ ಶೃಂಗಾರ ಜೀವನ ಅನುಮಾನಾಸ್ಪದವಾಗಿ ಕಾಣುತ್ತೆ.

**ಲೀಲಾವತಿ :**

ನನ್ನದು ಸ್ವಂತ ಸಂಪಾದನೆಯ ಹಣ ಅಲ್ಲ ಅಂತ ನಿಮಗೆ ಹೇಗೆ ಗೊತ್ತು?

**ಕೇಶವಮೂರ್ತಿ :**

ಹೌದು, ಹೌದು, ಮರೆತಿದ್ದೆ : ಸ್ವಂತ ಸಂಪಾದನೆಯ ಹಣವೇ. ಸಂಪಾದನೆಯ ಕ್ರಮ–ಬಹಳ ಶ್ಲಾಘನೀಯ, ಅಲ್ಲವೆ ? Birth control, Birth control. (ಸಂತಾನ ನಿರೋಧ) ಅಂತ ಬಾಯಿ ತುಂಬ ಹೇಳುತ್ತ ಪೆಟ್ಟಿಗೆ ತುಂಬ ಹಾಳುಮೂಳು ತುಂಬಿಕೊಂಡಿರುವುದರ ಒಳಮರ್ಮ ಈಗ ನನಗೆ ಅರ್ಥವಾಯ್ತು–ಅದು, ಧರ್ಮಬಾಹಿರವಾದ ಗೃಹಬಾಹಿರವಾದ ಕಾಮ ಜೀವನಕ್ಕೆ 'ಕಾಮಫ್ಲಾಜ್' (camouflage)–ಸೊಗಸಾದ ಸೋಗು....

**ಲೀಲಾವತಿ :**

ನೀವು ಬೇಕಾದ್ದು ಅನ್ನಿ, ಅನ್ನಿಸಿಕೊಳ್ತೀನಿ. ಆದರೆ, ಈ ಒಂದು ಅಸತ್ಯವಾದ, ತುಚ್ಛವಾದ, ಅನ್ಯಾಯವಾದ ಆರೋಪಣೆಯನ್ನ ಮಾತ್ರ ಎಂದಿಗೂ ಸಹಿಸಲಾರೆ.

ಟ್ಟೆ; ಇಷ್ಟಂತೂ ಕಣ್ಣಿಗೆ ಕಟ್ಟಿದಂತಿದೆ. ಶ್ರೀಮಂತರು ಎನ್ನುವುದರಲ್ಲಿ ಸಂಶಯವೇ ಇಲ್ಲ. ಅಂದೂ ಅವರೇ, ಇಂದೂ ಅವರೇ. ಆವೊತ್ತು ಸಿನಿಮಾದ ಒಳಗೆ ; ಮೊದಲು ಅನುಮಾನವಾದರೂ, ಎಲ್ಲೋ ತಮ್ಮ ಹೆಂಡಿತಿಯೊಂದಿಗೆ ಬಂದಿದ್ದಾರೆ ಎಂದುಕೊಂಡೆ. ಸಿನಿಮಾ ಮುಗಿದ ಮೇಲೆ, ಹೊರಕ್ಕೆ ಬಂದು ಅನುಮಾನ ಪರಿಹಾರ ಮಾಡಿಕೊಳ್ಳುವಷ್ಟರಲ್ಲಿ, ಅವರು ಮಾಯವಾಗಿ ಬಿಟ್ಟಿದ್ದರು. ಇವೊತ್ತು, ಸಿನಿಮಾ ಮಂದಿರದ ಮುಂದೆಯೇ ಇಬ್ಬರೂ ಕಾರಿನಿಂದ ಇಳಿದು ಒಳಕ್ಕೆ ಹೋದದ್ದನ್ನ ಕಣ್ಣಾರೆ ಕಂಡೆ. ಜೊತೆಗಿದ್ದವಳು ನಿನ್ನ ಹೆಂಡಿತಿ ಅನ್ನೋದಂತೂ ಖಂಡಿತ; ಅಲ್ಲಿ ಇಲ್ಲಿ ಕಂಡು ಆತನ ಮುಖ ಪರಿಚಯ ಇದೆಯೇ ಹೊರತು, ಆತ ಯಾರೋ ನಾ ಕಾಣೆ. ಇನ್ನು ಹೆಚ್ಚಿನ ವಿಷಯ ನನಗೆ ತಿಳಿಯದು. ನನಗಂತೂ ಸಹಿಸುವುದಕ್ಕಾಗಲಿಲ್ಲ. ನಿಜ ತಿಳಿಸಿ, ನಿಷ್ಠುರ ಕಟ್ಟಿಕೊಂಡರೂ ಚಿಂತೆಯಿಲ್ಲ, ತಿಳಿಸಿಹೋಗೋಣ ಅಂತ ಬಂದೆ.

**ಕೇಶವಮೂರ್ತಿ :**

ಇಷ್ಟು ದಿನವೂ ಬಿಸಿಯ ತುಪ್ಪವನ್ನು ನುಂಗಲಾರದೆ ಉಗಳಲಾರದೆ ಬಾಯಲ್ಲಿಟ್ಟುಕೊಂಡಿದ್ದೆ, ಗೋಪಾಲ್. ಬಾಯಿ ಸುಟ್ಟಾಯಿತು ; ಹೊಟ್ಟೆಯನ್ನ ಸುಡಿಸಿಕೊಳ್ಳಲಾರೆ. ಅದನ್ನು ಉಗುಳಲು ನಿಶ್ಚಯಿಸಿದ್ದೇನೆ. ಕೈ ವ್ರಣವಾಗಿ ಕೊಳೆಯುತ್ತಿರುವಾಗ, ಮೈಯಿನ ಕ್ಷೇಮಕ್ಕೋಸ್ಕರ ಕೈ ಕತ್ತರಿಸಿಕೊಳ್ಳಬೇಕಾದರೆ ಕತ್ತರಿಸಿಕೊಳ್ಳಲೇಬೇಕು. ಅರ್ಥವಾಯಿತೆ, ಗೋಪಾಲ್?

**ಗೋಪಾಲ್ :**

ಅರ್ಥವಾಯಿತು. I am very sorry (ಇದು ಬಹು ವ್ಯಸನದ ವಿಷಯ.)

**ಕೇಶವಮೂರ್ತಿ:**

Thank you-for the good turn. (ನಿನ್ನಿಂದ ತುಂಬ ಉಪಕಾರವಾಯಿತು)

**ಗೋಪಾಲ್ :**

ಗುಡ್ ಟರ್ನ್! ಗುಡ್ ಟರ್ನ್ !

[ಕಪ್ಪು ತೆರೆ]

**ಕೇಶವಮೂರ್ತಿ :**

ಅದು ನನ್ನ ಇಷ್ಟ ಮಾತ್ರವಲ್ಲ : ಪ್ರಕೃತಿ ನಿಯಮ ; ಸನಾತನ ಮಾನವ ಧರ್ಮ; ಎಲ್ಲ ಕಾಲದ ಎಲ್ಲ ದೇಶಗಳ ವಿವೇಕವಂತ ಜನರ ಹೃದಯಾಂತರಾಳದ ಇಷ್ಟ ನಿಜವಾದ ಗೃಹಿಣಿ ಮನೆಯ ಭಾಗ್ಯಲಕ್ಷ್ಮಿ, ಸಂತಾನ ಲಕ್ಷ್ಮಿ ; ಅನ್ನಪೂರ್ಣೆ, ಸರ್ವಮಂಗಳೆ. ಸೌಟು ಹಿಡಿಯಲು ಒಲ್ಲದ, ತೊಟ್ಟಿಲು ತೂಗಲು ಒಲ್ಲದ ಹೆಣ್ಣಿನ ಕೈ, ಹುಣ್ಣಿನ ಕೈಯಿ, ತಿಳಿಯಿತೆ?

**ಲೀಲಾವತಿ :**

ಅದು ನನ್ನಿಂದ ಸಾಧ್ಯವಿಲ್ಲ. ನಿಮ್ಮಿಂದ ಗಿಣಿಪಾಠ ಕಲಿತು ಅದನ್ನ ಒಪ್ಪಿಸುವುದಕ್ಕೆ ನಾನು ನಿಮ್ಮ ಮನೆಯ ಪಂಜರದ ಗಿಣಿಯಲ್ಲ.

**ಕೇಶವಮೂರ್ತಿ :**

ಈ ಮನೆ ನಿನಗೆ ಪಂಜರ ಎನ್ನಿಸಿರುವ ಪಕ್ಷಕ್ಕೆ, ಅದರ ಬಾಗಿಲನ್ನು ಇಂದು ತೆರೆದುಕೊಟ್ಟಿದೇನೆ ; ಬೇಕಾದಾಗ ಹಾರಿಹೋಗಬಹುದು. (ಎಂದು ನಿರ್ಧಾರದ ನಡಗೆಯಿಂದ ನಿಷ್ಕ್ರಮಿಸುವನು.)

[ಕಪ್ಪು ತೆರೆ]

# ಒಳ ದೃಶ್ಯ : ಮೂರು

[ಕಪ್ಪುತೆರೆ ಸರಿದ ಮೇಲೆ, ಹಿನ್ನೆಲೆಯಲ್ಲಿ ಮತ್ತೆ ತೆಳುಗೆಂಪು ಬಣ್ಣದ ತೆರೆ ಕಾಣಬರುವುದು. ಕೇಶವಮೂರ್ತಿಯ ಉಡುಪಿನಲ್ಲಿ ಕಾಲವ್ಯತ್ಯಾಸವನ್ನು ಸೂಚಿಸಲು ಅವಶ್ಯವಾದಷ್ಟು ಅಲ್ಪಸ್ವಲ್ಪ ಮಾರ್ಪಾಟು.]

**ಕೇಶವಮೂರ್ತಿ :**

ನೀನು ಹೇಳುತ್ತಿರುವುದು ನಿಜವೇ ಗೋಪಾಲ್?

**ಗೋಪಾಲ್ :**

ಕಣ್ಣಾರೆ ಕಂಡದ್ದು. ಇದು ಎರಡನೆಯ ದಿನ.

**ಕೇಶವಮೂರ್ತಿ :**

ಜೊತೆಗಿದ್ದವರು ಯಾರು, ಬಲ್ಲೆಯಾ?

**ಗೋಪಾಲ್ :**

ಜರೀಪೇಟ ಸುತ್ತಿದ್ದರು ; ಓಪನ್ ಕಾಲರಿನ ಸರ್ಜುಕೋಟು ; ಕೆಂಪು

**ಕೇಶವಮೂರ್ತಿ :**

ಅನರ್ಥ ಇದು. ಹೇಗೆ ಅರ್ಥವಾಗುತ್ತೆ ! ನಾಳೆ ಎಲ್ಲ ಅರ್ಥವಾಗುತ್ತೆ, ಔತಣ ಮಾಡಿ ಅವಳನ್ನ ಬೀಳ್ಕೊಟ್ಟಾಗ ! ರಾತ್ರಿಯ ಹೊತ್ತು ಅವಳನ್ನ ಹೊರಕ್ಕೆ ನೂಕಿದ ಕಟುಕ ಎನ್ನಿಸಿಕೊಳ್ಳಲಾರೆ.

**ಭಾಗೀರಥಮ್ಮ :**

(ನಿಟ್ಟುಸಿರು ಬಿಟ್ಟು) ನಾಳೆ ಔತಣ ಇರಲಿ ; ಈಗ ಊಟಕ್ಕೇಳಿ ಮೊದಲು ಅನ್ನ ಆರಿ ಅಕ್ಷತೆಯಾಗಿದೆ.

**ಕೇಶವಮೂರ್ತಿ :**

ಊಟ, ಊಟ! ಇವಳು ಮಾಡಲಿ, ಇವಳಿಗೆ ಬಡಿಸಮ್ಮಾ ; ಹಸಿದು ಬಂದಿರಬಹುದು, ಪಾಪ ! ನನ್ನ ಹೊಟ್ಟೆ ತುಂಬಿದೆ.

**ಭಾಗೀರಥಮ್ಮ :**

ಏನೋ ಅಪ್ಪ, ನನಗೊಂದೂ ಅರ್ಥವಾಗೋದಿಲ್ಲ.

[ಕಪ್ಪು ತೆರೆ.]

## ಒಳ ದೃಶ್ಯ : ಐದು

[ಕಪ್ಪು ತೆರೆ ಸರಿದು, ಹಿನ್ನೆಲೆಯಲ್ಲಿ ಹಳದಿಯ ಬಣ್ಣದ ತೆರೆಯನ್ನು ಕಾಣಗೊಡುವುದು. ಕಾರೊಂದು ಬಂದು ನಿಂತ ಸದ್ದು.

**ಸಿದ್ದಪ್ಪ :**

(ಹೊರಗಿನಿಂದ) ಅವ್ವಾ, ಅವ್ವಾ !

**ಭಾಗೀರಥಮ್ಮ :**

(ಒಳಗಿನಿಂದ ಬಂದು) ಯಾರಪ್ಪಾ ಅದು ? ಬಾ ಒಳಕ್ಕೆ.

**ಸಿದ್ದಪ್ಪ :**

(ಪ್ರವೇಶಿಸಿ) ರಾಯರು ಇಲ್ಲವೇನ್ರವ್ವ ?

**ಭಾಗೀರಥಮ್ಮ :**

ಯಾವ ರಾಯರಪ್ಪ ?.......ಬ್ಯಾಂಕ್ ಜವಾನನೇನಪ್ಪ, ನೀನು?

**ಸಿದ್ದಪ್ಪ :**

ಬ್ಯಾಂಕ್ ಜವಾನ ಅಲ್ರವ್ವ, ಸೋಮಸೇಕರಪ್ನೋರು ಇಲ್ವಾ, ಅವರ ಮನೆ ಆಳು.

# ಒಳ ದೃಶ್ಯ : ನಾಲ್ಕು

[ಕಪ್ಪು ತೆರೆ ಸರಿಯುವುದು.
ಹಿನ್ನೆಲೆಯಲ್ಲಿ ಕಡುಗೆಂಪು ಬಣ್ಣದ ತೆರೆ.
ತೆರೆ ಸರಿದಾಗ, ಕತ್ತಲೆ.
ಕೇಶವಮೂರ್ತಿ ಒಂದು ಮೂಲೆಯಲ್ಲಿ ಅಡಗಿಕೊಂಡು ಕುಳಿತಿರುವನು.
ಹೊರಗೆ ಕಾರೊಂದು ಸರ್‍ರನೆ ಬಂದು ನಿಂತ ಸದ್ದು.
ಕೇಶವಮೂರ್ತಿ ಸ್ವಿಚ್ ಹಾಕಿ, ಬೀದಿಯ ಬಾಗಿಲ ಕಡೆ ಧಾವಿಸುವನು.]

**ಕೇಶವಮೂರ್ತಿ :**

(ಲೀಲನನ್ನು ದರದರನೆ ಒಳಕ್ಕೆ ಎಳೆದುಕೊಂಡು ಬರುವನು) ಅಮ್ಮಾ ! ಅಮ್ಮಾ ! ಬಾ ಇಲ್ಲಿ ! ನೋಡು ನಿನ್ನ ಸೊಸೆಯನ್ನ !

**ಭಾಗೀರಥಮ್ಮ :**

(ಗಾಬರಿಗೊಂಡು ಒಳಗಿನಿಂದ ಬಂದು) ಏನೋ ಇದು, ಹೀಗೆ ಕೈ ಹಿಡಿದು ಎಳೆದಾಡುತ್ತಿದ್ದೀ ಹೆಂಡತಿಯನ್ನ?

**ಕೇಶವಮೂರ್ತಿ :**

ಎಷ್ಟು ದಿನ ನಾನು ಮನೆಗೆ ಬರುವುದಕ್ಕೆ ಮುಂಚೆ ಹೀಗೆ ಹೊತ್ತಾಗಿ ಬಂದಿದ್ದಾಳಮ್ಮ, ಈ...ಈ....

**ಭಾಗೀರಥಮ್ಮ :**

ಏನೋ ಸಂಘವಂತೆ ಸಮಾಜವಂತೆ. ಎಷ್ಟೋ ದಿನ ಹೊತ್ತಾಗಿಯೇ ಬಂದಿದಾಳಪ್ಪ ; ನೀನು ಬ್ಯಾಂಕಿನಿಂದ ಇನ್ನೂ ಬಂದೇ ಇರುತ್ತಿರಲಿಲ್ಲ. ಅದು ಯಾರೋ ಅವರ ಅಧ್ಯಕ್ಷರಂತೆ, ಪಾರ್ವತಮ್ಮನವರು, ಅವರೇ ಬಂದು ಇವಳನ್ನು ಒಳಕ್ಕೆ ಬಿಟ್ಟು ಹೋಗುತಾ ಇದ್ದರು. ಯಾರು, ಏನು, ಎತ್ತ ಅಂತ ನಾನು ಬೇರೆ ಮಾತಾಡಿಸುತಾ ಇರಲಿಲ್ಲ.

**ಕೇಶವಮೂರ್ತಿ :**

ಇವತ್ತು ಆ ಪಾರ್ವತಮ್ಮನವರ ಗಂಡ, ಇವಳ.....ಇವಳ.....ಆ ಹೊಲಸು ಮಾತನ್ನು ಹೇಳೊದಕ್ಕೂ ಬಾಯಿ ಬರೋದಿಲ್ಲವಮ್ಮ.........ಅವರು ಕರೆದುಕೊಂಡು ಬಂದು ಬಿಟ್ಟು ಹೋಗಿದಾರೆ.

**ಭಾಗೀರಥಮ್ಮ :**

ಏನೋ, ನೀನು ಹೇಳೋದು ! ಅರ್ಥವೇ ಆಗೋದಿಲ್ಲವಲ್ಲೋ?

ಅಂತ ಅವರ ಯೆಸ್ರು—ಪೆಶಿಡೆಂಟ್ ಪಾರ್ವತಮ್ನೋರು— ಅವರು ಒಂದು ಇಸ್ತ್ರೀಸಂಗ ಅಂತ ಮಾಡ್ಕೊಂಡವ್ರೆ—ಅದರ ಪೆಶಿಡೆಂಟ್ರು ಅವರು. ನಾನು, ಆ ಸಂಗದ ಜವಾನ. ಮನೇ ಕೆಲ್ಸಕ್ಕೂ ಹಾಕ್ಕೋತಾರೆ—ಮನೆ, ಸಂಗ ಎಲ್ಲ ಒಂದೇ ಅನ್ನಿ—ಒಂದೇ ಕಟ್ಟಡದಲ್ಲಿ.

**ಭಾಗೀರಥಮ್ಮ :**

ಆ ಸಂಗದ ಹೆಸರೇನೋ ?

**ಸಿದ್ದಪ್ಪ :**

ಯೆಸ್ರುಗಿಸ್ರು ಒಂದೂ ಇಲ್ಲ ಕಣವ್ವ.

**ಭಾಗೀರಥಮ್ಮ :**

ಇಂಥ ಸಂಘ ಅಂತ ಬೋರ್ಡು ಬರೆದು ಹಾಕಿಲ್ಲವೇನೋ?

**ಸಿದ್ದಪ್ಪ :**

ಬೋಲ್ಡುಗೀಲ್ಡು ಏನೂ ಇಲ್ರವ್ವ.

**ಭಾಗೀರಥಮ್ಮ :**

ಅಲ್ಲಿಗೆ ಯಾರು ಯಾರು ಬರ್ತಾರೋ ?

**ಸಿದ್ದಪ್ಪ :**

ಎಲ್ಲ ಹೆಣ್ಮಕ್ಳೇ—ಕಾಲೇಜು ಓದೋ ಹುಡ್ಗೀರು, ವಯಸ್ಸಾದೋರು ಆಗಿಲ್ದೋರು, ಗಂಡ ಇರೋರು ಇಲ್ದೋರು—ಅಂದ್ರೆ ನಿಮ್ಮಂತೋರು ಬರೋಕಿಲ್ಲ ಅನ್ಕೊಳ್ಳಿ—ಅಂತೂ ಒಂದು ಹತ್ತಿಪ್ಪತ್ತು ಹೆಣ್ಮಕ್ಳು ಬರ್ತವ್ರೆ—ಗಂಡಸ್ರೂ ಬರ್ತವ್ರೆ, ಆಗಾಗ್ಗೆ, ಒಬ್ರೊಬ್ರು—ವಿಜಿಟರ್ರು ಅಂತ. ಬಂದ ಹೆಣ್ಮಕ್ಳನ್ನ ನಮ್ಮ ಡ್ರೈವರಪ್ಪ ಅವರವರ ಮನೇಗೆ ಕರಕೊಂಡ್ಹೋಗಿ ಬಿಡ್ತಾನೆ. ಅವನಿಗ್ಗೊತ್ತು ಮಸ್ತಾಗಿ ಈ ಸಂಗದ ವಿಚಾರ ಎಲ್ಲ—ಅಂದ್ರೆ....

**ಭಾಗೀರಥಮ್ಮ :**

ಅಲ್ಲಿ ಏನೇನು ಕೆಲಸ ನಡೆಯುತ್ತೊ?

**ಸಿದ್ದಪ್ಪ :**

ಅಯ್ಯೋ ! ನೆಗಾ ಬರ್ತದೆ ಕಣವ್ವ ನೆಗಾ ! ಆ ಬಣ್ಣದ ಬೊಂಬೇಗೋಳು ಕೆಲ್ಸಾ ಮಾಡ್ತವಾ ? ಹ್ಞ! ಸದಾ ಕೇಕೇ ಹಾಕ್ತಾ ಇರೋದೇ ಕೆಲ್ಸ ! ಅದು ಬಿಟ್ರೆ. ಮೂರು ಹೊತ್ತು ಆಟ—ಒಳಗಡೆ, ಪಗಡೆ, ಚದುರಂಗ, ಇಸ್ಪೇಟು, ಕ್ಯಾರಮ್ಮು, ಕಂಡದ್ದು ಕಾಣದ್ದು ಏನೇನೋ ಆಟ; ಹೊರಗಡೆ, ಟೇನೀಸು, ಚೆಂಡು ಹೊಡೆದಾಡೋ ಆಟ. ಅದೂ ಬಿಟ್ರೆ, ಸೀಮೇಯೆಂಗ್ಸರ ಬೆತ್ಲೆ ಬೊಂಬೆ ಇರೋ

**ಭಾಗೀರಥಮ್ಮ :**

ಯಾವ ಸೋಮಶೇಖರಪ್ನೋರಪ್ಪ ?

**ಸಿದ್ದಪ್ಪ :**

ಅದೇ, ಆ ಇಲ್ಸನ್ ಗಾಲ್ಡನ್ ಎಕ್ಸ್ಟೇಸನ್—ಲಾಲ್‌ಬಾಕ್ಲಾಚೆ— ಮಸಾಣತ್ತಾವ ಒಸಾ ಬಂಗ್ಲೆ ಕಟ್ಕೊಂಡವ್ರೆ, ಅದೆಂತಾದ್ದೊ ರೀಟೈರ್ಲ್ಡ್ ಇನ್‌ಸ್ಪೇಟ್ರು—ಅವರ ಮನೇ ಆಳು.

**ಭಾಗೀರಥಮ್ಮ :**

ಯಾರೋಪ್ಪ ನನಗೆ ಗೊತ್ತಿಲ್ಲ.

**ಸಿದ್ದಪ್ಪ :**

ಇರ್ಲ್ಲಿ ಬುಡಿ. ಇದು ಕೇಸವಮೂರ್ತಿಗಳ—ಅಂದ್ರೆ—ಅವರ ಯೆಂಡ್ರು, ಲೀಲಾವತಮ್ನೋರ ಮನೆ ತಾನೆ?

**ಭಾಗೀರಥಮ್ಮ :**

ಇದೇನಪ್ಪ ಇಷ್ಟೆಲ್ಲ ತನಿಖೆ ಮಾಡ್ತಿ ? ನೀನೇನು ಪಿಂಚಿನ್ ತಗೊಂಡೀರೋ ಪೋಲೀಸ್ನೋನೋ ಇಲ್ಲ ಮನೆಗಂದಾಯ ವಸೂಲ್ಮಾಡೋ ಮುನಿಸಿಪಾಲ್ಟಿ ಮುತ್ಸದ್ದೀನೋ ? ನಿನ್ನ ಕಾವಿ ಬಟ್ಟೆ ನೋಡಿದ್ರೆ ಹೆದರಿಕೆ ಆಗುತ್ತೆ.

**ಸಿದ್ದಪ್ಪ :**

ಅಯ್ಯೋ, ಖಾಕೀ ಬಟ್ಟೆ ಕಾಲ ಆಗೋಯ್ತರವ್ವ ; ಈಗ ಖಾದೀ ಬಟ್ಟೆ ಕಾಲ ; ಅಮ್ಯಾಕೆ, ಮತ್ತೆ ಕಾವಿ ಬಟ್ಟೆ ಕಾಲ ಬಂದರೂ ಬರಭೋಯ್ದು.

**ಭಾಗೀರಥಮ್ಮ :**

ಅದಿರಲಿ. ಏನು ಸಮಾಚಾರ ?

**ಸಿದ್ದಪ್ಪ :**

ಯೇಳ್ತೀನಿ. ಲೀಲಾವತಮ್ನೋರ ಮನೆ ಇದೇ ತಾನೆ?

**ಭಾಗೀರಥಮ್ಮ :**

ಇದೇ ಕಣಪ್ಪ. ಅದು ಸರಿ ನಮ್ಮ ಲೀಲಾವತಮ್ಮನಿಗೂ ಆ ಸೋಮಶೇಖರಪ್ಪನವರಿಗೂ.......ಗುರುತು, ಪರಿಚಯ...

**ಸಿದ್ದಪ್ಪ :**

...ಸಂಬಂಧ, ಏನೂ ಅಂತ ತಾನೇ? ನಾನು ತೆಳಿಯೋ ಮಟ್ಟಿಗೆ, ಅವರ ಯೆಂಡ್ರ ಸ್ನೇಯಿತರು......... ಸೋಮಸೇಕ್ರಪ್ಪಾವರ ಯೆಂಡ್ರವರಲ್ಲ— ಪಾತಕ್ಕಾವ್ರು—ಅವರ್ನ ಎಲ್ಲಾರೂ ಕೂಗೋದು ಅಂಗೇನೇ— ಪಾರ್ವತಮ್ನೋರು

**ಸಿದ್ದಪ್ಪ :**

ಯಾವುದರವ್ವಾ ಅವರ ಕೋಣೆ ?

**ಭಾಗೀರಥಮ್ಮ :**

ತೋರಿಸ್ತೀನಿ, ಬಾ.

[ಕಪ್ಪು ತೆರೆ]

## ಒಳ ದೃಶ್ಯ : ಆರು

[ಕಪ್ಪು ತೆರೆ ಸರಿದು, ಹಸುರು ಬಣ್ಣದ ತೆರೆ ಕಾಣಬರುವುದು]

**ಭಾಗೀರಥಮ್ಮ :**

ಏನಪ್ಪಾ, ಗೋಪಾಲರಾಯರೇ, ನಿಮ್ ಸಲಹೇನ ನಮ್ಮ ಕೇಶವಮೂರ್ತಿ ಒಪ್ಪಿಕೊಂಡನೆ ?

**ಗೋಪಾಲ್ :**

ಬಡಪೆಟ್ಟಿಗೆ ಒಪ್ಪಲಿಲ್ಲ. ಒಪ್ಪಿಸೋದು ತುಂಬ ಕಷ್ಟವಾಯಿತು. ಇಷ್ಟೆಲ್ಲಾ ರಾದ್ಧಾಂತವಾಗಿದ್ದರೂ, ಆ ಮೊದಲನೇ ಹೆಂಡತಿ ಅಂದರೆ ಅವನು ಇನ್ನೂ ವ್ಯಾಮೋಹ ಬಿಟ್ಟಿಲ್ಲ.

**ಭಾಗೀರಥಮ್ಮ :**

ಅವಳ ರೂಪ ಅಂಥಾದ್ದಪ್ಪ—ಅದಕ್ಕೆ ಅವನೇನು ಮಾಡ್ತಾನೆ, ಅವಳೇನು ಮಾಡ್ತಾಳೆ.

**ಗೋಪಾಲ್ :**

ನೀವು ಹೇಳೋದೂ ದಿಟವೆ— 'ಭಾರ್ಯಾ ರೂಪವತೀ ಶತ್ರುಃ' ಅಂತ ಪ್ರಸಿದ್ಧವಾಗಿಲ್ಲವೆ?

**ಭಾಗೀರಥಮ್ಮ :**

ಹಾಗಂತ ಕುರೂಪಿಯನ್ನ ಮದುವೆ ಮಾಡಿಕೊಳ್ಳುವುದಕ್ಕಾಗುತ್ತೆಯೇ ಅಪ್ಪ?— ನೀವು ಗೊತ್ತು ಮಾಡಿಕೊಂಡು ಬಂದಿದ್ದೀರಲ್ಲ, ಆ ಸಾಗರದ ಹುಡುಗಿ, ಅವಳು ಹೇಗಿದ್ದಾಳೆ ?

**ಗೋಪಾಲ್ :**

ರೂಪ, ಓದು ಎಲ್ಲ ಎಷ್ಟು ಬೇಕೋ ಅಷ್ಟು. ಗೃಹಿಣಿಯಾಗಿ ಬಾಳಲು ಯೋಗ್ಯವಾದ ಹೆಣ್ಣು. ನನ್ನ ಅಭಿಪ್ರಾಯದಲ್ಲಿ, ಹೊಟ್ಟೆಯಪಾಡಿಗೋಸ್ಕರ

ಬಣ್ಣಬಣ್ಣದ ಚಿತ್ರದ ಪುಸ್ತಕಾನ ಕೈಲಿಡ್ಕೊಂಡು ಒಂದೊಂದು ಮೂಲೇಲಿ ಒಬ್ರೊಬ್ರು ಮೆತ್ತೆ ಕುರ್ಚೀ ಮ್ಯಾಗೆ ದಿಮಾಕು ಮಾಡ್ತ ಕುಕ್ಕರ್ಸಿಕೊಂಡಿರೋದು. ಬೇಕ್ಬೇಕಾದಾಗ, ಪೋಟ್ಲಿಂದ ಕಾಫಿ ತರ್ಸೋದು ಉಯ್ಕೊಳ್ಳೋದು. ಗಂಡ್ಸರಿಗೇನು ಕಮ್ಮಿ ಇಲ್ಲವರವ್ವ ಇವರು, ಯಾವುದರಲ್ಲೂ !

**ಭಾಗೀರಥಮ್ಮ :**

ನಮ್ಮ ಲೀಲಾವತಮ್ಮ ಏನು ಮಾಡ್ತಾರೆ ಅಲ್ಲಿ ?

**ಸಿದ್ದಪ್ಪ :**

ಅವರೂ ಇಂಗೇನೇ—ಆದ್ರೆ ಆಪಾಟಿ ಇಲ್ಲ. ಅವರು ನಮ್ಮ ಪೆಶಿಡೆಂಟ್ರಿಗೆ ಇಂಗ್ಲೀಸು ಕಲಿಸಿಕೊಡ್ತಾರೆ—ಯಜಮಾನ್ರಿಗೆ ಕಾಗದ ಬರ್ಕೊಡ್ತಾರೆ, ಟೈಪು ಮಾಡಿ ಕೊಡ್ತಾರೆ. ಗಂಬೀರಸ್ತ್ರ ಅಂದ್ರೆ ಅವರೊಬ್ರೆ. ಅವರು ಚೆಲ್ಲಾಟ ಆಡಿದ್ದು ಎಂದೂ ನಾ ಕಾಣೆ. ಅವರಿಗೆ ನಮ್ಮವ್ವಾವ್ರು—ನಿಮ್ಗೆಲ್ಲಾ ಗೊತ್ತಿರ್ಬೇಕಲ್ಲ—ತಿಂಗಳಿಗೆ ನೂರು ರೂಪಾಯಿ ಸಂಬಳ ಕೊಡ್ತವ್ರೆ. ಇನ್‌ವ್ಯಾಕೇನೋ ಅವರು ಅಲ್ಲೇ ಇರಬೇಕಂತೆ.......ಅನ್ಕಾ, ಅದೆಲ್ಲಾ ಏನೋ ಯಿಚಿತ್ರವಾಗಿ ಕಾಣ್ತೈತೆ ತಾಯೀ. ನಮ್ಮ ಡ್ರೈವರಪ್ಪ ಏನೇನೋ ಯೋಳ್ತಾನೆ, ಸೋಮಸೇಕರಪ್ಪನೋರ ಯಿಚಾರ—ನಿಜವೋ ಸುಳ್ಳೋ ನಾ ಬೇರೆ ಕಾಣೆ.

[ಬಲವಾಗಿ ಕಾರಿನ ಹಾರನ್ ಸದ್ದು.]

ಅಲ್ಲ, ನಾನು ಅವನನ್ನ ನೆನ್ಕೊಂಡೆ ಅಂತ ಅವನ್ಗೆ ಹೆಂಗೆ ಗೊತ್ತಾಯ್ತು ! ಕಾರ್ನ ಕಿರಿಚಿಸ್ತಾ ಇದಾನೆ. ಹೊತ್ತಾಯತ್ರವ್ವ. ಲೀಲಾವತಮ್ನೋರು ತಮ್ಮ ಸಾಮಾನನ್ನೆಲ್ಲಾ ಕಾರ್ನಲ್ಲಿ ಮಡಿಕ್ಕೊಂಡು ತಗೊಂಡು ಬಾ ಅಂತ ಹೇಳವ್ರೆ. ಅದಕ್ಕೆ ನಾನು ಬಂದಿರೋದು ಈಗ. ಅವರ ಬೆಡ್ರೂಮಲ್ಲಿ ಒಂದು ಟ್ರಂಕು, ಒಂದು ಸೂಟುಕೇಸು, ಒಂದು ಪೋಲ್ಡಾಲು ಮಡಗಿದಾರಂತೆ. ಅವನ್ನೆಲ್ಲಾ ತಗೊಂಡು ಬಾ ಅಂತ ಯೇಳವರೆ....

[ಮತ್ತೆ ಹಾರನ್ ಸದ್ದು]

....ಅವನ್ಬೇರೆ ತೇರಿನ ಮುಂದೆ ಕಾಳೆ ಊದೋ ಹಂಗೆ ಕಾರ್ ಕೂಗಸ್ತಾ ಅವ್ನೆ ಒಂದೇ ಸಮನಾಗಿ. ಎಲ್ಲೈತ್ರವ್ವ, ಸಾಮಾನೆಲ್ಲಾ?

**ಭಾಗೀರಥಮ್ಮ :**

ನನಗೇನಪ್ಪ ಗೊತ್ತು ? ಆಕೆಯ ಕೋಣೆಗೆ ಒಂದು ದಿನವೂ ಕಾಲಿಟ್ಟವಳಲ್ಲ. ಅವಳೇ ಹೇಳಿದ್ದಾಳಲ್ಲ, ಅವಳ ಕೋಣೆಯಲ್ಲಿ ಇರಬಹುದು ಸಾಮಾನು, ತೆಗೆದುಕೊಂಡು ಹೋಗಪ್ಪ.

**ಗೋಪಾಲ್ :**

ಇದು ಬೆಂಗಳೂರು ಭಾಗಮ್ನೋರೆ. ಪಕ್ಕದ ಮನೇಲಿ ಏನಾಗುತ್ತೆ ಅಂತ ಯಾರಾದರೂ ವಿಚಾರಿಸ್ತಾರೆಯೆ? ನಾನು ತಿಳಿಸಿದಷ್ಟನ್ನ ನಡೆಸಬೇಕಾದ್ದೂ ಅನಾವಶ್ಯಕ. ಎಚ್ಚರಿಕೆ ತಗೊಂಡಿದ್ದರೆ ವಾಸಿ ಅಂತ ಹೇಳಿದೆ, ಅಷ್ಟೆ. ಮುಂದೆ ಮನೆಗೆ ಬರೋ ಹುಡುಗಿ ಸುಖವಾಗಿರಬೇಕು ನೋಡಿ, ಅಷ್ಟಕ್ಕೋಸ್ಕರ ಇಷ್ಟೆಲ್ಲಾ. ಆದ್ದರಿಂದ ಆ ಹೆದರಿಕೆ ಇಟ್ಕೋಬೇಕಾದ್ದಿಲ್ಲ. ಇಷ್ಟೆಲ್ಲಾ ಆಗಿ, ಆ ಹುಡುಗಿ ಮನೇಗೆ ಬಂದ ಮೇಲೆ—

**ಭಾಗೀರಥಮ್ಮ :**

ಕಾಶೀಯಾತ್ರೆಗೆ ಹೋಗಬೇಕು ಅಂತಿದೀನಿ ಕಣಪ್ಪ, ದೇವರ ದಯದಿಂದ ಮನೆಗೆ ದೀಪ ಹಚ್ಚೋಳು ಬಂದರೆ—

**ಗೋಪಾಲ್ :**

ಹ್ಞಾ, ನನ್ನ ಮನಸ್ನಲ್ಲೂ ಅದೇ ಇತ್ತು. ಗಂಡ ಹೆಂಡತಿ ಇಬ್ಬರೇ ಮನೆಯಲ್ಲಿರಬೇಕು, ಕೆಲವು ಕಾಲ. ಇನ್ನೊಂದು ವಿಷಯ—

**ಭಾಗೀರಥಮ್ಮ :**

ಏನು?

**ಗೋಪಾಲ್ :**

ಈ.....ತೊಟ್ಲಿದೆಯಲ್ಲಾ....ಇದನ್ನ.......ಸದ್ಯಕ್ಕೆ ಬಿಚ್ಚಿಸಿ ಇಟ್ಬಿಡಿ.

**ಭಾಗೀರಥಮ್ಮ :**

ಅದೊಂದು ಬಿಟ್ಟು, ಏನು ಬೇಕಾದರೂ ಹೇಳಿ. ಲಾಗಾಯ್ತಿನಿಂದ ಬಿಚ್ಚಿಲ್ಲ. ಅದೊಂದು ನಚ್ಚು ನನ್ನದು, ಅದನ್ನ ಬಿಚ್ಚಿದರೆ ವಂಶ ಕಡಿದುಹೋಗುತ್ತೆ ಅಂತ. ಖಾಲಿ ತೊಟ್ಲು, ಇದ್ದುಕೊಳ್ಳಲಿ, ಬಿಡಿ.

**ಗೋಪಾಲ್ :**

ಖಾಲಿ ತೊಟ್ಟಿಲಿನಿಂದಲೇ ತುಂಬ ಗಲಾಟೆ ಆಗಬಹುದು. ಮನೆಗೆ ಬಂದ ಹೊಸ ಸೊಸೆ, ಕಟ್ಟಿದ ತೊಟ್ಟಿಲನ್ನ ಕಂಡು, ಕೂಸಿಗೆ ಮುಂಚೆ ತೊಟ್ಟಿಲು ಯಾಕೆ ಅಂತ ಸಂದೇಹಪಡಬಹುದು.

**ಭಾಗೀರಥಮ್ಮ :**

ಅವಳ ಮನಸ್ಸಿಗೆ ಸಮಾಧಾನ ಆಗೋಹಾಗೆ ಏನಾದರೂ ಕಥೆ ಕಟ್ಟಿ ಹೇಳಿದರಾಯಿತು. ಆಗಬಹುದಲ್ಲ ?

**ಗೋಪಾಲ್ :**

ಆಗಬಹುದು.

ಉದ್ಯೋಗಕ್ಕೆ ಸೇರಬೇಕು ಅಂತಿದ್ರೆ, ಇಲ್ಲ ಜ್ಞಾನಸಂಪಾದನೆ ಮಾಡಬೇಕು ಅಂತ ಪ್ರಬಲವಾದ ಆಶೆ ಇದ್ದರೆ ಮಾತ್ರ ಹೆಣ್ಣು ಮಕ್ಕಳು ಬಿ.ಎ., ಎಂ.ಎ., ಎಂ.ಎಸ್‌ಸಿ. ಓದಬೇಕೇ ಹೊರತು, ಸಾಮಾನ್ಯವಾಗಿ ಎಸ್.ಎಸ್.ಎಲ್.ಸಿವರೆಗೆ ಓದಿದ್ದರೆ ಸಾಕು. ಅಲ್ಲದೆ, ಹೆಣ್ಣು ಮಕ್ಕಳಿಗೆ ಕೊಡುವ ವಿದ್ಯಾಭ್ಯಾಸದ ರೀತಿಯೇ ಬದಲಾವಣೆಯಾಗಬೇಕು...

**ಭಾಗೀರಥಮ್ಮ :**

ವಿದ್ಯಾಭ್ಯಾಸದ ವಿಷಯ ಇರಲಪ್ಪ, ಒಬ್ಬಳು ಹೆಂಡತಿ ಇರೋವಾಗಲೇ.........

**ಗೋಪಾಲ್ :**

ಅದೆಲ್ಲಾ ನಾನು ಸರಿಮಾಡಿದ್ದೀನಿ. ನೀವು ಯೋಚನೆ ಮಾಡಬೇಡಿ. ಗುಟ್ಟನ್ನ ಕಾಪಾಡೋದಕ್ಕೆ ನಿಮ್ಮಿಂದ ಒಂದು ಸಹಾಯ ಆಗಬೇಕು.

**ಭಾಗೀರಥಮ್ಮ :**

ಏನಪ್ಪ ಅದು? ಈ ವಂಶ ಉದ್ಧಾರ ಆಗೋದಕ್ಕೆ, ಏನು ಬೇಕಾದರೂ ಮಾಡಿಯೇನು.

**ಗೋಪಾಲ್ :**

ಈಗ ಮನೆಯಲ್ಲಿ ಕೆಲಸಕ್ಕಿರೋ ಮುಸುರೆ ಹೆಂಗಸನ್ನ ಬಿಡಿಸಿಬಿಡಿ. ಇನ್ನು ಯಾರಾದರೂ ಆಗಾಗ್ಗೆ ಬರೋದು ಇದ್ದರೆ, ಅವರು ಈ ಕಡೆ ಸುಳಿಯದೆ ಇರೋಹಾಗೆ ಏನಾದರೂ ಏರ್ಪಾಟು ಮಾಡಿಬಿಡಿ.

**ಭಾಗೀರಥಮ್ಮ :**

ತಿಮ್ಮಕ್ಕನ್ನ ಬಿಡಿಸಿಬಿಡಬಹುದು. ತುಳಸಮ್ಮ ತಾನಾಗೇ ಬರೋದನ್ನ ಬಿಟ್ಟುಬಿಟ್ಟಿದ್ದಾಳೆ. ಅವಳಿಗೆ ಲೀಲನ ತಲೆ ಕಂಡರೆ ಆಗುತ್ತಿರಲಿಲ್ಲ ಈಚೀಚೆಗೆ. ಉಳಿದ ನೆರೆಹೊರೆಯವರನ್ನ ತಡೆಯುವುದು ತಾನೇ ಕಷ್ಟ.

**ಗೋಪಾಲ್ :**

ಒಂದು ಕೆಲಸ ಮಾಡಿ: ಮದುವೆ ಹೇಗಿದ್ದರೂ ಮುಂದಿನ ಮಾಘಕ್ಕೆ. ಸೊಸೆ ತವರುಮನೆಗೆ ಹೋಗಿದಾಳೆ ಬಾಣಂತನಕ್ಕೆ ಅಂತ ಹೇಳಿಬಿಡಿ, ಕೇಳಿದವರಿಗೆಲ್ಲ ಮದುವೆಯಾಗುವುದಕ್ಕೆ ಸ್ವಲ್ಪ ದಿನ ಮುಂಚೆ. ಏಳನೇ ತಿಂಗಳಲ್ಲೇ ಹೆರಿಗೆ ಯಾಗಿ ಸೊಸೆ ಸತ್ತು ಹೋದಳು ಅಂತ ಟಾಂಟಾ ಮಾಡಿಬಿಡಿ. ಮಗನಿಗೆ ಎರಡನೇ ಮದುವೆಯ ಪ್ರಸ್ತಾಪಾನೂ ಹುಟ್ಟುಹಾಕಿಬಿಡಿ___

**ಭಾಗೀರಥಮ್ಮ :**

ಅಲ್ಲಪ್ಪ, ಈ ಊರಲ್ಲೇ ಇರ್ತಾಳಲ್ಲಪ್ಪಾ ಆ ಮಾಯಾಂಗಿಣಿ.....?

ಮದುವೆಯೇ ಆಗುತಾ ಇರಲಿಲ್ಲವೇನೋ—ಹ್ಞೂ, ಕಳೆದದ್ದಕ್ಕೆ ಕೊರಗಿ ಫಲ ಏನು. ಪಾಪ, ನಿಮಗೆ ಏನು ಕೆಲಸ ಇತ್ತೋ ಏನೋ, ಮಾತಾಡಿಸುತ್ತಾ ನಿಲ್ಲಿಸಿಕೊಂಡುಬಿಟ್ಟೆ.

**ಗೋಪಾಲ :**

ಈ ಕೆಲಸಕ್ಕಿಂತ ಇನ್ನು ಕೆಲಸವೇ ? ನಾನು ಮತ್ತೆ ಬರ್ತೀನಿ. ನಾನು ಬಂದಿದ್ದೆ ಅಂತ ಕೇಶವನಿಗೆ ಹೇಳಿ—

[ಕಪ್ಪು ತೆರೆ]

* * * *

[ಕ್ಷಣಬಿಟ್ಟು ಕಪ್ಪು ತೆರೆ ಸರಿಯುವುದು : ಮೊದಲಿನಂತೆ, ಕೇಶವಮೂರ್ತಿ ವಿಮಲೆ ಕುಳಿತಿರುವರು. ಗಡಿಯಾರ ೯ ಗಂಟೆ ತೋರಿಸುತ್ತಿದೆ.]

**ಕೇಶವಮೂರ್ತಿ :**

...ಇದಿಷ್ಟು ನಡೆದ ಸಂಗತಿ.

**ವಿಮಲಾ :**

(ನಿಟ್ಟುಸಿರು ಬಿಟ್ಟು) ಅಯ್ಯೋ ಪಾಪ !

**ಕೇಶವಮೂರ್ತಿ :**

ಯಾರ ಮೇಲೆ, ಈ ಮರುಕ ? ನನ್ನ ಮೇಲೋ ಅವಳ ಮೇಲೋ ?

**ವಿಮಲಾ :**

ನಿಮಗಿಂತ ಹೆಚ್ಚಾಗಿ ಆ ದುರದೃಷ್ಟದ ಬಡ ಮೂರ್ಖ ಹೆಣ್ಣಿನ ಮೇಲೆ.

**ಕೇಶವಮೂರ್ತಿ :**

ಹಾಗಾದರೆ, ಇಬ್ಬರನ್ನೂ ಕ್ಷಮಿಸುವುದಕ್ಕೆ ನೀನು ಸಿದ್ಧವಾಗಿದ್ದೀಯಾ ?

**ವಿಮಲಾ :**

(ನಗುತ್ತ) ನಾನು ಕ್ಷಮಿಸುವುದನ್ನ ಕಲಿತಿಲ್ಲ ! ಪ್ರೀತಿಸುವುದನ್ನ ಮಾತ್ರ ಕಲಿತಿದೇನೆ.

**ಕೇಶವಮೂರ್ತಿ :**

(ಸಂತುಷ್ಟವಾಗಿ) ನನಗೆ ಬೇಕಾದ್ದೂ ಅದೇ. ಒಂದು ವೇಳೆ ಲೀಲಾವತಿ ಬದುಕಿದ್ದರೆ, ಅವಳನ್ನ ಕ್ಷಮಿಸಬಲ್ಲೆಯಾ ?

**ವಿಮಲಾ :**

ನಿಮಗೆಲ್ಲೋ ಭ್ರಾಂತಿ. ನೀವಿನ್ನೂ ಆಕೆಯ ಮೇಲೆ ವ್ಯಾಮೋಹ ಇಟ್ಟುಕೊಂಡಿರುವಹಾಗೆ ಕಾಣುತ್ತೆ, ಅಲ್ಲವೆ ? (ನಗುವಳು)

**ಭಾಗೀರಥಮ್ಮ :**

ಕೇಶವನಿಗೆ ಆಗಲೇ ೩೨ ಆಗಿಹೋಯ್ತು. ಹುಡುಗಿಗೆ ಇನ್ನೂ ೧೮. ಎರಡನೇ ವರ ಅಂತ ಅವರಿಗೆ ಸಂದೇಹ ಬರಲಿಲ್ಲವೇನಪ್ಪಾ?

**ಗೋಪಾಲ್ :**

ಭಾಗಮ್ನೋರೆ, ಇದೇನು ಹೀಗೆ ಕೇಳ್ತೀರಿ ? ಈಗಿನ ಕಾಲದ ವರಗಳ ವಯಸ್ಸು ೩೦–೩೫, ವಧುಗಳ ವಯಸ್ಸು ೨೫–೩೦ ಅಂದರೆ ಸರ್ವೇಸಾಧಾರಣ ಆಗ್ತಾ ಇದೆ. ತಮ್ಮ ಹುಡುಗಿಗೆ ಬೇಗ ಮದುವೆ ಮಾಡಬೇಕು ಅಂತ ಶ್ರೀನಿವಾಸರಾಯರ ಆಸೆ. ಬಿ.ಎ. ಮಾಡಿದ್ದಾನೆ, ಕೆಲಸದಲ್ಲಿದ್ದಾನೆ ಅಂದ ಕೂಡಲೆ ಒಪ್ಪಿಕೊಂಡುಬಿಟ್ರು.

**ಭಾಗೀರಥಮ್ಮ :**

ಅಂತೂ, ಲೀಲನ ಒಂದು ತಪ್ಪು ಹೆಜ್ಜೆಯಿಂದ ಒಂದು ಸುಳ್ಳಿನ ಸರಪಣಿಯೇ ಸಿದ್ಧವಾಗುತ್ತಿದೆಯಲ್ಲಾ ಗೋಪಾಲರಾಯರೆ ?

**ಗೋಪಾಲ್ :**

ಏನು ಮಾಡುವುದು ಹೇಳಿ, ಪ್ರಪಂಚದ ವ್ಯವಹಾರವೇ ಹೀಗಾಗಿಹೋಗಿದೆ. ಸುಳ್ಳಿನಿಂದ ಸುಳ್ಳನ್ನ ಮುಚ್ಚೋದಕ್ಕೆ ಪ್ರಯತ್ನಪಡ್ತೇವೆ. ಅದು ಎಲ್ಲಿ ಸಾಧ್ಯ ? ಕತ್ತಲೆಯಿಂದ ಕತ್ತಲೆಯನ್ನ ಓಡಿಸುವುದಕ್ಕೆ ಆಗುತ್ತೆಯೇ ? ಬೆಳಕು ಬಂದಾಗ ತಾನೆ ಕತ್ತಲೆ ಕಾಲ್ತೆಗೆಯೋದು? ಹಾಗೇನೇ, ಸತ್ಯ ಅನ್ನುವ ಸೂರ್ಯ ಬೆಳಗಿದಾಗಲೇ ಮನಸ್ಸಿನ, ಮನೆಯ, ಸಮಾಜದ, ಲೋಕದ ಕತ್ತಲೆ ಚೆದರುವುದು.....

**ಭಾಗೀರಥಮ್ಮ :**

ನೀವು ಹೇಳುವುದು ನಿಜ ಗೊಪಾಲರಾಯರೆ. ಈ ಸುಳ್ಳಿನ ಮುಳ್ಳನ್ನ ಹೊಟ್ಟೆಯಲ್ಲಿ ಹೇಗೆ ಚುಚ್ಚದ ಹಾಗೆ ಮುಚ್ಚಿಟ್ಟುಕೊಳ್ಳಲಿ? ಅದೇ ನನಗೆ ದೊಡ್ಡ ಯೋಚನೆ.

**ಗೋಪಾಲ್ :**

ನೀವೇನೂ ಯೋಚನೆ ಮಾಡಬೇಡಿ. ಸುಮ್ಮನೆ ಕಾಶೀಯಾತ್ರೆ ಮಾಡಿಕೊಂಡು ಬನ್ನಿ. ವಿಶ್ವನಾಥ ಎಲ್ಲರನ್ನೂ ಪಾರುಮಾಡ್ತಾನೆ. ಯಾರು ಯಾರಿಗೆ ಯಾವ ಯಾವ ಗತಿ ಕಾಣಿಸಬೇಕು ಅನ್ನುವುದು ಅವನೊಬ್ಬನಿಗೆ ಮಾತ್ರ ಗೊತ್ತು. ಮುಳ್ಳಿನ ಗಿಡದಲ್ಲೂ ಒಳ್ಳೇ ಹೂವು ಬಿಟ್ಟೀತು. ಯೋಚನೆ ಮಾಡಬೇಡಿ.

**ಭಾಗೀರಥಮ್ಮ :**

ನಮ್ಮ ಕೇಶವನಿಗೆ ನಿಮ್ಮಷ್ಟು ತಿಳಿವಳಿಕೆ ಇದ್ದಿದ್ರೆ, ಆ ಲೀಲಾವತಿಯನ್ನ

**ಕೇಶವಮೂರ್ತಿ :**

ಅದೂ ದಿಟವೆ. ನೀನು ಕ್ಷಮಿಸಲು ಸಿದ್ಧ, ಅದು ಈ ಮೊದಲೇ ಗೊತ್ತಾಯಿತು. ಇನ್ನು, ನಾನು ಕ್ಷಮಿಸುವುದು—ಅವಳು ಬದುಕಿದ್ದರೆ—ಬದುಕಿದ್ದು, ಬಂದು, ಕ್ಷಮೆ ಯಾಚಿಸಿದರೆ—ಆಗ ನಾನು ಕ್ಷಮಿಸುವ ಮಾತು...ಆದರೆ....ಆದರೆ... ಅದು ಸಾಧ್ಯವಿಲ್ಲ ವಿಮಲಾ. ಈ ಮನೆಯಲ್ಲಿ ಇಬ್ಬರು ಹೆಂಡಿರಿಗೆ ಸ್ಥಳವಿಲ್ಲ : ಮನೆಯಲ್ಲೂ ಇಲ್ಲ, ಮನದಲ್ಲೂ ಇಲ್ಲ ; ಕಾನೂನಿನಲ್ಲಂತೂ ಇಲ್ಲವೇ ಇಲ್ಲ.

**ವಿಮಲಾ :**

'ಹಾಗಲವಾಡಿಗೆ ಹೋದರೆ ಗೀದರೆ' ಅಂತ ನಮ್ಮ ತಾಯಿ ಹೇಳುತಾ ಇರುತಾರೆ. ಹಾಗೆ, ಲೀಲಕ್ಕ ಬದುಕಿದ್ದರೆ ತಾನೇ ಆ ಮಾತು. ಸತ್ತು—ಪಾಪ, ದೇವರು ಸದ್ಗತಿ ಕಾಣಿಸಬೇಕು, ತೊಳಲುತ್ತಿರುವ ಆ ಆತ್ಮಕ್ಕೆ......ಹೋಗಲಿ, ಸ್ವಲ್ಪ ಜೊತೆಗೆ......ಬರ್ತಿರಾ, ಕಸ ಮುಸರೆ ಮಾಡಬೇಕು.....

**ಕೇಶವಮೂರ್ತಿ :**

(ನಗುತ್ತ) ಅಯ್ಯೋ ಮಹಾರಾಯ್ತೀ, ನಿನಗೆ ನನ್ನ ಮಾತಿಗಿಂತಲೂ ಆ ತುಳಸಮ್ಮನ ಮಾತಿನಲ್ಲೇ ಹೆಚ್ಚು ನಂಬಿಕೆ. ಹೋಗಲಿ, ಬರ್ತೀನಿ, ನಡಿ.

**ವಿಮಲಾ :**

(ಒಳಕ್ಕೆ ಹೊರಡಲನುವಾಗಿ) ಹಾಗೇನೆ, ಮುಂದಿನ ಬಾಗಿಲು ಹಾಕಿದೆಯೇ ನೋಡಿಕೊಂಡು ಬನ್ನಿ. (ಎಂದು ಒಳಕ್ಕೆ ಹೋಗುವಳು.)

**ಕೇಶವಮೂರ್ತಿ :**

(ನೋಡಿಬಂದು) ಹಾಕಿರಲಿಲ್ಲ. ಈಗ ಭದ್ರವಾಗಿ ಬೋಲ್ಟು ಹಾಕಿಕೊಂಡು ಬಂದಿದೇನೆ ; ಭಯ ಪಡಬೇಡ. ನಡಿ, ಒಳಕ್ಕೆ. (ಎಂದು ದೀಪದ ಸ್ವಿಚ್ಚು ಹಾಕಿ ದೀಪ ಆರಿಸುವನು.)

**ವಿಮಲಾ :**

(ಒಳಗಿನಿಂದ) ದೀಪ ಹಾಕೀ ಅಂದ್ರೇ, ಯಾಕೆ ಆರಿಸಿದಿರಿ? ನನಗೆ ಭಯವಾಗುತ್ತೆ.

**ಕೇಶವಮೂರ್ತಿ :**

ಕಳ್ಳ ಹೊಕ್ಕ ಮನೆಗೆ ಎಣ್ಣೆ ಬೇರೆ ದಂಡ ಎನ್ನುವಹಾಗೆ, ಪ್ರೇತ ಹೊಕ್ಕ ಮನೆಗೆ ಎಲೆಕ್ಟ್ರಿಕ್ ದೀಪ ಯಾಕೆ ? ಹೋಗಲಿ, ನಡಿ (ಎಂದು ಮತ್ತೆ ದೀಪ ಹೊತ್ತಿಸಿ ತಾನೂ ಒಳಕ್ಕೆ ಹೋಗುವನು.)

ಮುಂದೆರೆ

**ಕೇಶವಮೂರ್ತಿ :**

ವ್ಯಾಮೋಹವಲ್ಲ. ಕೇವಲ ಮರುಕ, ಕ್ಷಮಾ ಬುದ್ಧಿ ; ಈಗ ತಾನೆ ನಿನ್ನಿಂದ ಕಲಿತ ಪಾಠ.

**ವಿಮಲಾ :**

ಆಕೆ ಬದುಕಿದ್ದರೆ ಕ್ಷಮೆಯ ಮಾತು. ಸತ್ತವರ ವಿಷಯದಲ್ಲಿ ಕ್ಷಮೆ ತೋರಿಸುವವನು ಪರಮಾತ್ಮ.

**ಕೇಶವಮೂರ್ತಿ :**

ಆದರೆ, ಅವಳು ಸತ್ತಿಲ್ಲಾ ವಿಮಲಾ, ಬದುಕಿದ್ದಾಳೆ.

**ವಿಮಲಾ :**

ನಿಜವಾಗಿ !

**ಕೇಶವಮೂರ್ತಿ :**

ನನ್ನ ಕಣ್ಣುಗಳು ನನ್ನನ್ನ ಮೋಸಮಾಡಿಲ್ಲದ ಭಾಗದಲ್ಲಿ, ನಿಜವಾಗಿ ಬದುಕಿದ್ದಾಳೆ. ನನ್ನ ಸಂಶಯವನ್ನೆಲ್ಲಾ ನಿಜಮಾಡಿ, ಮಗುವಿನ ತಾಯಾಗಿ ಬದುಕಿದ್ದಾಳೆ. ಇಂದು ಸಂಜೆ ಮನೆಗೆ ಹಿಂದಿರುಗಿ ಬರುತ್ತಿರುವಾಗ, ಪಾಪದ ಜೀವಂತ ಫಲವನ್ನು ಹೆಗಲ ಮೇಲೆ ಹೊತ್ತು ಅವಳು ಬರುತ್ತಿದ್ದಳು. ನನ್ನನ್ನು ಕಂಡು ತಟ್ಟನೆ ಅಡ್ಡ ರಸ್ತೆಯೊಂದಕ್ಕೆ ತಿರುಗಿದಳು. ಆ ಅವಕಾಶವನ್ನು ಬಿಡದೆ, ಅವಳನ್ನು ಕಂಡು ಮಾತಾಡಿಸಿ, 'ಪ್ರತ್ಯಕ್ಷ ಪ್ರಮಾಣದ ಮುಂದೆ ಈಗ ಏನು ಹೇಳುತ್ತೀಯೆ ?' ಎಂದು ಅವಳನ್ನು ದಂಡಿಸಬೇಕೆಂದು ಮನಸ್ಸಾಯಿತು. ಅವಳನ್ನು ಹಿಂಬಾಲಿಸಿ ಕಾಣೋಣವೆಂದು ಹೊರಟೆ. ನಾನು ಮೀನಮೇಷ ಎಣಿಸಿ ಅವಳನ್ನು ಹಿಂಬಾಲಿಸುವಷ್ಟರಲ್ಲಿ, ನನ್ನನ್ನು ಕಂಡು ಅವಳು ಯಾರದ್ದೋ ಮನೆಯಲ್ಲಿ ಅಡಗಿಕೊಂಡಳೆಂದು ಕಾಣುತ್ತೆ ; ಸಿಕ್ಕಲಿಲ್ಲ. ನಿರಾಶನಾಗಿ ಹಿಂದಿರುಗಿದೆ. ಅದಕ್ಕೇ ಮನೆಗೆ ಬರುವುದು ತಡವಾದದ್ದು.....

**ವಿಮಲಾ :**

ನಿಮಗೆಲ್ಲೋ ಭ್ರಾಂತಿ. ನೀವು ಕಂಡದ್ದು ಲೀಲಾವತಿಯನ್ನಲ್ಲ, ಅವಳ ಪ್ರೇತವನ್ನ. ತುಳಸಮ್ಮನೋರು ಹೇಳಿದ್ದು ದಿಟ.

**ಕೇಶವಮೂರ್ತಿ :**

ನನಗೆ ದೆವ್ವ ಪ್ರೇತಗಳಲ್ಲಿ ನಂಬಿಕೆ ಇಲ್ಲ, ವಿಮಲಾ.

**ವಿಮಲಾ :**

ಹಾಗಾದರೆ, ಲೀಲಕ್ಕ ನಿಜವಾಗಿ ಇಲ್ಲಿಗೆ ಬಂದಾಗ, ಬಂದರೆ, ನಾನು ಕ್ಷಮಿಸುವ ಪ್ರಶ್ನೆ ಏಳುವುದೇ ಇಲ್ಲ—ನೀವು ಕ್ಷಮಿಸಿಬಿಟ್ಟರೆ.

**ಪುರುಷಧ್ವನಿ :**

ಸಾಧ್ಯವಿಲ್ಲ—ಸಾಧ್ಯವಿಲ್ಲ ಇದು ಖಂಡಿತ.

**ಸ್ತ್ರೀಧ್ವನಿ :**

ಕ್ಷಮೆ ದೊರಕದೇ ?

**ಪುರುಷಧ್ವನಿ :**

ಕಿವಿಯಾರ ಕೇಳಿರುವೆ : 'ಅದು ಸಾಧ್ಯವಿಲ್ಲ ವಿಮಲಾ'

**ಸ್ತ್ರೀಧ್ವನಿ :**

ಆಶ್ರಯದ ನೆರಳು ?

**ಪುರುಷಧ್ವನಿ :**

ಕೇಳಿದೆಯಲ್ಲವೆ :
'ಈ ಮನೆಯಲ್ಲಿ ಇಬ್ಬರು ಹೆಂಡಿರಿಗೆ ಎಡೆಯಿಲ್ಲ'
ನಿನಗೂ ಇಲ್ಲ : ನಿನ್ನದೆಂದರಿವಾಗೆ, ಶಿಶುವಿಗೂ ಇಲ್ಲ.

**ಸ್ತ್ರೀಧ್ವನಿ :**

ಬಳಿಕ ಮಾಡುವುದೇನು?

**ಪುರುಷಧ್ವನಿ :**

ತೊಟ್ಟಿಲಲಿ ಪಟ್ಟಿರಿಸಿ ನಿನ್ನ ಮುದ್ದಿನ ಮಗುವ,
ಸದ್ದು ಮಾಡದೆ ಈ ಮನೆಯಿಂದ ತೊಲಗು ?
'ತಬ್ಬಲಿ' ಎಂದರಿತು. ಪೊರೆವರು ದೊರೆತ ಶಿಶುವ.
ಮನೆತೊಟ್ಟಿಲಾಗುವುದು ಅದಕೆ ರಕ್ಷೆ.

**ಸ್ತ್ರೀಧ್ವನಿ :**

ಪ್ರೇತ ತಂದಿಟ್ಟ ಮಗುವೆಂದು ಬಿಸುಡದಿರರೆ?
ಮನೆಯ ಮಗುವೆಂದು ಮನವರಿಕೆ ಮಾಡುವ ಪರಿ ?

**ಪುರುಷಧ್ವನಿ :**

ನೀ ಬರೆದ ಪತ್ರ : ಮರೆತೆಯೇನದನು ?
ತೊಟ್ಟಲಿನ ಮೂಕಸಾಕ್ಷ್ಯಕೆ ಕರುಳು ಬಳ್ಳಿಯ ಆರ್ತಪ್ರಮಾಣ.

**ಸ್ತ್ರೀಧ್ವನಿ :**

ಪತ್ರವೂ ಪ್ರೇತದ್ದೆ ಎಂದಾದರೆ ?
ಅಲ್ಲದೆ, ನನ್ನ ಸಾವನು ಸಾರುವ ಪತ್ರ :
ಮಗುವಿನೊಡನದನಿಟ್ಟು,

# ಮೂರನೆಯ ಅಂಕ

[ಮೊದಲ ಅಂಕದ ದೃಶ್ಯದಂತೆಯೇ. ಗಡಿಯಾರ......೯.೦೫ ಗಂಟೆ ತೋರಿಸುತ್ತಿದೆ. ಮಲಗುವ ಕೋಣೆಯಿಂದ, ಲೀಲಾವತಿ ತನ್ನ ಎರಡೂ ಕೈಗಳ ಮೇಲೆ ಮೈತುಂಬ ಹೊದಿಸಿದ ಮಗುವನ್ನು ಎತ್ತಿಕೊಂಡು ಬಂದು, ತೊಟ್ಟಿಲಲ್ಲಿ ಮಲಗಿಸುವಳು. ಮಲಗಿಸಿ, ಮಗುವನ್ನು ದೃಷ್ಟಿಸಿ ನೋಡುತ್ತ ನಿಂತಿರುವಳು.]

**ಪುರುಷಧ್ವನಿ : (ಎಡಪಕ್ಕದಿಂದ)**

ನೀನು ಕೊಟ್ಟ ಮದ್ದಿನ ಪ್ರಭಾವ.
ಸುಖವಾಗಿ ನಿದ್ದಿಸುತಿದೆ ಮಗು.
ಇನ್ನೂ ಕೆಲಕಾಲ ಎಚ್ಚರಗೊಳ್ಳದು.
ಆ ಮುನ್ನ ನಿರ್ಧರಿಸು.
ನೆರಳು ಬಿಸಿಲಿನ ಬಾಳ ದಾರಿಪಯಣವ ಮುಗಿಸೆ ಮನಮಾಡಿ,
ಕ್ಷಮೆಯ ಬೇಡುವೆಯೇನು ?
ಇಲ್ಲದೊಡೆ,
ತವರು ತೊಟ್ಟಿಲಿನಲ್ಲಿ ವಂಶದ ಕುಡಿಯನಿಟ್ಟು,
ನೀನು ಮನೆ ಬಿಟ್ಟು ತೆರಳುವೆಯೋ ?
ಇಲ್ಲದೊಡೆ,
ಎಲ್ಲವನು ಕೊನೆಗಾಣಿಸುವ ಸರ್ವ ದುಃಖಾಪಹಾರಿಣಿಯ ಸೇವಿಸಿ,
ಯಾವ ಶಯ್ಯೆಯ ಮೇಲೆ
ಈ ನಿನ್ನ ಒಲ್ಲದ ಶಿಶುಗರ್ಭವನು ಧರಿಸಿದೆಯೊ
ಆ ಅದೇ ಶಯ್ಯೆಯಲಿ ದೀರ್ಘನಿದ್ರೆಯನಪ್ಪಿ,
ಮರಣ ಮೌನದ ಅಮೋಘ ಕ್ಷಮೆಯ ಪಡೆಯುವೆಯೊ?
[ಲೀಲಾವತಿ ಮಗುವಿನ ತಲೆಯನ್ನು ನೇವರಿಸುತ್ತಿರುವಳು.]

**ಸ್ತ್ರೀಧ್ವನಿ : (ಬಲಪಕ್ಕದಿಂದ)**

ಜಾರಜನಲ್ಲವೀ ಶಿಶು ಎಂದು ಪ್ರಮಾಣಿಸುವುದು ಸಾಧ್ಯವಾದರೆ.....

ತಾಯ್ತನದ ಗೆಲವು,
ನಿಜದ ನೇಸರ ಬೆಳಗು.

**ಸ್ತ್ರೀಧ್ವನಿ :**

ಅಂತೆಯೇ ಆಗಲಿ,
ಸೋಲ್ವೆನು,
ಸಾವೆನು.

**ಪುರುಷಧ್ವನಿ :**

ಅಂತಿರಲು ತ್ವರೆಮಾಡು, ಕೆಲಸ ಕೆಟ್ಟೀತು.

**ಲೀಲಾವತಿ :**

(ಮಗುವನ್ನು ಮುದ್ದಿಟ್ಟು, ವಿಷಪಾನಮಾಡುವುದರಲ್ಲಿದ್ದು) ಇಲ್ಲಿ ಬೇಡ, ಕರುಳಿನ ಕುಡಿ ಕಮರೀತು, ಇಲ್ಲಿ ಬೇಡ (ಎಂದು ಮಲಗುವ ಮನೆಗೆ ಧಾವಿಸುವಳು.)

[ಕಪ್ಪು ತೆರೆ ಮುಚ್ಚಿ, ಕ್ಷಣಬಿಟ್ಟು ಮತ್ತೆ ಸರಿಯುವುದು.

ತೆರೆ ಸರಿದಾಗ : ತೊಟ್ಟಿಲು ನಿಧಾನವಾಗಿ ತೂಗಾಡುತ್ತಿರುವುದು. ಕೇಶವಮೂರ್ತಿ, ವಿಮಲೆ ಅಡಿಗೆಯ ಮನೆಯಿಂದ ಪ್ರವೇಶಿಸುವರು.]

**ವಿಮಲಾ :**

(ಬೆಚ್ಚಿ) ಇದೇನೂ ಅಂದ್ರೆ ! ತೊಟ್ಟಿಲು ತಾನಾಗಿ ತೂಗಿಕೊಳ್ಳುತ್ತಿದೆ ! ನಾನು ಆಗಲೇ ಹೇಳಲಿಲ್ಲವೆ, ಇದೆಲ್ಲಾ ಪ್ರೇತಚೇಷ್ಟೆ ! ನಾನು ಎಷ್ಟು ಹೇಳಿದರೂ ನಿಮಗೆ ನಂಬಿಕೆಯಿಲ್ಲ !

**ಕೇಶವಮೂರ್ತಿ :**

(ತುಸ ಬೆರಗಿನಿಂದ) ಹೌದು, ತಾನಾಗಿ ತೂಗಿಕೊಳ್ಳುತಾ ಇದೆ ! ಗಾಳಿ ಇರಲಾರದು.....

**ವಿಮಲಾ :**

ಗಾಳಿಯೇ ಅಂದ್ರೆ, ಗಾಳಿ !

**ಕೇಶವಮೂರ್ತಿ :**

ಗಾಳಿ ? ಭಾರವಾದ ಕರೀಮರದ ತೊಟ್ಟಿಲು ಗಾಳಿಗೆ ತೂಗಿಕೊಳ್ಳೋಣ ಅಂದ್ರೇನೇ, ನಾಚಿಗ್ಗೇಡು !

**ವಿಮಲಾ :**

ಹಾಗಲ್ಲ ಅಂದ್ರೆ, ನಮ್ಮ ಮಲೆನಾಡಿನ ಕಡೆ ಭೂತಪ್ರೇತಗಳಿಗೆ 'ಗಾಳಿ' ಅಂತಲೇ ಅನ್ನೋದು. ಇದು ಆ ಗಾಳಿಯ ಕೆಲಸ.

ವಿಷಪಾನ ಮಾಡಿ ಪತಿಗೃಹದೊಳೇ ಮಡಿದ ಸಂಗತಿಯರುಹಿ,
ಸತ್ಯವನು ಸಾರ ಬೇಕೆಂದಿರುವ ಪೂರ್ವಪತ್ನಿಯ ಪತ್ರ.

**ಪುರುಷಧ್ವನಿ :**

ಅದು ದಿಟ.
ಸತ್ಯವನು ಸಾರುವುದು—ಅದೆ ನಿನ್ನ ಕರ್ತವ್ಯವೀಕ್ಷಣದೆ.
ನೀನೊಲ್ಲದಿದ್ದರೂ ನಿನ್ನ ಬಸಿರೊಳು ಬಂದ
ದಾಂಪತ್ಯ ಧರ್ಮ ಶಿಶುವಿನ ಉಳಿವಿಗಾಗಿ, ಬದುಕಿಗಾಗಿ.
ಕವಿದ ಸುಳ್ಳಿನ ಕತ್ತಲೆಯ ಕಳೆಯೆ,
ಮನವಾರೆ ಮರುಗಿ ಸತ್ಯ ಸಂಗತಿಯ ಬೆಳಕ ಬೀರೆ,
ನಿನ್ನ ಮೃತದೇಹವೇ ಜೀವಂತ ಪ್ರಮಾಣ ;
ಅದು ಹೊರತು, ಊರ್ಜಿತವಾಗದನ್ಯ ಪ್ರಮಾಣ.
ಇನ್ನು, ಆ ಪ್ರಮಾಣವನೊದಗಿಸುವುದೇ ನಿನ್ನ ಮುಂದಿನ ಕಾರ್ಯ.

**ಲೀಲಾವತಿ :**

(ಮೆಲುದನಿಯಲ್ಲಿ) ಅಹುದು, ಇದೇ ನನ್ನ ಮುಂದಿರುವ ಕಾರ್ಯ—

[ಎಂದು ಮಡಿಲಿನಿಂದ ಪತ್ರವೊಂದನ್ನು ತೆಗೆದು ಮಗುವಿನ ಬಳಿಯಿಟ್ಟು, ತೊಟ್ಟಿಲು ತೂಗುವಳು.]

**ಪುರುಷಧ್ವನಿ :**

ನೆನಪಿಹುದೆ ನಿನ್ನ ಪ್ರತಿಜ್ಞೆ ?

**ಸ್ತ್ರೀಧ್ವನಿ :**

ನೆನಪಿಹುದು, ನೆನಪಿಹುದು :
ಪರಮತೀಯರ ಕರುಣೆ ತೊಟ್ಟಿಲಿನಲ್ಲಿ ಬಳೆದ ಈ ಮಗುವ
ಜೋಗುಳವ ಪಾಡಿ ತೂಗಿಲ್ಲ ಈ ಕೈ.
ನೆನಪಿಹುದು ಪ್ರತಿಜ್ಞೆ : ಅದ ಗೈದವಳ ಕೈ ತೂಗದೀ ತೊಟ್ಟಿಲನು ;
ಇದನು ತೂಗುತ್ತಿಹಳು ಮಗುವ ತಾಯಿ.
ಪುರುಷಧ್ವನಿ :
(ಗಹಗಹಿಸಿ ನಕ್ಕು) ಭ್ರಾಂತಿ, ಭ್ರಾಂತಿ.
ಇದು ಅಹಂಕಾರದ ಸೋಲು,
ಸುಳ್ಳಿನ ಸಾವು,
ವಂಚನೆಯ ಗೋರಿ ;

ಗಾಬರಿಯಾಗಬೇಡ. (ಎಂದು ಮಗುವನ್ನು ಮುಟ್ಟಿ ನೋಡುವನು.) ನೋಡಿದೆಯಾ, ದೆವ್ವದ ಮಗುವಾಗಿದ್ದರೆ ಮುಟ್ಟಿದರೆ ಗಟ್ಟಿಯಾಗಿ ಕೈಗೆ ಸಿಕ್ಕುತ್ತಿತ್ತೆ? ಗಾಳಿಯ ಮಗು ಗಾಳಿ ತಾನೆ ? (ಪ್ರಶ್ನಾರ್ಥಕವಾಗಿ ವಿಮಲೆಯ ಕಡೆ ತಿರುಗಿ ನೋಡುವನು.)

**ವಿಮಲಾ :**

(ನಿಬ್ಬೆರಗಾಗಿ ನಿಶ್ಚಲವಾಗಿ ನಿಂತಿರುವಳು.)

**ಕೇಶವಮೂರ್ತಿ :**

ನೀನು ನನ್ನ ಮಾತನ್ನ ನಂಬು, ಗಾಬರಿಯಾಗಬೇಡ. ಇದು ಗಾಳಿಯ ಕೆಲಸ ಅಲ್ಲ, ಸತ್ತ ಲೀಲಾವತಿಯ ಪ್ರೇತ ಚೇಷ್ಟೆಯ ಕೆಲಸ ಅಲ್ಲ ; ಬದುಕಿರುವ ಲೀಲಾವತಿಯ ಕುಚೇಷ್ಟೆಯ ಕೆಲಸ ! ನಾನು ಆಗಲೇ ಹೇಳಲಿಲ್ಲವೆ, ಈವೊತ್ತು ಸಂಜೆ ಅವಳನ್ನ ಕಂಡಿದ್ದೆ ಅಂತ ? ಅವಳು ಸಮಯ ಸಾಧಿಸಿ, ಯಾವುದೋ ಮಾಯದಲ್ಲಿ ಇಲ್ಲಿಗೆ ಬಂದು, ತನ್ನ ಪಾಪಕೃತ್ಯದ ಫಲವನ್ನು ಇಲ್ಲಿ ಹಾಕಿ ಹೋಗಿದ್ದಾಳೆ. ಬೇರೆ ಯಾರಾದರೂ ಎಲ್ಲಾ ಬಿಟ್ಟು ಇಲ್ಲಿಗೆ ಬರೋದು ಅಂದರೇನು?

**ವಿಮಲಾ :**

ನೀವು ಏನಾದರೂ ಅನ್ನಿ, ನನಗೇನೋ ಗಾಬರಿಯೆ.....(ಗೋಗರೆಯುವ ಭೀತ ಧ್ವನಿಯಿಂದ) ಸ್ವಲ್ಪ ಜೊತೆಗೆ ಬನ್ನೀಂದ್ರೆ. ನಾನು ರೂಮಿಗೆ ಹೋಗಿ ಮುಸುಕುಹಾಕಿಕೊಂಡು ಮಲಗಿಕೊಂಡುಬಿಡುತ್ತೇನೆ. ಆಮೇಲೆ—ಮಗುವನ್ನ— ನೀವು ಬೇಕಾದ್ದು ಮಾಡಿಕೊಳ್ಳಿ, ಮನುಷ್ಯರ ಮಗು ಅಂತ ಧೈರ್ಯ ಇದ್ದರೆ. (ಮರುಕದ ದನಿಯಲ್ಲಿ) ಅಂದಹಾಗೆ, ಮಗು ಸತ್ತಿದೆಯೋ ಬದುಕಿದೆಯೋ?

**ಕೇಶವಮೂರ್ತಿ :**

ಉಸಿರಾಡೋ ಹಾಗೇ ಕಾಣೋದಿಲ್ಲ. ಸತ್ತಿದೆ ಅಂತಲೇ ಕಾಣುತ್ತೆ.

**ವಿಮಲಾ :**

ಹಾಗೇ ? ಅಬ್ಬಬ್ಬಾ ! ಹೇಗಿರೋದು ಅಂದ್ರೆ ಇಲ್ಲಿ ! ಮೊದಲು ಜೊತೆಗೆ ಬನ್ನಿ—ರೂಮಿಗೆ ಹೋಗಿ ಮುಸುಕು ಹಾಕಿಕೊಂಡು ಮಲಗಿಕೊಂಡು ಬಿಡ್ತೇನೆ. ಆಮೇಲೆ ನೀವು ಬೇಕಾದ್ದು ಮಾಡಿಕೊಳ್ಳಿ.

**ಕೇಶವಮೂರ್ತಿ :**

ಮೊದಲು ನಡಿ ಮಹಾರಾಯ್ತಿ.

[ಇಬ್ಬರೂ ಮಲಗುವ ಕೋಣೆಯ ಕಡೆಗೆ ನಡೆಯುವರು.]

**ಕೇಶವಮೂರ್ತಿ :**

ಮುಂದುಗಡೆಯ ಬಾಗಿಲು ಬೋಲ್ಟು ಹಾಕಿದೆ, ಅಲ್ವೆ?

**ವಿಮಲಾ :**

ಹಾಕಿದೆ ಅಂತ ಕಾಣುತ್ತೆ. ನೀವೇ ಹಾಕಿಕೊಂಡು ಬರಲಿಲ್ಲವೆ ಆಗ ? ಹೇಗಾದರೂ ಆಗಲಿ, ಹೋಗಿ ಒಂದು ಸಲ ನೋಡಿಕೊಂಡು ಬಂದುಬಿಡಿ.

**ಕೇಶವಮೂರ್ತಿ :**

(ಬೇಗನೆ ಹೋಗಿ ನೋಡಿ ಬಂದು) ಬೋಲ್ಟು ಹಾಕಿದೆ ! ಯಾರೂ ಒಳಕ್ಕೆ ಬಂದಿರುವಹಾಗಿಲ್ಲ, ಬರಲು ಸಾಧ್ಯ ಇಲ್ಲ. (ಅನುಮಾನಿಸುತ್ತ) ನೀನು ಹೇಳಿದ ಹಾಗೆ............

**ವಿಮಲಾ :**

(ನಿಂತಲ್ಲಿಯೇ ತೊಟ್ಟಿಲನ್ನು ದಿಟ್ಟಿಸಿ ನೋಡಿ ಗಾಬರಿಗೊಂಡು) ಇಲ್ನೋಡಿ, ಇಲ್ನೋಡಿ !

**ಕೇಶವಮೂರ್ತಿ :**

(ತಾನೂ ಗಾಬರಿಗೊಂಡು) ಏನೇ ಅದು?! (ಎಂದು ವಿಮಲೆಯ ಪಕ್ಕಕ್ಕೆ ಹೋಗಿ ನಿಲ್ಲುವನು.)

**ವಿಮಲಾ :**

ನಾವು ಅಷ್ಟು ಹೊತ್ತಿನಿಂದ ನೋಡುತಾ ಇದ್ದೆವಲ್ಲಾ, ತೊಟ್ಟಿಲಿನಲ್ಲಿ ಬಟ್ಟೆ ಇತ್ತೆ ?.......ಅಲ್ನೋಡಿ !

**ಕೇಶವಮೂರ್ತಿ :**

ಹ್ಞಾ! ಹೌದು ! ಮೊದಲು ಬಟ್ಟೆ ಇರಲೇ ಇಲ್ಲ. (ಮೆಲ್ಲಮೆಲ್ಲನೆ ತೊಟ್ಟಿಲ ಬಳಿ ಸಾರಿ, ಬಗ್ಗಿ ನೋಡುವನು. ವಿಮಲಾ ಸ್ತಂಭೀಭೂತಳಾಗಿ ನಿಂತಲ್ಲಿಯೆ ನಿಂತಿರುವಳು.) ಬಟ್ಟೆ ಮಾತ್ರವಲ್ಲ ಕಣೇ, ಒಂದು ಮಗುವೂ ಇದೆ, ಮಗು ! ಮಗೂ!

**ವಿಮಲಾ :**

ಮಗೂ ! ಮಗುವೇ?.......ಹಾಗಾದರೆ, ಅದು ಮನುಷ್ಯರ ಮಗುವಲ್ಲ ಅಂದ್ರೆ........ (ಮೆಲುದನಿಯಲ್ಲಿ) ದೆವ್ವದ ಮಗು ! ಬನ್ನಿ, ಬನ್ನೀಂದ್ರೆ, ಹೊರಕ್ಕೆ ಹೊರಟು ಹೋಗೋಣ.

**ಕೇಶವಮೂರ್ತಿ :**

ಹೊರಕ್ಕೆ ಎಲ್ಲಿಗೆ ಹೋಗೋದು, ಮನೆಯನ್ನು ಬಿಟ್ಟು ? ನೀನು ಸುಮ್ಮನೆ

ಕೂಗಿದಿರಲ್ಲಾ ? ಮನೆಯಲ್ಲಿ ಎಲ್ಲ ಕ್ಷೇಮ ತಾನೆ ?

**ಕೇಶವಮೂರ್ತಿ :**

ಕ್ಷೇಮವೇ—ಆದರೆ........ಎಲ್ಲ ತಾನಾಗೇ ಗೊತ್ತಾಗುತ್ತೆ ಅನ್ನಿ......ದಯವಿಟ್ಟು ಈಗಲೇ ಡಾ॥ ನಾರಾಯಣರಾಯರ ಮನೆಗೆ ಹೋಗಿ, ಅವರು ಷಾಪಿನಿಂದ ವಾಪಸ್ಸು ಬಂದಿದ್ದರೆ, 'ಅರ್ಜೆಂಟ್' ಅಂತ ಹೇಳಿ ಜೊತೆಯಲ್ಲೆ ಕರೆದುಕೊಂಡು ಬರಬೇಕಲ್ಲಾ.......? ನಾನೇ ಹೋಗುತಾ ಇದ್ದೆ.......ಇವಳೂ, ಒಬ್ಬಳೇ......

**ರಾಮರಾಯರು :**

ಪರವಾಯಿಲ್ಲ, ನೀವು ಯೋಚನೆ ಮಾಡಬೇಡಿ. ಇಂಥ ಸಮಯಕ್ಕೂ ಉಪಕಾರ ಮಾಡದೆ ಹೋದರೆ......ಅಗತ್ಯವಾಗಿ ಹೋಗಿ ಕರೆತರುತೇನೆ. (ಎಂದು ತೆರಳುವರು.)

**ಕೇಶವಮೂರ್ತಿ :**

(ಕ್ಷಣಬಿಟ್ಟು) ವಿಮಲಾ, ವಿಮಲಾ! ಎಚ್ಚರ ಮಾಡಿಕೋ, ಗಾಬರಿಯಾಗಬೇಡ! (ಅವಳ ಹಣೆ ಮುಟ್ಟಿ ನೋಡಿ) ಹಣೆಯೆಲ್ಲಾ ಬೆವತು ಹೋಗಿದೆ ! ಪ್ರಜ್ಞೆ ತಪ್ಪಿದೆ! ಅಯ್ಯೊ, ಇದೆಲ್ಲಿಯ ಗ್ರಹಚಾರ! (ಮೆಲ್ಲನೆ ಎದ್ದು, ಬೀದಿಯ ಬಾಗಿಲ ಬಳಿ ಹೋಗಿ, ಮತ್ತೆ ಹಿಂತಿರುಗಿ, ತೊಟ್ಟಿಲ ಬಳಿ ನಿಲ್ಲುವನು.) ಅಯ್ಯೋ, ಮುಂಡೇದೇ! ಯಾರದ್ದಾದರೂ ಆಗಲಿ, ಇದು ಏನು ಮಾಡಿತ್ತು ಪಾಪ ? ನಿರಪರಾಧಿ ಮಗುವಿಗೆ ಈ ತಬ್ಬಲಿತನವೇ ! (ಮತ್ತೆ ಹೆಂಡತಿಯ ಬಳಿಗೆ ಹೋಗಿ) ವಿಮಲಾ, ವಿಮಲಾ !

[ರಾಮರಾಯರು ಡಾಕ್ಟರೊಂದಿಗೆ ಪ್ರವೇಶಿಸುವರು.]

**ರಾಮರಾಯರು :**

(ಪ್ರವೇಶಿಸುವಾಗಲೇ) ನಮ್ಮ ಬೀದಿಯಲ್ಲಿ ಡಾಕ್ಟರೊಬ್ಬರು ಇರುವುದರಿಂದ ನಾವೆಲ್ಲಾ ಬದುಕಿಕೊಂಡಿದೇವೆ.

**ಡಾಕ್ಟರ್ :**

ಹಿತ್ತಿಲಗಿಡ ಮದ್ದಲ್ಲ ಅನ್ನುವ ಹಾಗೆ, ಬೀದಿಯ ಡಾಕ್ಟರು ಡಾಕ್ಟರಲ್ಲ ಅಂತ ನೀವು ತಿಳಿದಿಲ್ಲವಲ್ಲ ! ಅದರಿಂದ, ನಾನೂ ಬದುಕಿದ್ದೇನೆ ! ಹೌದೋ ಅಲ್ಲವೋ, ಮಿ॥ ಮೂರ್ತಿ ?

**ಕೇಶವಮೂರ್ತಿ :**

ಹೇಳಿಕಳಿಸಿದಾಗಲೆಲ್ಲ ಹೊತ್ತುಗೊತ್ತು ಎನ್ನದೆ ಬರ್ತೀರಲ್ಲ, ಅದೀಗ ನಿಮ್ಮ ಔದಾರ್ಯ.

**ವಿಮಲಾ :**

(ಒಳಕ್ಕೆ ಹೋಗದೆ, ಹೊರಗೇ ನಿಂತು) ಸ್ವಿಚ್ಚು ಹಾಕಿ, ಮೊದಲು.

**ಕೇಶವಮೂರ್ತಿ :**

ಇದ್ದರೆ ಇರಬೇಕು ನಿನ್ನಂಥ ಧೈರ್ಯಸ್ಥೆ (ಎಂದು ವಿಮಲೆಯನ್ನೇ ನೋಡುತ್ತ, ತೆರೆ ಸರಿಸಿ, ಕೈ ಚಾಚಿ, ಕೋಣೆಯೊಳಗಿನ ಬಾಗಿಲ ಪಕ್ಕದ ಸ್ವಿಚ್ಚು ಹಾಕುವನು. ಕತ್ತಲ ಕೋಣೆ ಬೆಳಗುವುದು.) ಇನ್ನು ಪ್ರವೇಶಿಸಬಹುದು, ರಾಣೀ ಸಾಹೇಬರು, ಶಯ್ಯಾಗೃಹಕ್ಕೆ !

**ವಿಮಲಾ :**

ಹಾಸ್ಯಮಾಡಿ, ಹಾಸ್ಯ ! (ಎಂದು ಪ್ರವೇಶಿಸಿದೊಡನೆಯೆ) ಅಯ್ಯೊ, ಅಯ್ಯೋ ! (ಎಂದು ಕಿಟಾರನೆ ಕಿರಿಚಿ, ಬಾಗಿಲ ಬಳಿಯೆ ನಿಂತಿದ್ದ ಕೇಶವಮೂರ್ತಿಯನ್ನು ಬಲವಾಗಿ ತಬ್ಬಿಕೊಂಡು, ನಿಂತಿದ್ದ ಹಾಗೆಯೆ ಪ್ರಜ್ಞೆತಪ್ಪುವಳು ; ಕೊರಳು ಜೋಲ ಬೀಳುವುದು.)

**ಕೇಶವಮೂರ್ತಿ :**

(ವಿಮಲೆಯನ್ನು ತಬ್ಬಿಕೊಂಡೇ ಹಿಂದಿರುಗಿ ನೋಡುವನು.) (ಬೆಚ್ಚಿ) ಲೀಲಾ ! ಲೀಲಾವತಿ !.......ಅಯ್ಯೋ, ಬದುಕಿ ಕಾಡಿದ್ದಲ್ಲದೆ ಸತ್ತು ಕಾಡುವುದಕ್ಕೆ ಇಲ್ಲಿಗೆ ಬಂದೆಯಾ ?.......

[ಎಚ್ಚರಗೊಂಡ ವಿಮಲೆಯನ್ನು ಮೆಲ್ಲನೆ ಎತ್ತಿಕೊಂಡು ಹೋಗಿ, ಈಸೀ ಚೇರಿನ ಮೇಲೆ ಒರಗಿಸಿ ಕೂರಿಸುವನು.]

.........ಹೆದರಿಕೋ ಬೇಡ ವಿಮಲಾ, ನೆಲದ ಮೇಲೆ ಮಲಗಿರೋಳು ಲೀಲಾವತಿಯೇ. ಬಹುಶಃ........ಹ್ಞು, ಅದು ಹೇಗಾದರೂ ಇರಲಿ, ಮುಖ್ಯ ಹೆದರಿಕೋಬೇಡ. ನಾನಿಲ್ವೆ ನಿನ್ನ ಜೊತೆಗೆ ?......ನಾನು ಬೀದಿಯ ಬಾಗಿಲಲ್ಲೆ ನಿಂತು ಎದುರು ಮನೆ ರಾಮರಾಯರನ್ನ ಕೂಗಿ, ಮೊದಲು ಒಬ್ಬರು ಡಾಕ್ಟರನ್ನ ಕರೆತರೋಹಾಗೆ ಹೇಳ್ತೇನೆ. ಆಮೇಲೆ, ಮುಂದಿನ ಕೆಲಸ.......

[ಎಂದು ಮುಂಬಾಗಿಲ ಬಳಿ ಹೋಗಿ, "ರಾಮರಾಯರೇ, ರಾಮರಾಯರೇ !" ಎಂದು ಮೂರು ನಾಲ್ಕು ಸಲ ಗಟ್ಟಿಯಾಗಿ ಕೂಗಿಕೊಳ್ಳುವನು. ಹಿಂದಿರುಗಿ ಬಂದು ವಿಮಲೆಯ ಪಕ್ಕದಲ್ಲಿ ಸ್ಟೂಲಿನ ಮೇಲೆ ಕುಳಿತುಕೊಳ್ಳುವನು.]

[ಕೆಲವು ಕ್ಷಣ ಮೌನ.]

**ರಾಮರಾಯರು :**

(ಪ್ರವೇಶಿಸಿ) ಏನು ಸಮಾಚಾರ, ಕೇಶವಮೂರ್ತಿಗಳೇ ? ಯಾಕೆ,

**ಕೇಶವಮೂರ್ತಿ :**

ಸ್ವಲ್ಪ ಹಾಗೇ ಆ ತೊಟ್ಟಿಲ ಹತ್ತಿರ ದಯಮಾಡಿಸಿ ಮಗುವನ್ನ ಪರೀಕ್ಷೆ ಮಾಡಿ, ಅದು ಬದುಕಿದೆಯೇ ಇಲ್ಲ ಸತ್ತಿದೆಯೇ ತಿಳಿಸಿ.

**ಡಾಕ್ಟರ್ :**

(ತೊಟ್ಟಿಲನ್ನು ಸಮೀಪಿಸಿ, ಪರೀಕ್ಷಿಸಿ) ಬ–ದು–ಕಿ–ದೆ.......ಆದರೆ, ಏನಾದರೂ ನಿದ್ದೆ ಬರುವ ಔಷಧಿ ಕೊಟ್ಟಿದ್ದೀರಾ ?

**ಕೇಶವಮೂರ್ತಿ :**

ನಾನು ಯಾವುದನ್ನೂ ಕೊಟ್ಟಿಲ್ಲ.

**ಡಾಕ್ಟರ್ :**

ಸರಿ.___ನಿಮ್ಮ ಕುಟುಂಬ ?

**ಕೇಶವಮೂರ್ತಿ :**

ಅವಳಾಗಲಿ ನಾನಾಗಲಿ ಈ ಮಗುವಿಗೆ ಔಷಧ ಹಾಕುವ ಸಂದರ್ಭವೇ ಇಲ್ಲ.

**ಡಾಕ್ಟರ್ :**

ಮತ್ತೆ ಯಾಕೆ ಹೀಗೆ ಮತ್ತುಹಿಡಿದು ಮಲಗಿದೆ ? ಇದು ನಿಮ್ಮ ಮೊದಲ ಮಗು ತಾನೆ ?...

**ಕೇಶವಮೂರ್ತಿ :**

[ಮೌನ]

**ಡಾಕ್ಟರ್ :**

......ಅಂದಹಾಗೆ, ಈಗ ಜ್ಞಾಪಕ ಬಂತು. ಒಂದು ದಿನ ನಿಮ್ಮ ಕುಟುಂಬ ಖಾಲಿ ತೊಟ್ಟಿಲನ್ನ ತೂಗುತ ಇದ್ದರು. ನಾನೇ ಹಾಸ್ಯಮಾಡಿದ್ದೆ......ಹಿಹ್ಹಿಹ್ಹಿ...... ಯಾರ ಮಗು ಇದು ?

**ಕೇಶವಮೂರ್ತಿ**

ಅದೇ ಸಮಸ್ಯೆ.....ಅಂತೂ ಮಗು ಸತ್ತಿಲ್ಲ ತಾನೆ ?

**ಡಾಕ್ಟರ್ :**

ಇಲ್ಲ, ಇಲ್ಲ. (ಮತ್ತೆ ಮಗುವನ್ನು ಹೊರಳಾಡಿಸುವರು. ಮಗು ಕುಂಯ್ ಗುಟ್ಟುವುದು.) ಇನ್ನೇನು ಎಚ್ಚರವಾಗುತ್ತೆ....ಇದೇನು, ಇಲ್ಲೊಂದು ಕವರು ಇದೆ ನೋಡಿ, (ತೆಗೆದುಕೊಂಡು) ನಿಮ್ಮ ಹೆಸರೇ ಬರೆದಿದೆ ಇದರ ಮೇಲೆ! (ಎಂದು ಕೇಶವಮೂರ್ತಿಯ ಕೈಗೆ ಕೊಡುವನು.)

**ಡಾಕ್ಟರ್ :**

ಸ್ತೋತ್ರಪಾಠಕ್ಕೆ ಇದು ಸಮಯ ಅಲ್ಲ : What's the matter (ಏನು ಸಮಾಚಾರ?) ನಿಮ್ಮ ಕುಟುಂಬ ಆರೋಗ್ಯ ತಾನೆ ?

**ಕೇಶವಮೂರ್ತಿ :**

ಅದೇ ಅದೇ.......ಮೊದಲು ಅವರನ್ನೇ ನೋಡಿಬಿಡಿ—ಸ್ವಲ್ಪ ಪ್ರಜ್ಞೆ ತಪ್ಪಿದ ಹಾಗಿದೆ.

**ಡಾಕ್ಟರ್ :**

(ವಿಮಲೆಯ ಬಳಿ ಹೋಗಿ ಪರೀಕ್ಷಿಸಿ) ಏನೂ ಪರವಾ ಇಲ್ಲ, ಒಂದು ಇಂಜೆಕ್ಷನ್ ಕೊಡ್ತೀನಿ, ಎಲ್ಲ ಸರಿಹೋಗುತ್ತೆ. ಬನ್ನಿ, ಸ್ವಲ್ಪ ರಟ್ಟೆ ಹಿಡಿದುಕೊಳ್ಳಿ.

**ಕೇಶವಮೂರ್ತಿ :**

(ವಿಮಲೆಯ ತೋಳನ್ನ ಸರಿಯಾಗಿ ಹಿಡಿದುಕೊಳ್ಳುವನು.)

**ಡಾಕ್ಟರ್ :**

(ಇಂಜೆಕ್ಷನ್ ಕೊಟ್ಟು) She will be all right. (ಅವರು ಸರಿ ಹೋಗ್ತಾರೆ). ಒಂದು ಲೋಟ ಓವಲ್‌ಟೈನ್ ಮಾಡಿ ಕೊಟ್ಟುಬಿಡಿ. ಈ ಮಾತ್ರೆ ಕೊಡಿ ಮಲಗೋದಕ್ಕೆ ಮುಂಚೆ, ಚೆನ್ನಾಗಿ ನಿದ್ರೆ ಬರುತ್ತೆ. ಮೂರು ತಿಂಗಳು ಆಗಿರಬಹುದು, ಅಲ್ವಾ ?

**ಕೇಶವಮೂರ್ತಿ :**

(ಡಾಕ್ಟರ್ ಕೊಟ್ಟ ಮಾತ್ರೆಯ ಪೊಟ್ಟಣವನ್ನು ತೆಗೆದುಕೊಂಡು) ನನಗೆ ಸರಿಯಾಗಿ ಗೊತ್ತಿಲ್ಲ ; ಅವಳು ತಿಳಿಸಿಲ್ಲ.

**ಡಾಕ್ಟರ್ :**

ಇನ್ನು ನಾನು ಬರಲೆ ? I must hurry up to another heart patient (ಇನ್ನೊಬ್ಬರು ಹೃದಯ ರೋಗಿಯನ್ನು ನೋಡಲು ನಾನು ಬೇಗ ಹೋಗಬೇಕಾಗಿದೆ.)

**ಕೇಶವಮೂರ್ತಿ :**

ಇಷ್ಟಕ್ಕೆ ಮುಗೀಲಿಲ್ಲ ಡಾಕ್ಟರೆ. There are more serious cases.... (ಇನ್ನೂ ಹೆಚ್ಚು ಆತಂಕ ಪಡಿಸುವ ರೋಗಿಗಳಿದ್ದಾರೆ.)

ಡಾಕ್ಟರ್ :

Sereious cases ! ಬೇರೆ ಇನ್ನು ಯಾರಪ್ಪ ?

**ಕೇಶವಮೂರ್ತಿ :**

ಓದಿಕೊಂಡಾಯಿತಲ್ಲ. ಇನ್ನೂ ಒಂದು ಸಲ ನಾನೇ ಓದಬೇಕೆ ?

**ರಾಮರಾಯರು :**

ನಿಮ್ಮ ಅಭ್ಯಂತರ ಇಲ್ಲದಿದ್ದರೆ, ಬೇಕಾದರೆ......ನಾನು....

**ಕೇಶವಮೂರ್ತಿ :**

ಅಗತ್ಯವಾಗಿ ಓದಿ, ಮುಖ್ಯ, ಡಾಕ್ಟರು ಕೇಳಬೇಕು.

**ರಾಮರಾಯರು :**

(ಕಾಗದವನ್ನು ಈಸಿಕೊಂಡು ಓದತೊಡಗುವರು. ಕೆಲವು ವಾಕ್ಯಗಳನ್ನು ಮನಸ್ಸಿನಲ್ಲಿ ಓದಿಕೊಂಡು.)

"........ನಿಮ್ಮ ಪಾದಗಳ ಮೇಲೆ ಬಿದ್ದು, ತಪ್ಪೊಪ್ಪಿಕೊಂಡು, ಕ್ಷಮೆ ಬೇಡಿ, ಅದು ದೊರೆಯದಿದ್ದರೆ, ಪಾದಗಳೆಡೆಯಲ್ಲೇ ವಿಷಪಾನ ಮಾಡಬೇಕೆಂದು ಒಂದು ಸಂಕಲ್ಪ. ನಿಮ್ಮಿಂದ ಕ್ಷಮೆ ದೊರೆಯುವುದಿಲ್ಲವೆಂದು ನನ್ನ ಮನಸ್ಸಿಗೆ ಖಂಡಿತವಾಗಿರುವುದರಿಂದ, ಫಲಕಾರಿಯಾಗದ ಆ ನಾಟಕ ಅನಾವಶ್ಯಕ ಎಂದು ತೋರಿ, ಎಲ್ಲಿ ಯಾವಾಗ ಅನುಕೂಲವಾಗುವುದೊ ಅಲ್ಲಿ ಆಗ, ಇದೇ ರಾತ್ರಿ, ಆ ದಿವ್ಯಾಮೃತವನ್ನು ಕುಡಿದು, ಹಿಂದಿನದೆಲ್ಲವನ್ನೂ ಮರೆತು, ನಿಮ್ಮ ಪವಿತ್ರ ಸ್ಮರಣೆಯಲ್ಲಿ ಪ್ರಾಣತ್ಯಾಗಮಾಡುತ್ತೇನೆ. ಶೀಲ ಎಷ್ಟೇ ಶುದ್ಧವಾದರೂ ಅದಕ್ಕೆ ತಕ್ಕಂತೆ ಇರದಿದ್ದ ನಡತೆಗಾಗಿ ಪಶ್ಚಾತ್ತಾಪಪಡುತ್ತಿರುವ ನನ್ನ ಮಾತನ್ನು ನೀವು ನಂಬಿದರೆ ನಂಬಬಹುದು, ಬಿಟ್ಟರೆ ಬಿಡ ಬಹುದು; ಈ ಮಗು ನಿಮ್ಮದು ; ನಿಮ್ಮ ಮನೆಯ ತೊಟ್ಟಿಲಲ್ಲಿ ಅದು ಬದುಕಿ ಬೆಳೆಯಲಿ. ಅದನ್ನು ತೂಗುವ ಭಾಗ್ಯ ಮಾತ್ರ ನನ್ನ ಪಾಲಿಗಿಲ್ಲ........ಇಂತು, ಕಡೆಯ ನಮಸ್ಕಾರ..........ಲೀ.......ಲಾ......"(ಓದಿ, ನಿಟ್ಟುಸಿರುಬಿಡುವರು.)

**ಕೇಶವಮೂರ್ತಿ :**

ತುಂಬ ಉಪಕಾರ ಮಾಡಿದಿರಿ ರಾಮರಾಯರೆ, ಕಾಗದ ಓದಿ.........ಬೇಕಾದ ಭಾಗವನ್ನೆ ಓದಿದಿರಿ......ಡಾಕ್ಟರೆ. ಕೇಳಿದಿರಾ....... ಕೆಟ್ಟ ಮೇಲೆ ಬುದ್ಧಿ ಬಂದರೆ ಏನು ಪ್ರಯೋಜನ, ಹೇಳಿ ? ಅದಿರಲಿ.... ನಿಮ್ಮನ್ನ ಕರಸಿದ್ದು (ಕೈ ತೋರಿಸಿ) ಮಲಗುವ ಕೋಣೆಯಲ್ಲಿ ಸತ್ತು ಬಿದ್ದಿರುವಂತೆ ಕಾಣುವ ಮಗುವಿನ ತಾಯನ್ನು ಪರೀಕ್ಷೆಮಾಡುವುದಕ್ಕೋಸ್ಕರ......ಈ ಕಾಗದದಿಂದಲೇ ಎಲ್ಲ ಗೊತ್ತಾಗುತ್ತೆ. ಮತ್ತೆ ಪರೀಕ್ಷೆ ಮಾಡಬೇಕೇನು?

**ಕೇಶವಮೂರ್ತಿ :**

(ಕವರನ್ನು ಈಸಿಕೊಂಡು, ಆತುರವಾಗಿ ಒಡೆದು, ತ್ವರೆಯಿಂದ ಓದಿಕೊಳ್ಳ ತೊಡಗುವನು.)

**ವಿಮಲಾ :**

(ಎಚ್ಚರಗೊಂಡು ಸುತ್ತ ನೋಡಿ, ಮೇಲೆದ್ದು) ಇದೇನು! ಡಾಕ್ಟರು, ರಾಮ ರಾಯರು!!

**ಕೇಶವಮೂರ್ತಿ :**

(ವಿಮಲೆಯ ಬಳಿಗೆ ಧಾವಿಸಿ) ಗಾಬರಿ ಪಡಬೇಡ, ವಿಮಲಾ! ಎಲ್ಲ ಸರಿ ಹೋಗುತ್ತೆ, ಏನೂ ಭಯ ಇಲ್ಲ.

**ಡಾಕ್ಟರ್, ರಾಮರಾಯರು :**

(ಬೆರಗಿನಿಂದ ಕುತೂಹಲಿಗಳಾಗಿ ಸ್ತಬ್ಧರಾಗಿ ನಿಂತಿರುವರು.)

**ವಿಮಲಾ :**

ಈ ಮಗು, ಆ ಲೀಲಾವತಮ್ಮ.......ಒಂದೂ ಅರ್ಥವಾಗೋದಿಲ್ಲ.]

**ಕೇಶವಮೂರ್ತಿ :**

ಆ ಪುಣ್ಯಾತ್ಗಿತ್ತಿ ಈ ಕಾಗದ ಬರೆದಿಟ್ಟು ಎಲ್ಲ ಅರ್ಥ ಆಗುವ ಹಾಗೆ ಮಾಡಿದ್ದಾಳೆ ; ಎಲ್ಲಾ ತೊಡಕನ್ನೂ ಬಗೆಹರಿಸಿದ್ದಾಳೆ.

**ವಿಮಲಾ :**

(ಕೇಶವಮೂರ್ತಿ ಕೊಟ್ಟ ಕಾಗದದ ಮೇಲೆ ಬೇಗನೆ ಅಲ್ಲಲ್ಲಿ ಕಣ್ಣೋಡಿಸಿ) ಈಕೆ ನಿಮ್ಮ ಮೊದಲ ಹೆಂಡತಿ ಲೀಲಾವತಿ ! ಬದುಕಿದ್ದದ್ದು ನಿಜ ! ಈಗ, ಈ ರಾತ್ರಿ, ನಮ್ಮ ಮನೆಗೆ ಬಂದು.......

**ಕೇಶವಮೂರ್ತಿ :**

ಇನ್ನು ಹೆದರಿಕೆ ಯಾಕೆ ? ಓದು ವಿಮಲಾ ! ಡಾಕ್ಟರೂ ಕೇಳಲಿ, ಸಾಕ್ಷಿ ಅವರು ಇದಕ್ಕೆಲ್ಲ........

**ವಿಮಲಾ :**

(ಮೊದಲ ಪದಗಳನ್ನು ಓದಿದಂತೆ ಮಾಡಿ, ಖೇದದ ಕಳವಳದಿಂದ) ಇಲ್ಲ. ನಾ ಓದಲಾರೆ, ನಾನು ಓದಿಕೊಂಡಾಗಿದೆ. ಬೇಕಾದರೆ ನೀವೇ ಓದಿ, ಡಾಕ್ಟರು ಕೇಳಬೇಕಾದರೆ........(ಎಂದು ಕಾಗದವನ್ನು ಕೇಶವಮೂರ್ತಿಗೆ ಹಿಂದಿರುಗಿಸುವಳು.)

**ಡಾಕ್ಟರ್ :**

ಪರೀಕ್ಷೇನೂ ಮಾಡಬೇಕು, ಪೋಲೀಸರಿಗೂ ವರ್ತಮಾನ ಕೊಡಬೇಕು.... ಆದರೆ, ನೀವೇನೂ ತೊಂದರೆ ತೆಗೆದುಕೊಳ್ಳಬೇಡಿ. ಮಿ॥ ರಾಮರಾವ್, ಇದೂ ಒಂದು ಉಪಕಾರ ಮಾಡಿಬಿಡಿ! ದಯವಿಟ್ಟು ಪೋಲೀಸ್ ಸ್ಟೇಷನ್ನಿಗೆ ಫೋನ್ ಮಾಡ್ತೀರ?

**ರಾಮರಾಯರು :**

ಅಗತ್ಯವಾಗಿ. (ಕೂಡಲೆ ತೆರಳುವರು.)

**ಡಾಕ್ಟರ್ :**

ಎಲ್ಲಿ ಬನ್ನಿ, ನಿಮ್ಮ ಮೃತ ಪತ್ನಿಯನ್ನು ಪರೀಕ್ಷೆ ಮಾಡಿ ನೋಡೋಣ Very tragic indeed. Very very sorry, Mr. Murthy. (ನಿಜವಾಗಿ ಬಹಳ ವಿಷಾದದ ವಿಷಯ. ನನಗೆ ತುಂಬ ವ್ಯಸನವಾಗಿದೆ, ಮೂರ್ತಿಗಳೇ.)

**ಕೇಶವಮೂರ್ತಿ :**

I am also very sorry––(ಅವಳಿಗಾಗಿ ನನಗೂ ದುಃಖವೇ.)

ನೀನು ಇಲ್ಲೆ ಇರು ವಿಮಲಾ. ನೋಡಿ ಹೆದರಿಕೊಂಡೀಯೆ.

[ಡಾಕ್ಟರೊಡನೆ ಮಲಗುವ ಕೋಣೆಯನ್ನು ಪ್ರವೇಶಿಸುವನು.]

[ಮಗು ಇದ್ದಕ್ಕಿದ್ದಂತೆ ಅಳತೊಡಗುವುದು.]

**ವಿಮಲಾ :**

(ತಟ್ಟನೆ ಬಂದು, ತೊಟ್ಟಿಲ ಸರಪಳಿ ಹಿಡಿದು, ತೂಗತೊಡಗುವಳು, ಮಗು ಅಳು ನಿಲ್ಲಿಸದಿರಲು.......)

"ಯಾಕಳುವೆ ಎಲೆ ರಂಗ ಬೇಕಾದ್ದು ನಿನಗಿದೆ......"

(ಎಂದು ಹಾಡ ತೊಡಗುವಳು, ಕಂಠ ಗದ್ಗದವಾಗುವುದು.)

ಬೇಕಾದ್ದು ನಿನಗಿದೆ......

ಬೇಕಾದ್ದು........ಬೇಕಾದ್ದು.......

ಎಲ್ಲಿದೆ ?......ಎಲ್ಲಿದೆ ?......ಎಲ್ಲಿದೆ ?......

(ಎಂದು ಬಿಕ್ಕಿ ಬಿಕ್ಕಿ ಅಳುತ್ತಿರುವಾಗ, ಡಾಕ್ಟರು ಮತ್ತು ಕೇಶವಮೂರ್ತಿ ಕೋಣೆಯಿಂದ ಹೊರ ಬಂದು ಸ್ತಬ್ಧರಾಗಿ ನಿಂತು ನೋಡುತ್ತಿರುವಾಗ.....]

ಮುಂದೆರೆ

ನಾಟಕ ಮುಗಿದುದು.

# ೧. ಮುನ್ನೋಟ

[ಕಾಡು : ಮಧ್ಯರಾತ್ರಿ, ಹುಣ್ಣಿಮೆಯ ಚಂದ್ರ ಬೆಳಗುತ್ತಿದ್ದಾನೆ. ಮರದ ಕೆಳಗೆ ತಿರುಕಿ (ತರುಣಿ)ಯೊಬ್ಬಳು ಮಲಗಿದ್ದಾಳೆ. ತೆರೆಯ ಹಿಂದೆ ಗಾನ, ಸ್ವಪ್ನಸುಂದರಿ ನಾಟ್ಯವಾಡುತ್ತ ಬರುತ್ತಾಳೆ. ತಿರುಕಿಯ ಬಳಿ ನಿಂತು, ತನ್ನ ಆಕರ್ಷಣೆಯಿಂದ ಅವಳನ್ನು ಮೇಲೆಬ್ಬಿಸುವಂತೆ ನಾಟ್ಯವಾಡುತ್ತಾಳೆ. ತಿರುಕಿ, ಸ್ವಪ್ನಸುಂದರಿಯ ಇಚ್ಛೆಯಂತೆ ಹಾಗೆಯೇ ಎದ್ದು ಕುಳಿತುಕೊಳ್ಳುತ್ತಾಳೆ. ಇಬ್ಬರಿಗೂ ಸಂವಾದ]

ತಿರುಕಿ : ನೀನಾರು?

ಸ್ವಪ್ನಸುಂದರಿ : ಕನಸಿನಹೆಣ್ಣು, ಮುಂದುಗಾಣುವ ಕಣ್ಣು.

ತಿರುಕಿ : ನನ್ನ ಮುಂದನು ನನಗೆ ತೋರಿಸುವ ಕಣ್ಣೆ?

ಸ್ವಪ್ನಸುಂದರಿ : ನಿನ್ನಮುಂದನು ನಿನಗೆ ತೋರಿಸುವೆ, ಹೆಣ್ಣೆ.

ತಿರುಕಿ : ನನ್ನ ಮುಂದಿನದೆಲ್ಲ ಬರಿಯ ಸೊನ್ನೆ.

ಸ್ವಪ್ನಸುಂದರಿ : ಹಾಗೆನ್ನಬೇಡ, ನೀನರಿಯೆ ಕನ್ನೆ.

ತಿರುಕಿ : ಅಂತಿರಲು, ತೋರೆನಗೆ ನನ್ನ ಮುಂದು.

ಸ್ವಪ್ನಸುಂದರಿ : ನೋಡುನೋಡೆಲೆ ಬಾಲೆ ನಿನ್ನ ಮುಂದು.

ತಿರುಕಿ : ಕಾಣುತಿದೆ, ಕಾಣುತಿದೆ, ಚಿತ್ರಬರೆದಂತೆ.
ಒಲವು; ಒಲವಿನ ಗೆಲವು, ಅದರ ಚೆಲುವು, ಎಳೆಯುತಿದೆ,
ಎಳೆಯುತ್ತಿದೆ, ನನ್ನನೊಲವಿನ ಸೆಳವು ಯಾವುದದು
ಬರಿದೋಣಿ, ಯಾರು ಕುಳಿತಿಹರಲ್ಲಿ?
ಆಹ, ಈಸುತಲಿರಲು ನಗೆ ಸಿಕ್ಕಿದನಲ್ಲ!
ಮತ್ತೆ ಯಾರವಳಲ್ಲಿ?–ಯಾರು, ಯಾರವಳಲ್ಲಿ? ನಾಬುಂ
ದುದೇಕಿಲ್ಲಿ? ಧುಮುಕುವೆನು, ಧುಮುಕುವೆನು.–

ಸ್ವಪ್ನಸುಂದರಿ : ಹುಚ್ಚಿಯಂತಾಡದಿರು, ಒಲವ ದೋಣಿಯಲಿರಲು
ಯಾರಾದರೇನು? ಓಹೋ, ಎಚ್ಚರ, ದೋಣಿ ಸುಳಿದಾಡಿತೆ?
ಅಯ್ಯೋ, ಹುಟ್ಟಿತೇನು? ತಬ್ಬಿತೇನು?
ಧುಮುಕದಿರು, ಧುಮುಕದಿರು, ಕಡೆಹಾಯ್ದು ಕಡೆಹಾಯ್ದು
ಹುಟ್ಟುಬಿಡು, ತಮ್ಮಾ, ನಾವೆಯ ತಾವು ನಡಸಬಲ್ಲವರವರು
ಅವರ ಗುರಿ ಬಲುದೂರ ನೀಸುಮ್ಮನಿರು ತರಳೆ.

## ನಾಟಕದಲ್ಲಿ ಬರುವ ಪಾತ್ರಗಳು

| | |
|---|---|
| ತಿರುಕಿ | ನಂಜಮ್ಮ (ಶ್ರೀಕಂಠಶರ್ಮನ ಹೆಂಡತಿ) |
| ಸ್ವಪ್ನಸುಂದರಿ | ಶ್ರೀಕಂಠಶರ್ಮ |
| ಮುದುಕಿ | ಮೂರ್ತಿ |
| ಬೈರಾಗಿ ಜೈ ಶಂಕರ್ | ಚಂದ್ರಶೇಖರ |
| ಒಬ್ಬ ದಾಂಡಿಗ (ಚಿಕ್ಕ) (ಬೈರಾಗಿಯ ಶಿಷ್ಯ) | ನಾಗೇಂದ್ರ |
| ಕುಂಟ | ಶಶಿವದನೆ |
| ಭಿಕ್ಷುಕರು(೬–೭ ಜನ) | ರಾಜಪ್ಪ (ಶಶಿವದನೆಯ ತಂದೆ) |
| ಇನ್ನೊಬ್ಬ (ಮಾದ) | ಮಾಲಿ |

# ಮೊದಲನೆಯ ಅಂಕ
## ೧ನೆಯ ನೋಟ

[ಶ್ರೀಕಂಠಶರ್ಮನ ಮನೆಯ ಹಜಾರ : ಎದುರಾಗಿ ಎರಡು ಬಾಗಿಲುಗಳು ಕಾಣುತ್ತವೆ. ಎರಡು ಕೊಠಡಿಗಳವು. ಬಲಗಡೆ ಪಕ್ಕದಲ್ಲಿ ಬೀದಿಯ ಬಾಗಿಲು; ಎಡಗಡೆ, ಅಡಿಗೆಮನೆ ನೀರುಮನೆಗಳಿಗೆ ಒಯ್ಯುವ ನಡುಮನೆಯ ಬಾಗಿಲು.

ಮನೆ ಬಡವರದಾಗಿಯೇ ಕಾಣುತ್ತದೆ – ಎಂದರೆ, ಸಿರಿತನದ ಕುರುಹುಗಳಾದ ಕುರ್ಚಿಗಳು, ಮೇಜುಗಳು, ಸೋಫಾಗಳು, ಬಾಗಿಲ ಇಳಿದೆರೆಗಳು, ಅಲಂಕಾರ ತೋರಣಗಳು ಮೊದಲಾದ ಆಡಂಬರಗಳಿಲ್ಲ; ಒಂದೆರಡು 'ದೇವರಪಟ'ಗಳನ್ನು ಬಿಟ್ಟರೆ, ಬೋಳುಗೋಡೆಗಳೆ–ಹೆಚ್ಚು ಚಿತ್ರಪಟಗಳು ಮುಂತಾದವು ಇಲ್ಲ. ಆದರೆ ಮನೆ ಕೊಳಕಿಲ್ಲ–ಗೋಡೆಗಳು ಸುಣ್ಣ ಬಳಿದು ಶುಭ್ರವಾಗಿವೆ; ನಡುಮಟ್ಟದ ಮೇಲೆ ಕೆಮ್ಮಣ್ಣು ಕಾರಣೆ ತೆಗೆದಿದೆ. ಪುಷ್ಪಚಿತ್ರಗಳನ್ನು ಬರೆದಿದೆ.

ಎದುರಿನಲ್ಲಿ ಕಾಣುವ ಎರಡು ಬಾಗಿಲುಗಳ ನಡುವೆ ಒಂದು ಮಡಿಸುವ ಮೇಜು (Folding Table), ಒಂದು ಸ್ಟೂಲು ಇವೆ. ಮೇಜಿನ ಬಳಿ ನೆಲಕ್ಕೆ ಚಾಪೆ ಹಾಸಿದೆ.

ಮೇಜಿನ ಮೇಲೆ ಕೆಲವು ಪುಸ್ತಕಗಳು ಚೆದರಿ ಬಿದ್ದಿವೆ. ಮಧ್ಯಾಹ್ನ ಎರಡು ಗಂಟೆಯ ಸಮಯ. ಶ್ರೀಕಂಠಶರ್ಮ ಎಡಗಡೆಯ ನಡುಮನೆಯಬಾಗಿಲಿನಿಂದ, ತೊಳೆದ ಕಾಲುಗಳನ್ನು ಚೌಕದಿಂದ ಒರಸಿಕೊಳ್ಳುತ್ತ ಬರುತ್ತಾನೆ. ಶ್ರೀಕಂಠಶರ್ಮ ೪೫–೫೦ ವರ್ಷಗಳ ವೈದಿಕ ಬ್ರಾಹ್ಮಣ]

ಶ್ರೀಕಂಠಶರ್ಮ : (ಬಲಗಡೆಯ ಬಾಗಿಲ ಬಳಿ ಬಂದು) ಚಂದೂ, ಚಂದೂ (ಎಂದು ಕೂಗುವನು. ಉತ್ತರ ಬಾರದಿರಲು) ಚಂದೂ, ಲೋ ಚಂದೂ. ಏಳು ಎಷ್ಟುಹೊತ್ತು ಮಧ್ಯಾಹ್ನ ಮಲಗಿರುವುದು (ಎಂದು ಮೇಜಿನ ಮೇಲೆ ಇಟ್ಟಿದ್ದ ಉತ್ತರೀಯವನ್ನು ತೆಗೆದು ಹೊದೆದುಕೊಳ್ಳುವನು.) ಚಂದೂ, ಚಂದೂ (ಇನ್ನೂ ಉತ್ತರವಿಲ್ಲ) ಚಂದೂ, ಚಂದೂ! (ಎಂದು ಗಟ್ಟಿಯಾಗಿ ಕೂಗಿ, ಕೊಠಡಿಯ ಬಾಗಿಲನ್ನು ನೂಕುವನು. ಬಾಗಿಲು ತೆರೆಯುವುದು.) ಆಗಲೇ ಎದ್ದು ಎಲ್ಲಿಗೋ ಹಾಳಾಗಿ ಹೋದ. (ಅಷ್ಟರಲ್ಲಿ ಒಳಗಿನಿಂದ ನಂಜಮ್ಮ –

ತಿರುಕಿ : ನಾನಿಳಿವೆ ನಾನಿಳಿವೆ; ನಾನು ದೋಣಿಗೆ ಭಾರ.

ಸ್ವಪ್ನಸುಂದರಿ : ಇನ್ನು ಇಳಿಯುವುದೆಲ್ಲಿ: ಪ್ರೇಮವಾಹಿನಿದಾಟಿ, ಪ್ರೇಮ ಶರಧಿಯನಡುವೆ ತೇಲಿಹೋಗುತಲಿಹರು. ನೀನು ಇಳಿಯುವುದೇಕೆ? ಸ್ಥಳವಿಹುದು ಸುಮ್ಮನಿರು.

ತಿರುಕಿ : ಬಿಸಿಲು ಮಳೆ ಚಳಿಗಾಲ ಹೊಡೆತಕ್ಕೆ ಸಿಲುಕಿ, ಜೊತೆಯವರು ಯಾರಿಲ್ಲ, ಜೊತೆಯೇ ಸಿಕ್ಕುವುದಿಲ್ಲ. ಊರಿನಿಂದೂರಿಂಗೆ, ಬೆಟ್ಟಬಯಲುಗಳಲ್ಲಿ ಅಲೆದವಳು ನಾನು. ದೊರೆಯಿತ್ತು ನನಗೆ ಒಲವದೋಣಿಯಲೊಮ್ಮೆ ಒಲಿದವರ ಜೊತೆಗೂಡಿ, ಒಲವ ಸವಿಯನು ಸವಿಯುತಲ್ಲಿ ತೇಲುವ ಭಾಗ್ಯ. ಇನ್ನು ಕುಳಿತಿರಲಿಲ್ಲಿ ಬಯಕೆ ಬಲಿಯುವುದು. ಬಲಿತು ಬಿರಿಯುವುದು. ಇರಲಿ : ಅವರಾರು?ಅವರ ಕತೆಯೇನು?

ಸ್ವಪ್ನಸುಂದರಿ : ಜೊತೆಯಾದಮೇಲೆ ಕತೆ ತಾನೆ ತಿಳಿಯುವುದು. ಅವರ ಕತೆಯಲಿ ನೀನು ಸೇರ್ವ ಮುನ್ನೋಟವಿದು.

ತಿರುಕಿ : ಅವರ ಕತೆ ನಡೆಯಲಿ : ಪ್ರೇಮದರ್ಶನವಾಯ್ತು. ಪ್ರೇಮಶರಧಿಯಲಾಳ್ವೆ, ಇದೊ, ಧುಮುಕಿದೆ. (ಎಂದು ತಟ್ಟನೆಬಿದ್ದು, ನಿದ್ದೆಯಿಂದ ಬಿಗಿದು ಮಲಗುವಳು, ಸ್ವಪ್ನಸುಂದರಿಯು ತಟ್ಟನೆ ಹಿಂದಕ್ಕೆ ಸರಿಯುವಳು)

**ತೆರೆಬೀಳುವುದು**

ಶ್ರೀಕಂಠ : ಹೌದು, ಅವನು ಲೋವರುಸೆಕೆಂಡರಿ ಪರೀಕ್ಷೆ ಮಾಡಿದಾಗ, ಅಷ್ಟಕ್ಕೆ ಸಾಕುಮಾಡಿ ಸಂಸ್ಕೃತಾಭ್ಯಾಸಕ್ಕೆ ಹಾಕೋಣ ಅಂದಾಗ – 'ಇನ್ನೂ ಸ್ವಲ್ಪ ಓದಲಿ; ಈಗಿನ ಕಾಲಕ್ಕೆ ಇಂಗ್ಲೀಷು ಬಂದಿರಬೇಕು' ಎಂದೆ. ಮೆಟ್ರಿಕ್ಯುಲೇಷನ್ ಪ್ಯಾಸಾಯ್ತು– 'ಬಿ.ಎ. ಪ್ಯಾಸುಮಾಡಿಬಿಡಲಿ – ಅಮಲ್ದಾರಿಕೆ ಮಾಡ್ತಾನೆ; ನಮ್ಮನ್ನ ಕೂರಿಸಿ ಅನ್ನ ಹಾಕ್ತಾನೆ' ಎಂದೆ. ಬಿ.ಎ. ಪ್ಯಾಸಾಗಿ ಎರಡು ವರ್ಷವಾಯ್ತಲ್ಲ, ಕೂರಿಸಿ ಅನ್ನಹಾಕುವುದು ಹಾಗಿರಲಿ, ಹೊತ್ತುಹೊತ್ತಿಗೆ ಅನ್ನ ತಿನ್ನುವುದಕ್ಕೆ ಬರುವುದಿಲ್ಲ. ಸಕಾಲಕ್ಕೆ ಸ್ನಾನವಿಲ್ಲ. ಸಂಧ್ಯಾವಂದನೆಯಿಲ್ಲ, ಮಾಧ್ಯಾಹ್ನಿಕವಿಲ್ಲ, ಕ್ರಾಪು, ಮುಖಕ್ಷೌರ, ಬೀಡೀನೂ ಸೇದುತ್ತಾನೆಯೋ ಏನೋ, ನನಗೆ ಕಾಣದ ಹಾಗೆ. ಮನೆಬಿಟ್ಟು ಓಡಿಸಿದ ಹೊರತು ಅವನು ದಾರಿಗೆ ಬರುವ ಹಾಗೆ ಕಾಣಲಿಲ್ಲ. ಮುಖ್ಯ ಈ ಹಾಳು ಪಟ್ಟಣಕ್ಕೆ ಬಂದು ಅವನಿಗೆ ಇಂಗ್ಲೀಷು ಕಲಿಸಿದ್ದು ಬಂತು ನನ್ನ ಪ್ರಾಣಕ್ಕೆ ! ನಮ್ಮೂರಿನ ರಾಮಾವಧಾನಿಗಳ ಕೈಕೆಗಳಗೆ ಸ್ವಲ್ಪ ಪ್ರಯೋಗವನ್ನಾದರೂ ಕಲಿಸಿ ಈ ಊರಿಗೆ ಕರೆದುಕೊಂಡು ಬಂದಿದ್ದರೆ ನನ್ನ ಈಗಿನ ವೃತ್ತಿಯೆಲ್ಲ ಅವನಿಗೇ ಮೊಸಲಾಗಿರುತ್ತಿತ್ತು. ಹಾಗೂ ಮಾಡಲಿಲ. ಹೋಗಲಿ, ಈ ಊರಿನ ಸಂಸ್ಕೃತ ಪಾಠಶಾಲೆಗೂ ಸೇರಿಸಲಿಲ್ಲ. ಮುಖ್ಯ ನನ್ನ ತಪ್ಪು.

ನಂಜಮ್ಮ : ಮಗು ಕಾಲೇಜಿನಲ್ಲಿ ಸಂಸ್ಕೃತಾನೇ ತೆಗೆದುಕೊಂಡಿದೀನಿ ಅಂತ ಹೇಳುತ್ತಿದ್ದ !

ಶ್ರೀಕಂಠ : ಆಹಾಹಾಹ! ಕಾಲೇಜಿನಲ್ಲಿ ಸಂಸ್ಕೃತ ಕಲಿಯುವುದೂ. ಪಾದ್ರಿಯ ಹತ್ತಿರ ವೇದ ಕಲಿಯುವುದೂ ಹಜಾಮನ ಹತ್ತಿರ ಪ್ರಯೋಗ ಕಲಿಯುವುದು ಎಲ್ಲಾ ಒಂದೇ ನೋಡು. ಅವನು ಕಾಲೇಜಿನಲ್ಲಿ ಕಲಿತಿರುವುದು ಒಂದೊಂದಲ್ಲ. ಸಂಸ್ಕೃತಾನೂ ಕಲಿತಿದ್ದಾನೆ. ವೇದಾನೂ ಕಲಿತಿದ್ದಾನೆ–ಹಜಾಮನ ಕೆಲಸವನ್ನೂ ಕಲಿತಿದ್ದಾನೆ, ಆ ಪ್ಯಾಸು ಈ ಪ್ಯಾಸು ಲೊಟ್ಟೆ ಪ್ಯಾಸು ಮಾಡಿ ಮಾಡಿ ಮಾಡಿದ್ದಾನಲ್ಲ, ಏನು ಪ್ರಯೋಜನ? ಅವನಿಗೆ ಕರೆದು ಕೆಲಸ ಕೊಟ್ಟಿರುವವರು ಯಾರು? ಅವನಿಗೆ ಕೆಲಸವೇ

ಶ್ರೀಕಂಠಶರ್ಮನ ಹೆಂಡತಿ, ಬರುವರು) ಚಂದು ಎಲ್ಲಿಗೆ ಹೋದ ಆಗಲೇ?

ನಂಜಮ್ಮ : ಅವನು ಎದ್ದು ಹೋಗಿ ಆಗಲೇ ಅರ್ಧಗಂಟೆ ಮೇಲಾಯಿತು.

ಶ್ರೀಕಂಠಶರ್ಮ : ಎಲ್ಲಿಗೆ ಹಾಳಾಗಿ ಹೋದನೋ, ಒಂದು ಪಂಚಪಾತ್ರೆ ಗಂಗಾಮೃತ ತೆಗೆದುಕೊಂಡು ಬಾ.

(ನಂಜಮ್ಮ ಅಡಿಗೆಯ ಮನೆ ಕಡೆ ಹೋಗುವಳು.)

'ನಂಜುಂಡೇಶ್ವರಾ, ಕಾಪಾಡಪ್ಪ' (ಎಂದು ಆಕಳಿಸುತ್ತ ಸ್ಟೂಲಿನ ಮೇಲೆ ಕುಳಿತುಕೊಳ್ಳುವನು, ಕ್ಷಣ ಹೊತ್ತಿನ ಮೇಲೆ ನಂಜಮ್ಮ ನೀರು ತಂದುಕೊಡುವಳು, ಶ್ರೀಕಂಠಶರ್ಮ ನೀರನ್ನು ಎತ್ತಿಕೊಂಡು ಗಟಗಟನೆ ಕುಡಿದು)–'ನಂಜುಂಡೇಶ್ವರ' ಎಂದು ತೃಪ್ತಿಸೂಚಕವಾಗಿ ಚಪ್ಪರಿಸಿ, ಪಂಚಪಾತ್ರೆಯನ್ನು ಕೆಳಗಿಡುವನು. ನಂಜಮ್ಮ ಪಂಚ ಪಾತ್ರೆಯನ್ನು ತೆಗೆದುಕೊಂಡು ಹೋಗುವುದಲ್ಲಿರುವಳು.) ಲೇ'.

ನಂಜಮ್ಮ : (ನಿಂತಲ್ಲಿ ನಿಂತು) ಏನೂ ಅಂದ್ರೆ?

ಶ್ರೀಕಂಠ : ಅಲ್ಲ, ಏನು ಮಾಡಲಿ?

ನಂಜಮ್ಮ : ಏನು ಮಾಡಲಿ ಅಂದರೆ, ಏನು ಹೇಳಲಿ?

ಶ್ರೀಕಂಠ : ನಮ್ಮ ಚಂದೂಗೆ ಏನು ಮಾಡಲಿ ಅಂತ ಅದೇ ಯೋಚನೆ ಯಾಗಿದೆ.

ನಂಜಮ್ಮ : ಅಂಥಾದ್ದು ಏನು ಮಾಡಿದ್ದಾನೆ ಅವನು?

ಶ್ರೀಕಂಠ : ಏನು ಮಾಡಿದ್ದಾನೆಯೇ?–ಇನ್ನೇನು ಮಾಡಬೇಕಾಗಿದೆ. ಅವನ ಇರಿಕೆಯೇ ಸಾಕು. ಅವನ ನಡತೆಯೇ ನನಗೆ ಇದೀಗ ಸರಿಬೀಳುತ್ತಿಲ್ಲ. ಅಲ್ಲ, ಹುಡುಗನಾಗಿದ್ದಾಗ ನಾನು ಅಂದರೆ ಅದೆಷ್ಟು ವಿಧೇಯನಾಗಿದ್ದ ! ನಾನು ಹೇಳಿಕೊಟ್ಟ ಶ್ಲೋಕಗಳನ್ನು ಅದೆಷ್ಟು ಚೆನ್ನಾಗಿ ಅನ್ನುತ್ತಿದ್ದ? ಮುಂಜಿಯಾಗುವುದಕ್ಕೆ ಮೊದಲೇ ಬ್ರಾಹ್ಮಣಕಳೆ ಅವನ ಮುಖದಲ್ಲಿ ಹೇಗೆ ಕಾಣುತ್ತಿತ್ತು? ಅವನು ಸಂಧ್ಯಾವಂದನೆ ಅಗ್ನಿಕಾರ್ಯ ಮಾಡುತ್ತಾ ಕುಳಿತಿದ್ದರೆ ಅದೆಷ್ಟು ಸಂತೋಷವಾಗುತ್ತಿತ್ತು? ಈಗ? – ಇದೆಲ್ಲ ನಿನ್ನ ಅವಿವೇಕದ ಫಲ.

ನಂಜಮ್ಮ : ನನ್ನ ಅವಿವೇಕದ ಫಲ?

ಕಾಲದ ಹುಡುಗ ಅಂದ್ರೆ, ಅವನ ಇಚ್ಛೆಗೂ ಸ್ವಲ್ಪ ಬೆಲೆ ಕೊಡಬೇಕು.

ಶ್ರೀಕಂಠ : ನಿನಗೆಲ್ಲೋ ಭ್ರಾಂತು, ಲೌಕಿಕರ ಮನೆ ಹೆಣ್ಣನ್ನೇ ಮಾಡಿಕೋ ಎಂದರೆ ಮಾತೇ ಇಲ್ಲ.

ನಂಜಮ್ಮ : ನನ್ನದೊಂದು ಆಸೆ ಇದೆ ಅಂದ್ರೆ. ಅವನು ಕೇಳಾನು ಅಂತ ತೋರುತ್ತೆ.

ಶ್ರೀಕಂಠ : ನನ್ನ ಮಾತೇ ಕೇಳದಿದ್ದವನು ನಿನ್ನ ಮಾತು ಕೇಳುತ್ತಾನೆಯೋ! ಅದೇನು?

ನಂಜಮ್ಮ : ಏನೂ ಇಲ್ಲ ಅಂದ್ರೆ, ನನ್ನ ತಮ್ಮನ ಮಗಳು – ಒಳ್ಳೆ ಮುತ್ತಿನ ಮಣಿಹಾಗಿದಾಳೆ. ನೀವು ಚಿಕ್ಕ ಹುಡುಗಿಯಲ್ಲಿ ನೋಡಿದ್ದು –

ಶ್ರೀಕಂಠ : ಹೋದವರ್ಷ ನಮ್ಮ ಮನೆಗೆ ಕರೆದುಕೊಂಡು ಬಂದಿರಲಿಲ್ಲವೇ?

ನಂಜಮ್ಮ : ಹೌದು, ಅಂದಹಾಗೆ ಮೊನ್ನೆತಾನೆ ನೋಡಿದ್ದೀರಲ್ಲ. ಅವಳನ್ನು ತಂದುಕೊಳ್ಳಬಹುದಲ್ಲ?

ಶ್ರೀಕಂಠ : ಏನು! ತಂದುಕೊಳ್ಳಬಹುದೆ? ತಂದುಕೊಳ್ಳಬಹುದೆ? ತಂದುಕೊಳ್ಳುವುದು! ನಮ್ಮಲ್ಲಿ ವರಾನ್ವೇಷಣ ಅಂತ ಇದೆಯೇ ಹೊರತು ಕನ್ಯಾನ್ವೇಷಣ ಇಲ್ಲ. ನಿನ್ನ ತಮ್ಮನಿಗೆ ಅಷ್ಟು ಅಗತ್ಯವಿದ್ದರೆ ಬಂದು ಕೇಳಲಿ.

ನಂಜಮ್ಮ : ಆಗ ಬಂದಿದ್ದಾಗ ನನ್ನ ಕೇಳಿದಾ ಅಂದ್ರೆ "ದೊಡ್ಡ ಮನಸ್ಸು ಮಾಡಿ ಗೌರೀನ ತಂದುಕೊಳ್ಳಮ್ಮಾ" ಅಂತ. "ಅದೃಷ್ಟವಿದ್ದರೆ ಆಗಲಿ" ಎಂದೆ.

ಶ್ರೀಕಂಠ : ನೀನೋ ತಂದುಕೊಳ್ಳುವವಳು, ನಾನೋ?

ನಂಜಮ್ಮ : (ಬಿಗುಮಾನದಿಂದ) ನೀವೂ ಅಲ್ಲ ನಾನೂ ಅಲ್ಲ – ಚಂದು.

ಶ್ರೀಕಂಠ : ಸರಿ ಹಾಗಾದರೆ, ಸುಮ್ಮನಿರು, ವ್ಯಾಜ್ಯಾ ಯೇಕೆ ಅದಿರಲಿ ಮನೆ ಸಾಮಾನು ಏನೇನೋ ಇಲ್ಲ ಅಂತಿದ್ದೆಯಲ್ಲ ಅದು ಏನೇನು ಬೇಕು ಎಲ್ಲ ಹೇಳು (ಎಂದು ಎದ್ದು ಕೊಟಡಿಯೊಳಕ್ಕೆ ಹೋಗುವನು.)

[ಅಷ್ಟರಲ್ಲಿ ಹೊರಗಿನಿಂದ 'ಚಂದೂ, ಚಂದೂ' ಎಂದು ಕೂಗು

ಬೇಡವಂತೆ! ಒಬ್ಬರ ಕೈಕೆಳಗೆ ಕೆಲಸಮಾಡುವುದಿಲ್ಲವಂತೆ! ಮುಖ್ಯ ನನ್ನ ಅದೃಷ್ಟ ! ಮುಪ್ಪಿನಲ್ಲಿ ನಮ್ಮನ್ನು ಕೂರಿಸಿ ಒಂದಿಷ್ಟು ನೀರು ನಿಡಿ ಹಾಕುತ್ತಾನೆ ಅಂತ ಇದ್ದೆ. ಇನ್ನು ಆತನ ಆಸೆ ಬಿಟ್ಟು ಬಿಡಬೇಕು. (ತುಸಹೊತ್ತು ಮೌನ) ಅಯ್ಯೋ ನಂಜುಂಡೇಶ್ವರಾ! ಒಬ್ಬ ಮಗನನ್ನು ಪಡೆಯಲು ಅದೆಷ್ಟು ಹರಕೆ ಹೊತ್ತೆ, ಅದೆಷ್ಟು ಸೇವೆ ಸಲ್ಲಿಸಿದೆ ನಿನಗೆ ! ಇಂಥ ಪುತ್ರ ರತ್ನ ಕೊಟ್ಟೆಯಲ್ಲ! ಮುಖ್ಯ ನಮ್ಮ ಹಣೆ ಬರಹ!

ನಂಜಮ್ಮ : (ಕಣ್ಣೀರು ಹರಿಯನ್ನು ಸೆರಗಿನ ಕೊನೆಯಿಂದ ಒರಸಿ ಕೊಳ್ಳುತ್ತ) ಅವನಿಗೆ ಮದುವೆಯನ್ನಾದರೂ ಮಾಡಿದರೆ ಸ್ವಲ್ಪ ದಾರಿಗೆ ಬಂದಾನು ಅಂತಕಾಣುತ್ತೆ. ಅವನ ಮನಸ್ಸಿಗೆ ಬಂದ ಹೆಣ್ಣು ಮದುವೆ ಮಾಡಿಕೊಳ್ಳಲಿ. ನೀವು ಸುಮ್ಮಾನೆ ನಾನು ನೋಡಿದ ಹೆಣ್ಣೇ ಆಗಬೇಕು? ಅಂತ ಹಟ ಹಿಡಿಯಬೇಡಿ.

ಶ್ರೀಕಂಠ : ಮನಸ್ಸಿಗೆ ಬಂದ ಹೆಣ್ಣನ್ನೇ ಮದುವೆ ಮಾಡಿಕೊಳ್ಳಲಿ, ಬೇಡ ಅಂದವರು ಯಾರು? ನಾನು ನೋಡಿದ ಹೆಣ್ಣುಗಳ ಪೈಕಿ ಯಾವುದೇ ಒಪ್ಪಲಿ ಸಂತೋಷ. ಒಂದೂ ಒಪ್ಪಿಲ್ಲ ಅಂತೀನಿ! ನೀನು ಕಾಣೆಯ? ನಮ್ಮೂರನಾಗಪ್ಪ ನಾಗಾಜೊಯಿಸ – ಬಂದಿದ್ದರು. ಇದೇ ಊರಿನ ವೆಂಕಪ್ಪಶಾಸ್ತ್ರೀ ಕೇಳಿದರು. ನಾನೂ ವೈದಿಕ ಮನೆತನದವನು ಅಂತ ಅಂಥಂಥ ಶ್ರೋತ್ರೀಯರೆಲ್ಲ ನನ್ನ ಮನೆಗೆ ಹೆಣ್ಣು ಕೊಡಬೇಕಾದರೆ, ಆ! ಈ ಪಟಿಂಗ ಏನು ಹೇಳಿದ ಗೊತ್ತೆ?

ನಂಜಮ್ಮ : ನನಗೆ ಹೇಗೆ ಗೊತ್ತಾಗುತ್ತೆ : ನನ್ನೆದುರಿಗೆ ಕೇಳಿದಿರ ನೀವು. ಹೋಗಲಿ, ಏನು ಹೇಳಿದ ?

ಶ್ರೀಕಂಠ : ಏನು ಹೇಳಿದನೆ ? ಏನು ಹೇಳಿದಾಂತ ಏನು ಹೇಳಲಿ. ಹೊಟ್ಟೆಯೆಲ್ಲಬೆಂದುಹೋಗುತ್ತಾ ಇದೆ – ವೈದಿಕರ ಮನೆಯಲ್ಲಿ ತಾನು ಹುಟ್ಟಿದ್ದೇ ತಪ್ಪಾಯಿತಂತೆ! ವೈದಿಕರ ಹೆಣ್ಣನ್ನ ಖಂಡಿತ ಮದುವೆಯಾಗುವುದಿಲ್ಲವಂತೆ!

ನಂಜಮ್ಮ : ಹಾಗಂದನೆ! ಹೋಗಲಿ, ಸಂಪ್ರದಾಯಸ್ತರಾದ ಲೌಕಿಕರ ಮನೆ ಹೆಣ್ಣನ್ನೇ ತಂದರಾಯಿತು. ಎಷ್ಟೇ ಆಗಲಿ ಈಗಿನ

ಅವರು ಸಮಂಜಸವಾಗಿ ಉತ್ತರ ಹೇಳುತ್ತಿರಲಿಲ್ಲ. ತಮ್ಮ ಮೂಗಿನ ನೇರಕ್ಕೇ ಅರ್ಥ ಹೇಳುತ್ತಿದ್ದರು. ಚಂದೂಗೆ ಇದು ಸರಿಬೀಳದೆ ಚರ್ಚೆ ಹೂಡುತ್ತಿದ್ದ. ಚರ್ಚೆಯೇ ಜಗಳದ ಹಾಗೆ ಇರುತ್ತಿತ್ತು ಅಷ್ಟೆ. ಇದು ಕೆಟ್ಟತನ ಅಂದರೆ ಆಗುತ್ತೆಯೇ?

ಶ್ರೀಕಂಠ : ಅದು ಎತ್ತಲಾಗಾದರೂ ಹೋಗಲಿ, ಸದ್ಯ ಕಾಲೇಜು ಓದು ಮುಗಿಯಿತಲ್ಲ, ಇಲ್ಲಿ ಮನೆಯ ಆಚಾರ ವಿಚಾರಕ್ಕೆಲ್ಲ ತರ್ಪಣ ಕೊಟ್ಟಿದ್ದಾನೆ. ಹೇಳಿದ ಹಾಗೆ ಕೇಳುವುದಿಲ್ಲ. ಅದೇ ದೊಡ್ಡಯೋಚನೆ. ನೀನಾದರೂ ಅವನಿಗೆ ಸ್ವಲ್ಪ ಬುದ್ಧಿ ಹೇಳಪ್ಪ.

ಮೂರ್ತಿ : (ಮುಗುಳು ನಗೆಯೊಡನೆ) ಈಗ ಎಲ್ಲರೂ ಹಾಗೇ ನೋಡಿ. ಆದರೂ ನನ್ನ ಕೈಲಾದ ಮಟ್ಟಿಗೆ ಹೇಳಿ ನೋಡುತೇನೆ. ಇನ್ನು ನಾನು ಬರುತ್ತೇನೆ.

ಶ್ರೀಕಂಠ : ಒಳ್ಳೆಯದಪ್ಪ [ಮೂರ್ತಿ ಹೋಗುವನು]
ಅಲ್ಲ! ನೋಡಿದೆಯಾ, ಇವನು – ಈ ಮೂರ್ತಿ, ತನ್ನ ಸ್ನೇಹಿತನ ಕಡೆಗೆ ಹೇಗೆ ವಹಿಸಿಕೊಂಡು ಮಾತಾಡಿದ? ಎಲ್ಲ ಒಂದೇ ಜಾತಿ ಅನ್ನುವ ಹಾಗೆ ಕಾಣುತ್ತೆ. ಎತ್ತಲಾಗಾದರೂ ಹಾಳಾಗಿ ಹೋಗಲಿ, ಮುಖ್ಯ ಕಾಲ ವಿಪರೀತವಾಗಿದೆ.

– ತೆರೆ ಬೀಳುವುದು –

ಕೇಳುವುದು. ಎದ್ದುಹೋಗಿ 'ಯಾರಪ್ಪ?' ಎಂದು ಕೇಳುವಷ್ಟರಲ್ಲಿ ಮೂರ್ತಿ ಪ್ರವೇಶಿಸುವನು. ಮೂರ್ತಿ ಚಂದ್ರಶೇಖರನ ಬಾಲ್ಯ ಸ್ನೇಹಿತ.]

ಮೂರ್ತಿ : ಚಂದೂ ಮನೆಯಲ್ಲಿಲ್ಲವೆ?

ನಂಜಮ್ಮ : ಆಗಲೇ ಎದ್ದು ಹೋದ. ನಿನ್ನ ರೂಮಿಗೇ ಹೋದ ಅಂತಿದ್ದೆ. ಹಾಗಾದರೆ ಎಲ್ಲಿಗೆ ಹೋದನೋ ?

ಮೂರ್ತಿ : ನನ್ನ ರೂಮಿಗೆ ಬಂದಿಲ್ಲ. ಅವನು ಬಂದರೆ ನಾನು ಬಂದಿದ್ದೆ ಅಂತ ಹೇಳಿ. [ಇಷ್ಟರಲ್ಲಿ ಶ್ರೀಕಂಠಶರ್ಮ ಹೊರಗೆ ಹೋಗಲನುವಾಗಿ ಬಂದು ಶಾಲು ಹೊದೆದುಕೊಂಡು ಕೊಟಡಿಯಿಂದೀಚೆಗೆ ಬರುವನು.] ಹೋಗಿಬರುತ್ತೇನೆ. (ಎಂದು ಮೂರ್ತಿ ಹೊರಡುತ್ತಿರುವರು)

ಶ್ರೀಕಂಠ : ಮೂರ್ತಿ, ನಿಂತುಕೋ ಸ್ವಲ್ಪ, ಕೆಲಸವೇನೂ ಇಲ್ಲವಲ್ಲ?

ಮೂರ್ತಿ : ಇಲ್ಲ; ಪರವಾಯಿಲ್ಲ. ಏನು?

ಶ್ರೀಕಂಠ : ಏನೂ ಇಲ್ಲ. ಅಲ್ಲ – ಚಂದೂ – ಹಾಗೇ ಸ್ಟೂಲು ಮೇಲೆ ಕುಳಿತುಕೋ ಮಗು. ನಿಂತಿದ್ದೀಯಲ್ಲ.

ಮೂರ್ತಿ : ಇರಲಿ ಪರವಾಯಿಲ್ಲ. ತಾವು ದೊಡ್ಡವರು ನಿಂತಿದ್ದೀರಿ.

ಶ್ರೀಕಂಠ : ಹೂ ಇದೀಗ ನಡತೆ ಅಂದರೆ ನಮ್ಮ ಚಂದೂ ಇದ್ದಾನೆ ನೋಡು – ಈಚೀಚೆಗೆ.........

ಮೂರ್ತಿ : ಏನು?

ಶ್ರೀಕಂಠ : ನೀನು ಅವನ ಸ್ನೇಹಿತ, ನಿನಗೆ ಗೊತ್ತಿಲ್ಲದೆ ಉಂಟೆ?

ಮೂರ್ತಿ : ಅಂಥಾದ್ದೇನು? ನನಗೇನೂ ತಿಳೀತಿಲ್ಲ!

ಶ್ರೀಕಂಠ : ಏನೂ ಅಂತೀಯೋ, ಏನೂ ಅಂತೀಯೋ – ಸುತರಾಂ ಕೆಟ್ಟುಹೋಗಿದ್ದಾನೆ.

ಮೂರ್ತಿ : ಇದೇನು ಸ್ವಾಮಿ ಹೀಗಂತೀರ! ನನಗೇನೋ ಚಂದು ಕೆಟ್ಟಿರುವ ಹಾಗೆ ಕಾಣುವುದಿಲ್ಲ. ಸ್ವಭಾವ ಸ್ವಲ್ಪ ವಿಚಿತ್ರವಾಗಿದೆ. ಒಪ್ಪಿಕೊಳ್ಳುತೀನಿ. ನಾನು ಕಂಡಹಾಗೆ ಅವನ ಸ್ವಭಾವವೇ ಹಾಗೆ. ಮೇಷ್ಟರೊಡನೇ ಒಂದೊಂದು ಸಲ ಜಗಳವಾಡಿಬಿಡುತ್ತಿದ್ದ.

ಶ್ರೀಕಂಠ : ಇದು ಒಳ್ಳೆಯತನವೋ?

ಮೂರ್ತಿ : ಅದಕ್ಕೆ ಮೇಷ್ಟರೇ ಕಾರಣ. ಅವನು ಕೇಳುತ್ತಿದ್ದ ಪ್ರಶ್ನೆಗಳಿಗೆ

# ನೋಟ – ೩

[ಹಿಂದಿನ ದೃಶ್ಯದ ಉದ್ಯಾನವೆ – ಬೇರೊಂದು ಭಾಗ. ದಟ್ಟವಾಗಿ ಬೆಳೆದ, ಜೋಲುಗೊಂಬೆಗಳಿಂದ ಕೂಡಿದ ಮರವೊಂದು; ಹೂಬಿಟ್ಟ ಬಳ್ಳಿಗಿಡವೊಂದು ಮರಕ್ಕೆ ಸೊಂಪಾಗಿ ಹಬ್ಬಿ ಅಲ್ಲಲ್ಲಿ ನೇಲುತ್ತಿದೆ. ನೆಲದ ತುಂಬ ಹಸುರು ಬೆಳೆದಿದೆ. ಮರದಡಿಯಲ್ಲಿ ಕಲ್ಲು ಬೆಂಚು.

ಸಂಜೆ ೫–೦೦ ರಿಂದ ೬–೦೦ ಘಂಟೆಯ ಸಮಯ. ಹೊಂಬಿಸಿಲು ಕೆಂಬಿಸಿಲಾಗುತ್ತಿದೆ.

ಚಂದ್ರಶೇಖರ ಪ್ರವೇಶಿಸುತ್ತಾನೆ.

ಅವನು ತರುಣ : ೨೩–೨೪ ವಯಸ್ಸು. ಸ್ವಲ್ಪ ಕೃಶನಾಗಿಯೇ ಕಾಣುತ್ತಾನೆ. ಸಾಮವರ್ಣ ಮುಖದಲ್ಲಿ ಚೆಲುವಿನ ಗೆಲವಿಲ್ಲದಿದ್ದರೂ, ಕಣ್ಣಿನ ಹೊಳಪು, ನೋಟದ ಕೂರ್ಪು, ನಿಲುವಿನ ಸ್ಥೈರ್ಯ–ಇವುಗಳಿಂದ ಕೂಡಿದ ಒಂದು ಅಪೂರ್ವ ತೇಜಸ್ಸಿದೆ: ಒಟ್ಟಿನಮೇಲೆ ಆಕರ್ಷಕ ವ್ಯಕ್ತಿ.

ಕಚ್ಚೆಪಂಚೆ, ಇಳಿಜುಬ್ಬ, ಹೆಗಲ ಮೇಲೆ ಚೌಕ–ಇಷ್ಟೇ ಉಡುಪು.

ಚಂದ್ರಶೇಖರ ಪ್ರವೇಶಿಸಿ ಮರದ ಕೆಳಗೆ ನಿಂತು, ಕತ್ತೆತ್ತಿ ಗಿಡ–ಬಳ್ಳಿಗಳನ್ನು ನೋಡಿ, ಸುತ್ತ ಉದ್ಯಾನದ ಕಡೆಗೆಲ್ಲ ಕಣ್ಣು ಹರಿಸಿ, ಆನಂದಪರವಶನಾಗಿ ನುಡಿಯುವನು.]

ಆಹಾ! ಎಷ್ಟು ಮನೋಹರವಾಗಿದೆ ಈ ಸಂಜೆ! ಎಷ್ಟು ಚೆನ್ನಾಗಿದೆ, ಪ್ರಕೃತಿ ದೇವಿಯ ಈಗಿನ ಸೊಬಗು! ಈ ಹೂಗಳಿಗೆ, ಆ ಚಿಗುರಿಗೆ, ಸಂಜೆಯ ಹೊಂಬಣ್ಣ ಎಂಥ ಮೆರುಗುಕೊಟ್ಟಿದೆ. (ಸರಸರ ಎಂದು ಸದ್ದಾಗುವುದು. ತಟಕ್ಕನೆ ಸುಮ್ಮನಾಗಿ, ಹಿಂದಿರುಗಿ ನೋಡಿ, ಯಾರೂ ಇಲ್ಲದಿರಲು ಗೊಳ್ಳನೆ ನಕ್ಕು, ನಗುತ್ತ, ಕಲ್ಲು ಬೆಂಚಿನ ಮೇಲೆ ಕುಳಿತು ಕೊಳ್ಳುವನು.)ಹ ಹ್ಹ ಹ! ತರಗೆಲೆ! ಯಾರೋ ಎಂದು ಬೆದರಿದೆ. (ಕ್ಷಣಕಾಲ ಮೌನ) ಬೆದರಿದೆನೆ! ಯಾರಿಗೆ? ಯಾಕೆ? ಅಯ್ಯೋ ಬೆದರಿಕೆಯೇ! ಯಾರು ಕೇಳಿದರೇನು ನನ್ನ ಮಾತನ್ನು. ಹುಚ್ಚ ಎನ್ನುವರೇನು? ಎನ್ನಲಿ. ಅಯ್ಯೋ, ಎಂಥ ವಿಚಿತ್ರ ಪ್ರಪಂಚ ಇದು. ನಮ್ಮಲ್ಲಿ ಸಹಜವಾಗಿ ಚಿಮ್ಮಿದ ಆನಂದ, ಸುಖ, ಸಂತೋಷಗಳನ್ನು ಇತರರಿಗೆ ಹೆದರಿ ಬಚ್ಚಿಟ್ಟುಕೊಳ್ಳಬೇಕೆ? (ಮರದ ಮೇಲೆ ಹಕ್ಕಿಗಳು ಚಿಲಪಿಲನೆ ಹಾಡುತ್ತ ಕೊಂಬೆಯಿಂದ ಕೊಂಬೆಗೆ ಹಾರಾಡುತ್ತ ಇರುವುದನ್ನು ಕತ್ತೆತ್ತಿ ನೋಡಿ) ಹಕ್ಕಿ

## ೨ನೆಯ ನೋಟ

[ಒಂದು ಸೊಗಸಾದ ಉದ್ಯಾನದ ಕಡೆಯಂಚಿನ, ಜನ ಹೆಚ್ಚಾಗಿ ತಿರುಗಾಡದ, ಭಾಗ : ಮುನ್ನೋಟದಲ್ಲಿ ಕಂಡ ತಿರುಕಿ ಹಾಡಿಕೊಂಡು ಬರುವಳು.]

ಹುಟ್ಟು ತಿರುಕಿ ನಾನು – ತಿರುಪೆಯೆ
ಹೊಟ್ಟೆಪಾಡು ನನಗೆ

(೧)

ಎತ್ತ ನೋಡಿದರು ಜನರು – ತಾವ್
ಮತ್ತರಾಗಿ ನಲಿಯುವರು;
ತುತ್ತುಕೂಳು ದೊರೆಯದು ನನಗೆ,
ಗೊತ್ತುಗುರಿಯ ಕಾಣೆ.

(೨)

ಇದಾರಿಗಿದು ಈ ಉದ್ಯಾನ –
ಭೋಗಿಗಳಾ ಶೃಂಗಾರವನ
ಹೊರದೂಡುವರೇನು ನಮ್ಮ ಜನ;
ತಿರುಕರಿಗೇತಕೆ ಉದ್ಯಾನ!

(೩)

ಓ ಮರವೇ ! ಓ ತಾಯೇ!
ತಂಪನೀವ ತವರೇ!
ಹಕ್ಕಿಗಳೇ, ಒಡಹುಟ್ಟುಗಳೇ,
ಹಾಡ ಕಲಿಸಿದವರೇ !
ಹೊರಗು ಮಾಡಬೇಡಿ – ಮುಂದೆಯು
ನಿಮ್ಮವಳನು ಕಾಪಾಡಿ

[ತಿರುಕಿ ಹಾಡುತ್ತಾ ಕಣ್ಮರೆಯಾಗುವಳು.]

ಮೇಲೆ ಹಕ್ಕಿಗಳು ಚಿಲಪಿಲನೆ ಹಾಡುತ್ತ ಗೂಡು ಸೇರುತ್ತಿರುವುವು.]

ಓ ಮರವೇ ! ಓ ತಾಯೇ !
ತಂಪನೀವ ತವರೇ !
ಹಕ್ಕಿಗಳೇ ಒಡಹುಟ್ಟುಗಳೇ,
ಹಾಡಕಲಿಸಿದವರೇ !
ಹೊರಗುಮಾಡಬೇಡಿ – ನಿಮ್ಮ
ಮನೆಮಗಳನು ಕಾಪಾಡಿ.

ಚಂದ್ರಶೇಖರ : ಯಾರಮ್ಮ ನೀನು? (ತಿರುಕಿ ಬೆಚ್ಚಿ ನೋಡುವಳು) ಸೊಗಸಾಗಿ ಹಾಡುವೆ.

ತಿರುಕಿ : (ಕ್ಷಣ ಕಾಲ ಮೌನವಿದ್ದು) ಸೊಗಸಾಗಿ ಹಾಡಿದೆನೆ? ಹಾಡುತ್ತಿದ್ದೆನೆ? ಉಪವಾಸದಿಂದ ಮೊರೆಯಿಡುತ್ತಿದ್ದೆ.

ಚಂದ್ರ : ಉಪವಾಸ !

ತಿರುಕಿ : ಹೌದು, ನಿನ್ನೆಯಿಂದ. ಏನಾದರೂ ಕೊಡಿ ತಿನ್ನುವುದಕ್ಕೆ. ಕಾಸಿದ್ದರೆ ಕಾಸುಕೊಡಿ ಅಣ್ಣ. ನಿಮ್ಮ ಹೆಸರು ಹೇಳಿ ಹಸಿವಡಗಿಸಿಕೊಳ್ಳುವೆ.

ಚಂದ್ರ : (ಜೇಬಿಗೆ ಕೈಹಾಕಿ ತಡಕುತ್ತ) ನೀನು ಯಾರಮ್ಮ?

ತಿರುಕಿ : ನನ್ನ ಮಾತಿನಿಂದ ಯಾರೆನ್ನುವುದು ತಿಳಿಯಲಿಲ್ಲವೆ? ಯಾರೆನ್ನುವುದು ಕಾಣದೆ ?

ಚಂದ್ರ : ಕಾಣುತ್ತಿದೆ – ಹರುಕುಮೋಡಗಳ ಮರೆಯಲ್ಲಡಗಿರುವ ಚಂದ್ರನಂತೆ ! – ಎಷ್ಟು ದಿನದಿಂದ ಈ ತಿರುಪೆಯಮ್ಮ?

ತಿರುಕಿ : ಹುಟ್ಟು ತಿರುಕಿ ನಾನು.

ಚಂದ್ರ : ನಿನ್ನ ಹೆಸರೇನಮ್ಮ ?

ತಿರುಕಿ : ಹೆಸರಿಲ್ಲದವಳು ನಾನು, ನನಗೆ ಹೆಸರಿಟ್ಟವರ ನಾಕಾಣೆ. ಹೆಸರು ಹಿಡಿದು ಕೂಗುವವರಿಲ್ಲ.

ಚಂದ್ರ : ಏನು ! ನಿನ್ನ ತಾಯಿ ತಂದೆ ಇಲ್ಲವೆ ?

ತಿರುಕಿ : ಹುಟ್ಟುತಬ್ಬಲಿ ನಾನು.

ಚಂದ್ರ : ಹುಟ್ಟುತಬ್ಬಲಿ ! – ನಿನ್ನವರು ಯಾರೂ ಇಲ್ಲವೆ? ಅಕ್ಕತಂಗಿಯರು ? ಅಣ್ಣತಮ್ಮಂದಿರು?

ತಿರುಕಿ : ಇಲ್ಲ. ಯಾರೂ ಇಲ್ಲ

ಮನ ಬಂದಾಗ ಹಾಡುವುದು, ಮನವಿದ್ದೆಡೆಗೆ ಹಾರುವುದು. ನಾನೊಂದು ಹಕ್ಕಿಯಾಗಿ ಹುಟ್ಟಬಾರದಾಗಿತ್ತೆ! ಈ ಪ್ರಪಂಚದ ಕಟ್ಟುಕಟ್ಟಲೆಗಳಿಂದ ದೂರವಾಗಿದ್ದು ಆಕಾಶದಲ್ಲಿ ತೇಲಿ ಮುಳುಗಿ ತೇಲಿ, ಹಾಡಿನ ಹೊಳೆಯನ್ನೇ ಹರಿಸಬಹುದಾಗಿತ್ತು. (ಹಾಡಿನಂತೆ ಗುನುಗಿಕೊಳ್ಳುವನು)

ಶಶಿವದನೆಯೂ ಬರಲಿಲ್ಲ
ಶಶಿವದನೆ! ಶಶಿವದನೆ ! ನೀನಿಂದು ಬಳಿಯಿರಲು
ನನ್ನ ಹರ್ಷವನೆಲ್ಲ, ನನ್ನ ಬಾಯಿಗೆ ಬಂದ
ಸೊಗಸು ಮಾತೆಲ್ಲವನು ನೋಟವೊಂದರಲಿರಿಸಿ
ನಿನ್ನೆಡೆಗೆ ಬೀರೆ, ನೀನಂದು ನಲವೇರೆ,
ಮಾತಳಿದು ಮೈಮರೆತು ತಾಳುತ್ತಿದ್ದೆನು ಮೌನ.
ಮನದನ್ನೆಯಿರಲು ಬಳಿ, ಮೌನ ಬೆಳದಿಂಗಳು
ಆ ಮೌನಸಾಮ್ರಾಜ್ಯದಲ್ಲಿ ಎಲ್ಲವೂ ಶೂನ್ಯ
ಉಸಿರಲಾಗದ ಪ್ರೇಮದರಿವನುಳಿದು

ಆದರವಳಿಲ್ಲ, ಏಕೆ ಬಾರಳು? ಅವಳಿಗೂ ತಂದೆಯ ಹೆದರಿಕೆಯೆ? ಹಾಳು ಹೆದರಿಕೆಯ ಪ್ರಪಂಚ. ಎಲ್ಲರೂ ಹೆದರಬೇಕು – ಮಕ್ಕಳು ತಂದೆಗೆ, ಹೆಂಡತಿ ಗಂಡನಿಗೆ, ಸೊಸೆ ಅತ್ತೆಗೆ; ಪ್ರಜೆ ರಾಜನಿಗೆ, ರಾಜ ಪ್ರಜೆಗೆ, ಚಕ್ರವರ್ತಿಗೆ; ರಾಷ್ಟ್ರ ಮತ್ತೊಂದು ರಾಷ್ಟ್ರಕ್ಕೆ – ಎಲ್ಲರೂ ಹೆದರಬೇಕು. ಪ್ರಪಂಚದ ಜೀವನದ ಸೂತ್ರವೆಲ್ಲ ಹೆದರಿಕೆಯ ಎಳೆಗಳಿಂದ ಹೊಸೆದಂತಿದೆ. ಪ್ರೇಮ, ದಯೆ, ವಾತ್ಸಲ್ಯ, ಮರುಕ – ಇವು ಹೆದರಿಕೆಯ ರಾಕ್ಷಸನಿಗೆ ಹೆದರಿ ಅಡಗಿವೆ.

(ದೂರದಲ್ಲಿ ತಿರುಕಿಯ ಹಾಡು ಕೇಳಬರುವುದು.

ಸ್ವಲ್ಪ ಹೊತ್ತು ಮೌನದಿಂದ ಆಲಿಸುವನು. ಧ್ವನಿ ಬರುಬರುತ್ತಾ ಹತ್ತಿರ ಹತ್ತಿರ ಕೇಳಬರುವುದು.)

ಯಾವುದೋ ಹೆಣ್ಣು ದನಿ ಹಾಡು. ಮನಕೆಂತು
ಇಂಪಾಗಿ ತೋರುತಿದೆ ! ಆದರಾದನಿಯಲ್ಲಿ,
ಇಂಪಿನಲಿ, ದೀನತೆಯೆ ಮಿಡಿಯುತಿದೆ – ಸಡುವಲಲಿ ।
ಮೆರೆಯುತಿಹ ಬೈಗುಗೆಂಪಿನ ಬಾನಿನಾಳದಿಂ
ಏಳುತಿಹ ಕತ್ತಲೆಯ ಕರ್‌ದೆರೆಗಳಂತೆ.

[ಸಂಜೆಯ ಕೆಂಪು ಮಾಸಲಾಗುತ್ತಿದೆ : ಮುಂಗತ್ತಲೆ ಸಮೀಪಿಸುವಂತಿದೆ. ತಿರುಕಿ ಹಾಡು ಹೇಳಿಕೊಂಡು ಬರುವಳು. ಮೊದಲು ಚಂದ್ರಶೇಖರನನ್ನು ನೋಡುವುದಿಲ್ಲ. ಮರದ

ಹಿಗ್ಗಿದ್ದೆ. ಹಕ್ಕಿಗಳ ಸಹಜ ಸಂಗೀತವನು
ಸವಿಯುತ್ತಲಿದ್ದೆ. ಪ್ರಕೃತಿ ನಿಯಮಗಳು ನಿನ್ನ ರೂಪನು
ನೋಡಿ, ಕಿರಿಹಕ್ಕಿಗಳ ಹಿರಿಯಕ್ಕನಂತಿರುವ
ನಿನ್ನ ಹಾಡನು ಕೇಳಿ ಮೆಚ್ಚಿದೆನ್ನಯ ತಪ್ಪು
ನಿನ್ನ ಮನನೋಯಿಸಿರೆ, ಮನ್ನಿಸೆಲೆ ತಂಗಿ.

ತಿರುಕಿ : ಮೆಚ್ಚಿ ನಿಮಗಾಗುವುದೇನು? ನನಗಾಗುವುದೇನು? ಮೆಚ್ಚುವರು, ಮರೆಯುವರು.

ಚಂದ್ರ : ನಿನ್ನ ಮರೆಯುವುದೆಂತು? ನಾ ನಿನ್ನ ಮರೆಯೆ.

ತಿರುಕಿ : (ಸಂತೋಷದಿಂದ) ನನ್ನ ಹಸಿವಡಗಿಹುದು ನಿಮ್ಮ ನುಡಿಗಳ ಕೇಳಿ.

ಚಂದ್ರ : ಇಲ್ಲಿ ನಿನ್ನ ಕಂಡುದು ಇದೇ ಮೊದಲು, ಹೊಸಬಳೇನಮ್ಮ ಈ ಊರಿಗೆ?

ತಿರುಕಿ : ಹೌದು ಹೊಚ್ಚಹೊಸಬಳು. ಹೋಗಿ ಬರುತ್ತೇನೆ ಇನ್ನು.

ಚಂದ್ರ : ಹೋಗಿ ಬಾ, ಕಾಸು ತೆಗೆದುಕೊ. (ಎಂದು ಜೇಬಿಗೆ ಕೈಹಾಕಿ ತಡಕುವನು. ತಿರುಕಿ ಕೈ ನೀಡುವಳು. ಚಂದ್ರಶೇಖರನ ಬಳಿ ನಿಜವಾಗಿಯೂ ಕಾಸಿರುವುದಿಲ್ಲ.) ತಂಗಿ, ಏನೂ ತಿಳಿದುಕೊಳ್ಳಬೇಡ ನಾಳೆ ಮತ್ತೆ ಇಲ್ಲಿಗೆ ಬಾ, ಕಾಸು ತಂದಿರುತ್ತೇನೆ. ನಿನ್ನ ಹಾಡನು ಮತ್ತೊಂದು ಸಲ ಕೇಳಬೇಕು ಎನ್ನಿಸಿದೆ.

ತಿರುಕಿ : ಆಗಲಿ ಬರುತ್ತೇನೆ. (ಎಂದು ಹೊರಡುವಳು)

ಚಂದ್ರ : (ಜೇಬಿನಲ್ಲಿ ಸುಮ್ಮನೆ ತಡಕುತ್ತ) ಅಯ್ಯೋ, ಅನ್ಯಾಯವಾಗಿ ಆಸೆ ತೋರಿಸಿದೆನಲ್ಲ. ಮೂರ್ತಿಯಾದರೂ ಹತ್ತಿರ ಇದ್ದರೆ......... (ಎಂದು ತಿರುಕಿ ಹೋದ ಕಡೆಯೇ ನೋಡುತ್ತಿರುವನು) [ಈ ಹೊತ್ತಿಗೆ – ಇನ್ನೊಂದು ಕಡೆಯಿಂದ – ನಾಗೇಂದ್ರ ಬರುವನು. ಶೀಟಿ ಹಾಕುತ್ತ ಬರುವನು. ನಾಗೇಂದ್ರ ಚಂದ್ರಶೇಖರನ ಸಹಪಾಠಿ. ದುಂದುಗಾರ, ಷೋಕಿಗಾರ.]

ಚಂದ್ರ : (ಶೀಟಿಕೇಳಿ ತಟಕ್ಕನೆ ಹಿಂದಿರುಗಿ) ನಾಗೇಂದ್ರ.

ನಾಗೇಂದ್ರ : ಏನು? ಯಾರನ್ನೋ ನೋಡುತ್ತಿದ್ದ ಹಾಗಿತ್ತು ?

ಚಂದ್ರ : ನಿನ್ನದು ಯಾವ ಜಾತಿಯಮ್ಮ?

ತಿರುಕಿ : ಬಂಧು ಬಳಗವಿಲ್ಲದ ಹುಟ್ಟುತಬ್ಬಲಿಯ ಜಾತಿ ಯಾವುದು ಎಂದು ಹೇಳಲಿ ?

ಚಂದ್ರ : ತಂಗಿ, ನಿನ್ನ ರೂಪನ್ನು ನೋಡಿದರೆ ಉತ್ತಮ ಕುಲದವಳಂತೆ ಕಾಣುವೆ. ನಿನ್ನ ಗಾನದ ಮಾಧುರ್ಯ ಗಂಧರ್ವ ಗಾನಕ್ಕೆ ಸಮನಾಗಿದೆ.

ತಿರುಕಿ : ರೂಪು ಉತ್ತಮ ಕುಲದವರ ಸೊತ್ತಲ್ಲವಲ್ಲ! ಹಾಡುವುದು ಗಂಧರ್ವರ ಹಕ್ಕಲ್ಲವಲ್ಲ!

ಚಂದ್ರ : ನನ್ನ ತಿಳಿಗೇಡಿತನವನ್ನು ತೊಲಗಿಸಿರುವೆ ನೀನು. ಜಗಜ್ಜೀವಿಗಳ ತಾಯಿ ಪ್ರಕೃತಿದೇವಿಯ ಮಗಳು ನೀನು. ಆದರೆ, ಅಯ್ಯೋ! ನಿನ್ನ ರೂಪು ಕಂಠಗಳಿದ್ದು ಅವಕ್ಕೆ ಬೆಲೆಯಿಲ್ಲ. ಕೆಸರಲ್ಲಿ ಹುಟ್ಟಿದ ಕಮಲವನ್ನು ಭೂಷಿಸುತ್ತಾರೆ. ನಿನ್ನನ್ನು ಭೂಷಿಸುವುದಂತಿರಲಿ, ಪೋಷಿಸುವವರೂ ಇಲ್ಲವಲ್ಲಮ್ಮ. ನನಗಂತೂ ಪೋಷಿಸುವ ಶಕ್ತಿಯಿಲ್ಲ. ಪೋಷಿಸುವ ಶಕ್ತಿ ಪಡೆದಾಗ – ಇರಲಿ. ಸದ್ಯಕ್ಕೆ ನನ್ನ ಬಳಿ ಮೂರು ಕಾಸಿದೆ ತೆಗೆದುಕೊಳ್ಳುವೆಯಾ? ನಿನ್ನ ರೂಪಿಗೂ ಗಾನಕ್ಕೂ ಇದು ತೀರ ಅಲ್ಪ.

ತಿರುಕಿ : ಹೀಗೆ ಹೇಳಿರುವವರು ಅನೇಕ ಮಂದಿ. ನನ್ನ ಗಾನಕ್ಕಾಗಿ ಕಾಸುಗಳನ್ನು ಕೊಟ್ಟಿರುವುದಾದರೆ ನನ್ನ ರೂಪಿಗಾಗಿ ಹೊನ್ನು ಕೊಡಲು ಬಂದಿದ್ದಾರೆ. ನನಗೆ ಹಣ ಒಡವೆಗಳು ಬೇಕಿಲ್ಲ. ಹಿಡಿಕೂಳಾದರೆ ಸಾಕು. ಎಲ್ಲರೂ ನನ್ನ ರೂಪನ್ನು ಕಾಣುವರು, ಹಾಡುಕೇಳುವರು. ನನ್ನ ಹಸಿವು ಕಾಣರು, ಅದರ ಕೂಗು ಕೇಳರು. ಹಸಿವು ! ಹಸಿವು ! ಹಸಿವಿಗೆ ಹಿಡಿ ಕೂಳುಕೊಡಿ. ನನ್ನ ರೂಪುಗಾನಗಳನ್ನು ಕಟ್ಟಿಕೊಂಡೇನು?

ಚಂದ್ರ : ಎಲ್ಲ ತಿರುಕರಿಗಾಗಿ ಮರುಗುವೆನು ನಾನು. ನಿನ್ನನಾದರೋ ನಾನು ಮೆಚ್ಚಿರುವೆನಮ್ಮ.

ತಿರುಕಿ : ಮೆಚ್ಚಿರುವಿರೇನು? (ನಗುತ್ತ) ಮೆಚ್ಚಿರುವಿರೇನು!

ಚಂದ್ರ : ತಪ್ಪೆಣಿಸಬೇಡಮ್ಮ.
ಪ್ರಕೃತಿಮಾತೆಯ ದಿವ್ಯರೂಪು ನೋಡುತ್ತ ನಾನು

ನನ್ನ ದರಿದ್ರ ಹೊಟ್ಟೆಗಾಗಿ, ಒಂದಿಷ್ಟು ಹಿಟ್ಟಿಗಾಗಿ.

ನಾಗೇಂದ್ರ : ಮತ್ತೆ ಹಾಡುವುದೇಕೆ ?

ತಿರುಕಿ : ಹಾಡುವ ಇಚ್ಛೆಯಾಗುತ್ತೆ ಹಾಡುತ್ತೇನೆ. ಹಾಡುವುದು ನನ್ನ ಧರ್ಮ; ಭಿಕ್ಷೆ ಬೇಡುವುದು ನನ್ನ ಕರ್ಮ. ಅಯ್ಯೋ ದೇವರೆ, ಇಂಥ ಭಿಕ್ಷೆ ನನಗೆ ಬೇಡಪ್ಪ.

ಚಂದ್ರ : ನಾಗೇಂದ್ರ, ನಿನ್ನ ರೂಪಾಯಿ ತೆಗೆದುಕೋ (ಎಂದು ಕೊಡ ಹೋಗುವನು)

ನಾಗೇಂದ್ರ : ಏಕೆ? ತಂಗಿಗೆ ಕೊಡು, ಪರವಾಯಿಲ್ಲ.

ಚಂದ್ರ : ಜರೆ ಮಾತುಗಳಿಂದ ಕಿಲುಬು ಹತ್ತಿದ ಈ ಬೆಳ್ಳಿಯನ್ನು ಅವಳು ಒಲ್ಲಳು. ದೀನರಿಗೆ, ಬಡಬಗ್ಗರಿಗೆ, ಪ್ರೀತಿಯಿಂದ ಇಕ್ಕಿದ ಹಿಡಿಕೂಳು ಅಮೃತಾನ್ನ; ಕೆಟ್ಟ ಮನಸ್ಸಿನಿಂದ ಸುರಿದ ಮೃಷ್ಟಾನ್ನವಾದರೂ ಅದು ಹಿಡಿಮಣ್ಣು, ಕೋಪಿಸಿಕೊಳ್ಳಬೇಡ ಗೆಳೆಯ ನಿನ್ನ ರೂಪಾಯಿ ತೆಗೆದುಕೋ.

ನಾಗೇಂದ್ರ : ಚಂದ್ರಶೇಖರಾ, ನಿನ್ನ ನೀತಿಬೋಧೆ ಇವೊತ್ತಿಗೆ ಸಾಕು. ರುಪಾಯಿ ಕೊಡು ಇಲ್ಲಿ. (ಚಂದ್ರಶೇಖರ ಕೊಡುವನು, ತೆಗೆದುಕೊಂಡು) ನಾಟಕಕ್ಕೆ ಹೊತ್ತಾಯಿತು. ನಮಸ್ಕಾರ ಮಿಸ್ಟರ್ ಚಂದ್ರಶೇಖರ್ (ಎಂದು ಬಿರಬಿರನೆ ಹೊರಡುವನು.)

ಚಂದ್ರ : ತಂಗೀ.......ನಿನ್ನ ಮನಸ್ಸಿಗೆ ಬಹಳ ವ್ಯಥೆಯುಂಟು ಮಾಡಿದೆ.

ತಿರುಕಿ : ನಿಮ್ಮನ್ನು ಬಹಳ ದಣಿಸಿದೆ. ಹೋಗಿ ಬರುತ್ತೇನೆ.

ಚಂದ್ರ : ಯಾವ ಬಾಯಲ್ಲಿ ಹೋಗು ಎಂದು ಹೇಳಲಿ. ಹೋಗೆನ್ನಲಾರೆ; ಇರು ಎನ್ನಲಾರೆ. ಹೋಗೆನಲು ಮನಬಾರದು, ಇರು ಎನಲು ತಪ್ಪನೆಣಿಸುವೆಯೇನೊ.

ತಿರುಕಿ : ನಿಮ್ಮ ಬಗೆಯನು ತಿಳಿದು, ನಿಮ್ಮ ನುಡಿಗಳಲೆಂತು ತಪ್ಪ ತಿಳಿಯುವೆ ನಾನು ? ಅವರವರ ನುಡಿಗಳಲಿ ಹರಿಯುವುದು ಅವರ ಬಗೆ, ಹೃದಯದಂತರ್ಭಾವ. ನಿಮ್ಮ ಬಗೆಯರಿತು ನಾ ನಿಮ್ಮ ನುಡಿಯರಿಯೆನೇ?

ಚಂದ್ರ : ಇಂತಿರಲು, ನೀನು ಹೊರಡುವ ಮುನ್ನ, ಇನ್ನೊಮ್ಮೆ ಒಂದು ಹಾಡನು ಹೇಳಿ ನನ್ನ ಕದಡಿದ ಬಗೆಯ ತಿಳಿಗೊಳಿಸುವೆಯ?

ಚಂದ್ರ : ಒಂದು ರೂಪಾಯಿ ಇದ್ದರೆ ಕೊಡು ನಾಗೇಂದ್ರ.

ನಾಗೇಂದ್ರ : ಇಲ್ಲೇಕೆ ?

ಚಂದ್ರ : ಕೊಡುತ್ತೀಯೋ ಇಲ್ಲವೋ?

ನಾಗೇಂದ್ರ : ಇಲ್ಲ ಎನ್ನುವೆನೆ (ತೆಗೆದುಕೊಡುವನು)

ಚಂದ್ರ : (ತೆಗೆದುಕೊಂಡು) ಏ,ಏ.......(ತಿರುಕಿ ಹೋದ ಕಡೆಗೆ ನೋಡುತ್ತ) ಹೆಸರೂಗೊತ್ತಿಲ್ಲ, ತಂಗೀ! ತಂಗೀ!

ನಾಗೇಂದ್ರ : ತಂಗೀ !

ಚಂದ್ರ : ತಂಗೀ ! ಓ ತಂಗೀ !

ನಾಗೇಂದ್ರ : ಅಲ್ಲಿ ಬರುತ್ತಿರುವಳು ನಿನ್ನ ತಂಗಿಯೆ !

ಚಂದ್ರ : ಹೌದು

ನಾಗೇಂದ್ರ : ಅಕ್ಕ ತಂಗಿ ಯಾರೂ ಇಲ್ಲ ಅಂತ ಹೇಳಿದ್ದೆ. ಯಾವ ತಂಗಿ ಇವಳು. ಚಿಕ್ಕಪ್ಪನ ಮಗಳೋ?

ಚಂದ್ರಶೇಖರ : (ನಾಗೇಂದ್ರನ ಕಡೆ ತಿರುಗದೆ ತಿರುಕಿ ಬರುತ್ತಿರುವುದನ್ನೇ ತವಕದಿಂದ ನೋಡುತ್ತಿರುವನು).

ನಾಗೇಂದ್ರ : ತಂಗಿಯಂತೆ ! ತಿರುಕೀ ! ಓ, ತಿರುಕೀ ! ಬಾ ಇಲ್ಲಿ ಕಾಸುಹಿಡಿ

ಚಂದ್ರ : ತಿರುಕಿಯಂತೆ ತಿರುಕಿ! ಎಷ್ಟು ಧಾರಾಳವಾಗಿ ತಿರುಕಿ ಎನ್ನುತ್ತಿ!

ನಾಗೇಂದ್ರ : ನೀನು ಅಷ್ಟು ಧಾರಾಳವಾಗಿ ತಂಗಿ ಎಂದೆ ? ಹಹ್ಹಹ ಪರವಾಯಿಲ್ಲ, ತಿರುಕಿಯಾದರೂ ಒಳ್ಳೆ ಚೆಲುವೆ. (ತಿರುಕಿ ಮತ್ತೆ ಪ್ರವೇಶಿಸುವಳು) ಮೂರು ಕಾಸುಕೊಟ್ಟು ಕಳಿಸು. ಇವಳಿಗೆ ಹಾಡು ಹೇಳಲು ಬರುತ್ತೆಯೇನು? ಈಗ ತುಸ ಹೊತ್ತಿನಲ್ಲಿ ಯಾರೋ ಹಾಡುತ್ತಿದ್ದಂತೆ ಕೇಳಿತು. ಇವಳೇ ಆಗಿದ್ದರೆ ಇವಳ ರೂಪಿಗೂ ಗಾನಕ್ಕೂ ಒಂದು ರೂಪಾಯಿ ಕೊಡಬಹುದು. ಪರವಾಯಿಲ್ಲ.

ಚಂದ್ರ : (ನಾಗೇಂದ್ರನನ್ನು ದುರುಗುಟ್ಟಿಕೊಂಡು ನೋಡುತ್ತ) ಏನೆಂದೆ?

ತಿರುಕಿ : ನನ್ನ ರೂಪಿಗೂ ಗಾನಕೂ ಒಂದು ರೂಪಾಯಿ ಕೊಡುವಿರೇನು?

ನಾಗೇಂದ್ರ : ಹೌದು, ಬರಿಯ ಭಿಕ್ಷೆಯಾದರೆ ಮೂರೇ ಕಾಸು.

ತಿರುಕಿ : ನನ್ನ ರೂಪಿಗೂ ಹಾಡಿಗೂ ಬೆಲೆ ಕೇಳುವುದಕ್ಕೆ ಬಂದಿಲ್ಲ;

# ಎರಡನೆಯ ಅಂಕ

## ನೋಟ – ೧

[ಹಿಂದಿನ ದೃಶ್ಯದ ಉದ್ಯಾನ : ಅದೇ ಸ್ಥಳ. ಬೆಳಗಾಗುತ್ತಿದೆ, ಹಕ್ಕಿಗಳು ಚಿಲಪಿಲನೆ ಹಾಡುತ್ತಿವೆ. ಚಂದ್ರಶೇಖರ ಮಲಗಿದ್ದವನು ಎದ್ದು ಕುಳಿತು ಆಕಳಿಸಿ ಮೈಮುರಿಯುತ್ತಿರುತ್ತಾನೆ. ಮೂರ್ತಿ ಪ್ರವೇಶಿಸುತ್ತಾನೆ.]

ಮೂರ್ತಿ : ಚಂದು! ಇದೇನು ತಿರುಗಾಡುವುದು ಬಿಟ್ಟು ಇಲ್ಲಿ ಕುಳಿತಿದ್ದೀಯೆ?

ಚಂದ್ರ : (ಎದ್ದು) ಇಲ್ಲಿ ಕುಳಿತಿದ್ದನೆ?

ಮೂರ್ತಿ : ಈಗತಾನೆ ನಿದ್ದೆಯಿಂದ ಎದ್ದವನಂತೆ ಮಾತಾಡುತ್ತೀಯಲ್ಲ. ರಾತ್ರಿ ನಿಮ್ಮ ತಂದೆ ನಿನ್ನ ಹುಡುಕಿಕೊಂಡು ನಮ್ಮ ಮನೆಗೆ ಬಂದಿದ್ದರು. ನನಗೆ ಆಶ್ಚರ್ಯವಾಯಿತು. ಎಲ್ಲೋ ಶಶಿವದನೆಯ ಮನೆಗೆ ಹೋಗಿ. ಅಲ್ಲಿಯೇ..........(ಎಂದು ಮುಗುಳ್ನಗೆ ನಗುವನು)

ಚಂದ್ರ : ಏನೆಂದೆ ! ಶುದ್ಧ ಸುಳ್ಳು.

ಮೂರ್ತಿ : ಹಾಗಾದರೆ ಎಲ್ಲಿ ಮಲಗಿದ್ದೆ?

ಚಂದ್ರ : ಇಲ್ಲೇ ಮಲಗಿದ್ದೆ, ಇಲ್ಲೇ ಮಲಗಿರಬೇಕು.

ಮೂರ್ತಿ : ಶುದ್ಧ ಸುಳ್ಳು,

ಚಂದ್ರ : ಖಂಡಿತವಾಗಿಯೂ ಇಲ್ಲೇ ಮಲಗಿದ್ದೆ, ಆದರೂ, ನಾನೇ ನಂಬುವಂತಿಲ್ಲ. ಎಷ್ಟು ಬೇಗ ಎಷ್ಟು ಚೆನ್ನಾಗಿ ನಿದ್ದೆ ಹತ್ತಿಬಿಟ್ಟಿತು. ಆ ತಿರುಕರ ಹುಡುಗಿ, ಅವಳ ಹಾಡು
ಕರುನಾಡು ಕರುನಾಡು ; ಅವಳ ದೊಡ್ಡಮನೆ, ಆದರೂ ಮನೆಮಠವಿಲ್ಲದೆ ತಿರುಗುವ ತಿರುಕಿ! ಎಷ್ಟು ಅರ್ಥಗರ್ಭಿತವಾದ ಹಾಡು. ಅದು ಇನ್ನೂ ಮೊರೆಯುತ್ತಿದೆ ಕಿವಿಯಲ್ಲಿ.

ಮೂರ್ತಿ : ಅಯ್ಯೊ ಕನಸುಗಾರ! ಇನ್ನೂ ಕನಸು ಕಾಣುತ್ತಿರುವೆಯೋ ಹೇಗೆ?

ಚಂದ್ರ : ಕನಸಲ್ಲ, ಮೂರ್ತಿ, ಕನಸಲ್ಲ.

ತಿರುಕಿ : ಯಾರೊಬ್ಬರೂ ನನ್ನ ಇಂತು ಕೇಳಿದುದಿಲ್ಲ. ಕೇಳದೆಯೆ ಹಾಡುವವಳು; ಕೇಳಿದೊಡೆ ಹಾಡೆನೆ! (ಎಂದು ಬೇರೊಂದು ಹಾಡು ಹೇಳುವಳು)

ಈ ಕರುನಾಡಿದು ನನ್ನ ಮನೆ
ನನ್ನ ಮನೆ, ಇದು ನನ್ನ ಮನೆ ॥ ಪ ॥

–೧–

ನೀಲ ಗಗನದ ಹಂದರ ಹೊದೆದ
ಬಾಂದಳದಂಚನು ಬಳಸಿರುವ
ಅತ್ತ ಇತ್ತ ಮುನ್ನೀರಂಗಣದ
ಸುತ್ತ ಮುತ್ತ ಕುಡುಮಲೆಸಾಲ್ ಗೋಡೆಯ

–೨–

ಕಡಲಕರೆಯ ತಲೆತೂಗುವ ತೆಂಗು
ಗಾಳಿ ಬಟ್ಟೆಯಲೋಲಾಡುವ ಕೌಂಗು.
ಕರ್‌ಪೊನ್ನಿನನೆಲ, ಹಚ್ಚಹಸುರು ಹೊಲ:
ಚೆಲುವು ಹೊನಲು ಹರಿವೀ ಕರುನಾಡಿದು–
ಹೊಂಗೆಯ ತಳಿರ್ ತೊಂಗಲ ತೋರಣ;
ಸೌರಭ ಸೂಸುವ ಮಂದ ಸಮೀರಣ;
ಕಲಕಲ ಕೂ ಕೂ ಕೋಕಿಲಗಾನ:
ಸರ್ವ ಸುಖದ ಬೆಳೆ, ನೆಲೆ, ಈನಾಡು –

ಚಂದ್ರ : (ತಿರುಕಿಯ ಹಾಡು ಮುಗಿದ ಮೇಲೆ) ಹಾಡುಗಳು ಅರ್ಥಗರ್ಭಿತವಾಗಿವೆ. ಯಾರು ಹೇಳಿಕೊಟ್ಟರಮ್ಮ?

ತಿರುಕಿ : ಯಾರೂ ಇಲ್ಲ, ನನ್ನ ಹಾಡುಗಳಿವು.

ಚಂದ್ರ : ನಿನ್ನ ಹಾಡುಗಳೇ ?

ತಿರುಕಿ : ಹೌದು. ಮನಸ್ಸಿಗೆ ತೋರಿದ್ದನ್ನೆಲ್ಲ ಮನಬಂದಂತೆ ಹಾಡುತ್ತೇನೆ ಅಷ್ಟೆ.

ಚಂದ್ರ : ಹಾಡು ಹೇಳಿಸಿ ತೊಂದರೆ ಕೊಟ್ಟೆ. ದಣಿವಾಯಿತೇನು?

ತಿರುಕಿ : ಇಲ್ಲ. ಇನ್ನು ಹೋಗಿಬರಲೆ ?

ಚಂದ್ರ : ಹೊರಡಮ್ಮ, ಹೊತ್ತಾಯ್ತು; ಕತ್ತಲಾಗುತ ಬಂತು. (ತಿರುಕಿ ಹೋಗುವಳು, ಚಂದ್ರಶೇಖರ ಕೆಲಹೊತ್ತು ಮೌನದಿಂದಿರುವನು.)

– ತೆರೆ ಬೀಳುವುದು –

ಅವಳ ಬಾಳನ್ನು ಉತ್ತಮಗೊಳಿಸಲು ಕಂಕಣತೊಟ್ಟಿರುವೆ ಮೂರ್ತಿ. ನಿನ್ನನ್ನೂ ಜೊತೆಗೊಂಡು –ಗೆಳೆತನವಿದು ಗೆಳೆತನದಲ್ಲಿ ಮುಚ್ಚುಮರೆಯಿಲ್ಲ, ಕೊಂಕು ಕಿಸುರುಗಳಿಲ್ಲ, ಜಾತಿ ಬೇಧಗಳಿಲ್ಲ ಎಂದು ಸಾರುವೆನು; ಶಶಿವದನೆಯ ಕೈಹಿಡಿದು – ಪ್ರೇಮ ದಾಂಪತ್ಯಕ್ಕೆ ಜಾತಿಮತ ಕುಲಗೋತ್ರಗಳ ಗಣನೆಯಿಲ್ಲವೆಂದು ಸಾರುವೆನು; ಆ ಹುಡುಗಿಯನು ಕೈಕೊಂಡು–ಒಡಹುಟ್ಟು ಮುಖ್ಯವಲ್ಲ ಸೋದರ ಸೋದರೀ ಭಾವಕ್ಕೆ, ಎಂದು ಸಾರುವೆನು.

ಆದರೆ ನಾಗೇಂದ್ರನಂಥವರಿಗೆ ನನ್ನ ಮನಸ್ಸು ಹೇಗೆ ಗೊತ್ತಾಗಬೇಕು ಮೂರ್ತಿ?

ಮೂರ್ತಿ : ಮತ್ತೇನು ನಾಗೇಂದ್ರನ ವಿಚಾರ?

ಚಂದ್ರ : ಆ ಹುಡುಗಿಗೆ ಕೊಡಲು ಕಾಸಿಲ್ಲದೆ ಪೇಚಾಡುತ್ತಿದ್ದ ಹೊತ್ತಿಗೆ ನಾಗೇಂದ್ರ ಬಂದ. ಒಂದು ರೂಪಾಯಿ ಸಾಲ ಕೇಳಿ ಅವಳಿಗೆ ಕೊಡುವುದರಲ್ಲಿದ್ದೆ. ಅವಳ ರೂಪಿಗೂ, ಗಾನಕ್ಕೂ ತಾನು ಕೊಡುವುದು ರೂಪಾಯಿ, ಭಿಕ್ಷಕ್ಕಾದರೆ ಮೂರೇ ಕಾಸು ಎಂದು ಆ ಸರಳ ಬಾಲೆಯ ಮಾನಭಂಗ ಮಾಡಿದ. ತಿರುಕಿಯಾದರೇನು, ಅವಳಿಗೆ ಮಾನವಿಲ್ಲವೆ?

ಮೂರ್ತಿ : ನೀನು ಹೇಳಿದ್ದೆಲ್ಲ ಕನಸಿನ ಹಾಗೆಯೇ ಇದೆ.

ಚಂದ್ರ : ಇನ್ನೂ ನಂಬಿಕೆಯಿಲ್ಲವೆ ಮೂರ್ತಿ?

ಮೂರ್ತಿ : ಕನಸು ಎಂದೆನೆ? ಕನಸಿನ ಹಾಗೆ ಇದೆ ಎಂದೆ. ಇನ್ನಾದರೂ ಮನೆಯಕಡೆ ಹೊರಡುತ್ತೀಯೋ; ಇಲ್ಲ ಈ ಹಗಲಿರುಳನ್ನೂ ಇಲ್ಲಿಯೇ ಕಳೆಯುತ್ತೀಯೋ?

ಚಂದ್ರ : ಇನ್ನೂ ಸ್ವಲ್ಪ ಹೊತ್ತು ಇಲ್ಲಿಯೇ ಇರಬೇಕೆಂದು ಮಾಡಿಕೊಂಡಿದ್ದೇನೆ. ನೀನು ಹೊರಡಲು ಅಡ್ಡಿಯಿಲ್ಲ.

ಮೂರ್ತಿ : ಓಹೋ! ನಿನ್ನ ಸೂಚನೆ ಅರ್ಥವಾಯಿತು. ನಾನು ಹೊರಡುತ್ತೇನೆ. ಬರುವವರು ಬೇಗ ಬರಲಿ. ಇಷ್ಟಾರ್ಥ ಸಿದ್ಧಿರಸ್ತು. (ಎಂದು ಹೊರಡುವನು)

– ತೆರೆ ಬೀಳುವುದು –

ಮೂರ್ತಿ : ಕನಸಲ್ಲದಿದ್ದರೆ ಕನಸಿನೊಳಗಿನ ಕನಸು, ಅದು ಏನು, ಹೇಳಿ ಬಿಡು.

ಚಂದ್ರ : (ಹಾಡಿನಂತೆ ರಾಗವಾಗಿ ಹೇಳುವನು) ನಿನ್ನೆ, ಸಂಜೆಯ ಹೊತ್ತು ಭಾವಪರವಶನಾಗಿ ಇಲ್ಲಿಯೇ ಕುಳಿತಿರಲು ಒಬ್ಬ ತಿರುಕರ ಹುಡುಗಿ ಬಂದಳಿಲ್ಲಿಗೆ ಹಾಡು ಹೇಳುತ್ತ. ಏನವಳ ಗಾನದಿಂಪೇನವಳ ಚೆಲುವು ಆದರವಳನು ನೆನೆಯೆ ಹೃದಯ ತಲ್ಲಣಿಸುವುದು ತನ್ನ ತಂದೆಯುದಾರು, ತಾಯಿಯಾರೆಂಬುದನು ಅರಿಯಳು. ಕುಲವಿಲ್ಲ, ಹೆಸರಿಲ್ಲ; ತಾಯ್ ಮಡಿದ ಹೆಂಗರುವಿನಂತೆ ತಬ್ಬಲಿ, ಕೇಳುವವರಿಲ್ಲ ಬೀದಿಬೀದಿಯನಲೆದು ತಿರಿದು ತಿನ್ನುವಳು ತಾಯ್‌ತೊಡೆಯ ಮೇಲ್ ಮಲಗಿ ಮೊಲೆಹಾಲ ಸವಿದುಂಡು ನಲಿದು ಮಲಗಿಹಳೇನು? ಹೆಂಗೆಳೆಯರೊಡಗೂಡಿ ಆಡಿ ಹಿಗ್ಗಿಹಳೇನು? ಒಮ್ಮೆಯಾದರು ಮನದೆ ಮದುವೆಯೆನ್ನುವ ಕನಸ ಕಂಡಿಹಳೆ? ಇಂತಿವಳ ಕುರಿತು ಯೋಚಿಸೆ ಎಲ್ಲ ಪ್ರಶ್ನೆಗಳೆ – ಪ್ರಶ್ನೆಗಳು: ಇವಳ ನೋಡುತಲೇಕೆ ನನ್ನ ಎದೆ ಕರಗಿದುದು ತಂಗಿಯೊಡನೆಂತಂತೆ? ಅವಳಾರು? ನಾನಾರು? ಇವು ಕೂಡ ಪ್ರಶ್ನೆಗಳೆ ? ಇವಳನ್ನು ಮನೆಗೊಯ್ದು ತಂಗಿಯಂತಾರಯ್ದು ಪೊರೆಯಬೇಕೆನಿಸುವುದು ತಂದೆಯೊಪ್ಪುವನೆ? ತಾಯ್ ಒಪ್ಪುವಳೆ?
ಶಶಿವದನೆ ಶಂಕಿಸಳೆ ? ಜನರಾಡಿಕೊಳ್ಳರೆ? ಈ ಪ್ರಶ್ನೆ ಮಾಲಿಕೆಗೆ ಮೊದಲಿಲ್ಲ, ತುದಿಯಿಲ್ಲ ಕೋದಂತೆ ಬೆಳೆಬೆಳೆದು ಮನಕೆ ಕೈಕಾಲ್‌ಗಳಿಗೆ ತೊಡರುವುದು, ದೈವೇಚ್ಛೆಯೆಂತಿಹುದೊ? ದೈವೇಚ್ಛೆ ! ದೈವೇಚ್ಛೆ ! ಮೂರ್ತಿ –ದೈವವುಂಟೇ ಜಗದಿ? ಲೋಕಪಾಲಕ, ದೀನ ಬಂಧು, ಪರಮಾತ್ಮನೆಂದೆಂಬ ಹೊಗಳಿಕೆಯಾಂತ ದೇವನಿರುವನೆ ? ಇರಲು, – ಹಿಂಸೆ, ಬಡತನ, ರೋಗ, ಬರ, ಯುದ್ಧ, ಇವುಗಳಿಂದೆಡೆಬಿಡದೆ ಉರಿಯುತಿರೆ ತನ್ನ ಸುಂದರ ಸೃಷ್ಟಿ ನೋಡುತ್ತ ಸುಮ್ಮನಿರೆ ಕುರುಡೆ ದೈವದದೃಷ್ಟಿ? ಇದುವೆ ದೈವದ ಲೀಲೆ ಹೆತ್ತ ಹಸುಳೆಯ ಕೊರಲ ಮುರಿವ ಮಾತೆಯ ರುದ್ರಲೀಲೆ! (ಸ್ವಲ್ಪ ಹೊತ್ತು ಇಬ್ಬರೂ ಮೌನ.)

ಕಾಣಬೇಕಾದರೆ ಹಾಗೇ ಸರಿ. ಆದರೆ, ಮೂರ್ತಿ, ಕಡೆಯ ಮಾತು ಹೇಳಿಬಿಡುತ್ತೇನೆ. ಕೇಳು. ಚಂದ್ರಶೇಖರನೊಡನೆ ನಿನಗೆ ಅಷ್ಟು ಸ್ನೇಹವಿದ್ದರೆ ಅವನನ್ನು ಒಳ್ಳೆಯ ದಾರಿಗೆ ತರುವುದು ನಿನ್ನ ಕರ್ತವ್ಯವೇ ಹೊರತು ನನ್ನದಲ್ಲ. ಆದರೆ ನನಗೆ ತೋರಿದ್ದನ್ನು ಹೇಳಿಬಿಡುತ್ತೇನೆ. ಅವನನ್ನು ಬೇಗನೆ ಒಳ್ಳೆಯ ದಾರಿಗೆ ತರಬೇಕು. ಇಲ್ಲವೆ ಹುಚ್ಚರ ಆಸ್ಪತ್ರೆಗೆ ಸೇರಿಸಬೇಕು. ದೇಶಸೇವೆ, ಸಮಾಜಸೇವೆ, ಆದರ್ಶಸಾಧನೆ ಎಂದು ಸುಮ್ಮನೆ ಬಾಯಲ್ಲಿ ಒದರುತ್ತಿದ್ದರೆ ಏನು ಮಾಡಿದಹಾಗಾಯಿತು. ದೇಶಕ್ಕಾಗಿ ರಕ್ತ ಬಸಿಯುತ್ತಿರುವವರೊಡನೆ ಹೋಗಿ ರಕ್ತ ಬಸಿಯಬೇಕು. ಎಲ್ಲ ಮತದವರು ಒಂದೆ, ಮತಭೇದಗಳನ್ನು ಬಿಡಬೇಕು ಎಂದು ಬೋಧಿಸಲು ಕ್ರಿಶ್ಚಿಯನ್ ಹುಡುಗಿಯನ್ನು ಕಟ್ಟಿಕೊಂಡು, ತಿರುಕರ ಹುಡುಗಿಯನ್ನು ತಬ್ಬಿಕೊಂಡು ಆಟ ಹೂಡಬೇಕೆ? ಆದರ್ಶಸಾಧನೆ ಇಲ್ಲಿಗೆ ಮುಗಿಯಿತೇನು? ಸುಮ್ಮನೆ ಹೇಳಿ ನಾನೇಕೆ ಕೆಟ್ಟವನಾಗಲಿ. ನಿನ್ನ ಇಚ್ಛೆಬಂದಂತೆ ನೀನು ಮಾಡು. ನನ್ನ ಇಚ್ಛೆ ಬಂದಂತೆ ನಾನು ಮಾಡುತ್ತೇನೆ.

ಮೂರ್ತಿ : ಆಗಬಹುದು ನಾಗೇಂದ್ರ, ಅವರವರ ಇಚ್ಛೆ ಬಂದಂತೆ ಮಾಡಲು ಪ್ರತಿಯೊಬ್ಬರಿಗೂ ಸ್ವಾತಂತ್ರ್ಯವಿದ್ದೇ ಇದೆ. ಇನ್ನು ನಾನು ಬರಲೆ?

ನಾಗೇಂದ್ರ : ಆಗಬಹುದು, ನನಗೂ ಕೆಲಸವಿದೆ, ಹೋಗುತ್ತೇನೆ. (ಇಬ್ಬರೂ ಒಂದೊಂದು ಕಡೆ ಹೋಗುವರು).

– ತೆರೆ ಬೀಳುವುದು –

**ನೋಟ – ೩**

[ಉದ್ಯಾನ ದೃಶ್ಯ : ಹಿಂದಿನದೇ, ಚಂದ್ರಶೇಖರ ಯೋಚನೆಯಲ್ಲಿ ಮುಳುಗಿ, ತಲೆ ಬಗ್ಗಿಸಿಕೊಂಡು, ಅತ್ತಿಂದಿತ್ತ ಹಾಗೆಯೇ ತಿರುಗುತ್ತಿರುತ್ತಾನೆ. ಹಾಗೆಯೇ ಕುಳಿತುಕೊಳ್ಳುತ್ತಾನೆ. ಶಶಿವದನೆ ಪ್ರವೇಶಿಸುತ್ತಾಳೆ. ಶಶಿವದನೆ ಸುಮಾರು ೧೮–೨೦ ವರ್ಷ ವಯಸ್ಸಿನ ತರುಣಿ, ಚೆಲುವೆ, ವಿದ್ಯಾವತಿ, ರೇಶ್ಮೆಯ ಸೀರೆ, ರೇಶ್ಮೆಯ ಜಾಕೇಟ್, (ಬೇಕಾದರೆ ಕಾಲಿಗೆ ಲೇಡಿಷೂ) ಅಳ್ಳಕವಾದ ಹೆರಳು! ತಲೆಯಲ್ಲಿ ಒಂದು ಗುಲಾಬಿಹೂ ಕ್ರಿಶ್ಚಿಯನ್ ಮತದವಳಾದರೂ ಹಣೆಗೆ ಒಂದು ಬೊಟ್ಟು, ಕೈಯಲ್ಲಿ ರೇಶ್ಮೆಬಟ್ಟೆಯ ಕೊಡೆ.]

ಶಶಿವದನೆ : (ಹಿಂದಿನಿಂದ ಬಂದು, ಕೊಡೆ ಬಿಚ್ಚಿ ಚಂದ್ರಶೇಖರನ ತಲೆಯ

## ನೋಟ – ೨

[ಮೂರ್ತಿ ಚಂದ್ರಶೇಖರನನ್ನು ಉದ್ಯಾನದಲ್ಲಿ ಬೀಳ್ಕೊಂಡವನು ಬೀದಿಯಲ್ಲಿ ಬಿರುಸಾಗಿ ನಡೆದು ಹೋಗುತ್ತಿರುತ್ತಾನೆ. ನಾಗೇಂದ್ರ ಹಿಂದಿನಿಂದ ಕೂಗುತ್ತಾನೆ. ಮೂರ್ತಿ ಹಿಂದಿರುಗಿ ನೋಡಿ ನಿಲ್ಲುತ್ತಾನೆ. ನಾಗೇಂದ್ರ ಬರುತ್ತಾನೆ.]

ನಾಗೇಂದ್ರ : ನಿನ್ನೆ ಸಾಯಂಕಾಲ ಬಹಳ ವಿಚಿತ್ರ ಸಂಗತಿ ನಡೆಯಿತು. ಗೊತ್ತೆ?

ಮೂರ್ತಿ : ಏನು?

ನಾಗೇಂದ್ರ : ನಿನ್ನೆ ಸಾಯಂಕಾಲ ಚಂದ್ರಶೇಖರನನ್ನು ನೋಡಿದ್ದೆಯೇನು?

ಮೂರ್ತಿ : ಇಲ್ಲ

ನಾಗೇಂದ್ರ : ನಾನು ನೋಡಿದ್ದೆ

ಮೂರ್ತಿ : ಸಂತೋಷ

ನಾಗೇಂದ್ರ : ಸಂತೋಷ ಪಡುವೆಯಂತೆ ಕೇಳಿ, ಇರಲಿ : ನಿನ್ನೆ ಸಂಜೆ ಉದ್ಯಾನದಲ್ಲಿ ಒಬ್ಬ ತಿರುಕರ ಹುಡುಗಿಯನ್ನು ಚಂದ್ರಶೇಖರ....... ಮುಂದಕ್ಕೆ ನೀನೇ ಊಹಿಸಿ ಕೊಳ್ಳಬಹುದು.

ಮೂರ್ತಿ : ನಾಗೇಂದ್ರ, ನನಗೆ ಊಹಾಶಕ್ತಿ ಇಲ್ಲ, ಆದರೆ ಯಾರ ಮಾತನ್ನು ನಂಬಹುದು. ಯಾರ ಮಾತು ನಂಬತಕ್ಕದಲ್ಲ. ಎಂಬ ವಿವೇಚನೆ ಇದೆ. ಆ ತಿರುಕರ ಹುಡುಗಿಯ ವಿಚಾರ ಚಂದ್ರಶೇಖರನೇ ಎಲ್ಲ ಹೇಳಿದ್ದಾನೆ. ಇನ್ನೇನೂ ಹೆಚ್ಚಿನ ವಿಷಯ ಇಲ್ಲತಾನೆ?

ನಾಗೇಂದ್ರ : ಅವನು ಎಲ್ಲವನ್ನೂ ಹೇಳಿರಲಾರ. ನಡೆದದ್ದದನ್ನು ಕಣ್ಣಾರ ಕಂಡ ನಾನು ಹೇಳುವುದನ್ನು ಸ್ವಲ್ಪ ಕೇಳು. ಆ ತಿರುಕರ ಹುಡುಗಿಯ ಚೆಲುವಿಗೂ, ಹಾಡಿಗೂ ಮನಸೋತದ್ದು ತಪ್ಪೆಂದು ನಾನು ಹೇಳುವುದಿಲ್ಲ. ಕಾಸು ಕೊಡಲಿ, ರೂಪಾಯಿ ಬೇಕಾದರೆ ಕೊಡಲಿ. ಆದರೆ ಅವಳ ಕೈಹಿಡಿಯುವುದೆಂದರೇನು? ಗಲ್ಲ ಹಿಡಿಯುವುದೆಂದರೇನು? ತಬ್ಬಿಕೊಳ್ಳುವುದೆಂದರೇನು?

ಮೂರ್ತಿ : ಇದರಲ್ಲಿ ತಪ್ಪೇನು?

ನಾಗೇಂದ್ರ : ಸರಿಹೋಯಿತು. ಚಂದ್ರಶೇಖರನ ಹುಚ್ಚು ನಿನಗೂ ಹಿಡಿದಿರುವ ಹಾಗಿದೆ.

ಮೂರ್ತಿ : ಸಹವಾಸ ದೋಷ.

ನಾಗೇಂದ್ರ : ಹೌದು, ಹಾಗೇಸರಿ, ಅವನು ಮಾಡಿದ್ದೆಲ್ಲ ನಿನಗೆ ಸರಿಯಾಗಿ

ಶಶಿವದನೆ! ಕನಸು ನನಸಾಯ್ತಿಂದು. ನಿನ್ನೊಡನೆ
ಇಲ್ಲಿ ಗೈತಂದು, ಏಕಾಂತದಲಿ ಒಡನಲಿದು
ಪ್ರಣಯ ಪ್ರಯಾಣದಲ್ಲಿ ಜೊತೆಗಾರ್ತಿಯಾಗೆಂದು
ಕೇಳಬೇಕೆಂದು ಬಗೆದಿಹೆ; ಕೇಳುವೆನು ; ನೀನು
ನನ್ನ ಆದರ್ಶಗಳ ಆದರ್ಶ. ನನ್ನ ಬಾಳ್
ಕೊರತೆಗಳ ತುಂಬುವುದು ನಿನ್ನ ಪ್ರೇಮದ ಜಲಧಿ;
ದೆಸೆಗೆಟ್ಟು, ಮತಿಗೆಟ್ಟು, ಬಳಲಿ ಬಲುಕಂಗೆಟ್ಟು
ಆದರ್ಶದಾಕಾಶದಂಚ ಮುಟ್ಟಲು ನಾನು
ನಡೆನಡೆದು ನಡೆಯುತಿಹೆ : ಸಂಗಡಿಗರಾರಿಲ್ಲ;
ದಾರಿತೋರುವರಿಲ್ಲ; ನೆಳಲಿಲ್ಲ, ನೆಲೆಯಿಲ್ಲ
ನಿನ್ನೊಲವು ಕಣ್ಣೆಳಲು; ನುಡಿ
ಜೇನು, ಸವಿಯುಣಿಸು ;
ನಿನ್ನ ಕಣ್ ಬೆಳಕೆನ್ನ ಬಾಳ್ ಬೆಳಕು. ನಿನ್ನವಳು
ಎಂದೆಂಬ ಒಂದು ನಲ್‌ನುಡಿಯಾಡು.

ಶಶಿವದನೆ : (ಭಾರಪರವಶಳಾಗಿ, ರಾಗವಾಗಿ) ನಿನಗೊಲಿದೆ, ನಿನ್ನವಳು
– ಎಂಬ ನುಡಿಯಲಿ ಮಾತ್ರ
ನನ್ನೊಲವನೆಂತು ತೋರಿಸಲಿ ಇನಿಯ
ನನ್ನ ಕಣ್ಣನು ಕೇಳು ; ಬಿರಿವಂತೆ ಮೊರೆಯುತಿಹ
ಎದೆಗೆ ಕಿವಿಗೊಡು; ತಡೆದು ತಡೆತಡೆದು
ಹೊರಡುತಿಹ ನನ್ನ ಉಸಿರನು ಕೇಳು. (ಎಂದು ಚಂದ್ರಶೇಖರನ ಹೆಗಲಿಗೆ ತನ್ನ ತಲೆಯೊರಗಿಸುವಳು.)

ಚಂದ್ರಶೇಖರ : (ಎಡಗೈಲಿ ಅವಳನ್ನು ತಬ್ಬಿ, ಬಲಗೈಯಿಂದ ಅವಳ ಕುರುಳು ನೇವರಿಸುತ್ತ) ಒಂದು ನುಡಿ ಸಾಲದೆನುವಂತೆ ಹಲನುಡಿಗಳಲಿ ಒರೆದೆಯಲ್ಲವೆ ಒಲವ? ಒಂದು ನುಡಿಯಲಿ ಹೇಳು ನನ್ನ ಕೈಹಿಡಿಯುವೆಯ?

ಶಶಿವದನೆ : ಕೈ ಹಿಡಿಯಲೇತಕ್ಕೆ
ನಿನ್ನ ನೆಳಲಾಗಿರಲು ? ಕೈಹಿಡಿಯಲೇಕೆ?

ಚಂದ್ರಶೇಖರ : ಶಂಕೆ ಯಾವುದು ರನ್ನೆ; ಹೇಳು, ಅಂಜಿಕೆಯೇಕೆ?

ಶಶಿವದನೆ : ನೀವು ಹಿಂದೂಮತದೊಳುತ್ತಮರು, ಬ್ರಾಹ್ಮಣರು;

ಮೇಲೆ ಹಿಡಿದು, ಮುಖದಮುಂದೆ ತರುತ್ತಾಳೆ ಚಂದ್ರಶೇಖರ ಕೂಡಲೆ ಕೈಹಿಡಿದು ಪಕ್ಕದಲ್ಲಿ ಕುಳ್ಳಿರಿಸಿಕೊಳ್ಳುತ್ತಾನೆ.) ನಾನು ಬಂದದ್ದು ಹೇಗೆ ಗೊತ್ತಾಯಿತು?

ಚಂದ್ರಶೇಖರ : ಕೊಡೆ ಕಂಡ ಮೇಲೆ ಕೊಡೆಯ ಒಡತಿಯುನ್ನು ಕಂಡಹಾಗಲ್ಲವೆ? ಅದಿರಲಿ, ನಿನ್ನೆಸಂಜೆ ನಿನಗಾಗಿ ಕಾದೆ. ನೀನು ಬರಲೇ ಇಲ್ಲ.

ಶಶಿವದನೆ : ಸಂಜೆ ಆಗದೆ ಹೋದರೆ ಈಗ ಬರುವಂತೆ ಹೇಳಿದ್ದು ನೆನಪಿದೆಯೇ?

ಚಂದ್ರಶೇಖರ : ಪರವಾಯಿಲ್ಲ. ನಿಮ್ಮ ತಂದೆ ನಿನ್ನೆ ಸಂಜೆ ಅಪ್ಪಣೆ ಕೊಡಲಿಲ್ಲವೆಂದು ತೋರುತ್ತೆ.

ಶಶಿವದನೆ : ಹೌದು

ಚಂದ್ರಶೇಖರ : ನಮ್ಮ ಹಿಂದೂ ಜನರ ಹೆಣ್ಣುಮಕ್ಕಳ ಹಾಗೇ ಆಯಿತೇ, ನಿನ್ನಗತಿಯೂ? ಅದು ಆಶ್ಚರ್ಯ

ಶಶಿವದನೆ : ಹಿಂದುವಾದರೇನು? ಕ್ರಿಶ್ಚಿಯನ್ ಆದರೇನು – ಹಿಂದೂದೇಶದ ಅಬಲೆ ಇನ್ನೂ ಅಬಲೆಯೇ. ಅಲ್ಲವೆ ಚಂದ್ರ?

ಚಂದ್ರಶೇಖರ : ಇನ್ನು ಮೇಲಾದರೂ ನೀನು ಸಬಲೆಯಾಗಬೇಕು. ಹೋಗಲಿ ನಿಮ್ಮ ತಂದೆಗೆ ಏನು ಹೇಳಿದೆ?

ಶಶಿವದನೆ : ಉದ್ಯಾನವನದಲ್ಲಿ ನೀನು ನನಗಾಗಿ ಕಾದಿರುತ್ತಿ : ಹೋಗಬೇಕು ಎಂದು ಹೇಳಿದೆ.

ಚಂದ್ರಶೇಖರ : ಕೂಡಲೆ ಒಪ್ಪಿದರೆ?

ಶಶಿವದನೆ : ಒಪ್ಪಿದರು: ನಿನ್ನ ಹೆಸರು ಹೇಳಿದ ಕೂಡಲೆ ಅವರಿಗೆ ಸಮಾಧಾನವಾಯಿತು.

ಚಂದ್ರಶೇಖರ : ನಾನು ನಿಮ್ಮ ಮನೆಗೆ ಒಂದೆರಡು ಸಲ ಬಂದದ್ದನ್ನು ನೋಡಿದ್ದಾರೆ, ಅಷ್ಟೆ. ಹೆಚ್ಚಿನ ಸಂಗತಿ ತಿಳಿಯದೆಂದು ಕಾಣುತ್ತೆ.

ಶಶಿವದನೆ : ನಾನು ಹೋಗುತ್ತೇನೆ ಎಂದಾಗ 'ಜೋಕೆ; ಎಚ್ಚರಿಕೆಯಿಂದಿರು' ಎಂದು ಹೇಳಿ ಒಮ್ಮೆ ಮುಗುಳುನಗೆ ನಕ್ಕರು. ಎಲ್ಲ ಊಹಿಸಿದ್ದಾರೆ ಅಂತ ಕಾಣುತ್ತೆ.

ಚಂದ್ರಶೇಖರ : ಹಾಗೇನು! ಅವರು ಸುಮ್ಮನಿರುವುದು ನೋಡಿದರೆ ಅವರಿಗೆ ಅಡ್ಡಬರುವ ಇಚ್ಛೆ ಇರಲಾರದು. (ಭಾವಪರವಶನಾಗಿ, ರಾಗವಾಗಿ)

ಚಂದ್ರ : ತಂಗೀ ಎಂದು ಕೂಗುತ್ತೇನೆ, ತಂಗಮ್ಮ ಎಂದು ಕರೆಯಬಹುದು ಇನ್ನು ಮೇಲೆ (ನಗುವನು). ತಂಗಿ ಎಂದರೆ –ನನ್ನ–ತಂಗಿಯಾಗಿ–

ತಿರುಕಿ : ಹೇಳುವುದಕ್ಕೆ ಸಂಕೋಚ ಅವರಿಗೆ. ಅವರು ನನ್ನನ್ನು ನೋಡಿದ್ದು ನಿನ್ನೆ. ಆಗಲೇ ನನ್ನನ್ನು ತಂಗೀ ಎಂದು ಕರೆಯುತ್ತಾರೆ. ಅದು ಅವರ ಕರುಣೆ, ನಾನು ಹುಟ್ಟು ತಿರುಕಿಯಮ್ಮ.

ಶಶಿವದನೆ : ಬಹಳ ಕಂಗೆಟ್ಟಿರುವಂತಿದೆ. ಬಾರಮ್ಮ ನಮ್ಮ ಮನೆಗೆ. ಚಂದ್ರನ ತಂಗಿಯಾದ ಮೇಲೆ ನನ್ನ ತಂಗಿಯಾದಂತೆ, ಸಂಕೋಚವಿಲ್ಲದೆ ಬಾ.

ಚಂದ್ರ : ಇರಲಿ, ನಿಮ್ಮ ಮನೆಗೆ ನಾಳೆ ಬರುತ್ತಾಳೆ. ಈ ದಿನ ನಮ್ಮ ಮನೆಗೆ ಕರೆದುಕೊಂಡು ಹೋಗುತ್ತೇನೆ. ಈ ದಿನ ನಮ್ಮ ಮನೆಯಲ್ಲಿ ಅವಳಿಗೆ ಊಟವಾದ ಮೇಲೆ ನಿಮ್ಮ ಮನೆಗೆ ಬರುತ್ತಾಳೆ. ಒಂದು ಒಳ್ಳೆಯ ಸೀರೆ, ಒಂದು ಕುಪ್ಪಸ, ಕೊಟ್ಟರೆ–

ತಿರುಕಿ : ಅಯ್ಯಪ್ಪ, ನನ್ನನ್ನು ಒಟ್ಟಿಗೇ ಅಷ್ಟು ಸುಖಿಯಾಗಿ ಮಾಡಬೇಡಿ. ಅದು ನನಗೆ ಅಭ್ಯಾಸವಿಲ್ಲ. ಭಿಕ್ಷೆ ಬೇಡುವುದು ನನ್ನ ಹುಟ್ಟುಗುಣವಾಗಿದೆ; ಆದರಲ್ಲಿ ನನಗೆ ಅವಮಾನವೇ ತೋರುವುದಿಲ್ಲ. ಬೇಕಾದಾಗ ಕೇಳುತ್ತೇನೆ; ಕೊಡಿ. ಚಂದ್ರಶೇಖರ, ಈವೊತ್ತು ನಿಮ್ಮ ಮನೆಗೆ ಬರುತ್ತೇನೆ. ನೀವು ಹೇಳಿದಂತೆ ಅನ್ನ ಹಾಕಿಸಿ.

ಚಂದ್ರ : ಆಹಾ! ನನ್ನ ಸಂತೋಷಕ್ಕೆ ಪಾರವೇ ಇಲ್ಲ. ಶಶಿವದನೆ, ಅದು ಏನೆಂದು ಹೇಳಲಾರೆ. ಬಾ, ತಂಗಿ ಹೋಗೋಣ.

ತಿರುಕಿ : ಇಲ್ಲ, ನೀವು ಹೋಗಿ ನಾನು ಬರುತ್ತೇನೆ.

ಚಂದ್ರ : ನಿನಗೆ ನಮ್ಮ ಮನೆ ಗೊತ್ತಿಲ್ಲವಲ್ಲ ತಂಗಿ.

ತಿರುಕಿ : ಹುಡುಕಿಕೊಂಡು ಬರುತ್ತೇನೆ.

ಚಂದ್ರ : ಹೋಗಲಿ ತೋಟದಲ್ಲಿರುತ್ತೀಯ. ಬಂದು ಕರೆದುಕೊಂಡು ಹೋಗುತ್ತೇನೆ?

ತಿರುಕಿ : ಆಗಬಹುದು.

(ಚಂದ್ರಶೇಖರ, ಶಶಿವದನೆ ಹೋಗುವರು)

– ತೆರೆ ಬೀಳುವುದು –

ನಮಗೆ ಸತ್ಕುಲವಿಲ್ಲ: ಹಿಂದೂ ಮತದ
ಹಿಂದುಳಿದ ಹಿಂದಾಳು ಕುಲದಿಂದ ಹೊರಬಂದು
ಹಾರಿದೆವು ಕ್ರಿಸ್ತಮತ ಕೂಪಕ್ಕೆ; ಇಲ್ಲಿಯೂ
ನಾವ್ ಕೀಳು; ನನ್ನ ಸಹವಾಸಕ್ಕೆ ಒಪ್ಪುವರೆ
ನಿಮ್ಮ ತಾಯ್ ತಂದೆಗಳು, ನಿಮ್ಮ ಮತ ಬಾಂಧವರು?

ಚಂದ್ರಶೇಖರ : ತಾಯ್ ತಂದೆಯನು ತೊರೆವೆ. ಪ್ರಕೃತಿದೇವಿಯೆ
ತಾಯಿ ಜೀವದಾತನೆ ತಂದೆ; ಪ್ರೇಮವೆ ನನ್ನ ಮತ
ನನ್ನ ಪ್ರೇಮೆವ ಕೊಂಡು ಪ್ರೇಮವಿಕ್ಕುವರೆಲ್ಲ
ನನ್ನ ಮತ ಬಾಂಧವರು; ಪೇಮ ಪ್ರಪಂಚದಲಿ
ಜಾತಿ, ಮತ, ಕುಲ ಪೆರ್ಮೆಗಳಿಗೆ ಎಡೆಯಿಲ್ಲ. ಶಶಿ;
ಅಲ್ಪ ಭೇದಗಳ ಬದಿಗೊತ್ತಿ ಬದುಕಿನಲಿ
ಪ್ರೇಮ ಬಂಧನದೊಳೊಂದಾಗಿ, ನಾವ್ ಸಾರೋಣ
ಪ್ರೇಮ ತತ್ವವ ಜನಕೆ. ಏನು ಹೇಳುವೆ ಶಶಿ?

ಶಶಿವದನೆ : ಸಾಕಿ ಸಲಹಿದ ತಂದೆ, ಅವರ ಕೇಳುವೆನೊಮ್ಮೆ
ಆದರೆ ನನಗಾಗಿ ನೀನು ಕೇಳುವುದು ಲೇಸು.

ಚಂದ್ರಶೇಖರ : ನನ್ನ ಕುರುಡಾದರ್ಶಕಿಂದು ಕಣ್ಣೆರಡಾಯ್ತು
ನಿನ್ನಿಚ್ಛೆಯಂತೆ. ಏಳು, ಹೊತ್ತಾಯ್ತು.
[ಇಬ್ಬರೂ ಏಳುವರು]

– ತೆರೆ ಬೀಳುವುದು –

## ನೋಟ – ೪

[ಭಿಕ್ಷುಕಿ ಪ್ರವೇಶಿಸುವಳು]

ಅಯ್ಯೋ! ಹಾಳು ಬಿಕ್ಕೆಯ ಬಾಳೆ ! ಹೊಟ್ಟೆ ಹಸಿವಿನಿಂದ ಕೂರಲೂ ಕುಗ್ಗಿ ಹೋಗಿದೆ. ಹಾಡಲೂ ಆರೆ. ಹೊತ್ತು ಮೀರಿತು. ಕತ್ತಲೆಯಲ್ಲಿ ನಡೆಯುವಾಗ ತಿಂಗಳ ಬೆಳಕು ಚೆಲ್ಲಿದಂತೆ, ಚಂದ್ರಶೇಖರ – ನನ್ನ ಭಾಗದ ದೇವರಂತೆ ಸಿಕ್ಕಿದ್ದಾರೆ. ಅವರ ಮನೆಗೆ ಭಿಕ್ಷೆಗೆ ಹೋಗಲೆ? ಅವರ ಮನೆಗೆ! ಕೂಡದು. ಇಲ್ಲ, ಇಲ್ಲ, (ದೂರದಿಂದ 'ತಂಗೀ' ಎಂದು ಕೂಗಿದ ಹಾಗಾಗುವುದು. ಹಿಂದಿರುಗುವಳು. ಚಂದ್ರಶೇಖರ, ಶಶಿವದನೆ ಪ್ರವೇಶಿಸುವರು.)

ಚಂದ್ರ : ಶಶಿವದನೆ, ಇದೋ ನನ್ನ ತಂಗಿ. (ತಿರುಕಿಯನ್ನು ಕುರಿತು)
ತಂಗೀ, ಇವಳು ಶಶಿವದನೆ ನನ್ನ............. ನನ್ನ...............

ಶಶಿವದನೆ : ತಂಗಿಯೇ! ಹೆಸರೇನು? ಕೇಳಬಹುದು ತಾನೆ.

(ನಂಜಮ್ಮ ಹೋಗುವಳು, ಸ್ವಲ್ಪ ಹೊತ್ತು ಮತ್ತೆ ಶತಪಥ ತಿರುಗುತ್ತಿರುವನು. ಇದ್ದಕ್ಕಿದ್ದ ಹಾಗೆ ಮತ್ತೆ ನಿಂತು!
ಏನು ಮಾಡಲಿ ! ಏನು ಮಾಡಲಿ! ಹೇಗೆ ದಾರಿಗೆ ತರುವುದು!
ನಾಶವಾಯಿತು, ಸರ್ವನಾಶವಾಯಿತು!

ಚಂದ್ರಶೇಖರ : (ಅಷ್ಟು ಹೊತ್ತಿಗೆ ಪ್ರವೇಶಿಸಿರುವನು) ಏನಪ್ಪ ನಾಶವಾದದ್ದು?

ಶ್ರೀಕಂಠ : ಹೋಗಿದ್ದು ನಿನ್ನೆ ಸಂಜೆ; ಬರುವುದು ಈಗ, ರಾತ್ರಿಯೆಲ್ಲ ಎಲ್ಲಿದ್ದೆಯೋ?

ಚಂದ್ರ : ಅಲ್ಲಿಯೇ ಮಲಗಿದ್ದೆ.

ಶ್ರೀಕಂಠ : ಎಲ್ಲಿ?

ಚಂದ್ರ : ಅಲ್ಲಿಯೇ ಆ ಉದ್ಯಾನದಲ್ಲಿ.

ಶ್ರೀಕಂಠ : ಉದ್ಯಾನದಲ್ಲಿ! ಉದ್ಯಾನದಲ್ಲಿ! ನಿನಗೆ ಬುದ್ಧಿ ನೆಟ್ಟಗಿದೆಯೋ ಇಲ್ಲವೋ?

ಚಂದ್ರ : ಇದೇನಪ್ಪ ಹೀಗೆ ಕೇಳುತ್ತಿ?

ಶ್ರೀಕಂಠ : ಬಯಲಿನಲ್ಲಿ, ಚಳಿಯಲ್ಲಿ, ಮಲಗೋಣವೆಂದರೇನು! ನಂಬಲಾಗದ ಮಾತು.

ಚಂದ್ರ : ನಿನ್ನ ಕೂಡ ನಾನು ಎಂದೂ ಸುಳ್ಳು ಹೇಳಿಲ್ಲ

ಶ್ರೀಕಂಠ : ಅಲ್ಲಿ ಏಕೆ ಮಲಗಿದ್ದೆ? ಮನೆ, ಮಠ ಇಲ್ಲವೆ? ಅಪ್ಪ ಅಮ್ಮ ಇಲ್ಲದ ತಬ್ಬಲಿಯೆ ನೀನು? ತಿರುಕರಂತೆ ಹಾಸಿಗೆ ಹೊದ್ದಿಗೆಯಿಲ್ಲದೆ ಮರದ ಕೆಳಗೆ ಮಲಗಿಕೊಳ್ಳುವುದಕ್ಕೆ?

ಚಂದ್ರ : ಸಂಜೆಯೆಲ್ಲ ಅಲ್ಲಿಯೇ ಕುಳಿತಿದ್ದೆ, ಹಿತವಾಗಿತ್ತು. ಹಾಗೆಯೇ ನಿದ್ದೆ ಬಂತು. ಮಲಗಿದೆ, ಇದರಲ್ಲಿ ತಪ್ಪೇನು?

ಶ್ರೀಕಂಠ : ತಪ್ಪಿಲ್ಲ, ಸ್ವಲ್ಪವೂ ಇಲ್ಲ. ಬಹಳ ಯೋಗ್ಯವಾದ ಕೆಲಸ. ಚೆನ್ನಾಗಿದೆ. (ನಂಜಮ್ಮ ಒಳಗಿನಿಂದ ಬರುವರು) ನೋಡು. ನಿನ್ನ ಪುತ್ರರತ್ನ ಬಂದಿದ್ದಾನೆ. ನಿನ್ನೆ ರಾತ್ರಿ ಪಾರ್ಕಂತೆ ಪಾರ್ಕು – ಅಲ್ಲಿ ಮಲಗಿದ್ದನಂತೆ ಚಂದೂ, ಚಂದೂ, ಇನ್ನು ನನಗೆ ಸಹಿಸುವುದಕ್ಕಾಗುವುದಿಲ್ಲ. ನನ್ನ ಹೊಟ್ಟೆಯಲ್ಲಿ ಹುಟ್ಟಿ ನನ್ನ ಕುಲಕ್ಕೆ ಅಪಕೀರ್ತಿ ತರುತ್ತಿದ್ದೀಯ. ನಮ್ಮ ಸಂಪ್ರದಾಯ ಆಚಾರ ವ್ಯವಹಾರ ಎಲ್ಲವನ್ನೂ ತೊರೆದಿದ್ದೀಯೆ, ವೈದಿಕ ಮನೆತನಕ್ಕೆ

# ಮೂರನೆಯ ಅಂಕ

## ನೋಟ – ೧

[ಶ್ರೀಕಂಠಶರ್ಮನ ಮನೆಯ ಹಜಾರ : ಮೊದಲನೆಯ ಅಂಕದ ಮೊದಲನೆಯ ನೋಟದಂತೆ ಶ್ರೀಕಂಠಶರ್ಮ ಶತಪಥ ತಿರುಗುತ್ತಿರುತ್ತಾನೆ.]

ಶ್ರೀಕಂಠಶರ್ಮ : (ತಟಕ್ಕನೆ ನಿಂತು) ಲೇ, ಲೇ.......

ನಂಜಮ್ಮ : (ಒಳಗಿನಿಂದ ಬಂದು) ಏನೂ ಅಂದ್ರೆ?

ಶ್ರೀಕಂಠ : ನನ್ನ ಚೌಕ ಎಲ್ಲಿ? ಸ್ವಲ್ಪ ಹುಡುಕಿಕೊಡು.

ನಂಜಮ್ಮ : ಮಡಿ ಉಟ್ಟುಕೊಂಡು ಅಡಿಗೆಗಿಟ್ಟಿದ್ದೀನಿ. ಈಗ ಎಲ್ಲಿ ಹುಡುಕಲಿ ಅಂದ್ರೆ. ಚಂದೂನ ಸ್ವಲ್ಪ ನೋಡಿಕೊಂಡು ಬನ್ನಿ. ನೀರು ಇಟ್ಟು ಹೊತ್ತಾಯಿತು ಬೇಳೆ ಹಾಕಬೇಕು ಹೋಗುತೀನಿ.

ಶ್ರೀಕಂಠ : ಚಂದು – ಚಂದು, ಎಲ್ಲಿ ತರಲಿ ಹಾಳಾಗಿ ಹೋದವನನ್ನ, ನಿನ್ನೆ ಸಂಜೆಯಿಂದ ಮನೆಗೆ ಬಂದಿಲ್ಲ. ಮೊನ್ನೆ ಮೊನ್ನೆ ಪುರೋಹಿತರು ಕೇಳಿದ್ದು ಕೆನ್ನೆಗೆ ಹೊಡೆದ ಹಾಗಿದೆ. ನನಗೆ ಅದೇ ಯೋಚನೆಯಾಗಿ ಬಿಟ್ಟಿದೆ.

ನಂಜಮ್ಮ : ಏನು ಕೇಳಿದರು ಅಂದ್ರೆ? ಚಂದೂ ವಿಷಯಾನೆ?

ಶ್ರೀಕಂಠ : ಹೌದು, ಹೌದು. ನಿನ್ನ ಚಂದೂ ವಿಷಯ.

ನಂಜಮ್ಮ : ಏನು ಹೇಳಿದರು?

ಶ್ರೀಕಂಠ : ಏನೂ ಅಂತ ಹೇಳಲಿ, ಹೊಟ್ಟೆ ಉರೀತ ಇದೆ. ಹೋಗು ಹೋಗು, ಬೇಳೆ ಹಾಕು ಹೋಗು, ಹೊತ್ತಾಯಿತು, ಅವನು ಬರಲಿ ಮಾಡುತ್ತೀನಿ.

ನಂಜಮ್ಮ : (ನಿಧಾನವಾಗಿ) ನೀವು ಯಾವಾಗಲೂ ಅವನೊಡನೆ ಚರ್ಚೆ ಹೂಡುತ್ತೀರಿ. ಸ್ವಲ್ಪ ಅವನು ಹೋದ ದಾರಿಗೆ ಬಿಟ್ಟರೆ ಒಳ್ಳೆಯದು ಅಂತ ನನಗೆ ತೋರುತ್ತೆ. ಎಷ್ಟೇ ಆಗಲಿ ಈಗಿನ ಕಾಲದ ಓದು ಓದಿದವನು, ನಿಮ್ಮ ಹಾಗೆ ಸದಾ ಮೂಗು ಹಿಡಿದುಕೊಂಡು ಕುಳಿತಿರು ಎಂದರೆ ಕುಳಿತಿರುವುದಕ್ಕಾಗುತ್ತೆಯೋ ಅವನಿಗೆ, ಹೊತ್ತಾಯಿತು, ಸ್ನಾನಕ್ಕೆದ್ದರೆ–

ಶ್ರೀಕಂಠ : ಹೂ, ಹೂ, ಹೊತ್ತಾಯಿತು, ಬೇಳೆ ಹಾಕು ಹೋಗು.

ಅಪ್ಪನ ನೆರಳು ನೀನು, ಅವನು ಹೇಳಿದ ಹಾಗೆ ಕೇಳಿಕೊಂಡು ಅವನನ್ನ ಸಂತೋಷಪಡಿಸು ಎಂದು ಹೇಳುತ್ತಿತಾನೆ?

ನಂಜಮ್ಮ : ಹೌದು ಮಗು, ಅಪ್ಪ ಅಮ್ಮ ಎಂದರೆ ದೇವರ ಹಾಗೆ ಎಂದು ಹೇಳುವುದಿಲ್ಲವೆ, ಅವರು ಹೇಳಿದ ಹಾಗೆ ಕೇಳಬೇಕಪ್ಪ ನೀನು.

ಚಂದ್ರ : ದೇವರು ಇದಾನೆಯೋ ಇಲ್ಲವೋ ನಾನು ಕಾಣೆ, ಅಪ್ಪ ಎಂದರೆ ಅಪ್ಪ, ಅಮ್ಮ ಅಂದರೆ ಅಮ್ಮ, ನನಗೆ ಗೊತ್ತಿರುವುದು ಅಷ್ಟೆ.

ನಂಜಮ್ಮ : ಇದೇನು ಹೀಗೆನ್ನುತ್ತೀಯೊ ಇಷ್ಟು ಓದಿ?

ಚಂದ್ರ : ದೇವರು ಎಲ್ಲಮ್ಮ ಇರುವುದು?

ನಂಜಮ್ಮ : ದೇವರ ಮನೆಯಲ್ಲಿ, ಅಲ್ಲಿ ನೋಡು, ನಂಜನಗೂಡು ಶ್ರೀಕಂಠೇಶ್ವರ ಪಟ; ಅದು ದೇವರು. ರಾಮ ಕೃಷ್ಣ ಎಲ್ಲ ದೇವರು. ನಮ್ಮಂಥ ಪಾಪಿಗಳ ಕಣ್ಣಿಗೆ ದೇವರು ಕಾಣಿಸುತ್ತಾನೆಯೇ ಅಪ್ಪ.

ಚಂದ್ರ : ಹಾಗಾದರೆ ಯಾರ ಕಣ್ಣಿಗೆ ಕಾಣಿಸುತ್ತಾನಮ್ಮ?

ನಂಜಮ್ಮ : ದೇವರ ಸೇವೆಮಾಡಿದವರಿಗೆಲ್ಲ ದೇವರು ಒಂದಲ್ಲ ಒಂದು ರೀತಿ ಕಾಣಿಸಿಕೊಳ್ಳುತ್ತಾನೆ.

ಚಂದ್ರ : ನಾನು ದೇವರ ಸೇವೆ ಮಾಡಬೇಕೆಂದಿದ್ದೇನಮ್ಮ; ಬಡ ಬಗ್ಗರ ಸೇವೆ, ತಿರುಕರ ಸೇವೆ, ಅಶಕ್ತರ ಸೇವೆ, ಅಜ್ಞಾನಿಗಳ ಸೇವೆ, ಸಮಾಜದ ಸೇವೆ–ಇದೇ ದೇವರ ಸೇವೆ ಕಣಮ್ಮ. ಅಪ್ಪನ ದೇವರ ಪೂಜೆ, ದೇವರ ಸೇವೆ ಇವು ನನಗೆ ಬೇಕಿಲ್ಲವಮ್ಮ.

ನಂಜಮ್ಮ : ರಾಮ ರಾಮ! (ಎಂದು ಕಿವಿಮುಚ್ಚಿಕೊಳ್ಳುವಳು).

ಚಂದ್ರ : ಹೋಗಲಮ್ಮ, ನಿನ್ನ ಮನಸ್ಸು ಏಕೆ ನೋಯಿಸಲಿ. ಈ ವಿಚಾರ ಬೇಡ ಈಗ.

ನಂಜಮ್ಮ : ಬೇರೆ ವಿಚಾರ ಒಂದಿದೆ ಮಗು.

ಚಂದ್ರ : ಏನಮ್ಮ?

ನಂಜಮ್ಮ : ನೋಡು, ಚಂದು ; ನನಗೂ ವಯಸ್ಸಾಗುತ್ತ ಬಂತು. ನೆರವಿಗೆ ಯಾರೂ ಇಲ್ಲ. ಮನೆಯಲ್ಲಿ ಹಬ್ಬ ಹುಣ್ಣಿಮೆ ಆದರೆ ಬಿಮ್ಮೆನ್ನುತ್ತೆ. ನೀನು ಒಪ್ಪಿದರೆ –

ಚಂದ್ರ : ನಿನ್ನ ತಮ್ಮನ ಮಗಳು ಗೌರೀನ ಮದುವೆಮಾಡಿಕೊಳ್ಳಬೇಕು. ಅಲ್ಲವೆ?

ಬಾಹಿರವಾಗಿದ್ದೀಯ, ಕಳಂಕ ಪ್ರಾಯವಾಗಿದ್ದೀಯ. ನಿನಗೆ ಕಲಿಸಿದ ವಿದ್ಯೆಯೆಲ್ಲ ಬೋರೆ ಕಲ್ಲ ಮೇಲೆ ಮಳೆಗರೆದಂತಾಯಿತು. ವಿಪರೀತ ವಿದ್ಯೆ, ಕೆಲಸವಿಲ್ಲ, ಕಾರ್ಯವಿಲ್ಲ. ಶುದ್ಧ ಸೋಮಾರಿಯಾಗಿ ಬೀದಿ ಬೀದಿ ಅಲೆದುಕೊಂಡು ಮನಸ್ಸು ಬಂದಂತೆ ಇದ್ದೀಯೆ, ಮೊನ್ನೆ ನಮ್ಮ ಮನೆ ಪುರೋಹಿತರು ಹೇಳಿದರು.

"ನಿಮ್ಮ ಮಗನ ವರ್ತನೆ ನಮಗೆ ಸರಿಯಾಗಿ ತೋರುವುದಿಲ್ಲ. ಅವನನ್ನು ಒಳ್ಳೆಯ ದಾರಿಗೆ ತರದೆ ಹೀಗೇ ಬಿಟ್ಟುಕೊಂಡಿದ್ದರೆ ನಿಮ್ಮ ಮನೆಯ ಶ್ರಾದ್ಧಕರ್ಮಾದಿಗಳಿಗೆ ನಾನು ಬರುವುದಿಲ್ಲ. ಕುಲಗೆಟ್ಟವರು ಬಂದು ಮಾಡಿಸಲಿ" ಎಂದರು. ಆಗಿನಿಂದ ನನ್ನ ಹೊಟ್ಟೆ ಉರಿಯುತ್ತಿದೆ. (ಚಂದು ಬೇರೆಯ ಕಡೆ ತಿರುಗಿ ಕೊಂಡಿರುವನು). ಚಂದೂ, ಇಲ್ಲಿ ಕೇಳು; ನೀನು ಸ್ವಂತವಾಗಿ ಸಂಪಾದಿಸುವ ಹಾಗಾದ ಮೇಲೆ, ನಾನು ಸತ್ತ ಮೇಲೆ ನಿನಗೆ ಇಷ್ಟ ಬಂದ ಹಾಗೆ ಇರು. ನನಗೆ ತಿಥೀನೂ ಮಾಡಬೇಡ, ತಿಳಿಯಿತೆ. ನಾನು ಬದುಕಿರುವಾಗ, ನನ್ನ ಮನೆಯಲ್ಲಿ ಇರುವವರೆಗೂ, ನಾನು ಹೇಳಿದ ಹಾಗೆ ಕೇಳಿಕೊಂಡು, ಹಾಕಿದ್ದನ್ನ ತಿಂದುಕೊಂಡು ಬಿದ್ದಿರಬೇಕು. ಇದೇ ಕಡೆಯ ಸಾರಿ. ಇಂಥ ಅವಾಚ್ಯಕ್ಕೆಲ್ಲ ಇನ್ನು ಅವಕಾಶ ಕೊಡಬೇಡ. (ಚಂದ್ರಶೇಖರ ಮೌನವಾಗಿಯೇ ಇರುವನು).

ನಂಜಮ್ಮ : ಸ್ನಾನಕ್ಕೆ ಹೋಗಿ ಅಂದ್ರೆ, ಹೊತ್ತಾಯಿತು.

ಶ್ರೀಕಂಠ : ಇವನ ಯೋಚನೆಯಲ್ಲಿ ಪ್ರಾತಃಕರ್ಮವೆಲ್ಲ ಹಾಳಾಗಿ ಹೋಯಿತು. ಎಲ್ಲ ಪ್ರಾರಬ್ಧಕರ್ಮ (ಎನ್ನುತ್ತ ಒಳಕ್ಕೆ ಹೋಗುವನು.)

ನಂಜಮ್ಮ : ಮಗೂ

ಚಂದ್ರ : ಏನಮ್ಮ?

ನಂಜಮ್ಮ : ಅವರು ಯಾವಾಗಲೂ ಮುಂಗೋಪಿಗಳು. ಅವರ ಮಾತು ಕಟ್ಟಿಕೊಂಡೇನು? ನಾನು ಹೇಳುವುದು ಕೇಳು ಮಗು.

ಚಂದ್ರ : ಏನಮ್ಮ ನೀನು ಹೇಳುವುದು; ನನ್ನ ಮನಸ್ಸು ನೀನು ಅರಿಯೆ.

ಮೂರ್ತಿ : ಮತ್ತೆ ಪಾರ್ಕಿಗೆ? ಈ ಹೊತ್ತಿನಲ್ಲಿ? ಊಟಾ ಇಲ್ಲ, ಪಾರ್ಕೆ ನಿನ್ನ ಮನೆಯಾಗಿ ಬಿಟ್ಟಿದೆ. ಒಳಕ್ಕೆ ಬಾ, ಊಟಮಾಡಿಕೊಂಡು ಹೋಗುವೆಯಂತೆ.

ಚಂದ್ರ : ಇಲ್ಲ ಮೂರ್ತಿ, ಪಾರ್ಕಿನಲ್ಲಿ ತಂಗಮ್ಮ – ನನ್ನ ತಂಗಿ – ತಿರುಕರ ಹುಡುಗಿ ಕಾದಿರುತ್ತಾಳೆ. ಅವಳನ್ನ ಮನೆಗೆ ಊಟಕ್ಕೆ ಕರೆದುಕೊಂಡು ಹೋಗಲು ಬಂದೆ.

ಮೂರ್ತಿ : ಏನಂದೆ ?

ಚಂದ್ರ : ಆಶ್ವರ್ಯವೇಕೆ?

ಮೂರ್ತಿ : ನಿಮ್ಮ ತಂದೆ ತಾಯಿ ಸುಮ್ಮನಿರುತ್ತಾರೆಯೆ?

ಚಂದ್ರ : ಸುಮ್ಮನಿದ್ದರೆ ಇರಲಿ, ಬಿಟ್ಟರೆ ಬಿಡಲಿ. ಇವೊತ್ತು ಅವಳಿಗೆ ಸಹ ಪಂಕ್ತಿ ಭೋಜನ ಮಾಡಿಸುತ್ತೇನೆ. ಇಲ್ಲದಿದ್ದರೆ ಉಪವಾಸವಿರುತ್ತೇನೆ.

ಮೂರ್ತಿ : ಏನು ಚಂದು ನೀನು ಹೇಳುವುದು!

ಚಂದ್ರ : ಹೌದು ಮೂರ್ತಿ, ನನ್ನ ಆದರ್ಶವನ್ನು, ಬರಿಮಾತನ್ನು ಇವೊತ್ತು ಕಾರ್ಯಕ್ಕೆ ತಿರುಗಿಸುತ್ತೇನೆ.

ಮೂರ್ತಿ : ಚಂದೂ ನನಗೆ ಯಾವ ಆದರ್ಶವೂ ಇಲ್ಲ; ನಾನು ಸುಖವಾಗಿರಬೇಕು ನೀನು ಸುಖವಾಗಿರಬೇಕು ಎಲ್ಲರೂ ಸುಖವಾಗಿರಬೇಕು ಎನ್ನುವುದೇ ನನ್ನ ಆದರ್ಶ. ಇದುವರೆಗೂ ನಿನ್ನ ಆದರ್ಶಗಳನ್ನು ಕೇಳಿ ನಾನೂ ಮೆಚ್ಚಿದ್ದೆ. ಆದರೆ ಅದನ್ನು ನೀನು ಕಾರ್ಯರೂಪಕ್ಕೆ ತಿರುಗಿಸುವ ಪ್ರಾರಂಭ ಸುಮುಖವಾಗಿರುವಂತೆ ನನಗೆ ತೋರುವುದಿಲ್ಲ. ನಿನ್ನ ನಿಶ್ಚಯ ಕೇಳಿ ನಿದ್ದೆಯಲ್ಲಿ ಕೆಟ್ಟ ಕನಸು ಕಂಡಂತಾಗಿದೆ.

ಚಂದ್ರ : ನಿನ್ನ ಮಾತು ಕೇಳಿ ನನಗೆ ಆಶ್ಚರ್ಯವಾಗುತ್ತದೆ, ಮೂರ್ತಿ.

ಮೂರ್ತಿ : ನಿನಗೆ ಆಶ್ಚರ್ಯವಾಗಬಹುದು. ಈಗ ನನಗೆ ಬೇರೆ ರೀತಿ ಕಾಣುತ್ತಿದೆ! ನೀನು ಮಾಡುವ ಕೆಲಸದಿಂದ ಮನೆಯಲ್ಲಿ ನಿನಗೆ ಸುಖವಿಲ್ಲ, ಅದಕ್ಕೆ ಹೊರಗೆ ಯಾರೂ ಬೆಲೆ ಕೊಡುತ್ತಾರೆಯೋ ಇಲ್ಲವೋ ಕಾಣೆ. ನನ್ನ ಮಾತು ಕೇಳು ಚಂದು – ಒಂದು ಗೊತ್ತು ಗುರಿ ಹಿಡಿದು ಕೆಲಸ ಸಾಧಿಸು. ತಿರುಕರ ಹುಡುಗಿಗೆ ಹೊರಗೆ ಅನ್ನ ಹಾಕಿದರೂ ಅವಳ ಹೊಟ್ಟೆ ತುಂಬುತ್ತೆ, ಒಳಗೆ ಹಾಕಿದರೂ

ನಂಜಮ್ಮ : ಏಕೆ ಮಗು, ಗೌರಿ ಚೆನ್ನಾಗಿಲ್ಲವೆ? ಒಳ್ಳೆರೂಪು, ಒಳ್ಳೆ ಗುಣ.

ಚಂದ್ರ : ಈ ಮದುವೆಯ ವಿಚಾರ ಸಾಕಮ್ಮ.

ನಂಜಮ್ಮ : ಏಕೆಮಗು, ಮದುವೆ ಮಾಡಿಕೊಳ್ಳುವುದಿಲ್ಲವೆ?

ಚಂದ್ರ : ಮಾಡಿಕೊಳ್ಳುತ್ತೇನೆ ; ನನಗೆ ಇಷ್ಟ ಬಂದಾಗ.

ನಂಜಮ್ಮ : ಇಷ್ಟ ಬಂದಾಗಲೇ ಮಾಡಿಕೊ,ಬೇಡ ಅಂದವರು ಯಾರು – ಗೌರಿಗೂ ಇನ್ನೂ ಚಿಕ್ಕ ವಯಸ್ಸು. ಅದು ಹೋಗಲಿ. ಇವತ್ತು ಸೋಮವಾರ, ಸ್ನಾನಮಾಡಿ ಒಂದಿಷ್ಟು ಸಂಧ್ಯಾವಂದನೆ ಮಾಡು. ಏಳು, ಅವರೂ ಇನ್ನೇನು ಪೂಜೆಗೆ ಕುಳಿತಿದ್ದಾರೆ.

ಚಂದ್ರ : ಬ್ರಾಹ್ಮಣಿಕೆಯನ್ನು ಭದ್ರವಾಗಿಟ್ಟುಕೊಳ್ಳುವುದಕ್ಕೆ ಸೋಮ ಸೋಮವಾರವಾದರೂ ಸಂಧ್ಯಾವಂದನೆ ಮಾಡಬೇಕು ಅಲ್ಲವೆ ಅಮ್ಮ?

ನಂಜಮ್ಮ : ಎತ್ತಲಾಗಾದರೂ ಹೋಗಪ್ಪ. ನಿನಗೆ ಯಾರು ಹೇಳೋರು. ಸ್ನಾನವಾದರೂ ಮಾಡುತ್ತೀಯೋ ಇಲ್ಲ ಅದೂ ಇಲ್ಲವೋ?

ಚಂದ್ರ : ಸ್ವಲ್ಪ ಬಂದೆ ಕಣಮ್ಮ, ಮೂರ್ತಿ ರೂಮಿಗೆ ಹೋಗಿಬಿಟ್ಟು ಬರುತ್ತೇನೆ. ಒಬ್ಬರಿಗೆ ಹೆಚ್ಚಾಗಿ ಅಡಿಗೆ ಮಾಡಿರಮ್ಮ.

ನಂಜಮ್ಮ : ಮೂರ್ತಿ ಊಟಕ್ಕೆ ಬರುತ್ತಾನೆಯೇನೋ?

ಚಂದ್ರ : ಯಾರೋ ಒಬ್ಬರು (ಎಂದು ಹೇಳುತ್ತ ಹೊರಟು ಹೋಗುವನು)

ನಂಜಮ್ಮ : ಅವನು ಹೋದ ದಾರಿಗೆ ಬಿಡುವುದು ಒಳ್ಳೆಯದು. ಎಲ್ಲಾದರೂ ತಣ್ಣಗೆ ಬದುಕಿರಲಿ (ಎಂದು ಒಳಕ್ಕೆ ಹೋಗುವಳು.)

– ತೆರೆ ಬೀಳುವುದು –

**ನೋಟ – ೨**

[ಬೀದಿ: ಮೂರ್ತಿಯ ಮನೆಯ ಮುಂದೆ]

ಚಂದ್ರ : (ಹೊರಗೆನಿಂತು) ಮೂರ್ತಿ, ಮೂರ್ತಿ.

ಮೂರ್ತಿ : (ಮನೆಯೊಳಗಿಂದ ಬಂದು) ಇದೇನು ಇಷ್ಟು ಹೊತ್ತಿನಲ್ಲ? ಊಟ ಆಯಿತೆ?

ಚಂದ್ರ : ಇಲ್ಲ. ಪಾರ್ಕಿನ ಕಡೆಗೆ ಹೊರಟೆ, ಹಾಗೇ ನೋಡಿಕೊಂಡು ಹೋಗೋಣ ಅಂತ ಬಂದೆ.

ಆ ಮಹಾಜ್ಯೋತಿಗಳು ಎಂದೆಂದೂ ಪ್ರಜ್ವಲಿಸುತ್ತಿರುವುದು; ನಾನೊಂದು ಬಡಹಣತೆ, ಆ ಜ್ಯೋತಿಯಿಂದ ಕಿಡಿಗೊಂಡ ಹಣತೆ, ತನ್ನಕೈಲಾದ ಸೇವೆ ಮಾಡುವುದೇ ಅದರ ಧರ್ಮ. ಮಾತಿನ ಪಂಜರದಲ್ಲಿ ಸಿಕ್ಕಿರುವವರೆಗೂ ಆದರ್ಶಕ್ಕೆ ಗೊತ್ತುಗುರಿಯಿರುವುದೇ ಇಲ್ಲ; ಅದನ್ನು ಕಾರ್ಯರಂಗಕ್ಕೆ ಹಾರಬಿಟ್ಟರೆ ತನ್ನ ಗೊತ್ತುಗುರಿಯನ್ನು ಕಂಡುಕೊಳ್ಳುವುದು. ಆದರ್ಶಪಕ್ಷಿಯನ್ನು ಹಾರಬಿಟ್ಟಾಗ, ಮೊದಲ ಉತ್ಸಾಹದಲ್ಲಿ, ಮುಗಿಲುಮುಟ್ಟುವವರೆಗೆ ಹಾರುವುದು ಅದರ ಸ್ವಭಾವ; ಅಂತೆಯೇ ಬೇಗ ಸೋಲುವುದೂ ಅದರ ಸ್ವಭಾವ, ಅನುಭವದ ಅಳತೆ ಗೊತ್ತಾದ ಮೇಲೆ ಅದರ ಗೊತ್ತುಗುರಿಯೂ ನೆಲೆಯೂ ಸಿಕ್ಕುವುವು. ಆದರ್ಶ ಪಕ್ಷಿಯನ್ನು ಇಂದು ಹಾರ ಬಿಡುತ್ತೇನೆ; ಹಾರಲಿ, ಮೇಲೇರಲಿ; ರೆಕ್ಕೆ ಮುರಿಯಲಿ, ರಕ್ತ ಬಸಿಯಲಿ, ಮಡಿಯಲಿ, ಆದರೆ ಹಾರುವ, ಹಾರುವ ಪಕ್ಷಿ ಹಾರಲಿ, ಪಂಜರದ ಬಂಧನ ಬೇಡ. (ಎಂದು ಇದ್ದಕ್ಕಿದ್ದಂತೆ ಹೊರಟು ಹೋಗುವನು).

– ತೆರೆ ಬೀಳುವುದು –

**ನೋಟ – ೩**

[ಶ್ರೀಕಂಠಶರ್ಮನ ಮನೆಯ ಹಜಾರ. ಮಧ್ಯಾಹ್ನ ೧೨.೦೦ ಘಂಟೆಯ ಸಮಯ ಶ್ರೀಕಂಠಶರ್ಮ ಕೃಷ್ಣಾಜಿನದ ಮೇಲೆ ಕುಳಿತು 'ರಾಮಾಯಣ' ಪಾರಾಯಣ ಮಾಡುತ್ತಿದ್ದಾನೆ. ನಂಜಮ್ಮ ಸ್ವಲ್ಪ ದೂರದಲ್ಲಿ ಕುಳಿತು 'ಹೂಬತ್ತಿ' ಮಾಡುತ್ತಿದ್ದಾಳೆ.]

ಶ್ರೀಕಂಠ : (ಪಾರಾಯಣ ನಿಲ್ಲಿಸಿ) ಚಂದೂ ಎಲ್ಲಿ ಹೋದನೆ ಹಾಳಾಗಿ?

ನಂಜಮ್ಮ : ಮೂರ್ತಿ ರೂಮಿಗೆ ಹೋಗಿ ಬರುತ್ತೀನಿ ಅಂತ ಹೋದ. ಸ್ನಾನ ಕೂಡ ಮಾಡಿಲ್ಲ.

ಶ್ರೀಕಂಠ : ಕೂಳು ತಿನ್ನುವುದಕ್ಕೆ ಬಂದಾಗ ಮಾಡುತ್ತಾನೆ. ಇಷ್ಟರ ಮೇಲೆ ಇಲ್ಲದಿದ್ದರೆ ಇಲ್ಲ. ಅವನಿಗೇಕೆ ಆ ಹೊಲೆಯನಿಗೆ ಸ್ನಾನ. ಹೋಗಿ ಎಲೆ ಹಾಕು. ನಾನೂ ಇನ್ನೇನು ಈ ಸರ್ಗ ಪೂರೈಸಿ ಮಧ್ಯಾಹ್ನಿಕಕ್ಕೆ ಏಳುತ್ತೇನೆ.

[ನಂಜಮ್ಮ ಎದ್ದು ಹೋಗುವಳು.]

ತುಂಬುತ್ತೆ, ವೃಥಾ ನಿಮ್ಮ ತಂದೆ ತಾಯಿಯ ಮನಸ್ಸು ಏಕೆ ನೋಯಿಸುತ್ತಿ? ಶಶಿವದನೆಯ ವಿಚಾರವೂ ಅಷ್ಟೆ. ನೀನು ಒಂದು ನೆಲೆಯಲ್ಲಿ ನಿಂತ ಮೇಲೆ ಅವಳನ್ನು ಮದುವೆಯಾಗು – ಬೇಡ ಅಂದವರು ಯಾರು. ಅವಳ ವಿಚಾರ ನಿಮ್ಮ ತಂದೆ ತಾಯಿಗೆ ಈಗಲೇ ಹೇಳಿ ಏಕೆ ಅವರ ಮನಸ್ಸು ಚುಚ್ಚುತ್ತೀಯೆ? ಅವರ ಸ್ಥಾನದಲ್ಲಿ ನಿಂತು, ಅವರ ಹೃದಯ ಏನು ನುಡಿಯುತ್ತಿದೆ ಎನ್ನುವದನ್ನು ನೀನು ಅರಿತುಕೊಳ್ಳಬೇಡವೆ? ಇನ್ನೂ ಕೆಲವು ಕಾಲ ಮನೆಯಲ್ಲಿ ಸಮಾಧಾನದಿಂದ ಇರು ಚಂದು : ಒಂದು ಕೆಲಸ ಸಿಕ್ಕಿದ ಮೇಲೆ – ಸಂಪಾದಿಸುವ ಹಾಗಾದ ಮೇಲೆ – ಅಂದ ಹಾಗೆ ; ಒಂದು ಕೆಲಸ..... ಪ್ರಯತ್ನ ಪಟ್ಟು.......

ಚಂದ್ರ : ಮೂರ್ತಿ, ಮೂರ್ತಿ, ಸಾಕು; ಸಾಕು. ಕೆಲಸವಂತೆ, ಕೆಲಸ, ಪ್ರಯತ್ನ ಪಡುವುದು; ಲಂಚ, ಹಲ್ಲುಗಿರಿತ, ಸಾಷ್ಟಾಂಗ ನಮಸ್ಕಾರ, ಪಾದಸೇವಕ! ಜೊತೆಗೆ ಹಣೆಯ ಮೇಲೆ ಬ್ರಾಹ್ಮಣಿಕೆಯ ಹುಟ್ಟುಬರೆ ! – ಈ ಕೋಟೆಗಳನ್ನೆಲ್ಲ ಹಾರಿ ಕೆಲಸ ಸಂಪಾದಿಸಬೇಕು!

ಮೂರ್ತಿ : ಹೌದು ಚಂದು. ಅವುಗಳನ್ನು ದಾಟಲೇಬೇಕು. ಕಳ್ಳರ ಸಂತೆಯಲ್ಲಿ ನೀನೂ ಕಳ್ಳನಾಗಬೇಕು. ಹೃದಯದಲ್ಲಿ ಬೆಂಕಿ ಉರಿಯುತ್ತಿದ್ದರೂ ನಗೆಯನ್ನು ನಟಿಸಬೇಕು. ಜಾತಿಮತಗಳ ಕಟ್ಟುಗಳಿಗೆ ಸಿಲುಕಿರುವವರ ನಡುವೆ, ನಿನಗೆ ಜಾತಿ ಮತಗಳು ಬೇಕಿಲ್ಲದಿದ್ದರೂ, ಅವುಗಳ ವೇಷವ್ನನಾದರೂ ಧರಿಸಬೇಕು. ಆಗ ಸುಖವಾಗಿರಬಹುದು. ನಿನ್ನ ಉಚ್ಚ ಆದರ್ಶಗಳು ಎಷ್ಟು ಜನಕ್ಕೆ ಅರ್ಥವಾದಾವು? ರಾಮಕೃಷ್ಣಪರಮಹಂಸ, ಸ್ವಾಮಿವಿವೇಕಾನಂದ, ಮಹಾತ್ಮಾಗಾಂಧಿ – ಇಂಥ ಮಹಾಮಹಿಮರ ಮಾತನ್ನೇ ನಮ್ಮ ಸಮಾಜ ಇನ್ನೂ ಕಿವುಡುಗೇಳುತಿದೆ, ನಿನ್ನ ಮಾತು ಯಾರು ಕೇಳುತ್ತಾರೆ ಚಂದು? ಹೀಗೆ ಹೇಳುತ್ತೀನಿ ಅಂತ ಕೋಪಿಸಿಕೊಳ್ಳಬೇಡ ಚಂದು.

ಚಂದ್ರ : ಅಂಥ ಮಹಾಮಹಿಮರ ಉಪದೇಶವನ್ನು ಕೇಳಿದ ನನ್ನಂಥವರು ಅನೇಕರು ಸುಖಮಗ್ನರಾಗಿ ಕಾರ್ಯ ವಿಮುಖರಾದದ್ದರಿಂದಲೇ ನಮ್ಮ ಸಮಾಜವಿನ್ನೂ ಕುಂಭಕರ್ಣ ನಿದ್ರೆಯಲ್ಲಿ ಮಲಗಿರುವುದು;

ನಾಗೇಂದ್ರ : ಜೊತೆಯಲ್ಲಿ ಓದುವವರು ಅಂತ ಆ ಜೊತೆಗಾತಿ, ಅವಳ ಹೆಸರು ಶಶಿವದನೆ; ಕ್ರಿಶ್ಚಿಯನ್ ಹುಡುಗಿ.

ಶ್ರೀಕಂಠ : ಕಿರಿಸ್ತಾನದವಳು! ಕಿರಿಸ್ತಾನರ ಹುಡುಗಿ! ಸರ್ವನಾಶವಾಯಿತು! ಲೇ, ಲೇ! ಸರ್ವನಾಶ, ಬಾ ಇಲ್ಲಿ (ಎಂದು ಕೂಗುವನು) ಅವನ ಜೊತೆಗಾತಿ ಕಿರಿಸ್ತಾನರ ಹುಡುಗಿಯೇ? ಸರ್ವನಾಶವಾಯಿತು!

ನಂಜಮ್ಮ : (ಒಳಗಿನಿಂದ ಬಂದು – ಗಾಬರಿಯಾಗಿ) ಏನೂ ಅಂದ್ರೆ.

ಶ್ರೀಕಂಠ : ನಿನ್ನ ಪುತ್ರ ಕಿರಸ್ತಾನದವಳೊಬ್ಬಳನ್ನು ಕಟ್ಟಿಕೊಂಡಿದ್ದಾನಂತೆ. ಕೇಳಿ ಹೊಟ್ಟೆಗೆ ಹಾಲು ಹುಯ್ದುಕೋ. ಈಗ ತಿಳಿಯಿತು, ಅವನು ಮನೆಗೆ ಸೇರದಿದ್ದುದಕ್ಕೆ ಕಾರಣ. ಈಚೀಚೆಗಂತೂ ಮನೆಯಕಡೆ ತಲೆಯನ್ನೇ ಹಾಕುತ್ತಾ ಇಲ್ಲ. ನಿನ್ನೆ ರಾತ್ರಿಯೆಲ್ಲ–

ನಂಜಮ್ಮ : ಇದೇನೂ ಅಂದ್ರೆ !

ನಾಗೇಂದ್ರ : ನಾನೂ ಅದನ್ನೇ ತಿಳಿಸಿ ಹೋಗೋಣ ಅಂತ ಬಂದೆ, ಅಷ್ಟೆ. ಅವಳು ಹಾಗಿರಲಿ, ನಿನ್ನೆ ಸಾಯಂಕಾಲ ಪಾರ್ಕಿನಲ್ಲಿ ಉದ್ಯಾನ ತೋಟದಲ್ಲಿ ಒಬ್ಬ ತಿರುಕರ ಹುಡುಗಿಯನ್ನು ಕಂಡ.

ಶ್ರೀಕಂಠ : ತಿರುಕರ ಹುಡುಗಿಯೇ!

ನಾಗೇಂದ್ರ : ನನ್ನ ಬಳಿ ಒಂದು ರೂಪಾಯಿ ಸಾಲ ತೆಗೆದುಕೊಂಡ. ಅವಳಿಗೆ ಕೊಟ್ಟ ಎಂದು ಕಾಣುತ್ತೆ. ರಾತ್ರಿಯೆಲ್ಲ ಮನೆಗೆ ಬರಲಿಲ್ಲ ಎಂದು ನೀವೇ ಹೇಳುತ್ತೀರಲ್ಲ. ಪಾರ್ಕಿನಲ್ಲಿಯೇ ಆ ತಿರುಕಿಯ ಜೊತೆಯೇ ಇದ್ದನೋ – ಇಲ್ಲ, ಅಲ್ಲಿಂದ ಶಶಿವದನೆಯ ಮನೆಗೆ ಹೋಗಿ – ಅಲ್ಲಿಯೇ – –

ಶ್ರೀಕಂಠ : (ಎರಡು ಕಿವಿಗಳನ್ನೂ ಮುಚ್ಚಿಕೊಂಡು) ಶಾಂತಂ ಪಾಪಂ! ಶಾಂತಂಪಾಪಂ! ಸಾಕಪ್ಪ ಸಾಕು ಕೊಚ್ಚೆಗೆ ಕಲ್ಲು ಎಸೆದ ಹಾಗೆ ಹೆಚ್ಚು ಹೇಳುವುದು ಬೇಡ ಇನ್ನು. ಅಯ್ಯೋ ಚಂಡಾಲ, ಕಲಘಾತಕಾ! ಪಾಪೀ! (ಹೆಂಡತಿಯ ಕಡೆಗೆ ತಿರುಗಿ) ಕೇಳಿದೆಯಾ ನಿನ್ನ ಸತ್ಪುತ್ರನ ಚರಿತ್ರೆ? ಈಗ ಮನೆಗೆ ಬರಲಿ. ಮನೆಬಿಟ್ಟು ಹೊರಡಿಸದಿದ್ದರೆ ನನ್ನ ಹೆಸರು ಶ್ರೀಕಂಠಶರ್ಮನಲ್ಲ, ಮಗೂ, ನೀನು ಹೊರಡು. ಬಹಳ ಉಪಕಾರಮಾಡಿದ್ದಿ, ಹೊರಡಪ್ಪ.

ನಾಗೇಂದ್ರ : ಉಪಕಾರವೇನು ಹೇಳಿ ಉಪಕಾರ. ನಾನೂ ಅವನಿಗೆ ಹೇಳಿ

(ಒಂದು ಶ್ಲೋಕ ಓದಿ ನಿಲ್ಲಿಸಿ) ಚಂಡಾಲ, ಶುದ್ಧ ಚಂಡಾಲ. ದೇವರೆನ್ನುವ ಭಕ್ತಿ ಇಲ್ಲ; ಮಾತಾ ಪಿತೃಗಳ ಮೇಲೆ ಭಕ್ತಿಯಿಲ್ಲ, ಸಂಪಾದಿಸುವ ಶಕ್ತಿಯಿಲ್ಲ, ಇದಕ್ಕೆಲ್ಲ ಒಂದೇ ಉಪಾಯ; ಮನೆ ಬಿಟ್ಟು ಹೊರಡಿಸಿದರೆ ಆಗ ಬುದ್ಧಿ ಬರುತ್ತೆ, ಅಬ್ಬಬ್ಬ, ಕಲಿಗಾಲ, ಕಲಿಗಾಲ, (ಎಂದು ಶ್ಲೋಕ ಓದಲು ಪ್ರಾರಂಭಿಸುವನು.)

[ಅಷ್ಟರಲ್ಲಿ ನಾಗೇಂದ್ರ ಪ್ರವೇಶಿಸುವನು.]

ನಾಗೇಂದ್ರ : ಚಂದ್ರಶೇಖರ್

ಶ್ರೀಕಂಠ : (ಶ್ಲೋಕಪಠನ ಮಾಡುತ್ತಲೇ ಇರುವನು)

ನಾಗೇಂದ್ರ : ಚಂದ್ರಶೇಖರ ಇದಾನೆಯೇ?

ಶ್ರೀಕಂಠ : (ಕತ್ತೆತ್ತಿ ನೋಡಿ) ಯಾರಪ್ಪ?

ನಾಗೇಂದ್ರ : ನಾನು, ನಾಗೇಂದ್ರ, ಚಂದ್ರಶೇಖರನ ಸ್ನೇಹಿತ. ಅವನು ಇನ್ನೂ ಮನೆಗೆ ಬಂದಿಲ್ಲವೋ?

ಶ್ರೀಕಂಠ : ಅವನ ಸ್ನೇಹಿತ ಮೂರ್ತಿಯ ರೂಮಿಗೆ ಹೋಗಿದ್ದಾನೆ. ಇನ್ನೂ ಬಂದಿಲ್ಲ. ಇನ್ನೇನು ಬರುವ ಹೊತ್ತು; ಊಟಕ್ಕಾದರೂ ಬರಬೇಕಲ್ಲ. ನೀನು ಯರು, ನೋಡಿದ ಹಾಗೆ ನೆನಪಿಲ್ಲ?

ನಾಗೇಂದ್ರ : ನಾನೂ ಅವನ ಸ್ನೇಹಿತನೇ.

ಶ್ರೀಕಂಠ : ಅವನಿಗೆ ಬಹುಮಂದಿ ಸ್ನೇಹಿತರು ಇರುವ ಹಾಗೆ ಕಾಣುತ್ತೆ. ಮನೆ ಬಿಟ್ಟರೆ ಊಟದ ಹೊತ್ತಿಗೇ ಮನೆಗೆ ಬರುವುದು.

ನಾಗೇಂದ್ರ : ಅವನು ನನ್ನ ಜೊತೆ ಅಷ್ಟು ಸೇರುವುದಿಲ್ಲ ಅನ್ನಿ. ಅವನ ಜೊತೆಗಾರರು ಯಾರು ಎನ್ನುವುದು ನಿಮಗೆ ಅಷ್ಟು ತಿಳಿಯದು ಅನ್ನುವ ಹಾಗೆ ಕಾಣುತ್ತೆ. ತಿಳಿದಿದ್ದರೆ ಸ್ವಲ್ಪ–

ಶ್ರೀಕಂಠ : ತಿಳಿದಿದ್ದರೆ ನನಗೇನಾಗಬೇಕಾಗಿದೆ, ಹೇಳು.

ನಾಗೇಂದ್ರ : ತಿಳಿದಮೇಲೆ ಏನಾದರು ಒಂದು ಯೋಚನೆ ಮಾಡಬಹುದು. ಅವನ ಮುಖ್ಯ ಜೊತೆಗಾರ –

ಶ್ರೀಕಂಠ : ಆ ಮೂರ್ತಿ, ನನಗೆ ಸಭ್ಯನಾಗಿಯೇ ಕಾಣುತ್ತಾನೆ.

ನಾಗೇಂದ್ರ : ಅವನು ಸಭ್ಯನೇ ಹೌದು. ಜೊತೆಗಾರನಲ್ಲ; ಮರತೆ – ಜೊತೆಗಾತಿ.

ಶ್ರೀಕಂಠ : ಜೊತೆಗಾತಿ !

ನಾಗೇಂದ್ರ : ಹೌದು, ಜೊತೆಗಾತಿ. ಅವನ ಕ್ಲಾಸ್–ಮೇಟ್.

ಶ್ರೀಕಂಠ : ಹಾಗಂದರೆ?

ಮಾಡುವುದು ಸರಿಯಲ್ಲ ಅಂದ್ರೆ, ನಮ್ಮ ಚಂದೂ ಹಾಗೆಲ್ಲ ಮಾಡಲಾರ ಅಂದ್ರೆ, ನಿಧಾನವಾಗಿ ವಿಚಾರಿಸಬಾರದೆ, ನಮ್ಮ ಚಂದು ಎಂದೂ ಸುಳ್ಳು ಹೇಳಿಲ್ಲ.

ಶ್ರೀಕಂಠ : ಈ ಹುಡುಗನ ಮಾತು ಸುಳ್ಳೋ? ಸುಳ್ಳು ಹೇಳಿ ಅವನಿಗೆ ಏನು ಲಾಭ?

ನಂಜಮ್ಮ : ಏನು ಲಾಭವೋ ಯಾರಿಗೆ ಗೊತ್ತು.

ಶ್ರೀಕಂಠ : ನೋಡು, ನೀನು ಸದಾ ಅವನ ಕಡೆಯೇ ವಹಿಸಿಕೊಂಡು ಮಾತನಾಡುತ್ತಿ. ಅದಕ್ಕೆ ಅವನು ಇಷ್ಟು ಕೊಬ್ಬಿರುವುದು. ನೀನು ಅವನನ್ನ ಹತೋಟಿಯಲ್ಲಿಟ್ಟುಕೊಂಡಿದ್ದರೆ ಅವನು ಹೀಗೇಕೆ ಆಗುತ್ತಿದ್ದ. (ತುಸು ಹೊತ್ತು ಸುಮ್ಮನಿದ್ದು) ಅಲ್ಲ, ಇನ್ನೂ ಮನೆಗೆ ಬರಬೇಡವೆ?

ನಂಜಮ್ಮ : ಎಲೆ ಹಾಕಿದೆ. ನೀವು ಬೇಕಾದರೆ ಏಳಿ. ನಾನು ಕಾದಿದ್ದು ಅವನಿಗೆ ಬಡಿಸುತ್ತೇನೆ.

ಶ್ರೀಕಂಠ : ಮತ್ತೆ ಅದೇ ಮಾತು. ಅವನಿಗೆ ಅನ್ನ ಹಾಕೀಯೆ ಜೋಕೆ. ಕಾಯುವುದೇನು. ನೀನೂ ಊಟಮಾಡಿಬಿಡು. ಅವನನ್ನ ಉಪವಾಸ ಕೆಡವಿ, ಮನೆ ಬಿಟ್ಟು ಓಡಿಸುವುದೇ ನಿಶ್ಚಯ. ಮೂರ್ತಿಯ ರೂಮಿಗೇ ಹೋಗಿದ್ದಾನೆಯೋ ಇಲ್ಲವೆ ಆ ಸೂಳೆಯ ಮನೆಗೇ ಹೋಗಿ ಅಲ್ಲಿಯೇ ಊಟ ಮಾಡುತ್ತಾನೆಯೋ ಯಾರಿಗೆ ಗೊತ್ತು.

ನಂಜಮ್ಮ : ಕಿರಿಸ್ತಾನ ಜಾತಿಯವರಾದ ಮಾತ್ರಕ್ಕೆ ಸೂಳೆಯಾಗುತ್ತಾಳೆಯೇ ಅಂದ್ರೆ, ನಮ್ಮ ಚೆಂದೂ ಅಷ್ಟು ಕೆಟ್ಟಿಲ್ಲ ಅಂದ್ರೆ, ಏನೋ ಜೊತೆಯಲ್ಲಿ ಓದಿದ ಹುಡುಗಿ, ಸಲುಗೆ. ಆ ಹುಡುಗಿಯ ತಂದೆ ತಾಯಿ ಇರಬಹುದು. ಅವರ ಜಾತಿಗೆ ತಕ್ಕ ಸಂಸ್ಕಾರ ಮರ್‍ಯಾದೆ ಅವರಲ್ಲಿಯೂ ಇರೋದೇ ಇಲ್ಲವೆ ? ಈ ಹುಡುಗನ ಮಾತು ಕೇಳಿ ದುಡುಕಬೇಡಿ ಅಂದ್ರೆ.

ಶ್ರೀಕಂಠ : ನಿನಗೇನು ಬುದ್ಧಿನೆಟ್ಟಗಿದೆಯೋ ಹೇಗೆ! ಅವಳನ್ನ ಸೊಸೆ ಅಂತ ತಿಳಿದು ಮಾತಾಡುತ್ತೀಯಲ್ಲ. ಅವಳ ವಿಚಾರ ಹೀಗೇ ಸರಿ ಅಂತ ನಾನು ಊಹಿಸಬಲ್ಲೆ; ಈಗಿನ ಕಾಲದ ವಿದ್ಯೆ ಕಲಿತವಳು, ಜೊತೆಗೆ ಕಿರಿಸ್ತಾನದವಳು. ಲಕ್ಷಣವಾಗಿಯೂ ಇರಬಹುದು,

ಹೇಳಿ ಸಾಕಾಯಿತು. ತಡೆಯಲಾರದೆ ನಿಮಗೆ ಹೇಳೋಣ ಅಂತ ಬಂದೆ. ಇನ್ನು ಹೊರಡುತ್ತೇನೆ. ಏನೋ ಚಾಡಿ ಹೇಳುವುದಕ್ಕೆ ಬಂದೆ ಅಂತ ಭಾವಿಸಬೇಡಿ, ಹೇಗಾದರೂ ಅವಳ ಜತೆ ತಪ್ಪಿ ಒಳ್ಳೆದಾರಿಗೆ ತೆಗೆದುಕೊಂಡು ಬರಬೇಕಾದ್ದು ನಿಮ್ಮ ಕರ್ತವ್ಯ ನೋಡಿ. ಅವಳ ಜೊತೆ ಚಂದ್ರಶೇಖರನಿಗೆ ತಪ್ಪ ಬೇಕೆಂಬುದೇ ನನ್ನ ಉದ್ದೇಶ. ವಿಷಯ ತಿಳಿಸೋಣ ಅಂತ ಬಂದೆ, ಅಷ್ಟೆ, ನನ್ನ ಕರ್ತವ್ಯ ಮುಗಿಯಿತು. ಇನ್ನು ಹೋಗಿ ಬರುತ್ತೇನೆ. ವಿಶ್ವಾಸ ಇರಬೇಕು.

ಶ್ರೀಕಂಠ : ಒಳ್ಳೆಯದಪ್ಪ

[ನಾಗೇಂದ್ರ ಹರೊಡುವನು.]

ಅಯ್ಯೋ ದೇವರೆ, ಅವನಿಗೆ ಈ ಬುದ್ಧಿ ಏಕೆ ಕೊಟ್ಟೆ. ಈ ಜಾತಿ ಭ್ರಷ್ಟನನ್ನು ಇನ್ನು ಮನೆಗೆ ಸೇರಿಸಿದರೆ ನನಗೂ ಬಹಿಷ್ಕಾರ ಹಾಕಿ ಬಿಡುತ್ತಾರೆ. ಸದ್ವಂಶದಲ್ಲಿ ಹುಟ್ಟಿದ ನಾನು ತಾನೇ ಹೇಗೆ ಆ ಜಾತಿಭ್ರಷ್ಟನನ್ನು ಸೇರಿಸಿಕೊಂಡಿರಲಿ. ಅವನನ್ನು ಮನೆ ಬಿಟ್ಟು ಓಡಿಸುವುದೇ ಸಿದ್ಧ; ಸತ್ತ ಎಂದು ತಿಳಿಯುತ್ತೇನೆ. ಹುಟ್ಟಲೇ ಇಲ್ಲ ಎಂದುಕೊಳ್ಳುತ್ತೇನೆ. ನನ್ನ ವಂಶ ಕೀರ್ತಿಗೆ, ಮನೆತನದ ಮರ್ಯಾದೆಗೆ ಕಳಂಕ ತರಲೇ? ಅವನಿಗೆ ಈಗ ಅನ್ನಗಿನ್ನ ಹಾಕೀಯೆ ಜೋಕೆ ಕಣೇ. ಹಾಕಿದೆಯೋ ಅವನ ಜೊತೆಗೆ ನಿನ್ನನ್ನೂ ಮನೆಯಿಂದ ಹೊರಡಿಸುತ್ತೇನೆ. ಚಂಡಾಲ, ಚಂಡಾಲ! (ಎಂದು ಹಲ್ಲು ಕಡಿಯುವನು.)

ನಂಜಮ್ಮ ಬೆಪ್ಪಾಗಿ ನಿಂತಿರುವಳು.

ನಂಜಮ್ಮ : ದುಡಕಬೇಡಿ ಅಂದ್ರೆ, ಊಟದ ಹೊತ್ತು. ಹಸಿದ ಹೊತ್ತಿನಲ್ಲಿ ಕೋಪ ಹೆಚ್ಚು. ಊಟವಾದ ಮೇಲೆ ನಿಧಾನವಾಗಿ ವಿಚಾರಿಸಿ ಬುದ್ಧಿಹೇಳಿ ಉಪಾಯದಲ್ಲಿ ದಾರಿಗೆ ತೆಗೆದುಕೊಂಡು ಬನ್ನಿ.

ಶ್ರೀಕಂಠ : ಉಪಾಯವಂತೆ ಉಪಾಯ, ಮನೆಬಿಟ್ಟು ಓಡಿಸುವುದೇ ತಕ್ಕ ಮದ್ದು. ಮತ್ತೆ ಈ ವಿಷಯ ಎತ್ತಬೇಡ. ಅವನಿಗೆ ಅನ್ನಹಾಕೀಯ. ಜಾತಿ ಭ್ರಷ್ಟನಾದ ಮೇಲೆ ಒಂದು ಅಗುಳು ತಿನ್ನುವುದಕ್ಕೂ ಅವನಿಗೆ ಹಕ್ಕಿಲ್ಲ.

ನಂಜಮ್ಮ : ಈ ಹುಡುಗ ಹೇಳಿದ್ದೆಲ್ಲ ನಿಜ ಅಂತ ನಂಬಿಕೊಂಡು ಹೀಗೆಲ್ಲ

ಋಣ ತೀರಿಹೋಗಲಿ, ಆಮೇಲೆ ವಿಚಾರಿಸಿಕೊಳ್ಳುತ್ತೇನೆ. (ಎಂದು ಎದ್ದು ನಿಲ್ಲುವನು).

[ಚಂದ್ರಶೇಖರ ತಿರುಕರ ಹುಡುಗಿಯೊಡನೆ ಪ್ರವೇಶಿಸುವನು]

(ಆಶ್ಚರ್ಯ, ಕೋಪದಿಂದ) ಚಂದೂ, ಚಂದೂ! ಲೋ ಚಾಂಡಾಲ! ಧರ್ಮಬಾಹಿರ, ಜಾತಿಭ್ರಷ್ಟ, ಮ್ಲೇಚ್ಛ, ಕುಲಘಾತಕಾ,..........ಏನೋ ಇದು! ಮೊದಲು ತೊಲಗಾಚೆ. ನೋಡಿದೆಯೇನೆ ನಿನ್ನ ಸುಪುತ್ರ ಸಾರಂಗಧರನ್ನ! (ನಂಜಮ್ಮ ಎರಡು ಕೈಗಳಿಂದಲೂ ಕಣ್ಣು ಮುಚ್ಚಿದ್ದವಳು ತೆರೆದು, ಬೆಪ್ಪಾಗಿ ಕಲ್ಲು ಬೊಂಬೆಯಂತೆ ನಿಂತಿರುವಳು.) ಚೆನ್ನಾಗಿನೋಡು, ಚಂದೂ, ಮೊದಲು ಆ ಕೊರಚರ ಹುಡುಗಿಯನ್ನು ಆಚೆಗೆ ಬಿಟ್ಟು ಬಾ, ಆಮೇಲೆ ನಿನ್ನ ಕೂಡ ಮಾತು.

ಚಂದ್ರ : ಹೊರಗೆ ಬಿಟ್ಟುಬರುವುದಕ್ಕಲ್ಲಪ್ಪ ಕರೆದುಕೊಂಡು ಬಂದದ್ದು, ಒಳಕ್ಕೆ ಸೇರಿಸಿಕೊಳ್ಳುವುದಕ್ಕೆ.

ಶ್ರೀಕಂಠ : ಏನೂ, ಒಳಕ್ಕೆ ಸೇರಿಸಿಕೊಳ್ಳುವುದಕ್ಕೆ!

ಚಂದ್ರ : ಹೌದು.

ಶ್ರೀಕಂಠ : ಯಾರಿವಳು, ಮೊದಲು ಬಗುಳು (ನಂಜಮ್ಮನ ಕಡೆ ತಿರುಗಿ) ಆ ಹುಡುಗನ ಮಾತು ಸುಳ್ಳು ಅಂದೆಯಲ್ಲ, ನೋಡಿದೆಯಾ ಈಗ? (ಮತ್ತೆ ಚಂದ್ರಶೇಖರನನ್ನು ಸಂಬೋಧಿಸಿ) ಯಾರೋ ಇವಳು?

ಚಂದ್ರ : ನನ್ನ ತಂಗಿ

ಶ್ರೀಕಂಠ : ರಾಮ ರಾಮಾ! ನಿನ್ನ ತಂಗಿಯೇ! ನನ್ನ ಪುತ್ರಿ ಸಮಾನಳೇ!

ಚಂದ್ರ : ಹೌದು, ನಮ್ಮ ಸಮಾಜದಲ್ಲಿ ಇವಳಿಗೆ ಸ್ಥಾನವಿಲ್ಲ. ನನಗೂ ಸ್ಥಾನವಿಲ್ಲ. ಆದ್ದರಿಂದ ಇವಳು ನನ್ನ ತಂಗಿ, ಇವಳಿಗೆ ತಂದೆ ತಾಯಿ ಇಲ್ಲ, ಅಣ್ಣ ತಮ್ಮ ಅಕ್ಕ ತಂಗಿಯರಿಲ್ಲ. ನನಗೆ ತಂದೆ ತಾಯಿ ಇದ್ದಾರೆ. ನನ್ನ ಆದರ್ಶ ಆಲೋಚನೆ ನಿಮಗೆ ಬೇಡ; ನಿಮ್ಮ ಸನಾತನ ಸಾಮ್ರಾಜ್ಯ ನನಗೆ ಬೇಡ.

ಶ್ರೀಕಂಠ : ಹೋ, ಹೋ, ಹೋಗು, ಬಗುಳು, ಬಗುಳುವುದೆಲ್ಲ ಬಗುಳಿಬಿಡು. ಇವತ್ತು ನಿನ್ನ ಕಡೆಯ ಮಾತು ಕೇಳಿ ಬಿಡುತ್ತೇನೆ.

ಚಂದ್ರ : ಹೌದು: ನನ್ನ ಕಡೆಯ ಮಾತು; ದಯವಿಟ್ಟು ಕೇಳಿಬಿಡಿ, ಬೇಸರ

ಆ ಮಾರಿ. ಇನ್ನು ಕೇಳಬೇಕೆ ಚಂದೂಗೆ ಮಂಕುಬೂದಿ ಎರಚಿದ್ದಾಳೆ. ಹೂಂ, ಇದೆಲ್ಲಿ ಪ್ರಾರಬ್ಧ, ಹೋಗಿ ಬಡಿಸು, ಇನ್ನೇನು ಎದ್ದೆ. ರಾಮಾಯಣ ಪಾರಾಯಣ ಬಿಟ್ಟು ಇದೆಲ್ಲಿಯ ಪಾರಾಯಣ ಇವತ್ತು ಹಾಳಾದ್ದು.

ನಂಜಮ್ಮ : ಹೇಗಿದ್ದರೂ ಆಗುವ ಹೊತ್ತಾಯಿತು. ಇನ್ನು ಐದೇ ಐದು ನಿಮಿಷ ನೋಡಿ ಬಿಡೋಣ ಅಂದ್ರೆ. ನಿನ್ನೆಯೂ ಹೀಗೆಯೇ ಅನ್ನುತ್ತಿದ್ದಿರಿ, ಕೊನೆಗೆ ಬರಲಿಲ್ಲವೆ.

ಶ್ರೀಕಂಠ : ಕಾಯುವುದೆಲ್ಲಿ ಬಂತು ಇನ್ನು ಅವನಿಗೆ. ಕಿರಿಸ್ತಾನದವಳನ್ನಾದರೂ ಕಟ್ಟಿಕೊಂಡು ಹೋಗಲಿ ಆಕೊರಚರ ಹುಡುಗಿಯನ್ನಾದರೂ ಕೂಡಿಕೊಳ್ಳಲಿ. ಇದೆಲ್ಲ ಈಗಿನ ಕಾಲದ ವಿದ್ಯಾಭ್ಯಾಸದ ಫಲ ಇದು; ಆ ಗಾಂಧಿಮಹಾತ್ಮನ ಉಪದೇಶದ ಫಲ. ಈ ಗಾಂಧಿ ಆಗ, ದೇಶೋದ್ಧಾರವಂತೆ, ಸ್ವಾತಂತ್ರ್ಯವಂತೆ. ಹೋರಾಟಕ್ಕೆ ಬನ್ನಿ ಅಂತ ನಮ್ಮ ಜನದ ಹುಡುಗರನ್ನೆಲ್ಲ ಜೈಲಿಗೆ ನೂಕಿದ. ಈಗ ಹರಿಜನರಂತೆ, ಅವರ ಉದ್ಧಾರವಂತೆ – ಹೊಲೆಯ ಮಾದಿಗರನ್ನೆಲ್ಲ ದೇವಸ್ಥಾನಕ್ಕೆ ಬಿಡಿ ಎಂದು ಕೂಗುತ್ತಾನೆ. ನಾಳೆ ಹೊಲೆಯರ ಹುಡುಗಿಯರನ್ನು ಮದುವೆಮಾಡಿಕೊಳ್ಳಿ ಅಂತ ಹೇಳುತ್ತಾನೆ. ಇಂಥ ಉತ್ಪಾತಕರು ಹುಟ್ಟಿ ನಮ್ಮ ಸನಾತನ ಧರ್ಮವೇ ನಾಶವಾಯಿತು. ಹೋಗು ಹೋಗು, ಬಡಿಸು (ಎಂದು ರಾಮಾಯಣ ಪುಸ್ತಕವನ್ನು ರೇಶ್ಮೆಚೌಕದಲ್ಲಿ ಕಟ್ಟುತ್ತಾ, ಮಂಗಳ ಶ್ಲೋಕ ಹೇಳುತ್ತಿರುವನು, ಅಷ್ಟರಲ್ಲಿ ಬಾಗಿಲು ತಟ್ಟಿದ ಸದ್ದಾಗುವುದು. ನಂಜಮ್ಮ ಎದ್ದು ನಿಂತು ಆಲಿಸುವರು. ಮತ್ತೆ ಬಾಗಿಲು ತಟ್ಟಿದ ಸದ್ದಾಗುವುದು. ಶ್ರೀಕಂಠಶರ್ಮನೂ ಆಲಿಸಿ,) ಬಂದ ಅಂತ ಕಾಣುತ್ತೆ ನಿನ್ನ ಕುಮಾರ ಕಂಠೀರವ.

[ನಂಜಮ್ಮ ಹೋಗಿ ಬಾಗಿಲು ತೆಗೆದು, ಬಿರ ಬಿರನೆ ಬಂದು, ಬೆರಗಾಗಿ ಬಾಗಿಲಕಡೆಯೇ ನೋಡುತ್ತ ನಿಲ್ಲುವಳು.]

ಏನೆ ಇದು, ಗರ ಬಡಿದ ಹಾಗೆ ಬೆರಗು ಬಡಿದು ನಿಂತಿದ್ದೀಯೆ?

ನಂಜಮ್ಮ : (ಬೆರಗು–ಬೆದರಿಕೆಯಿಂದ ಬಿಗಿದ ಕೊರಳಲ್ಲಿ) ಏನೂ ಇಲ್ಲ........ಚಂದೂ–ಬಂದ........ಬರುತಾ ಇದಾನೆ.......

ಶ್ರೀಕಂಠ : ಬಂದನೋ, ಬರಲಿ, ಅವನಿಗೂ ಒಂದಿಷ್ಟು ಸುರಿದುಬಿಡು.

ಮುಗಿಯಿತು. ನಿನ್ನ ಸೂಳೆಯ ವಿಚಾರ ಏನೂ ಅಂದೆ?

ಚಂದ್ರ : ಸೂಳೆ! ನನ್ನ ಸೂಳೆ!

ಶ್ರೀಕಂಠ : ಹೌದು ಸೂಳೇ! ನಿನ್ನ ಸೂಳೆ! ಆ ಚಂದ್ರವದನೆ.

ಚಂದ್ರ : ಚಂದ್ರವದನೆ? ಶಶಿವದನೆ ಅನ್ನು. ನಿನಗೆ ಶಶಿವದನೆಯ ವಿಚಾರ ಹೇಳಿದವರು ಯಾರು?

ಶ್ರೀಕಂಠ : ನಿನ್ನ ಸ್ನೇಹಿತ, ನಾಗರಾಜ.

ಚಂದ್ರ : ತಂಗೀ, ನಾನು ರೂಪಾಯಿ ಕೇಳಿದೆ ನೋಡು, ಅವನ ದುರ್ಬೋಧನೆ. (ಶ್ರೀಕಂಠಶರ್ಮನ ಕಡೆ ತಿರುಗಿ). ಅವನು ಹೇಳಿದ್ದನ್ನೆಲ್ಲ ನೀವು ನಂಬಬಹುದೆ? ನನ್ನ ಶಶಿವದನೆಯ ವಿಚಾರ ಅವನಿಗೇನು ಗೊತ್ತು?

ಶ್ರೀಕಂಠ : ಅವನು ಹೇಳಿದ್ದು ಒಂದೂ ಸುಳ್ಳಾಗಿಲ್ಲ. ಎಲ್ಲ ನಿನ್ನ ಬಾಯಲ್ಲೇ ಬರುತ್ತಾ ಇದೆ. ಈಗ ತಾನೆ ಅಂದೆಯಲ್ಲ – 'ನನ್ನ ಶಶಿವದನೆ' – ಅಂತ? ಅವನ ಮಾತು ಸುಳ್ಳೆ. (ನಂಜಮ್ಮನ ಕಡೆ ತಿರುಗಿ) ಆ ನಾಗರಾಜನ ಮಾತು ಸುಳ್ಳು ಅಂದೆಯಲ್ಲೇ; ಈಗ ಎಲ್ಲ ಕಿವಿಯಾರ ಕೇಳಿದೆಯಲ್ಲ ಸುಳ್ಳೋ, ನಿಜವೋ? – ಅಬ್ಬಬ್ಬ! "ನನ್ನ ಶಶಿವದನೆ"!

ಚಂದ್ರ : ಹೌದು, ನನ್ನ ಶಶಿವದನೆ. ಅಲ್ಲ ಎಂದು ಸುಳ್ಳು ಹೇಳಲೇಕೆ? ನಾನು ಅವಳನ್ನು ಪ್ರೀತಿಸುತ್ತೇನೆ. ಅವಳು ನನ್ನನ್ನು ಪ್ರೀತಿಸುತ್ತಾಳೆ. ಅವಳನ್ನು ನನ್ನವಳು ಎನ್ನುವುದರಲ್ಲಿ ತಪ್ಪೇನು?

ಶ್ರೀಕಂಠ : ಎಲ್ಲವೂ ನಿನ್ನ ಬಾಯಿಂದಲೇ ಬಂದ ಹಾಗಾಯಿತು. ಪ್ರೀತಿಯಂತೆ ಪ್ರೀತಿ, ಕಲಿಗಾಲ, ಎಲ್ಲ ವಿಪರೀತವಾಗುತ್ತಿದೆ. ನೀನೇನು ಮಾಡೀಯೆ. 'ಮದುವೆಗೆ ಮುಂಚೆ ಪ್ರೀತಿ, ಹೀನ ಜಾತಿಯ ಹೆಣ್ಣನ್ನ ಪ್ರೀತಿಸುವುದಂತೆ ಪ್ರೀತಿಸುವುದು. ಎಲ್ಲಿ ಕಲಿತೆಯೋ ಈ ಪ್ರೀತಿ ಪಾಠವನ್ನ?

ಚಂದ್ರ : ಪ್ರೀತಿ ಪಾಠವನ್ನು ಕಲಿಸುವುದು ಹೃದಯ; ಕಾವ್ಯ.

ಶ್ರೀಕಂಠ : ಬ್ರಾಹ್ಮಣನಾಗಿ ಹುಟ್ಟಿ ಕಿರಿಸ್ತಾನದವಳನ್ನು ಪ್ರೀತಿಸುವುದೆಂದರೇನೋ, ನಿನ್ನಿಂದ ನನ್ನ ಮನೆತನ ಪುನೀತವಾಯಿತು! ಉದ್ಧಾರವಾಯಿತು! – ಖಂಡಿತ; ಇನ್ನು ನಿನ್ನೊಡನೆ ನನಗೂ ಬಹಿಷ್ಕಾರ ಹಾಕುವುದು ಖಂಡಿತಾ ಎಂದೆ, ನನ್ನ ಕಣ್ಣೆದುರಿಗೆ ಇರಬೇಡ, ತೊಲಗಾಚೆ (ಎಂದು

ಪಟ್ಟುಕೊಳ್ಳದೆ ಕೇಳಿ. ಇನ್ನು – ನಿಮ್ಮ ಭಾಗಕ್ಕೆ ನಾನಿಲ್ಲ; ನನ್ನ ಭಾಗಕ್ಕೆ ನೀವು ಇಲ್ಲ. ಆದ್ದರಿಂದ ನಾನೂ ತಬ್ಬಲಿ ನಿಮಗೂ ನನಗೂ ಅಂಟಿಕೊಂಡಿರುವುದು ನೀವು ನನಗೆ ಇಟ್ಟ ಹೆಸರು, ಕಟ್ಟಿದ ಜನಿವಾರ! ಅವನ್ನು ಈ ಘಳಿಗೆ ಬಿಟ್ಟು ಬಿಡುತ್ತೇನೆ. ನನಗೆ ಹೆಸರೂ ಬೇಡ, ಕುಲವೂ ಬೇಡ. ಅವಳಿಗೆ ಹೆಸರು ಇಟ್ಟವರೇ ಇಲ್ಲ, ಕುಲವ ಕೊಟ್ಟವರಿಲ್ಲ. ಅವಳು ವಿದ್ಯೆಕಲಿತವಳಲ್ಲ; ನಾನು ಕಲಿತ ವಿದ್ಯೆಯಿಂದ ನನಗೆ ಪ್ರಯೋಜನವಾಗಿಲ್ಲ. ಮತದ ಮುಸುಕು ಅವಳ ಮುಖವನ್ನು ಮುಚ್ಚಿಲ್ಲ; ನನ್ನ ಮುಚ್ಚಿದ್ದ ಮತದ ಮುಸುಕನ್ನು ಹರಿದವನು ನಾನು. ಅವಳು ಹುಟ್ಟು ತಿರುಕಿಯಾಗಿ ತಿರುಪೆ ಬೇಡುತ್ತಿರುವವಳು; ನಾನು ಸಂಪಾದಿಸಲು ಶಕ್ತಿಯಿಲ್ಲದೆ, ಯೋಗ್ಯತೆಯಿಲ್ಲದೆ, ಬುದ್ಧಿಯಿಲ್ಲದೆ, ದಾರಿತೋರದೆ, – ಕಣ್ಣಿದ್ದು ಕುರುಡನಾಗಿ, ಕೈಕಾಲಿದ್ದೂ ಹೆಳವನಾಗಿ, ಶಕ್ತಿಯಿದ್ದೂ ನಿಶ್ಶಕ್ತನಾಗಿ, ಬುದ್ಧಿಯಿದ್ದೂ ಬುದ್ಧಿಯಿಲ್ಲದವನಾಗಿ, ಮತಿಯಿದ್ದೂ ಮತಿಯಿಲ್ಲದವನಾಗಿ, ಮನಸ್ಸಿದ್ದೂ ಹುಚ್ಚನಾಗಿ, ಮನುಷ್ಯನಾಗಿದ್ದೂ ಮೃಗವಾಗಿ ಭಿಕ್ಷೆ ಬೇಡಲು ಹೊರಟಿರುವವನು. ಹಿಂದೆ ನಿಮ್ಮಲ್ಲಿ ಭಿಕ್ಷೆ ಬೇಡಿದ್ದೇನೆ – ಆಟದ ಭಿಕ್ಷೆ, ಇಂದು ನಿಜವಾದ ಭಿಕ್ಷಾ ದೀಕ್ಷೆ ಅನುಗ್ರಹಿಸಿ, ನಿಮ್ಮ ಮಗನಾಗಿ ನಿಷ್ಪ್ರಯೋಜಕ ಮಗನ ಪಾಲಿನ ಕೂಳು ಕೇಳಲು ಬಂದಿಲ್ಲ. ಹಸಿದ ಹೊಟ್ಟೆಯ ಹಕ್ಕಿನ ಕೂಳು ಕೇಳಲು ಬಂದಿದ್ದೇನೆ. ಮೊನ್ನೆಯಿಂದ ಹಸಿದ ಹೊಟ್ಟೆ ನನ್ನ ತಂಗಿಯದು. (ನಂಜಮ್ಮನ ಕಡೆ ತಿರುಗಿ) ಅಮ್ಮಾ! – ಅಮ್ಮಾ ಎಂದೇ ಬಾಯಿಗೆ ಬರುತ್ತೆ, ಏನು ತೊರೆದರೂ ತಾಯ್‌ತವರು ತೊರೆಯುವುದು ಕಷ್ಟ. (ತುಸುಮೌನ) ಅಮ್ಮಾ ಇವಳಿಗೂ ನನಗೂ ಒಳಗೆ ಕೂಡಿಸಿ ಬಡಿಸಲು ನಿಮಗಾಗದಿದ್ದರೆ ಜಗುಲಿಯ ಮೇಲಾದರೂ ಜೊತೆಯಲ್ಲಿ ಬಡಿಸಮ್ಮ.

ನಂಜಮ್ಮ : (ಬಿಕ್ಕುತ್ತ) ಚಂದೂ, ಚಂದೂ! (ಎಂದು ಮಗನ ಕಡೆಗೆ ಕೈ ನೀಡಿಕೊಂಡು ಹೋಗುವರು.)

ಶ್ರೀಕಂಠ : ಲೇ, ಲೇ, ನಿಲ್ಲು ಹತ್ತಿರ ಹೋಗಿ ಮೈಲಿಗೆ ಮಾಡಿಕೊಂಡರೆ ನೀನು ಮತ್ತೆ ಸ್ನಾನ ಮಾಡುವ ತನಕ ಹಸಿದು ಕುಳಿತಿರಲೆ? (ಚಂದ್ರಶೇಖರನನ್ನು ಕುರಿತು) ನಿನ್ನ ತಂಗಿಯ ವಿಚಾರ

ಜಾತಿಮತವನ್ನುಳಿದು, ಕುಲಕ್ಕೆ ಹೊರಗಾಗಿ, ಜನಕ್ಕೆ ಬೇಡವಾಗಿ, ನನ್ನಂತೆ ನಾಯಿಯ ಹಾಗೆ ತಿರುಗುವ ಹಂಬಲೇಕೆ ನಿಮ್ಮನ್ನು ಕಾಡಿತು? ಮತದ ಆಶ್ರಯದಲ್ಲಿ, ಜಾತಿಯನೆಳಲಿನಲ್ಲಿ, ಜನದ ನೆರೆಯಲ್ಲಿ, ಅಪ್ಪ ಅಮ್ಮನ ಮಡಿಲಲ್ಲಿ, ಅಪ್ಪಗಳಿಸಿದ ಅನ್ನವ ತಿನ್ನುತ್ತ, ಅಪ್ಪ ನೋಡಿದ ಹೆಣ್ಣ ಮದುವೆಯಾಗಿ, ಮಕ್ಕಳು ಮೊಮ್ಮಕ್ಕಳನ್ನು ಪಡೆದು, ಲೋಕದ ಪಾಡನ್ನು ಲೋಕಕ್ಕೆ ಬಿಟ್ಟು ತನ್ನ ಪಾಡಿಗೆ ತಾನು ಇರುವುದು ಬುದ್ಧಿವಂತರ ಲಕ್ಷಣ. ಬುದ್ಧಿವಂತನಾಗು. ನಾನು ಹೋಗುತ್ತೇನೆ.

ಚಂದ್ರ : ತಂಗಿ, ನೀನು ತುಸ ಸುಮ್ಮನಿರು, ಮನೆ ಬಿಟ್ಟು ಹೊರಡಲು ಸಿದ್ಧನಾಗಿದ್ದೇನೆ, ಎಂದಿನಿಂದಲೋ ಸಿದ್ಧನಾಗಿದ್ದೇನೆ. ನಿನಗೆ ಹೀಗಾಯಿತಲ್ಲಾ ಎಂದು ಮನಸ್ಸಿಗೆ ವ್ಯಥೆ ಅಷ್ಟೆ. "ಹುಂ, ಇರಲಿ, ಇದೋ, ಸದ್ಯಕ್ಕೆ ಭಿಕ್ಷಾದೀಕ್ಷೆ ವಹಿಸಿದ್ದೇನೆ (ಎಂದು ಉತ್ತರೀಯವನ್ನು ಜೋಳಿಗೆಯ ಹಾಗೆ ತೋರುತ್ತ) ನಡೆ, ಪಕ್ಕದ ಮನೆಯಲ್ಲಿ ಭಿಕ್ಷೆಯೆತ್ತಿ ಹಾಕುತ್ತೇನೆ, ನಡೆ (ಎಂದು ತಿರುಕಿಯ ಕೈಹಿಡಿದು ಹೊರಬೀಳುವನು.)

ಶ್ರೀಕಂಠ : ಪಕ್ಕದ ಮನೆಗೆ ಹೋಗುತ್ತೀಯ. ಅಲ್ಲಿ ನಿನಗೆ ಹೇಗೆ ಅನ್ನ ಹಾಕುತ್ತಾರೆಯೋ ನೋಡುತ್ತೀನಿ. ತಿಪ್ಪಾವಧಾನಿಗಳೇ, ತಿಪ್ಪಾವಧಾನಿಗಳೇ! (ಎಂದು ಕೂಗಿಕೊಂಡು ಆತನೂ ಅವರ ಹಿಂದೆ ತೆರಳುವನು.)

ನಂಜಮ್ಮ : (ಒಳಗಿನಿಂದ ಅನ್ನ ಮುಂತಾದ್ದು ತುಂಬಿದ್ದ ಪಾತ್ರೆಗಳನ್ನೂ ಊಟದೆಲೆಗಳನ್ನೂ ಹಿಡಿದುಕೊಂಡು ಬಂದು) ಚಂದ್ರೂ, ಚಂದ್ರೂ, ಹೊರಟು ಹೋದೆಯಾ. ಹೊರಟು ಹೋದೆಯಾ, ಹೊರಟು ಹೋದೆಯಾ, ನನ್ನ ಕಂದಾ! (ಎಂದು ಪಾತ್ರೆಗಳನ್ನು ತೊಪ್ಪನೆ ಕೆಡವಿ, ನೆಲದ ಮೇಲೆ ಕೆಡೆದು ಬೀಳುವಳು.)

– ತೆರೆ ಬೀಳುವುದು –

ಗದರಿಸುವನು).

ಚಂದ್ರ : ನಿಮಗೇಕೆ ಬಹಿಷ್ಕಾರದ ಹೆದರಿಕೆ? ನೀವು ಸುಖವಾಗಿರಿ. ಬ್ರಾಹ್ಮಣನಲ್ಲದ, ಯಾವ ಮತವೂ ಬೇಡದ ನನಗೆ ಯಾರ ಬಹಿಷ್ಕಾರದ ಹೆದರಿಕೆ? ಇದೋ! (ಎಂದು ಜನಿವಾರ ಕಿತ್ತು) ಬ್ರಹ್ಮಜ್ಞಾನಪಡೆಯುವ ಅವಶ್ಯಕತೆಯಿಲ್ಲದ ನನಗೆ ಬ್ರಾಹ್ಮಣಿಕೆಯ ಈ ಬೂಟಾಟಿಕೆ ಬೇಕಿಲ್ಲ. [ನಂಜಮ್ಮ ಕಣ್ಣುಮುಚ್ಚಿರುವಳು. ಶ್ರೀಕಂಠಶರ್ಮ ಕೋಪದಿಂದ ಕಿಡಿಕಿಡಿಯೇರಿ, ಮಡಿಯಾದದ್ದರಿಂದ ಮುಟ್ಟಲಾರದವನಂತೆ ಅಲ್ಲಲ್ಲಿಯೇ ತತ್ತರಿಸುತ್ತ, ತಡತಡಕಿ ತಿರುಗಾಡುತ್ತಾ ಕಿರಿಚಿಕೊಳ್ಳುವನು.]

ಶ್ರೀಕಂಠ : ಮ್ಲೇಚ್ಛಾ! ಮ್ಲೇಚ್ಛಾ ! ತೊಲಗಾಚೆ, ತೊಲಗು, ಮೊದಲು ತೊಲಗು. ನನ್ನ ಕಣ್ಣೆದುರಿಗೆ ನಿಲ್ಲಬೇಡ. ಸುಟ್ಟು ಭಸ್ಮಮಾಡಿಬಿಡುತ್ತೇನೆ. ನೀನು ನನ್ನ ಮಗನಲ್ಲ. ತೊಲಗಾಚೆ, ತೊಲಗೂ, ತೊಲಗೂ!

ಚಂದ್ರ : ನಾನು ಇಲ್ಲಿ ನಿಲ್ಲುವುದಿಲ್ಲ. ನಿಮ್ಮ ನಂಬಿಕೆ ನಿಮಗೆ, ನನ್ನ ನಂಬಿಕೆ ನನಗೆ. ನನ್ನ ನಂಬಿಕೆಯ ಬೆಳಕಿನಲ್ಲಿ ನಾನು ಬೀಳುತ್ತೇನೆ. ನಾನು ಇಲ್ಲಿ ನಿಲ್ಲುವುದಿಲ್ಲ. ಹೊರಡುವ ಕಾಲ ಎಂದೋ ಬರಬೇಕಾಗಿತ್ತು. ಇಂದು ಬಂತು. ಅಮ್ಮಾ, ಈ ಹಸಿದ ಹೆಣ್ಣಿಗೂ ನನಗೂ ಒಂದು ತುತ್ತು ಅನ್ನ ಕೊಡಮ್ಮ. ಹೊರಟು ಹೋಗುತ್ತೇನೆ. (ನಂಜಮ್ಮ ಒಳಕ್ಕೆ ಹೋಗುವಳು.)

ಶ್ರೀಕಂಠ : ಒಂದು ತುತ್ತು ಅನ್ನವನ್ನು ಹಾಕಿಸುವುದಿಲ್ಲ. ನಾನು ಸಂಪಾದಿಸಿದ ಒಂದು ಅಗುಳಿಗೂ ನಿನಗೆ ಹಕ್ಕಿಲ್ಲ. ತೊಲಗಾಚೆ ಭಿಕಾರಿ, ನಿನ್ನ ಭಿಕಾರಿಣಿಯೊಡನೆ.

ಚಂದ್ರ : ನನಗೆ ಬೇಡ, ಈ ಹಸಿದ ಹೆಣ್ಣಿಗೆ ಕೊಡಿ. ಬೀದಿಯ ಭಿಕ್ಷುಕಿ ಎಂದುಕೊಂಡು ಕೊಡಿ.

ಶ್ರೀಕಂಠ : ಇಲ್ಲ, ಇಲ್ಲ; ಖಂಡಿತ ಇಲ್ಲ. ನೀನು ತೊಲಗುತ್ತೀಯೋ ಇಲ್ಲವೋ?

ತಿರುಕಿ : (ಇದುವರೆಗೂ ಮಾತಾಡದಿದ್ದವಳು ನಡುವೆ ಬಾಯಿಹಾಕಿ) ಅಣ್ಣಾ, ನಾನು ಹೋಗುತ್ತೇನೆ. ನಾನು ಮೊದಲೇ ಹೇಳಲಿಲ್ಲವೆ, ನಿನ್ನೊಡನೆ ಬರುವುದಿಲ್ಲ ಎಂದು? ತಂದೆ ತಾಯನ್ನು ಬಿಟ್ಟು,

ಚಂದ್ರ : ಈ ಜನ್ಮದಲ್ಲಿ ಒಡಹುಟ್ಟಿದವರಂತೆ ಕೂಡಿರಲು ಪೂರ್ವಜನ್ಮ ಪುನರ್ ಜನ್ಮಗಳ ಗೊಡವೆಯೇಕೆ ತಂಗಿ ಬಾ, ಕುಳಿತುಕೋ. (ತಿರುಕಿ ಅನುಮಾನಿಸುತ್ತ ನಿಂತಿರುವಳು) ಬಾ, ಕುಳಿತುಕೋ ತಂಗಿ, ಶಶಿವದನೆ ನನ್ನ ಜೀವದುಸಿರಿನಂತಿದ್ದರೆ, ನೀನು ನನ್ನ ಬಾಳಿನ ಕಣ್ಣಾದೆ. ಬಾ, ಕುಳಿತುಕೋ. ಕ್ಷಣಕಾಲ ಎಲ್ಲವನ್ನೂ ಮರೆಯುವೆನು. ಹಾಡಿನ ಭಿಕ್ಷೆ ಹಾಕು. ಇದು ನನ್ನ ಮೊದಲ ಭಿಕ್ಷೆ

ತಿರುಕಿ : (ಕುಳಿತು ಕೊಂಡು) ನಿನ್ನ ಭಿಕ್ಷೆ ಇಲ್ಲಿಗೆ ನಿಲ್ಲಲಿ. ಭಿಕ್ಷೆ ನನ್ನಂಥವರಿಗೆ, ನಿನಗಲ್ಲ, (ಎಂದು ಹಾಡು ಮೊದಲು ಮಾಡುವಳು).

ಒಂಟಿ ಮುಗಿಲೊಂದು ತಾನಾಗಸದೊಳಲೆಯತ್ತ
ಚೆಲುವು ಕಣ್ ಚಂದ್ರಮನ ಕಂಡು ನಿಂತು–
ಒಂಟಿಯಾಗಿರಲಾರೆ, ಬಾರ ಬಾರಾಚಂದ್ರ
ಎಂದೆನುತ ನಡೆಯಲಾ ಮುಗಿಲು ಮುಂದೆ,
ನಡೆವನೇ ಚಂದ್ರ ತಾನದರ ಹಿಂದೆ?

ಚಂದ್ರ : ಏನು ತಂಗಿ, ನನ್ನ ಕುರಿತು ಹೇಳುವಂತಿದೆ?

ತಿರುಕಿ : ನಿನ್ನ ಕುರತು ಹೇಳಿದೆನೆ ! ಅದು ನಿನಗೆ ಅನ್ವಯಿಸುವುದೆ? ಆ ಚಂದ್ರನಂತಲ್ಲ ನೀನು, ನೀನು ನನ್ನನ್ನು ತಡೆದು ನಿಲ್ಲಿಸಿರುವೆ, ನನ್ನೊಡನೆಯೇ ಇರುವೆ. ನಾನು ನನ್ನ ದಾರಿ ಹಿಡಿದು ಹೋಗುವೆ. ನೀನು ಇದ್ದ ಕಡೆ ಇರಬೇಕು. ಇದು ಸೊಗಸು.

ಚಂದ್ರ : ಏನು ತಂಗಿ, ನೀನು ಹೇಳುವುದು.

ತಿರುಕಿ : ಏನೆಂದರೆ; ನೀನು ಮಾಡುತ್ತಿರುವುದು ಸರಿಯಲ್ಲ.

ಚಂದ್ರ : ಏನು, ನಮ್ಮ ಮನೆಗೆ ಹಿಂದಿರುಗಿ ಹೋಗು ಎಂದು ಹೇಳುವೆಯ? ಅದು ಸಾಧ್ಯವಿಲ್ಲ, ಖಂಡಿತ ಸಾಧ್ಯವಿಲ್ಲ. ಯಾರೂ ನನ್ನನ್ನು ತಡೆಯಲಾರರು.

ತಿರುಕಿ : ಹೋಗಲಿ, ನನ್ನ ಹಾಡುಕೇಳಿ ಎಲ್ಲವನ್ನೂ ಮರೆತಿರುವೆಯೇನು.

ಚಂದ್ರ : ಮರೆಯಲಾಗಲಿಲ್ಲ.

ತಿರುಕಿ : ಹಾಗಾದರೆ, ಹಾಡು ಚೆನ್ನಾಗಿರಲಿಲ್ಲ.

ಚಂದ್ರ : ನೀನು ಮಾತನಾಡಿದರೇ ಹಾಡು. ಇನ್ನು ಹಾಡು

# ನಾಲ್ಕನೆಯ ಅಂಕ

## ನೋಟ – ೧

[ಉದ್ಯಾನ : ಚಂದ್ರಶೇಖರ ಮೊದಲು ತಿರುಕರ ಹುಡುಗಿಯನ್ನು ಕಂಡ ಬಳಿ. ಚಂದ್ರಶೇಖರ ಕಲ್ಲು ಪೀಠದ ಮೇಲೆ ಕುಳಿತಿರುವನು. ತಿರುಕಿ ಕೆಳಗೆ, ಅವನ ಕಾಲು ಬಳಿ, ಕುಳಿತಿರುವಳು. ಚಂದ್ರಶೇಖರನ ತಲೆಗೂದಲು ಕೆದರಿದೆ. ಮುಖ ಬಾಡಿದೆ, ತಿರುಕಿ ಎಂದಿನಂತೆಯೇ ಇದ್ದಾಳೆ. ಸಂಜೆಗೆಂಪು ಸುಳಿಯುತ್ತಿದೆ.]

ಚಂದ್ರ : ತಂಗೀ, ಇನ್ನು ಮೇಲೆ ನೀನು ನನ್ನನ್ನು 'ಚಂದೂ' ಎಂದು ಕೂಗಬೇಕು, ತಿಳಿಯಿತೆ?

ತಿರುಕಿ : ಆಗಲಿ, ನೀನು ನನ್ನನ್ನು ಸಂತೋಷಪಡಿಸಿದರೆ.

ಚಂದ್ರ : ನಾನು ನಿನ್ನನ್ನು ಸಂತೋಷಪಡಿಸಿದರೆ.

ತಿರುಕಿ : ಓಹೋ ಹಿಡಿ, ಈ ತಿರುಪೆಯ ತಿಂಡಿಯನ್ನು ಹಿಡಿ. ನೀನು ಉಪವಾಸವಿರುವುದನ್ನು ನೋಡಲಾರೆ. ನೀನು ತಿಂದರೆ ನನಗೆ ಸಂತೋಷವಾಗುತ್ತೆ. (ಎಂದು ಬಾಳೆಯ ಹಣ್ಣುಗಳನ್ನು ಕೊಡುವಳು)

ಚಂದ್ರ : (ತೆಗೆದುಕೊಂಡು) ನಿನಗೆ?

ತಿರುಕಿ : ಇದೆ. (ಎಂದು ಉಡಿಯಲ್ಲಿ ಕಟ್ಟಿಕೊಂಡಿದ್ದ ಪುರಿಗಂಟನ್ನು ಬಿಚ್ಚಿ ತೋರುವಳು.)

ಚಂದ್ರ : ಹುಡುಗನಾಗಿದ್ದಾಗ ತುಂಬ ಪುರಿ ಕೊಂಡುಕೊಂಡು ತಿನ್ನುತ್ತಿದ್ದೆ. ನನಗೆ ಸ್ವಲ್ಪ ಪುರಿ ಕೊಡು.

ತಿರುಕಿ : (ಎದ್ದು) ಹಿಡಿ (ಎಂದು ಅರ್ಧ ಸುರಿಯುವಳು).

ಚಂದ್ರ : ಹಿಡಿ (ಎಂದು ಎರಡು ಬಾಳೆ ಹಣ್ಣನ್ನು ಹಿಂದಿರುಗಿ ಕೊಡುವನು.)

ತಿರುಕಿ : ಬೇಡ. ನನಗೆ ಇಷ್ಟೇ ಸಾಕು.

ಚಂದ್ರ : ಇಲ್ಲ, ಇದನ್ನು ನೀನು ತೆಗೆದುಕೊಳ್ಳದಿದ್ದರೆ ನಾನು ಏನೂ ತಿನ್ನುವುದಿಲ್ಲ.

ತಿರುಕಿ : (ತೆಗೆದುಕೊಂಡು) ಪೂರ್ವಜನ್ಮದಲ್ಲಿ ನಮ್ಮಿಬ್ಬರ ಸಂಬಂಧ ಏನಾಗಿತ್ತು ಊಹಿಸಬಲ್ಲೆಯಾ?

ಶಶಿವದನೆ : ಓ! ನಾಗೇಂದ್ರ ಬನ್ನಿ, ಕುಳಿತುಕೊಳ್ಳಿ. ನಮ್ಮ ತಂದೆ ಒಳಗಿರಬಹುದು ಕರೆಯುತ್ತೇನೆ.

ನಾಗೇಂದ್ರ : (ಹೂವಿನ ಪಾತ್ರೆಯ ಬಳಿಗೆ ಬಂದು, ಹೂವನ್ನು ಎರಡು ಕೈಗಳಿಂದಲೂ ಆಡಿಸುತ್ತ) ನಿನಗೆ........ಕ್ಷಮಿಸಿ........ನಿಮಗೆ ಹೂಗಳನ್ನು ಕಂಡರೆ ತುಂಬ ಪ್ರೀತಿ ಅನ್ನುವ ಹಾಗೆ ಕಾಣುತ್ತೆ ನನಗೆ ಈ ಹೂಗಳನ್ನು ಕೊಯ್ದಿಟ್ಟವರನ್ನು ಕಂಡರೆ ತುಂಬ ಪ್ರೀತಿ.

ಶಶಿವದನೆ : ಆ ಹೂ ಕೊಯ್ದಿಟ್ಟವನು ನಮ್ಮ ತೋಟದ ಮಾಲಿ. (ಎಂದು ಎಡಬಾಗಿಲಿನಿಂದ ಹೊರಟು ಹೋಗುವಳು.)

ನಾಗೇಂದ್ರ : ಸ್ವಲ್ಪ ಮ್ಯಾನೇಜ್ ಮಾಡುವುದು ಕಷ್ಟ ಅಂತ ತೋರುತ್ತೆ. ಆದರೆ........ನಾನು ಯಾರು.....[ಎಂದು ಕೊಟಡಿಯನ್ನು ಅಲಂಕರಿಸಿದ್ದ ಚಿತ್ರಪಟಗಳನ್ನು ನೋಡುತ್ತಿರುವನು. ಅಲ್ಲಿಯೇ ಕೊಟಡಿಯಲ್ಲಿ ಬಲಪಕ್ಕದಲ್ಲಿ; ಗೋಡೆಯ ಬಳಿ, ಸಾಲಾಗಿ ಕುರ್ಚಿಗಳು, ನಡುವೆ ಸೋಫಾ ; ಮುಂದುಗಡೆ 'ಟೀಪಾಯ್'; ಅದರ ಮೇಲೆ ಸಿಗರೇಟು ಡಬ್ಬ, ಬೆಂಕಿಪೆಟ್ಟಿಗೆ, ಆಷ್ ಟ್ರೇ. ನಾಗೇಂದ್ರ ಸಿಗರೇಟು ಹಚ್ಚಿಕೊಂಡು ಸೋಫಾದ ಮೇಲೆ ಕುಳಿತು, ಸಿಗರೇಟು ಸೇದಲು ಮೊದಲು ಮಾಡುವನು. ಸ್ವಲ್ಪ ಹೊತ್ತಾದ ಮೇಲೆ ಒಳಗಿನಿಂದ ಸುಂದರರಾಜ್ (ರೂಢಿಯ ಹೆಸರು ರಾಜಪ್ಪ) ಪ್ರವೇಶಿಸುವನು. ನಾಗೇಂದ್ರ ಮೇಲೇಳುವನು.]

ರಾಜಪ್ಪ : ಕುಳಿತುಕೊಳ್ಳಿ ಮಿಸ್ಟರ್ ನಾಗೇಂದ್ರ. ಏನೂ ಅಪರೂಪವಾಗಿ ಬಂದಿರಲ್ಲ? (ಕುಳಿತುಕೊಳ್ಳುವನು.)

ನಾಗೇಂದ್ರ : (ತಾನೂ ಕುಳಿತು) ಸ್ವಲ್ಪ ಕೆಲಸದ ಮೇಲೆ ಬಂದೆ.

ರಾಜಪ್ಪ : ಅಂಥಾದ್ದೇನು ಅರ್ಜೆಂಟ್ ಅಲ್ಲವಲ್ಲ–ಶಶೀ, ಶಶೀ–ಏನು ಸ್ಟಡೀಸ್ ಬಿಟ್ಟು ಬಿಟ್ಟಿರಿ ಅಂತ ಕೇಳಿದೆನಲ್ಲ? ಏನು ಮಾಡಬೇಕೂ ಅಂತ ಇದ್ದೀರಿ?

ಶಶಿವದನೆ : (ಬಂದು) ಏನು ಅಪ್ಪ?

ರಾಜಪ್ಪ : ಟೀ ತೆಗೆದುಕೊಂಡು ಬಾ.

ಶಶಿವದನೆ : ಸಿದ್ಧವಾಗಿದೆ, ತರುತ್ತೀನಿ (ಎಂದು ಹೋಗುವಳು)

ಚೆನ್ನಾಗಿರಲಿಲ್ಲವೆಂದು ಹೇಗೆ ಹೇಳಲಿ? ಆಗ ನನ್ನೊಡನೆ ಶಶಿವದನೆಯೂ ನಿನ್ನ ಹಾಡನ್ನು ಕೇಳಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದುಕೊಂಡೆ.

ತಿರುಕಿ : ಶಶಿವದನೆಯನ್ನು ನೀನು ಮರೆಯಲಾರೆ. ಹೋಗು, ಶಶಿವದನೆಯನ್ನು ಮದುವೆಯಾಗಿ, ಸುಖವಾಗಿ ಬಾಳು.

ಚಂದ್ರ : ಶಶಿವದನೆಯನ್ನು ಮದುವೆ ಮಾಡಿಕೊಳ್ಳುವುದು! ಮದುವೆ ಮಾಡಿಕೊಂಡು ಅವಳ ಹೊಟ್ಟೆಗೆ ಏನು ಹಾಕಲಿ?

ತಿರುಕಿ : ಅದು ಮುಂದಿನ ಮಾತು. ಅದರ ಯೋಚನೆ ಈಗ ಏಕೆ?

ಚಂದ್ರ : ತಂಗಿ, ನೀನು ಹೇಳುವುದು ಸರಿಯೆ, ನನ್ನಂಥ ಭಿಕಾರಿಯನ್ನು ಮದುವೆಯಾಗಲು ಅವಳ ತಂದೆ ಒಪ್ಪುವನೆ? ಒಪ್ಪಿದರೂ, ನೆಲೆಯಿಲ್ಲದ ನಾನು ಶಶಿವದನೆಯನ್ನು ಮದುವೆ ಮಾಡಿಕೊಂಡು, ನೆಲೆ ಸಿಕ್ಕುವವರೆಗೂ ಅವಳನ್ನು ತಂದೆಯ ಮನೆಯಲ್ಲಿ ಬಿಟ್ಟಿರುವುದು ತಾನೆ? ಇಬ್ಬರ ಹೃದಯಗಳು ಕೂಡಿರಲು ಮದುವೆಯೆನ್ನುವ ಈ ಆಟವೇಕೆ? ಹೃದಯಗಳು ಒಪ್ಪಿರಲು, ಈ ಹೊರಗಿನ ಒಪ್ಪಂದವೇಕೆ? ಅವಳು ನನಗಾಗಿ ಕಾದಿರುವಳು. ನಾನು ಅವಳಿಗಾಗಿ ಕಾದಿರುವೆ.

ತಿರುಕಿ : ಆದರೂ, ಚಂದ್ರ, ನನ್ನ ಮಾತು ಕೇಳು, ಕಲ್ಲುಹೃದಯ ಬೇಡ, ಅವಳನ್ನು ನೋಡಿ, ಕಡೆಗೆ ಬೀಳ್ಕೊಂಡಾದರೂ ಬಾ.

ಚಂದ್ರ : ಆಗಲಿ ತಂಗಿ, ಈಗ ಬೇಡ, ನಾಳೆಯಾಗಲಿ.

ತಿರುಕಿ : ನಾಳೆ : ನಾಳೆ, ಬಾಳನ್ನು ಮುಂದು ಮುಂದಕ್ಕೆ ತೆಗೆದುಕೊಂಡು ಹೋಗುವುದು ನಾಳೆ. ನಾಳೆ ನಿಲಲು ಬಾಳೆ ನಿಂತಂತೆ! ನಾಳೆ ಬರುವುದು ಬೇಗ.

– ತೆರೆ ಬೀಳುವುದು –

## ನೋಟ – ೨

[ಶಶಿವದನೆಯ ಮನೆ : 'ಡ್ರಾಯಿಂಗ್ ರೂಂ', ಕುರ್ಚಿ, ಮೇಜು; ಬಗೆಬಗೆಯ ಚಿತ್ರಪಟಗಳಿಂದ ಅಲಂಕೃತವಾಗಿದೆ. ನಡುವೆ ಸಣ್ಣದೊಂದು ಗುಂಡುಮೇಜು; ಅದರ ಮೇಲೆ ಹೂವಿನ ಪಾತ್ರೆ. 'ರಂಗ'ದುರು ಒಂದು ಬಾಗಿಲು, ಎಡಗಡೆಯಿಂದ ಮತ್ತೊಂದು ಬಾಗಿಲು. ತೆರೆ ಸರಿದಾಗ, ಶಶಿವದನೆ ಎಡಗಡೆ ಬಾಗಿಲಿನಿಂದ ಬಂದು ಎದುರು ಬಾಗಿಲನ್ನು ತೆರೆಯುವಳು. ನಾಗೇಂದ್ರ ಪ್ರವೇಶಿಸುವನು.]

ರಾಜಪ್ಪ : ಬ್ರೈಡ್ (ಹೆಣ್ಣು) ಇಲ್ಲದೆ ಉಂಟೆ.

ನಾಗೇಂದ್ರ : ಬ್ರೈಡ್ (ಹೆಣ್ಣು) ಇದ್ದಾಳೆ, ಬ್ರೈಡ್ ಗ್ರೂಮ್ (ಮದುವಣಿಗ ನಾನೂ ಇದ್ದೇನೆ. ಆದರೆ ತಮ್ಮ ಸಹಾಯ....

ರಾಜಪ್ಪ : ಏನು ಸಹಾಯವಾಗಬೇಕು? ನನ್ನ ಕೈಲಾಗುವುದಾದರೆ.....

ನಾಗೇಂದ್ರ : ನೀವು ಮನಸ್ಸು ಮಾಡಿದರೆ......ನಿಮ್ಮ ಕೈಲಾಗದೆ ಏನು ನೀವು ಒಪ್ಪಿದರೆ........

ರಾಜಪ್ಪ : ನೀವು ಹೇಳುವುದು ಅರ್ಥ ಆಗುವುದಿಲ್ಲ, ನೋಡಿ.........ನಿಮ್ಮ ಮದುವೆಗೆ ನನ್ನ ಒಪ್ಪಿಗೆ ಏಕೆ?

ನಾಗೇಂದ್ರ : ನೀವು ಒಪ್ಪಿದರೆ.......ನಿಮ್ಮ ಮಗಳು.......ಮಿಸ್ ಶಶಿವದನೆ....... I would be so happy ! (ನಾನು ಅತ್ಯಂತ ಸುಖಿಯಾಗುವೆ.)

ರಾಜಪ್ಪ : ಓಹೋ ಹೀಗೋ! ಸಂತೋಷ. ಮಿಸ್ಟರ್ ನಾಗೇಂದ್ರ ಬಹಳ ಸಂತೋಷ. ಶಶಿವದನೆ ಒಪ್ಪಿದರೆ.......ಬಹಳ ಸಂತೋಷ. I should be happy, too. (ನನಗೂ ಸಂತೋಷವೇ) ಆಗಲಿ.......ಶಶೀನ ಕೇಳಿ ನೋಡಿ ನಿಮಗೆ ಹೇಳ್ತೇನೆ. ಇವತ್ತು ಕೇಳ್ತೇನೆ.

ನಾಗೇಂದ್ರ : ಕೇಳೋದು ಗೀಳೋದು ಇಟ್ಟುಕೊಂಡರೆ.....

ರಾಜಪ್ಪ : ಕೇಳದೆ ಉಂಟೆ. ಅವಳು ಯಾರನ್ನ ಲವ್ (ಪ್ರೀತಿ) ಮಾಡುತ್ತಾಳೋ......ಇಲ್ಲದೆ ಹೋದರೆ ಯಾರನ್ನ ಒಪ್ಪುತ್ತಾಳೋ..

ನಾಗೇಂದ್ರ : ನನ್ನ ಒಪ್ಪಬಹುದು ಅನ್ನಿ. ಆದರೆ ಅವಳು ಯಾರನ್ನಾದರೂ ಲವ್ ಮಾಡುತ್ತಾಳೇನು?

ರಾಜಪ್ಪ : ನನಗೆ ಹಾಗೆ ತೋರುತ್ತಾ ಇದೆ. ಶಶಿವದನೆ ಬಾಯಿಬಿಟ್ಟು ಸ್ಪಷ್ಟವಾಗಿ ಹೇಳಿಲ್ಲ. ಆದರೂ....

ನಾಗೇಂದ್ರ : ಊಹೆ.

ರಾಜಪ್ಪ : ಊಹೆಯೇ. ಆದರೆ........ಸರಿಯಾದ ಊಹೆ.

ನಾಗೇಂದ್ರ : ಅದೇ ವಿಷಯ. ನಾನೂ ಹೇಳಬೇಕೂ ಅಂತಿದ್ದೆ. ನೀವೇ ಎತ್ತಿದಿರಿ. ನಿಮಗೆ ಒಂದು ಎಚ್ಚರಿಗೆ ಕೊಟ್ಟಿರುತ್ತೇನೆ. ನಾನು– ಶಶಿವದನೆ ಮದುವೆಯಾಗುವುದಕ್ಕೆ ನೀವು ಒಪ್ಪುತ್ತೀರೋ ಬಿಡುತ್ತೀರೋ ಅದು ಬೇರೆ ವಿಷಯ. ಆದರೆ ನನ್ನದು ಒಂದು

ನಾಗೇಂದ್ರ : ಹೊದವರ್ಷವೇ ಸ್ಟಡೀಸ್ ಬಿಟ್ಟುಬಿಟ್ಟೆ ಅನ್ನಿ, ನನ್ನ ಫಾದರ್ (ತಂದೆ) ಹೋಗಿ ಆಗಲೇ ಎರಡು ವರ್ಷವಾಯ್ತು, ಪೂರ್ ಮದರ್ (ಪಾಪ, ತಾಯಿ) ಒಬ್ಬಳೆ, ಲೈಫ್ (ಜೀವನ) ಬಹಳ ಕಷ್ಟವಾಗಿ ಒಂದು ಐದಾರು ಸಾವಿರ ಬಿಟ್ಟಿದ್ದಾರೆ ನನಗೆ ಅನ್ನಿ. ಸ್ವಂತ ಬಂಗಲೆ. ಬಂಗಲೆ ಬಾಡಿಗ್ಗೆ ಕೊಟ್ಟಿದೆ ಅನ್ನಿ. 'ಹಿಲ್‌ವ್ಯೂ', 'ಸೌತ್‌ಎಂಡಿ'ನಲ್ಲಿ; ನಮಗ್ಯಾಕೆ ಅಷ್ಟು ದೊಡ್ಡಮನೆ. ನಾನು ನಮ್ಮ ಮದರ್ (ತಾಯಿ) ಸಿಟೀನಲ್ಲೇ ಇರೋದು. ನಮ್ಮ ಮದರ್ (ತಾಯಿಯ) ಹತ್ತಿರವೂ ಇದೆ ಸುಮಾರಾಗಿ, ಜ್ಯೂಯೆಲ್ಸ್ (ಒಡವೆ); ಡ್ರೆಸ್, (ಬಟ್ಟೆ ಬರೆ) ಈವನ್ ಸಮ್ ಕ್ಯಾಷ್ (ಸ್ವಲ್ಪ ನಗದೂ ಕೂಡ). ನಾನೂ ಲೈಫ್ (ಜೀವನದಲ್ಲಿ)ನಲ್ಲಿ ಸೆಟಲ್ ಆಗಬೇಕು. (ನೆಲೆ ನಿಲ್ಲಬೇಕು) ಅಂತ ನಿಶ್ಚಯ ಮಾಡಿಬಿಟ್ಟಿದ್ದೀನಿ. ಏನಾದರೂ ಬಿಸಿನೆಸ್ (ವ್ಯಾಪಾರ) ಷುರುಮಾಡಿಬಿಟ್ಟು ಏನಾದರೂ....

[ಅಷ್ಟು ಹೊತ್ತಿಗೆ ಶಶಿವದನೆ ತಟ್ಟೆಯಲ್ಲಿ ಟೀ ತಂದು, ಟೀಪಾಯ್ ಮೇಲೆ ಇಟ್ಟು ಹೋಗುವಳು. ರಾಜಪ್ಪ ನಾಗೇಂದ್ರನಿಗೆ ಟೀಕೊಟ್ಟು ತಾನೂ ತೆಗೆದುಕೊಳ್ಳುವನು. ನಾಗೇಂದ್ರ ಟೀ ತೆಗೆದುಕೊಂಡು]

ಏನಾದರೂ ತಮ್ಮಿಂದ ಸ್ವಲ್ಪ ಸಹಾಯವಾದೀತೇನೋ ಅಂತ......ಬಂದೆ.....

ರಾಜಪ್ಪ : ಏನು ಮಾಡಲಿ........ಎಲ್ಲ ಗೌರ್ನಮೆಂಟ್ ಬಾಂಡು, ಡಿಪಾಸಿಟ್ಟು.......I am so sorry.........ಏನು ಮಾಡಲಿ.....

ನಾಗೇಂದ್ರ : ಮನಿ (ದುಡ್ಡು) ಅಲ್ಲ......ನಮ್ಮ (ತಾಯಿನೂ) ಮದರ್ರೂ......ಸಹ.......ಓಲ್ಡಾಗಿ (ಮುದುಕರಾಗಿ) ಬಿಟ್ರು........ಲೈಫಿನಲ್ಲಿ (ಬದುಕಿನಲ್ಲಿ) ನಾನು ಸೆಟ್ಲಾಗ(ಬಾಳ)ಬೇಕಾದರೆ..........ಏನೋ ಮ್ಯಾರಿಯೆಜ್ (ಮದುವೆ) ಮಾಡಿಕೊಂಡು.......

ರಾಜಪ್ಪ : ಆಗ ಬೇಕಾದ್ದೆ Wish you a happy marriage (ಒಳ್ಳೆ ಕಡೆ ಮದುವೆಯಾಗಲಿ ಬೇಗ)

ನಾಗೇಂದ್ರ : Without a bride ! (ಹೆಣ್ಣಿಲ್ಲದೆ!)

ರಾಜಪ್ಪ ಮತ್ತೆ ಒಳಕ್ಕೆ ಬಂದು ಕುಳಿತುಕೊಳ್ಳುವನು.)

ರಾಜಪ್ಪ : ಶಶೀ, ಕುಳಿತುಕೋ ಸ್ವಲ್ಪ ಮಾತಾಡುವುದಿದೆ.

ಶಶಿವದನೆ : (ಕುಳಿತುಕೊಳ್ಳುವಳು.) ಏನಪ್ಪ?

ರಾಜಪ್ಪ : ಇದೇಕೆ, ನನ್ನಲ್ಲೂ ಮುಚ್ಚು ಮರೆಯೆ ಶಶೀ?

ಶಶಿವದನೆ : ಏನಪ್ಪ ನೀನು ಕೇಳುವುದು?

ರಾಜಪ್ಪ : ಚಂದ್ರಶೇಖರನ ವಿಚಾರ ಎಲ್ಲವನ್ನೂ ನೀನು ನನಗೆ ಹೇಳಿದೆಯೇನು?

ಶಶಿವದನೆ : ಗೊತ್ತಿರಬಹುದೆಂದು ಸುಮ್ಮನಿದ್ದೆ. ಈಗ ನಾಗೇಂದ್ರ ಹೇಳಿದನಲ್ಲ. ನನ್ನ ಮಾತು ನಂಬುತ್ತೀಯೋ, ಅವನ ಮಾತು ನಂಬುತ್ತೀಯೋ?

ರಾಜಪ್ಪ : ವಿಚಿತ್ರವಾಗಿ ಮಾತಾಡುತ್ತೀಯಲ್ಲ ಶಶಿ. ನಿನಗಿಂತ ಅವನು ಹೆಚ್ಚೆ? ಅವನಿಂದ ನನಗೇನಾಗಬೇಕು?

ಶಶಿವದನೆ : ಹಾಗಾದರೆ ನಾನು ಹೇಳುವುದನ್ನು ಕೇಳಪ್ಪ. ನಾಗೇಂದ್ರ ಹೇಳಿದ್ದೆಲ್ಲವನ್ನೂ ನಾನೂ ಒಳಗಿನಿಂದಲೇ ಕೇಳಿದೆ. ಹಾಗೆ ಹೊಂಚು ಹಾಕಿ ಕೇಳಬಾರದು; ನನಗೆ ಗೊತ್ತು. ಆದರೆ ನಾಗೇಂದ್ರನ ಸ್ವಭಾವವೂ ನನಗೆ ಗೊತ್ತು. ಆದ್ದರಿಂದ ಅವನು ಹೇಳುವುದನ್ನು ನಾನು ಆಲಿಸಿದೆ. ಚಂದ್ರಶೇಖರನ ವಿಚಾರ ಏನೇನೋ ಹೇಳಿದ್ದಾನೆ. ಚಂದ್ರಶೇಖರನ ವಿಚಾರ ಅವನಿಗೇನುಗೊತ್ತು? ಅವನನ್ನು ಸಂಪೂರ್ಣವಾಗಿ ಒಲಿದಿರುವ ನನಗೆ ಗೊತ್ತು. ಅವನು ಬಡವನೇ ಆಗಿರಬಹುದು: ಆದರೆ ಅವನಲ್ಲಿ ಪ್ರೇಮ ಸಂಪತ್ತಿದೆ. ಬುದ್ಧಿಸಂಪತ್ತಿದೆ, ಹೆಂಗರುಳಾದರೂ ಪೌರುಷವಿದೆ. ಅವನು ತನ್ನ ಸಮಾಜವನ್ನೂ ಎದುರಿಸಿ ನಿಂತಿರುವ ವೀರವ್ಯಕ್ತಿ! ಅಪ್ಪ, ಅವನ ವಿಚಾರ ನಾನು ಇಷ್ಟು ಹೇಳ ಬಾರದಾಗಿತ್ತು. ಯತ್ನವಿಲ್ಲ. ಹೇಳಬೇಕಾಯಿತು ನಾನು ಅವನನ್ನು ಬಿಟ್ಟು ಬೇರೆ ಯಾರನ್ನೂ ಮದುವೆಯಾಗಲೊಲ್ಲೆ. ನನ್ನ ಸುಖ ನಿನ್ನ ಸಂತೋಷವಲ್ಲವೆ ಅಪ್ಪ?

ರಾಜಪ್ಪ : ಹೌದು ಶಶಿ, ಖಂಡಿತವಾಗಿಯೂ ಹೌದು. ಅವನು ಬ್ರಾಹ್ಮಣನಾಗಿರುವುದಾಗಲಿ, ಕೆಲಸವಿಲ್ಲದಿರುವುದಾಗಲಿ,

ಎಚ್ಚರಿಕೆ.

ರಾಜಪ್ಪ : ಏನು?

ನಾಗೇಂದ್ರ : ಏನೂ ಅಂದ್ರೆ.....ಬಾಯಿ ಬಿಟ್ಟು ಸ್ಪಷ್ಟವಾಗಿ ಹೇಳಿ ಬಿಡ್ತೀನಿ. ಶಶಿವದನೆ ಅವಳ ಕ್ಲಾಸ್ ಮೇಟ್......ಚಂದ್ರಶೇಖರ ಅಂತ...... Brahmin (ಬ್ರಾಹ್ಮಣ) ಅವನನ್ನು ಲವ್ ಮಾಡುತ್ತಾಳೆ. ಅದು ನನಗೆ ಗೊತ್ತು. ಆದರೆ He is not worthy of her love: She is an angel, and he is a beggar ! (ಅವಳ ಪ್ರೇಮಕ್ಕೆ ಅವನು ಪಾತ್ರನಲ್ಲ; ಅವಳು ದೇವತೆ, ಅವನು ಭಿಕಾರಿ.)

ರಾಜಪ್ಪ : ಏನು ನೀವು ಹೇಳುವುದು! ಚಂದ್ರಶೇಖರ beggar! (ತಿರುಕ!) ಹಾಗೆ ಕಾಣುವುದಿಲ್ಲವಲ್ಲ?

ನಾಗೇಂದ್ರ : ನಾನು ನಿನ್ನೆ ಮೊನ್ನೆಯ ಬಿಸಿ ಬಿಸಿ ವರ್ತಮಾನ ಹೇಳುತ್ತಿದ್ದೇನೆ. ಅವನನ್ನ ಮನೆ ಬಿಟ್ಟು ಹೊರಕ್ಕೆ ಓಡಿಸಿಬಿಟ್ಟಿದ್ದಾರೆ. .......ಮೊನ್ನೆತಾನೆ ಮನೆಯಿಲ್ಲದೆ.........ಬೀದಿಬೀದಿ ತಿರುಗುತ್ತಿದ್ದಾನೆ. ಕೆಲಸವಂತೂ ಇಲ್ಲವೇ ಇಲ್ಲ. ಮನೆಯಲ್ಲೇ ಇದ್ದ ಅಂತ ಇಟ್ಟುಕೊಳ್ಳಿ. ಈಗಿನ ಕಾಲದಲ್ಲಿ ನಮಗೇ ಸಿಕ್ಕುವುದಿಲ್ಲ– ಆ ಬಡಬ್ರಾಹ್ಮಣನಿಗೆ ಕರೆದು ಕೆಲಸ ಕೊಡುವವರು ಯಾರು? ಅಪ್ಪ ಮುದಿ.........ಇವತ್ತೋ ನಾಳೆಯೋ–ಇಷ್ಟುವರೆಗೆ ಅವನು ಮನೆಯಲ್ಲೇ ಇದ್ದಿದ್ದರೂ. ಈಗಂತೂ ನಾನು ಹೇಳಿದ ಹಾಗೆ, ಅವನು ಬೀದಿ ಬೀದಿ ಅಲೆಯುತ್ತಿದ್ದಾನೆ, ಹೊಟ್ಟೆಗಿಲ್ಲದೆ. ಶಶಿವದನೆಯ ಲವರ್ (ಪ್ರಿಯ) ಹೀಗಿರುವಾಗ.......ತಿಳಿದೂ ತಿಳಿದೂ ಅವಳ ಸುಖಕ್ಕೆ ಕಲ್ಲು ಹಾಕುತ್ತೀರಾ? ನನ್ನ ವಿಚಾರ ಇರಲಿ. ಚಂದ್ರಶೇಖರನ ವಿಚಾರದಲ್ಲಿ ಎಚ್ಚರವಾಗಿರಬೇಕು.

ರಾಜಪ್ಪ : ಇದು ನನಗೆ ಗೊತ್ತಿರಲಿಲ್ಲ. ಇರಲಿ ಶಶೀನ consult (ವಿಚಾರಿಸಿ) ಮಾಡಿ ನಿಮಗೆ ತಿಳಿಸುತ್ತೇನೆ. ಇನ್ನೇನೂ ವಿಶೇಷವಿಲ್ಲವಲ್ಲ?

ನಾಗೇಂದ್ರ : ಇನ್ನೇನೂ ಇಲ್ಲ. ಇನ್ನು ಹೋಗುತ್ತೇನೆ Good Bye. (ಎಂದು ಹೊರಡುವನು. ರಾಜಪ್ಪ ಅವರ ಸಂಗಡ ಹೋಗುವನು. ಶಶಿವದನೆ ಬಂದು ಟೀ ಬಟ್ಟಲುಗಳನ್ನು ತಟ್ಟೆಗೆ ತೆಗೆದಿಡುವಳು.

ಸರಿಮಾಡಿಕೊಳ್ಳುತ್ತಿರಲು ಮಾಲಿ ಹೂಗಳನ್ನು ಹಿಡಿದು ತಂದು, ಶಶಿವದನೆ ಕನ್ನಡಿಯ ಮುಂದೆ ಇದ್ದುದನ್ನು ನೋಡಿ, ಹಿಂದಕ್ಕೆ ಸರಿದು, 'ಅವ್ವಾ' ಎನ್ನುವನು.) ಓಹೋ, ಇಷ್ಟು ಬೇಗ ಹೂ ತಂದು ಬಿಟ್ಟೆಯೊ? .........ಎಲ್ಲಿ, (ಮಾಲಿ ಕೊಡುವನು) ತೆಗೆದುಕೊಂಡು (ಆಶ್ಚರ್ಯದಿಂದ) ಇದೇನೋ, ಅಷ್ಟೂ ಗುಲಾಬಿ ಹೂಗಳನ್ನೇ ಕಿತ್ತು ಬಿಟ್ಟಿದ್ದಿ. ಏಕೋ? ನಾನು ಹೇಳಿದೆನೆ ಹಾಗಂತ?

ಮಾಲಿ : ಇಲ್ಲ ಅವ್ವ, ಬೆಳಗ್ಗೆ ತಾನೆ ಹೊಸ ಹೂಕಿತ್ತು ಮಡಗಿದ್ದೆ. ಅದನ್ನ ತೆಗೆದುಬಿಡು ಅಂದ್ರಲ್ಲ– ಬಾಡೂ ಇರಲಿಲ್ಲ ಏನೂ ಇಲ್ಲ. ಬಾಡಿದೆ ಅಂದ್ರಿ. ಅದರಮೇಲೆ ತಮಗೆ ಖುಷಿಬೀಳಲಿಲ್ಲ. ಇವನ್ನಾದ್ರೂ ಮಡಗಿದರೆ ಖುಷಿ ಬೀಳ್ತೀರೇನೋ ಅಂತ ತಂದೆ. ಕೋಪಿಸಿಕೊಳ್ಳಬೇಡಿ ತಾಯಿ, ತಾವು ಮುಂಚೇನೇ ಹೇಳಲಿಲ್ಲ.........ನನಗೆ ಗೊತ್ತಾಗಲಿಲ್ಲ. ಅವರು ಬರ‍್ತಾರೋ ಏನೋ, ಅಲ್ಲವಾ ತಾಯಿ?

ಶಶಿವದನೆ : ಬರ‍್ತಾರೆ ಅಂತ ಯಾರೋ ಹೇಳಿದೋರು. ಹೋಗೋ ಆಚೆ ಹೇಳದೆಕೇಳದೆ ಕುಯ್ದುಕೊಂಡು ಬಂದು ಈಗ ಏನೇನೋ ಹೇಳ್ತಾನೆ.

ಮಾಲಿ : ಕೋಪಿಸಿಕೊಳ್ಳಬೇಡಿ ನಮ್ಮವ್ವ – ಈ ಹೂಗಳು ಹ್ಯಾಗೆ ಅರಳಿದ್ದವು ಅಂತ. ಸರಿಯಾಗಿ ಅರಳಿದ್ವು ಅವ್ವ, ಆವೇ ಹೇಳ್ತಾವೆ, ಕೋಪಿಸಿಕೊಳ್ಳಬೇಡಿ, ಹೋಗ್ತೀನವ್ವ. (ಮಾಲಿ ಹೋಗುವನು.)

ಶಶಿವದನೆ : (ಹೂಗಳನ್ನು ಪಾತ್ರೆಯಲ್ಲಿ ಸರಿಯಾಗಿ ಇಡುತ್ತ) ಆಹಾ, ಮಾಲಿ ಹೇಳುವುದು ನಿಜವಾದರೆ! ಚಂದ್ರ, ನನ್ನ ಚಂದ್ರ ಈಗ ಬಂದರೆ! ಬಂದರೆ! ಓ ಚಂದ್ರಶೇಖರ, ಬಾ, ಬಾ, ನೀನು ಈಗ ಬರುವೆ ಎಂದು ಈ ಹೂಗಳು ಈಗ ಅರಳುತ್ತ ಹೇಳುವುವಂತೆ. ಬಾ ಚಂದ್ರಶೇಖರ! (ಎಂದು ಹೂಗಳನ್ನು ಸರಿಮಾಡಿಕೊಳ್ಳುತ್ತ ಕೆಳಗಿನ ಹಾಡು ಹೇಳುತ್ತಿರುವಳು.)

ಹಾಡು : ಬಾ ಬಾ ಚಂದಿರಾ
ಮಧುರ ಮಧುರ ಮನಮೋಹನ ಸುಂದರ ॥ ಪ ॥

ಅಡ್ಡಿಯೇನೂ ಅಲ್ಲ. ಆಗಲಿ, ನೀನು ಅವನನ್ನೇ ಮದುವೆಯಾಗುವಂತೆ. ಯೋಚನೆ ಮಾಡಬೇಡ ಹೋಗು (ಎಂದು ಸಂತೈಸುವನು. ಶಶೀವದನೆ ಟೀ ತಟ್ಟೆಯನ್ನು ತೆಗೆದುಕೊಂಡು ಹೋಗುವಳು. ರಾಜಪ್ಪ ಸಿಗರೇಟು ಹೊತ್ತಿಸಿಕೊಂಡು ಸೇದುತ್ತಿರುವನು. ಶಶಿವದನೆ ಮತ್ತೆ ಬರುವಳು. ರಾಜಪ್ಪ ಮೇಲಕ್ಕೆ ಎದ್ದು) ಶಶೀ, ವಾಕ್ ಹೋಗೋಣ ಬರುತ್ತೀಯೇನು?

ಶಶಿವದನೆ : ಹೊತ್ತಾಗಿ ಹೋಯಿತು, ನಾನು ಅಡಿಗೆ ಮಾಡಬೇಡವೆ? ನೀನು ಹೋಗಪ್ಪ.

ರಾಜಪ್ಪ : ನಾನೂ ಸ್ವಲ್ಪ ದೂರ ಹೋಗಿಬಿಟ್ಟು ಬರುತ್ತೇನೆ. ರಾಜಶೇಖರ್ ಮನೆ ಎಲ್ಲಿ ನಿನಗೆ ಗೊತ್ತೆ?

ಶಶಿವದನೆ : ಇಲ್ಲ, ಪಾರ್ಕಿನ ಅತ್ತಲಾಕಡೆ ಅಗ್ರಹಾರದಲ್ಲಿ ಅಂತ ಹೇಳಿದ್ದ.

ರಾಜಪ್ಪ : ಇರಲಿ ನಾನು ಹೋಗಿಬಿಟ್ಟು ಬರುತ್ತೇನೆ. ಬೇಗ ಬಂದು ಬಿಡುತ್ತೇನೆ(ಎಂದು ಒಳಕ್ಕೆ ಹೋಗುವನು.)

ಶಶೀವದನೆ : ಲೋ, ಮಾಲಿ, ಮಾಲಿ

ಮಾಲಿ : (ಬಂದು) ಏನ್ರವ್ವ

ಶಶಿವದನೆ : ಈ ಹೂಗಳನ್ನೆಲ್ಲ ತೆಗೆದು ಆಚೆಗೆ ಹಾಕಿ ಬೇರೆ ಹೊಸ ಹೂ ತಂದು ಇಡು–

ಮಾಲಿ : ಬೆಳಗ್ಗೆ ತಾನೆ ತಂದು ಇಟ್ಟಿದ್ದೆನಲ್ಲವ್ವ?

ಶಶಿವದನೆ : ಬಾಡಿಹೋಗಿದೆ. ಬೇರೆ ತಂದು ಇಡು ಹೋಗು. (ಮಾಲಿ ಹೋಗುವನು.)

ರಾಜಪ್ಪ : (ಒಳಗಿನಿಂದ ಬೇರೆ ಉಡುಪು ಹಾಕಿಕೊಂಡು ಬಂದು) ಹೋಗುತ್ತೇನೆ ಶಶಿ. ಇನ್ನೇನು ಬಂದು ಬಿಟ್ಟೆ.

ಶಶಿವದನೆ : ಆಗಲಪ್ಪ

(ರಾಜಪ್ಪ ಹೊರಡುವನು.)

ಶಶಿವದನೆ : ಹಾ! (ಎಂದು ಸಂತೋಷದಿಂದ) ನಿಟ್ಟುಸಿರು ಬಿಡುತ್ತ ಸೋಫಾದ ಮೇಲೆ ಕುಳಿತುಕೊಳ್ಳುವಳು, ಕ್ಷಣಹೊತ್ತಾದ ಮೇಲೆ ಎದ್ದು, ಕನ್ನಡಿಯ ಮುಂದೆ ನಿಂತು, ತನ್ನನ್ನು ತಾನು ಹೆಮ್ಮೆಯಿಂದ ನೋಡಿಕೊಳ್ಳುತ್ತ ತಲೆಕೂದಲು

ಇರು – ಅವರು ಒಪ್ಪಿದ್ದಾರೆ.

ಚಂದ್ರಶೇಖರ : ಏನಂದೆ! ?

ಶಶಿವದನೆ : ಅಪ್ಪ ಒಪ್ಪಿದ್ದಾರೆ, ನಾನು ನಿನ್ನನ್ನು ಮದುವೆಯಾಗಲು.

ಚಂದ್ರಶೇಖರ : ಆದರೆ ನಾಗೇಂದ್ರ ಬಂದದ್ದು ಏಕೆ?

ಶಶಿವದನೆ : ಹೇಳಬೇಕೇನು? ಆ ಅನಿಷ್ಟವನ್ನು ಏನು ಹೇಳುವುದು ಎಂದು ಸುಮ್ಮನಿದ್ದೆ. ಅವನು ಹೇಳಿದ ಮಾತು ಹೇಳಲು ನನಗೆ ಬಾಯಿ ಬಾರದು. ನಿನ್ನ ವಿಚಾರದಲ್ಲಿ ಎಚ್ಚರವಹಿಸಬೇಕೆಂದು.......ನಿನ್ನನ್ನು ಮನೆ.....ನೀನು ಮನೆಬಿಟ್ಟು ಹೊರಟು ಬೀದಿ.......ಕೆಲಸವಿಲ್ಲ......ಎಂದು ಅಪ್ಪನಿಗೆ ದುರ್ಬೋಧನೆ ಮಾಡಿದ. ಅಪ್ಪ ಅವನಿಗೆ ಅಷ್ಟು ಕಿವಿಗೊಡಲಿಲ್ಲ ಅಂತ ತೋರುತ್ತೆ. ನೀನು ಬ್ರಾಹ್ಮಣನಾಗಿರುವುದಾಗಲಿ, ಕೆಲಸವಿಲ್ಲದಿರುವುದಾಗಲಿ, ಮದುವೆಗೆ ಅಡ್ಡಿಯಿಲ್ಲವೆಂದು ಹೇಳಿದರು. ಚಂದ್ರ......ಇನ್ನೇನಾಗಬೇಕು ಚಂದ್ರ? ಇನ್ನು ಮೇಲೆ ನಾವಿಬ್ಬರೂ ಸುಖವಾಗಿರಬಹುದಲ್ಲವೆ ಚಂದ್ರ?

ಚಂದ್ರಶೇಖರ : (ಎಂದು ಗುಲಾಬಿಯ ಹೂವೊಂದನ್ನು ಚಂದ್ರಶೇಖರನಿಗೆ ಕೊಡಲು ಹೋಗಿ, ಮುಳ್ಳುಚುಚ್ಚಿಕೊಳ್ಳಲು, ಹಾ, ಎಂದು ಕೆಡುಹುವಳು. ಚಂದ್ರಶೇಖರನು ಅದನ್ನು ತೆಗೆದುಕೊಂಡು) ಶಶೀ, ಹೃದಯವನ್ನು ಕಲ್ಲು ಮಾಡಿಕೊ. ಕನಸಿನ ಪ್ರಪಂಚದಿಂದ ಹೊರಗೆ ಸ್ವಲ್ಪ ಬಾ, ಗುಲಾಬಿ ಹೂದಳಗಳ ಕೆಳಗೆ ಇರುವ ಮುಳ್ಳು ಒಮ್ಮೆಯಾದರೂ ಚುಚ್ಚುವುದಲ್ಲವೆ? ಶಶೀ. ಶಶೀ ನನ್ನ ನಿಂದಿಸಬೇಡ, ನನ್ನ ತಪ್ಪಲ್ಲ.

ಶಶಿವದನೆ : ಏನು ಚಂದ್ರ ನೀನು ಹೇಳುವುದು?

ಚಂದ್ರಶೇಖರ : ನಾಗೇಂದ್ರ ಹೇಳಿದ್ದು ಸುಳ್ಳಲ್ಲ, ಶಶಿ. ಮನೆ ಬಿಟ್ಟು ಹೊರಡುವುದು ನನಗೆ ಅನಿವಾರ್ಯವಾಯಿತು. ನಮ್ಮ ತಂದೆಯೆ ಹೊಡೆದೋಡಿಸಿದರು ಎಂದು ಬೇಕಾದರೆ ತಿಳಿದುಕೋ. ಈಗ ಮನೆಬಿಟ್ಟಿದ್ದೇನೆ. ಬೀದಿ ಬೀದಿ ಅಲೆಯುತ್ತಿದ್ದೇನೆ. ಈಗ ನಾನು ಸರ್ವ ಸ್ವತಂತ್ರ; ಬೀದಿಯ ಭಿಕಾರಿ.

ಶಶಿವದನೆ : (ಚಂದ್ರಶೇಖರನನ್ನು ತಬ್ಬಿಕೊಂಡು) ನೀನು ಹೇಳುವುದು ಸುಳ್ಳು, ಸುಳ್ಳು ಎನ್ನು.

ಮುಗಿಲಿನೆಡರುಗಳ ಮೆಟ್ಟುತ ಬಾಬಾ
ಪ್ರೇಮ ಚಂದ್ರಿಕೆಯ ಬೀರುತ ಬಾರ
ಎನ್ನ ಮನೋಜಲನಿಧಿ ಉಕ್ಕಿಸುತ
ಎದೆಯ ಕುಮುದವನ್ನರಳಿಸುತ
(ಎದುರು ಬಾಗಿಲಿನಿಂದ ಮಾಲಿ ಚಂದ್ರಶೇಖರನನ್ನು ಕರೆ ತಂದು ಬಿಟ್ಟು ಮೆಲ್ಲನೆ ಬಾಗಿಲು ಹಾಕಿಕೊಂಡು ಹೋಗುವನು. ಶಶಿವದನೆಯ ಹಾಡು ಮುಗಿಯುವವರೆಗೂ ಚಂದ್ರಶೇಖರ ಬಾಗಿಲ ಬಳಿಯೇ ಸದ್ದು ಮಾಡದೆ ನಿಂತಿರುವನು. ಹಾಡು ಮುಗಿದ ಮೇಲೆ)

ಚಂದ್ರಶೇಖರ : ಪುಷ್ಪಪ್ರಿಯೇ!

ಶಶಿವದನೆ : (ಬೆದರಿ, ಆದರೆ ಸಂತೋಷದಿಂದ) ಚಂದ್ರಾ! ನಮ್ಮ ಮಾಲಿ ಹೇಳಿದ್ದು ದಿಟವಾಯ್ತು. ಈ ಹೂಗಳು ನಿನ್ನ ಬರುವನ್ನು ಬರೆಯುತ್ತಿರುವುದೆಂದು, ನಾಗೇಂದ್ರ ಮುಟ್ಟಿದ್ದ ಹೂಗಳನ್ನು ಹೊರಗೆ ಹಾಕಿಸಿ ನಿನಗೆ ಪ್ರಿಯವಾದ ಈ ಹೂಗಳನ್ನು ಇರಿಸಿರುವೆ. ಆದರೆ ಈಗ ನೀನು ಬರುತ್ತೀಯೆಂದು ಕನಸಿನಲ್ಲಿಯೂ ಕಂಡಿರಲಿಲ್ಲ.

ಚಂದ್ರಶೇಖರ : ಬರಬೇಕಾಯ್ತು ಬಂದೆ.

ಶಶಿವದನೆ : ಕುಳಿತುಕೋ ಚಂದ್ರ. ಸ್ವಲ್ಪ ಟೀ ತೆಗೆದುಕೊಂಡು ಬರುತ್ತೇನೆ.

ಚಂದ್ರಶೇಖರ : ಟೀ ಬೇಡ. ಈಗ ನಾನು ಕುಡಿಯುವುದಿಲ್ಲ. ನಾಗೇಂದ್ರ ಬಂದಿದ್ದನೆ?

ಶಶಿವದನೆ : ಚಂದ್ರ, ತುಂಬ ಬಳಲಿರುವಂತಿದೆ, ಏನು ಕೊರಗು? ಕೂದಲು ಬಾಚಿಕೊಂಡಿಲ್ಲ. ಬಾಚುತ್ತೇನೆ, ಕುಳಿತುಕೋ ಸ್ವಲ್ಪ ಟೀ ತೆಗೆದುಕೊ. ಆಮೇಲೆ ಸಂತೋಷವಾಗಿ ಮಾತಾಡೋಣ.

ಚಂದ್ರಶೇಖರ : (ವ್ಯಗ್ರಮನಸ್ಕನಾಗಿಯೇ) ನಾಗೇಂದ್ರ ಬಂದಿದ್ದನೆ ಶಶಿ, ನಾನು ಕೇಳಿದ್ದಕ್ಕೆ ಉತ್ತರ ಹೇಳು.

ಶಶಿವದನೆ : ಬಂದಿದ್ದ. ಹದಿನೈದು ನಿಮಿಷವಿರಬಹುದು ಹೋಗಿ. ನಿನ್ನನ್ನು ನೋಡಿ ಸಂತೋಷವಾಗಿರಲು ನಾಗೇಂದ್ರನ ನೆನಪೇಕೆ ತರುತ್ತೀಯೆ. ಇನ್ನೇನು ನಮ್ಮ ತಂದೆ ಬರುತ್ತಾರೆ. ಸ್ವಲ್ಪ ಹೊತ್ತು

ಸುಮ್ಮನೆ ಹೊಟ್ಟೆಹೊರೆಯುವುದು ನನ್ನ ಗುರಿಯಲ್ಲ. ಏನನ್ನಾದರೂ ಮಾಡಬೇಕು. ದೊಡ್ಡ ಕೆಲಸ ಮಾಡಬೇಕು. ಹತ್ತು ಜನಕ್ಕೆ ಉಪಕಾರವಾದರೆ ಅಷ್ಟೇ ಸಾಕು. ಎಲ್ಲರಂತೆ ತಿಂದು ತೇಗಿ, ಕೊನೆಗೊಂದುದಿನ ಮಡಿಯುವುದು ನನ್ನ ಇಚ್ಛೆಯಲ್ಲ. ಶಶಿ ಈಗ ನಾನು ಪ್ರೇಮಮಯನಲ್ಲ. ಪ್ರೇಮಮಯಿಯಾಗಬೇಕೆಂದು ಬಯಕೆ. ಹಿರಿಹಂಬಲು. ನಾನು ನಿನ್ನ ಪ್ರೀತಿಸುವುದು ಎಷ್ಟೆಂದು ನೀನರಿಯೆ: ನನ್ನ ಪ್ರೇಮ ನಿಷ್ಕಳಂಕವಾದುದು. ನಿಜವಾದುದು ಆದರೆ ಇದು ಸ್ವಾರ್ಥಪ್ರೇಮ. ಸಂಕುಚಿತ ಪ್ರೇಮ, ಇದು ವ್ಯಕ್ತಿ ಪ್ರೇಮ. ಪ್ರೇಮದ ಒಂದು ಮುಖ, ಮೊದಲು ವ್ಯಕ್ತಿಪ್ರೇಮವನ್ನು ಬಲಪಡಿಸಿಕೊಳ್ಳಬೇಕು ಶಶಿ; ಅದನ್ನೂ ಅಲ್ಲಾಡಿಸಬೇಕು; ತಲೆಕೆಳಗುಮಾಡಬೇಕು. ಇನ್ನೂ ಅಲ್ಲಿಯೇ ಇರುತ್ತದೆಯೇ ನೋಡಬೇಕು. ಸುಖದಲ್ಲಿ ಕಂಡ ಪ್ರೇಮ ಕಷ್ಟದಲ್ಲಿ ಸ್ಥಿರವೇ ಎಂಬುದನ್ನು ಕಾಣಬೇಕು. ತೋಳತೆಕ್ಕೆಯಲ್ಲಿ ತುಟಿಗೆ ತುಟಿ ಮುತ್ತುಕೊಟ್ಟು ಮೈಮರೆಯುವುದು ಪ್ರೇಮವಲ್ಲ, ಶಶಿ, ಪ್ರೇಮದ ನೆರಳು; ಒಲಿದ ಹೃದಯವನ್ನೂ ಅಗಲಿ, ಅಗಲಿಕೆಯ ಬೆಂಕಿಯಲ್ಲಿ ಬೆಂದು ; ಇದರಿಂದ ಕಿಡಿಗೊಂಡ ಪ್ರೇಮ ಪ್ರಜ್ವಲಿಸಲು ಆಗ ತೋರುವ ಪ್ರೇಮ ಸಮಗ್ರವಾದದ್ದು, ಸಂಪೂರ್ಣವಾದದ್ದು. ಆದರೂ ಇದು ವ್ಯಕ್ತಿಪ್ರೇಮ. ಪ್ರೇಮದ ಒಂದು ಮುಖ, ಈ ಪ್ರೇಮವನ್ನೂ ವಿಶಾಲಗೊಳಿಸಬೇಕು. ಪ್ರೇಮ ಕವಲೊಡೆಯಬೇಕು. ಕವಲು ಬಿಳಲು ಬಿಡಬೇಕು. ಪ್ರೇಮದಿಂದ ಪ್ರೇಮಕಟ್ಟಿ ಪ್ರೇಮ ಹೆಚ್ಚು ಪ್ರೇಮಕ್ಕೆ ಪ್ರೇರಕವಾಗಬೇಕು. ಪ್ರೇಮಕ್ಕೆ ಆಸರೆಯಾಗಬೇಕು. ಈ ಪ್ರೇಮ ಸಾಕ್ಷಾತ್ಕಾರ ಮಾಡಿಕೊಳ್ಳಲು ಹೊರಟಿದ್ದೇನೆ. ಇದೇ ನನ್ನ ಮಹೋದ್ದೇಶ. ಮಹಾಕಾರ್ಯ; ಈ ಪ್ರೇಮಸಾಕ್ಷಾತ್ಕಾರವಿಲ್ಲದ ಸಮಾಜಸೇವೆ, ದೇಶಸೇವೆ ಎಲ್ಲ ವ್ಯರ್ಥ–ಯಾವ ಜಾತಿಯೇಕೆ, ಯಾವ ಮತವೇಕೆ, ಯಾವ ಕುಲವೇಕೆ., ಯಾವ ಹೆಸರೇಕೆ, ಯಾವ ದೇವರ ಪೂಜೆತಾನೆ ಏಕೆ, ಶಶಿ, ಶಶಿ ಪ್ರೇಮಮಂದಿರದ ಹೆಬ್ಬಾಗಿಲ ಇಬ್ಬರೂ ತೆರೆದಿರುವೆವು. ಪ್ರೇಮಮೂರ್ತಿಯ

ಚಂದ್ರಶೇಖರ : ಸುಳ್ಳಲ್ಲ, ಶಿಶಿ, ಸತ್ಯ, ಸತ್ಯಕ್ಕಿಂತಲೂ ಸತ್ಯ. ನನ್ನ ತಂಗಿಯನ್ನು ಊಟಕ್ಕೆಂದು ಮನೆಗೆ ಕರೆದುಕೊಂಡು ಹೋದೆ. ಹೋದಕ್ಷಣದಲ್ಲಿ, ಹೋದ ದಾರಿಯಲ್ಲಿ ಹಿಮ್ಮರಳಿದ್ದೇನೆ. ಗೊತ್ತು ಗುರಿಯಿಲ್ಲದ ಪಯಣದ ಮೇಲೆ ಹೊರಟಿದ್ದೇನೆ. ಶಶಿವದನೆ ಈಗ ನಿನ್ನನ್ನು ಬೀಳ್ಕೊಳ್ಳುವುದಕ್ಕೆ ಬಂದಿದ್ದೇನೆ. ಮದುವೆಯಾಗುವುದಕ್ಕಲ್ಲ.

ಶಶಿವದನೆ : ಏನು, ಬೀಳ್ಕೊಳ್ಳುವುದಕ್ಕೆ? ಬೀಳ್ಕೊಳ್ಳುವುದಕ್ಕೆ? ಚಂದ್ರ, ಚಂದ್ರ, ಹೋಗಬೇಡ. ನೀನು ಇಲ್ಲಿರಲು ಏನು ಅಡ್ಡಿ? ನಮ್ಮ ತಂದೆಯನ್ನು ಬೇಡಿಕೊಳ್ಳುತ್ತೇನೆ. ಅವರನ್ನು ಒಪ್ಪಿಸುತ್ತೇನೆ. ಅವರುತಾನೆ ಯಾರಿಗಾಗಿ ಬದುಕಿರಬೇಕು? ನನಗಾಗಿ, ನನ್ನ ಸುಖಕ್ಕಾಗಿ ತಾನೆ? ನನಗಾಗಿ ನಿನ್ನನ್ನೂ ಸುಖವಾಗಿರಿಸಲು ಅವರು ಹಿಂಜರಿಯುವರೆ?

ಚಂದ್ರಶೇಖರ : ಶಶಿ, ಅದು ಸಾಧ್ಯವಿಲ್ಲ, ನಿಮ್ಮ ತಂದೆಯ ಹಂಗಿನಲ್ಲಿ ನಾನು ಬಾಳಲಾರೆ.

ಶಶಿವದನೆ : ಹಂಗೆಲ್ಲಿ ಬಂತು? ನೀನು ನನ್ನನ್ನು ಮದುವೆಯಾದರೆ, ನನ್ನದೆಲ್ಲವೂ ನಿನ್ನದಾಗುವುದಿಲ್ಲವೆ?

ಚಂದ್ರಶೇಖರ : ಭೋಗಿಸುವ ಅಪೇಕ್ಷೆ ನನಗಿಲ್ಲ ಶಶಿ. ನಿನ್ನ ಮೂಲಕ ದೊರೆತ ಸಂಪತ್ತನ್ನೂ ನಾನು ಭೋಗಿಸಲಾರೆ. ನನ್ನ ಸ್ವಶಕ್ತಿಯಿಂದ, ಸ್ವಪ್ರಯತ್ನದಿಂದ, ಕಡೆಗೆ ಅದು ಮನೆ ಮನೆಗೆ ಹೋಗಿ ಎತ್ತುವ ಭಿಕ್ಷೆಯಾದರೂ ಸರಿಯೆ, ನಾನು ಸಂಪಾದಿಸಬಲ್ಲ ಅಲ್ಪ ಸುಖದಲ್ಲಿ ಅಪಾರ ಸುಖವಿದೆ. ಆ ಅಲ್ಪ ಸುಖದಲ್ಲಿ ಮತ್ತೊಬ್ಬರು, ಮಗದೊಬ್ಬರು ಭಾಗಿಯಾದರೆ ಅದು ಇಮ್ಮಡಿಯಾಗುವುದು.

ಶಶಿವದನೆ : ನೀನು ಹೇಳುವುದು ಸರಿ ಚಂದ್ರ, ಹಾಗಾದರೆ ನಾನೂ ನಿನ್ನೊಡನೆ ಹೊರಟು ಬರುತ್ತೇನೆ. ನೀನು ಸುಖವಾಗಿರುವುದಾದರೆ ನೀನು ಬೇಕು, ನೀನು ಕಷ್ಟ ಪಡುತ್ತಿದ್ದರೆ ನೀನು ಬೇಡವೆ? ನಿನ್ನ ಕಷ್ಟದಲ್ಲಿ ನಾನೂ ಭಾಗಿಯಾಗುತ್ತೇನೆ.

ಚಂದ್ರಶೇಖರ : ಶಶಿ, ನಾನು ಹೇಳುವುದನ್ನು ಪೂರ್ತಿ ಕೇಳು. ನಿನ್ನನ್ನು ಈಗ ಬಿಟ್ಟು ಹೋದ ಮಾತ್ರಕ್ಕೆ ನಿನ್ನ ತೊರೆಯಲು ಬಂದಿಲ್ಲ.

ಹೃದಯಕುಸುಮವ ಕಂಡು
ಹೊರಗೆ ಬರಲಾರೆ, ಬಾ –
ನೊಳಗೆ ಇರಲಾರೆ.
ಆ ಹೂವ ನಾನೊಲ್ಲೆ
ಬೇರೆಯಿರುವಳು ನಲ್ಲೆ
ಆದರದ ಕಂಡು
ಬರಲಾರೆ ಇರಲಾರೆ
ಓ ಒಡೆಯ ಎನ್ನೊಡೆಯ
ನನ್ನ ಹೊರದೂಡ್ಯೆ?
ಆದರಿನೊಮ್ಮೆ ನಾ ಬರಲು ದಯೆಯಿಂದ ನೋಡ್ಯೆ !

ಚಂದ್ರಶೇಖರ : (ಅವಳ ಹಾಡು ಮುಗಿಯುವ ಹೊತ್ತಿಗೆ ಬಂದು, ಎದುರಿನಲ್ಲಿ ನಿಂತು)
ಕಾಡುಹಕ್ಕಿಯ ಹಾಡ ದೂರದಿಂ ಕೇಳಿ
ಬೇಡನಂತಿದೊ ಬಂದೆ ಬೆದರ ಬೇಡ.
(ಎಂದು ಅವಳು ಹಾಡಿದ ದನಿಯನ್ನೇ ಅನುಕರಿಸಿ ಒಂದು ಚರಣ ಹೇಳುವನು. ಮುಗಿದ ಮೇಲೆ ನಕ್ಕು., ಪಕ್ಕದಲ್ಲಿ ಕುಳಿತುಕೊಳ್ಳುವನು.) ತಂಗೀ, ಹಾಡು ಕಲಿತಿರುವೆ, ಚೆನ್ನಾಗಿದೆಯೋ? ಇನ್ನೂ ಕಲಿಸಿಕೊಡುವೆಯಾ?

ತಿರುಕಿ : ಚೆನ್ನಾಗಿದೆ. ಈಗ ನೀನು ಹೇಳಿದ್ದನ್ನು ಕಲಿಸಿಕೊಟ್ಟವರು ಯಾರು? ಕೋಮಲಕಂಠವಿದ್ದು ನುಡಿವ ಹೃದಯವಿದ್ದರೆ ಹಾಡು ತಾನಾಗಿ ಚಿಮ್ಮುವುದು. ಹೇಳಿಕೊಡಬೇಕೆ? ಇಷ್ಟು ಬೇಗ ಹಿಂದಿರುಗುತ್ತಿ ಎಂದು ತಿಳಿದಿರಲಿಲ್ಲ. ಏನಾದರೇನು. ನೀನು ಮಾಡಿದ ಕೆಲಸ ನನಗೊಪ್ಪಲಿಲ್ಲ. ನಾನಾಗಿದ್ದರೆ ಶಶಿವದನೆಯನ್ನು ಬಿಟ್ಟು ಬರುತ್ತಿರಲಿಲ್ಲ; ಒಡನೆಯೇ ಕರೆದುಕೊಂಡು ಬರುತ್ತಿದ್ದೆ.

ಚಂದ್ರಶೇಖರ : ನೀನು ನಾನಾಗುವ ಬದಲು ಶಶಿವದನೆ ಯಾಗಿದ್ದರೆ?

ತಿರುಕಿ : ಮನೆಬಿಟ್ಟು ಹೊರಟು ಬರುತಿದ್ದೆ. ನಿನ್ನ ಹಿಂಬಾಲಿಸುತ್ತಿದ್ದೆ. ಆದರೆ ಶಶಿವದನೆಯಲ್ಲಿ ನನ್ನ ಎದೆಕೆಚ್ಚೆಲ್ಲಿ ಬರಬೇಕು? ಈಗ ಅವಳನ್ನೂ ಅಗಲಿಕೆಯು ಅಗ್ನಿಕುಂಡಕ್ಕೆ

ದರ್ಶನವಿನ್ನೂ ಆಗಿಲ್ಲ. ಮೂರ್ತಿದರ್ಶನ ಮಾಡುತ್ತೇನೆ. ನೀನೂಮಾಡು, ಹೋಗುತ್ತೇನೆ, ಇನ್ನು: ಮತ್ತೆ ಬರುತ್ತೇನೆ. ನಿನಗಾಗಿಯೇ ಬರುತ್ತೇನೆ. ಎಂದು ಎಂದು ಹೇಳಲಾರೆ. ಇದುವರೆಗೆ ಕಣ್ಣಿನಿಂದ ಕಾಣುತ್ತಿದ್ದೆವು. ಇನ್ನು ಮೇಲೆ ಹೃದಯದಿಂದ. ಇದುವರೆಗೆ ನನ್ನ ಕಣ್ಣೆದುರಿಗೆ ನೀನು, ನಿನ್ನಕಣ್ಣೆದುಡಿಗೆ ನಾನು, ಇನ್ನು ಮೇಲೆ ನನ್ನ ಹೃದಯದಲ್ಲಿ ನೀನು, ನಿನ್ನ ಹೃದಯದಲ್ಲಿ ನಾನು, ನಿನ್ನ ಹೃದಯದಲ್ಲಿ.........ನನ್ನನ್ನಿರಿಸಿಕೊಳ್ಳದಿರಬೇಡ, ಹೊರಡುತ್ತೇನೆ ಶಶಿ. (ಶಶಿವದನೆ ಕುರ್ಚಿಯ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅಳುತ್ತಿರುವಳು) [ಚಂದ್ರಶೇಖರ ಅವಳ ಕುರುಳು ನೇವರಿಸಿ, ಹಣೆಗೆ ಮುದ್ದಿಟ್ಟು] ಶಶಿ, ಅಳಬೇಡ, ಹೋಗುತ್ತೇನೆ ಪ್ರೇಮಮಯಿಯಾಗು. ಪ್ರೇಮಸಾಕ್ಷಾತ್ಕಾರ ಮಾಡಿಕೋ. (ಎಂದು ಹೊರಟು ಹೋಗುವನು. ಶಶಿವದನೆ ಹಾಗೆಯೇ ಕುರ್ಚಿಯ ಕೈಮೇಲೆ ಬಾಗಿ ಅಳುತ್ತಿರುವಳು.)

– ತೆರೆ ಬೀಳುವುದು –

**ನೋಟ – ೩**

[ಊರಾಚೆಯ ಕಾಡುದಾರಿಯ ಮರದಡಿಯಲ್ಲಿ; ಮರದಡಿಯ ಬೋರೆಯ ಮೇಲೆ ತಿರುಕರ ಹುಡುಗಿ ಕುಳಿತು ಹಾಡುತ್ತಿರುತ್ತಾಳೆ.]

ಎಲ್ಲಿಂದ ಬಂದೆ! ನಾನೆಲ್ಲಿಂದ ಬಂದೆ
ಎಲ್ಲಿ ಪೋಗುತ್ತಿರುವೆ? ಎಲ್ಲಿ, ಎಲ್ಲಿ?

ಯಾರ ತೋಟದ ಒಳಗೊ
ಹೊಕ್ಕು ನಾ ನಿಂತಿರುವೆ
ಬೇಲಿಯಾ ಹೊರನಿಂತು
ಬೇಡುವುದ ಬಿಟ್ಟು?

ಹೂದೋಟದೊಡೆಯನಾ

ನನ್ನ ಕೇಳಿದೆಯಾ? ನಿನ್ನ ಒಳಗೆ ಒಂದು ಬೆಳಕಿದೆ. ಒಂದು ಶಕ್ತಿ ಇದೆ. ಅದು ಒಯ್ದಲ್ಲಿಗೆ, ತೋರಿದೆಡೆಗೆ ಹೋಗುತ್ತಿರುವೆ. ಹೋಗುವುದು ಧರ್ಮ.

ಚಂದ್ರಶೇಖರ : ಆಹಾ! ತಂಗಿ ನಿನ್ನ ಅರಿವು ಶಶಿವದನೆಗೆ ಇಲ್ಲ.

ತಿರುಕಿ : ಅವಳ ಚೆಲುವು ನನಗಿಲ್ಲ.

ಚಂದ್ರಶೇಖರ : ತಂಗಿ, ಅವಳ ಚೆಲುವು ಅವಳಿಗೆ, ನಿನ್ನ ಚೆಲುವು ನಿನಗೆ. ಒಲಿದ ಮೇಲೆ ಚೆಲುವಿನ ಮಾತೆಲ್ಲಿಯದು? ಅವಳನೊಂದು ರೀತಿ ಒಲಿದಿರುವೆ. ನಿನ್ನನೊಂದು ರೀತಿ ಒಲಿದಿರುವೆ.

ತಿರುಕಿ : ಒಲಿದಿರುವೆಯಾ ಹಹ್ಹಾಹಾ (ಎಂದು ಗಟ್ಟಿಯಾಗಿ ಗಹಗಹಿಸಿ ನಗುವಳು.) ಒಲಿದಿರುವೆಯಾ ಚಂದ್ರ?

ಚಂದ್ರಶೇಖರ : ನೀನು ನನ್ನ ತಂಗಿಯಲ್ಲವೆ? ದೊರೆತ ತಂಗಿಯಲ್ಲವೆ? ಇನಿಯಳನ್ನು ತೊರೆದಾಯ್ತು: ನಿನ್ನನೂ ತೊರೆಯಬೇಕಲ್ಲ! ಏನು ಮಾಡಲಿ ತಂಗಿ?

ತಿರುಕಿ : ತೊರೆಯಬೇಕಾದರೆ ತೊರೆ. ನಿನ್ನ ಹಿಂಬಾಲಿಸಬೇಕೆಂದರೆ ನಾನು ಹಿಂಬಾಲಿಸುವೆ.

ಚಂದ್ರಶೇಖರ : ಬೇಡ ತಂಗಿ; ನೀನು ಊರಿಗೆ ಹಿಂದಿರುಗು – ಶಶಿವದನೆಯ ಬಳಿಗೆ ಹೋಗು, ಅವಳಿಗೆ ಧೈರ್ಯ ಹೇಳು; ನಿನ್ನ ಶಕ್ತಿಯನ್ನು ಅವಳಲ್ಲಿ ತುಂಬು, ನಿನ್ನ ಸ್ಥೈರ್ಯವನ್ನು ಅವಳಲ್ಲಿ ತುಂಬು, ನನಗೆ ಕಲಿಸಿದ ಪಾಠವನ್ನು ಅವಳಿಗೂ ಕಲಿಸು, ಹೋಗು. ನಾನು ಹೋಗುತ್ತೇನೆ. ಇದೋ ಹೊರಟೆ (ಎಂದು ಎದ್ದೇಳುವನು)

ತಿರುಕಿ : (ತಾನೂ ಎದ್ದು) ಆಗಲಿ, ನೀನು ಹೇಳಿದಂತೆಯೇ ಆಗಲಿ, ಆದರೆ........ನೀನು ಹೋಗುವ ದಾರಿ.......ಮಾಡುವ ಕೆಲಸ.........ಗುರಿ...ಈ ನಡುವೆ ಹೊಟ್ಟೆ ಹೊರೆಯುವ ಮಾರ್ಗ?

ಚಂದ್ರಶೇಖರ : ಅಗತ್ಯಬಿದ್ದರೆ ಭಿಕ್ಷೆ ಬೇಡುತ್ತೇನೆ ತಂಗಿ. ಹಸಿವಿನಿಂದ ಸಾಯುವುದಿಲ್ಲ. ಖಂಡಿತಸಾಯಲಾರೆ. ಬದುಕಬೇಕು, ಬದುಕಿ ಏನನ್ನಾದರೂ ಸಾಧಿಸಬಹುದು. ಶಶಿವದನೆಯನ್ನು....... ನಿನ್ನನ್ನು...... ಬಾಳಗೆಳತಿಯರನ್ನಾಗಿ ಮಾಡಿಕೊಳ್ಳಬೇಕು.

ತಳ್ಳಿಬಂದಿರುವುದು ನ್ಯಾಯವಲ್ಲ?

ಚಂದ್ರಶೇಖರ : ನಾನೂ ಅದರಲ್ಲಿಯೇ ಬಿದ್ದಿರುವೆನಲ್ಲವೆ? ಅಗಲಿಕೆಯ ಅಗ್ನಿಕುಂಡದಲ್ಲಿ ಪ್ರೇಮವನ್ನೂ ಪುಟವಿಡಬೇಕು.

ತಿರುಕಿ : ನಿನ್ನ ಪ್ರೇಮತತ್ವ ಕೋಮಲೆಯರಿಗೆ ಹಿಡಿಯುವುದಿಲ್ಲ. ಹೆಂಗಸಿನ ಹೃದಯವನ್ನು ನೀನೇನು ಬಲ್ಲೆ?

ಚಂದ್ರಶೇಖರ : ನೀನು ಈ ರೀತಿ ನುಡಿಯುವುದನ್ನು ಕೇಳಿ –

ತಿರುಕಿ : ಕೋಪವೇ ಚಂದ್ರ?

ಚಂದ್ರಶೇಖರ : ಕೋಪ! ನಿನ್ನ ಮೇಲೆ ! ಅದು ಅಸಾಧ್ಯ – ಒಂದು ಪ್ರಶ್ನೆ ಕೇಳಬೇಕೆನ್ನಿಸುತ್ತದೆ. ನೀನು ಏನೂ ತಿಳಿದುಕೊಳ್ಳದಿದ್ದರೆ........

ತಿರುಕಿ : ನನ್ನ ಹೃದಯವನ್ನರಿಯೆಯಾ ನೀನು? (ದೀನತೆಯಿಂದ)

ಚಂದ್ರಶೇಖರ : ನಕ್ಕು, ಹೆಂಗಸಿನ ಹೃದಯ ನನಗೆ ಹೇಗೆ ಗೊತ್ತಾಗಬೇಕು? ಪ್ರೇಮವೆಂದರೇನು ನಿನಗೆ ಗೊತ್ತ ತಂಗಿ? ಕೇಳಬಾರದ ಪ್ರಶ್ನೆಯನ್ನು ಕೇಳಿದ್ದೇನೆ. ಕೋಪಿಸಬೇಡ ತಂಗಿ?

ತಿರುಕಿ : (ಗಹಗಹಿಸಿ ನಕ್ಕು ಭಾವಪರವಶಳಾಗಿ ರಾಗವಾಗಿ) ಈ ಜಗತ್ತಿನಲ್ಲಿ ಪ್ರೇಮವೊಂದನ್ನು ಬಿಟ್ಟು ಮತ್ತೇನೂ ನನಗೆ ಕಾಣಿಸುವುದಿಲ್ಲ. ಕ್ರೌರ್ಯವನ್ನು ಕಂಡಲ್ಲಿ ಪ್ರೇಮದೃಷ್ಟಿಯಿಂ ನೋಡುವುದು; ಚೆಲುವಿಲ್ಲದ ಕಡೆ ಒಲವಿನಿಂ ಚೆಲುವ ತುಂಬುವುದು. ಒಲವಿಲ್ಲದ ಕಡೆ ಒಲವನೇ ಎರೆಯುವುದು. ಇಂತು ಎಸಗುತ್ತಿರಲು, ಹಣತೆಯಿಂ ಹಣತೆ ಹತ್ತಿಸುವ ತೆರದಲ್ಲಿ. ಒಲವಿನಿಂ ಒಲವಿಲ್ಲದ ಕಡೆ ಒಲವ ಹೊತ್ತಿಸಿ, ಇಳೆಯಲ್ಲಿ ಒಲವು ಬೆಳಗುವಂತೆ ಮಾಡುವುದು; ಒಲವು ಗೆಲ್ಲುವಂತೆ ಮಾಡುವುದು; ಹಕ್ಕಿಗಳಿಂದ, ಮರಗಳಿಂದ, ಹರಿವ ಹೊನಲುಗಳಿಂ, ಮುಗಿಲುಗಳಿಂ, ಎಳೆಮಕ್ಕಳಿಂ ನಾ ಕಲಿತ ಪಾಠ.

ಚಂದ್ರಶೇಖರ : ನಿನ್ನಿಂದ ನಾ ಕಲಿತೆ ಪಾಠ. ನೀನು ಹೇಳಿದ್ದು ಸತ್ಯ ತಂಗಿ. ನೀನು ಹೇಳಿದ್ದು ಅನುಷ್ಠಾನಕ್ಕೆ ತರುವೆ. ಏನು ಮಾಡಲಿ ತಂಗಿ ಈಗ? ಮನೆಬಿಟ್ಟು ಬಂದುದಾಯ್ತು? ಶಶಿವದನೆಯನ್ನು ತೊರೆದಾಯ್ತು, ಮುಂದೇನು ಮಾಡಲಿ ತಂಗಿ?

ತಿರುಕಿ : ಮನೆ ಬಿಟ್ಟಾಗ ನನ್ನ ಕೇಳಿದೆಯಾ? ಶಶಿವದನೆಯ ತೊರೆದಾಗ

ಹಣ್ಣು ತಿಂದು ಇನ್ನು ಮೂರು ದಿನವಾದರೂ ಉಪವಾಸವಿರಬಲ್ಲೆ, ಹೋಗಿ ಬರುತ್ತೇನೆ ತಂಗಮ್ಮ.

ತಿರುಕಿ : (ಎರಡು ಕೈಗಳಿಂದಲೂ ಕಣ್ಣು ಮುಚ್ಚಿಕೊಂಡು) ಹೋಗಿಬಾ. ಚಂದ್ರ, ಹೋಗಿ ಬಾ.
(ಚಂದ್ರಶೇಖರ ಹೊರಡುವನು, ತಿರುಕಿ ಕಣ್ಣು ಮುಚ್ಚಿಕೊಂಡೇ ನಿಧಾನವಾಗಿ ಊರಿನಕಡೆ ಹೆಜ್ಜೆ ಹಾಕುವಳು.

– ತೆರೆ ಬೀಳುವುದು –

## ನೋಟ – ೪

[ರಾಜಪ್ಪನ ಮನೆ : ಶಶಿವದನೆಯ ಕೊಟಡಿ. ಎದುರುಗಡೆ ಮಂಚ. ಮಂಚದ ಎಡಗಡೆ ಒಂದು ಬಾಗಿಲು – ಹೊರಗಿನಿಂದ ಬರತಕ್ಕದ್ದು; ಬಲಗಡೆ ಒಂದು, ಒಳಕ್ಕೆ ಹೋಗತಕ್ಕದ್ದು; ಮಂಚದ ಮುಂದೆ ದುಂಡುಮೇಜು ಅದರ ಮೇಲೆ ಹೂವಿನ ಪಾತ್ರೆ. ಆಕಡೆ ಈಕಡೆ ಎರಡು ಕುರ್ಚಿಗಳು. ಉಚಿತ ತೋರಿದ ಇತರ ಎರಡು ಸಾಮಾನು ಪರಿಕರ. ಮಧ್ಯಾಹ್ನ ೧–೨ಘಂಟೆ ಸಮಯ. ಶಶಿವದನೆ ಮಂಚದ ಮೇಲೆ ಮಲಗಿ ಪುಸ್ತಕವೊಂದನ್ನು ಓದುತ್ತಿರುವಳು.]

ಮಾಲಿ : (ಎಡಗಡೆ ಮೆಲ್ಲನೆ ಬಾಗಿಲನ್ನು ತೆರೆದುಕೊಂಡು ಬಂದು. ಶಶಿವದನೆಯ ತಲೆ ಬಳಿ ನಿಂತು, ಮೆಲುದನಿಯಲ್ಲಿ) ಅವ್ವಾ, ಅವಳು....ಆ ತಿರುಕರ ಹುಡುಗಿ ಬಂದಿದ್ದಾಳೆ.

ಶಶಿವದನೆ : (ಎದ್ದು ಕುಳಿತು) ಮತ್ತೆ ಮರೆತೆಯಾ? ಇನ್ನೊಂದು ಸಲ ತಿರುಕರ ಹುಡುಗಿ ಎಂದರೆ ನಿನ್ನ ಹೊರಕ್ಕೆ ಕಳಿಸಿಬಿಡುತ್ತೀನಿ. ತಿಳಿಯಿತೆ. ಹೋಗು, ತಂಗಮ್ಮನನ್ನು ಕರೆದುಕೊಂಡು ಬಾ. ಬುದ್ದಿಯೋರು ಮಲಗಿದ್ದಾರೆ ತಾನೇ?

ಮಾಲಿ : ಮಲಗಿದ್ದಾರೆ. ಅವ್ವ. ಚೆನ್ನಾಗಿ ನಿದ್ದೆ ಮಾಡುತ್ತಿದ್ದಾರೆ.
[ಶಶಿವದನೆ ಎದ್ದು ಹೋಗಿ ಗೋಡೆ ಬೀರುವಿನ ಬಾಗಿಲು ತೆಗೆದು, ತಟ್ಟೆಯಲ್ಲಿ ಹಣ್ಣುತಂದು ಮೇಜಿನ ಮೇಲಿಟ್ಟು, ಮಂಚದ ಮೇಲೆ ಕುಳಿತುಕೊಳ್ಳುವಳು.
ಮಾಲಿ ತಿರುಕಿಯನ್ನು ಕರೆದುಕೊಂಡು ಬಂದು ಬಿಟ್ಟು, ಮೆಲ್ಲನೆ ಬಾಗಿಲು ಎಳೆದುಕೊಂಡು ಹೋಗುವನು]

ತಿರುಕಿ : ನೀನು ಭಿಕ್ಷೆ ಬೇಡುವೆಯಾ !

ಚಂದ್ರಶೇಖರ : ಏಕಾಗಬಾರದು? ಅವಮಾನವೇನು? ಭಿಕ್ಷೆಯೇ ನನ್ನ ಬಾಳಗುರಿಯಲ್ಲವಲ್ಲ? ಅದನ್ನೇ ಕಸುಬು ಮಾಡಿಕೊಳ್ಳುವುದಿಲ್ಲವಲ್ಲ? ಬೇರೊಂದು ಗುರಿ ಮುಟ್ಟಲು ತಿರುಪೆ ಸಾಧನವಾದರೆ – ಆ ತಿರುಪೆಯೂ ಒಂದು ತಪಸ್ಸಲ್ಲವೆ? ನಿನಗರಿಯದೇ? ಇದು. ಈದಿನವೇ, ಈಗಲೇ ಮುಂದಿನ ಊರಿಗೆ ಪ್ರಯಾಣ ಮಾಡುತ್ತೇನೆ. ಅಲ್ಲಿಂದ ಮುಂದೆ......ಮುಂದೆ.........ಮುಂದೆ: ಹಿಂದಿರುಗುವುದು ನಾನರಿಯೆ. ಶಶಿವದನೆಯ ಗೆಳತಿಯಾಗಿರು ಹೋಗು; ಹೊರಡುವ ಮುನ್ನ ಅವಳ ಒಲವ ನೆನೆದೆನೆಂದು ತಿಳಿಸು. ನನ್ನನ್ನು ಮರೆಯಬೇಡವೆಂದು ನನ್ನ ಪರವಾಗಿ ಬೇಡಿಕೊ. ನನ್ನ ಗುರುತಾಗಿ.... ಗುರುತಾಗಿ... (ಮೈ ಕೈಮೇಲೆಲ್ಲ ಹುಡುಕುತ್ತ) ನನ್ನ ಗುರುತಾಗಿ, ತಂಗಿ, ನೀನವಳ ಬಳಿಯಿರು. ಕಾಳಕಳೆಯುತ ಬರಲು, ನಾನು ಹಿಂದಿರುಗದಿರಲು, ನೆನಪು ಮಾಸುತಬರಲು –ನೆನಪು ಮಾಸುತ ಬರಲು, ಒಲವು ಇಂಗಿ, ಶಶಿಯ ಮನಸ್ಸು ತಿರುಗಿದರೆ, ಒಲಿದರೆ, ಈ ನನ್ನ ಕಡೆಯ ಮಾತ ಅವಳಿಗಂದು ಹೇಳು : "ಚಂದ್ರಶೇಖರನ ಹೃದಯದಲ್ಲಿ ಶಶಿಗೆ ಎಂದೆಂದೂ ಸ್ಥಾನವಿದೆ. ಶಶಿ ಬೇರೆಯ ಕಡೆ ಇಂಬುವಡೆಯಲು ಬಯಸಿದರೆ ಚಂದ್ರಶೇಖರನ ಒಲವಿನ ಒಪ್ಪಿಗೆ ಇದೆ. ಅವನ ಒಲವು ಹಿಂಗದು, ಬತ್ತದು, ಇದು ಅವನ ಕಡೆಯ ಬಿಡುನುಡಿಯಾಗಿತ್ತು, ಬಿಚ್ಚುನುಡಿಯಾಗಿತ್ತು" – ಎಂದು ಹೇಳು ಹೋಗು. (ಎಂದು ಹೊರಡಲುದ್ಯುಕ್ತನಾಗುವನು.)

ತಿರುಕಿ : (ಮಡಿಲಿನಿಂದ ಹಿಡಿತೆಗೆದು ಹಿಡಿದು) ಚಂದ್ರ, ಹಿಡಿ, ಇದು ತೆಗೆದುಕೋ. ನಾನು ಇನ್ನೇನು ಕೊಡಬಲ್ಲೆ?

ಚಂದ್ರಶೇಖರ : ಏನದು?

ತಿರುಕಿ : ನಾನು ತಿರಿತಂದ ಬೋರೆಯ ಹಣ್ಣು.

ಚಂದ್ರಶೇಖರ : (ಬೊಗಸೆಯೊಡ್ಡುವನು. ಅವನ ಬೊಗಸೆ ತುಂಬ ಹಣ್ಣು ತುಂಬುವಳು ತಿರುಕಿ) ತಂಗಿ, ನೀನೊಲವಿನಿಂದಿತ್ತ ಈ

ನೀನು ಜೀವಕಳೆದುಕೊಂಡರೆ ಅವನು ಜೀವದಿಂದುಳಿಯುವನೆ? ಅವನು ಕೊಟ್ಟ ಭರವಸೆ ಪೊಳ್ಳಲ್ಲ; ಅವನು ಹಸಿವಿನಿಂದ ಸಾಯುವುದಿಲ್ಲ; ಸಾಯಲಾರ; ಬದುಕಿರುತ್ತಾನೆ. ಬದುಕಬಲ್ಲ; ನಿನಗಾಗಿ ಬದುಕಿರುತ್ತಾನೆ. ನೀನು ಬದುಕಿರದೆ ಅವನು ತಾನೆ ಎಂದು ಬದುಕಿರಬಲ್ಲ? ಅವನೂ ಪ್ರಾಣ ಕಳೆದುಕೊಳ್ಳುವನು. ನೀನು ಬದುಕಿದ್ದು, ಅವನ ಬಾಳ ಗೆಳತಿಯಾಗಿದ್ದು, ಅವನ ಬಾಳ ಬೆಳಕಾಗಿದ್ದು, ಅವನ ಜೀವನರಥದ ಗಾಲಿಯಾಗಿದ್ದು, ಅವನನ್ನು ನಡೆಸಿಕೊಂಡು ಹೋಗಬೇಡವೆ? ಸಾಯುವುದು ದೊಡ್ಡದೆ? ಅದಕ್ಕೆ ಯಾವ ಧೈರ್ಯಬೇಕು? ಬದುಕಿದ್ದು, ಕಷ್ಟಗಳನ್ನು ಎದುರಿಸಿ, ಗುರಿಸಾಧಿಸಲು ಧೈರ್ಯ ಬೇಕು, ಶಕ್ತಿ ಬೇಕು.

ಶಶಿವದನೆ : ಹೌದು, ಹೌದು. ಆದರೆ ನಾನೇನು ಮಾಡಲಿ. ನಾಳೆ ಬೆಳಗ್ಗೆಯೇ ನಾಗೇಂದ್ರ ಬರುತ್ತಾನೆ. ನಮ್ಮ ತಂದೆ ನಿಶ್ಚಯ ಮಾಡಿಬಿಟ್ಟಿದ್ದಾರೆ. ಆ ಬದುಕಿಗಿಂತಲೂ ಸಾವೇ ಮೇಲಲ್ಲವೆ? ಹೇಳು, ಬೇಗ ಹೇಳು. ನೀನು ಒಪ್ಪುವುದಾದರೆ, ಇದೋ, ಈಗಲೇ......(ಎಂದು ತಲೆದಿಂಬಿನ ಕೆಳಗಿದ್ದ ಒಂದು ಭರಣಿಯನ್ನು ತೋರಿಸಿ.)

ತಿರುಕಿ : (ಬೆಚ್ಚಿಬಿದ್ದು ಅದನ್ನು ತೆಗೆದುಕೊಂಡು) ಅಕ್ಕ, ನಿನ್ನ ನಿಶ್ಚಯದಲ್ಲಿ ನನಗಿನ್ನೂ ಸಂಪೂರ್ಣ ನಂಬಿಕೆ ಹುಟ್ಟಿರಲಿಲ್ಲ. ನನಗೊಂದು ಬಿಡುಗಡೆಯ ಮಾರ್ಗ ತೋರಿದೆ; ಕೆಚ್ಚುಬೇಕು, ಬಲಬೇಕು. ಅಬಲೆ ಸಬಲೆಯಾಗಬೇಕು.

ಶಶಿವದನೆ : ಏನು ಬೇಗ ಹೇಳು : ನೀನು ಹೇಳಿದಂತೆ ಮಾಡುತ್ತೇನೆ. ಬೇಗ ಹೇಳು.

ತಿರುಕಿ : ಈದಿನ ಬೆಳಗಿನ ಜಾವ.......ಮೊದಲ ಕೋಳಿಯ ಕೂಗು ಕೇಳುವ ಹೊತ್ತಿಗೆ ಸರಿಯಾಗಿ ಬರುತ್ತೇನೆ. ನೀನು ಸಿದ್ಧವಾಗಿರಬೇಕು. ಮನೆ ಬಿಡಬೇಕು, ತಂದೆಯ ತೊರೆಯಬೇಕು. ನನ್ನೊಡನೆ ಬರಬೇಕು. ಕಾಡು–ಮೇಡು, ಹಳ್ಳ–ಕೊಳ್ಳ., ಹೊಲ–ಗದ್ದೆ ಹಾಯಬೇಕು. ನಿಂತಕಡೆ ನಿಲ್ಲದೆ ಮುಂದುವರಿಯಬೇಕು. ಚಂದ್ರಶೇಖರನ ಹಾದಿ ಹಿಡಿಯುವೆ.

ಶಶಿವದನೆ : ತಂಗಮ್ಮ, ಕುಳಿತುಕೋ. (ತಿರುಕಿ ಕುಳಿತುಕೊಳ್ಳುವಳು.) ತಂಗಮ್ಮ, ಚಂದ್ರ ನನ್ನನಗಲಿ ಇಂದಿಗೆ ವಾರವಾಯ್ತು. ನಮ್ಮ ತಂದೆ ನನಗೆ ಕೊಟ್ಟಿದ್ದ ಗಡುವೂ ಇಂದಿಗೆ ಮುಗಿಯುವುದು. ತಂಗಮ್ಮ ನಾನು ಸಹಿಸಲಾರೆ. ನಾಗೇಂದ್ರನನ್ನು ನಾನು ಕೈಹಿಡಿಯಲಾರೆ, ಅವನನ್ನು ಕೂಡಿ ಬಾಳುವುದಕ್ಕಿಂತಲೂ, ಪ್ರಾಣ ಬಿಡುವುದುತ್ತಮ. ದಾರಿ ತೋರಲಾರೆಯಾ ತಂಗಿ?

ತಿರುಕಿ : ನಾನು ಬಹಳ ಯೋಚಿಸಿ ನೋಡಿದೆ? ನನಗೂ ಏನೂ ದಾರಿತೋರದು. ಏನು ಮಾಡಲಿ ಅಕ್ಕ? ನಿನಗಾಗಿ ನಾನು ಪ್ರಾಣ ಒಪ್ಪಿಸಲು ಸಿದ್ಧಳಾಗಿದ್ದೇನೆ: ಆದರೆ ನನ್ನ ಪ್ರಾಣಕ್ಕೆ ನಿನ್ನ ಪ್ರಾಣ ಮಾನ ಕಾಯುವಷ್ಟು ಬೆಲೆಯಿಲ್ಲ.

ಶಶಿವದನೆ : ಹಾಗಾದರೆ, ನಿಶ್ಚಯಮಾಡಿ ಬಿಟ್ಟಿದ್ದೇನೆ ತಂಗಿ. ಯತ್ನವಿಲ್ಲ; ಬೇರೆ ದಾರಿಯಿಲ್ಲ.

ತಿರುಕಿ : ನಾಗೇಂದ್ರನನ್ನು –

ಶಶಿವದನೆ : ನಾಗೇಂದ್ರನನ್ನು ಮದುವೆ? ನನ್ನ ಪ್ರೇಮ ಪರೀಕ್ಷೆ ಮಾಡುತ್ತಿರುವೆಯಾ ತಂಗಿ? ಚಂದ್ರನ ಅಗಲಿಕೆ ಸಹಿಸಿಯಾಯ್ತು. ನಿಮಿಷ ನಿಮಿಷಕ್ಕೂ ಅವನ ಹಂಬಲ ಹೆಚ್ಚುತ್ತಿದೆ. ಬೆಳೆಯುತ್ತಿದೆ. ಬಲವಾಗುತ್ತಿದೆ. ನೀನು ಕೇಳಬೇಕಾದ ಅಗತ್ಯವಿಲ್ಲ. ನನ್ನ ಪ್ರೇಮಪರೀಕ್ಷೆಯಾಯ್ತು. ಚಂದ್ರಶೇಖರನನ್ನು ಬಿಟ್ಟು ಬದುಕಿರಲಾರೆ.

ತಿರುಕಿ : ಹಾಗಾದರೆ ನಿನ್ನ ನಿಶ್ಚಯವೇನು?

ಶಶಿವದನೆ : ನಿನಗೆ ಹೊಳೆಯಲಿಲ್ಲವೆ?

ತಿರುಕಿ : ಹೊಳೆದಿದೆ. ಆದರೂ ಕೇಳುತ್ತಿದ್ದೇನೆ. ಹೇಳು ಹೊತ್ತಾಯಿತು. ನಿಮ್ಮ ತಂದೆ ಎದ್ದು, ಕಂಡರೆ, ನಿನ್ನ ಗತಿ?

ಶಶಿವದನೆ : ಈ ರಾತ್ರಿ ನಿರ್ಮಲ ಚಿತ್ತದಿಂದ, ಶಾಂತ ಚಿತ್ತದಿಂದ, ಪ್ರೇಮವನ್ನು ಹೃದಯದಲ್ಲಿ ತುಂಬಿಕೊಂಡು ಚಂದ್ರನ ಹೆಸರು ಸ್ಮರಿಸುತ್ತ.....ಮಲಗುವೆನು. ನಾಳೆ ಬೆಳಿಗ್ಗೆ ಯಾರೂ ನನ್ನನ್ನು ದೀರ್ಘ ನಿದ್ರೆಯಿಂದ ಎಬ್ಬಿಸಲಾರರು.

ತಿರುಕಿ : ನೀನು ಹುಚ್ಚಿ: ಚಂದ್ರಶೇಖರನ ಬಾಳನ್ನು ಶೂನ್ಯ ಮಾಡುವೆಯೇನು? ನಿನ್ನ ಜೀವನದಲ್ಲಿ ಅವನ ಜೀವ:

ಹೋಗ್ತಾ "ರೂಮುಗುಡಿಸಿ ಹೂ ಕೊಯ್ದು ಇಟ್ಟಿರು" ಅಂತಾ ಹೇಳ್ತಿದ್ದರು. ಈವತ್ತೆಲ್ಲೋ ಬಹಳಾ ಹೊತ್ತಿಗೆ ಮುಂಚೇನೆ ಹೊರಟುಹೋಗವ್ರೆ ಬುದ್ದಿ. ಬತ್ತವ್ರೆ, ಬತ್ತವ್ರೆ ಅಂತ ನಾನೂ ಕಾದೆ, ಬರ್ನಿಲ್ಲ. ಏನು ಮಾಡ್ಲಿ? ಕದಾತಟ್ಟಿ ನೋಡ್ದೆ. ತೆಗೆದೈತೆ! ಹೋಗಿದ್ರೆ ವಾಪಸ್ ಬರಬೇಕು. ಹೋಗ್‌ದಿದ್ದರೆ ಕದಾ ಹಾಕಿರಬೇಕು. ಹೆಂಗಾದರೂ ಆಗಲಿ, ಮಲಗವ್ರೇನೋ ನೋಡಾನಾ ಅಂದ್ರೆ – ನಾನು ಹೇಂಗೆ ನೋಡ್ಲಿ ಬುದ್ದಿ. ಅದಕ್ಕೇ ನಿಮಗೆ ಹೇಳ್ದೆ ನನ್ನೊಡೆಯಾ; ಮಲಗವ್ರೋ ಹ್ಯೆಂಗೆ ನೋಡಿ ಅಂತ. ಮಲಗೂ ಇಲ್ಲ. ನೋಡಿ ಬುದ್ಧಿ ಬೇಕಾದ್ರೆ, ಈ ಕಡೆ ಬಾಗಿಲು ತೆಗೆದೇ ಐತೆ. (ಎಂದು ಎಡಗಡೆ ಬಾಗಿಲನ್ನು ನೋಡಿ – ಬರಿ ಬಾಗಿಲನ್ನು ತೆರೆಯುವನು. ರಾಜಪ್ಪ ನಿಂತಲ್ಲಿಯೇ ಕತ್ತೆತ್ತಿ ನೋಡುತ್ತಿರುವನು. ಮಾಲಿ ಹಿಂದಿರುಗಿ ಬಂದು, ಹೂವಿನ ಪಾತ್ರೆಯಿಂದ ಹಳೆಹೂ ತೆಗೆದು ಹೊಸ ಹೂ ಇಡುತ್ತಾ "ಬುದ್ಧೀ" ಎಂದು ಚಕಿತನಾಗುವನು. ಮತ್ತು ಕೂಗುವನು.)

ರಾಜಪ್ಪ : ಏನೋ ಅದು?

ಮಾಲಿ : ಇಲ್ಲಿ ನೋಡೀ ಬುದ್ದಿ ಮೇಜಿನ ಮೇಲೆ ಕಾಜಗ. ಅಮ್ಮಾವರ ಅಕ್ಕರ ಇದ್ದಂಗೈತೆ.

ರಾಜಪ್ಪ : ಬೇಗ ತೆಗೆದುಕೊಂಡು ಓದಿಕೊಳ್ಳುವನು. (ಮಾಲಿ ಬೆರಗಾಗಿ ನಿಂತಿರುವನು. ರಾಜಪ್ಪ ಓದಿಕೊಂಡು ಹಿಡಿದು ಕಾಗದವನ್ನು ಮೇಜಿನ ಮೇಲೆ ಹಾಕಿ ಕುರ್ಚಿ ಮೇಲೆ ದಿಗ್ಭ್ರಮೆಯಿಂದ ಕುಳಿತುಕೊಳ್ಳುವನು.)

ಮಾಲಿ : (ಬೆರಗಿನಿಂದ) ಏನು ಬುದ್ದಿ.
(ರಾಜಪ್ಪ ಮಾತಾಡುವುದಿಲ್ಲ.) ಏನು ಬುದ್ದಿ ಏನಾಗೈತೆ, ಚಂದ್ರಶೇಖರಪ್ಪಾವ್ರು.......

ರಾಜಪ್ಪ : ಮಾಲಿ, ಅದು ಹೇಗೆ ಊಹಿಸಿದೆ ನೀನು! ಇಷ್ಟೆಲ್ಲ ಅವನ ಪ್ರಭಾವ. ಚಂದ್ರಶೇಖರ ಊರು ಬಿಟ್ಟು ಹೋಗಿರುವನಂತೆ. ನಾಗೇಂದ್ರಪ್ಪನನ್ನು ತಾನು ಖಂಡಿತ ಮದುವೆಯಾಗುವುದಿಲ್ಲವಂತೆ. ಚಂದ್ರಶೇಖರನನ್ನು

ಅವನೊಡನೆ ನಿನ್ನನ್ನು ಸೇರಿಸುವೆ. ನನ್ನ ಕೆಚ್ಚುಮಾತನ್ನು ಹುಚ್ಚುಮಾತು ಎಂದು ತಿಳಿಯಬೇಡ, ಕಾಡಿನಲ್ಲಿಯೇ ಆಗಲಿ, ಯಾವ ಊರಿನಲ್ಲಿಯೇ ಆಗಲಿ, ನಮ್ಮ ಪ್ರಾಣ, ಮಾನಗಳಿಗೆ ಹಾನಿತಟ್ಟಿದರೆ ಇದೋ (ಎಂದು ಭರಣಿ ತೋರಿಸಿ) ನಮ್ಮಿಬ್ಬರನ್ನೂ ಕಾಪಾಡುವ ಸಂಜೀವನವಿಲ್ಲಿದೆ.

ಶಶಿವದನೆ : ಆಗಲಿ, ಆಗಲಿ, ಸಿದ್ಧವಾಗಿರುತ್ತೇನೆ. ಬಾ, ಬಾ. ಖಂಡಿತ ಬಾ. ನೀನು ಹೇಳಿದ ಹಾಗೆ ಮಾಡುತ್ತೇನೆ. ಹೋಗು, ಬೇಗ ಹೋಗು. ಹಣ್ಣುಹಿಡಿ(ಕೊಟ್ಟು) ಹೊರ ಬಾಗಿಲು ತೆರದಿರುತ್ತೇನೆ; ಈ ಬಾಗಿಲನ್ನೂ ತೆರೆದಿರುತ್ತೇನೆ.

ತಿರುಕಿ : ಬರುತ್ತೇನೆ: ಮೊದಲ ಕೋಳಿಯ ಕೂಗು. (ಎಂದು ಹೊರಡುವಳು.)

ಶಶಿವದನೆ : ಚಂದ್ರಾ, ಚಂದ್ರಶೇಖರ; ಶಶಿ ನಿನ್ನ ಬಿಟ್ಟಿರಳಾರಳು, ಬರುತ್ತಾಳೆ. ಬೇಗ ಬರುತ್ತಾಳೆ. (ಎಂದು ಅತ್ಯುದ್ವೇಗದಿಂದ ಹಾಗೆಯೇ ತಲೆದಿಂಬಿನ ಮೇಲೆ ಮೊಗವಿಕ್ಕುವಳು.)

– ತೆರೆ ಬೀಳುವುದು –

## ನೋಟ – ೫

[ಹಿಂದಿನದೇ: ಆದರೆ ಶಶಿವದನೆಯ ಮಂಚಕ್ಕೆ ಸೊಳ್ಳೆ ಪರದೆ ಹಾಕಿದೆ. ಬೆಳಗ್ಗೆ ೯ ಘಂಟೆ ಸಮಯ. ಮನೆ ಬಾಗಿಲು ತೆಗೆದು ಮಂಚದ ಬಲಗಡೆಯ ಬಾಗಿಲಿನಿಂದ ರಾಜಪ್ಪನೂ ಅವನ ಹಿಂದೆ ಮಾಲಿಯೂ ಪ್ರವೇಶಿಸುತ್ತಾರೆ.] (ಮಾಲಿ ಕೈಲಿ ಹೂ ಗೊಂಚಲು ಹಿಡಿದಿರುತ್ತಾನೆ.)

ರಾಜಪ್ಪ : (ಮೆಲ್ಲನೆ ಬರುತ್ತಾ) ಶಶೀ, ಶಶೀ. (ಉತ್ತರ ಬಾರದಿರಲು) ಶಶಿವದನಾ, ಶಶಿವದನಾ, (ನಿಶ್ಯಬ್ದ). ಮಂಚದ ಹತ್ತಿರ ಬಂದು ದೃಷ್ಟಿಸಿ ನೋಡಿ, (ಶಶಿವದನ ಇಲ್ಲದಿರುವುದನ್ನು ಕಂಡು) ಲೋ, ಮಾಲಿ, ಅವ್ವಾವ್ರು ವಾಕಿಂಗ್ ಹೋಗ್ತಾ ಇದ್ದಾಗ ದಿನಾಗಲೂ ನಿನ್ನ ಎಬ್ಬಿಸಿ ಜೊತೆಗೆ ಕರೆದುಕೊಂಡು ಹೋಗ್ತಾ ಇರಲಿಲ್ಲವೆ?

ಮಾಲಿ : ಕರೀತಿದ್ರು ಬುದ್ದಿ, ಒಂದೊಂದು ದಿನಮಟ್ಟಿಗೆ.....(ತಲೆಕೆರೆಯುವನು) ಅಂಗೆ ಹೋಗ್ತಿದ್ರು.

ಚಂದ್ರಶೇಖರನೊಡನೆಯೇ ನೋಡಬೇಕು. ಇಲ್ಲದಿದ್ದರೆ ಸಾಧ್ಯವಿಲ್ಲ. ನಾಗೇಂದ್ರ......ನೀನು ಶಶಿಯನ್ನು ನಿಜವಾಗಿಯೂ ಪ್ರೀತಿಸುವುದಾದರೆ.....ನೀನು ಕೇಳಿದಷ್ಟು ಹಣ ಕೊಡುತ್ತೇನೆ........ಅವರಿಬ್ಬರನ್ನೂ ಕರೆದುಕೊಂಡು ಬಾ ಹೋಗು.

ನಾಗೇಂದ್ರ : What do you say? ನೀವು ಇಷ್ಟು ಬೇಗ ಮನಸ್ಸು ಬದಲಾಯಿಸುತ್ತೀರಿ ಅಂತ ನಾನು ತಿಳಿದಿರಲಿಲ್ಲ. ಶಶಿವದನೆ ಚಂದ್ರಶೇಖರನವಳಾಗಲು ನೀವೂ ಸಮ್ಮತಿಸಿದರೆ ಶಶಿವದನೆ ಎಲ್ಲಿಗೆ ಹೋದರೆ ನನಗೇನು? Good Bye ರಾಜಪ್ಪನವರೇ ಬರ್ತೇನೇ (ಎಂದು ಹೋಗುತ್ತಿದ್ದವನು ನಿಂತು) ಶಶಿವದನೆ ವಾಪಸ್ ಬರ್ತಾಳೆ. ಏಕೆ Worry ಮಾಡಿಕೊಳ್ಳುತ್ತೀರ. ಮತ್ತೆ ನನಗೇ ಹೇಳಿಕಳುಹಿಸಬೇಕಾಗುತ್ತೆ, ನೀವು. I am always ready. Good bye (ಎಂದು ಹೊರಟು ಹೋಗುವನು.)

– ತೆರೆ ಬೀಳುವುದು –

ಹುಡುಕಿಕೊಂಡು ಹೊರಟಿರುತ್ತಾಳಂತೆ. ಮಾಲಿ, ಮಾಲಿ, ಅವಳಿಗೆ ನಾನು ಬೇಡವಂತೆ. (ಗದ್ಗದಕಂಠದಿಂದ) ನಾನು ಬೇಡವಂತೆ, ಮಾಲಿ, ಮನೆ ಬೇಡವಂತೆ, ಮಠ ಬೇಡವಂತೆ, ಓಡಿಹೋಗಿದ್ದಾಳೆ. ನನ್ನ ಕರುಳು ಕೊಯ್ದಿದ್ದಾಳೆ. (ಅಯ್ಯೋ ದೇವರೆ, ಎಂದು ಕೈಮೇಲೆ ತಲೆಯಿಟ್ಟು ಅಳುವನು.) ಮಾಲಿ "ಅಳಬೇಡಿ ಬುದ್ದಿ" (ಎಂದು ಆಗಾಗ್ಗೆ ಸಂತೈಸುತ್ತ ಪರದಾಡುತ್ತಿರುವನು. ಅಷ್ಟು ಹೊತ್ತಿಗೆ ಹೊರಗಿನಿಂದ 'ನಾಗೇಂದ್ರ' ಪ್ರವೇಶಿಸುವನು.)

ನಾಗೇಂದ್ರ : (ಬೆರಗುಗೊಂಡು) ಇದೇನು ರಾಜಪ್ಪನವರೇ? ಏನಾಯಿತು? ಶಶಿವದನೆ ಎಲ್ಲಿ?

ರಾಜಪ್ಪ : (ಮೇಜಿನ ಮೇಲಿದ್ದ ಕಾಗದದ ಕಡೆ ಕೈತೋರಿಸುವನು.)

ನಾಗೇಂದ್ರ : (ಕಾಗದ ತೆಗೆದುಕೊಂಡು ಓದಿಕೊಳ್ಳುವನು.) I wish she had eloped with that rascal, instead of Venturing Out like this. Silly Girl. ನೀವು ಹೆದರಬೇಡಿ ರಾಜಪ್ಪನವರೆ! I shall go after her.

ರಾಜಪ್ಪ : ನೀವು ಶಶಿವದನೆಯನ್ನು ನಿಜವಾಗಿಯೂ ಪ್ರೀತಿಸುವುದಾದರೆ.....

ನಾಗೇಂದ್ರ : ಇದೇನು, ಹೀಗೆ ಕೇಳುತ್ತೀರಲ್ಲ. ಈಗ ತಾನೆ ಹೇಳಲಿಲ್ಲವೆ. ಅವಳನ್ನು ಹುಡುಕಿ ತರುತ್ತೇನೆ. ಎಲ್ಲಿದ್ದರೂ ಸರಿಯೆ. ಈಗಲೇ ಹೊರಟೆ ಎಂದುಕೊಳ್ಳಿ.

ರಾಜಪ್ಪ : ಶಶಿವದನೆ ಮತ್ತು –

ನಾಗೇಂದ್ರ : ಮತ್ತು?

ರಾಜಪ್ಪ : ಚಂದ್ರಶೇಖರ ಸಹ

ನಾಗೇಂದ್ರ : Why bother about that mad fellow? ಅವನ ಸುದ್ದಿ ಏಕೆ ಇನ್ನು?

ರಾಜಪ್ಪ : ಹೌದು, ಶಶಿವದನೆ ಚಂದ್ರಶೇಖರರ ಪ್ರೇಮದ ಮಹತ್ವದ ಅರಿವು ನನಗೆ ಇಂದು ಆಯ್ತು. ಪ್ರೇಮದ ಪರಿಯನ್ನರಿತ ನಾನು ಪ್ರೇಮದ ಪ್ರಭುತ್ವಕ್ಕೆ ಅಡ್ಡ ಬರುವುದು ಸರಿಯಲ್ಲ. ನಾನು ಮತ್ತೆ ಶಶಿವದನೆಯನ್ನು ನೋಡಬೇಕಾದರೆ

ಜೋಳಿಗೆ ತುಂಬುತ್ತೆ! ಇಲ್ಲದೆ ಹೋದರೆ ಈ ಗಡ್ಡವನ್ನು ಇನ್ನೂ ಉದ್ದವಾಗಿ ಬೆಳೆಸಿ, ಕಾವಿಬಟ್ಟೆ ಹಾಕಿಕೊಂಡು, ವಿಭೂತಿ ಬಳಿದುಕೊಂಡು, ಆ ಹುಟ್ಟು ತಿರುಕನಿದ್ದಾನಲ್ಲ, ಆ ಶಿವ, ಅವನ ಹೆಸರು ಹೇಳಿಕೊಂಡು, ಕೈಲಿ ತೆಂಗಿನ ಬುರುಡೆ ಹಿಡಿದುಕೊಂಡು ಹೊರಟರೋ! ಇಲ್ಲ, ಇಲ್ಲ; ಇದು ಯಾವುದೂ ಸಾಧ್ಯವಿಲ್ಲ. ನಾನು ಎಲ್ಲಿ! ದೇವರು ಎಲ್ಲಿ! ಆ ದೇವಾಧಿದೇವತೆಗಳ ನೆರವು ನನಗೆ ಬೇಡ. ಇನ್ನಷ್ಟುಕಾಲ ಹೀಗೆಯೇ ತಳ್ಳುತ್ತೇನೆ. ಅಂತೂ ಈ ತಿರುಪೆಯವಿದ್ಯೆ ನನಗಿನ್ನೂ ಬಂದಿಲ್ಲ. ಎಲ್ಲಿಯೂ ಈ ವಿದ್ಯೇ ಹೇಳಿಕೊಡುವುದಿಲ್ಲವಲ್ಲ.

ಸೌದೆಕಡಿ ಎನ್ನವವರೊಬ್ಬರು, ಮೂಟೆ ಹೊರು ಎನ್ನುವವರೊಬ್ಬರು ದಾಂಢಿಗ ಎನ್ನುವರೊಬ್ಬರು, ಹುಚ್ಚ ಎನ್ನುವವರು ಮತ್ತೊಬ್ಬರು. ಅಂಗಡಿಯಲ್ಲಿ ಲೆಕ್ಕ ಬರೆಯುತ್ತೇನೆ ಕೊಡಿ ಎಂದರೆ, ಅಪ್ಪಾ, ನಿಮ್ಮ ಮಕ್ಕಳಿಗೆ ಪಾಠ ಹೇಳಿಕೊಡುತ್ತೇನೆ ಎಂದರೆ, ನಾವೇ ಲೆಕ್ಕ ಬರೆದುಕೊಳ್ಳುತ್ತೇವೆ; ನಾವೇ ಪಾಠ ಹೇಳಿಕೊಡುತ್ತೇವೆ ಎನ್ನುತ್ತಾರೆ. ಕಡೆಗೆ ನನ್ನ ವೇಷ ನೋಡಿ, ಏ, 'ಕತ್ತು ಹಿಡಿದು ತಳ್ಳೊ' ಈ ಹುಚ್ಚನನ್ನ ಎಂದು ನನ್ನ ಅಟ್ಟುತ್ತಾರೆ.

ಹಾಳಾದ್ದು ಈ ಕಾಲು ಮುರಿಯುಬಾರದೆ? ಕುಂಟ ಎಂದು ಮೊರೆಯಿಡಬಹುದು: ಈ ಕೈಯನ್ನಾದರೂ ಕತ್ತರಿಸಿಕೊಂಡುಬಿಡಲೆ, ಈ ಕಣ್ಣುಗಳಾದರೂ ಇಂಗಿ ಹೋಗಬಾರದೆ? ಛೆ, ಅಂಗಹೀನನಾಗುವುದು! ತುಚ್ಛವಾದ ಬಾಳು. ಇರಿದರೆ ಈ ಎದೆ ಇರಿದುಕೊಳ್ಳಬೇಕು; ಕುಯ್ದರೆ ಕೊರಳು ಕುಯ್ದುಕೊಳ್ಳಬೇಕು; ಆಗ ಆ ತಿರುಪೆಯೆ ತೊಂದರೆ ತಪ್ಪುತ್ತೆ. ಆತ್ಮಹತ್ಯೆ, ಆತ್ಮಹತ್ಯೆ! ಎಲ್ಲ ರೋಗಕ್ಕೂ ಮದ್ದು ಅದು. (ಸ್ವಲ್ಪ ಮೌನ).

ಆತ್ಮಹತ್ಯೆ ಕೂಡದು, ಅದು ಹೇಡಿಯ ಕೆಲಸ. ನಾನು ಹೇಡಿಯಲ್ಲ. (ಗಟ್ಟಿಯಾಗಿ) ಕೇಳಿ, ಕೇಳಿ, ಎಲ್ಲರೂ ಕೇಳಿ, ಸಾರುತ್ತೇನೆ ಕೇಳಿ; ಚಂದ್ರಶೇಖರ ಹೇಡಿಯಲ್ಲ. (ಮೌನ)

ಆತ್ಮಹತ್ಯೆ ! – ಆತ್ಮಹತ್ಯೆಕೂಡದು, ಹೊಟ್ಟೆಗಿಲ್ಲ ಭಿಕ್ಷೆಯೇ ಶರಣು. ಭೀಕ್ಷಾಧಿದೇವತೆಯ ಉಪಾಸನೆ ಮಾಡುವೆನು. ಓ ಭಿಕ್ಷಾಧಿದೇವತೆಯೇ, ಬಾ, ಬಾರ, ಚಂದ್ರಶೇಖರನಿಗೆ ನಿನ್ನ ಮರ್ಮವ ತೋರು; ತಿರುಕರಲ್ಲಿ ತಿರುಕರನ್ನಾಗಿ ಮಾಡು. ತಿರುಕರ ಗುರುವನ್ನಾಗಿ ಮಾಡು.

ಹಹ್ಹಹ! ಹಾ ಹ್ಹ ಹ್ಹ ಹ! ತಿರುಕರ ಗುರು, ನಾನು ತಿರುಕರ ಗುರು! ಹ್ಹ ಹ್ಹ ಹ (ಎಂದು ಹೋಗಿ ಜಗುಲಿಯ ಮೇಲೆ ಅಂಗತ್ತನಾಗಿ ಮಲಗಿಕೊಳ್ಳುವನು. ಕೇಕೆ ಹಾಕಿ ಹುಚ್ಚನಂತೆ ನಗುತ್ತಲೇ ಇರುವನು.) ತಿರುಕರ ಗುರು, ತಿರುಕರ

# ಐದನೆಯ ಅಂಕ

## ನೋಟ – ೧

[ಒಂದು ಪಾಳುಮನೆಯ ಜಗುಲಿ. ಮಟ ಮಟ ಮಧ್ಯಾಹ್ನ, ಚಂದ್ರಶೇಖರ ಪ್ರವೇಶಿಸುತ್ತಾನೆ : ಅವನು ಮೊದಲಿನ ಚಂದ್ರಶೇಖರನಂತೆ ಕಾಣುವುದಿಲ್ಲ. ವೇಷ ವಿಪರೀತವಾಗಿದೆ; ತಲೆಕೂದಲು ವಿಪರೀತ ಕೆದರಿದೆ. ಅಲ್ಲಲ್ಲಿ ಜಡೆಗಟ್ಟಿ ಹೋಗಿದೆ. ಗಡ್ಡ ಮೀಸೆ ಬೆಳೆದುಬಿಟ್ಟಿದೆ. ಮೊಣಕಾಲಿನ ಮೇಲಕ್ಕೆ ಹರಿದ, ತುಂಡು ಪಂಚೆ; ಹರಿದ ಜುಬ್ಬ. ಕೈಲೊಂದು ದೊಣ್ಣೆ, ಒಂದು ಡಬ್ಬ.]

(ಜಗುಲಿಯ ಬಳಿ ಬಂದು)

ಮಧ್ಯಾಹ್ನ ಮೀರಿತು, ಹೊಟ್ಟೆಗಂತೂ ಸಿಕ್ಕಲಿಲ್ಲ. ಊರಾಚೆಯ ಈ ಸ್ಥಳ ಚೆನ್ನಾಗಿದೆ, ಊರ ನಡುವೆ ನನ್ನ ಬಾಳಗೊಡಿಸರು–ತಿರಿಯಲು ಹೊರಟರೆ ತಿರುಪೆ ಸಿಕ್ಕುವುದಿಲ್ಲ. ಇವನು ಯಾವನೋ ಹೊಸ ತಿರುಕ, ವಿಜಾತೀಯ ತಿರುಕ, ಚೆನ್ನಾಗಿ ಮಾತನಾಡುತ್ತಾನೆ. ಕೈಕಾಲು ಗಟ್ಟಿಯಾಗಿದೆ ಎಂದು ಯಾರೂ ತಿರುಪೆ ಹಾಕರು. ಸಾಲದ್ದಕ್ಕೆ ಈ ಊರಲ್ಲಿ ತಿರುಕರ ಪಡೆಯೇ ಇದೆ. ಪಳಗಿದ ತಿರುಕರಿಗೇ ಹೊಟ್ಟೆಗಿಲ್ಲ; ನನಗೆ ಹೇಗೆ ತಾನೇ ದೊರೆಕೀತು? ಆ ತಿರುಕರೊಡನೆ ಸ್ನೇಹ ಬೆಳೆಸಿದರೆ ಏನಾದರೂ ಸಿಕ್ಕುತ್ತದೆಯೇನೋ ನೋಡಬೇಕು. ಅವರು ಕೂಡ ನನ್ನನ್ನು ಹುಚ್ಚ ಎಂದು ತಿಳಿದುಕೊಂಡು ಬಿಟ್ಟಿದ್ದಾರೆ. ಬಳಿಗೇ ಸೇರಿಸರು. ಜನರಿಗೂ ನಾನು ತಿರುಕ ಎಂದರೆ ನಂಬಿಕೆ ಹುಟ್ಟಿಲ್ಲ. ಅಂತ ಕಾಣುತ್ತೆ. ಹಾಳಾದ್ದು ನನ್ನ ಬಾಯಿಂದ ಹೊರಡುವ ಮಾತು ನನ್ನನ್ನು ಮೋಸಗೊಳಿಸಿದೆ. ವೇಷ– (ಗಡ್ಡ, ತಲೆ ಮುಟ್ಟಿ ನೋಡಿಕೊಂಡು, ಹರುಕು ಬಟ್ಟೆಯನ್ನು ದೃಷ್ಟಿಸಿ ನೋಡಿ) ಪರ್ವಾಯಿಲ್ಲ; ತಿರುಕನಿಗೆ ತಕ್ಕ ವೇಷ; ಈಗ, ಇಷ್ಟು ದಿನವಾದ ಮೇಲೆ ಬಂದಿರುವಂತೆ ಕಾಣುತ್ತೆ. ಆದರೂ, (ಮೈ ಕೈ, ಮುಟ್ಟಿ ನೋಡಿಕೊಂಡು) ದೇಹ ಕೃಶವಾಗಿರುವುದು ಸಾಲದು. ಇನ್ನೂ ಕೃಶವಾಗಬೇಕು. (ಮತ್ತೊಮ್ಮೆ ನೋಡಿಕೊಂಡು) ಸಾಲದೆ, ಇದು ಸಾಲದೆ? ಸಾಕು, ಸಾಕು ಎಲ್ಲವೂ ಇದೆ. ಆದರೆ ತಿರುಪೆ ಹುಟ್ಟುವುದಿಲ್ಲ. ಎಷ್ಟು ಮಂದಿ ನಾನು ಕಂಡ ಹಾಗೆ ತಿರುಪೆ ಎತ್ತಿ ಬೊಜ್ಜು ಬೆಳೆಸಿಕೊಂಡಿಲ್ಲ! ಅವರಂತೆ ತಿರುಪೆ ಎತ್ತಬಾರದೇಕೆ? ಆಹಾ ಹೊಳೆಯಿತು ಈಗ! ಪಟ್ಟೆ ಪಟ್ಟೆ ನಾಮ ತಿದ್ದಿಕೊಂಡು, ಜೋಳಿಗೆ ಹಾಕಿಕೊಂಡು, ಶಂಖ ಪೂರೈಸುತ್ತ, ವೆಂಕಟಾಚಲಪತಿಯ, ಆ ತಿರುಪೆಯ ದೇವರ ಹೆಸರು ಹೇಳಿಕೊಂಡು ಹೊರಟರೆ

ಚಕ್ರವಲ್ಲ ಶಶಿ. ಚಲಚ್ಚಕ್ರಪರಂಪರೆಯುಳ್ಳ ದೊಡ್ಡ ಚಲಚ್ಚಕ್ರ. ಈಗ ಈ ತಿರುಪೆಯ ಚಕ್ರದಲ್ಲಿ ನಾನು ಸಿಲುಕಿದ್ದೇನೆ.

ಏನು! ಈ ತಿರುಪೆಯ ಚಕ್ರದಿಂದ ತಪ್ಪಿಸಿಕೊಳ್ಳುವುದು ಸಾಧ್ಯವೆ? ಇಲ್ಲ, ಇಲ್ಲ, ಏನು ಸಾಧ್ಯವೆ? ಇಲ್ಲ. ತಿರುಪೆಯ ಚಕ್ರವನ್ನೇ ನಿಲ್ಲಿಸದ ಹೊರತು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಬಾ ಶಶಿ, ನನ್ನ ತಂಗಿಯನ್ನೂ ಕರೆದುಕೊಂಡು ಬಾ; ಕೈ ನೀಡು, ಈ ಗರಗರನೆ ತಿರುಗುತ್ತಿರುವ ಚಕ್ರವನ್ನು ನಿಲ್ಲಿಸಲು ಕೈನೀಡಿ.

ಓ ನ್ನ ಮರುಳುತನವೇ, ಹೋಗೆನ್ನುವ ಬಾಯಲ್ಲಿ, ಮತ್ತೆ ನಿನ್ನ ಕರೆಯುತ್ತಲಿದ್ದೇನೆ. ಹೋಗು ಎನ್ನುವ ಧಾರಾಳದಿಂದ ಕರೆಯಲಾರೆ ಶಶಿ. ಹೇಗೆ ಕರೆಯಲಿ, ನಿನಗೆ ಏನು ಕೊಡಲಿ, ಏನು ಇಡಲಿ? ಕರೆಯುವ ದಿನ ಬಂದಾಗ ಕರೆಯುತ್ತೇನೆ, ಶಶಿ, ಕರೆಯುತ್ತೇನೆ. ನನಗಾಗಿ ಸ್ವಲ್ಪ ಕಾದಿರು. ಈಗ ಹೋಗು, ಹೋಗು (ಎಂದು ಸ್ವಲ್ಪ ಜಗುಲಿಯ ಮೇಲೆ ಕುಳಿತುಕೊಳ್ಳುವನು.)

[ಅಷ್ಟು ಹೊತ್ತಿಗೆ ಹಣ್ಣು ಹಣ್ಣು ಮುದುಕಿಯೊಬ್ಬಳು ತಲೆಯ ಮೇಲೆ ಪುರಲೆ ಸೌದೆಯ ಹೊರೆ ಹೊತ್ತುಕೊಂಡು, ಬಲಗೈಲಿ ಕೋಲೂರಿಕೊಂಡು, ಎಸ ಸೊಂಟದಲ್ಲಿ ಸಗಣಿ ತೊಪ್ಪೆ ಮಕ್ಕರಿ ಹೊತ್ತುಕೊಂಡು, ಜಗುಲಿಯ ಬಳಿಗೆ ಬರುವಳು.]

ಮುದುಕಿ : ಓ ಅಣ್ಣಾ, ಓ ಕೂಸು !

ಚಂದ್ರಶೇಖರ : ಏನಮ್ಮಾ.

ಮುದುಕಿ : ನನ್ನ ಕೈಲಾಗಾಕಿಲ್ಲ; ಒಸಿ ಈ ಹೊರೆ ಇಳಸಣ್ಣ.

ಚಂದ್ರಶೇಖರ : ಮುದುಕಮ್ಮಾ! ನಿನಗೆ ಮುಪ್ಪಡರಿದೆ; ಬೆನ್ನು ಬಗ್ಗಿದೆ; ಆದರೂ ಆ ಸೌದೆ ಹೊರೆ ಹೊತ್ತಿರುವೆ. ನನಗೆ ಅದನ್ನು ಇಳುಹುವ ಶಕ್ತಿಯೂ ಉಡುಗಿದೆ ಅಮ್ಮ.

ಮುದುಕಿ : ಯಾಕಪ್ಪ, ಮೈಗೆ ಚೆನ್ನಾಗಿಲ್ವ.

ಚಂದ್ರಶೇಖರ : ಹಸಿವು ಕಣಮ್ಮಾ, ಹಾಳು ಹಸಿವು!

ಮುದುಕಿ : ಹಂಗೆ ಒಸಿ ಬಂದುಕೈಕೊಡು, ಇಳಿಸಿದ ಮೇಲೆ ಒಂದೊಸಿ ರೊಟ್ಟಿ ಐತೆ ಕೊಟ್ಟೇನು.

ಚಂದ್ರಶೇಖರ : (ಸಂತೋಷದಿಂದ ಜಿಗಿದು) ಹಾ! (ಎಂದು ಸೌದೆ ಹೊರೆ ಇಳಿಸಿ ಜಗುಲಿಯು ಮೇಲೆ ಇಡುವನು. ಸೊಪ್ಪೆ ಗೂಡೆಯನ್ನೂ ಜಗುಲಿಯ ಮೇಲೆ ಇಡುವನು.)

ಮುದುಕಿ : (ಮೆಟ್ಟಿಲಿರುವ ಕಡೆಯಿಂದ ಜಗುಲಿ ಹತ್ತಿ ಕುಳಿತು) ಯಾಕಣ್ಣ ಇನ್ನೂ ಊಟ ಇಲ್ವ?

ಗುರು, ಓ ಭಿಕ್ಷಾಧಿ ದೇವತೆಯೇ, ಬಾ! ಬೇಗ ಬಾ! (ಎಂದು ಕರೆಯುವಂತೆ ಮೇಲಕ್ಕೆ ಕೈ ನೀಡುವನು.)

– ತೆರೆ ಬೀಳುವುದು –

## ನೋಟ – ೨

(ಹಿಂದಿನ ದೃಶ್ಯದ ಪಾಳು ಮನೆಯ ಜಗುಲಿ. ಚಂದ್ರಶೇಖರ ಹಾಗೆಯೇ ಮಲಗಿಕೊಂಡಿರುತ್ತಾನೆ. ಸಂಜೆ ಐದು ಘಂಟೆಯ ಸಮಯವಾಗಿದೆ.)

ಚಂದ್ರಶೇಖರ ಎದ್ದು ಕುಳಿತು, ಕಣ್ಣುಜ್ಜಿಕೊಂಡು, ಎದ್ದು ಅಲ್ಲಲ್ಲಿ ಸುತ್ತುತ್ತ,) ಶಶಿವದನೆ, ಶಶಿವದನೆ! ಅಯ್ಯೋ ನೀನೇಕೆ ಬಂದೆ ಇಲ್ಲಿ, ನನ್ನ ತಪಸ್ಸು ಭಂಗಮಾಡಲು ನೀನೇಕೆ ಬಂದೆ! ನನ್ನ ನಿದ್ದೆಯನ್ನು ಕೆಡೆಸಿದೆ! ಹಸಿವು ನಿಂತಿತು. ಮತ್ತೆ ಹಸಿವು! ನನ್ನ ಹಿಂಬಾಲಿಸಿ ನೀನು ಬರಬೇಡ! ನಿಮ್ಮ ತಂದೆಯ ಮನೆಯಲ್ಲಿ ಭೋಗಿಸು, ಇಲ್ಲಿ ಬರಬೇಡ! ನನ್ನ ಆಸೆ ಬಿಟ್ಟುಬಿಡು! ಏನು! ಏನು! ನನ್ನನು ಹಿಂಬಾಲಿಸುತ್ತೀಯ? ಎಲ್ಲಿಗೆ ಹೋದರೂ ಬಿಡುವುದಿಲ್ಲವೆ? ಬೇಡ, ಶಶಿ, ಬೇಡ. ನನ್ನ ಪಾಡು ನಿನಗೆ ಬೇಡ ಶಶಿ, ನನ್ನ ಮಾತು ಕೇಳು, ಹೋಗು.

ನಿನ್ನ ನಾ ಮರೆತಿಲ್ಲ. ಶಶಿ, ನಿನ್ನ ನಾ ಮರೆತಿಲ್ಲ. ಕುಳಿತಾಗ ನಿನ್ನ ನೆನೆವೆ. ನಿಂತಾಗ ನಿನ್ನ ನೆನೆವೆ. ಹಸಿದಾಗ ನಿನ್ನ ನೆನೆದರೆ, ನಿನ್ನ ಹೆಸರೇ ನನಗೆ ಸವಿಯುಣಿಸು; ನಿದ್ದೆಯಲ್ಲಿ ನಿನ್ನದೇ ಸವಿ ಕನಸು! ನೀನೇ ನೀನಾಗಿ ನನ್ನಲ್ಲಿ ತುಂಬಿಹೆ ಶಶಿ; ನಿನ್ನ ಸವಿನೆನಪ ನಿನ್ನೊಲವ ಹೃದಯದಲ್ಲಿ ತುಂಬಿಕೊಂಡು, ನಿನ್ನ ಮೂರ್ತಿಯ ನನ್ನ ಮಡಿಲಲ್ಲಿರಿಸಿ ನಾನಿಂದು ಶಶಿಶೇಖರನಾಗಿರುವೆ ಪ್ರಿಯೆ! ನಿನ್ನ ನೋಡಬಲ್ಲೆ! ಮಾತಾಡಬಲ್ಲೆ, ನಿನ್ನನ್ನು......(ತಬ್ಬಿಕೊಳ್ಳ ಹೋಗುವಂತೆ ಕೈ ನೋಡಿ) ನಿನ್ನನ್ನು......(ನಿರಾಶನಾಗಿ......ಎರಡು ಕೈಗಳನ್ನು ಎದೆಯ ಮೇಲಿರಿಸಿಕೊಂಡು) ಆದರಾಭಾಗ್ಯವಿಲ್ಲ, ಇರಲಿ ಶಶಿ, ನೀ ಬೇಡ ಹೋಗು. ನಿನ್ನ ನೆನಪೇ ಸಾಕು. (ಸ್ವಲ್ಪ ಹೊತ್ತು ಮೌನ.)

ಏಕೆ ಶಶಿ, ಮತ್ತೆ ಬಂದು ಕಾಡುವೆ. ಏಕೆ ಹೀಗೆ ದುರುಗುಟ್ಟಿಕೊಂಡು ನೋಡುವೆ ನನ್ನ! ನಾನು ಮಾಡಿದ ಅಪರಾಧವೇನು! ಏನು! ಭಿಕ್ಷೆ ಮಾಡುವೆಯೆಂದು ಕೇಳುವೆಯಾ? ಏನು! ಭಿಕ್ಷೆ ಮಾಡುವುದು ಪಾಪವೆ? ಅನ್ಯಾಯವೆ? ಅಪಮಾನವೆ? ಯಾರಿಗೆ ಅವಮಾನ ಶಶಿ. ನಿನಗೋ, ನನಗೋ! ತನ್ನ ದವಡೆಗೆ ಸಿಕ್ಕಿಸಿಕೊಂಡು ನನ್ನ ತಿರುಗಿಸುತ್ತಿರುವ ಸಮಾಜ ಚಕ್ರಕ್ಕೋ? ಸಮಾಜಚಕ್ರ! ಅದು ಒಂದು

ನಾನು ಹಿಂಗೆ ಜೀವ್ನ ಮಾಡಿಕೊಂಡಿವ್ನಿ ಅದು ಹಂಗೇ ನಡೀತಾ ಐತೆ.

ಚಂದ್ರಶೇಖರ : ಏನು, ನಿತ್ಯ ನೀನು, ಮುದುಕಿ, ದುಡಿದು ಹೊಟ್ಟೆ ಹೊರೆದುಕೊಳ್ಳುತ್ತೀಯಾ? ಯಾರ ಮನೆಗಾದರೂ ಹೋಗಿ ಮುದುಕಿ ಅಂತ ಕೇಳಿದರೆ ಒಂದು ಹಿಡಿ ಅನ್ನ ಹಾಕುವುದಿಲ್ಲವೆ?

ಮುದುಕಿ : ಏನಣ್ಣ? ತಿರುಪೆ ಎತ್ತು ಅಂತೀಯ. ಕೈಕಾಲು ಕೊಟ್ಟಿರೋದು ಯ್ಯಾಕೆ ಶಿವ! ಮುದುಕ್ಯಾದ್ರೇನು. ಕೈಕಾಲಿಲ್ವ. ತಿರುಪೆಯೆತ್ತಿ ನಮ್ಮವಂಸಕ್ಕೆ ಅಪಕ್ಯಾತಿ ತರಲ? ತಿರುಪೆಯೆತ್ತಿದ ಜನಾನೆ ಅಲ್ಲ ನಮ್ಮಪ್ಪ, ನಮ್ತಾತ, ನನ್ನಗಂಡ. ಕೈಲಾಗ್ದೋರು ಮೈಗಳ್ಳರು, ಕುಂಟರು, ಕುರುಡ್ರು, ತಿರುಪೆಯೆತ್ತಾರೆ.

ಚಂದ್ರಶೇಖರ : ಅಜ್ಜಮ್ಮಾ, ನಿನ್ನ ತೊಪ್ಪೆ ಗೂಡೆ ತೆಗೆದುಕೋ, ನಡಿ. ಸೌದೆ ಹೊರೆ ನಾನು ತೆಗೆದುಕೊಳ್ಳುತ್ತೇನೆ. ನೀನು ತಿರುಕನಿಗೆ ರೊಟ್ಟಿಕೊಟ್ಟಿದ್ದೀಯ. ನಾನು ಮೈಗಳ್ಳ, ರೊಟ್ಟಿಋಣ ತೀರಿಸಬೇಕೋ ಇಲ್ವೋ. ನಿನ್ನ ಸೌದೆ ಹೊರೆ ತಂದು ಕೊಡ್ತೀನಿ ನಡಿ. ಏಳು, ಸಂಜೆ ಆಯ್ತು. ಹೊತ್ತಾಯ್ತು. (ಎಂದು ಗೂಡೆ ಅವಳ ತಲೆ ಮೇಲೆ ಹೊರಿಸಿ, ತಾನು ಸೌದೆಹೊರೆ ಹೊತ್ತುಕೊಳ್ಳುವನು.)

ಮುದುಕಿ : (ಮುಂದೆ ಹೋಗುತ್ತ) ನಿನ್ನೆಸರೇನೆಂದೆ ಕೂಸು? ಸೋಮಸೇಕರಪ್ಪನಾ?

ಚಂದ್ರಶೇಖರ : (ನಗುತ್ತಾ) ಶಶಿಶೇಖರ

ಮುದುಕಿ : ಸಸಿ–ಸೇಕರ! ನೀನು ತಿರುಕ್ನಲ್ಲ ಕಣಪ್ಪ. ನನಗೆ ಸುಳ್ಳು ಹೇಳಿದ್ದೀಯು, ಸೌದೆ ಹೊರೆ ಕೊಡಿಲ್ಲಿ. ನೀನು ಹೊತ್ಕೊಂಡು ಬರೋಣ ಅಂದ್ರೇನು? (ಹಿಂದಿರುಗುವಳು)

ಚಂದ್ರಶೇಖರ : ನಿನ್ನ ಕಣ್ಣು ಚೆನ್ನಾಗಿ ಕಾಣೋದಿಲ್ಲವೇನಜ್ಜಮ್ಮಾ?

ಮುದುಕಿ : ಕಪ್ಪಾಗುತ್ತ ಬಂತು. ಕಣ್ಣು ಬೇರೆ ಮಂಜು, ಕಾಣಾಕಿಲ್ಲ ಕಣಣ್ಣ, ಅಷ್ಟು ಚೆನ್ನಾಗಿ. ಏನೋ ನೆಪ್ಪಿನ್ ಮೇಲೆ ನಡೆಕೊಂಡು ಹೋಗ್ತೀನಿ.

ಚಂದ್ರಶೇಖರ : ಇಲ್ಲಮ್ಮ

ಮುದುಕಿ : ಹ್ಣ ಹಿಡಿ. (ಎಂದು ತನ್ನ ಬುತ್ತಿ ಬಿಚ್ಚಿ ಇದ್ದ ರಾಗಿರೊಟ್ಟಿಯೆಲ್ಲವನ್ನೂ ಕೊಟ್ಟುಬಿಟ್ಟು, ಬಟ್ಟೆ ಕೊಡವಿ, ಸಿಂಬಿಯ ಜೊತೆಗೆ ಸುತ್ತಿಕೊಂಡು ಇಟ್ಟುಕೊಳ್ಳುವಳು.) ತಿನ್ನು, ನಿದಾನವಾಗಿ ತಿನ್ನು. ನಾನೂ ಒಸಿ ಸುದ್ರಾಯಿಸಿಕೊಳ್ತೀನಿ.

ಚಂದ್ರಶೇಖರ : (ರೊಟ್ಟಿ ಕಡಿಯುತ್ತ) ನೀನು ತಿನ್ನುವುದಿಲ್ಲವೆ ಅಜ್ಜಮ್ಮಾ

ಮುದುಕಿ : (ಇದ್ದಕ್ಕಿದ್ದಂತೆ ಬೆಚ್ಚಿ) ಓಯಪ್ಪ! ಏನ್ಮಾಡ್ಬುಟ್ಟೆ ನಾನು! ನನ್ನ ಕಣ್ಣಿಂಗೋದಾತು ಆ ಮೇಲೆ!

ಚಂದ್ರಶೇಖರ : ಏನಮ್ಮಾ, ಯಾಕೆ ಇಷ್ಟು ಬೆದರಿಕೆ. ಏನಾಯ್ತು?

ಮುದುಕಿ : ಅಪ್ಪಾ, ನಾನು ಲಿಂಗ ಕಟ್ಟಿಲ್ಲ. ನನ್ನ ದ್ಯಾವ್ರು ಬೀರಣ್ಣ, ಕಣ್ಣು ಮಂಜಣ್ಣ; ಸಂಜೆ ಬೇರೆ ಆಯಿತು. ಇಲ್ಲಿ ಒಂದೊಂದು ದಿನ ಜಂಗಮರು ಕುಳಿತಿರುತ್ತಾರೆ. ನೀವೇನು ಜಂಗಮರಲ್ಲ ತಾನೆ? ಅಯ್ಯೋ ಶಿವನೇ! ನಾನು ನಿಮಗೆ ಹೇಳದೆ ಕೇಳದೆ ರೊಟ್ಟಿ ಕೊಡಬೋದ. ನಿಮ್ಮ ಹೆಸರೇನಪ್ಪ!

ಚಂದ್ರಶೇಖರ : (ನಗುತ್ತ) ಶಶಿಶೇಖರ, ಹೆಸರು ಕೇಳಿ ಹೆದರಿಕೊಳ್ಳಬೇಡ. ಅಜ್ಜಮ್ಮಾ ನಾನು ತಿರುಕ.

ಮುದುಕಿ : ತಿರುಕ! ನಾನೀ ಮಾತ್ನ ನಂಬ್ಲಾರೆ.

ಚಂದ್ರಶೇಖರ : ಹೌದಜಮ್ಮಾ. ಅದಿರಲಿ, ನಿನಗೆಷ್ಟು ವಯಸ್ಸು?

ಮುದುಕಿ : ಅದೆಷ್ಟೊ ಗೊತ್ತಿಲ್ಲ ಕಣಣ್ಣ. ಆದೊಡ್ಡ ಮಾರಿ ಜಾತ್ರೇಲಿ ನನ್ನ ಗಂಡ ಹೋದ. ಈ ಊರಲ್ಲಿ ಜಾತ್ರೇನೆ ತಪ್ಪೋಯ್ತು.

ಚಂದ್ರಶೇಖರ : ನಿನ್ನ ಮಕ್ಕಳು ಯಾರೂ ಇಲ್ಲವೇನಮ್ಮಾ? ನೀನು ಇಷ್ಟು ಹೊರೆ ಹೊತ್ತುಕೊಂಡು ಬರ್ತೀಯಲ್ಲ.

ಮುದುಕಿ : ಪ್ಲೇಗ್ ಮಾರಿ ಮಗನ್ನ ತಿಂತಪ್ಪ: ಒಳ್ಳೆ ಆಳು. ಕೊಡ್ಲಿ ಹೆಗಲ ಮೇಲೆ ಹಾಕಿಕೊಂಡು ಕಾಡ್ಗೆ ಹೊಂಟ ಅಂದ್ರೆ ಮೂರು ಗಾಡಿ ಸೌದೆ ಕಡೀತಿದ್ದ. ಮಗ ತೀರೋದ್ ಮ್ಯಾಲೆ ಸೊಸೆ ಎಲ್ಲೋ ಓಡೋದ್ಲು ನನ್ನ ಬಿಟ್ಟು. ಒಬ್ಳೆ ಕಣಣ್ಣ. ದಿನಾಲೂ ಕಾಡಿಗೆ ಹೋಗಿ ಪುರಲೆ ಆಯೋದು, ತೊಪ್ಪೆ ಕೂಡಾಕೋದು ಸೌದೆ ಬೆರಣಿ ಮಾರೋದು. ಯೇನೋ

ನನ್ನದು. ಚಂದ್ರಶೇಖರ ಒಂದು ಉತ್ತಮಸ್ಥಿತಿಗೆ ಬಂದ ಮೇಲೆ, ತನ್ನ ಗುರಿಮುಟ್ಟಿದ ಮೇಲೆ ನಿನ್ನ ನೆನೆದು ಬರದೆ ಇರುವುದಿಲ್ಲ. ಈ ಹೊತ್ತಿಗೇ ನಿನಗಾಗಿ ಹಿಂದಿರುಗಿ ಹೋಗಿರುವನೋ ಏನೋ ಯಾರಿಗೆ ಗೊತ್ತು? ಈ ಸಂಜೆ ಮುಂದಿನ ಊರುಸೇರಿ ರಾತ್ರಿ ಅಲ್ಲಿದ್ದು ಹಿಂದಿರುಗೋಣ.

ಶಶಿವದನೆ : ಏನೆಂದೆ, ತಂಗಮ್ಮ? ಇಷ್ಟು ದಿನ ನನ್ನ ಜೊತೆ ತೊಳಲಿ ಬಳಲಿ ಮತ್ತೆ ಹಿಂದಿರುಗು ಎಂದು ಹೇಳುವೆಯಲ್ಲ! ನನ್ನ ಛಲದಲ್ಲಿ ನಿನ್ನ ನಂಬಿಕೆ ಇನ್ನೂ ಹುಟ್ಟಿಲ್ಲ ಅಲ್ಲವೆ. ನೀನು ನನಗಾಗಿ ಇನ್ನು ಮೇಲೆ ಕಷ್ಟಪಡಬೇಕಾಗಿಲ್ಲ. ನಿನ್ನ ಸಹವಾಸದಲ್ಲಿ ನಾನು ಸಬಲೆಯಾಗಿರುವೆ; ಇನ್ನು ನಾನು ಯಾವುದಕ್ಕೂ ಹೆದರುವುದಿಲ್ಲ. ನನ್ನ ಚಂದ್ರ ಭಿಕ್ಷುಕನಾಗಿ ತನ್ನ ಅನ್ವೇಷಣವನ್ನು ಪ್ರಾರಂಭಿಸಿದ. ನಾನೂ ಭಿಕ್ಷುಕಿಯಾಗಿ ಅವನ ಅನ್ವೇಷಣವನ್ನು ಪ್ರಾರಂಭಿಸುತ್ತೇನೆ. ಅಷ್ಟರಲ್ಲಿಯೇ ಅವನು ಸಿಕ್ಕುತ್ತಾನೆಂಬ ಭರವಸೆ ನನಗೆ ಇದೆ; ಹಾಗೆಂದು ನನ್ನ ಹೃದಯ ನುಡಿಯುತ್ತಿದೆ. ಇನ್ನೂ ಕೆಲವು ದಿನ ಪರವಾಯಿಲ್ಲ, ತಂಗಿ, ಅಷ್ಟು ನಿರಾಶರಾಗಬೇಕಾಗಿಲ್ಲ. ನನ್ನ ಬರಿಗೈಯನ್ನು ತುಂಬಿಕೊಳ್ಳಲು ಮಾರ್ಗವಿದೆ.

ತಿರುಕಿ : ಏನು, ನಿನ್ನ ಉಂಗುರ ಮಾರುವೆಯ?

ಶಶಿವದನೆ : ಹೌದು, ಮನಸ್ಸು ಮಾಡಿಬಿಟ್ಟಿದ್ದೇನೆ. ಈ ಊರಲ್ಲಿ ಅದನ್ನು ಮಾರಿ ಬಿಡುತ್ತೇನೆ.

ತಿರುಕಿ : ಬೇಡ, ಅಂಥ ಸಂದರ್ಭ ಬಂದಾಗ ಮಾರುವೆಯಂತೆ. ನಾನು ಇನ್ನು ಏನನ್ನೂ ಮಾರಗೊಡಿಸುವುದಿಲ್ಲ. ನೀನು ಭಿಕ್ಷೆಮಾಡಲೂ ಬಿಡುವುದಿಲ್ಲ. ಭಿಕ್ಷೆ ಬೇಡುವ ಹಕ್ಕು ನನ್ನದು. ನೀನು ನಿನ್ನ ಚಂದ್ರಶೇಖರನನ್ನು ಸೇರುವವರೆಗೂ ನಿನ್ನೊಡನಿದ್ದು, ನಿನ್ನ ನೋಡಿಕೊಳ್ಳುವ ಭಾರ, ಪುಣ್ಯ ನನ್ನದು. ಇನ್ನು ಏಳು, ಹೊತ್ತಾಯಿತು, ಹೊರಡೋಣ ಕತ್ತಲೆಯಾಗುವ ಮುನ್ನ ಊರು ಸೇರೋಣ.

(ಇಬ್ಬರೂ ಎದ್ದು ಹೊರಡುವರು)

–ತೆರೆ ಬೀಳುವುದು–

ಚಂದ್ರಶೇಖರ : ನನ್ನ ವೇಷ ನೋಡಿದ್ರೆ ಕಾಣುತಿತ್ತು, ನಾನು ಯಾರು ಎನ್ನುವುದು. ಹೋಗಲಿ ನಡಿ, ನಿಮ್ಮ ಮನೆವರೆಗೂ ಬರುತ್ತೀನಿ.

ಮುದುಕಿ : ಮನೆ ಎಲ್ಬಂತಪ್ಪ, ಗೂಡು ಅನ್ನು

(ಇಬ್ಬರೂ ತೆರಳುವರು.)

– ತೆರೆ ಬೀಳುವುದು –

## ನೋಟ – ೩

[ಸಾಲು ಮರದ ರಸ್ತೆಯೊಂದು : ಒಂದು ಹಳ್ಳದ ಸೇತುವೆಯ ಕಟ್ಟೆ. ಶಶಿವದನೆಯೂ ತಿರುಕಿಯೂ ಪ್ರವೇಶಿಸುವರು. ಸಂಜೆಯಾಗುತ್ತಬಂದಿದೆ. ಶಶಿವದನೆಯ ತಲೆ ಕೆದರಿದೆ. ಧೂಳಡರಿದೆ. ಸೀರೆ ಅಲ್ಲಲ್ಲೆ ಹರಿದು ಬಹುಕೊಳಕಾಗಿದೆ. ಅವಳ ಇರುವಿಕೆಗೂ ತಿರುಕಿಯದಕ್ಕೂ ಏನೂ ವ್ಯತ್ಯಾಸವಿಲ್ಲ. ಇಬ್ಬರೂ ಒಂದು ಕಟ್ಟೆಯ ಮೇಲೆ ಕುಳಿತುಕೊಳ್ಳುವರು.]

ಶಶಿವದನೆ : (ಕ್ಷಣಹೊತ್ತಾದ ಮೇಲೆ) ಕತ್ತಲೆಯಾದೀತು, ಏಳು ತಂಗಿ ಹೋಗೋಣ.

ತಿರುಕಿ : ಪರವಾಯಿಲ್ಲ. ಅಕ್ಕ, ಇನ್ನೂ ಸೂರ್ಯಮುಳುಗಿಯೂ ಇಲ್ಲ. ನೀನು ಬಹಳ ದಣಿದಿದ್ದೀಯೆ. ಊರು ಸಿಕ್ಕಬೇಕಾದರೆ ಇನ್ನೂ ಎರಡು ಮೂರು ಮೈಲಿಗಳಾದರೂ ಆಗಬೇಕು. ತುಸ ಹೊತ್ತು ವಿಶ್ರಮಿಸಿಕೊಂಡು ಹೊರಡೋಣ. ಅದಿರಲಿ: ಇನ್ನು ನಾಳೆಯ ಯೋಜನೆ ಮಾಡಬೇಕು. ನಾವೂ ಊರು ಬಿಟ್ಟು ಹೊರಟು ತಿಂಗಳ ಮೇಲಾಯ್ತು. ಹಳ್ಳಿಹಳ್ಳಿಗಳನ್ನು ಹಾದಾಯ್ತು. ಕಂಡ ಕಂಡ ಕಡೆ ವಿಚಾರಿಸಿ ಆಯ್ತು. ನೀನು ತಂದಿದ್ದ ಹಣವೆಲ್ಲ ವೆಚ್ಚವಾಯ್ತು. ನನ್ನ ತಿರುಪೆಯ ಕೂಳನ್ನೂ ನೀನು ತಿಂದಾಯ್ತು. ಶಶಿ, ದೇವರು ನಿನ್ನ ಹಣೆಯಲ್ಲಿ ಇಂಥ ಕಷ್ಟ ಬರೆದನೆ? ಐಶ್ವರ್ಯವಂತನ ಮಗಳಾಗಿ, ವಿದ್ಯಾವಂತೆಯಾಗಿ, ತಿರುಕಿಯ ಜೊತೆಯಲ್ಲಿ ಹೀಗೆ ಅಲೆಯುವ ಭಾಗ್ಯ ನಿನ್ನ ಪಾಲಾಯ್ತೆ. ಅಯ್ಯೊ ಭಗವಂತ! ಇಷ್ಟಾದರೂ ಚಂದ್ರನ ಸುಳಿವು ಸಿಕ್ಕಲಿಲ್ಲ. ಎಲ್ಲಿರುವನೋ, ಏನಾಗಿದ್ದಾನೆಯೋ? ಶಶಿ, ಈಗಲೂ ಮಿತಿಮೀರಿಲ್ಲ, ಹಿಂದಿರುಗೋಣ ನಡೆ. ನಿನ್ನ ಮನೆಗೆ ಸೇರಿಸುವ ಭಾರ

| | | |
|---|---|---|
| | | ಸ್ವಲ್ಪ ಬೋದ್ನೆ ಮಾಡ್‌ಬೇಕು ಅವನ್ಗೆ. ನಮ್ಮಿಬ್ಬರಿಗೂ ಒಸಿ ಉಪದೇಸ ಮಾಡಿಬಿಡಿ ಗುರುವೆ. ನಾವೂ ಕಾವಿಸಾಟಿ ಹಾಕಿಬಿಡಿ ಗುರುವೆ. ನಾವೂ ಕಾವಿಸಾಟಿ ಹಾಕಿಬಿಡ್‌ತೇವೆ. ಮಸ್ತಾಗಿ ಬಿಕ್ಸೆ ಹುಟ್ಟುತದೆ. |
| ಇನ್ನೊಬ್ಬ (ಮಾದ) | : | ಲೋ ಚಿಕ್ಕ, ನಾವೂನು ಕಾವಿಸಾಟಿ ಹಾಕಿಬಿಟ್ಟು ನಾವೂ ಗುರುಗಳಾಗೋದಕ್ಕೆ ಆದಾತ – ಹುಲಿನೋಡಿ ನರಿ ಬರೆ ಹಾಕಿಕೊಂಡಂಗೆ, ಇವರಂತು ಅದೇನೋ ಶವನ್ನ ತಪಸ್ಸು ಮಾಡ್ತಾರೆ ಅಂತ, ನಮ್ಮ ಕೈಲಿ ಆದಾತ ಅದು? ಏನು ಗುರುವೆ? |
| ಬೈರಾಗಿ | : | ಜೈಶಂಕರ್, ಜೈಶಂಕರ್. |
| ಮಾದ | : | ಆ ಶಶಿ–ಶೇಖರಪ್ಪ ಹೇಳೋದು ಸರಿ ಅಂತ ತೋರುತ್ತೆ ನಂಗೆ, ಸೌದೆ ಯಾಕೆ ಕಡೀ ಬಾರ್ದು ಅಂತ. ಅವನ ಮುಕದಲ್ಲಿ ಅದೇನೋ ಕಳೆ ಐತೆ ಚಿಕ್ಕ. (ಜೈ ಶಂಕರನ ಕಡೆ ತಿರುಗಿ) ಆದ್ರೆ ನಮ್ಗುರುಗಳ ಕಳೆ ಇಲ್ಲ ಅನ್ನೂ. ಆಯಿಚಾರ ಯಾಕೆ ಈಗ. ಅವನೇಳೋ ಅಂಗೆ, ದೇವ್ರು ನಂಗೆ ಕೈಕಾಲು ಕೊಟ್ಟಿರೋವಾಗ ಯಾಕೆ ದುಡೀಬಾರ್ದು? ದುಡ್ಡು ಮೂರು ಕಾಸು ಕೂಡಿಕ್ಕಿ ತೆರಗಿರಕೊಟ್ಟು, ನಮ್ಮ ಹಳ್ಳಿಗೆ ಹೋಗಿ, ಯಾವುದಾದರೂ ಹೆಣ್ಣು ಕಟ್ಟಿಕೊಂಡು ಸಂಸಾರ ಮಾಡಿಕೊಂಡು ಸುಕವಾಗಿರೋಕಾಗೋಕಿಲ್ಲವ ಅಂತ? ಅವ್ನು ಹಂಗೆ ಹೇಳ್ದಾರಬ್ದ ನಂಗೆ ಇದೇ ಕಡೀತೈತೆ ಮನಸ್ನಾಗೆ ಆದ್ರೆ ಇದ್ನ ನಾನೊಪ್ಪೊಕಿಲ್ಲ. ನಾವ್ ಬೆವರು ಸುರ್ಸಿ ಕೆಲ್ಸ ಮಾಡಿ ಮೂರೊತ್ತೂ ಮೂದೇವಿ ಅಂಗೆ ಬಿದ್ಕೊಂಡಿರೋ ಆ ಹೆಳವಂಗೆ, ಆ ಕುಂಟಂಗೆ, ಆ ಮಕ್ಕಳ ತಾಯೀರ್ಗೆ. ಇಕ್‌ಬೇಕಂತೆ! ಇದು ನಾನೊಪ್ಪೊಕಿಲ್ಲ, ಅವರವರ ಹಣೇಲಿ ಶಿವ ಬರಿದಿದ್ದು, ಅವರು ಅನುಬೋಗಿಸಲೇ ಬೇಕು. ಏನು ಗುರುವೆ? |

## ನೋಟ – ೪

[ಪಾಳು ಛತ್ರದ ಕಂಬಸಾಲಿನ ಮುರುಕು ಜಗುಲಿ: ತಿರುಕರ ವಾಸಸ್ಥಾನ. ಬೆಳಗ್ಗೆ ೭–೮ ಗಂಟೆ ಸಮಯ.

ಆಡುವವರಿಗೆ ವಿಶೇಷ ಸೂಚನೆ : – ಎಷ್ಟು ಸಾಧ್ಯವೋ ಅಷ್ಟು ಬಗೆಯ, ಅಷ್ಟು ಮಂದಿ, ತಿರುಕರು : ಕಂಬ ಕಂಬಕ್ಕೂ ಹಗ್ಗಬಿಗಿದು, ಗೋಣಿಪಟ್ಟೆಗಳಿಂದ ತೆರೆಗಳನ್ನು ಹಾಕಿ, ತಿರುಕರ ಸಂಸಾರಗಳು ವಾಸ ಮಾಡುತ್ತಿರುವಂತೆ ತೋರಬೇಕು.

ತಿರುಕರಲ್ಲಿ ಮುಖ್ಯವಾಗಿ ಕೆಲವು ಹೆಂಗಸರೂ ಇರಬೇಕು. ಮಕ್ಕಳತಾಯಂದಿರು ಒಂದಿಬ್ಬರು: ಮಕ್ಕಳಿಲ್ಲದಿದ್ದರೂ ಬಟ್ಟೆಯ ತೊಟ್ಟಿಲುಗಳನ್ನು ತೂಗು ಬಿಟ್ಟು ಮಕ್ಕಳು ಇರುವಂತೆ ತೋರ್ಪಡಿಸಹುದು. ಬಗೆಬಗೆಯ ತಿರುಕರನ್ನು ತೋರಿಸುವಲ್ಲಿ ಕಡೆಯ ಪಕ್ಷ ಇಷ್ಟು ಮಂದಿ ಇರಬೇಕು: ಒಬ್ಬ ಹಣ್ಣು ಹಣ್ಣು ಮುದುಕ; ಒಬ್ಬ ಕುರುಡ, ಒಬ್ಬ(ಒಕ್ಕಾಲು) ಕುಂಟ; ಒಬ್ಬ ಹೆಳವ; ಇಬ್ಬರು ಮೂವರು ಹುಡುಗ ಹುಡುಗಿಯರು; ಮತ್ತು ಈ ತಿರುಕರಿಗೆ ತಕ್ಕ ಸಲಕರಣೆಗಳು.

ದೃಶ್ಯ ಪ್ರಾರಂಭವಾಗುವುದಕ್ಕೆ ಮೊದಲು ಕಥೆಗೆ ಸಂಬಂಧವಿಲ್ಲದಂತೆ ತಿರುಕರ ತಂಡಕ್ಕೆ ಅನುಗುಣವಾಗಿ, ತಿರುಕರು (ನಟರು) ಇಚ್ಛಾನುಸಾರ (ಆದರೆ ಸ್ವಾರಸ್ಯಕರವಾಗಿ) ಹರಟುತ್ತ ಇರಬಹುದು; ತಮ್ಮ ತಮ್ಮಲ್ಲಿ ಜಗಳ ಕಾಯುತ್ತ ಇರಬಹುದು; ಒಬ್ಬ ತಿರುಕಿ – ಇಂಪಾಗಿಯಾದರೂ ಅಭ್ಯಂತರವಿಲ್ಲ – ಹಾಡುತ್ತಿರಬಹುದು, ದೃಶ್ಯ ಮೊದಲಾಗುವ ಹೊತ್ತಿಗೆ ಒಬ್ಬಿಬ್ಬರು ಇನ್ನೂ ಗೊರಕೆ ಹೊಡೆಯುತ್ತಿರಬಹುದು. ನಿದ್ದೆಯಿಂದ ಏಳುತ್ತ ಇರಬಹುದು.

ದೃಶ್ಯದ ಪೀಠಿಕಾ ಪ್ರಕರಣವನ್ನು ಆಕರ್ಷಕವಾಗಿ ಮಾಡುವುದು ಆಡುವವರ ಕೈಯಲ್ಲಿದೆ.]

ಬೈರಾಗಿ, 'ಜೈಶಂಕರ್' : ಜೈ ಶಂಕರ್, ಜೈ ಶಂಕರ್ (ಎಂದು ಭಂಗೀ ಸೇದುತ್ತಿರುವನು : ಇಬ್ಬರು ಧಾಂಡಿಗರು ಬಂದು ಇವನಿಗೆ 'ನಮಸ್ಕಾರ' ಮಾಡಿ ಪಕ್ಕದಲ್ಲಿ ಕುಳಿತುಕೊಳ್ಳುವರು.)

ಒಬ್ಬ ಧಾಂಡಿಗ(ಚಿಕ್ಕ) : ಶಂಕರ್ ಮಹಾರಾಜ್ ! ಹೀಗೇ ಇದ್ರೆ ನಮಗೆ ತಿರುಪೆ ಹುಟ್ಟುವುದಿಲ್ಲ. ಮೊನ್ನೆ ಬಂದಿದ್ನಲ್ಲ ಆ ಹುಚ್ಚಪ್ಪ – ಅವನ ಮಾತು ಕೇಳಿಕೊಂಡು ನಾವು ಸೌದೆ ಕಡಿಯೋಕೆ ಹೋಗಬೇಕೆ ಅವನ ಜೊತೆಗೆ? ಈ ಮಾದವನೋ ಅವನ ಮಾತಿಗೆ ಮರುಳಾಗಿಬಿಟ್ಟನೆ, ನೀವು ನಮ್ಮ ಗುರು. ನೀವು

ಕುಳಿತುಕೊಳ್ಳುವನು. ಸ್ವಲ್ಪ ಹೊತ್ತಾದ ಮೇಲೆ, ಗಲಾಟೆ ನಿಂತಮೇಲೆ)

ಚಂದ್ರಶೇಖರ : (ಎಲ್ಲರನ್ನೂ ಸಂಬೋಧಿಸುತ್ತಾ) ಕೇಳಿ, ಅಣ್ಣಂದಿರ, ಅಕ್ಕ ತಂಗಿಯರಾ, ಕೇಳಿ, ನನ್ನ ಮಾತನ್ನು ನಂಬಿ. ಸಾರಿ ಸಾರಿ ಹೇಳುತ್ತೇನೆ. ನಾನು ಹುಚ್ಚನಲ್ಲ. ಹುಟ್ಟುತಿರುಕನೂ ಅಲ್ಲ. ನಿಮ್ಮ ಗುರು ನಾನಾಗಬೇಕು. ನಿಮ್ಮೊಡೆಯ ನಾನಾಗಬೇಕು. ನಿಮ್ಮ ಕೈಲಿ ದುಡಿಸಿ ನಾನು ತಿಂದು ಸುಖವಾಗಿರಬೇಕೆಂಬ ಆಸೆ ನನಗಿಲ್ಲ. ನನ್ನ ಜಾತಿ ಯಾವುದೆಂದು ಕೇಳುತ್ತೀರಿ. ನನ್ನ ಜಾತಿ ಕಟ್ಟಿಕೊಂಡೇನು, ಕುಲ ಕಟ್ಟಿಕೊಂಡೇನು, ನಾನು ವೇಷ ಬದಲಾಯಿಸಿಕೊಂಡು ಬಂದಿರುವ ಕ್ರಿಸ್ತಪಾದ್ರಿಯಲ್ಲ. ನನ್ನ ದೇವರನ್ನು ನೀವು ನಂಬಬೇಕಾಗಿಲ್ಲ. ನನ್ನ ದೇವರ ಸ್ವರೂಪ ನಾನು ಕಾಣೆ. ನಿಮ್ಮ ದೇವರನ್ನು ನೀವು ನಂಬಿ ಪೂಜಿಸಿ. ನನ್ನನ್ನು ನೀವು ಪ್ರೀತಿಸಿ, ನಿಮ್ಮನ್ನು ನಾನು ಪ್ರೀತಿಸುತ್ತೇನೆ. ನೀವು ಎಲ್ಲ ಒಂದು ಕುಟುಂಬವಾದರೆ ನೀವೇ ನನ್ನ ದೇವರು. ನೀವು ಸಂತುಷ್ಟರಾದರೆ ನನ್ನ ದೇವರು ಸಂತುಷ್ಟವಾದಂತೆ. ನಿಮ್ಮ ಸೇವೆಯೇ ನನ್ನ ದೇವರ ಸೇವೆ.

ಅಣ್ಣಗಳಿರಾ, ಈ ಊರನ್ನೆಲ್ಲಾ ನೀವು ತಿರುಗಿದ್ದೀರಲ್ಲಾ, ಎಷ್ಟು ಜನ ವರ್ತಕರು, ಎಷ್ಟು ಜನ ಹಣವಂತರು, ನಿಮಗೆ ಒಂದು ಹಿಡಿ ಅಕ್ಕಿ ಕೊಡದೆ; ತಾವು ತಿಂದು ತೇಗಿ, ತಾವು ಚೆಲ್ಲಿದ್ದನ್ನು ಸಹ ನಿಮಗೆ ಕೊಡದೆ ನಾಯಿಗೆ ಹಾಕುತ್ತಿಲ್ಲ! ಮನಸ್ಸಿಗೆ ಶಾಂತಿ ಬೇಕಾದರೆ, ಸತ್ತಮೇಲೆ ಸ್ವರ್ಗಬೇಕಾದರೆ ಶಿವನ ಸ್ಮರಣೆಮಾಡಿ. ಆದರೆ ಇಲ್ಲಿ ನಿಮಗೆ ಸ್ವರ್ಗಬೇಕಾದರೆ, ಇಲ್ಲಿ ನಿಮ್ಮ ಹೊಟ್ಟೆ ತುಂಬಬೇಕಾದರೆ – ಆ ಕಾಣದ ದೇವರ ಮುಂದೆ ಅತ್ತುಕರೆದರೆ ಪ್ರಯೋಜನವಿಲ್ಲ. ಪೂಜೆಮಾಡಿ.

ಬೈರಾಗಿ : ಜೈ ಶಂಕರ್, ಜೈ ಶಂಕರ್.

ಮಾದ : ಆ ಹುಚ್ಚಪ್ಪ ಹೇಳೋದೆಲ್ಲ ಸರಿಯೆ. ಆದರೆ ನಮ್ಮ ಗುರು ಉಪದೇಶ ತಕ್ಕೊಂಡು ಸುಕವಾಗಿ ಹೊಟ್ಟೆ ಹೊರೆಕೊಂಡು ಇರೋದೇ ಸೈ. ಸುಕಕ್ಕೆ ಸುಕ – ಸಿವಂಗೆ ಸಿವ. ಇದಕ್ಕೂ ಪುಣ್ಯ ಪಡೆದಿರಬೇಕು ಅಲ್ಲವೆ ಗುರುವೆ?

ಬೈರಾಗಿ : ಜೈ ಶಂಕರ್, ಜೈ ಶಂಕರ್,

ಚಿಕ್ಕ : ಮಾದ, ಕೊನೆಗೂ ನನ್ನ ದಾರೀಗೆ ಬಂದೆ. ಗುರುಪಾದ ನಂಬೋಣ. ಆ ಕೈಕಾಲಿಲ್ಲದ ನಾಯ್ಗೊಳು – ಕೈಲರಿಯೋಕಿಲ್ಲ, ಇನ್ನೇನು ನಾವೆ ಅವರಿಗೆ ನಾಳೆ ಇಂದ ತಂದು ಸುರಿದು ಬಿಡುತೀವಿ ಅಂದ. ಅ ಹುಚ್ಚಪ್ಪನ ಮಾತಿಗೆ ನಗಾ ಬರ್ತದೆ. ನಾವು ಬಿಕ್ಸ ಮಾಡೋದು ತಪ್ಪಿಸಿಬುಡುತವನಂತೆ ತಾನು ಮಾತ್ರ ಬಿಕ್ಸ ಮಾಡ್ತವನಂತೆ. ಮಿಕ್ಕಿದವರೆಲ್ಲ ದುಡೀಬೇಕಂತೆ. ಒಳ್ಳೆ ಐನಾತಿ ಕಣಣ್ಣ! ತನ್ನ ಕೈಲಿ ಆಗೋಕಿಲ್ಲ ನೋಡು. ಅದಕ್ಕೆ ಹಿಂಗಂತವ್ನೆ, ಅಂತು ಮಾತೋಳೆ ಚೆನ್ನಾಗಿ ಆಡ್ತಾನೆ ಕಣಣ್ಣ. ಆದರೆ ನಮ್ಮ ಗುರುಗಳ ಹತ್ತಿರ ಅವನು ಬಾಲ ಬಿಚ್ಚೊಹಂಗಿಲ್ಲ. ಏನು ಗುರುವೆ?

ಬೈರಾಗಿ : ಜೈ ಶಂಕರ್, ಜೈ ಶಂಕರ್

ಚಿಕ್ಕ : ಇಲ್ದೇ ಹೋದ್ರೆ ನೀವೂ ಬಾಳೋಹಂಗಿಲ್ಲ ಇವತ್ತು ಏನೋ ಎಲ್ಲರನ್ನೂ ಕರೆಕೊಂಡು ಅದೇನೋ ಊರೆಲ್ಲಾ ತಿರುಗ್ತಾನಂತೆ. ಅವನಿಗೆ ಇವತ್ತು–

ಮಾದ : ಲೋ, ಚಿಕ್ಕಣ್ಣ ಬಂದಕಣೋ ಸುಮ್ಕಿರೋ. ಬಂದ (ಚಂದ್ರಶೇಖರ ಪ್ರವೇಶಿಸುವನು.)

ಬೈರಾಗಿ : ಜೈ ಶಂಕರ್, ಜೈ ಶಂಕರ್,
(ಎಲ್ಲರೂ ಎದ್ದು ಗಜಿಬಿಜಿ ಮಾಡುತ್ತ, ಒಂದೊಂದು ಜಾಗದಲ್ಲಿ ಕುಳಿತುಕೊಳ್ಳುವರು. ಚಂದ್ರಶೇಖರನು ಜಗುಲಿ ಮೇಲೆ ಒಂದು ಕಡೆ ಮಧ್ಯದಲ್ಲಿ

ಕೊಡಲಿ; ಬಿಟ್ಟವರು ಬಿಡಲಿ; ಇನ್ನು ಮುಂದೆ ನೀವು ಮಾಡುವ ಭಿಕ್ಷೆಯಲ್ಲಿ ಗೌರವವಿರಲಿ. ಗಾಂಭೀರ್ಯ ವಿರಲಿ: ಭಿಕ್ಷೆ ಬೇಡುವುದು ನಮ್ಮ ಪ್ರಾಚೀನ ಕರ್ಮವಿರಬಹುದು. ಆದರೆ ಭಿಕ್ಷೆ ಕೊಡುವುದು ತಮ್ಮ ಕರ್ತವ್ಯವೆಂದು ಅವರು ಅರಿತು, ಮುಂದೆ ಬಂದು, ಭಿಕ್ಷೆಕೊಡುವಂತಾಗಲಿ. ಭಿಕ್ಷೆ ಎಂಬ ಮಾತು ಮಾಯವಾಗುವ ಕಾಲ ಬರಲಿ. ಬೇಗ ಬರಲಿ; ಆದರೆ ಅದು ಬರುವವರೆಗೆ ಭಿಕ್ಷೆ ಎನ್ನುವುದು ಅವಮಾನಕರವಾದದ್ದಾಗದಿರಲಿ. ನಾವು ಭಿಕ್ಷುಕರು. ನಿಕೃಷ್ಟರು, ಎಂಬ ಭಾವ ಬಿಡಿ.

ಅಣ್ಣತಮ್ಮಂದಿರಾ, ನಮ್ಮ ಸುತ್ತಮುತ್ತ ಸ್ವರಾಜ್ಯಕ್ಕಾಗಿ ಹೊಡೆದಾಡಲು ಸತ್ಯಾಗ್ರಹ ಮಾಡುತ್ತಾರೆ ಗೊತ್ತೆ ನಿಮಗೆ? ಅದು ಒಂದು ದೊಡ್ಡ ಮಹಾಮಂತ್ರ: ಹಸಿವನ್ನು ಸಹಿಸಬೇಕು. ನರಳಬೇಕು, ಸಾಯುವುದಕ್ಕೂ ಸಿದ್ದವಾಗಿರಬೇಕು. ಆದರೆ ಎದುರಾಳಿಗಳನ್ನು, ಶತ್ರುಗಳನ್ನು, ಹಿಂಸಿಸಕೂಡದು; ಹೀಗೆ ನಮ್ಮ ಛಲವನ್ನು ಮುಂದೊತ್ತಬೇಕು. ರಾಜ್ಯಕ್ಕೆ ಹೊಡೆದಾಡುವವರು ಅತ್ತ ರಾಜ್ಯಕ್ಕೆ ಹೊಡೆದಾಡಲಿ: ಇತ್ತ ಈ ಒಳಗಿನ ಭೇದವಳಿಯಲು ನಾವು ಹೊಡೆದಾಡೋಣ. ನಮ್ಮ ತಿರುಪೆಗೆ ಇಲ್ಲದಿದ್ದ ಬಲ ತರೋಣ. ಆದರೆ ...........ಮೊದಲು ದುಡಿತ! ಆಮೇಲೆ ತಿರುಪೆ. ಇದನ್ನು ನೆನಪಿನಲ್ಲಿಡಿ.

ದುಡಿತದಿಂದ ಹೊಟ್ಟೆತುಂಬುವುದಾದರೆ ಎಂಥ ಗೌರವದ ತಿರುಪೆಯಾದರೂ ಬೇಡ. ಆದರೆ ನಾವೆಲ್ಲ ಒಂದು ಕುಟುಂಬದವರಾದ ಹೊರತು ಇದು ಸಾಧ್ಯವಿಲ್ಲ. ಅಪ್ಪ ಒಬ್ಬ ಸಂಪಾದಿಸಿ ಹೆಂಡತಿ ಮಕ್ಕಳಿಗೆ ಹಾಕಲು ಹೊಟ್ಟೆಕಿಚ್ಚು ಪಡುತ್ತಾನೆಯೇ? ಹಾಗೆಯೇ ನೀವು ಹೊಟ್ಟೆಕಿಚ್ಚು ಪಡಬಾರದು. ತೀರ ಕೈಲಾಗದವರು ಇಲ್ಲಿ ಕುಳಿತು, ನೀವು ಬೆವರು

ಹೊಟ್ಟೆಯದೇವರಿಗೆ ದುಡಿತದ ಬಿಸಿಕೂಳಿಕ್ಕಿ; ಅದಿಲ್ಲದಿದ್ದರೆ ಆಮೇಲೆ ತಿರುಪೆಯ ತಂಗೂಳು. ನಿಮ್ಮ ಈಗಿನ ತಿರುಪೆ ನರಕದ ತಿರುಪೆ. ನಾಯತಿರುಪೆ; ಮೊದಲು ಆ ತಿರುಪೆಗೂ ಒಂದು ಗೌರವ ತನ್ನಿ; ನನ್ನನ್ನು ನಂಬಿ, ನಾನು ತಂದುಕೊಡುತ್ತೇನೆ.

ಅಣ್ಣಗಳಿರಾ ನೀವು ಸುಖವಾಗಿರಬೇಕಾದರೆ. ಎಲ್ಲರಂತೆ ಸುಖವಾಗಿರಬೇಕಾದರೆ, ಮನುಷ್ಯರು ಎನ್ನಿಸಿಕೊಳ್ಳಬೇಕಾದರೆ, ಮನೆ ಮನೆಯ ಬಾಗಿಲಿಗೆ ಒಬ್ಬೊಬ್ಬರೆ ಅಲೆದಲೆದು ಬೈಸಿಕೊಂಡು, ಬಗುಳಿಸಿಕೊಂಡು, ಏನೂ ಇಲ್ಲದೆ ಬರಿಕೈಲಿ ಹಿಂದಿರುಗುವುದು ತಪ್ಪಬೇಕಾದರೆ – ಮೊದಲು ನೀವು ಒಂದು ಕುಟುಂಬವಾಗಬೇಕಣ್ಣ. ಕೈಲಾಗುವವರು ಸೌದೆ ಕಡಿದು ತನ್ನಿ. ಒಬ್ಬರು ಹೋಗಿ ಮಾರಿ, ದುಡ್ಡು ತನ್ನಿ – ಇಲ್ಲಿ ಒಂದು ಕಡೆ ಹಾಕಿ; ಕೈಲಾಗುವ ಹೆಂಗಸು ಹೋಗಲಿ – ಯಾರ ಮನೆಯಲ್ಲಾದರೂ ಕೆಲಸ ಮಾಡಲಿ. ಕೂಲಿ ತರಲಿ – ಇಲ್ಲಿ ಒಂದು ಕಡೆ ಹಾಕಲಿ; ನಾನು ಹೋಗಿ ಸೌದೆ ತರುತ್ತೇನೆ. ಮಾರುತ್ತೇನೆ; ಇಷ್ಟರಿಂದ ಸಾಲದೆ ಹೋದರೆ ಭಿಕ್ಷೆ ಬೇಡೋಣ. ಒಬ್ಬೊಬ್ಬರೇ ಹೋಗುವುದರಿಂದ ಪ್ರಯೋಜನವಿಲ್ಲ. ಬನ್ನಿ, ದಿನದಿನವೂ ನನ್ನ ಹಿಂದೆ.

ಕೈಕಾಲು, ಬುದ್ಧಿ ಉಪಯೋಗಿಸಿ ಕೆಲಸಮಾಡಲು ಅವಕಾಶ ಸಿಗದೆ ಹೋದರೆ ಭಿಕ್ಷೆಯೇ ಬಡವನ ಬಾಳು; ಹಣವಂತರ ಬಲಿತ; ಹೊನ್ನಿನ ಹಿಡಿ ತಾನಾಗಿ ಬಿಡದಿದ್ದರೆ, ಅದನ್ನು ಬಿಡಿಸುವ ಕಾಲ ಬರುವವರೆಗೂ ಅವರ ದಾನಕ್ಕೆ ಕೈಯೊಡ್ಡುವುದೇ ಬಡವನಿಗೆ ಉಳಿದಿರುವ ಮಾರ್ಗ. ಆದರೆ ಅವರ ಮುಂದೆ ಹಲ್ಲು ಕಿರಿಯುವುದು ಬೇಡ; ಕೊಟ್ಟವರು

ಶಂಕರ್ ಎಂದು ಗರ್ವದಿಂದ ಎದ್ದು ನಿಲ್ಲುವನು.) (ಧಾಂಡಿಗರೂ ಎದ್ದು ನಿಲ್ಲುವರು. ಬೈರಾಗಿ ಅವರಿಬ್ಬರ ಕಡೆ ನೋಡಿ ಸನ್ನೆ ಮಾಡುವನು. ಮಾದ ತಟಸ್ತನಾಗಿರುವನು. ಚಿಕ್ಕ ಬೈರಾಗಿಯ ದಂಡ ಕೋಲನ್ನು ಕಿತ್ತುಕೊಂಡು ಚಂದ್ರಶೇಖರನ ತಲೆಗೆ ಗುರಿಯಿಡುವನು. ಚಂದ್ರಶೇಖರ ಧೈರ್ಯದಿಂದ ತಲೆ ಎತ್ತಿ ದುರುಗುಟ್ಟಿಕೊಂಡು ನೋಡುತ್ತಿರುವನು. ಬೈರಾಗಿ ಜೈಶಂಕರ್ ಎನ್ನುವನು, ಚಿಕ್ಕ ದಂಡದಿಂದ ಬಲವಾಗಿ ಹೊಡೆಯುವನು. ಚಂದ್ರಶೇಖರ ತಲೆ ಓರೆ ಮಾಡಲು ಏಟು ಹೆಗಲಮೇಲೆ ಬೀಳುವುದು. ಚಂದ್ರಶೇಖರ ತಲೆ ಓರೆ ಮಾಡಿದಾಗ ಅವನ ಗಮನ ಇದ್ದಕ್ಕಿದ್ದಂತೆ ಪಕ್ಕದಲ್ಲಿ ನಿಂತಿದ್ದ ಶಶಿವದನೆ ತಿರುಕಿಯರಕಡೆ ಹರಿಯುವುದು; ಅವನು ಅವರ ಕಡೆ ತಿರುಗುವುದಕ್ಕೂ ಏಟು ಬೀಳುವುದಕ್ಕೂ ಸರಿ ಹೋಗುವುದು. ಏಟು ಬಿದ್ದಕ್ಷಣದಲ್ಲಿಯೇ ಶಶಿವದನೆಯೂ, ತಿರುಕಿಯೂ ಅವನ ಬಳಿ ಹೋಗುವರು. ಶಶಿವದನೆಕುಳಿತು ಚಂದ್ರಶೇಖರನ ತಲೆಯನ್ನು ತನ್ನ ತೊಡೆಯ ಮೇಲೆ ಇರಿಸಿಕೊಳ್ಳುವಳು. ಒಬ್ಬ ತಿರುಕಿ ಒಂದು ಡಬ್ಬದಲ್ಲಿ ನೀರು ತಂದುಕೊಡುವಳು. "ತಂಗಮ್ಮ" ತಿರುಕಿ ಚಂದ್ರಶೇಖರನ ಹಣೆಗೆ ನೀರು ತಟ್ಟುವಳು. ಈ ಮಧ್ಯೆ ಕುಂಟ ಎದ್ದು ತನ್ನ ಊರುಗೋಲನ್ನು ತಿರುಗಿಸುತ್ತಾ ಬರುವನು. ತಿರುಕಿಯೊಬ್ಬಳು ಅಲ್ಲಿ ಬಿದ್ದಿದ್ದ ಸೌದೆ ಸೀಳನ್ನು ಎತ್ತಿ ಹಿಡಿದು ಬರುವಳು. ಎಲ್ಲರೂ ಎದ್ದು ಗುಂಪಾಗಿ ಧಾಂಡಿಗರ ಕಡೆ ಬರುವರು. ಬೈರಾಗಿ 'ಜೈ ಶಂಕರ್' ಎನ್ನುವನು. ಮೂವರೂ ಪಲಾಯನ ಮಾಡುವರು.

ತಿರುಕರೆಲ್ಲ ಬಂದು ಚಂದ್ರಶೇಖರನನ್ನು ಬಳಸಿ ಕುಳಿತು ಒಂದೊಂದು ಕನಿಕರದ

ಸುರಿಸಿ ಸಂಪಾದಿಸಿದ್ದನ್ನು, ಕಷ್ಟಪಟ್ಟು ತಿರುಪೆಯೆತ್ತಿ ತಂದಿದ್ದನ್ನು ಇಲ್ಲಿ ಕುಳಿತು ಮೈಗಳ್ಳರಾಗಿ ತಿನ್ನುತ್ತಾರೆಂದು ತಿಳಿಯಬೇಡಿ. ಎಲ್ಲರಿಗೂ ಒಂದೊಂದು ಕೆಲಸ ಕೊಡುತ್ತೇನೆ. ಅದೋ ನೋಡಿ; ಅವರಿಬ್ಬರು ಸೌದೆ ಕಡಿದು ತರಲಿ; ನಾನು ಮಾರುತ್ತೇನೆ. ಕುರುಡ ಇಲ್ಲಿ ಕುಳಿತು ನೂಲುತ್ತಾನೆ; ನಾನು ಮಾರುತೇನೆ. ಕುಂಟ .......ಅವನಿಗೆ ಬಂದದ್ದು .........ಚಾಪೆ ಹೆಣೆಯುವುದೋ, ಏನಾದರೂ ಒಂದು ಮಾಡಲಿ. ಅದನ್ನೂ ನಾನು ಮಾರುತ್ತೇನೆ. ಕಾಳಕಳೆಯಲಿ; ದುಡ್ಡು ಕೂಡಲಿ; ಈ ಮುರುಕು ಮನೆಯನ್ನು ಅರಮನೆಮಾಡೋಣ; ಹಸುಗಳನ್ನು ಕಟ್ಟೋಣ ; ಕುರಿಮಂದೆಗಳನ್ನು ಸಾಕೋಣ; ಇದನ್ನೆ ಸ್ವರ್ಗವಾಗಿ ಮಾಡೋಣ.

ಬೈರಾಗಿ : ಜೈ ಶಂಕರ್, ಜೈ ಶಂಕರ್ (ಧಾಂಡಿಗರ ಕಡೆ ತಿರುಗಿ) ಕೇಳಿದಿರಾ ತಿರುಕನ ಕನಸು!

ಚಂದ್ರಶೇಖರ : ಹೌದು, ಇದು ತಿರುಕನ ಕನಸೇ ಸರಿ. ಆದರೆ ನೀವೆಲ್ಲ ನನ್ನ ಹಿಂದೆ ಬನ್ನಿ. ಒಕ್ಕಟ್ಟಲ್ಲಿ ಕೆಲಸ ಮಾಡೋಣ. ಒಕ್ಕಟ್ಟಿನಲ್ಲಿ ಭಿಕ್ಷೆ ಬೇಡೋಣ. (ಇಷ್ಟು ಹೊತ್ತಿಗೆ ಶಶಿವದನೆಯೂ, ತಿರುಕಿಯೂ ಬಂದು ದೂರದಲ್ಲಿ ನಿಂತು ಆಲಿಸುತ್ತಿರುವರು.)

ಒಕ್ಕಟ್ಟಿನಲ್ಲಿ ಬಲವಿದೆ ಎಂಬುವುದು ನಿಮಗೆ ಗೊತ್ತಿಲ್ಲ. ನಾನು ತೋರಿಸಿಕೊಡುತ್ತೇನೆ. ನಮ್ಮ ಪ್ರೇಮ ಒಕ್ಕಟ್ಟಾಗಲಿ. ನಮ್ಮನ್ನು ಯಾರೂ ತಡೆಯಲು ಸಾಧ್ಯವಿಲ್ಲ.

(ಧಾಂಡಿಗರು ಗೊಳ್ಳನೆ ನಗುವರು. ಬೈರಾಗಿ ಜೈ ಶಂಕರ್ ಎನ್ನುವನು. ಚಂದ್ರಶೇಖರ ರೇಗಿ) ಆದರೆ – ನಮ್ಮ ಕುಟುಂಬದಲ್ಲಿ, ಸಂಸಾರದಲ್ಲಿ, ಆ ಕಾವಿಬಟ್ಟೆಯ ಬೂಟಾಟಿಕೆಗೆ ಸ್ಥಳವಿಲ್ಲ. ಅದನ್ನು ಬಿಚ್ಚಿ ಬರಬೇಕು. (ಬೈರಾಗಿ ರೇಗಿ, ಜೈ

ಬಾಚುಕೋತಾರೋ ಅಂತ ಚರಂಡೀಲೆ ಬಿದ್ದು ಒದ್ದಾಡ್ತಿ ನೀನು, ನಾಯಂಗೆ. ಮನಸ್ನಾಗಿಹುಟ್ಟಿ ತಿರುಪೆ ಮಾಡೋಕೂ ನಿನಗೆ ಮೈಬೊಗ್ಗೋಕಿಲ್ಲ.

ತಿರುಕ : ಅದೇನು ಒಸಿ ಸಮಾಚಾರ ಹೇಳಬಾರ್ದ?

ಕುಂಟ : ಕೇಳುಮಂಕೆ, ಒಳ್ಳೆದೇವ್ರಂಗೆ ಬಂದವ್ನೆ. ಆ ಶೇಕರಪ್ಪ. ನಮ್ಗೆಲ್ಲ ಗುರು ಕಣ ಅವ್ನು – ಪೇಟೆಗೆಲ್ಲ ಹೋಗಿ ಬೇಕುಬೇಕಾದ್ದು ತಂದು ಬಿಟ್ಟವ್ನೆ. ದೊಡ್ಡ ಮನಸ್ರಮನೇಗೆಲ್ಲ ಹೋಗಿ ಒಂದು ಡಬ್ಬ ತುಂಬ ದುಡ್ಡು ತಂದವ್ನೆ. ಇವತ್ತು ಪಾಯಸದೂಟ ಪ್ರಾರಂಬ – ಇನ್ನು ಮೇಲೆ ನಮ್ಗೆಲ್ಲಾ ಹಿಟ್ಟಾಕ್ತಾನಂತೆ.

ತಿರುಕ : ಅದೇನಣ್ಣ, ಹಂಗಾದ್ರೆ ಅವನು ಮಾಡಿರೋ ಮಾಯಾಮಂತ್ರ

ಕುಂಟ : ಮಾಯಾ ಮಂತ್ರ ಏನಣ್ಣ! ಅವನು ಹೇಳೋದು ಕೇಳಿದ್ರೆ ನಿಂಗೆ ಗೊತ್ತಾಯ್ತದೆ.

ತಿರುಕ : ಹಂಗಾದ್ರೆ – ಇನ್ಮೇಲೆ ಈ ಎಂಜಲೆಲೆ ಈ ನಾಯ್ಗೇ ಬಿಟ್ಬುಟ್ಟು ಬಂದ್ಬಿಡ್ತೀನಣ್ಣ ನಾನೂನೆ. ನಂಗೂ ಹಾಕಸ್ತಿ ತಾನೇ ಹಿಟ್ನ.

ಕುಂಟ : ಆದ್ರೊಂದು ಯಿಚಾರ ನೋಡು –

ತಿರುಕ : ಅದೇನಣ್ಣ?

ಕುಂಟ : ನೀನು, ಕಡದ್ರೆ ಮೂರಾಳಾಗ್ತಿ. ರಟ್ಟೆ ಬಲವಾಗದೆ.

ತಿರುಕ : ಹಂಗಾದ್ರೆ ನನಗೆ ಹಿಟ್ಟಾಕೋಕಿಲ್ಲ ಎನ್ನು/

ಕುಂಟ : ಹಾಕ್ತಾನೆ. ಆದ್ರೆ ನೀನು ಬೆವರು ಸುರ್ಸಿ ಕೆಲಸ ಮಾಡಬೇಕು. ಕೆಲ್ಸ ಮಾಡ್ದೋ ಹೊಟ್ಟೆ ತುಂಬ್ತದೆ. ಇಲ್ದೆ ಮೈಕದ್ರೆ –

ತಿರುಕ : ಮಾರಾಯಾ, ನಿಮ್ಗೂ, ನಿಮ್ಗುರೂಗೂ ಸಲಾಂ ತಗೋ, ಕೆಲ್ಸ ಮಾಡ್ಬೇಕಂತೆ, ಹೊಟ್ಟೇಗಾಕ್ತನಂತೆ. ಕೆಲ್ಸ ಮಾಡಿದ್ರೆ ಅವನೇನಾಕೋದು. ನಂಗೇನಾದ್ರು ಬಿಟ್ಟಿ ಹಾಕ್ತಾನಾ, ನೋಡು ಸಲಾಂ ತಗೋ ನನ್ನ ಎಂಜಲೆಲೆ ನನಗೈತೆ.

ಕುಂಟ : ಥೂ, ನಾಯಿ. ನಾಚ್ಕೆ ಆಗೋಕಿಲ್ವ ನಾಯ್ನಂಗೆ ಎಂಜ್ಲೆಲೆ ನೆಕ್ಕೋಕೆ. ದೇವ್ರು ಕೈಕಾಲು ಕೊಟ್ಟಿರೋದು ಯಾಕಣ್ಣ. ನನ್ನಂಗೆ ನೀನೇನು ಕುಂಟ್ನ. ನಿಂಗೂ ಏನಾದ್ರೂ ಮಾನವಾಗೆ, ಸುಕ್ವಾಗೆ ಬದ್ಕೊ ಆಸೆ ಇದ್ರೆ ಏಳು, ನಮ್ಮಗುರ್ಗಳಪಾದಕ್ಕೆ ನಿನ್ನ ಒಪ್ಪಿಸ್ತೀನಿ. ಇಲ್ದಿದ್ರೆ ಬಿದ್ಕೊಂಡಿರು ಚರಂಡೀಲಿ, ನಂಗೇನಂತೆ.

ಮಾತಾಡುತ್ತಿರುವರು. ಚಂದ್ರಶೇಖರ ಎಚ್ಚರಗೊಂಡು, 'ಶಶಿವದನೆ', 'ತಂಗೀ' ಎಂದು ಕೂಗುವನು. ಶಶೀವದನೆ 'ಚಂದ್ರಾ' ಎನ್ನುವಳು. ತಿರುಕಿ 'ಅಣ್ಣಾ, ಎನ್ನುವಳು. ಚಂದ್ರಶೇಖರ......ಪ್ರೇಮ.........ಪ್ರೇಮ ಎಂದು ಅಷ್ಟಕ್ಕೇ ನಿಲ್ಲಿಸುವನು. ಶಶಿವದನೆ 'ಚಂದ್ರಾ, ಚಂದ್ರಾ' ಎಂದು ಕೂಗುವಳು. ತಿರುಕರೆಲ್ಲ ಸ್ತಬ್ಧರಾಗಿ, ಆತಂಕ ಮರುಕಗಳಿಂದ ನಿರೀಕ್ಷಿಸುತ್ತಿರುವರು.

– ತೆರೆ ಬೀಳುವುದು –

**ನೋಟ – ೫**

[–ಪುರಿಯ ದೊಡ್ಡ ರಸ್ತೆಯೊಂದು; ಮಧ್ಯಾಹ್ನ ಸಮಯ. ತಿರುಕನೊಬ್ಬನು ಚರಂಡಿಯ ಪಕ್ಕದಲ್ಲಿ ಎಂಜಲೆಲೆಯ ಎಸಳುಗಳನ್ನು ಆಯ್ದು ಹಿಗ್ಗುತ್ತ ತಿನುತ್ತಿದ್ದಾನೆ. ಇನ್ನೊಬ್ಬ – ತಿರುಕ – ಕುಂಟ ಅವಸರವಸರವಾಗಿ ಕುಂಟುತ್ತಾ ಹೋಗುತ್ತಿದ್ದಾನೆ.]

ಕುಂಟ : ಏ ಮಂಕೆ ಮೇಲೇಳು.

ತಿರುಕ : ಮಂಕಂತೆ ! ಏನೋ, ಮಂಕು ನಾನೋ, ನೀನೋ, ನೀನೂ ಬೇಕಾದರೆ ಬಾ, ಕೈ ಮಡಗು, ತಿನ್ನು, ಒಳ್ಳೆ ಹಬ್ಬದೂಟ ಎಸೆದವ್ರೆ. ಅದನ್ನು ಬಿಟ್ಟು ಏಳಬೇಕಂತೆ!

ಕುಂಟ : ನಮ್ಮ ಛತ್ರದಲ್ಲಿ ಇವೊತ್ತು ಪಾಯಸ್ದೂಟ ಕಣಲಾ, ಗೊತ್ತಿಲ್ವೇನೋ, ಮಂಕೆ.

ತಿರುಕ : ಪಾಯಸ್ದೂಟ. ಅದ್ಯಾವೋನಪ್ಪ ಧರ್ಮರಾಯ ಬಂದೋನು ನಮ್ಗೆಲ್ಲ ಪಾಯಸ್ದೂಟ ಹಾಕೋಕೆ!

ಕುಂಟ : ಈಗ ಒಸಿ ದಿವ್ಸದ ಕೆಳ್ಗೆ ಒಬ್ಬಯ್ಯ ಬಂದು ನೋಡು. ಅದೇನೋ ಶೇಕರಪ್ಪ; ಅವನು ಮಹರಾಯ ನೋಡು! ನಮ್ಮಂಗೇ ತಿರೀತಾ ಇದ್ದ. ನಾವೆಲ್ಲ ಹುಚ್ಚು ಅಂದ್ಕೊಂಡೆ ಇದ್ವು. ಈಗಾಗ್ಲೆ ವಾರ ಇಲ್ಲ. ನಮ್ಮ ಛತ್ರ ಅರಮನೆ ಮಾಡಿಬಿಟ್ಟವ್ನೆ ಕಣಲಾ!

ತಿರುಕ : ಇದೇನಣ್ಣ ಇದು ಸಮಚಾರ (ಎಂದು ಎದ್ದು) ನನಗೆ ತಿಳೀಸಬೇಡ್ವಾ!

ಕುಂಟ : ನಿಂಗೆ ಎಂಗೆ ತಿಳಿತೈತೆ ! ನಂಛತ್ರಕ್ಕೆ ಬಂದರೆ ಇನ್ನಾರು ಎಂಜ್‌ಲೆಲೆ

ಬದುಕಾಯ್ತು. ಒಂದು ಹಾಡು ಹೇಳು. [ತಿರುಕಿ "ಒಂಟಿ ಮುಗಿಲೊಂದು ತಾನಾಗಸದೊಳಲೆಯುತ್ತ........" ಎಂಬ ಚರಣ ಹೇಳಿ ನಿಲ್ಲಿಸಿ ನಗುವಳು. ಚಂದ್ರಶೇಖರನೂ ನಗುವನು.] ಶಶೀ, ಈ ಹಾಡು ನಾನು ಕೇಳುವುದು ಎರಡನೆಯ ಸಲ. ನಿನಗೆ ಹೊಸದು. ತಂಗಿ ಹೇಳಿದ ಹಾಡು ಸುಳ್ಳು ಅಲ್ಲವೆ ?

ಶಶಿವದನೆ : ಸುಳ್ಳಲ್ಲ: ಸತ್ಯ, ಚಂದ್ರ ಇದ್ದಕಡೆ ಇರುತ್ತಾನೆ. ಅದೋ ನೋಡಲ್ಲಿ. ಹುಣ್ಣಿಮೆ ಚಂದ್ರ ಇದ್ದಕಡೆ ಇದ್ದಾನೆ. ಮುಗಿಲು ಅವನ ಬಳಿ ಅರಸಿ ಬಂದು ಅವನ ಅರಸಿಯಾಗಿ ಬೆಳಗುತ್ತಿದೆ.

ಚಂದ್ರಶೇಖರ : ಆದರೆ ನೋಡು, ಆ ಮುಗಿಲು ಮುಂದು ಮುಂದಕ್ಕೆ ಹೋಗುತ್ತಿದೆ.

ಶಶಿವದನೆ : ಆದರೆ ನನ್ನನ್ನು ಅಂಥ ಮುಗಿಲೆಂದು ತಿಳಿಯಬೇಡ. ನಿನ್ನ ಬೆಳದಿಂಗಳಿನಲ್ಲಿ ಕರಗಿ ಬೆರೆಯುವ ಮುಗಿಲು ನಾನು.

ಚಂದ್ರಶೇಖರ : ಮುಗಿಲು ಮುಂದೆ ಹೋದರೂ ಚಿಂತೆಯಿಲ್ಲ. ಮುಂದೆ ಮುಂದೆ ಹೋಗುವವರ ಒಡನೆಯೆ ಚಂದ್ರ ತಾನೇ ನಗುತ್ತ ಬರುತ್ತಾನೆ ಅಲ್ಲವೆ ಶಶಿ?

ಶಶಿವದನೆ : ನೀನೂ ನಿನ್ನ ತಂಗಿಯೂ ಕವಿತೆಯಲ್ಲಿ ಮಾತಾಡುತ್ತೀರಿ. ನಿಮ್ಮ ಮಾತಿಗೆ ಉತ್ತರ ಕೊಡುವ ಶಕ್ತಿ ನನಗೆ ಇಲ್ಲ.

ತಿರುಕಿ : ಚಂದ್ರ ಹೇಳಿದ್ದು ಸತ್ಯ – ಹೊತ್ತಾಯಿತಲ್ಲವೆ? ಮಂದಿರಕ್ಕೆ ಹೋಗಬೇಡವೆ?

ಚಂದ್ರಶೇಖರ : ಹೌದು, ಹೌದು ಶಶಿ, ಏಳು ಹೊತ್ತಾಯಿತು. ಪ್ರಾರ್ಥನೆ ಹೊತ್ತಾಯಿತು. ತಂಗಿ ಏಳು. (ಚಂದ್ರಶೇಖರ ಶಶಿವದನೆ ಏಳುವರು. ತಿರುಕಿ ಕುಳಿತೇ ಇರುವಳು.) ಏಳು ತಂಗಿ.

ತಿರುಕಿ : ನೀವು ಹೊರಡಿ.

ಶಶಿ : ಒಬ್ಬಳೇ ಕುಳಿತಿರುತ್ತೀಯ?

ತಿರುಕಿ : (ಉಂಗುರದ ಬೆರಳು ತೋರಿಸಿ) ನೀವಿಬ್ಬರೂ ನನ್ನೊಡನೆಯೇ ಇಲ್ಲವೆ? ನನಗೇನು ಹೆದರಿಕೆಯೆ? ನೀವು ಹೊರಡಿ.

ಚಂದ್ರಶೇಖರ : ಹುಣ್ಣಿಮೆಯೆ ತಿಂಗಳು ಅವಳನ್ನು ಸೆರೆಹಿಡಿಸಿದೆ. ಬೇಗ

ತಿರುಕ : ಆಯ್ತು ನಡಿಯಣ್ಣ, ಇವತ್ತು ಪಾಯಸ್ದೂಟ ಅಂತು ಹಾಕ್ಸು. ನಾಳೆ ನೋಡಾಣ.
(ಇಬ್ಬರೂ ತೆರಳುವರು)

– ತೆರೆ ಬೀಳುವುದು –

## ಐದನೆಯ ಅಂಕ : ಕೊನೆಯ ದೃಶ್ಯ

[ಊರ ಹೊರಗೆ : ಒಂದು ಸಣ್ಣ ಗುಡ್ಡದ ಮೇಲೆ – ಇತ್ತ ಸಂಜೆಗೆಂಪು ಇಳಿಯುತ್ತಿದೆ. ಅತ್ತ ಹುಣ್ಣಿಮೆಯ ಬೆಳದಿಂಗಳು ಏರುತ್ತಿದೆ. ಒಂದು ಬಂಡೆಯ ಮೇಲೆ ಚಂದ್ರಶೇಖರ, ಶಶಿವದನೆ ಕುಳಿತಿದ್ದಾರೆ, ಸ್ವಲ್ಪ ಕೆಳಗೆ ತಿರುಕಿ]

ಚಂದ್ರಶೇಖರ : ಶಶಿ, ನಾವಿಬ್ಬರೂ, ತಂಗಿಯ ಸಾಲ ಹೇಗೆ ತೀರಿಸಬೇಕೋ ತಿಳಿಯದು. ತಂಗಿ, ಇನ್ನು ಮೇಲೆ ಶಶಿ ಹೇಳಿದ ಹಾಗೆ ಕೇಳಬೇಕು. ಒಳ್ಳೆಯ ಸೀರೆ ಉಟ್ಟುಕೊಳ್ಳಬೇಕು. ಶಶಿ, ಅವಳ ಭಾರ ನಿನ್ನದು.

ಶಶಿವದನೆ : ನಿನ್ನ ತಂಗಿ ತುಂಬ ಒರಟಿ. ಹೇಳಿದ ಹಾಗೆ ಕೇಳುವುದಿಲ್ಲ. ಇನ್ನು ಮೇಲೆ ಕೇಳುತ್ತಾಳೆ. ಅಲ್ಲವೆ ತಂಗಿ? ಬಾ, ಇಲ್ಲಿ. (ತಿರುಕಿ ಎದ್ದು ಬಳಿಗೆ ಹೋಗಿ ನಿಲ್ಲುವಳು.) (ಶಶಿವದನೆ ತನ್ನ ಬೆರಳಿನ ಉಂಗುರ ತೆಗೆದು) ಇದನ್ನು ಮಾರಬೇಡ ಎಂದೆ, ತಂಗಿ, ನೀನು. ನೀನು ಹೇಳಿದ್ದು ಬಹಳ ಒಳ್ಳೆಯದಾಯಿತು. ನನ್ನ ಗುರುತಾಗಿ ಇದನ್ನು ಇಟ್ಟುಕೋ; ಖಂಡಿತ ಒಲ್ಲೆ ಎನ್ನಕೂಡದು. (ತಿರುಕಿ ಸುಮ್ಮನಿರುವಳು. ಶಶಿವದನೆ ಅವಳ ಬೆರಳಿಗೆ ಉಂಗುರವಿಡುವಳು.)

ಚಂದ್ರಶೇಖರ : ಶಶಿ, ತನ್ನ ಗುರುತಾಗಿ ಉಂಗುರ ಕೊಟ್ಟಳು. ನನ್ನ ಗುರುತಾಗಿ – ಏನು ಕೊಡಲಿ? ಶಶಿ, ನೀನೇ ಹೇಳು.

ತಿರುಕಿ : ನಿನ್ನ ಗುರುತಾಗಿ ಕೊಡುವುದೆ? ನಿನ್ನ ಗುರುತಾಗಿ–ಶಶಿಕೊಟ್ಟ ಮೇಲೆ ನೀನೂ ಕೊಟ್ಟ ಹಾಗಾಯಿತು. ಶಶಿಯ ಬಿಟ್ಟು ನೀನಿಲ್ಲ. ನಿನ್ನ ಬಿಟ್ಟು ಶಶಿಯಿಲ್ಲ. ನಿಮ್ಮಿಬ್ಬರ ಗುರುತಾಗಿಯೂ ಇದನ್ನು ಇಟ್ಟುಕೊಂಡಿರುವೆ.

ಚಂದ್ರಶೇಖರ : ತಂಗಿ, ನಿನ್ನಲ್ಲಿ ನನ್ನದೊಂದು ಭಿಕ್ಷೆ, ಭಿಕ್ಷೆ ಬೇಡುವುದೇ ನನ್ನ

## ಹಿನ್ನೋಟ

(ಮುನ್ನೋಟದ್ದೇ ದೃಶ್ಯ, ಸ್ವಪ್ನ ಸುಂದರಿ ನಾಟ್ಯವಾಡುತ್ತ ಆಡುತ್ತ ತೆರೆಗೆ ಸರಿಯುತ್ತಿರುತ್ತಾಳೆ. ತಿರುಕಿ ಗಾಬರಿಯಿಂದ ಎದ್ದು ಕಣ್ಣುಜ್ಜಿಕೊಂಡು ಅವಳೆಡೆಗೆ ನೋಡುತ್ತ. ಕೈ ನೀಡುತ್ತ, ನಿಧಾನವಾಗಿ ಹಾಡುತ್ತ ತಾನೂ ಹೋಗುತ್ತಿರುತ್ತಾಳೆ.)

ತಿರುಕಿ : ನಡೆಯುತಿರೆ ಮುಂದು ಮುಂದು
ಒಡನೆ ಇರುವನು ಇಂದು
ಆಹ! ಎಂಥ ಸ್ವಪ್ನ ಸುಂದರಿ ಸ್ವಪ್ನ ಈ ಸ್ವಪ್ನ ಸುಂದರೀ...
ತಿರುಕಿಗೂ ಬೀಳುವುದೆ ಇಂಥ ಕನಸು !
ದೊರೆಯಿತ್ತು ನನಗೂ ಒಲವ ದೋಣಿಯಲೊಮ್ಮೆ
ಒಲಿದವರ ಜೊತೆಗೂಡಿ
ಒಲವ ಸವಿಯನು ಸವಿಯುತಲ್ಲಿ
ತೇಲುವ ಭಾಗ್ಯ
ಇನ್ನು ಕುಳಿತಿರಲಿಲ್ಲ ಬಯಕೆ ಬಲಿಯುವುದು
ಬಲಿತು ಬಿರಿಯುವುದು, ಹೌದಲ್ಲ
ಬಲಿಯಲಿ ಬಿರಿಯಲಿ ತಪ್ಪೇನು
ದೊರಕಲೀ ಕನಸಿನ ಬದುಕು ನನಗೂನು
ಚಂದ್ರಶೇಖರ ಓ ಶಶಿಶೇಖರ ಎಲ್ಲರುವೆ ನೀನು
ಓ ಸ್ವಪ್ನ ಸುಂದರೀ ತೋರುವೆಯೇನು?
ನಡೆಯುತಿರೆ ಮುಂದು ಮುಂದು
ಒಡನೆ ಇರುವನು ಇಂದು

(ಎಂದು ಹಾಡುತ್ತಾ ಹಾಗೇ ತೆರೆಗೆ ಸರಿಯುವಳು)

**– ತೆರೆ ಬೀಳುವುದು –**

**ನಾಟಕ ಮುಗಿಯುವುದು**



ಬರುವೆಯಾ ತಂಗಿ? ಬೇಗ ಬಂದು ಬಿಡು. ತುಂಬ ಹೊತ್ತು ನಿಲ್ಲಬೇಡ.

ತಿರುಕಿ : ಇಲ್ಲ ನೀವು ಹೊರಡಿ, ಹಾಡುತ್ತಿರುತ್ತೇನೆ. (ಕೇಳುತ್ತ ಇಬ್ಬರೂ ತೆರಳುವರು) ತಿರುಕಿ ಹಾಡುತ್ತಿರುವಳು. (ಹಾಡು ಮುಗಿದ ಮೇಲೆ) ಮುಂದೆ ಮುಂದೆ ನಡೆಯುತ್ತಿದ್ದರೆ ಚಂದ್ರ ಒಡನೆಯೇ ಬರುವನು, (ಎಂದು ಎದ್ದು ನಿಧಾನವಾಗಿ ಹೆಜ್ಜೆ ಹಾಕುತ್ತ.) ಚಂದ್ರ, ಓ ಚಂದ್ರಶೇಖರ ಹೊರಡುತ್ತೇನೆ. ಇದೋ ಹೊರಡುತ್ತೇನೆ. ಪ್ರೇಮ ದರ್ಶನವಾಯ್ತು. ಇದೋ ಹೊರಡುತ್ತೇನೆ. ಮರೆಯಬೇಡ, ಮರೆಯಬೇಡ, ಶಶೀ, ಹೊರಡುತ್ತೇನೆ. ಮರೆಯಬೇಡ, ಮರೆಯಬೇಡ.

ನಡೆಯುತಿರೆ ಮುಂದು – ಮುಂದು
ಒಡನೆ ಇರುವನು ಇಂದು.

(ಎಂದು ಹಾಡುತ್ತಾ ಕಣ್ಮರೆಯಾಗುವಳು.)

– ತೆರೆ ಬೀಳುವುದು –

# ಕೈಕೋಲು

೧

[ಒಂದು ಕಾಮನ ಹುಣ್ಣಿಮೆಯ ಮಾರನೆಯ ದಿನ ಸಂಜೆ. ಸೋಮುವಿನ ಮನೆಯ ಜಗಲಿಯ ಮೇಲೆ ರಾಮು, ಶಾಮ, ಭೀಮ, ಕಿಟ್ಟು, ಪುಟ್ಟು ಕತೆ ಕೇಳುವುದಕ್ಕಾಗಿ ಕುಳಿತಿದ್ದಾರೆ. ಆಗ–]

**ಶಾಮ**

ಲೋ! ರಾಮೂ, ಎಲ್ಲೋ ನಿಮ್ಮ ಅಣ್ಣ ಸೋಮು ಕಾಣೋದೇ ಇಲ್ಲ? ಇವತ್ತು ಅವನದ್ದು ಅಲ್ಲವೇನೋ ಕತೆ ಹೇಳುವ ಸರದಿ?

**ರಾಮು**

ಕತೇ ಸರದಿ ಇರಲಿ. ಕಡಲೆಕಾಯಿ ಕೊಡಿಸುವ ಸರದಿ ಯಾರದ್ದು, ಇವತ್ತು?

**ಕಿಟ್ಟು**

ನಿನ್ನದೇ ಅಲ್ಲವೇನೋ?

**ರಮಾ**

(ತುಸು ಹಿಂದೆ ನಿಂತಿದ್ದವಳು ಮುಂದಕ್ಕೆ ಬಂದು) ರಾಮೂ, ಹೇಳ್ತೀನಿ ಅಮ್ಮನಿಗೆ, ಎಲ್ಲರಿಗೂ ಕಡಲೆಕಾಯಿ ತರಿಸಿ ಕೊಟ್ಟು, ತಾನೂ ತಿಂದು, ನೀರು ಕುಡಿದು, ಪಿತ್ತ ಬರಿಸಿಕೊಳ್ಳುತಾನೆ ಅಂತ.

**ಪುಟ್ಟು**

ಏನಪ್ಪಾ ರಾಮೂ, ನಿನ್ನ ತಂಗಿ ರಮಾ ತುಂಬ ತಕರಾರು ಮಾಡುತ ಇದಾಳೆ? ಬೇಕಾದರೆ ನಮ್ಮ ಮನೇ ಮುಂದಕ್ಕೇ ಹೋಗೋಣ. ಬನ್ನಿರೋ.

**ರಾಮು**

(ಜಬರುದಸ್ತಿನಿಂದ) ಓ ಹೋ ಹೋ ಹೋ, ಈ ಹೆಂಗಸರ ತಂಟೆ ತಕರಾರಿಗೆಲ್ಲ ನಾವು ಭೂಪತಿಗಳು ಹೆದರಿಬಿಟ್ಟರೆ ಆಗಿಹೋಯ್ತು! ಕತೆ ಮುಗಿದ ಹಾಗೇನೇ! ಅಮ್ಮನಿಗಲ್ಲದೆ ಹೋದರೆ ಅಪ್ಪನಿಗೆ ಬೇಕಾದರೂ ಹೇಳಲಿ. ಅಂಥ ಮಡಬಾರದ್ದು ಏನು ನಾವು ಮಾಡುತಾ ಇರೋದು?

## ಪಾತ್ರಗಳು

೧. ರಾಮು (ಸೋಮನ ತಮ್ಮ)
೨. ರಮಾ (ಸೋಮು, ರಾಮು–ಇವರ ತಂಗಿ)
೩. ಭೀಮ
೪. ಶಾಮು
೫. ಕಿಟ್ಟು } ಗೆಳೆಯರು
೬. ಪುಟ್ಟು
೭. ಸೋಮು
೮. ಗುಂಡ (ಇನ್ನೊಬ್ಬ ಗೆಳೆಯ; ದುಷ್ಟ ಸ್ವಭಾವದವನು)
೯. ಭಿಕ್ಷುಕಿ
೧೦. ಅಜ್ಜ (ಸೋಮು, ರಾಮು, ರಮಾ–ಇವರ ಅಜ್ಜ)
'ಕಾಮನ ಕಟ್ಟಿಗೆ'ಯ ಗುಂಪು (ನಾಲ್ಕೈದು ಹುಡುಗರು)
[ಎಲ್ಲರೂ ೧೦–೧೨ ವರ್ಷಗಳ ಮಿತಿಯೊಳಗಿನ ಮಕ್ಕಳು]

### ಸೂಚನೆ

ಅಜ್ಜ ಮತ್ತು ಭಿಕ್ಷುಕಿಯ ಪಾತ್ರಗಳನ್ನು ಮಕ್ಕಳೇ ವಹಿಸಬಹುದು. ದೊಡ್ಡವರು, ಅಥವಾ ಹೆಚ್ಚು ವಯಸ್ಸಾದವರು ವಹಿಸಿದರೂ ಬಾಧಕವಿಲ್ಲ. ಅಚ್ಚಾಗಿರುವ ಹಾಗೆಯೇ ಮಾತುಗಳನ್ನು ಹೇಳಬೇಕಾಗಿಲ್ಲ. ಅವುಗಳನ್ನು ಮಾತಾಡುವ ಧಾಟಿಗೆ ತಿರುಗಿಸಿಕೊಂಡು ಉಚ್ಚರಿಸುವುದು ಒಳ್ಳೆಯದು.

ಸೇರಿಕೊಳ್ಳಬಹುದೋ?

**ಶಾಮ**

ಅಗತ್ಯವಾಗಿ ಆಗಬಹುದು. ಆದರೆ, ಒಂದೇ ಷರತ್ತು : ಕತೆ ಕೇಳಿದೋರು ಕತೆ ಹೇಳಲೂಬೇಕು.

**ಪುಟ್ಟು**

ಹ್ಞ! ಅದೀಗ ಸರಿ ! ನಮ್ಮ ಕತೆ ಕೂಟಕ್ಕೆ ನೀನೂ ಸೇರಿ ಕೊಂಡುಬಿಡು, ರಮಾ ಏಳು ದಿನಕ್ಕೆ ಏಳು ಜನ ಆದ ಹಾಗಾಗುತ್ತೆ.

**ರಮಾ**

(ಮುದ್ದು ಮುದ್ದಾಗಿ) ನನಗೆ ಕತೆ ಹೇಳೋದಕ್ಕೆ ಬರೋದಿಲ್ಲಪ್ಪ.

**ಪುಟ್ಟು**

ಹೋಗಲಿ, ಕೇಳುವಿಯಂತೆ. ನಿನ್ನ ಬದಲು ನಾನೇ ಹೇಳಿ ಬಿಡುತೀನಿ. ಸ್ವಲ್ಪ ಬೆಲ್ಲ ತೆಗೆದುಕೊಂಡು–ಅಲ್ಲ ಅಲ್ಲ, ತಪ್ಪಾಯಿತು, ನಿನ್ನ ತಾಯಿಯನ್ನ ಕೇಳಿ ಇಸುಕೊಂಡು ಬಾ ಮತ್ತೆ.

**ಭೀಮ**

(ಹಾಸ್ಯದ ಧ್ವನಿಯಿಂದ) ಬಾಮ್ಮ ಬೆಲ್ಲ ತೆಗೆದುಕೊಂಡು, ನಿನ್ನ ಗಂಡನ ಬಾಯಿ ಸ್ವೀ (ಸಿಹಿ) ಮಾಡು.

**ಪುಟ್ಟು**

ಬಿಟ್ಟ ಭೀಮ ತನ್ನ ದೊಡ್ಡ ಬಾಯನ್ನ ಕಡೆಗೆ, ಎಲ್ಲರೂ ತಿಂದು ಮಿಕ್ಕ ಸಿಪ್ಪೆ ತಿನ್ನೋದಕ್ಕೆ! (ರಮಾ ಮುಖ ಗಂಟು ಹಾಕಿಕೊಳ್ಳುವಳು.)

**ಶಾಮ**

ರೇಗಬೇಡ ರಮಾ: ಅಕೋ ನೋಡು, ಸೋಮು ಕಿಟ್ಟು ಬರುತಾ ಇದಾರೆ; ನೀನು ತಂದರೆ ತಾ, ಬಿಟ್ಟರೆ ಬಿಡು. ಕೂತುಕೊಂಡು ಕತೆ ಕೇಳು.

**ಪುಟ್ಟು**

ಕಾಮಣ್ಣನ್ನ ತಂಪು ಮಾಡುವುದಕ್ಕಂತೂ ಮಳೆ ಬರಲಿಲ್ಲ. ಸೋಮು ಕತೆ ಹೇಳಿದರೆ ಇವತ್ತು ಖಂಡಿತ ಮಳೆ ಬರುತ್ತೆ.

**ಶಾಮ**

ಸೋಮು ಅಲ್ಲದೆ ಹೋದರೆ ಅವನ ತಮ್ಮ ರಾಮು ಹೇಳಿದರೆ ಆಯ್ತು.

**ಭೀಮ**

ಇಲ್ಲದೆ ಹೋದರೆ ಅವರ ತಂಗಿ ರಮಾ! ಬೆಲ್ಲದ ಜೊತೆಗೆ ಒಂದು

**ರಮಾ**

(ಅಣಕಿಸುವ ದನಿಯಲ್ಲಿ) ಕತೆ ಹೇಳಿಕೊಂಡು ಕಾಲ ಕಳೆಯೋದು ಒಳ್ಳೆಯದು ಅಲ್ಲವಾ? ಆಚೇಮನೇಲಿ ಮುದುಕರೆಲ್ಲ ಸೇರಿಕೊಂಡು ಇಸ್ಪೀಟು ಕಚೇರಿ ಮಾಡ್ತಾರೆ. ಇಲ್ಲಿ ನೀವು ಹುಡುಗರೆಲ್ಲ ಸೇರಿಕೊಂಡು ಕತೆ ಕಾನ್‌ಫರೆನ್ಸು, ಕಡಲೆಕಾಯಿ ಪರಿಸೆ, ಕಾಡುಹರಟೆ ಕೂಟ ನಡಸುತಾ ಇರಿ.ಬಲುಬಲು ಒಳ್ಳೆಯ ಕೆಲಸ!

**ರಾಮು**

ನೀವು ಹುಡುಗಿಯರೆಲ್ಲ ಸೇರಿಕೊಂಡು ಸಂಗೀತ ಕಚೇರಿನೋ ಫ್ಯಾಷನ್ನು ಪ್ರದರ್ಶನವನ್ನೋ ಹಿಂದೀ ತರಗತೀನೋ ನಡಸಿ, ಬೇಡ ಅಂದವರು ಯಾರು.

**ಶಾಮ**

ಒಳ್ಳೆಒಳ್ಳೆಯ ನೀತಿಯ ಕತೆಗಳನ್ನೋ, ಪುರಾಣದ ಕತೆಗಳನ್ನೋ, ಹೇಳುವುದೂ ಕೇಳುವುದೂ ಕೆಟ್ಟದ್ದಲ್ಲ, ರಮಾ. ಸತ್ಕಥಾ ಕಾಲಕ್ಷೇಪ ಅನ್ನುವ ಮಾತನ್ನ ಕೇಳಿಲ್ಲವೆ ನೀನು? ನಾನು ಈಸೋಪನ ಕತೆಗಳನ್ನ, ರಾಮು ಪಂಚತಂತ್ರದ ಕತೆಗಳನ್ನ, ಭೀಮ ಭಾರತದ ಕತೆಯನ್ನ–ಹೇಳುತೇವೆ. ಕತೆ ಹೇಳದೆ ತಪ್ಪಿಸಿಕೊಳ್ಳುತಾ ಇರುವವನು ಸೋಮು ಒಬ್ಬನೇ. ನೀನೂ ಬೇಕಾದರೆ ನಮ್ಮ ಕತೆ ಕೂಟಕ್ಕೆ ಸೇರಿಕೋ, ಸೇರಿಸಿಕೊಳ್ಳುತೇವೆ.

**ರಮಾ**

ಕತೆ ಇರಲಪ್ಪಾ. ಕಡಲೆಕಾಯಿ ತಿನ್ನುವುದು ಒಳ್ಳೆಯದೋ?

**ಪುಟ್ಟು**

ನಿತ್ಯ ತಿನ್ನುತೇವೆಯೆ. ಇವತ್ತು ಸೋಮು, ರಾಮು, ಇವರ ಸೇವಾರ್ಥ. ಅವರಿಗೆ ಕಡಲೆಕಾಯಿ ಅಂದರೆ ತುಂಬ ಪ್ರೀತಿ.

**ರಾಮು**

ಮಿತವಾಗಿ ತಿಂದರೆ, ಕಡಲೆಕಾಯಿ ಕೆಟ್ಟದ್ದಲ್ಲ, ರಮಾ. ಅದು ಮಹಾತ್ಮ ಗಾಂಧಿಯವರ ಇಷ್ಟದ ತಿಂಡಿ. ಕರಿದು ಹುರಿದು ತಿಂದರೆ ಕೆಟ್ಟದ್ದು. ಹಸಿಯದು ಪುಷ್ಟಿಕರ, ತುಂಬ ಪ್ರೋಟೀನು ಇದೆ ಅದರಲ್ಲಿ. ಅಲ್ಲದೆ, ಅದರ ಜೊತೆ ಬೆಲ್ಲ ಸೇರಿಸಿ ತಿಂದರೆ, ಪಿತ್ತ ಉಂಟುಮಾಡುವ ಅದರ ದೋಷವನ್ನ ಹೊಡೆಯುತ್ತೆ ಅಂತ ಅಮ್ಮ ಹೇಳೋದಿಲ್ಲವೇನೇ?

**ರಮಾ**

ಬೆಲ್ಲ ತಂದುಕೊಟ್ಟರೆ ಕತೆ ಕೇಳೋದಕ್ಕೆ ಕತೆ ಕೂಟಕ್ಕೆ

## ೨

[ಈ ಮಾತುಕತೆ ಮುಗಿಯುವ ಹೊತ್ತಿಗೆ, ಟಿಕ್ ಟೊಕ್ ಎಂದು ಸದ್ದಾಗುವ ರೀತಿಯಲ್ಲಿ ಕೋಲನು ನೆಲಕ್ಕೆ ಬಡಿಯುತ್ತಾ ಸೋಮು ಬರುತ್ತಿರುವನು.]

**ಶಾಮ**

(ತುಸು ಎತ್ತರದ ದನಿಯಲ್ಲಿ) ಸೋಮೂ, ಬೇಗ ಬಾರಪ್ಪ, ರಮಾನೂ ನಮ್ಮ ಕತೆ ಕೂಟಕ್ಕೆ ಮೆಂಬರಾಗಿ ಬಿಟ್ಟಿದಾಳೆ......

[ಸೋಮು ರಂಗಕ್ಕೆ ಬಂದು ಅಂಚಿನಲ್ಲಿ ನಿಲ್ಲುವನು]

..........ರಾಮು ಕಡಲೆಕಾಯಿ ತಂದಿದಾನೆ. ಇವತ್ತು ನೀನು ಕತೆ ಹೇಳುತ್ತೀ ಅಂತ, ರಮಾ ಬೆಲ್ಲದ ಸವಿ ಬೆರಸಿದ್ದಾಳೆ ನಮ್ಮ ಕೂಟಕ್ಕೆ.......ಅಗೋ ಬಂದೇಬಿಟ್ಟಳು.....

**ಪುಟ್ಟು**

ಬೆಲ್ಲದ ಹುಡುಗಿ!.......ರಮಾ, ಬೆಲ್ಲಾನ ನನ್ನ ಕೈಗೆ ಕೊಡು, ನೀರನ್ನ ಭೀಮನ ಬಾಯಿಗೆ ಸುರಿ !

**ರಮಾ**

(ನೀರಿನ ಚೆಂಬನ್ನು ಕೆಳಗಿಟ್ಟು, ತಗ್ಗಿದ ಆಶ್ಚರ್ಯದ ದನಿಯಲ್ಲಿ) ಸೋಮೂ, ಅಜ್ಜನದಲ್ಲವೇನೋ ಈ ಕೋಲು?

**ಸೋಮು**

(ಕೋಲನ್ನು ಕೆಳಗಿಟ್ಟು ಕುಳಿತು) ಅಜ್ಜನದಲ್ಲ, ಅದರ ಹಾಗೇನೇ ಇದೆ, ಅಷ್ಟೆ.

**ರಮಾ**

ಮತ್ತೆ, ಅಜ್ಜ– 'ನನ್ನ ಕೋಲನ್ನ ಯಾರೋ ತಗೊಂಡು ಹೋಗಿ ಬಿಟ್ಟಿದಾರೆ.' ಅಂತ ಹುಡುಕುತಾ ಇದ್ದರಲ್ಲಾ ? 'ಸೋಮು ಕಾಮನ ಕಟ್ಟಿಗೆ ಲೀಡರ್ರು (Leader). ಅವನೇ. ಎಲ್ಲೋ ತಗೊಂಡು ಹೋಗಿದಾನೆ' ಅಂತ ಅಮ್ಮ ಬೈತಾ ಇದ್ದಳು. ಅಂತೂ ಅಜ್ಜನ ಕೋಲು ಮಂಗಮಾಯ. ನೀನು ತಗೊಂಡು ಹೋಗಿಲ್ಲ ಅನ್ನು, ಹಾಗಾದರೆ ?

**ಸೋಮು**

ನಾನೇ ತಗೊಂಡು ಹೋದೆ.......ಅಂದರೆ........

**ರಮಾ**

ಕಾಮನ ಕಟ್ಟಿಗೆಗೆ ಕೊಟ್ಟುಬಿಟ್ಟೆಯೋ?

ಚೆಂಬು ಕುಡಿಯುವ ನೀರನ್ನೂ ತೆಗೆದುಕೊಂಡು ಬಾರಮ್ಮಾ, ಪುಣ್ಯ ಬರುತ್ತೆ.

**ಶಾಮ**

(ಕತ್ತೆತ್ತಿ ರಂಗದ ಬಲಗಡೆಗೆ ತಿರುಗಿ ನೋಡುತ್ತಾ) ಇದೇನು ಕೈಲಿ ಸ್ಕೌಟು ದೊಣ್ಣೆ ಹಿಡಿದುಕೊಂಡು ಬರುತಾ ಇದಾನೆ ಸೋಮು? ನಾನು ಕಾಣದ ಹಾಗೆ ಸ್ಕೌಟಿಗೆ ಯಾವಾಗ ಸೇರಿದ ಅವನು?

**ರಾಮು**

ಎಲಾ, ನಮ್ಮ ಅಜ್ಜನ ಕೋಲು ಇದ್ದಹಾಗೆ ಇದೆಯಲ್ಲಾ ; ಎಲ್ಲೋ ಹೋಯ್ತು ಸಿಕ್ಕಲೇ ಇಲ್ಲ ಅಂತ ಪರದಾಡುತಾ ಇದ್ದರು, ಪಾಪ! ಕೋಲು ಇಲ್ಲದೆ ಹೊರಕ್ಕೆ ಕೂಡ ಹೊರಟಿಲ್ಲ ಅವರು.

**ಶಾಮ**

ಸೋಮು ಕೈಲಿ ದೊಣ್ಣೆ ಚೆನ್ನಾಗಿ ಒಪ್ಪುತ್ತೆ, ಭೀಮನ ಕೈಲಿ ಗದೆ ಇದ್ದ ಹಾಗೆ. (ಭೀಮನ ಕಡೆಗೆ ಕೈ ಮಾಡಿ) ಇವನ ಬದಲು ಅವನಿಗೆ ಭೀಮ ಅಂಥ ಹೆಸರಿದ್ದರೆ ಚೆನ್ನಾಗಿರುತಿತ್ತು.

**ರಮಾ**

(ನಗೆಯನ್ನು ನಟಿಸುತ್ತಾ) ಭೀಮನ ಹೆಸರನ್ನ ಬದಲಾಯಿಸಿ ಬಿಟ್ಟರೆ ಆಯ್ತು!

**ರಾಮು**

ಏನಂತಾ ?

**ರಮಾ**

ಗಾಳಿ ಭೀಮ ಅಂತ !

**ಶಾಮ**

ಅಂದರೆ ?

**ಪುಟ್ಟು**

ಭೀಮ ವಾಯುಪುತ್ರ ತಾನೆ?

**ರಮಾ**

ಅಲ್ಲ, ಉಫ್ ಅಂದ್ರೆ ಊರಿನಾಚೆಗೆ ಹಾರಿಹೋಗೋ ಭೀಮ ರಾಯರು ಅಂತ ! (ನಗುತ ಒಳಕ್ಕೆ ಓಡುವಳು).

**ಭೀಮ**

ಪರವಾ ಇಲ್ಲ, ನೀರು ತರುವುದನ್ನ ಮರೆಯಬೇಡ ರಮಾ !

**ಸೋಮು**

ಆಗಲಿ, ಕೇಳಿ :

ಮೊನ್ನೆ, ನೀವು ಯಾರೂ ಈ ಕತೆಕೂಟ ಬಿಟ್ಟು ಕಾಮನ ಕಟ್ಟಿಗೆಗೆ ಬರಲಿಲ್ಲವಲ್ಲ. ಕಿಟ್ಟುನೂ ಬರುವುದಿಲ್ಲ ಅಂದು ಬಿಟ್ಟ. ನಾನೇ ಬಲವಂತಮಾಡಿ ಅವನನ್ನ ಎಳೆದುಕೊಂಡು ಹೋದೆ. ಸರಿ, ಯಥಾಪ್ರಕಾರ–

[ತೆರೆಯ ಹಿಂದೆ ಹುಡುಗರ ಕೂಗಾಟ ; ಗುಂಪುಹಾಡಿಕೆ :

ಕಾಮನ ಕಟ್ಟಿಗೆ । ಭೀಮನ ಬೆರಣಿ ಅಡಕೆ ಗೋಟು

ಎಕ್ಕಡದೇಟು । ಕಾಮನ ಮಕ್ಕಳು । ಕಳ್ಳ ಸುಳ್ಳ ಮಕ್ಕಳು

ಏನೇನು ಕದ್ದರು । ಸೌದೆ ಬೆರಣಿ ಕದ್ದರು ಯಾರನ್ನ

ಸುಟ್ಟರು । ಕಳ್ಳ ಕಾಮಣ್ಣನ.....]

(ಹಾಡು ನಿಂತ ಮೇಲೆ) ಅಂತ ಕೂಗಿಕೊಂಡು ಬೀದಿ ಬೀದಿ ಅಲೆಯುತ್ತಿದ್ದೆವು. ಕಿಟ್ಟುವಿಗೆ ಗೊತ್ತು, ನಮ್ಮ ಮಾಮೂಲು ಕಾರ್ಯಕ್ರಮ. ನಾನು ಪ್ರತಿವರ್ಷವೂ ಎಲ್ಲರಿಗೂ 'ಸ್ಟ್ರಿಕ್ಟ್' ಆಗಿ ಹೇಳಿಬಿಟ್ಟಿರುತೀನಿ : 'ಎಷ್ಟು ಪೈಸ ಕೊಟ್ಟರೆ ಅಷ್ಟು ಇಸುಕೋಬೇಕು, ಇಷ್ಟಪಡದೆ ಇರುವವರ ಮೇಲೆ ಗುಲಾಲ್ ಹಾಕಬಾರದು, ಮನೆಯವರು ನಿಲ್ಲಿಸಿ ಎಂದಾಗ ಬಾಯಿ ಬಡಿದುಕೊಳ್ಳುವುದನ್ನ ನಿಲ್ಲಿಸಿ ಬಿಡಬೇಕು, ಕಳ್ಳಸುಳ್ಳ ಮಕ್ಕಳು ಎಂದು ಹೇಳಿಕೊಂಡರೂ ಬೇಲಿಯ ಬಂಬು ಗಳುಗಳನ್ನ ಅಂಗಳದಲ್ಲಿ ಒಣಗಹಾಕಿರುವ ಕಟ್ಟಿಗೆಯನ್ನ ಬಿದ್ದಿರುವ ಮರಮುಟ್ಟುಗಳನ್ನ ಮುಟ್ಟಕೂಡದು" ಅಂತ. ನನ್ನ ಮಾತನ್ನು ಎಲ್ಲರೂ ಕೇಳುತಾ ಇದ್ದರು. ಹೀಗಾದರೂ, ಆನೆ ಎತ್ತರದ ಕಟ್ಟಿಗೆ ಬೆರಣಿ, ಹಳೇ ಮೊರ ಮಕ್ಕರಿ, ಬಂಬು ಗಳುಗಳ ತುಂಡು ಜಮಾವಣೆ ಆಗುತಾ ಇತ್ತು. ೨೦–೩೦ ರೂಪಾಯಿ ಕಾಣಿಕೆ ವಸೂಲಾಗುತಾ ಇತ್ತು.

ಈ ವರ್ಷ......ಒಬ್ಬ ಹೊಸ ಲೀಡರ್ ಹುಟ್ಕೊಂಡ. ಅವನ ಹೆಸರು.......ಏನು ಕಿಟ್ಟು?

**ಕಿಟ್ಟು**

ಗುಂಡ–ಗುಂಡೂರಾಯ.

**ಪುಟ್ಟು**

'ಗ'ಕ್ಕೊಂಬೋ ಕೊಂಬಿನ ದೀರ್ಘವೋ?

**ಭೀಮ**

ಅಂದ್ರೆ ?

**ಸೋಮು**

ಆಗಲೇ ಹೇಳಿದೆನಲ್ಲ, ಈ ಕೋಲು ಅಜ್ಜನದಲ್ಲ ಅಂತ. ಈ ಕೋಲಿನದೇ ಒಂದು ಕತೆ. ಆಮೇಲೆ ಹೇಳುತ್ತೀನಿ, ನಿಧಾನವಾಗಿ.

**ಶಾಮ**

ನೋಡು, ಹೇಗಿದ್ದರೂ ಇವತ್ತು ನಿನ್ನ ಸರದಿ. ಆ ಕೋಲಿನ ಕತೆಯನ್ನೆ ಹೇಳಿಬಿಡು. ಇಷ್ಟು ದಿನಕ್ಕೆ ನಿನ್ನ ಬಾಯಿಂದಲೂ ಒಂದು ಕತೆ ಕೇಳಿದ ಹಾಗೆ ಆಗುತ್ತೆ.

**ಸೋಮು**

ಅದು ನೀವು ಹೇಳೋ ಅಂತ ಕಟ್ಟುಕತೆ ಅಲ್ಲ, ಶಾಮ. ಕಾಮನಕಟ್ಟಿಗೆ ಸಂಪಾದನೆ ಮಾಡುವ ಸಮಯದಲ್ಲಿ ನಡೆದ ಒಂದು ಸಣ್ಣ ಸಂಗತಿ, ಅಷ್ಟೆ. ಅದೇನು ಮಹಾ!

**ಕಿಟ್ಟು**

ತನ್ನ ವಿಚಾರ ತಾನು ಹೇಳಿಕೊಳ್ಳೋದಕ್ಕೆ ಸಂಕೋಚ ಪಡುತ್ತಾನೆ. ನಾನು ಹೇಳುತೀನಿ, ಕೇಳಿ, ಬೇಕಾದರೆ.

**ಎಲ್ಲರೂ ಒಟ್ಟಿಗೆ**

ಬೇಡ, ಬೇಡ. ಅವನ ಸರದಿ, ಅವನೇ ಹೇಳಬೇಕು.

**ಸೋಮು**

ಹಾಗೇ ಆಗಲಿ, ಕೇಳಿ, ಹೇಳ್ತೀನಿ.

**ಶಾಮ**

ಎಲ್ಲಿ, ರಾಮು, ಕಡಲೆಕಾಯಿ ಸುರಿ. ಎಲ್ಲರೂ 'ರೌಂಡಾಗಿ' (round) ಕೂತುಕೊಳ್ಳಿ. (ಎಲ್ಲರೂ ರಂಗದಲ್ಲಿ ಪ್ರೇಕ್ಷಕರಿಗೆ ಎದುರಾಗಿ ಅರ್ಧಚಂದ್ರಾಕಾರದಲ್ಲಿ ಕುಳಿತುಕೊಳ್ಳುವರು. ಸೋಮು ಒಂದು ಕೊನೆಯಲ್ಲಿ ಕುಳಿತುಕೊಳ್ಳುವನು)– ಇನ್ನು ಶುರು ಮಾಡು, ಸೋಮು.

**ಸೋಮು**

(ಕಡಲೆಕಾಯನ್ನು ಸುಲಿಯತೊಡಗುವನು)

**ಭೀಮ**

ತಿನ್ನೋದಲ್ಲ ಕಣೋ, ಕತೆಯನ್ನ.

**ಎಲ್ಲರೂ**

(ಗೊಳ್ಳನೆ ನಗುವರು)

**ಶಾಮ**

ಇನ್ನೇನಾಯ್ತು?

**ಸೋಮು**

ಒಬ್ಬಳು ಮುದುಕಿ, ಪಾಪ, ಕೋಲೂರಿಕೊಂಡು, ಭಿಕ್ಷ ಬೇಡಿಕೊಂಡು ಹೋಗುತಾ ಇದ್ದಳು....

[ತೆರೆ ಬೀಳುವುದು; ತೆರೆಯ ಮುಂದೆ ಮುಂದಿನ ದೃಶ್ಯ]

೩

**ಭಿಕ್ಷುಕಿ**

ಅಪ್ಪಾ, ಕಣ್ಣಿಲ್ಲ, ಒಂದು ಐದು ಪೈಸಾ ಕೊಡಿರಪ್ಪಾ ಯಾರಾದರೂ.

**ಗುಂಡ**

(ಕಾಮನ ಕಟ್ಟಿಗೆ ಗುಂಪಿನೊಂದಿಗೆ ಬರುತ್ತಿರುವನು) ಲ್ರೋ, ಬನ್ನಿರೋ, ನಮ್ಮ ಮುದುಕಮ್ಮ ಪೈಸ ಕೊಡುತಾಳೆ. ಕಿರಿಚಿಕೊಳ್ಳಿರೊ, ಒಂದು ಸಲ,

[ಗುಂಪಿನ ಹುಡುಗರು 'ಕಾಮನ ಕಟ್ಟಿಗೆ ಹಾಡಿನ ಎರಡು ಸಾಲುಗಳನ್ನು ಹೇಳುವರು]

**ಗುಂಡ**

ಏ ಮುದುಕವ್ವಾ ! ಪೈಸ ಬೇಕೋ, ಪೈಸ ಕೊಡುತೀಯೊ?

**ಭಿಕ್ಷುಕಿ**

ನನ್ನ ಹತ್ತಿರ ಎಲ್ಲಿ ಬಂತಪ್ಪ ಪೈಸ, ಕೊಡುವುದಕ್ಕೆ? ನನಗೇನು ಮನೆಯ ಬಾಗಿಲಾ? ನೀವೇ ಏನಾರಾ ಕೊಟ್ಟರೆ ಉಂಟು, ಇಲ್ದಿದ್ರೆ ಇಲ್ಲ. ನಿಮಗೂ ಪುಣ್ಯ ಬರುತ್ತೆ.

**ಗುಂಡ**

ಪೈಸ ಬೇಕೋ? ಹಾಗಾದರೆ ನಮ್ಮ ಕಾಮಣ್ಣಂಗೆ ನಿನ್ನ ಕೈಲಿರೋ ಕಟ್ಟಿಗೆ ಕೊಡು.

**ಭಿಕ್ಷುಕಿ**

ಅಣ್ಣಾ, ನಿನ್ನ ಪೈಸಾನೂ ಬೇಡ, ನನ್ನ ಕಟ್ಟಿಗೆಯನ್ನೂ ಕೊಡೋದಿಲ್ಲ. ನನ್ನ ಕೈಲಿರೋ ಕೋಲನ್ನ ಕೊಟ್ಟರೆ ನನ್ನ ಪ್ರಾಣಾನೇ ಕೊಟ್ಟ ಹಂಗೆ.

**ಗುಂಡ**

ನಿನ್ನ ಪ್ರಾಣಾನ ನೀನೇ ಇಟ್ಟುಕೋ. ಕೋಲು ಮಾತ್ರ ಕೊಟ್ಟು ಬಿಡು.

**ರಮಾ**

ಗೊತ್ತಾಗಲಿಲ್ಲವೇ? 'ಗೂಂಡ' ಅಂತ ಕಣೋ !

**ಭೀಮ**

ಓೇ

**ಸೋಮು**

ಗೂಂಡಾನೇ! ಈ ವರ್ಷ, ಈ ಗುಂಡ ಸ್ವಲ್ಪ ಭಂಡಾಟಕ್ಕೆ ಶುರು ಮಾಡಿದ. ಮನೆಗಳ ಬಾಗಿಲಿನಲ್ಲಿ ನಾನು ಮುಂದೆ ನಿಂತಿದ್ದರೆ, ಅವನು ನನ್ನನ್ನ ಹಿಂದಕ್ಕೆ ತಳ್ಳಿ ತಾನೇ ಮುಂದಾಗುತಾ ಇದ್ದ, ತಾನೇ ಲೀಡರ್ರು ಅಂತ ತೋರಿಸಿಕೊಳ್ಳೋದಕ್ಕೆ, ಆಕಾಶ ಎಲ್ಲಾ ಮೊಳಗೋ ಹಾಗೆ ಅರಚಿಕೊಳ್ಳುತಾ ಇದ್ದ........

**ಕಿಟ್ಟು**

.....ಅಂದ್ರೆ, ಒಂದು ಸಲ ಮಾತ್ರ, ಅವನು ಅರಚಿಕೊಳ್ಳೋವಾಗ, ಪಕ್ಕದಲ್ಲೇ.......

[ತೆರೆಯ ಹಿಂದೆ: 'ಕಾಮನ ಕಟ್ಟಿಗೆ' ಕೂಗಿನ ಜೊತೆಗೆ ಕತ್ತೆಯ ಕಿರಿಚಾಟ]

.......ಹೀಗೆ, ಕತ್ತೆಯೂ ಕಿರಿಚಿಕೊಂಡಿತು. ಅದನ್ನ ಮೀರಿಸುವುದಕ್ಕೆ ಆಗಲಿಲ್ಲ ಅವನಿಗೆ. ಆಗ ಏನು ಮಾಡಿದ ಗೊತ್ತೆ?

**ರಮಾ**

ಏನು ಮಾಡಿದ ?

**ಕಿಟ್ಟು**

ಕತ್ತೆಯನ್ನ ಎಳೆದುಕೊಂಡು ಬಂದು, ಅದರ ಬಾಲಕ್ಕೆ ತಗಡಿನ ಮೊರಕಟ್ಟಿ, ಅದನ್ನ ಹೊಡೆದು ಓಡಿಸಿದ. ಅದು ಓಡುವಾಗ.........

[ತೆರೆಯ ಹಿಂದೆ : ಓಡುವ ಕತ್ತೆಯ ಬಾಲಕ್ಕೆ ಕಟ್ಟಿದ
ತಗಡಿನ ಮೊರ ಅದರ ಕಾಲಿಗೆ ಬಡಿದ ಲಟಪಟ ಸದ್ದು;
ಜೊತೆಗೆ, ಹುಡುಗರ ಕೋಲಾಹಲದ ಸದ್ದು]

...........ಲಟಪಟ ಲಟಪಟ ಅಂತ ಸದ್ದಾಗುತಾ ಇತ್ತು.

**ಎಲ್ಲರೂ**

(ನಗುವರು)

**ಸೋಮು**

ನೋಡಿದಿರಾ, ಇದು ಗುಂಡನ ಗಲಾಟೆ. ಇಷ್ಟೇ ಆಗಿದ್ದರೆ ಪರವಾಗಿರಲಿಲ್ಲ, ಏನೋ ತಮಾಷೆ ಅಂದುಕೊಳ್ಳಬಹುದಾಗಿತ್ತು.......

**ಗುಂಡ**

ಹೋಗೋ, ಕೊಡೋದಿಲ್ಲ.

**ಸೋಮು**

ಆ ತಿರುಪೆ ಬೇಡುವ ಕೈಲಾಗದ ಮುದುಕಿಯ ಕೈಲಿದ್ದ ಕೋಲನ್ನ ಕಿತ್ತುಕೊಂಡು ಓಡಿ ಬಂದೆಯಲ್ಲಾ, ನಾಚಿಕೆ ಆಗೋದಿಲ್ಲವೆ ನಿನಗೆ?

**ಗುಂಡ**

'ಕಾಮನ ಕಟ್ಟಿಗೆ' ದಿವಸ ದಯಾ ದಾಕ್ಷಿಣ್ಯ ನಾಚಿಕೆ ಹೇಸಿಕೆ ಎಲ್ಲಾ ನೂರು ಮೈಲಿ ಆಚೆಗೆ ಓಡಿಹೋಗಿರುತ್ತವೆ.

**ಸೋಮು**

ಈಗೇನು, ಕೋಲನ್ನ ಕೊಡುತೀಯೋ ಇಲ್ಲವೋ?

**ಗುಂಡ**

ಕೊಡುವುದಿಲ್ಲ, ಬೇಕಾದ್ದು ಮಾಡಿಕೊ.

**ಸೋಮು**

ಹಾಗೋ, ಅದೂ ಒಂದು ಕೈ ನೋಡೇ ಬಿಡೋಣ.

**ಕಿಟ್ಟು**

ಸೋಮೂ, ಇಷ್ಟಕ್ಕೆಲ್ಲಾ ಜಗಳ ಯಾಕಪ್ಪಾ? ಅವನೇ ಲೀಡರ್ ಆಗಿರಲಿ. ನಮ್ಮ ಪಾಡಿಗೆ ನಾವು ಹೊರಟು ಹೋಗೋಣ, ಬಾ. ಈ ಕದನದ ಕೂಟಕ್ಕಿಂತ ನಮ್ಮ ಕತೆಕೂಟವೇ ಮೇಲು.

**ಗುಂಡ**

ಅದೀಗ ಸರಿ, ಈ ಗುಂಪಿಗೆ **ನಾನು** ಲೀಡರ್, ಇನ್ನು ಮೇಲೆ, ತಿಳಿಯಿತೋ? ನಿಮಗೆ ಯಾರು ಬೇಕು, ಹೇಳಿ. (ಸೋಮುವಿನ ಕಡೆ ಕೈತೋರಿ, ಎದೆ ತಟ್ಟಿಕೊಳ್ಳುತ್ತ) ಇವನೋ, ನಾನೋ?

**ಗುಂಪಿನವರು**

ನೀನು, ನೀನು!

**ಗುಂಡ**

ನಾನು ಬೇಕಾಗಿದ್ದರೆ, ಬೋಲೋ....

**ಗುಂಪಿನವರು**

ಗುಂಡಾಕಿ ಜೈ! ಗುಂಡನ ಹಿಂದೆ ಎಲ್ಲರೂ ಅದೇ ರೀತಿ ಕೂಗುತ್ತ ಹೋಗುವರು]

**ಭಿಕ್ಷುಕಿ**

ಸುಮ್ಮನೆ ತಂಟೆ ಮಾಡಬೇಡ, ಬಿಡಪ್ಪಾ, ಮೊಗಾ. ನನ್ನ ಯಾಕೆ ಗೋಳುಹುಯ್ಕೋತಿ, ತಿರಿದುಕೊಂಡು ತಿನ್ನುವ ಮುದುಕಿಯನ್ನ?

**ಗುಂಡ**

ಕೋಲು ಕೊಡ್ತೀಯೋ ಇಲ್ಲವೋ?

**ಭಿಕ್ಷುಕಿ**

ಕೊಡೋಕಿಲ್ಲ ಅಂದರೆ ಕೊಡೋಕಿಲ್ಲ.

**ಗುಂಡ**

ಒಳ್ಳೇ ಮಾತ್ನಲ್ಲಿ ಕೊಟ್ಟರೆ ಸರಿಹೋಯ್ತು. ಇಲ್ಲದೆ ಹೋದರೆ–

[ಇಲ್ಲದೆ ಹೋದರೆ ಎನ್ನುತ್ತ ಗುಂಡ ಮುದುಕಿಯ
ಕೈಲಿದ್ದ ಕೋಲನ್ನು ಬಲಾತ್ಕಾರದಿಂದ ಕಿತ್ತುಕೊಂಡು,
ಇನ್ನೊಂದು ಕೈಲಿದ್ದ ಭಿಕ್ಷದ ಡಬ್ಬವನ್ನು ಕಸಿದು
ಕೊಂಡು, ಅದರಲ್ಲಿದ್ದ ಪುಡಿಕಾಸನ್ನು ಗೋಲಕಕ್ಕೆ
ಹಾಕಿಕೊಂಡು ಓಡಿಹೋಗುವನು: ಆಗ–]

**ಭಿಕ್ಷುಕಿ**

ಅಯ್ಯೋ ಅಯ್ಯೋ, ಇವರ ಮನೆ ಕಾಯ್ವಾಗ, ನನ್ನ ಕೋಲು ಕಿತ್ತು ಕೊಂಡ್ರಲ್ಲಪ್ಪಾ ! ನಾನು ಹೆಂಗಪ್ಪಾ ಇನ್ನು ಗೂಡು ಸೇರಿಕೊಳ್ಳಲಿ? ಕತ್ತಲೆ ಬೇರೆ ಕವೀತಾ ಬಂತು. ಮುದಿಗೂಬೆಗೆ ಕಣ್ಣೂ ಕಾಣಿಸೋದಿಲ್ಲ.....ಅಯ್ಯೋ, ಅಯ್ಯೋ, ಏನು ಮಾಡಲಿ ಅಪ್ಪಾ ನಾನು. ಯಾರು ಕಾಪಾಡೋರು ಇಲ್ಲವಾ? ಅಯ್ಯೋ ಶಿವನೇ !

[ಗುಂಪಿನಲ್ಲಿದ್ದ ಸೋಮು ಗುಂಡನನ್ನ ಅಟ್ಟಿಸಿಕೊಂಡು
ಹೋಗುವನು. ಕಿಟ್ಟುವೂ ಸೋಮನ ಜೊತೆಗೆ ಹೋಗುವನು.
ಈ ದೃಶ್ಯದ ಮುಂದೆ ಇನ್ನೊಂದು ತೆರೆ ಬೀಳುವುದು.]

೪

[ರಂಗದ ಒಂದು ಪಕ್ಕದಿಂದ ಗುಂಡ ಓಡಿಬಂದು
ನಿಲ್ಲುವನು. ಅವನ ಹಿಂದೆಯೇ ಸೋಮು, ಕಿಟ್ಟು ಬರುವರು.]

**ಸೋಮು**

ಏ ಗುಂಡಾ, ಎಲ್ಲಿಗೆ ಓಡಿ ಹೋಗುತೀಯೋ, ನಿಲ್ಲೋ! ಆ ಮುದುಕಿಯ ಕೋಲು ಕೊಡೋ ಇಲ್ಲಿ.

ನುಣ್ಣಗೆ ಎಷ್ಟು ಪಸಂದಾಗ್ಯೆತೆ ಈ ಕೋಲು. ಎಲ್ಲಿಂದ ತಂದೆಯೋ, ಮೊಗಾ, ಇದನ್ನ, ಇಷ್ಟು ಬಿರನೆ?

**ಸೋಮು**

(ಮೆಲ್ಲನೆ ನಗುತ್ತ) ಅಜ್ಜನ ಕೋಲು ಅಜ್ಜಿಗೆ, ಅಷ್ಟೆ.

**ಭಿಕ್ಷುಕಿ**

ತಣ್ಣಗೆ ಬದುಕು ನಮ್ಮಪ್ಪ. ಅದಿರಲಿ, ನಿಮ್ಮ ಅಜ್ಜ ನನ್ನ ಕೋಲೆಲ್ಲಿ ಅಂತ ಕೇಳಿದರೆ, ಏನು ಹೇಳುತಿ ಮೊಗಾ?

**ಸೋಮು**

ನಾನಿಲ್ಲವೆ ಅನ್ನುತೀನಿ.

**ಭಿಕ್ಷುಕಿ**

ಚಿನ್ನದಂಥ ಮಾತು ! ನಿಮ್ಮ ಮನೆಯೋರ ಮುಪ್ಪಿನ ಕಾಲದಲ್ಲಿ ಅವರ ಕೈಕೋಲಾಗಿ ನೂರು ವರ್ಸ ಬಾಳು, ನನ್ನ ಕಂದಾ ! ಬರ್ತೀನಿ ಮೊಗಾ !

[ಭಿಕ್ಷುಕಿ ಹೋಗುತ್ತಿರುವಳು]

**ಸೋಮು**

ಆಗಲಿ ಅಜ್ಜಿ, ಒಳ್ಳೆಯದು. ಹುಷಾರಾಗಿ ಹೋಗು, ಕತ್ತಲೆ.

[ಸೋಮು ತಾನೂ ಬಂದ ಕಡೆ ಹಿಂದಿರುಗುವನು. ಅವನು ಹೋದಮೇಲೆ ಎರಡು ಕ್ಷಣ ಬಿಟ್ಟು, ತೆರೆ ಸರಿಯುವುದು.]

## ೬

[ತೆರೆ ಸರಿದಾಗ, ಮೊದಲನೆಯ ದೃಶ್ಯದಂತೆ ಕತೆ ಕೂಟದ ಮಕ್ಕಳು ಕಂಡು ಬರುವರು. ಕಿಟ್ಟನೂ ಇರುವನು. ಸೋಮು ತಾನು ಹೇಳುತ್ತಿದ್ದ ಕತೆಯನ್ನು ೫ನೆಯ ದೃಶ್ಯದಲ್ಲಿ ನಡೆದ ಸಂಗತಿಯಿಂದ ಕೊನೆ ಮುಟ್ಟಿಸಿ, ಮುಂದಿನ ವಿಚಾರವನ್ನು ತಿಳಿಸುವನು. ಈ ವೇಳೆಗೆ, ಸೋಮುವಿನ ಅಜ್ಜ ಬಂದು ದೂರದಲ್ಲಿ ನಿಂತಿರುವರು]

**ಸೋಮು**

......ಅವತ್ತು ನಡೆದದ್ದು ಇಷ್ಟು. ಮುದುಕಿ ಸಂತೋಷವಾಗಿ ಹೊರಟುಹೋದಮೇಲೆ ನಾನು ಮನೆಗೆ ಬಂದೆ. ಮುದುಕಿಗೇನೋ ಸಹಾಯವಾಯಿತು. ಅಜ್ಜನ ಕೋಲನ್ನ ಕಿತ್ತುಕೊಂಡ ಹಾಗಾಯಿತಲ್ಲಾ ಅಂತ ಯೋಚನೆಗೆ ಇಟ್ಟುಕೊಂಡಿತು. ನಮ್ಮ ಅಜ್ಜ, (ಅಜ್ಜನ ಧ್ವನಿಯಲ್ಲಿ) "ನ್ನನ ಕೋಲು ಎಲ್ಲಿ ಹೋಯಿತರೋ? ಯಾರು ತಗೊಂಡಿದ್ದೀರೋ? ಕಾಮನ ಕಟ್ಟಿಗೆಗೆ

**ಸೋಮು**

ಸರಿ, ತೀರ್ಮಾನವಾದಹಾಗಾಯಿತು. ಬಾ ಕಿಟ್ಟು, ಆ ಮುದುಕಿಯ ಗತಿ ಏನಾಯಿತೋ, ನೋಡೋಣ.

[ಇಬ್ಬರೂ ಇನ್ನೊಂದು ಕಡೆಯಿಂದ ಹೋಗುವರು. ತೆರೆ ಸರಿಯುವುದು]

೫

[ತೆರೆ ಸರಿದಾಗ–ಭಿಕ್ಷುಕಿ ಹಿಂದೆ ಇದ್ದಲ್ಲಿಯೆ ಕಾಣಿಸಿ ಕೊಳ್ಳುವಳು.]

**ಭಿಕ್ಷುಕಿ**

ಅಪ್ಪಾ, ಅಣ್ಣಾ, ಯಾರಿಗೂ ದಯಾ ಇಲ್ಲವಾ ನನ್ನ ಮೇಲೆ? ಡಬ್ಬ, ಕಾಸು ಹೋದರೆ ಹೋಗಲಿ, ನನ್ನ ಕೋಲನ್ನ ತಂದು ಕೊಡಿರಪ್ಪಾ !

**ಸೋಮು**

(ಅದೇ ತಾನೇ ಬಂದು) ಅಜ್ಜೀ, ನೀನು ಪೇಚಾಡಬೇಡ. ನಿನ್ನ ಮನೆ ಎಲ್ಲಿ ಹೇಳು, ನಾನು ಕರೆದುಕೊಂಡು ಹೋಗಿ ಬಿಡುತೇನೆ.

**ಭಿಕ್ಷುಕಿ**

ಅಯ್ಯೋ, ನನ್ನ ಕೋಲು ಎಲ್ರಪ್ಪಾ?

**ಸೋಮು**

ನಾನೇ ಇರೋವಾಗ ಇನ್ನು ಕೋಲು ಯಾಕೆ ಅಜ್ಜೀ, ಬಾ.

**ಭಿಕ್ಷುಕಿ**

ಇವತ್ತೇನೋ ನೀನೇ ನನಗೆ ಕೋಲಾದೀಯಾ, ಮೊಗಾ. ನಾಳೀಕೆ ನನ್ನ ಗತಿ? ಒಂದು ಮುರುಕಲು ಗಳಾನಾದ್ರೂ ತಂದು ಕೊಡಪ್ಪ.

**ಸೋಮು**

ಕಿಟ್ಟೂ, ನೀನು ಅಜ್ಜೀನ ಮೆಲ್ಲಗೆ ನಡೆಸಿಕೊಂಡು ಹೋಗುತಾ ಇರು. ನಾನು ಓಡಿ ಹೋಗಿ, ನಮ್ಮ ಅಜ್ಜನ ದೊಣ್ಣೆ ಇದೆ, ಅದನ್ನ ತಂದು ಕೊಡುತೀನಿ, ಅಜ್ಜಿಗೆ. (ಸೋಮು ಹೋಗುವನು)

[ತೆರೆ ಬಿದ್ದು, ಎರಡು ಕ್ಷಣ ಬಿಟ್ಟು ಸರಿಯುವುದು]

**ಸೋಮು**

(ಬಂದು) ತಗೋ ಅಜ್ಜಿ, ಈ ಕೋಲನ್ನ. ಇನ್ನು ಯೋಚನೆ ಮಾಡಬೇಡ. ಕತ್ತಲೆ ಆಗುತಾ ಬಂತು, ಬೇಗ ಹೋಗಿ ಗೂಡು ಸೇರಿಕೋ.

**ಭಿಕ್ಷುಕಿ**

ನಗನೆ ನಿಜ ಹೇಳಿದೆ, ಕೋಲಿಗೆ ಬದಲು ಕೋಲು ತಂದುಕೊಟ್ಟೆ. ಈ ಕೋಲು ಮರದ ಕಟ್ಟಿಗೆ, ಜೀವ ಇಲ್ಲದ್ದು ; ಮುದುಕರ ಕೋಲು. ಮನುಷ್ಯನಿಗೆ–ಗಂಡಸರು ಹೆಂಗಸರು ಮಕ್ಕಳು ಎಲ್ಲರಿಗೂ–ಸಾಯೋವರೆಗೂ ಕೈಗೆ ಆಧಾರವಾದ ಕೋಲು ಅಂದ್ರೆ–ಸತ್ಯ, ದಯೆ, ಪರೋಪಕಾರ ಬುದ್ಧಿ. ಈ ಕೈಕೋಲನ್ನ ಯಾರೂ ಕಿತ್ತುಕೊಂಡು ಹೋಗೋದಕ್ಕೆ ಆಗೋದಿಲ್ಲ. ಇದನ್ನ ಬಿಡದೆ ಹಿಡಿದುಕೊಂಡಿರು, ಸೋಮೂ ! ನೀವೂ ಅಷ್ಟೇ, ಅದನ್ನ ಭದ್ರವಾಗಿ ಹಿಡಿದುಕೊಂಡಿರಿ. ದೇವರು ಒಳ್ಳೆಯದು ಮಾಡುತಾನೆ.

**ಸೋಮು**

ಆಗಲಿ ಅಜ್ಜ. ನಿಮ್ಮ ಆಶೀರ್ವಾದ.

**ಎಲ್ಲರೂ**

ಆಗಲಿ, ಅಜ್ಜ. ನೀವು ಹೇಳಿದ್ದನ್ನ ಮರೆಯೋದಿಲ್ಲ.

**ಅಜ್ಜ**

ಎಲ್ಲರಿಗೂ ದೇವರು ಒಳ್ಳೆಯದು ಮಾಡಲಿ (ಎಂದು ಎರಡು ಕೈಗಳನ್ನೂ ಮೇಲಕ್ಕೆ ಎತ್ತಿ ಆಶೀರ್ವಾದ ಮಾಡುವರು.)

(ತೆರೆ ಬೀಳುವುದು)



ಏನಾದರೂ ಹೊತ್ಕೊಂಡು ಹೋದಿರೇನರೋ? ನೀನು ಕಂಡೆಯಾ ರಮಾ? ನಿನಗೇನಾದರೂ ಗೊತ್ತೇನೋ, ಸೋಮೂ? ಲೋ, ರಾಮೂ......' ಅಂತ ಪರದಾಡುತಾ ಇದ್ದರು. ನಿಜ ಏನೂ ಅನ್ನುವುದು ನನಗೆ ತಾನೆ ಗೊತ್ತಿದ್ದದ್ದು, ಅವರ ಪರದಾಟ ಕಂಡು ಕರುಳು ಹಿಂಡಿದ ಹಾಗೆ ಆಗುತಾ ಇತ್ತು. ನಮ್ಮ ಅಜ್ಜನ ಕಷ್ಟ ನೋಡಲಾರದೆ, ನಡೆದದ್ದನ್ನೆಲ್ಲ ಅವರಿಗೆ ತಿಳಿಸಿದೆ. ಹೇಗಾದರೂ ಮಾಡಿ ಒಂದು ಒಳ್ಳೇ ಕೋಲನ್ನ ಸಂಪಾದನೆ ಮಾಡಿ ತಂದು ಕೊಡುತೀನಿ ಅಂತ ಮಾತುಕೊಟ್ಟೆ. ಅವರಿಗಂತೂ ನನ್ನ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ಕಾಮನ ಕಟ್ಟಿಗೆಗೇ ಕೋಲನ್ನ ನಾನು ಕೊಟ್ಟುಬಿಟ್ಟಿದ್ದೀನಿ ಅಂತ ಅವರ ಬಲವಾದ ನಂಬಿಕೆ. ಆದರೆ, ನಿಜ ಹೇಳಿದ್ದರಿಂದ ನನ್ನ ಮನಸ್ಸಿಗೇನೋ ನಿರಾಳವಾಗಿತ್ತು. ಆದರೂ, ಅಜ್ಜನ ಕೈಯಿಂದ ಕೋಲು ಕಿತ್ತುಕೊಂಡ ಹಾಗಾಯಿತಲ್ಲಾ ಅನ್ನೋ ಕೊರಗು ತಪ್ಪಲಿಲ್ಲ. ಆಗ, ನಮ್ಮ ಸ್ಕೌಟು ರಘುವಿನ ಹತ್ತಿರ ದೊಣ್ಣೆ ಇರುವುದು ನೆನಪಿಗೆ ಬಂತು. ಕೇಳಿದ ಕೂಡಲೆ, "ನನ್ನ ಸ್ಕೌಟು ಮಾಸ್ಟರಿಗೆ ಹೇಳಿಕೊಳ್ಳುತೀನಿ, ನಿನ್ನ ಆ 'ಗುಡ್‌ಟರ್ನ್'ಗೆ (good trun) ನನ್ನ ಈ ಗುಡ್ ಟರ್ನು ತಗೋ" ಅಂತ ಈ ಕೋಲು ಕೊಟ್ಟ. ನಮ್ಮ ಅಜ್ಜನಿಗೆ ಈಗಲಾದರೂ ನಂಬಿಕೆ ಬರುತ್ತೋ ಇಲ್ಲವೋ........"

**ಅಜ್ಜ**

(ಒಳಗಿನಿಂದ ಬಂದು ಹಿಂದೆ ನಿಂತಿದ್ದವರು ಮುಂದಕ್ಕೆ ಬರುವರು. ಉಕ್ಕಿದ ಸಂತೋಷದಿಂದ) ಸೋಮೂ, ಸೋಮೂ ! ರಾಮೂ ರಾಮೂ !

**ರಮಾ**

ಇಲ್ಲೇ ಇದಾರೆ, ಅಜ್ಜ !

**ಸೋಮು, ರಾಮು**

(ಒಟ್ಟಿಗೆ) ಅಜ್ಜಾ ! ಅಜ್ಜಾ !

**ಉಳಿದವರು**

ಇವರು ಬಂದಿರೋದು ನಮಗೆ ಗೊತ್ತೇ ಆಗಲಿಲ್ಲ.

**ಅಜ್ಜ**

(ನಡುನಡುವೆ ಕೆಮ್ಮುತ್ತ) ಹೊರಕ್ಕೆ ಹೋಗೋಣ ಅಂತಬಂದೆ. ಹೇಗೂ ಕೋಲಿಲ್ಲಾ ಅಂತ, ಹಾಗೇ ನಿಂತುಕೊಂಡು ನಿಮ್ಮ ಮಾತುಕತೆ ಕೇಳುತಾ ಇದ್ದೆ. (ಸೋಮುವನ್ನು ಕುರಿತು) ಸೋಮೂ, ನೀನು ಹೇಳಿದ್ದನ್ನ ನಂಬುತ್ತೀನಿ ಕಣೋ. ನೀನು ಹೇಳಿದ್ದನ್ನೆಲ್ಲಾ ಕೇಳಿಸಿಕೊಂಡೆ. ಆ ಮುದುಕಿಗೆ ನೀನು ಸಹಾಯಮಾಡಿದೆ,

## ನೋಟ ೧

[ಶುದ್ಧೋದನ ಮಹಾರಾಜನ ಮಂತ್ರಾಲೋಚನೆಯ ಓಲಗಸಾಲೆ]

**ಶುದ್ಧೋದನ**–ಆಚಾರ್ಯ ವಿಶ್ವಾಮಿತ್ರರೇ, ನಾನು ನಿಮಗೆ ಚಿರಋಣಿ. ಕುಮಾರ ಗೌತಮನನ್ನು ಸಕಲ ವಿದ್ಯಾಪಾರಂಗತನನ್ನಾಗಿ ಮಾಡಿರುವಿರಿ.

**ವಿಶ್ವಾಮಿತ್ರ**–ಶುದ್ಧೋದನ ಮಹಾರಾಜಾ, ಅದು ಕುಮಾರನ ಹಿರಿಮೆ. ಎಂಥ ಉತ್ತಮ ಬೇಸಾಯಗಾರನಾದರೂ, ಬಿತ್ತವಿಲ್ಲದೆ ಬೆಳೆ ಬೆಳೆಯಲಾದೀತೆ? ಕುಮಾರನಲ್ಲಿ ಸಕಲ ವಿದ್ಯೆಗಳೂ ಬೀಜರೂಪದಲ್ಲಿ ಅಡಗಿದ್ದುವು. ನಾನು ಕಲಿಸಿದ್ದು ಬಲು ಕಡಮೆ.

**ಶುದ್ಧೋದನ**–ಸೂರ್ಯನ ಬಿಸಿಲು ಸೋಕದೆ ಬಿತ್ತ ಮೊಳೆಯುವುದೆ, ಆಚಾರ್ಯ?

**ವಿಶ್ವಾಮಿತ್ರ**–ಪ್ರಭುವಿನ ಅಭಿಮಾನ.

**ಶುದ್ಧೋದನ**–ಶಿಷ್ಯನ ಗುರುದಕ್ಷಿಣೆಯಾಗಿ, ನಮ್ಮ ಅಲ್ಪಕಾಣಿಕೆಯನ್ನು ತಮಗೆ ಒಪ್ಪಿಸಬೇಕೆಂದಿರುವೆವು. ತಾವು ದಯವಿಟ್ಟು ಒಪ್ಪಿಸಿಕೊಳ್ಳಬೇಕು. ರಾಜಸಭೆಯನ್ನು ಏರ್ಪಡಿಸಿ, ಕುಮಾರನಿಂದಲೇ ದಕ್ಷಿಣೆ ಕೊಡಿಸಬೇಕೆಂದು ಮಂತ್ರಿವರ್ಯ ಮಹಾನಾಮರು ಸಲಹೆ ಮಾಡಿದ್ದಾರೆ.

**ವಿಶ್ವಾಮಿತ್ರ**–ರಾಜಕುಮಾರನಿಗೆ ವಿದ್ಯೆ ಕಲಿಸಿಕೊಡಬೇಕಾದದ್ದು ಕುಲಗುರುವಾದ ನನ್ನ ಕರ್ತವ್ಯ. ನಾನು ಕಲಿಸದೆಯೆ, ಸರ್ವ ಅರ್ಥಗಳನ್ನೂ ದೊರಕಿಸಿಕೊಡುವ ಸಕಲವಿದ್ಯೆಗಳೂ ಅವನಿಗೆ ಸಿದ್ಧಿಸಿವೆ; ಅವನು 'ಸಿದ್ಧಾರ್ಥ'ನಾಗಿದ್ದಾನೆ.

**ಶುದ್ಧೋದನ**–ನಿಮ್ಮ ಕರ್ತವ್ಯವನ್ನು ನೀವು ಮಾಡಿಯೇ ಇರುವಿರಿ. ನನ್ನ ಕರ್ತವ್ಯವನ್ನು ನಾನು ಮಾಡಬೇಡವೆ? ಅದಕ್ಕೆ ತಾವು ಅವಕಾಶಕೊಡಬೇಕು.

**ವಿಶ್ವಾಮಿತ್ರ**–ಪ್ರಭುವಿನ ಚಿತ್ತ. ಆದರೆ, ಗುರು ದಕ್ಷಿಣೆ ಯಾವ ಬಗೆಯದಾಗಿರಬೇಕು ಎನ್ನುವುದನ್ನ ನಾನು ತಿಳಿಸಬಹುದಷ್ಟೆ?

**ಶುದ್ಧೋದನ**–ಅಗತ್ಯವಾಗಿ ಆಗಬಹುದು.

**ವಿಶ್ವಾಮಿತ್ರ**–ಕ್ಷತ್ರಿಯ ಕುಮಾರನಿಗೆ ವಿದ್ಯೆಗಳಲ್ಲೆಲ್ಲ ಕ್ಷಾತ್ರವಿದ್ಯೆ ಕಿರೀಟಪ್ರಾಯ. ಕಪಿಲವಸ್ತುವಿನ ಕ್ಷತ್ರಿಯ ಕುಮಾರರ ಪರಾಕ್ರಮ ಪ್ರದರ್ಶನವೊಂದನ್ನು ಏರ್ಪಡಿಸೋಣ. ಅದರಲ್ಲಿ ಕುಮಾರ ಗೌತಮನ ತೋಳ್ಬಲ ಕೈಚಳಕಗಳು ಉಳಿದೆಲ್ಲ ಕ್ಷತ್ರಿಯ ಕುಮಾರರು ಕರುಬುವಂತಾದರೆ, ನನ್ನ ನಿಮ್ಮ ಹಿಗ್ಗಿಗೆ ಎಣೆಯುಂಟೆ?

## ಪಾತ್ರಗಳು

| | | |
|---|---|---|
| ೧. | ಶುದ್ಧೋದನ | ಕಪಿಲವಸ್ತುವಿನ ದೊರೆ. |
| ೨. | ವಿಶ್ವಾಮಿತ್ರ | ಆತನ ಕುಲಗುರು |
| ೩. | ಮಹಾನಾಮ | ಆತನ ಮಹಾಮಂತ್ರಿ |
| ೪. | ಕುಮಾರ ಗೌತಮ | ರಾಜಕುಮಾರ |
| ೫. | ಮಹಾಬಲ | ಮಂತ್ರಿಯ ಮಗ |
| ೬. | ಯಶೋಧರೆ | ಮಂತ್ರಿಯ ಮಗಳು |
| ೭. | ಮಧುಮತಿ | ಯಶೋಧರೆಯ ಗೆಳತಿ |
| ೮. | ಚೆನ್ನ | ಅರಮನೆಯ ಸಾರಥಿ |
| ೯. | ದೇವದತ್ತ | ಶುದ್ಧೋದನನ ತಮ್ಮ |

**ಮಹಾಬಲ**–ಅಲ್ಲ ಖಂಡಿತ ಅಲ್ಲ. ಆದರೆ–

**ಗೌತಮ**–ಏನು ನಿನ್ನ ಸಂದೇಹ?

**ಮಹಾಬಲ**–ಅದಕ್ಕೆ ನೀನು ಕಾರಣನಲ್ಲ.

**ಗೌತಮ**–ನಾನೇ ಕಾರಣ.

**ಮಹಾಬಲ**–ಅದು ಹೇಗೆ?

**ಗೌತಮ**–ಸಹಜವಾದ ದಾಯಾದಮಾತ್ಸರ್ಯದ ಬೆಂಕಿಗೆ ಈ ಹೊತ್ತು ತುಪ್ಪ ಎರೆದವನು ನಾನು. ಹೀಗಾಗುವುದು ಎಂದು ಗೊತ್ತಿದ್ದರೆ, ಈ ವಿದ್ಯಾಪ್ರದರ್ಶನದ ಸ್ಪರ್ಧೆಗೆ ನಾನು ಒಪ್ಪುತ್ತಲೇ ಇರಲಿಲ್ಲ. ಒಬ್ಬನ ಗೆಲವಿನಿಂದ ಇನ್ನೊಬ್ಬನಿಗೆ ಸೋಲು, ಒಬ್ಬನ ಸುಖದಿಂದ ಇನ್ನೊಬ್ಬನ ಅಸುಖ – ಈ ಬಗೆಯ ಗೆಲವು ಗೆಲವಲ್ಲ, ಸುಖ ಸುಖವಲ್ಲ.

**ಮಹಾಬಲ**–ಇವತ್ತಿನ ವಿಚಾರ ಹಾಳಾಗಿ ಹೋಗಲಿ. ನಿನ್ನ ಸುಖಕ್ಕೆ ಏನು ಕೊರತೆ, ಗೌತಮಾ?

**ಗೌತಮ**–ಯಾವ ಕೊರತೆಯೂ ಆಗದಂತೆ ನಮ್ಮ ತಂದೆ ನೋಡಿಕೊಂಡಿದ್ದಾರೆ, ದಿಟ. ಆದರೆ, ಮನಸ್ಸಿಗೆ ಶಾಂತಿಯಿಲ್ಲ.

**ಮಹಾಬಲ**–ಎಂದಿನಿಂದಲೂ ಇಲ್ಲವೋ, ಈಹೊತ್ತು ಮಾತ್ರವೋ?

**ಗೌತಮ**–ಎಂದಿನಿಂದಲೂ ಇಲ್ಲ. ಹೇಳಿಕೊಳ್ಳಲಾಗದ ಏನೋ ಕೊರತೆ ಮನಸ್ಸಿಗೆ. ದೇವದತ್ತ ಅದನ್ನು ಎರಡರಷ್ಟು ಮಾಡಿದ್ದಾನೆ. ಇನ್ನೊಂದು ಸಲ ಅವನಿಗೆ ನಾನು ಸೋತು, ಅವನಿಗೆ ಸುಖ ಉಂಟುಮಾಡಬೇಕು. ಅವನು ಎಷ್ಟು ಸಂಕಟಪಡುತ್ತಿದಾನೆಯೋ, ಪಾಪ.

**ಮಹಾಬಲ**–ನೀನು ವಿಚಿತ್ರ, ಗೌತಮ. ದಯವಿಟ್ಟು ಅವನನ್ನು ಮರೆತುಬಿಡು. ಅವನ ಕಣ್ಣನ್ನು ನೋಡಿದ ಹಾಗೆಯೇ ಇನ್ನೊಬ್ಬರ ಕಣ್ಣನ್ನೂ ನೀನು ದೃಷ್ಟಿಸಿ ನೋಡಿದ್ದರೆ ಚೆನ್ನಾಗಿತ್ತು.

**ಗೌತಮ**–ಯಾರ ಕಣ್ಣನ್ನ?

**ಮಹಾಬಲ**–ಯಶೋಧರೆ ! ನಿನ್ನ ತಂಗಿ?

**ಮಹಾಬಲ**–ಹೌದು !

**ಗೌತಮ**–ನೀನು ನೋಡಿದೆಯಾ, ಅವಳ ಕಣ್ಣನ್ನೆ ?

**ಮಹಾಬಲ**–ನಾನೂ ನೋಡಿದೆ: ನನ್ನ ತಂದೆಯೂ

ನೋಡಿದರು.

**ಗೌತಮ**–ಸದ್ಯ, ಅವಳ ಕಣ್ಣಲ್ಲಿ ನೀರು ಬರಿಸುವುದಕ್ಕೆ ನಾನು

ಶಿಷ್ಯನ ಮೇಲ್ಮೆಯನ್ನು ಕಂಡು ನಲಿಯುವುದಕ್ಕಿಂತ ಬೇರೆಯ ದಕ್ಷಿಣೆಯುಂಟೆ ಗುರುವಿಗೆ?

ಶುದ್ಧೋದನ–ತಮ್ಮ ಸಂತೋಷ, ಆಚಾರ್ಯ.

## ನೋಟ ೨

[ಅರಮನೆಯಲ್ಲಿ ಕುಮಾರ ಗೌತಮನ ಕೋಣೆ. ಕುಮಾರನೂ ಮಹಾ ಮಂತ್ರಿ ಮಹಾನಾಮರ ಪುತ್ರ ಮಹಾಬಲನೂ ಮಾತುಕತೆಯಲ್ಲಿ ತೊಡಗಿದ್ದಾರೆ.]

**ಮಹಾಬಲ**–ಗೌತಮಾ,–ಅಲ್ಲ, ಅಲ್ಲ–ಮರೆತೆ, ಮರೆತೆ–ಸಿದ್ಧಾರ್ಥ,– ಹೀಗೆಂದು ತಾನೆ ವಿದ್ಯಾಪ್ರದರ್ಶನದ ಕಡೆಯಲ್ಲಿ ನೆರೆದವರೆಲ್ಲರ ಮುಂದೆ ಗುರುವರ್ಯರು ಘೋಷಿಸಿದ್ದು?

**ಗೌತಮ**–ಹೌದು, ಹೆಸರಿಗೆ ಸಿದ್ಧಾರ್ಥ. ಆದರೆ, ಮಹಾಬಲ, ಸರ್ವಾರ್ಥಸಿದ್ಧಿಯನ್ನೂ ಮೀರಿದಪರಮಾರ್ಥ ಒಂದು ಇದೆ ಎಂದು ಆಚಾರ್ಯ ವಿಶ್ವಾಮಿತ್ರರೇ ಹೇಳಿದ್ದಾರೆ. ಅವರ ಪದತಲದಲ್ಲಿ ಕುಳಿತು ಕಲಿತ ವೇದಶಾಸ್ತ್ರಗಳಿಂದ ಆ ಪರಮಾರ್ಥ ಏನು ಎನ್ನುವುದು ಮಾತ್ರ ತಿಳಿಯಲಿಲ್ಲ.

**ಮಹಾಬಲ**–ಮನಸ್ಸಿನಲ್ಲಿ ಏನೋ ಕೊರತೆ ಕೊರೆಯುತ್ತಿದೆ. ಮಿತ್ರ ಗೌತಮಾ, ನೀನು ಹೇಳುವುದೊಂದೂ ನನಗೆ ಅರ್ಥವಾಗುವುದಿಲ್ಲ. ನನಗೆ ಅರ್ಥವಾಗುವುದಿಷ್ಟೆ. ಇವೊತ್ತಿನ ಪ್ರದರ್ಶನದಲ್ಲಿ ನೀನು ಎಲ್ಲರನ್ನೂ ಮೀರಿಸಿದೆ. ನಿನ್ನ ಚಿಕ್ಕಪ್ಪ ಅಮೃತೋದನನ ಮಗ ದೇವದತ್ತ ಧನುರ್ವಿದ್ಯೆಯಲ್ಲಿ ತನ್ನನ್ನು ಬಿಟ್ಟರೆ ಇಲ್ಲ ಎಂದು ಮೂಗೆತ್ತಿಕೊಂಡು ಮೆರೆಯುತ್ತಿದ್ದ. ಅವನು ತಲೆತಗ್ಗಿಸುವಂತೆ ಮಾಡಿದೆ, ನೀನು. ಅದ್ಭುತ ವಿಜಯವನ್ನು ಸಾಧಿಸಿದೆ. ವಿಜಯಶಾಲಿಯಾದ ನಿನಗೆ ಈ ಖಿನ್ನತೆ, ಈ ಬೇಸರ, ಸರಿಯಲ್ಲ.

**ಗೌತಮ**–ವಿಜಯ, ವಿಜಯ! ಎಂತಹ ವಿಜಯ ಮಹಾಬಲ? ಒಬ್ಬ ಗೆಲ್ಲಲು ಸಾವಿರ ಜನ ಸೋಲಬೇಕೆ? ಸೋತ ದೇವದತ್ತನ ತಲೆಯೇನೋ ತಗ್ಗಿತು. ಅವನ ಕಣ್ಣ ನೋಟವನ್ನು ದೃಷ್ಟಿಸಿ ನೋಡಿದೆಯಾ ಮಹಾಬಲಾ?

**ಮಹಾಬಲ**–ನೋಡಿದೆ, ಗೌತಮ. ಅದು ಬಾಣದಂತೆ ಚೂಪಾಗಿತ್ತು. ಯಾವತ್ತಿನಿಂದಲೂ ನಿನ್ನ ಮೇಲೆ ಅವನಿಗೆ ಇರುವ ಅಸೂಯೆ ಇಂದು ಅವನ ಕಣ್ಣಲ್ಲಿ ಹೊತ್ತಿ ಉರಿಯುತ್ತಿತ್ತು.

**ಗೌತಮ**–ಒಬ್ಬನ ದ್ವೇಷ ಅಸೂಯೆಗಳಿಗೆ ಗುರಿಯಾಗುವುದು ಸಂತೋಷದ ವಿಷಯವೇ, ಮಹಾಬಲ?

**ಯಶೋಧರೆ**–(ಆಶ್ಚರ್ಯದಿಂದ) ಅಣ್ಣಯ್ಯ, ಇದೇನು! ಹೊರಟೇ ಬಿಟ್ಟೆ!

**ಮಹಾಬಲ**–(ನಗುತ್ತ) ಚಿನ್ನದ ಕತ್ತಿ ತರಬೇಡವೆ?

**ಯಶೋಧರೆ**–ಚಿನ್ನದ ಕತ್ತಿಯ ವಿಚಾರವನ್ನು ಪಿತಾಜಿ ಎತ್ತಲೇ ಇಲ್ಲವಲ್ಲಾ! ಹುಸಿಯಾಡುತ್ತಿರುವೆಯೋ ಹೇಗೆ?

**ಮಹಾಬಲ**–(ನಗುತ್ತ) ಅದು ಆಮೇಲೆ ಬಂದ ಆಲೋಚನೆ.

**ಯಶೋಧರೆ**–(ತುಸನಕ್ಕು) ಆಮೇಲೆ ಬಂದ ಆಲೋಚನೆಯ ಕೆಲಸ ಆಮೇಲಾಗಲಿ ! ಮಾಲಿಕೆ ಬಾಡಿ ಹೋಗುತ್ತೆ; ಕುಮಾರರಿಗೆ ಈಗಲೇ ಒಪ್ಪಿಸಿಬಿಡು. ನಾನೂ ನಿನ್ನ ಸಂಗಡಲೇ ಬರುತ್ತೇನೆ.

**ಮಹಾಬಲ**–ಮಾಲೆ ಅರ್ಪಿಸುವ ಕೆಲಸ ನಿನ್ನದು.

**ಯಶೋಧರೆ**–ಪಿತಾಜಿ ನಿನಗಲ್ಲವೆ ವಹಿಸಿದ್ದು?

**ಮಹಾಬಲ**–ಹೌದು. ಆದರೆ, ಈಗ ಅದನ್ನು ನಾನು ನಿನಗೆ ವಹಿಸಿದ್ದೇನೆ. (ನಗುತ್ತ) ಹಿರಿಯಣ್ಣ ತಂದೆಗೆ ಸಮ ಅಲ್ಲವೆ ?

**ಗೌತಮ**–ಮಹಾಬಲಾ, ನಿಮ್ಮೆಲ್ಲರ ಸಂಚು ಇದೇನು ? ಇದು ಸ್ವಯಂವರ ಅಲ್ಲ ತಾನೆ ?

**ಮಹಾಬಲ**–(ನಗುತ್ತ) ನೀವಿಬ್ಬರೂ ಹೇಗೆ ತಿಳಿದುಕೊಂಡರೆ ಹಾಗೆ (ಎಂದು ಹೊರಟುಹೋಗುವನು).

**ಯಶೋಧರೆ**–(ನಾಚಿಕೆ, ಹೆದರಿಕೆ, ನಟಿಸುತ್ತ) ಅಯ್ಯೊ, ಹೊರಟೇಬಿಟ್ಟನಲ್ಲಾ ಅಣ್ಣಯ್ಯ !

(ಕ್ಷಣ ಹೊತ್ತು ಇಬ್ಬರೂ ಮೌನ)

**ಗೌತಮ**–ಯಶೋಧರಾ ನನ್ನ ಕಂಡರೆ ನಿನಗೆ ಭೀತಿಯೆ?

**ಯಶೋಧರೆ**–ಭೀತಿ ! ನಿಮ್ಮ ಮನಸ್ಸು ಈ ಹೂವಿನಷ್ಟು ಮೃದು ಎಂದು ಪಿತಾಜಿ ಹೇಳುತ್ತಾರೆ. ಬೇಟೆ ಆಡುವುದನ್ನ ಕಲಿಯಲು ಕೂಡ ನೀವು ಒಪ್ಪಿಲ್ಲವಂತೆ?

**ಗೌತಮ**–ಹೌದು. ನಮ್ಮ ವಿನೋದಕ್ಕೋಸ್ಕರ ಮೃಗಗಳನ್ನು ಕೊಲ್ಲುವುದೇ? ಛೆ! ಹೂವು ಕುಯ್ಯುವುದು ಕೂಡ ಹಿಂಸೆ. ಗಿಡದ ಮೇಲೆಯೇ ಹೂವು ಹೆಚ್ಚು ಚೆಂದ.

**ಯಶೋಧರೆ**–ಹೂವು ಕುಯ್ಯದೆ ಇದ್ದಿದ್ದರೆ ಈ ಹಾರವನ್ನು ಕಟ್ಟುವುದಕ್ಕೇ ಆಗುತ್ತಿರಲಿಲ್ಲವಲ್ಲಾ ! ಮಾಲೆಯಲ್ಲೂ ಹೂಗಳು ಚೆಂದವಾಗಿಯೇ ಕಾಣುತ್ತವೆ ! ಕೊರಳಿನಲ್ಲಿ ಧರಿಸಿದರೆ, ಮಾಲೆ, ಅದರ ಹೂಗಳು, ಇನ್ನೂ ಚೆಂದವಾಗುತ್ತವೆ.

**ಗೌತಮ**–ಗಿಡಗಳಿಗೆ ಹಿಂಸೆಮಾಡಿ ಕುಯ್ದು ಹೂವುಗಳಿಂದ ಕಟ್ಟಿದ

ಕಾರಣನಾಗಿಲ್ಲವಲ್ಲ?

**ಮಹಾಬಲ**–ಇಲ್ಲ, ಖಂಡಿತ ಇಲ್ಲ. ಅವಳ ಕಣ್ಣನ್ನ ನೀನು ನೋಡಿದ್ದರೆ, ನೀನು ಗೆದ್ದೆ ಅಂತ ಕಣ್ಣು ನಲಿಯುತಿದ್ದುದನ್ನು ನೀನು ಕಾಣಬಹುದಾಗಿತ್ತು. ಈ ಕಣ್ಣುಗಳಲ್ಲಿ ದ್ವೇಷ ಅಸೂಯೆಗಳ ಕೆಂಡಗೆಂಪು ಇರಲಿಲ್ಲ : ಪ್ರೀತಿಯ ಥಳಥಳ ನಕ್ಷತ್ರಕಾಂತಿ ಹೊಳೆಯುತ್ತಿತ್ತು.

**ಗೌತಮ**–(ನಗುತ್ತ) ನೀನು, ನಿನ್ನ ತಂದೆ, ಸೇರಿಕೊಂಡು ಏನೋ ಸಂಚು ನಡೆಸುತ್ತಿರುವ ಹಾಗೆ ಕಾಣುತ್ತೆ ! ಅದಿರಲಿ, ನೀನು ಬಂದ ಕಾರ್ಯ ಏನು?

ಮಹಾಬಲ–ಏನೂ ಇಲ್ಲ ನಿನ್ನ ಪಿತಾಜಿಯ ಒಪ್ಪಿಗೆ ಪಡೆದು ನಮ್ಮ ತಂದೆ ಅಪ್ಪಣೆ ಮಾಡಿದ ಪ್ರಕಾರ, ನನ್ನ ತಂಗಿ ಇನ್ನೇನು ಇಲ್ಲಿ ಬರುವುದರಲ್ಲಿ ಇದ್ದಾಳೆ.

**ಗೌತಮ**–ಯಾಕೆ?

**ಮಹಾಬಲ**–ಇಂದಿನ ವಿಜಯದ ಸಂತೋಷಾರ್ಥವಾಗಿ ನಿನಗೆ ನಮ್ಮ ಕುಟುಂಬದ ಪ್ರೀತಿ ವಿಶ್ವಾಸಗಳ ಕಾಣಿಕೆ ಸಲ್ಲಿಸುವುದಕ್ಕೆ.

**ಗೌತಮ**–ವಿಜಯ ! ಸಂತೋಷ ! ಎಲ್ಲ ಹುಸಿ.

## ನೋಟ ೩

[ಅದೇ ಕೋಣೆ. ಯಶೋಧರೆ ಬಲಗೈಲಿ ವಿಜಯಮಾಲಿಕೆಯನ್ನು ಹಿಡಿದು ಬರುವಳು. ಅವಳ ಗೆಳತಿ ಒಬ್ಬಳು ಚಿನ್ನದ ಪಂಜರವೊಂದನ್ನು ಹಿಡಿದುಕೊಂಡು ಜೊತೆಯಲ್ಲಿ ಬರುವಳು; ಪಂಜರದಲ್ಲಿ ಒಂದು ಜೊತೆ ಗಿಣಿಗಳಿರುವುವು; ಆಗಾಗ್ಗೆ ಕೀರುತ್ತಿರುವುವು.]

**ಮಹಾಬಲ**–ಇದೇನು ಯಶೋಧರಾ, ಪ್ರಭು ಕುಮಾರರು ಇಷ್ಟು ಹೊತ್ತು ಕಾಯುವಂತೆ ಮಾಡಿದೆ?

**ಯಶೋಧರೆ**–ಪ್ರಭುಕುಮಾರರು ಕ್ಷಮಿಸಬೇಕು. ಮಾಲೆ ಕಟ್ಟುವುದರಲ್ಲಿ ನಾನು ಅಷ್ಟು ಜಾಣೆಯಲ್ಲ. ಆದ್ದರಿಂದ ತಡವಾಯಿತು, ಅಣ್ಣಯ್ಯ.

**ಮಹಾಬಲ**–ಮಧುಮತಿ, ಪಂಜರವನ್ನು ಆ ಪೀಠದ ಮೇಲಿಟ್ಟು ನನ್ನ ಸಂಗಡ ಬಾ. ನಮ್ಮ ಪಿತಾಜಿ ಆಯ್ದು ತೆಗೆದಿಟ್ಟಿರುವ ಚಿನ್ನದ ಹಿಡಿಯ ಬಹುಮಾನದ ಕತ್ತಿಯನ್ನು ತರೋಣ, ಬಾ.

**ಮಧುಮತಿ**–(ಪಂಜರವನ್ನು ಪೀಠದ ಮೇಲಿಟ್ಟು) ಹಾಗೆಯೇ ಆಗಲಿ (ಎಂದು, ತೆರಳುವಳು)

ವರಣಮಾಲಿಕೆ ಅಲ್ಲ. ನಾನು ಬರುತ್ತೇನೆ (ಎಂದು ಹುಸಿ ಮುನಿಸು ನಟಿಸುತ್ತ ಹೊರಟು ಹೋಗುವಳು.)

**ಗೌತಮ–**(ಮೃದುವಾಗಿ ನಗುವನು)

## ನೋಟ ೪

[ಕಪಿಲವಸ್ತುವಿನ ಹೊರಗೆ. ಬಹಿರುದ್ಯಾನ. ಮಹಾಬಲ, ಗೌತಮ ಸಂಭಾಷಿಸುತ್ತ ಬರುತ್ತಿದ್ದಾರೆ]

**ಗೌತಮ–**ನಿನ್ನ ತಂಗಿ ತಂದುಕೊಟ್ಟ ಗಿಣಿಗಳನ್ನ ಒಳ್ಳೆಯ ಗಳಿಗೆಯಲ್ಲಿ ಬಿಡುಗಡೆ ಮಾಡಿದೆ ಅಂತ ಕಾಣುತ್ತೆ. ನನಗೂ ಅರಮನೆ ಪಂಜರದಿಂದ ಬಿಡುಗಡೆ ದೊರೆಯಿತು.

**ಮಹಾಬಲ–**(ನಕ್ಕು)ಗಳಿಗೆಯೇನು ಮಾಡುತ್ತೆ, ನನ್ನ ತಂಗಿ ನಮ್ಮ ಪಿತಾಜಿಗೆ ಹೇಳಿ, ನಮ್ಮ ಪಿತಾಜಿ ನಿನ್ನ ಪಿತಾಜಿಗೆ ಹೇಳಿರುವ ಹಾಗೆ ಕಾಣುತ್ತೆ.

**ಗೌತಮ–**ಹೊರಗಣ ಜಗತ್ತನ್ನು ನೋಡುವ ಈ ಅಪೂರ್ವ ಸುಯೋಗಕ್ಕಾಗಿ ನಿನ್ನ ತಂಗಿಗೆ ನನ್ನ ಧನ್ಯವಾದಗಳು.

**ಚೆನ್ನ–** (ಬಂದು) ತಾವು ಇತ್ತ ಬಂದು ಬಹಳ ಹೊತ್ತಾಯಿತು. ರಥವನ್ನು ಹೊಡೆದುಕೊಂಡು ಬರಲೇ ಚಿಕ್ಕದೊರೆಯೆ?

**ಗೌತಮ–**ಚೆನ್ನ, ರಥವನ್ನು ಅಲ್ಲಿಯೇ ನಿಲ್ಲಿಸಿಕೊಂಡಿರು, ನಾವು ಇನ್ನು ಸ್ವಲ್ಪ ಸುತ್ತಾಡಿಕೊಂಡು ಬರುತ್ತೇವೆ. ನಿಸರ್ಗದ ನೋಟ ಎಷ್ಟು ಸೊಗಸಾಗಿದೆ! ಅರಮನೆಗೆ ಹಿಂದಿರುಗಿ ಹೋಗಲು ಮನಸ್ಸೇ ಬರುವುದಿಲ್ಲ.

**ಚೆನ್ನ–**ರಥ ಬಿಟ್ಟು ಎಲ್ಲಿಯೂ ಇಳಿಸಲೇಕೂಡದು ಅಂತ ದೊಡ್ಡ ದೊರೆಗಳ ಅಪ್ಪಣೆ ಆಗಿತ್ತು. ಚಿಕ್ಕದೊರೆಗಳ ಅಪ್ಪಣೆ ಆದರೆ, ಆ ರಥವನ್ನ,–

**ಗೌತಮ–**ಅಪ್ಪಣೆಮಾಡಿ ನಿನ್ನ ಮನಸ್ಸು ನೋಯಿಸಲಾರೆ. ಇದು ನನ್ನ ಬೇಡಿಕೆ. ರಥವನ್ನು ತಂದು ಇಲ್ಲಿ ನಿಲ್ಲಿಸಕೊಂಡಿರು. ಅಲ್ಲಿ ಕಾಣುತ್ತಿವೆಯಲ್ಲಾ, ಆ ಹೊಲ, ಆ ತಾವರೆ ಕೊಳ, ಆ ಮಾವಿನ ತೋಪು–ಇವುಗಳನ್ನು ಒಂದು ಬಳಸುಹಾಕಿ ಬರುತ್ತೇವೆ. ದಯವಿಟ್ಟು ನನ್ನ ಬೇಡಿಕೆ ನಡೆಸು, ಚೆನ್ನ.

**ಚೆನ್ನ–**ಎಂಥ ಕಲ್ಲುಮನಸ್ಸನ್ನೂ ಗೆಲ್ಲುತ್ತೆ ನಿಮ್ಮ ಬೆಣ್ಣೆಯಂಥ ಮಾತು, ಮಲ್ಲಿಗೆಯಂಥ ಮನಸ್ಸು. ಆಗಲಿ, ನನ್ನೊಡೆಯಾ. ಅಲ್ಲಿಯೇ ರಥ ನಿಲ್ಲಿಸಿಕೊಂಡಿರುತ್ತೇನೆ. ಇಲ್ಲ ಇರುವಲ್ಲಿಗೇ ತರುತ್ತೇನೆ.

**ಗೌತಮ–**ಆಗಬಹುದು, ಚೆನ್ನಾ. ನಾವು ಹೆಚ್ಚು ದೂರ ಏನೂ

ವಿಜಯಮಾಲಿಕೆ ನನಗೆ ಬೇಡ, ಯಶೋಧರಾ.

**ಯಶೋಧರೆ**–ಹೋಗಲಿ, ಆ–

**ಗೌತಮ**–ಆ ಪಂಜರದ ಗಿಣಿಗಳೂ ಬೇಡ. ಅರಮನೆಯಲ್ಲಿ, ಅದರ ಉದ್ಯಾನದಲ್ಲಿ, ಸುತ್ತಾಡುವ ಸ್ವಾತಂತ್ರ್ಯ ಹೊಂದಿರುವ ನನಗೆ, ಈ ಅರಮನೆ, ಈ ಸುಖಭೋಗ, ಎಲ್ಲವೂ ಒಂದು ಚಿನ್ನದ ಪಂಜರದಂತೆ ತೋರುತ್ತಿದೆ. ಹೊರಗಿನ ಜಗತ್ತು ಹೇಗಿದೆ ನೋಡಬೇಕು ಅಂತ ಮನಸ್ಸು ಕುದಿಯುತ್ತಿದೆ. ಹೀಗಿರುವಾಗ ಪಾಪ, ಪಂಜರದಲ್ಲಿ ಸೆರೆಯಾಗಿರುವ ಈ ಗಿಣಿಗಳ ಪಾಡು ಎಷ್ಟು ದುಃಖಕರ !

(ಗಿಣಿಗಳು ದುಃಖದಿಂದ ಎಂಬಂತೆ ಕೂಗುವುವು).

ಯಶೋಧರಾ, ಈ ಗಿಣಿಗಳನ್ನು ಬಿಟ್ಟುಬಿಡು. ಅವಕ್ಕೆ ಇಷ್ಟ ಬಂದ ಕಡೆ ಹೋಗಿ ಹಾರಾಡಿಕೊಂಡು ನಲಿಯುತ್ತಿರಲಿ.

**ಯಶೋಧರೆ**–ಅವು, ನಿಮಗಾಗಿ ನಮ್ಮ ಕಾಣಿಕೆ.

**ಗೌತಮ**–ಎಂದಮೇಲೆ, ಅವು ನನ್ನವು. ಹಾರಿಹೋಗಲಿ, ಬಿಟ್ಟು ಬಿಡುತ್ತೇನೆ.

(ಪಂಜರದಿಂದ ಗಿಣಿಗಳನ್ನು ಹೊರಕ್ಕೆ ಬಿಡುವನು. ಉಲ್ಲಾಸದಿಂದ ಕೂಗುತ್ತ, ಪಟಪಟನೆ ರೆಕ್ಕೆ ಬಡಿಯುತ್ತ, ಅವು ಹಾರಿಹೋಗುವುವು)

**ಯಶೋಧರೆ**–ಅಯ್ಯೋ, ಹೊರಟೇಹೋದುವು, ಪ್ರೀತಿಯಿಂದ ಸಾಕಿದ ಗಿಣಿಗಳು.

**ಗೌತಮ**–ಪ್ರೀತಿ ಕೂಡ ಬಂಧನ, ಯಶೋಧರಾ. ಕರುಣೆಯೊಂದೇ ಪ್ರಾಣಿಗಳ ಬಿಡುಗಡೆಗೆ ಹೆಬ್ಬಾಗಿಲು.

**ಯಶೋಧರೆ**–ನನ್ನ ಮೇಲೆ ಕರುಣೆ ಇದೆಯಷ್ಟೆ ?

**ಗೌತಮ**–ನಾನು ನಿಷ್ಕರುಣಿಯಂತೆ ನಡೆದುಕೊಂಡಿರುವೆನೆ?

**ಯಶೋಧರೆ**–ಹಾಗಾದರೆ, ನಾನು ಹೊರಡಲು ಅಪ್ಪಣೆ ಕೊಡಿ.

**ಗೌತಮ**–ನೀವು ಪ್ರೀತಿಯಿಂದ ಕೊಟ್ಟ ಕಾಣಿಕೆಯನ್ನ ತೆಗೆದುಕೊಳ್ಳಲಿಲ್ಲವೆಂದು ಅಸಮಾಧಾನವೇನೋ? ನಿಮ್ಮ ಪಿತಾಜಿ ಕಳಿಸಿಕೊಟ್ಟ ಕಾಣಿಕೆಗಳಲ್ಲಿ ಒಂದು ಮಾತ್ರ ನನಗೆ ಒಪ್ಪಿಗೆಯಾಗಿದೆ ಎಂದು ಅವರಿಗೆ ತಿಳಿಸೋಣವಾಗಲಿ.

**ಯಶೋಧರೆ**–ಅಬ್ಬಾ ! ತುಂಬಾ ವಯಸ್ಸಾದವರಂತೆ ಮಾತಾಡುತ್ತೀರಿ ನೀವು !

**ಗೌತಮ**–ನಮ್ಮ ಪಿತಾಜಿ ಹೇಳುತ್ತಿರುತ್ತಾರೆ, ಮದುವೆಯ ವಯಸ್ಸಾಗಿದೆಯಂತೆ ನನಗೆ, ಅಷ್ಟೆ !

**ಯಶೋಧರೆ**–ಏನೋ ಅಂತ ಇದ್ದೆ, ನೀವು ತುಂಬ ನಿಷ್ಕರುಣಿ. ಇದು

**ಗೌತಮ**–(ಕುಸಿದು, ಕುಳಿತುಕೊಳ್ಳುವನು)

**ಮಹಾಬಲ**–ಇದೇಕೆ, ಹೀಗೆ ಕುಸಿದು ಕುಳಿತು ಬಿಟ್ಟೆ ?

**ಗೌತಮ**–(ಕುಳಿತೇ ಇದ್ದು) ನಾನು ನೋಡಲಾರೆ ; ಕೀಳಲಾರೆ ನೆಟ್ಟ ಬಾಣವನ್ನು, ನೀನು ಕೀಳು, ಮಹಾಬಲಾ. (ಕಣ್ಣು ಮುಚ್ಚಿಕೊಳ್ಳುವನು)

**ಮಹಾಬಲ**–(ಹಕ್ಕಿಯ ಹೊಟ್ಟೆಯಿಂದ ಬಾಣವನ್ನು ಕಣ್ಣು ಮುಚ್ಚಿಕೊಂಡು ಹೊರಕ್ಕೆ ಎಳೆದು ಹಾಕುವನು)

**ಗೌತಮ**–(ಕಣ್ಣು ಮುಚ್ಚಿಯೇ ಇರುವನು) ಬಾಣವನ್ನು ಕಿತ್ತು ತೆಗೆದೆಯಾ?

**ಮಹಾಬಲ**–ಕಿತ್ತು ತೆಗೆದೆ.

**ಗೌತಮ**–ಹಕ್ಕಿಯನ್ನು ನನ್ನ ತೊಡೆಯ ಮೇಲಿಡು.

**ಮಹಾಬಲ**–(ಇಟ್ಟು) ಇಟ್ಟಿದೇನೆ.

**ಗೌತಮ**–ಹಕ್ಕಿ ಬದುಕಿದೆಯೇ?

**ಮಹಾಬಲ**–ಸತ್ತಿಲ್ಲ.

**ಗೌತಮ**–ರಕ್ತವನ್ನು ನನ್ನ ವಸ್ತ್ರದಿಂದ ಒರಸು.

**ಮಹಾಬಲ**–(ಒರಸಿ) ಒರಸಿದೇನೆ.

**ಗೌತಮ**–ಬಾಣಬಿಟ್ಟವರು ಯಾರು, ಮಹಾಬಲ ?

**ಮಹಾಬಲ**–ಯಾರು ಅಂತ ಹೇಗೆ ಹೇಳುವುದು ?

(ಬಾಣವನ್ನು ಹಿಡಿದು ನೋಡುತ್ತ) ಇದು, ಬಹುಶಃ.

**ದೇವದತ್ತ**–(ಹಿಂದುಗಡೆಯಿಂದ ಬಂದು ಎದುರಿನಲ್ಲಿ ನಿಂತು) ಬಹುಶಃ....ಊಹೆ ಯಾಕೆ? ಬಾಣ ಬಿಟ್ಟವನು ನಾನು, ದೇವದತ್ತ.

**ಗೌತಮ**–(ಕಣ್ಣುಬಿಟ್ಟು) ದೇವದತ್ತ !

**ದೇವದತ್ತ**–ಈಗಲಾದರೂ ಒಪ್ಪಿಕೊ. ಬಿಲ್ಲು ವಿದ್ಯೆಯಲ್ಲಿ ಯಾರು ಬಲ್ಲಿದರು ಎಂದು.

**ಗೌತಮ**–(ಮೌನ)

**ದೇವದತ್ತ**–ಮಾತಾಡು, ಗೌತಮ–ಅಲುಗಾಡದ ವಸ್ತುವಿಗೆ ಗುರಿಯಿಟ್ಟು ಹೆಣ್ಣು ಮಗು ಬೇಕಾದರೂ ಬಾಣ ಹೊಡೆಯಬಲ್ಲದು. ಹಾರುವ ಹಕ್ಕಿಗೆ ಬಾಣ ಬಿಟ್ಟು ಕೊಲ್ಲಬಲ್ಲೆಯಾ ನೀನು?

**ಗೌತಮ**–(ಮೌನ)

**ದೇವದತ್ತ**–ಮಾತಾಡು, ಸೋದರ, ಯಾಕೆ ತಲೆ ತಗ್ಗಿಸಿದ್ದೀಯೆ, ಅಂದು ನನ್ನ ತಲೆ ತಗ್ಗಿಸಿದ ಮಹಾವೀರನೇ?

ಹೋಗುವುದಿಲ್ಲ.

**ಚೆನ್ನ**–ಸರಿ, ದೊರೆಯೆ.

(ಎಂದು ಈ ಕಡೆ ಹೊರಡುವನು. ಗೌತಮ ಮಹಾಬಲರು ಮುಂದಕ್ಕೆ ನಡೆದು ಹೋಗುವರು.)

**ನೋಟ ೫**

[ಅದೇ ಉದ್ಯಾನದ ಬೇರೊಂದು ಭಾಗ. ಗೌತಮ, ಮಹಾಬಲ, ನಡೆದು ಬರುತ್ತಿದ್ದಾರೆ.]

ಮಹಾಬಲ–ನಿನ್ನ ಬಹುಕಾಲದ ಬಯಕೆ ಈಡೇರಿತು, ಅಲ್ಲವೆ, ಗೌತಮಾ?

ಗೌತಮ–(ಬೇಸರದಿಂದ) ಈಡೇರಿತು, ಈಡೇರಿತು.

**ಮಹಾಬಲ**–ಅಲ್ಲ, ವಸಂತ ಋತುವಿನ ಹೂಗಿಡ ಮರ ಬಳ್ಳಿಗಳ, ಬೆಟ್ಟ ಗುಡ್ಡಗಳ, ತೊರೆ ಕೆರೆಗಳ, ತುಂಬಿ ತುಳುಕುವ ಚೆಲುವನ್ನು ಸವಿದಮೇಲೂ ನಿನ್ನ ಮನಸ್ಸು ಕುಗ್ಗಿದೆ, ಏಕೆ ಗೆಳೆಯಾ? ಆ ಚಿಟ್ಟೆ, ಆ ಮೈನಾ, ಆ ಕೋಗಿಲೆ, ಆ ತುಂಬಿ, ಆಕಾಶದಲ್ಲಿ ಮಾಲೆ ಕಟ್ಟಿದ ಬೆಳ್ಳೊಕ್ಕರೆಯ ಸಾಲು......

**ಗೌತಮ**–ಸಾಕು, ಮಿತ್ರ, ಸಾಕು, ನಿನ್ನ ಚೆಲುವಿನ ವರ್ಣನೆ. ಜಗತ್ತಿನ ತುಂಬ ಕ್ರೂರತನ ಹಿಂಸೆಗಳೇ ತುಂಬಿರುವಂತೆ ನನಗೆ ಕಾಣುತ್ತಿದೆ. ನೀನು ಚೆಲುವು ಎನ್ನುವುದು ಆ ಕ್ರೂರತನ ಹಿಂಸೆಗಳನ್ನು ಮುಸುಕಿರುವ ಬಣ್ಣದ ತೆರೆ. ನೆಲ ಉಳುತ್ತಿದ್ದನಲ್ಲ ಆ ಒಕ್ಕಲು ಮಗ, ಬಿಸಿಲಿನಲ್ಲಿ ಬೆವರು ಸುರಿಸುತ್ತ, ಅವನೆಷ್ಟು ಬಳಲಿದ್ದ? ಅರಮನೆಯಲ್ಲಿ ಹೀಗೆ ದುಡಿಯುತ್ತೇವೆಯೇ ನಾವು? ನೇಗಿಲು ಎಳೆಯತ್ತಿದ್ದ ಎತ್ತುಗಳು ಎಷ್ಟು ಉಬ್ಬಸಪಡುತ್ತಿದ್ದುವು? ನೇಗಿಲ ಗುಳಕ್ಕೆ ಸಿಕ್ಕಿದ ಕ್ರಿಮಿ ಕೀಟಗಳು ಹೇಗೆ ಸತ್ತು ಮೇಲೇಳುತಿದ್ದುವು? ಹಕ್ಕಿ ಹಾರಿ ಬಂದು ಅರೆಜೀವವಾಗಿದ್ದ ಆ ರೆಕ್ಕೆ ಹುಳುಗಳನ್ನು ಹೇಗೆ ಕುಕ್ಕಿ ಕುಕ್ಕಿ ಮೆಲ್ಲುತ್ತಿದ್ದುವು? ನೀನು ಮೆಚ್ಚಿಕೊಂಡ ಕೊಕ್ಕರೆ ನೀರಿನಲ್ಲಿ ನಿಂತು ಅದು ಹೇಗೆ ಕೊಕ್ಕಿನಿಂದ ಮೀನನ್ನು ಎತ್ತಿಕೊಂಡು ಜೀವ ಸಹಿತ ಕಬಳಿಸುತ್ತಿದ್ದುವು? ಜೀವಕ್ಕೆ ಜೀವವೇ ಜೀವನವೆನ್ನುವ ಪ್ರಪಂಚ ಇದು. ಚೆಲುವೇ, ಇದು ? ನಿಷ್ಕರುಣೆಯ ಪ್ರಪಂಚ....ನಿರ್ದಯ, ಹಿಂಸೆ.......... (ಮೇಲೆ ನೋಡುತ್ತ) ಅದೋ, ಮತ್ತೆ ಆ ಕೊಕ್ಕರೆ ಸಾಲು—

(ಕಾಲ ಬಳಿ ಒಂದು ಕೊಕ್ಕರೆ ತೊಪ್ಪನೆ ಕೆಡೆದು ಬೀಳುವುದು)

ಹಾ ! ಇದೇನು ! ಕಾಲ ಬಳಿ ಕೆಡೆದುಬಿತ್ತು ಈ ಕೊಕ್ಕರೆ !

**ಮಹಾಬಲ**–ಅದರ ಹೊಟ್ಟೆಯಲ್ಲಿ ಬಾಣ ನಾಟಿ ಕೊಂಡಿದೆ.

## ನೋಟ ೬

[ಮೊದಲ ದೃಶ್ಯದ ಮಂತ್ರಾಲೋಚನೆಯ ಓಲಗಸಾಲೆ]

**ಮಹಾನಾಮ**–ಪ್ರಭೂ, ತಾವು ನನಗೆ ಗೌತಮ ಕುಮಾರನ ಸ್ಥಿತಿಯ ವಿಚಾರ ಅಪ್ಪಣೆಕೊಡಿಸಿದಿರಿ. ಆ ವಿಚಾರವಾಗಿ ಚೆನ್ನಾಗಿ ಆಲೋಚನೆ ಮಾಡಿದೆನು. ಇನ್ನು ಎಂದೂ ಅವರನ್ನ ಅರಮನೆಯ ಹೊರಗಡೆಗೆ ಬಿಡಕೂಡದು. ಅವರ ಕರುಣೆಯ ಸ್ವಭಾವ ಹೊರಗಿನ ಪ್ರಪಂಚದ ಸಂಗತಿಗಳ ಪ್ರಭಾವದಿಂದ ಹಾಗೇ ಬೆಳೆಯುವುದಕ್ಕೆ ಅವಕಾಶ ಕೊಟ್ಟರೆ, ಅಸಿತಮುನಿಗಳ ಭವಿಷ್ಯ ನಿಜವಾಗುವುದು. ಲೋಕದ ಜಂಜಡವನ್ನು ಕಂಡು, ಅವನು ವೈರಾಗ್ಯ ಹೊಂದಬಹುದು ; ವೈರಾಗ್ಯ ಹುಟ್ಟಿದರೆ, ಮನೆಮಠ ತೊರೆದು ಸಂನ್ಯಾಸಿಯಾಗಬಹುದು. ಆದ್ದರಿಂದ, ಅವರ ಹೃದಯದಲ್ಲಿ ಕರುಣೆ ಉಕ್ಕದಂತೆ ನಾವು ನೋಡಿಕೊಳ್ಳಬೇಕು.

ಶುದ್ಧೋದನ–ಮುನಿಗಳ ಭವಿಷ್ಯ ಎಂದಾದರೂ ಸುಳ್ಳಾದೀತೆ. ನನಗೆ ಅದೇ ಅಳುಕು.

**ಮಹಾನಾಮ**–ಮನುಷ್ಯ ಪ್ರಯತ್ನದಲ್ಲಿ ಸಾಧ್ಯವಿರುವುದನ್ನೆಲ್ಲ ನಾವು ಮಾಡಬೇಕು. ವೈರಾಗ್ಯವನ್ನು ಮೊಳಕೆಯಲ್ಲೆ ಮುರಿಯಬೇಕು.

**ಶುದ್ಧೋದನ**–ಅದು ಹೇಗೆ ಸಾಧ್ಯ, ಮಂತ್ರಿವರ್ಯರೇ?

**ಮಹಾನಾಮ**–ಚಿಕ್ಕವಯಸ್ಸಿನ ವೈರಾಗ್ಯಕ್ಕೆ ಮದ್ದು ಮದುವೆ. ಬೇಗ ಮದುವೆಮಾಡಿ ಕುಮಾರರಿಗೆ.

**ಶುದ್ಧೋದನ**–(ನಕ್ಕು) ವೈರಾಗ್ಯದ ಹಾದಿಯಲ್ಲಿರುವವನಿಗೆ ಹೆಣ್ಣು ಕೊಡುವವರು ಯಾರು? ಆಗ ಹೋಗದ ಮಾತು.

**ಮಹಾನಾಮ**–ಈ ಸೇವಕನು ಪ್ರಭುಗಳ ಸೇವೆಗೆ ಸಿದ್ಧನಾಗಿದಾನೆ.

**ಶುದ್ಧೋದನ**–ಏನು. ಕುಮಾರಿ ಯಶೋಧರೆಯನ್ನು ನಮ್ಮ ಗೌತಮ ಕುಮಾರನಿಗೆ ನೀವು ಕೊಡಲೊಪ್ಪುವಿರಾ?

**ಮಹಾನಾಮ**–ಒಬ್ಬರನ್ನೊಬ್ಬರು ಮೆಚ್ಚಿಕೊಂಡಿರುವಾಗ, ಮದುವೆ ಎನ್ನುವುದು ನಮ್ಮ ಸಂತೋಷಕ್ಕೆ.

**ಶುದ್ಧೋದನ**–ನೀವು ಹೇಳುವುದು ನಿಜವೆ? ನಿಮ್ಮ ಮಾತನ್ನ ನಂಬಲೆ ?

**ಮಹಾನಾಮ**–ಪ್ರಭುಗಳ ಸನ್ನಿಧಿಯಲ್ಲಿ ಎಂದಾದರೂ ಸತ್ಯವನ್ನು ಮರೆಮಾಚಿರುವೆನೆ ?

**ಶುದ್ಧೋದನ**–ನಿಮ್ಮ ಮಾತಿನಲ್ಲಿ ಅಪನಂಬಿಕೆ ಇಟ್ಟುಕೊಂಡದ್ದಕ್ಕೆ ಬೇಸರಮಾಡಿಕೊಳ್ಳಬಾರದು. ಮಂತ್ರಿವರ್ಯ. ನಮ್ಮಿಬ್ಬರಿಗೂ ಸಂತೋಷವಾಗುವ ಪ್ರಯತ್ನಕ್ಕೆ ನಾನು ಏಕೆ ಅಡ್ಡಿ ಮಾಡಲಿ.

**ಮಹಾಬಲ–**ಹಕ್ಕಿಯ ಸಾವನ್ನ ನೋಡಲಾರದೆ ಕರುಣೆಯಿಂದ ಮೂರ್ಛೆ ಹೋಗಿದ್ದಾನೆ. ಈ ಕರುಣಾ ಮೂರ್ತಿಯನ್ನ ಕೆಣಕಲು ನಿನಗೆ ಮನಸ್ಸಾದರೂ ಹೇಗೆ ಬಂತು ?

**ದೇವದತ್ತ–**ಕರುಣಾಮೂರ್ತಿ ! ಕರುಣೆ ಹೆಣ್ಣಿನ ಗುಣ, ಮಹಾಬಲಾ, ರಕ್ತಕಂಡು ಮೂರ್ಛೆ ಹೋಗುವವರು ಹೆಂಗಸರು, ಕ್ಷತ್ರಿಯ ಕುಮಾರರಲ್ಲ !

**ಮಹಾಬಲ–**ಅಯ್ಯೊ, ಇನ್ನೂ ಎಚ್ಚರಗೊಳ್ಳಲಿಲ್ಲವಲ್ಲಾ ! (ಗಟ್ಟಿಯಾಗಿ ಕೂಗುವನು) ಚೆನ್ನಾ, ಚೆನ್ನಾ !

**ಗೌತಮ–**(ಕಣ್ಣು ಬಿಟ್ಟು) ಮಹಾಬಲ, ಯಾಕೆ, ಚೆನ್ನನನ್ನ ಕೂಗಿ ಕರೆಯುತ್ತಿದ್ದೀಯೆ, ಏನಾಯಿತು ?

**ಮಹಾಬಲ–**(ಸಂತೋಷದಿಂದ ನಿಟ್ಟುಸಿರುಬಿಟ್ಟು) ಸದ್ಯ. ಎಚ್ಚರವಾಗಿರುವೆಯೆಲ್ಲ. ನೀನು ಮೂರ್ಛೆ ಹೋಗಿದ್ದೆ ಎಂದು ಭಾವಿಸಿದೆ. ಏನೂ ಆಗಿಲ್ಲವಷ್ಟೆ?

**ಗೌತಮ–**ಮೂರ್ಛೆ ! ಮೂರ್ಛೆ ಹೋಗಿದ್ದೆನೆ ನಾನು ? ಇರಲಾರದು– ಅಂತೂ, ನನ್ನ ಮನಸ್ಸು, ಅದು ಎಲ್ಲೋ ಹೋಗಿತ್ತು.

**ದೇವದತ್ತ–**ಗೌತಮಾ, ನನ್ನ ಗುರಿಯೇಟಿಗೆ ಸಿಕ್ಕಿ ಸತ್ತ ಹಕ್ಕಿಯನ್ನ ಇತ್ತ ತಾ, ಅದು ನನಗೆ ಸೇರಿದ್ದು.

**ಗೌತಮ–**ಅದು ಸತ್ತಿಲ್ಲ, ನನ್ನ ಹೃದಯದ ಕಾವು ಕೊಟ್ಟು ಅದನ್ನ ಬದುಕಿಸಿದ್ದೇನೆ. ಅದು ನನಗೆ ಸೇರಿದ್ದು, ಕೊಡುವುದಿಲ್ಲ.

**ಮಹಾಬಲ–**ವ್ಯಾಜ್ಯಬೇಡಿ. ಯಾರಿಗೆ ಸೇರಿದ್ದೆನ್ನುವುದನ್ನ ಮಹಾಪ್ರಭುಗಳು ನಿರ್ಣಯಿಸಲಿ. ಊರಿಗೆ ಹಿಂದಿರುಗೋಣ, ನಡೆಯಿರಿ–(ಹಿಂದಕ್ಕೆ ತಿರುಗಿ) ಚೆನ್ನಾ, ಚೆನ್ನಾ

(ರಥ ಬರುತ್ತಿರುವ ಸದ್ದು)

ಓ, ಅವನೇ ಇತ್ತ ಬರುತ್ತಿದಾನೆ. ಬನ್ನಿ ಹೋಗೋಣ. ಇಲ್ಲಿ ಬೇಡ ಅನಗತ್ಯ ವ್ಯಾಜ್ಯ.

**ದೇವದತ್ತ–**ಹಾಗೆಯೆ ಆಗಲಿ. ನಿಮ್ಮ ರಥದಲ್ಲಿ ನನಗೂ ಸ್ಥಳ ಉಂಟೋ?

**ಗೌತಮ–**ನಿನಗೆ ನಮ್ಮ ರಥದಲ್ಲಿ ಮಾತ್ರವಲ್ಲ, ಹೃದಯದಲ್ಲೂ ಉಂಟು. ಅಗತ್ಯವಾಗಿ ಬಾ (ಹಕ್ಕಿಯನ್ನು ಎತ್ತಿಕೊಂಡು ರಥ ಬರುತ್ತಿದ್ದ ಕಡೆಗೆ ಹೆಜ್ಜೆಹಾಕುವನು. ಮಹಾಬಲ, ದೇವದತ್ತ ಹಿಂಬಾಲಿಸುವರು)

**ಮಹಾನಾಮ**–ಅಂದರೆ.....

**ಶುದ್ಧೋದನ**–ಮದುವೆಯ ಮಂಗಳಕ್ಕೆ ಏರ್ಪಾಡುಮಾಡಿ, ಮಂತ್ರಿವರ್ಯ.

**ಮಹಾನಾಮ**–ಪ್ರಭುಗಳ ಚಿತ್ತ, ಕುಮಾರರ ಕಲ್ಯಾಣ–

**ಶುದ್ಧೋದನ**–ರಾಜ್ಯದ ಕಲ್ಯಾಣ : ಲೋಕದ ಕಲ್ಯಾಣ.

(ಮಂಗಳವಾದ್ಯ)



# ನೋಟ ೧

[ಕಪಿಲವಸ್ತು : ಶಾಕ್ಯವಂಶದ ಶುದ್ಧೋದನ ಮಹಾರಾಜನ ಮಂತ್ರಾಲೋಚನೆಯ ಓಲಗಸಾಲೆ.]

**ಶುದ್ಧೋದನ–** (ಚಿಂತಾಮಗ್ನನಾಗಿ ಭದ್ರಾಸನದ ಮೇಲೆ ಕುಳಿತಿರುವನು. ತಟ್ಟನೆ ಎದ್ದು) ಅಸಿತಮುನಿಗಳ ಭವಿಷ್ಯ–

ನಿಜವಹುದೆ, ನಿಜವಹುದೆ? ಧರ್ಮಸಾಮ್ರಾಜ್ಯಕ್ಕೆ
ಒಡೆಯನಹನಾಳುವನು ಮಾನವರ ಮನಗಳನು
ಶತಶತಸಹಸ್ರವರ್ಷಗಳ ಕಾಲ; ಇಲ್ಲದಿರೆ,
ಅಂಗೈಯ ಅಳತೆಯಿೊ ಶಾಕ್ಯನೆಲದೆಲ್ಲೆಯನು
ಕೆಳಗೆ ಮುನ್ನೀರ ಮೈಸೋಂಕುವಂತೆಳೆಯುವನು,
ಅಳೆಯುವನು ಭೂಮಂಡಲವ ಕೀರ್ತಿದಂಡದಿಂದ
ಭರತವರ್ಷದ ಸಾರ್ವಭೌಮನಾಗುವನು.........
ಅಹುದಹುದು, ಭರತವರ್ಷದ ಸಾರ್ವಭೌಮನಹನು.
ಚಕ್ರವರ್ತಿಯ ಚಿಹ್ನವೆಲ್ಲವನು ಕಂಡ ಮುನಿ
ನುಡಿದ ವಾಕ್ಯಕ್ಕೆ ಇದೇ ಸಮುಚಿತಾರ್ಥ.

**ಪ್ರತಿಹಾರಿ–** (ಪ್ರವೇಸಿಸಿ, ನಡುವಾಗಿ ನಮಸ್ಕರಿಸಿ) ಮಹಾಪ್ರಭುಗಳ ಅಪ್ಪಣೆಯಾದಂತೆ, ಆಚಾರ್ಯ ವಿಶ್ವಾಮಿತ್ರರು ಇತ್ತ ದಯಮಾಡಿಸುತ್ತಿರುವರು.

ಶುದ್ಧೋದನ–ಸಂತೋಷ. ಈ ಆಸನವನ್ನು ತಕ್ಕಂತೆ ಅನುಗೊಳಿಸಿ ಆಚಾರ್ಯರನ್ನು ಕರೆದು ತಾ.

**ಪ್ರತಿಹಾರಿ–** (ಮಹಾರಾಜನ ಪಕ್ಕದಲ್ಲಿ, ತುಸ ದೂರದಲ್ಲಿದ್ದ ಇನ್ನೊಂದು ಭದ್ರಾಸನವನ್ನು ಸನಿಯಕ್ಕೆ ಸರಿಸಿ, ರಾಜಪೀಠಕ್ಕೆ ಅರ್ಧ ಅಭಿಮುಖವಾಗುವಂತೆ ಅದನ್ನು ನೆಲೆಗೊಳಿಸಿ, ರಾಜನಿಗೆ ಪ್ರಣಾಮಮಾಡಿ, ತೆರಳುವನು.)

[ಆಚಾರ್ಯ ವಿಶ್ವಾಮಿತ್ರರು ಪ್ರವೇಶಿಸುವರು.]

**ಶುದ್ಧೋದನ–** (ಅವರ ಕಡೆ ಅಭಿಮುಖನಾಗಿ)ಆಚಾರ್ಯ, ನಮಿಸುವೆನು. (ಶಿರಬಾಗಿ ನಮಸ್ಕರಿಸುವನು)

**ವಿಶ್ವಾಮಿತ್ರ–** ಶುಭಂ ಭವತು.

ಕರೆ ಕಳುಹಿದಂತೆ ಬಂದಿಹೆ, ಮಹಾರಾಜ.

## ಪಾತ್ರಗಳು

| | | |
|---|---|---|
| ೧ | ಶುದ್ಧೋದನ | ಕಪಿಲವಸ್ತುವಿನ ಮಹಾರಾಜ |
| ೨ | ವಿಶ್ವಾಮಿತ್ರ | ಆತನ ಕುಲಗುರು |
| ೩ | ಪ್ರತಿಹಾರಿ | |
| ೪ | ಮಹಾನಾಮ | ಮಹಾಸಚಿವ |
| ೫ | ಗೌತಮ–ಸಿದ್ಧಾರ್ಥ | ರಾಜಕುಮಾರ |
| ೬ | ಮಹಾಬಲ | ಮಹಾನಾಮನ ಪುತ್ರ |
| ೭ | ಯಶೋಧರೆ | ಮಹಾನಾಮನ ಪುತ್ರಿ |
| ೮ | ಮಧುಮತಿ | ಯಶೋಧರೆಯ ಗೆಳತಿ |
| ೯ | ಚೆನ್ನ | ಸಾರಥಿ |
| ೧೦ | ದೇವದತ್ತ | ಶುದ್ಧೋದನನ ತಮ್ಮನ ಮಗ |

ಉಂಟಾಯ್ತೆನಗೆ, ಇಲ್ಲವಾಯ್ತವನ ತಾಯ್ಗೆ, ಆ
ನಿರ್ಭಾಗ್ಯೆ, ಏಳು ದಿನಗಳ ಶಿಶುವ ಬಿಟ್ಟೆನ್ನ
ಕೈಗಿತ್ತು ಕಣ್ಮುಚ್ಚಿ ದಿವಕೇರಿದಾ ನನ್ನ
ಮಡದಿ ಮಾಯೆಗೆ; ಕಿರಿಯ ತಾಯಿಯಾರೈಕೆಯಲಿ
ಬಳೆದ ತಬ್ಬಲಿ ಎಂಟು ವರ್ಷದೆಳಗುವರನನು
ನಿಮ್ಮ ತೋಳಾರೈಕೆಗೊಪ್ಪಿಸಿದೆ; ಕಲಿಸಿದಿರಿ
ಬೆಳಸಿದಿರಿ ಅವನ, ಹದಿನಾರರಾ ಹರೆಯದಲಿ
ಷೋಡಶಕಲಾಪೂರ್ಣಚಂದ್ರನಂತವನಿಂದು
ಸಕಲಕಲೆಗಳ ತುಂಬಿಕೊಂಡೆಸೆವ ರೀತಿಯಲಿ.
ಬೆದೆಯರಿತು ಬೇಸಾಯಮಾಡದಿರೆ ಬೆಳೆ ಬಹುದೆ
ಆಚಾರ್ಯ? ಎನಿತದೊಳಿತಿರಲಿ ಬಿತ್ತಿದ ಕಾಳು,
ಬಿಸಿಲು ಸೋಂಕದೆ ಮೊಳಕೆಯೊಡೆಯುವುದೆ?

**ವಿಶ್ವಾಮಿತ್ರ–** ಪ್ರಭುವಿನಭಿಮಾನ.

**ಶುದ್ಧೋದನ–** ಮಾತಿನಲಿ ಮುಗಿವ ಅಭಿಮಾನ ಬಿಳಿಮುಗಿಲು.
ಶಿಷ್ಯನು ಸಮರ್ಪಿಸುವ ಗುರುದಕ್ಷಿಣೆಯ ಸಲಿಕೆ
ಸಲಿಸಬೇಕೆಂದಿಹೆವು, ತಮ್ಮನುಗ್ರಹಕಾಗಿ
ಕಾದಿಹೆವು ; ರಾಜಸಭೆಯಲಿ ಕುಮಾರನ ಕೈಲಿ
ಒಪ್ಪಿಸುವುದೆಮ್ಮ ಸಚಿವರ ಮಹಾನಾಮರೆಣಿಕೆ.

**ವಿಶ್ವಾಮಿತ್ರ–** ಕುಲಗುರುವಲಾ ನಾನು? ಗುರುಕುಲಕೆ ಗೌತಮನು
ಬಂದಿಹನೆ, ದಕ್ಷಿಣೆಯ ಮಾತು. ಸಂತಸದ ಹೊಣೆ
ನನ್ನದಾಯ್ತವಗೆ ವಿದ್ಯೆಯ ಕಲಿಪ ಸೈಪೊದವಿ.
ಸರ್ವಾರ್ಥಗಳನೀವ ಸಕಲವಿದ್ಯೆಗಳವನ
ಓಲೈಸೆ ತಾವಾಗಿ ಸಿದ್ಧಿಸುತ ಅವನಿಂದು
'ಸಿದ್ಧಾರ್ಥ'ನೆನಿಸಿಹನು; ನನ್ನ ಕರ್ತವ್ಯಕ್ಕೆ
ಮೂಡಿಸಿರುವನು ಕೋಡು.

**ಶುದ್ಧೋದನ–** ನಿಮ್ಮ ಕರ್ತವ್ಯವದು
ಮುಗಿದಿಹುದು, ನಮ್ಮದನು ನಾವೆಸಗಬೇಡವೇ?

**ವಿಶ್ವಾಮಿತ್ರ–** ಪ್ರಭುಚಿತ್ತ. ಗುರುದಕ್ಷಿಣೆಯ ತೆರನ ತಿಳಿಸುವೊಡೆ
ಅವಕಾಶವೀಯಬೇಕೆನಗೆ.

ಏನನುಜ್ಞೆ ?

**ಶುದ್ಧೋದನ–** ನಿಮ್ಮನುಜ್ಞೆಯ ತಳೆಯೆ ಬಾಗಿಹುದು ಶಿರ ಸತತ. ಕೃಪೆ ಮಾಡಿ ಪೀಠಸ್ಥರಾಗಿರಿ, ಅರಿಕೆಯಮಾಡುವೆನೆನ್ನ ಬಯಕೆ ಬಿನ್ನಪವ.

**ವಿಶ್ವಾಮಿತ್ರ–** (ಪಕ್ಕದ ಪೀಠದ ಮೇಲೆ ಕುಳಿತು) ನಿನ್ನಂಥವರ ಬಯಕೆ, ನನ್ನ ಹಣ್ಣನು ಕೊಯ್ದು ತಿನ್ನಿರಣ್ಣಾ ಎಂಬ ಫಲವೃಕ್ಷದಾಪೇಕ್ಷೆ.

**ಶುದ್ಧೋದನ–** ಬರಡುಮರದಿಂದ ಫಲವೇ ಕಲ್ಪವೃಕ್ಷಕ್ಕೆ?

ನಿಮ್ಮಿಂದ ನಾ ಪಡೆದ ಫಲಭಾರಕಿಹುದೆ ಪಡಿ?
ಗೌತಮ ಕುಮಾರನನು ಸಕಲ ವಿದ್ಯೆಗಳಲ್ಲಿ
ಪಾರಗಾಣಿಸಿ ನನ್ನ ಋಣಿಯಾಗಿ ಮಾಡಿಹಿರಿ :
ವೇದವೇದಾಂಗಶಾಸ್ತ್ರಾಧ್ಯಯನವೊಂದು ಕಡೆ
ಪರಮಾರ್ಥಕಾಯ್ತು ; ಅಶ್ವಾರೋಹ ಸಾರಥ್ಯ
ಬಿಲ್ಲುಬಾಣದ ವಿದ್ಯೆ ಕ್ಷತ್ರಿಯೋಚಿತವಾಯ್ತು;
ಬುದ್ಧಿಯನು ಬೆಳಗಿ ತಿಳಿವನು ತುಂಬಿ, ಹೂಮೆಯ್ಯ–
ನುಕ್ಕುಮಾಡಿಹಿರಿ, ದೊರೆತನದ ಹೊರೆಗನುಗೊಳಿಸಿ.

**ವಿಶ್ವಾಮಿತ್ರ–** ಅದು ಕುಮಾರನ ಹಿರಿಮೆ: ಬೀಜವಿಲ್ಲದೆ ಬೆಳೆಯ ಬೆಳೆಯಲಾಪನೆ ತಾನು ಏನೆಂಥ ಉತ್ಕೃಷ್ಟ

ಬೆವಸಾಯಗಾರ ? ಗೌತಮನಲ್ಲಿ ಅಡಗಿತ್ತು
ಸಕಲ ವಿದ್ಯಾರಾಶಿ ಬೀಜರೂಪದಲಿ. ನಾ
ಕಲಿಸಿದ್ದು ಅತ್ಯಲ್ಪ. ನೀ ಬಲ್ಲೆ, ರಾಜನ್,
ಅಂದಂದೆ ಅರುಹುತಿದ್ದೆನು ಅವನ ಏಳ್ಗೆಯನು.

**ಶುದ್ಧೋದನ–** ಅಹುದಹುದು, ನಾ ಬಲ್ಲೆ : ಓದಾಟವೇ, ಕಾವ್ಯ

ಶಾಸ್ತ್ರವಂಗ್ಯೆನೆಲ್ಲಿ, ನಾಲಗೆಯ ಜೇನುಮಳೆ;
ಗಣಿತವೇ, ನಕ್ಷತ್ರವೆಣಿಸುವನು ಕೋಟಿಯಲಿ,
ಪದ್ಮದಲಿ ; ಹುಬ್ಬೆತ್ತಿನಲಿ ಹಿಮಾಲಯವನಳೆಯುವನು;
ಇವನೆಣಿಕೆಗೊಳಗು ಸಾಗರದ ಹನಿ, ಮರದೆಲೆ;
ಚಕ್ರ ನೆಲಸೋಂಕದೊಲು ರಥಬಿಡುವ ಕೌಶಲ,
ವಾಘೆಯಿಲ್ಲದೆ ಕುದುರೆಯೋಡಿಸುವ ಬಲ್ಮೆ, ಶರ–
ವೇಗವನು ಮುಂಚಿ ; ನೆರೆತೆಗೆದು ಬಾಣವ ಬಿಟ್ಟು
ಗುರಿಹೊಡೆವ ಗರಿಮೆ – ಇವನೆಲ್ಲ ಕಾಣುವ ಸೈಪು

ಗೆಲವ, ಅದರಿಂದ ಪ್ರಭು ಪಡೆದ ನಲವ, ಕೈಗೂಡಿದ ಯಶೋಧರೆಯ ಮನದೊಲವ, ಕಂಡುಂಡು ಸುಖಿಸಿದ ನನಗೆ. ಕುಳಿತುಕೋ ಮಗು.

(ಮಹಾಬಲನು ಪಕ್ಕದ ತಗ್ಗುಪೀಠವೊಂದರ ಮೇಲೆ ಕುಳಿತುಕೊಳ್ಳುವನು.)

ನೀನು ಮೇಲಾಟದಲಿ ಪಾಲುಗೊಳಲಿಲ್ಲ–
ಏಕೆ? ಅಸ್ವಸ್ಥನಾಗಿಹೆಯೊ? ನಾ ಗೆಲಲಾರೆ
ಎಂಬಳುಕೊ?

**ಮಹಾಬಲ–** ನೋಡಿದಿರಲಾ ನೀವೆ ಅಪ್ಪಾಜಿ?
ನಾನಾವ ವಿದ್ಯೆಯಲಿ ಗೌತಮನ ಹೆಗಲೆಣೆಗೆ
ಸೆಣಸಿ ಸಮ ನಿಲುತಿದ್ದೆ, ಗೆಲುವ ಮಾತಂತಿರಲಿ?
ಅದಕೆಂದೆ ಹಿಂದುಳಿದೆ : ನನ್ನ ಸೋಲನು ಕಂಡು
ಗೌತಮನು ಪಡುವಳಲು ನನ್ನಳಲ ಹೆಚ್ಚಿಸದೆ?
ಇಬ್ಬರೇ ಬಲ್ಲಿದರು ಬಿಲ್ವಿದ್ಯೆಯಲಿ, ದೇವ–
ದತ್ತನೊಬ್ಬನು, ಅವನನುಳಿಯೆ ಗೌತಮನೊಬ್ಬ :
ಇವನವನ, ಅವನಿವನ, ಸೆಣಸುವಂತಾಯ್ತಲಾ
ಮೊದಲಾಯ್ಕೆಯಲ್ಲರಸು ಕುವರರೆಲ್ಲಾ ಸೋತು?

**ಮಹಾನಾಮ–** ಅಹುದಹುದು : ಒಂದೆ ಲಕ್ಷ್ಯಕ್ಕೆಸೆದ ಅವರ ಶರ–
ವೆರಡಾಗ ಒಂದೆ ಶರವೆಂಬಂತೆ ನಾಟಿತ್ತು
ಲಕ್ಷ್ಯದಲಿ, ಏಕಕಾಲದಲಿ, ಮರುಪಂದ್ಯಕ್ಕೆ
ಎಡೆಯಿತ್ತು.

**ಮಹಾಬಲ–** ನೋಡಿದಿರ, ಅಪ್ಪಾಜಿ, ಆ ವೇಳೆ
ಸೋದರಿ ಯಶೋಧರೆಯ ಗೆಲವುಗೂಡಿದ್ದ ಮುಖ
ಮಂಕಾಯ್ತು, ಗೌತಮನ ಗೆಲವಿನಲಿ ಸಂದೇಹ
ಮೊಳೆತು.

**ಮಹಾನಾಮ–** ಮರುಚಣವೆ ಚೆದರಿತ್ತು ಆ ಸಂದೇಹ,
ಗೌತಮಜಯೋದಯದ ಹೊಂಗಿರಣ ಹರಡಿ.

**ಮಹಾಬಲ–** ಅಹುದು, ಅಪ್ಪಾಜಿ.

**ಮಹಾನಾಮ–** ಮುಳುಗಿತ್ತು ನಿನ್ನ ತಂಗಿಯ
ಯೋಚನೆಯ ಸುಳಿಯಲಿ ಸಿಲುಕಿ ನನ್ನ ಮನಸ್ಸು;
ತೆಪ್ಪನಾದುವು ಮನಕೆ ಬೇಡದಿಹ ಕಣ್ಣುಕಿವಿ.

**ಶುದ್ಧೋದನ–** ಆಗಬಹುದು.

**ವಿಶ್ವಾಮಿತ್ರ–** ಕಿರೀಟಪ್ರಾಯವದು ಕ್ಷತ್ರಿಯಕುಮಾರಂಗೆ
ಕ್ಷಾತ್ರವಿದ್ಯೆ. ನೆರೆಯಿಸಿ ಕಪಿಲವಸ್ತುವಿನಲ್ಲಿ
ಕ್ಷತ್ರಿಯಕುಮಾರರನು, ಶೌರ್ಯಪ್ರದರ್ಶನವ–
ನೇರ್ಪಡಿಸಿ, ಅದರೊಳು ಕುಮಾರ ಗೌತಮನ ತೋಳ್–
ಬಲ, ಹಸ್ತಕೌಶಲ, ಧನುರ್ವಿದ್ಯೆಗಳ ಕಂಡು
ನೆರೆದಿಹ ಕುಮಾರರಿಗೆ ಕರುಬು ನೆರೆಯುಕ್ಕಿದರೆ
ನನ್ನ ಹಿಗ್ಗಿಗೆ, ನಿನ್ನ ಹೆಮ್ಮೆಗೆಲ್ಲಿಹುದೆಣೆ?
ಶಿಷ್ಯನೇಳ್ಗೆಯ ಕಂಡು ನಲಿಯುವುದಕಿಂತಲೂ
ಉಂಟೆ ಗುರುದಕ್ಷಿಣೆ?

**ಶುದ್ಧೋದನ–** ಅಂತೆಯೇ ಆಗಲಿ;
ನೆರೆಯಿಸುವೆ ಶೌರ್ಯಪ್ರದರ್ಶನದ ಪಂದ್ಯವನು,
ನಲಿವ ಹಿಗ್ಗುವ ಕಂಡು ಗೌತಮನ ಗೆಲವ.

(ತೆರೆ)

## ನೋಟ ೨

[ಮಹಾಸಚಿವ ಮಹಾನಾಮನ ಭವನದಲ್ಲಿ, ಆತನ ಕಾರ್ಯಾಗಾರ. ಮಹಾನಾಮನು ಆಸನಾಸೀನನಾಗಿರುವನು. ಪುತ್ರ ಮಹಾಬಲನು ಬಂದು ಬಲಕೆಲದಲ್ಲಿ ಕೈಕಟ್ಟಿ ನಿಲ್ಲುವನು.]

**ಮಹಾಬಲ–** ಹೇಳಿ ಕಳುಹಿದಿರಂತೆ, ಕಾರ್ಯವೇನಪ್ಪಾಜಿ?

**ಮಹಾನಾಮ–** ನೀನೆನ್ನ ಹಿರಿಯ ಮಗ. ಮುಖ್ಯ ಗೃಹಕಾರ್ಯವನು
ಕೈಕೊಳ್ಳುವವಸರದಿ ಮಗನ ಸಲಹೆಯ ಪಡೆದು
ಹೆಜ್ಜೆ ಮುಂದಿಡುವುದೊಳ್ಳಿತು, ಇದು ಸದಾಚಾರ.
ಅದಕೆಂದೆ ಕರಸಿಕೊಂಡೆನು ನಿನ್ನ.

**ಮಹಾಬಲ–** ಅಪ್ಪಾಜಿ,
ಇಂದಿನಾ ಶೌರ್ಯ ಪ್ರದರ್ಶನದ ಸಿದ್ಧತೆಯ
ಸಂವರಣೆಯಲಿ ತಾವು ಬಳಲಿಹಿರಿ. ವಿಶ್ರಾಂತಿ
ಪಡೆಯಿರಪ್ಪಾಜಿ ನೀವೀಗ. ಮತ್ತೊಮ್ಮೆ ಬರುವೆ.

**ಮಹಾನಾಮ–** ಮಗೂ, ಪಟ್ಟ ಬಳಲಿಕೆಯೆಲ್ಲ ಪರಿಹಾರವಾಗಿಹುದು, ಗೌತಮನ

ನನಗೆ ತೋರುವುದಿಂತು : ಕ್ಷಾತ್ರ ಧರ್ಮಾನುಗುಣ
ನೆರೆಯಲಿ ಸ್ವಯಂವರವು, ಗೌತಮನ ಕರದ ಜಯ–
ಮಾಲೆ ಕೊರಳಿಗೆ ವರಣಮಾಲೆಯಾಗೇರಲಿ.

**ಮಹಾಬಲ–** ಅದಕೆ ಸಂಶಯವಿಲ್ಲ, ಅಪ್ಪಾಜಿ. ನಡೆಯಲಾ
ಸ್ವಯಂವರದ ನಾಟಕ. ಅದಕೆ ನಾಂದಿಯ ತೆರದಿ
ಹೃದಯ ಧರ್ಮದ ಹೊಲಬ ಹಸನುಗೈವುದವಶ್ಯ.
ಗೌತಮ ಯಶೋಧರೆಯರಾಂತರ್ಯದೊಲವೆಂತೊ
ಪರಿಕಿಸುವ, ನಿರುಕಿಸುವ ನಲ್ಮೆಗಳ ನೆಲೆಯನ್ನು.
ನೆಪಕೆ ಸ್ವಯಂವರವ ನಡಸೆ ನಷ್ಟವದಿಲ್ಲ,
ಬಿಟ್ಟರೂ ಇಲ್ಲ. ತೋರುವುದಿಂತು ನನಗೆ.

**ಮಹಾನಾಮ–**ನಿನ್ನ ಹರೆಯದ ನೋಟಕಿದೆ ಕೂರ್ಪು. ನೋಟಕ್ಕೆ
ತಕ್ಕ ನುಡಿಯಾಡಿರುವೆ, ನನಗದೊಪ್ಪಿಗೆಯಾಯ್ತು.
ನೀನೆ ಆ ನಾಂದಿಯನು ರಚಿಸು.

**ಮಹಾಬಲ –** ನಿಮ್ಮಾಜ್ಞೆ, ಅಪ್ಪಾಜಿ.

(ತೆರೆ)

## ನೋಟ ೩

[ಶುದ್ಧೋದನ ಮಹಾರಾಜನ ಅರಮನೆ ; ರಾಜಕುಮಾರ ಗೌತಮನ ಕೋಣೆ. ಕುಮಾರನೂ ಮಹಾಸಚಿವ ಮಹಾನಾಮನ ಪುತ್ರ ಮಹಾಬಲನೂ ಸಂಭಾಷಣೆಯಲ್ಲಿ ತೊಡಗಿದ್ದಾರೆ.]

**ಮಹಾಬಲ–** ಗೌತಮಾ, ಅಲ್ಲಲ್ಲ,–ಮರೆತೆನಯ್ಯಾ ಮಿತ್ರ–
ಸಿದ್ಧಾರ್ಥ– ಹಾಗೆಂದು ತಾನೆ ಗುರುವರರಂದು
ಶೌರ್ಯಪ್ರದರ್ಶನಾಂತ್ಯದಲಿ ಉದ್ಘೋಷಿಸುತ
ಕರೆದದ್ದು ನೆರೆದವರೆಲ್ಲರ ಮುಂದೆ?

**ಗೌತಮ–** (ಖಿನ್ನನಾಗಿ) ಅಹುದಹುದು !
(ನಸುನಕ್ಕು) ಸಿದ್ಧಾರ್ಥ ! ಸಿದ್ಧಾರ್ಥ ! ಆದರೆ, ಮಹಾಬಲಾ,
ಸರ್ವಾರ್ಥಸಿದ್ಧಿಯನು ಮೀರಿಸಿಹ ಪರಮಾರ್ಥ–
ವೊಂದುಂಟು ಎಂದು ಆಚಾರ್ಯ ವಿಶ್ವಾಮಿತ್ರರೇ

ನೋಡಿಯೂ ನೋಡದಾ ಚಾಪವಿದ್ಯೆಯ ಪಂದ್ಯ–
ದೆರಡನೆಯ ಸೂಳಿನಲಿ ಗೌತಮನ ಗೆಲವೆಂತು,
ಬಣ್ಣಿಸೆನಗದನು.

**ಮಹಾಬಲ–** ಮೊದಲಾಯ್ಕೆಯ ಪರೀಕ್ಷೆಯಲಿ
ಮುನ್ನೂರು ಮಾರಳತೆಯಲ್ಲಿಟ್ಟ ಹರೆಯನ್ನು
ನಾನ್ನೂರು ಮಾರಾಚೆಯಿಡಲು ನಾ ಹೊಡೆವೆನೆನೆ
ಧೃಷ್ಟತನದಲಿ ದೇವದತ್ತ, ಹರೆಯನ್ನಂತೆ
ಕೊಂಡೊಯ್ದು ನಿಲ್ಲಿಸಲು ಬಯಲಿನಲಿ ಕಾಣಿಸಿತು
ಕಿತ್ತೀಳೆಯಂತೆ ಹರೆ. ದೇವದತ್ತನ ಬಿಟ್ಟ
ಬಾಣವದನಿಟ್ಟುರುಳಿಸಿತು ಕೆಳಗೆ, ಹುರುಡಿಗನ
ಸೋತ ಬೆಂಬಲಿಗರೆಲ್ಲರ ಜಯದ ಹುಯಿಲಿನುಲಿ
ಹಬ್ಬಿ ಬೊಬ್ಬಿರಿಯೆ. ಗೌತಮನಾಗ ಗಂಭೀರ
ಗಮನದಲ್ಲಿ ಮುಂಬಂದು, ಸಾವಿರದ ಮಾರಾಚೆ
ನಿಲ್ಲಿಸಿರಿ ಹರೆಯನೆನ, ಆಚಾರ್ಯನನುಮತಿಸೆ
ಅಂತೆಸಗಲೆಸೆಯಿತಾ ನಿಡುದೂರದಲಿ ಹರೆ
ನಿಂಬೆಹಣ್ಣಂತೆ. ನೋಟಕರ ಕಣ್ ದಣಿಯೆ ಗುರಿ–
ಹರೆಯ ಕುರುಹನು ಅರಸಿ, ನಿಂತ ನೇರಕ್ಕೆಸೆದ
ಗೌತಮನ ಬಾಣವದು ತೊಟ್ಟ ಚಣದಲೆ ಹರೆಯ
ಮುಟ್ಟಿ ಕೊರೆದದನೊಯ್ದು ನೇರ ನಿಂತಿತ್ತಲ್ಲೆ
ನಟ್ಟು ಹಿಂದಣ ಮರದ ಬುಡದ ಚೇಗಿನೊಳಕ್ಕೆ.
ಗೌತಮನ ಮಿತ್ರಪಕ್ಷದ ಜಯಧ್ವನಿ ಮುಗಿಲ
ಮುಟ್ಟಿತ್ತು, ಕಟ್ಟಿತ್ತು ದೇವದತ್ತನ ಬಾಯ;
ತಟ್ಟಿತ್ತು ಯಶೋಧರೆಯ ಹೃದಯದ ಕವಾಟವನು.

**ಮಹಾನಾಮ–** ಆಗಲೇ ನನಗೆ ಆ ಕಡೆ ಗಮನ, ನನ್ನ ಮನ
ಹಿಗ್ಗಿ ಹರುಷದಲಿ, ಬಹುದಿನದ ಮನದಾಕಾಂಕ್ಷೆ
ಫಲಿಸುತ್ತ ಯಶೋಧರೆಯ ಮರೆಯ ಒಲವಿನ ಮೊಗ್ಗು
ಅವಳ ಮೊಗದಲ್ಲಿ ಕೆಂಪರಳಿ ನಗುವುದ ಕಂಡು.
ಹೊಣೆಗಾರಿಕೆಯ ಹೊಲಬ ಹಿಡಿದಿನ್ನು ನಡೆಯುವೆವೆ,
ಮೊದಲದನು ಯಾವುದೆಂದರಿತು ಗುರುತಿಸಬೇಕು.

**ಗೌತಮ–** ಹುಟ್ಟಿನಿಂದಲೆ ಬಂದ ದಾಯಾದ ಮಾತ್ಸರ್ಯ–
ದಗ್ನಿಗಾಜ್ಯಾಹುತಿಯನೆರೆದವನು ನಾನಲ್ತೆ ?
ಇಂತಿದರ ಪರಿಣಾಮವೆಂಬರಿವು ನನಗಿರಲು,
ನಾನೊಪ್ಪುತಿರಲಿಲ್ಲ ಶೌರ್ಯ ಪ್ರದರ್ಶನದ
ನಲ್ವೆಸರ ಹಗೆಬಸಿರ ಹಾಳು ಹುರುಡಾಟಕ್ಕೆ.
ತಾನು ಗೆಲೆ ಇದಿರಾಳ ಸೋಲಿಸಲೆ ಬೇಕಲಾ?
ಸೋಲಿಂದಲೇ ಗೆಲವು ; ಸೋಲು ಗೆಲವಿನ ಉಸಿರು.
ಗೆಲವಿನಿಂದ ಸುಖ, ಸೋಲಿನಿಂದ ಅಸುಖ. ಒಬ್ಬನ
ಸುಖಸೂರ್ಯನುದಯಕ್ಕೆ ಇನ್ನೊಬ್ಬನಿಗೆ ಕವಿಯ–
ಬೇಕೇ ಅಸುಖದ ಕತ್ತಲೆ? ಇಂಥ ಗೆಲವಿನಲಿ
ಸುಖವಿಲ್ಲ ; ಮನಕದರಿಂದ ಶಾಂತಿಯೂ ಇಲ್ಲ.
**ಮಹಾಬಲ–** ಅಂದಿನಾ ಗೆಲವು ಸೋಲುಗಳ ಮಾತಂತಿರಲಿ,
ನಿನ್ನ ನಿತ್ಯದ ಸುಖಕೆ ಕೊರತೆ ಯಾವುದು, ಗೆಳೆಯ?
**ಗೌತಮ–** ಕೊರತೆಯಾಗದ ತೆರದೊಳೆಚ್ಚರವ ವಹಿಸಿಹರು
ನಮ್ಮಯ್ಯ. ಆದರೂ ಮನಕ್ಕಿಲ್ಲ ಸುಖಶಾಂತಿ.
**ಮಹಾಬಲ–** ಇದು ವಯೋಧರ್ಮಕ್ಕೆ ತಕ್ಕ ಮಾತಲ್ಲ :
ತಾರುಣ್ಯತೇಜಿ ಅಡೆತಡೆಗಳನು ಲೆಕ್ಕಿಪುದೆ?
ನಾಗಾಲೋಟದಲಿ ಧಾವಿಪುದು ಹಳ್ಳಕೊಳ್ಳಗಳ
ನೆಗೆಯುತ್ತ, ಕೆನೆಯುತ್ತ, ಸುತ್ತಣ ಪರಿಸರಕ್ಕೆ
ಕಣ್ಣ ಹಾಯಿಸದೆ; ಅನುಭವದ ವಾಘೆಯ ಹಿಡಿತ–
ವನ್ನಪೇಕ್ಷಿಸದೆ. ಯೌವನಕೆ ಆಶಾದೃಷ್ಟಿ ಸುಖಕಾರಿ,
ಬಲಕಾರಿ. ನಿನ್ನ ನೈರಾಶ್ಯಭಾವದ ಬೇರು
ಬಹುಕಾಲದಾಳಕ್ಕೆ ಇಳಿದಿಹುದೊ, ಇಲ್ಲದಿರೆ
ವರ್ತಮಾನದ ಮೇಲುಮಣ್ಣಿನದೋ? ಆಳಕ್ಕೆ
ಇಳಿದು ಜೀವನ ಭವನವನು ಬೀಳಿಸುವ ಮುನ್ನ
ಕಿತ್ತೆಸೆಯಬೇಕದನು.
**ಗೌತಮ–** ಹಳೆಯದೋ ಹೊಸದೋ,
ಹೇಳಲಾರೆನು. ಏನೊ ಮನದರಕೆ ಕಾಡುತಿದೆ?
ಇಂದು ಇಮ್ಮಡಿಸಿಹುದು ದೇವದತ್ತನ ಕತದಿ.

ತಿಳಿಸಿಹರು. ಅವರ ಪದತಲದಲ್ಲಿ ನಾ ಕಲಿತ
ವೇದಶಾಸ್ತ್ರಗಳಿಂದ ಆವುದಾ ಪರಮಾರ್ಥ–
ವೆಂಬುದದು ತಿಳಿಯದಾಯ್ತನುಭವಕೆ ಬಾರದೆ.

**ಮಹಾಬಲ–** ಗೆಳೆಯ, ಗೌತಮ, ನೀನು ಹೇಳುವುದಿದೇನೂ
ಅರ್ಥವಾಗದು ನನಗೆ. ಅರ್ಥವಾಗುವುದಿನಿತೆ :
ಶೌರ್ಯಪ್ರದರ್ಶನದ ಆ ಮಹಾದಿನದಂದು
ನೀನೆಲ್ಲರನು ಮೀರಿಸಿದೆ. ನಿನ್ನ ಚಿಕ್ಕಯ್ಯ
ಅಮೃತೋದನನ ಪುತ್ರ ದೇವದತ್ತನು ತಾನೆ
ಬಿಲ್ವಿದ್ಯೆಯೊಳು ಏಕಮೇವಾದ್ವಿತೀಯನಹೆ
ಎಂದು ಮೂಗೆತ್ತಿ ಜಂಬದ ಕೋಳಿಯಂತೊಲೆದು
ಮೆರೆದಿದ್ದನಲ್ತೆ. ನೀನವನ ತಲೆ ತಗ್ಗಿಸಿದೆ,
ರೆಕ್ಕೆಪುಕ್ಕವ ತರಿದೆ. ಪಡೆದೆಯದ್ಭುತ ಜಯವ.
ಜಯಶಾಲಿ ನಿನಗೆ ತಗದೀ ಖಿನ್ನತಾಭಾವ.

**ಗೌತಮ–** ಜಯ ! ಜಯ ! ಎಂಥ ಜಯ, ಮಹಾಬಲ?
ಒಬ್ಬನ ಜಯಕ್ಕೆ ಸಾವಿರ ಜನದ ಸೋಲೇ?
ಸೋಲ್ಪಡೆದ ದೇವದತ್ತನ ತಲೆಯು ತಗ್ಗಿತ್ತು,
ದಿಟ. ಅವನ ಕಣ್ನೋಟವನು ನೀನು ಕಣ್ಣಿಟ್ಟು
ನೋಡಿದೆಯ, ಗೆಳೆಯಾ?

**ಮಹಾಬಲ–** ನೋಡಿದೆನು, ಗೌತಮಾ :
ಬಾಣಾಗ್ರದಂತೆ ಮೊನಚಾಗಿತ್ತು ಕೂರ್ನೋಟ ;
ಹಳೆಯ ಮಾಯದ ಗಾಯದಂಥ ಸಾಯದ ಈರ್ಷ್ಯೆ
ಕಣ್‌ಗೆಂಡವಾಗಿ ಕಿಡಿ ಕಾರುತ್ತಿತ್ತು.

**ಗೌತಮ–** ಸಂತಸವೆ, ಹೆರರ ಈರ್ಷ್ಯಾದ್ವೇಷಗಳಿಗೆ ಪಕ್ಕಾಗುವುದು?

**ಮಹಾಬಲ–** ಅಲ್ಲ, ಅಲ್ಲ; ಆದರೆ–

**ಗೌತಮ–** ನಿನ್ನ ಸಂದೇಹವೇನು?
ನಾಲಗೆಗೆ ಬಂದ ನುಡಿ ಅಲ್ಲೆ ನಿಂತಿಹುದೇಕೆ?

**ಮಹಾಬಲ–** ಆದರಾ ಪರಿಣಾಮಕಲ್ಲ ನೀ ಕಾರಣ,

**ಗೌತಮ–** ನಾನೇ ಕಾರಣ; ನಾನೇ ನಾನೇ.

**ಮಹಾಬಲ–** ಅದು ಹೇಗೆ ?

**ಮಹಾಬಲ–** ಅಂಥದೇನೂ ಇಲ್ಲ.
ಸುದ್ದಿಯರುಹುವ ದೌತ್ಯವನಿತೆ ನನ್ನಯ ಕಾರ್ಯ.
ನಿನ್ನ ಪಿತನನುಮತಿಯ, ನನ್ನಯ್ಯನಾಜ್ಞೆಯನು
ತಳೆದು ತಲೆಹರಕೆಹೂವಾಗಿ, ಬರಲಿಹಳೆನ್ನ
ತಂಗಿ. ಮುಂದಾಗಿ ನಾ ಬಂದೆ, ಅರುಹಲೆಂದೆ.

**ಗೌತಮ–** (ನಿಬ್ಬೆರಗಾಗಿ) ಸೋಜಿಗದ ಸುದ್ದಿಯಿದು ! ನನ್ನ ಕಾಣಲು ನಿನ್ನ ತಂಗಿ ಬರಲಿಹಳೆ? (ನಗುತ್ತ) ಮಂತ್ರಿಯ ಮಗಳು ! ಇದ್ದೀತು
ರಾಣಿವಾಸದ ರಾಜಕಾರ್ಯ !

**ಮಹಾಬಲ–** ದಿಟವೊಂದು ದೃಷ್ಟಿಯಲಿ.
ನಿನ್ನ ವಿಜಯವು ನಮಗೆ ತಂದ ನಲಿವಿನ ಕುರುಹ
ಕಾಣಿಕೆಯ ಸಲಿಸಬೇಕೆಂದಿಹಳು, ನಮ್ಮ ತಾಯ್
ಒಲವಿಂದ ಕಳಿಸಿರುವ ಹರಕೆಯೊಸಗೆಯ ತಿಳಿಸಿ.
ಅದು ಕುಟುಂಬದ ಕಾಣಿಕೆ ; ಮನೆತನದ ಮೆಚ್ಚು.

**ಗೌತಮ–** ವಿಜಯಕ್ಕೆ ಸಂತಸವೆ? ವಿಜಯಕ್ಕೆ ಕಾಣಿಕೆಯೆ?
ವಿಜಯ, ಸಂತೋಷ ! ಹುಸಿ, ಎಲ್ಲ ಹುಸಿ ; ಎಲ್ಲ ಹುಸಿ !

(ತೆರೆ)

## ನೋಟ ೪

[ಅದೇ ಕೋಣೆ. ಯಶೋಧರೆ ಬಲಗೈಲಿ ವಿಜಯಮಾಲಿಕೆಯನ್ನು ಹಿಡಿದು ಪ್ರವೇಶಿಸುವಳು. ಅವಳ ಹಿಂದೆಯೆ ಗೆಳತಿಯೊಬ್ಬಳು ಕೈಲಿ ಸುವರ್ಣಪಂಜರವೊಂದನ್ನು ಹಿಡಿದು ಬರುವಳು ; ಪಂಜರದಲ್ಲಿ ಒಂದು ಜೊತೆ ಗಿಣಿ, ಆಗಾಗ್ಗೆ ಕೀರುತ್ತಿರುವುವು.]

**ಮಹಾಬಲ–**ಏನಿದು ಯಶೋಧರಾ? ಎಷ್ಟು ತಳುವಿದೆ ನೀನು !
ಪ್ರಭುಕುಮಾರರು ಕಾಯುವಂತಾಯ್ತು ನಿನಗಾಗಿ.

**ಯಶೋಧರೆ–**ಪ್ರಭುಕುಮಾರರು ನನ್ನ ದಯದಿ ಮನ್ನಿಸಬೇಕು.
ಮಾಲೆಕಟ್ಟುವ ಕುಶಲಕಲೆಯಲ್ಲಿ ನನ್ನ ಕೈ
ಬಲು ಮಂದ. ನೀನದನು ನೆರೆ ಬಲ್ಲೆ, ಅಣ್ಣಯ್ಯ.
ಅದರಿಂದ ತಡವಾಯ್ತು.

**ಗೆಳತಿ–** (ಖಿನ್ನತೆಯ ನಟಿಸಿ) ಒಡತಿ, ಅಷ್ಟೇ ಅಲ್ಲ ;
ಹೂತಿರಿದು ತರುವಲ್ಲಿ ನನ್ನದೂ ತಡವಾಯ್ತು.

ನಾನವಗೆ ಸೋತವನ ಸುಖಕೆ ಕಾರಣನಾಗಿ,
ಅವನ ಸೋಲಿನ ನೋವ ಪರಿಹರಿಸಬೇಕೆಂದು
ಮನ ತುಡಿಯುತಿದೆ; ಸುಖವ ಬಿತ್ತಿದರೆ ಸುಖದ ಬೆಳೆ;
ಬೇವನ್ನು ಬಿತ್ತಿ ಮಾವಿನ ಫಲವ ಬಯಸಿದರೆ
ದೊರಕುವುದೆ? ಅವನ ಕಣ್ಣಲಿ ಕಂಡ ಕೋಪಾಗ್ನಿ–
ಗೆದೆಯಳಲೆ ಸಮಿಧೆಯಾಗಿರದೆ? ನೋವೆನಿತನಾ
ದೇವದತ್ತನ ಹೃದಯವನುಭವಿಸುತಿಹುದೋ.

**ಮಹಾಬಲ–** ನಡೆವಳಿ ವಿಚಿತ್ರವಿದು. ಮರೆ ದೇವದತ್ತನನು,
ನಿನ್ನಿಂದ ಅವನಿಗನ್ಯಾಯವಾಗಿಹುದೆಂಬ
ಭ್ರಾಂತಿಯನು–ಅವನ ಕಣ್ಣನು ಕಂಡ ಕಣ್ಣಲೇ
ಬೇರೊಂದು ಚೆಲುವುಕಣ್ಣನು ನೀನು ಕಣ್ಣಿಟ್ಟು
ನೋಡೆ ಲೇಸಾಗಿತ್ತು.

**ಗೌತಮ–** ಆವುದಾರದು ಕಣ್ಣು?

**ಮಹಾಬಲ–** ಯಶೋಧರೆಯ ಕಣ್ಣು.

**ಗೌತಮ–** ಯಶೋಧರೆ ! ನಿನ್ನ ತಂಗಿ?

**ಮಹಾಬಲ–** ಅಹುದು.

**ಗೌತಮ–** ನೋಡಿದೆಯೇನು ನೀನವಳ ಕಣ್ಣನ್ನು?

**ಮಹಾಬಲ–** ನಾ ನೋಡಿದೆನು ; ನನ್ನ ತಂದೆಯೂ ನೋಡಿದರು.

**ಗೌತಮ–** ಅವಳ ಕಂಗಳಿಗೆ ಕಂಬನಿಯ ತಹ ದೌರ್ಭಾಗ್ಯ
ನನ್ನದಾಗಿರಲಿಲ್ಲವಷ್ಟೆ?

**ಮಹಾಬಲ–** ಇಲ್ಲ, ಖಂಡಿತ ಇಲ್ಲ :
ಅವಳ ಕಣ್ಣಿನ ತುಂಬ ತಂಬೆಳಕು ತುಂಬಿತ್ತು,
ಒಲವ ಮಾರ್ಪೊಳೆದು ಕೂರ್ಪಳಿದು ತಂಪಾಗಿತ್ತು
ಅಲ್ಲಿ, ಆ ಕಂಗಳಲಿ, ಒಲವ ಸರಸಿಗಳಲ್ಲಿ.
(ನಕ್ಕು) ಕೋಪದುರಿಗೆಂಡಕೆಡೆಯುಂಟೆ ಆ ತಂಪಿನಲಿ?

**ಗೌತಮ–** (ತಾನೂ ನಗುತ್ತ) ನೀವಿಬ್ಬರೂ–ನಿನ್ನ ಪೂಜ್ಯ ಪಿತ, ನೀನು–ಏನೊ ಸಂಚನು ಹೂಡಿ ನನ್ನ ಬೆಪ್ಪನ ಮಾಡಿ
ನಲಿವಂತೆ ತೋರುತಿದೆ. ಅಂತಿರಲಿ ಅದು. ನೀನು
ಬಂದ ಕಾರ್ಯವದೇನು?

ಕರದಲಿರೆ ಕಮನೀಯ; ಮೂರನೆಯದಾಗಿ, ನಾ
ಹಿರಿಯಣ್ಣ ನಿನಗೆ ತಂದೆಯ ಸಮ; ವಹಿಸಿರುವೆ
ಅವರೆನಗೆ ಇತ್ತಾಣತಿಯ ನಿನಗೆ. (ತುಸ ನಗುವನು.)

**ಗೌತಮ–** ಮಹಾಬಲಾ,
ಏನಿದೇನಿದು ನೀವು ತಂದೆಮಕ್ಕಳು ಕೂಡಿ
ಹೂಡಿರುವ ಸಂಚು ! ಸ್ವಯಂವರವಿದಲ್ಲ ತಾನೆ?

**ಮಹಾಬಲ–** (ನಗುತ್ತ) ಹೇಗೆ ಭಾವಿಸೆ ಹಾಗೆ ! ನಿಮ್ಮಿಬ್ಬರಿಚ್ಛೆಯದು !
(ಎಂದು ತಟ್ಟನೆ ಹೊರಟುಬಿಡುವನು.)

**ಯಶೋಧರೆ–** (ಗಾಬರಿಯನ್ನು ನಟಿಸಿ) ಅಯ್ಯೊ, ಹೊರಟೇ ಬಿಟ್ಟ ಅಣ್ಣಯ್ಯ!

**ಗೌತಮ–** ಯಶೋಧರಾ,
ನನ್ನ ಕಂಡರೆ ನಿನಗೆ ಭೀತಿಯೇ

**ಯಶೋಧರೆ–** ನಿಮ್ಮ ಬಳಿ
ಭೀತಿ ! ಈ ಹೂವಿನಂತೆಯೆ ಮೆಲುಪು ನಿಮ್ಮ ಮನ–
ವೆಂದೆಮ್ಮ ಪಿತ ಮನೆಯಲೆನಿತೊ ಸಲ ಹೇಳಿಹರು ;
ಬೇಟೆಯ ವಿನೋದವನು ಕಲಿಯಲೂ ಒಪ್ಪಿಲ್ಲ–
ವಂತೆ ದಿಟವೇ ?

**ಗೌತಮ–** ಅಹುದು. ನಮ್ಮ ಬಿನದಕೆ ಮುಗ್ಧ
ಮೃಗಗಳನು ಕೊಲ್ಲುವುದೆ ? ಕೊಲುವುದೆನ್ನುವ ಮಾತಿ–
ನರ್ಥವನು ಕೃತಿಯಲ್ಲಿ ಕಾಣಲೊಪ್ಪದು ಮನಸು.
ಬೇಟೆಯಂತಿರಲಿ. ಹೂಕೊಯ್ಯಲದುವೂ ಕೂಡ
ಗಿಡಕೆ ನಮ್ಮಿಂದಾದ ನಿರ್ದಯದ ನುಲಿನೋವು.
ಮೈಗೆ ಮುಖದಂತೆ, ಮುಖದಲ್ಲಿ ಕಣ್ಣುಗಳಂತೆ,
ಗಿಡದ ಮೇಲೆಯೆ ಹೂಗಳಂದಚೆಂದದ ಬದುಕು.

**ಯಶೋಧರೆ–** ಹೂಕೊಯ್ಯದೆಯೆ ಮಾಲೆ ಸಿದ್ಧವಾಗುವುದೆಂತು?
ಹೂವಿಂದ ಗಿಡಕೆ ಕಳೆ ; ಮಾಲೆಕಟ್ಟಿದ ಮೇಲೆ
ಹೂಗೆ ಬೆಲೆ ; ಮಾಲೆಯಲ್ಲಿಹುದದಕೆ ಕಲೆಯ ನೆಲೆ.
ಕಟ್ಟಿದಾ ಮಾಲೆ ಕೊರಳನ್ನಲಂಕರಿಸಿದರೆ
ಅದಕಿಮ್ಮಡಿಯ ಸೊಬಗು.

**ಗೌತಮ–** ಸೊಬಗಲ್ಲ ; ಮೂಕ ಕೊರಗು.

**ಮಹಾಬಲ–** ನಿನ್ನನೂ ಮನ್ನಿಪುದು ಪ್ರಭುಕುಮಾರರ ಕರುಣೆ.
ಮಧುಮತಿ, ಅದಂತಿರಲಿ. ನಾವಿನ್ನು ಹೋಗುವ ;
ಪಂಜರವನಾ ಪೀಠಿಕೆಯ ಮೇಲೆ ಇಟ್ಟು ಬಾ.
ಬಹುಮಾನದಾನಕೆಂದೆಮ್ಮಯ್ಯನಾಯ್ದಿರುವ
ಹೊನ್ನ ಹಿಡಿಕೆಯ ಖಡ್ಗವನು ತರುವ.

**ಮಧುಮತಿ–** ಅಂತೆಯೇ
ಆಗಲಿ (ಎಂದು ಪಂಜರವನ್ನು ಪೀಠಿಕೆಯ ಮೇಲಿಟ್ಟು ತೆರಳುವಳು.)
(ಮಹಾಬಲನೂ ಹೊಡುವ ಸನ್ನಾಹದಲ್ಲಿರುವನು.)

**ಯಶೋಧರೆ–** (ಅಚ್ಚರಿಗೊಂಡು) ಅಣ್ಣಯ್ಯ, ಏನು ನೀನೂ ಹೊರಟೆ?

**ಮಹಾಬಲ–** (ನಗುತ್ತ) ತರಬೇಡವೇನಮ್ಮ ಹೊನ್ನ ಖಡ್ಗವನು?

**ಯಶೋಧರೆ–** ಹೊನ್ನ ಖಡ್ಗದ ಮಾತನೆತ್ತಲಿಲ್ಲ ಪಿತಾಜಿ !
ಹುಸಿಯುತಿಹೆಯೋ ಎಂತು?

**ಮಹಾಬಲ–** (ನಗುತ್ತ) ಹೊನ್ನ ಖಡ್ಗದ ವಿಷಯ
ಹೊಳೆಯಿತಾಮೇಲೆ!

**ಯಶೋಧರೆ–** ಆಮೇಲೆ ಹೊಳೆದಾ ವಿಷಯ
ಆಗಲಾಮೇಲೆಯೇ ! ಬಾಡುತಿದೆ ಹೂಮಾಲೆ,
ಹೆಚ್ಚು ಬಾಡುವ ಮುನ್ನ ಒಪ್ಪಿಸು ಕುಮಾರರಿಗೆ.
ನನ್ನ ಕೂಡಿಯೆ ನೀನು ಹಿಂದಿರುಗಬಹುದಲ್ಲ?

**ಮಹಾಬಲ–** ಮಾಲೆಯೊಪ್ಪಿಸುವ ಹೆಮ್ಮೆಯ ಕೆಲಸ ನಿನ್ನದಲಾ?

**ಯಶೋಧರೆ–** (ಹುಸಿಮುನಿಸಿನಿಂದ) ಹಾಗೆಂದರೇನು ಅಣ್ಣಯ್ಯ, ಈ ಕೆಲಸವನು
ನಿನಗೆ ತಾನೆ ಪಿತಾಜಿ ವಹಿಸಿದ್ದು?

**ಮಹಾಬಲ–** ಅಹುದಹುದು.
ಆದರೀಗದ ನಾನು ನಿನಗೆ ವಹಿಸುತ್ತಿಹೆನು.
ಏಕೆಂಬೆಯೋ, ಕೇಳು : ಮೊದಲ ಕಾರಣವದಕೆ,
ಯಾರು ಕೋದಿಹರವರೆ ಮಾಲೆಯೊಪ್ಪಿಸಬೇಕು,
ಮಾಲೆಗಾರ್ತಿಯ ಕಲೆಗೆ ಸಲುವ ಗೌರವವದು;
ಎರಡನೆಯದಾಗಿ, ಆಗಲೆ ಬಾಡತೊಡಗಿರುವ
ಮಾಲೆಯಿನ್ನಿನಿತು ಬಾಡುವುದೆನ್ನ ಒರಟುಕೈ
ಸೋಂಕಿನಲಿ–ಕುಸುಮಮಾಲಿಕೆ ಕುಸುಮಕೋಮಲದ

ಬಿಡುಗಡೆಯ ಭೋಗಕ್ಕೆ ? ಕೇಳಿತೇ ಅವುಗಳುಲಿ?
ಬಿಡುಗಡೆಯ ಬಯಸದವರಾರು ಈ ಲೋಕದಲಿ?
ಬಿಡು, ಬಿಟ್ಟುಬಿಡು ಗಿಣಿಗಳನು, ಯಶೋಧರೆ, ತಮ್ಮ ಮನಬಂದ ಕಡೆಯಲ್ಲಿ ಹಾರಾಡಿಕೊಳ್ಳಲವು.

**ಯಶೋಧರಾ–** ನಿಮಗಾಗಿ ನಮ್ಮ ಕಾಣಿಕೆಯೆಂದು ತಂದೆನಾ–
ನವುಗಳನು ತಂದೆಯಪ್ಪಣೆಯಂತೆ.

**ಗೌತಮ–** ಅಂತಿರಲು
ಅವು ನ್ನವೇ ಆಯ್ತು. ಹಾರಿಹೋಗಲಿ, ಪಾಪ,
ಬಿಡುವೆನವುಗಳನು.

[ಪಂಜರದಿಂದ ಗಿಣಿಗಳನ್ನು ಹೊರಕ್ಕೆ ಬಿಡುವನು. ಉಲ್ಲಾಸದಿಂದ ಕೆಲೆಯುತ್ತ ಅವು ಹಾರಿಹೋಗುವುವು.]

ಬಿಡುಗಡೆಯ ಹಿಗ್ಗಿನುಲಿ !
ಪಟಪಟ ಬಡಿದೆರಂಕೆಗಳ ಎಂತು ಹಾರಿದುವು !

**ಯಶೋಧರಾ–** ಅಯ್ಯೊ, ಹೊರಟೇಹೋದುವಲ್ಲ ನಮ್ಮ ಗಿಣಿ ;
ಪ್ರೇಮದಲಿ ಸಲಹಿದ್ದ ಹೊಸಮುದ್ದ ಜೋಡಿಗಿಣಿ.

**ಗೌತಮ–** ಪ್ರೇಮವೂ ಕೂಡ ಬಂಧನ, ಯಶೋಧರಾ.
ಜೀವಿಗಳ ಬಿಡುಗಡೆಗೆ ಕರುಣೆಯೆ ಮಹಾದ್ವಾರ.

**ಯಶೋಧರಾ–** ನನ್ನ ಮೇಲುಂಟೊ ಇಲ್ಲವೊ ನಿಮ್ಮ ಆ ಕರುಣೆ?

**ಗೌತಮ –** ನಿನ್ನ ಬಗೆಗಾನು ನಿಷ್ಕರುಣಿಯಾಗಿಹೆನೇನು?

**ಯಶೋಧರಾ–** (ಹುಸಿ ಮುನಿಸಿನಿಂದ) ಕರುಣೆಯಿರೆ, ನನ್ನ ಬೀಳ್ಕೊಡಿರಿನ್ನು.

**ಗೌತಮ–** ಯಶೋಧರಾ,
ನಿನಗೆ ಅಸಮಾಧಾನವೇ ನೀವು ಒಲವಿಂದ
ಕೊಟ್ಟ ಕಾಣಿಕೆಯ ನಾನೊಪ್ಪುಗೊಳಲಿಲ್ಲೆಂದು ?
ನಿನ್ನ ಪೂಜ್ಯ ಪಿತಾಜಿ ಕಳುಹಿರುವ ಬಹು ಬೆಲೆಯ
ಕಾಣಿಕೆಗಳಲ್ಲೊಂದೆ ನನಗೆ ಒಪ್ಪಿತವೆಂದು
ತಿಳಿಸೋಣವಾಗಲವರಿಗೆ.

**ಯಶೋಧರಾ–** ಅಬ್ಬ ! ನೀವಿಂದು
ಬಲು ವಯಸ್ಸಾದವರ ರೀತಿ ನುಡಿಯುತ್ತಿಹಿರಿ !

**ಗೌತಮ–** ಬಲು ವಯಸ್ಸೇನಲ್ಲ, ಮದುವೆಯ ವಯಸ್ಸೆಂದು

ಕೊರಳುಕೊಯ್ಯಿಸಿಕೊಂಡ ಹೂಗಳಿಂದಾದ ಈ
ವಿಜಯಮಾಲಿಕೆಯನೆಂದಿಗು ಧರಿಸೆ ಕೊರಳಿನಲಿ.
ಮನ್ನಿಸು, ಯಶೋಧರಾ.

**ಯಶೋಧರೆ–** ಕಿರಿಯಳರಿಯದಳೆನ್ನ
ಗೈದ ತಪ್ಪನು ನೀವು ಮನ್ನಿಪುದು. ಇದು ಬೇಡ;
ಆ ಪಂಜರದ– (ಎಂದು ಪೀಠದ ಮೇಲಣ ಪಂಜರದ ಕಡೆ ಕೈತೋರುವಳು.)

**ಗೌತಮ–** ಪಂಜರದ ಗಿಣಿಗಳೂ ಬೇಡ.
ಪಂಜರದ ಬಂಧನವು ಹಿಂಸೆಯಲ್ಲವೆ, ಹೇಳು.
ಅರಮನೆಯಲದರ ಉದ್ಯಾನದೆಡೆಗಳಲೆಲ್ಲ
ನನ್ನ ಮನಬಂದಂತೆ ಸಂಚರಿಪ ಸ್ವಾತಂತ್ರ್ಯ–
ವೆನಗುಂಟು. ತಿಳಿಗೊಳನ ಹಂಸೆಗಳ ಕೆಳೆಯುಂಟು
ನನಗಲ್ಲಿ ; ಚಿಗಿದೋಡುವಾ ಚಿಗರೆಗಳ ಓಟ
ನನ್ನ ಕಣ್ಣಿಗೆ ಹಬ್ಬ ; ಕುಣಿವ ನವಿಲನು ಕಂಡು
ಕುಣಿಯುವುದು ನನ್ನ ಮನ ; ಹೂಮೇಲೆ ಹೂವಾಗಿ
ಕುಳಿತ ಚಿಟ್ಟೆಯ ಕಂಡು ಹೃದಯ ಹೂವಾಗಿಹುದು ;
ಹೊರಸುಗಳ ಹಿಂಡು ಮುಗಿಲಾಗಿ ಆಗಸದಲ್ಲಿ
ಹಾರುವುದ ಕಂಡು ಹಾರಿಹುದೆನ್ನ ಚೇತಸ್ಸು.
ಕೈನೀಡಿದರೆ ಮಾವು, ಬಾಯಿ ತೆರೆದರೆ ದ್ರಾಕ್ಷಿ,
ತಲೆಯೆತ್ತೆ ದಾಳಿಂಬೆ, ಹೆಜ್ಜೆ ಹೆಜ್ಜೆಗೆ ರಾಶಿ
ಚೆಲ್ಲಿರುವ ನೇರಿಳೆ. ಇಂಥದೆಂದೊಕ್ಕಣಿಸಿ
ಮುಗಿಯದಿಹ ಈಯೆಲ್ಲ ರಾಜಭೋಗದ ಲೋಕ
ನನಗೆ ಚಿನ್ನದ ಪಂಜರದ ತೆರದಿ ತೋರುತಿದೆ,
ತುಡಿಯುತಿದೆ ಹೊರಜಗವ ನೋಡಬೇಕೆಂದು ಮನ.
ಇಂತಿರಲು ನನ್ನ ಗತಿ, ಪಾಪ, ಈ ಪಂಜರದಿ
ಸೆರೆಸಿಲುಕಿ ಸೊರಗುತಿಹ ಗಿಣಿಗಳಿವುಗಳ ಪಾಡು
ಎನಿತು ದುಃಖಕರ.
(ದುಃಖದಿಂದೆಂಬಂತೆ ಗಿಣಿಗಳು ಚೀರುವುವು.)
ಹಾತೊರೆಯವೇ ಬಿಡುಗಡೆಗೆ,

**ಚೆನ್ನ**–ಕುದುರೆಯೇರಾಟದಲಿ, ಸಾರಥ್ಯದಲಿ ನಿಮ್ಮ
ಬಲ್ಮೆಯನು ಬಲ್ಲೆ, ಪ್ರಭು. ಹಿರಿಯ ದೊರೆ ನನಗಿತ್ತ
ಕಟ್ಟಾಣತಿಯನೊರೆದೆ ನಿಮಗೆ. ಮನ್ನಿಪುದು ದೊರೆಯೆ,
ದಯಮಾಡಿ ಬನ್ನಿ ಹಿಂದಕೆ ರಥಕೆ.

**ಗೌತಮ**– ಚೆನ್ನಾ,
ಎದ್ದೇಳು ; ನಿನ್ನದೇನಪರಾಧ ಮನ್ನಿಸಲು.
[ಚೆನ್ನ ಎದ್ದುನಿಂತು, ಕೈ ಜೋಡಿಸಿಯೇ ಇರುವನು.]
ಕುದುರೆಗಳ ನೊಗ ಕಳಚಿ, ಹಳ್ಳದಲಿ ನೀರ್ಗುಡಿಸು,
ದಣಿದಿಹುವು, ಪಾಪ. ನೀ ಹೋಗು, ರಥದ ಬಳಿಯಿರು ;
ಇನಿತಿಲ್ಲೆ ನಡೆದಾಡಿ ನಾವು ಹಿಂದಿರುಗುವೆವು.

**ಚೆನ್ನ**– ಹಿರಿಯ ದೊರೆಗಳ ಆಜ್ಞೆ : ನಿಲಿಸಕೂಡದು ರಥವ,
ನಿಮ್ಮನಿಳಿಸಲು ಸಲ್ಲ. ಇಂತಿರಲು.....

**ಗೌತಮ**– ಚೆನ್ನಾ,
ರಾಜಕೋಪಕೆ ನೀನು ಪಾತ್ರನಾಗದ ತೆರದಿ
ರಕ್ಷೆ ನೀಡುವೆ, ಹೆದರದಿರು. ರಥಕೆ ಹಿಂದಿರುಗು.
ನಿನ್ನ ಮನಸೋಯಿಸೆನು ; ನನ್ನ ಆಜ್ಞೆಯಿದೆಂದು,
ನನ್ನ ಕೋರಿಕೆಯೆಂದು ತಿಳಿದು ಹಿಂದಿರುಗು.

**ಚೆನ್ನ**– ದೊರೆಯೆ,
ಕಲ್ಲೆದೆಯ ಗೆಲ್ಲುವಿರಿ ನಿಮ್ಮ ನಯನುಡಿಯಿಂದ.
ನಿಮ್ಮ ನುಡಿಗೆದುರಿಲ್ಲ. ರಥದ ಬಳಿ ಕಾದಿರುವೆ
ನಿಮಗಾಗಿ ; ಬೇಗ ಬನ್ನಿರಿ ದೊರೆಯೆ, ತಳುವದಿರಿ.
(ಎಂದು ಬಂದ ಕಡೆಯಿಂದ ಹಿಂದಿರುಗುವನು, ತಿರುತಿರುಗಿ ಆತಂಕದಿಂದ ಗೌತಮನ ಕಡೆ ನೋಡುತ್ತ)

**ಗೌತಮ**– ನಿನ್ನ ತಂಗಿಯ ತಂದ ಪಂಜರದ ಗಿಣಿಗಳನು
ಒಳ್ಳೆ ಗಳಿಗೆಯಲಿ ಬಿಡುಗಡೆಯ ಮಾಡಿದೆನೇನೋ,
ಅರಮನೆಯ ಪಂಜರದಿನೆನಗಾಯ್ತು ಬಿಡುಗಡೆ.

**ಮಹಾಬಲ**– (ನಕ್ಕು) ಅಲ್ಲ ಗಳಿಗೆಯ ಮಹಿಮೆ ! ನನ್ನ ಸೋದರಿ ನಮ್ಮ
ತಂದೆಗರುಹಿರಬೇಕು, ಅವರು ನಿನ್ನ ಪಿತಾಜಿ–
ಗರುಹಿ ಮಂತ್ರಿಯ ಕಾರ್ಯಗೈದರೆಂದೆನ್ನೆಣಿಕೆ.

ನನ್ನ ಚಿಕ್ಕಮ್ಮ ಕಿವಿಗರೆದುಹುಯ್ಯುತ್ತಿಹರು
ನಿತ್ಯವೂ, ಅಷ್ಟೆ.

**ಯಶೋಧರಾ–** ನಾ ತಪ್ಪು ತಿಳಿದಂತೀಗ
ಕಾಣುತಿದೆ. ನೀವು ನಿಷ್ಕರುಣಿಗಳು ; ನಾನಿನ್ನು
ಬರುವೆ, ಅಪ್ಪಣೆಕೊಡಿರಿ.

ಗೌತಮ– (ಮೃದುವಾಗಿ ನಗುತ್ತ) ಕಲ್ಯಾಣಮಸ್ತು !

(ತೆರೆ)

## ನೋಟ ೫

[ಕಪಿಲವಸ್ತುವಿನ ಹೊರವಲಯ. ಸುತ್ತಲೂ ಹೂಮುಡಿದ ಗಿಡ ಮರ ಬಳ್ಳಿಗಳ ಚೆಲುವುನೋಟ. ಗೌತಮನು ಓಡುತ್ತ ಬಂದು, ನಿಲ್ಲುವನು. ಮಹಾಬಲನೂ ಹಿಂಬಾಲಿಸಿ ಓಡಿಬಂದು, ಜೊತೆಗೂಡುವನು.]

**ಮಹಾಬಲ–** ಏಕೆ ಗೌತಮ, ಅಂತು ರಥದಿಂದ ದುಮ್ಮಿಕ್ಕಿ ಧಾವಿಸುತ ಬಂದೆ?

**ಗೌತಮ–** ಪಡೆದ ಬಿಡುಗಡೆಯ ಭೋಗಿಸಲೆಂದು.

**ಚೆನ್ನ–** (ಓಡಿಬಂದು, ಗೌತಮನ ಪಾದಗಳ ಮೇಲೆ ಬಿದ್ದು, ಕ್ಷಣಬಿಟ್ಟು ಎದ್ದು ಕುಳಿತು, ಕೈ ಜೋಡಿಸುವನು. ಗೌತಮನು ಬಾಗಿ ಅವನ ಹೆಗಲ ಮುಟ್ಟುವನು)
ಪ್ರಭೂ, ಪ್ರಭೂ, ಏಕಿಂತು ರಥದಿಂದ
ದುಮಿಕಿ ಬಂದಿರಿ, ಪ್ರಭೂ ! ನಿಮ್ಮ ಸಂರಕ್ಷಣೆಯ
ಭಾರವನು ಹಿರಿಯ ದೊರೆಗಳು ನನಗೆ ಒಪ್ಪಿಸುತ–
"ಎಲ್ಲಿಯೂ ರಥವ ನಿಲ್ಲಿಸಬೇಡ. ಬಿರುಸಾಗಿ
ಓಡಿಸದೆ, ಮಂದವಾಗಿಯು ಬಿಡದೆ, ಪುರದ ಹೊರ–
ಬಾಹೆಯಲಿ, ವನದ ನಿರ್ಜನ ಶಾಂತದೆಡೆಗಳಲಿ
ಕರೆದೊಯ್ದು, ಬನದ ಸುಗ್ಗಿಯ ಚೆಲುವ ತೋರಿಸಿ,
ಕರೆದು ತಾ. ಯುವರಾಜರ ಕ್ಷೇಮ ನಿನ್ನ ಹೊಣೆ.
ಜೊತೆಗಿಹರು ಕುಮಾರ ಮಹಾಬಲರು"–ಎಂದೆನಗೆ
ಆಣತಿಯನಿತ್ತಿಹರು. ನೀವಿಂತು ಗೈದಿಹಿರಿ.

**ಗೌತಮ–** ಭೀತಿಯೇತಕೆ, ಚೆನ್ನ? ರಥದ ಪಂದ್ಯದಲಿ ನಾ–
ನೆನಿತು ಸಲ ದುಮುಕಿಲ್ಲ, ಮತ್ತದನು ಏರಿಲ್ಲ?

ಆ ಒಕ್ಕಲಿಗ ಆಳು, ಬಿಸಿಲಿನಲಿ ಬಸವಳಿದು
ಬೆವರ ಹೊನಲನೆ ಹರಿಸಿ, ಬಳಲಿದ್ದನೇಸವನು !
ಇಂತು ದುಡಿವೆವೆ ನಾವು ಅರಮನೆಯ ನೆರಳಿನಲಿ ?
ಹೂತ ನೇಗಿಲನೆಳೆವ ಆ ಎತ್ತುಗಳೊ, ಪಾಪ,
ಮುಕ್ಕಿರಿಯುತುಬ್ಬಸದಿ ನಡೆಯುತ್ತಿದ್ದುವಲಾ !
ನೇಗಿಲ ಗುಳಕ್ಕೆ ಸಿಕ್ಕಿದ ಮಿಕ್ಕ ಕ್ರಿಮಿಕೀಟ–
ವೆನಿತೊಂದು ಸತ್ತು ಹೊರಬಂದು ಹೆಂಟೆಯ ಮೇಲೆ
ಹುರಿಗಾಳಿನೊಲು ಹರಡಿದುವು? ಮೇಲೆ ಕಾಣಿಸಿದ
ಅರೆಜೀವವಾದ ಆ ರೆಕ್ಕೆಹುಳುಗಳ ಹಿಡಿದು
ಮುಕ್ಕುತಿದ್ದುವು ಎಂತು ಹಕ್ಕಿಗಳ ಹಿಂಡು? ಆ
ಕೊಕ್ಕರೆಯ ಸಾಲೊ–ನೀ ಬಣ್ಣಿಸಿದ ಬೆಳ್ಳಕ್ಕಿ–
ನೀರಿಗೆ ಮುಳುಂಗಿ ಮೀಂಗಳನೆಂತು ಜೀವಂತ
ನುಂಗುತಿದ್ದುವು ? ಕೊಕ್ಕರೆಗು ಕಾದಿಹುದು ಮಿತ್ತು.
ಜೀವಕ್ಕೆ ಜೀವವೇ ಜೀವನವದೆನಿಸಿರುವ
ನಿಷ್ಕರುಣಿ ಲೋಕವಿದು? ಇದು ಚೆಲುವೆ? ಇದು ನಲವೆ?
(ತಟ್ಟನೆ ಮೇಲೆ ನೋಡಿ)ಅದೋ ಮತ್ತೆ ಕೊಕ್ಕರೆಯ ಸಾಲು.......
[ಕಾಲ ಬಳಿ ಒಂದು ಬೆಳ್ಳಕ್ಕಿ ತೊಪ್ಪನೆ ಕೆಡೆದು ಬೀಳುವುದು.]
ಅಯ್ಯೊ, ಇದೇನು?
ಕಾಲ ಬಳಿ ಕೆಡೆದು ಬಿದ್ದಿತು ಬಾನ ಕೊಕ್ಕರೆ !

(ಗರಬಡಿದಂತೆ ನಿಂತಲ್ಲಿ ಕುಸಿದಂತೆ ಕುಳಿತು, ಎರಡೂ ಕೈಗಳಿಂದ ಕಣ್ಣುಗಳನ್ನು ಮುಚ್ಚಿಕೊಳ್ಳುವನು.)

**ಮಹಾಬಲ–** ಗೌತಮಾ, ಏಕಿಂತು ಕುಳಿತೆ ?

**ಗೌತಮ–** (ಮೌನ.)

**ಮಹಾಬಲ–** ಏಕಿಂತು ಕುಳಿತೆ,
ಮಾತಾಡು, ಗೌತಮಾ !

**ಗೌತಮ–** (ಕಣ್ಣು ಮುಚ್ಚಿಯೇ ಇರುವನು) ಕಾಣದೇ ಗೆಳೆಯಾ?

**ಮಹಾಬಲ–** ಬಾಣ ನಾಟಿದೆ ಬಿದ್ದ ಬೆಳ್ಳಕ್ಕಿಯಾ ಹೊಡೆಗೆ.

**ಗೌತಮ–** (ಕೈ ತೆಗೆದು, ನೋಡಿ, ಮತ್ತೆ ಮುಚ್ಚಿಕೊಂಡು)
ನಾ ನೋಡಲಾರೆ, ಬಾಣವ ಕೀಳಲಾರೆ. ಆ

**ಗೌತಮ–** ಅಂತಿರಲು, ಹೊರಜಗವ ನೋಡುವ ಸುಯೋಗವಿದು
ನಿನ್ನ ಸೋದರಿಯ ಉಪಕೃತಿ ; ಮರೆಯೆ ನಾನದನು ;
ನಿನ್ನ ತಂಗಿಗೆ ನನ್ನ ಧನ್ಯವಾದಗಳು.

(ತೆರೆ)

## ನೋಟ ೬

[ಹಿಂದಿನ ನೋಟದ ಬನದೆಡೆಯ ಮತ್ತೊಂದು ಭಾಗ.]

**ಮಹಾಬಲ–** ನಿನ್ನ ನಿಡುಗಾಲದಾಕಾಂಕ್ಷೆ, ಪ್ರಕೃತಿಯ ಚೆಲುವ ಇದ್ದುದಿದ್ದಂತೆ ನೈಜತೆಯ ನಲ್‌ನೆಲೆಯಲ್ಲಿ
ನೋಡಿ ಕಣ್ಣಿಂದೀಂಟಬೇಕೆಂಬ ಹೆಬ್ಬಯಕೆ
ತೀರಿತಲ್ಲವೆ ಇಂದು?

**ಗೌತಮ–** (ಖಿನ್ನತೆಯಿಂದ) ಅಹುದು, ತೀರಿತು ಗೆಳೆಯ,
ತೀರಿತಿನ್ನೊಮ್ಮೆ ನೋಟಕ್ಕೆಳಸದಿಹ ರೀತಿ.

**ಮಹಾನಲ–** ನಡು ವಸಂತದ ಪೂರ್ಣಸೌಂದರ್ಯವನು ಸವಿದು ಏನಿದೀ ವ್ಯಾಕುಲತೆ, ಏಕೆ ಮನದೀ ಕುಗ್ಗು?
ಆ ಹಾರುಹೂ ಚಿಟ್ಟೆ, ಮೆಲ್ಲುಲಿಯ ಆ ಪುರುಳಿ,
ಇಂಚರದ ಕೋಗಿಲೆ, ಸಂಚರಿಪ ತೋರಣದ
ಗಿಳಿಸಾಲು, ಮಂದ್ರಮಂಜುಳ ದನಿಯ ಆ ತುಂಬಿ,
ಬಾನ ಚಪ್ಪರಕೆ ಬಿಳಿಬಾವುಟವ ಕಟ್ಟಿದ್ದ ಬೆಳ್ಳಕ್ಕಿಗಳ ತರಂಗಿತ ಪಂಕ್ತಿ, ಸರಸಿಯಲಿ
ಕೆಂದಾವರೆಯ ಕೆಳೆಯಲೋಲಾಡುವರಸಂಚೆ.......

**ಗೌತಮ–** ಸಾಕು, ಗೆಳೆಯಾ, ಸಾಕು, ಎದೆಯ ಗರಗಸಕೊಯ್ವ
ನಿನ್ನ ಈ ಸೌಂದರ್ಯಸೂಕ್ತ. ಚೆಲುತೋರಿಕೆಯ
ಜಗದ ತುಂಬೆಲ್ಲ ಹಿಂಸಾಕ್ರೌರ್ಯಗಳೆ ತುಂಬಿ
ತೆರೆಮಸಗುತಿರುವಂತೆ ತೋರುತಿದೆಯಿಂದೆನಗೆ.
ಹಿಂಸೆ ಕ್ರೌರ್ಯಗಳನ್ನು ಮರೆಮಾಜಲೆಳೆದಿರುವ
ಬಣ್ಣಜವನಿಕೆ ನೀನು ಹೊಗಳತೊಡಗಿದ ಚೆಲುವು.
ನೆಲ ಉಳುವನೆಂದು ನೀನೆನಗೆ ತೋರಿದ ಆತ,

ಅಂದೆನ್ನ ತಲೆ ತಗ್ಗುವಂತೆ ಮಾಡಿದ ಮಹಾ
ವೀರನಲ್ಲವೆ ನೀನು !

**ಮಹಾಬಲ–** (ಸಾತ್ವಿಕ ರೋಷದಿಂದ ಅವುಡುಗಚ್ಚಿ)
ಬಡಹಕ್ಕಿ ಸಾಯುವುದ ನೋಡಲಾರದೆ ಕರುಣೆ–
ಯುಕ್ಕಿ ಎದೆಯನು ಕೊಚ್ಚೆ, ಮುಚ್ಚೆವೋಗಿಹನವನು ;
ಇಂಥ ಕರುಣಾಮೂರ್ತಿಯನು ಚುಚ್ಚು ಮಾತಿನಲಿ
ನೋಯಿಸಲದೆಂತು ಮನ ಬಂದಿತೋ, ಅಚ್ಚರಿ !

**ದೇವದತ್ತ–**ಆಹ, ಕರುಣಾಮೂರ್ತಿ ! ಕರುಣೆ ಹೆಣ್ಣಿನ ಗುಣ ;
ರಕ್ತ ಕಂಡಲ್ಲಿ ಪ್ರಜ್ಞಾಹೀನರಾಗುವರು
ಹೆಂಗಸರು, ಇಲ್ಲವೋ ಹೆಣ್ಣಿಗರು ; ದುರ್ಬಲರು;
ಕ್ಷತ್ರಿಯ ಕುಮಾರರೆಂದಿಗು ಅಲ್ಲ.

**ಮಹಾಬಲ–** (ಕಳವಳಗೊಂಡು)ಅಯ್ಯೊ, ಇನ್ನೂ
ಮೂರ್ಛೆ ತಿಳಿಯಲೆ ಇಲ್ಲವಲ್ಲ! ಚೆನ್ನಾ, ಚೆನ್ನಾ !

**ಗೌತಮ–** (ಕಣ್ಣುಬಿಟ್ಟು)ಏಕೆ ? ಏನಾಯಿತು ಮಹಾಬಲಾ? ಚೆನ್ನನನು ಕೂಗುತಿಹೆ?

**ಮಹಾಬಲ–** ನೀ ಮೂರ್ಛೆ ಹೋದೆಯೆಂದೆಣಿಸಿ ಕಳವಳಗೊಂಡೆ.
ಸ್ವಸ್ಥನಾಗಿಹೆ ತಾನೆ?

**ಗೌತಮ–** (ಬೆರಗಾಗಿ) ಮೂರ್ಛೆಯೇ? ನಾ ಮೂರ್ಛೆ–
ಹೋಗಿದ್ದೆನೇ ? ಮೂರ್ಛೆ !... ಇರಲಾರದು, ಇಲ್ಲ.........
ಮೈಯುಳಿದು ನನ್ನ ಮನ ಪಯಣಿಸಿತ್ತೆಲ್ಲಿಗೋ.

**ದೇವದತ್ತ–**ಮೂರ್ಛೆಯೋ ಮೈಮರೆವೊ ನಿದ್ದೆಯೋ ಭ್ರಾಂತಿಯೋ–
ದೇಹದೌರ್ಬಲ್ಯಕ್ಕೆ ಯಾವ ಹೆಸರಿಡಲೇನು !
ನನಗದಪ್ರಕೃತ : ಗೌತಮ, ನನ್ನ ಗುರಿಹೊಡೆತಕ್ಕೆ
ಸಿಕ್ಕಿ ಸತ್ತಿಹ ಹಕ್ಕಿಯನ್ನಿತ್ತ ತಾ. ಅದುವೆ
ನನಗೆ ಸೇರಿದ ಒಡವೆ, ನಾ ಬಿಡೆನು.

**ಗೌತಮ–** ನಾ ಕೊಡೆನು :
ಸತ್ತಿಲ್ಲ ಈ ಹಕ್ಕಿ. ನನ್ನ ಹೃದಯದ ಕಾವು
ಕೊಟ್ಟು ಉಳಿಸಿದೆನಿದನು. ಜೀವವುಳಿಸಿದೆನಾಗಿ
ಜೀವ ನನ್ನದು, ನಾನು ಕೊಡಲಾರೆ, ಕೊಡಲಾರೆ.

**ಮಹಾಬಲ–** ವ್ಯಾಜ್ಯವೇತಕೆ, ಇದಕೆ? ಯಾರ ಒಡವೆಯಿದೆಂದು

ನಟ್ಟ ಬಾಣವನು ಹಕ್ಕಿಗೆ ನೋವು ಕೊಡದಂತೆ
ಕಿತ್ತುತೆಗೆ ಮೆಲ್ಲನೆ, ಮಹಾಬಲ, ಮೆಲ್ಲನೆ.

**ಮಹಾಬಲ–** (ಮೆಲ್ಲನೆ ಹಕ್ಕಿಯ ಬಾಣವನ್ನು ಕೀಳುವನು.)
(ಕ್ಷಣ ಹೊತ್ತಾದ ಮೇಲೆ)

**ಗೌತಮ–** ಕಿತ್ತು ತೆಗೆದೆಯ, ಗೆಳೆಯ?

**ಮಹಾಬಲ–** ಕಿತ್ತು ತೆಗೆದಿಹೆನು.

**ಗೌತಮ–** (ಕಣ್ಣು ಮುಚ್ಚಿಕೊಂಡೇ) ಹಕ್ಕಿಯನು ನನ್ನ ತೊಡೆಮಡಿಲಿನಲಿ ಪಟ್ಟಿರಿಸು.

**ಮಹಾಬಲ–** (ಹಕ್ಕಿಯನ್ನು ಗೌತಮನ ತೊಡೆಯ ಮೇಲಿರಿಸುವನು.)

**ಗೌತಮ–** ಒಳಿತಾಯ್ತು. ಬಿಸುಪಿಹುದು; ಹಕ್ಕಿ ಬದುಕಿದೆಯೇ?

**ಮಹಾನಲ–** ಸತ್ತಿಲ್ಲ; ಬದುಕಿಲ್ಲ: ಸಾವುಸಂಕಟವದಕೆ.

**ಗೌತಮ–** ಒರಸದರ ನೆತ್ತರನು ನನ್ನ ವಸ್ತ್ರಾಂಚಲದಿ.

**ಮಹಾಬಲ–** (ಒರಸಿ) ಒರಸಿಹೆನು, ಆದರೂ ಬಸಿಯುತಿದೆ ಹನಿಹನಿದು.

**ಗೌತಮ–** ಅಹುದು, ತೊಡೆ ತೊಯ್ದು ಬಿಸಿ ತೋರುತಿದೆ.–
ಬಾಣವನು
ಬಿಟ್ಟವರು ಯಾರು ?

**ದೇವದತ್ತ–** (ಪ್ರವೇಶಿಸಿ : ಎದುರುನಿಂತು, ಎದೆ ತಟ್ಟಿ)
ಯಾರೇ? ನಾನು ! ದೇವದತ್ತ !

**ಗೌತಮ–** (ಮುಚ್ಚಿದ್ದ ಕೈ ತೆಗೆದು, ಕಣ್ಣುಬಿಟ್ಟು) ದೇವದತ್ತ ! ದೇವದತ್ತನೆ?

**ದೇವದತ್ತ–** ಅಹುದಹುದು, ನಾನೆ.
ಈಗಲಾದರು ಒಪ್ಪಿಕೋ, ಯಾರು ಬಲ್ಲಿದರು
ಬಿಲ್ವಿದ್ಯೆಯಲಿ, ನೀನೊ ನಾನೊ ಯಾರೆಂಬುದನು.

**ಗೌತಮ–** (ಮೌನ)

**ದೇವದತ್ತ–** ಬಾಯಿಬಿಡು, ಗೌತಮಾ : ಮೂಗುವಟ್ಟಿಹೆಯೇಕೆ?
ಅತ್ತಿತ್ತ ಅಲುಗದಿಹ ಅಚಲ ಲಕ್ಷ್ಯಕೆ ಯಾರು
ಬೇಕಾದರೂ, ಹೆಣ್ಣುಮಗು ಕೂಡ, ಬಾಣವನು
ಹೊಡೆದು ಭೇದಿಸಬಹುದು. ಬಾನಿನಲಿ ಹಾರುತಿಹ
ಹಕ್ಕಿಯನು ಹೊಡೆದು ನೀ ಕೆಡಹಬಲ್ಲೆಯ ? ಹೇಳು.

**ಗೌತಮ–** (ಮೌನ ; ತಲೆ ತಗ್ಗಿಸಿರುವನು)

**ದೇವದತ್ತ–** ಮಾತಾಡು, ಸೋದರನೆ : ಏಕೆ ತಲೆ ತಗ್ಗಿಸಿಹೆ?

ಶೋಧಿಸಿ ನಿದಾನವನು ಅರಿತಿಹೆನು : ಅರಮನೆಯ
ಉದ್ಯಾನದೆಲ್ಲೆಯನು ಮೀರಿಯವರನು ಕಳಿಸಿ–
ಕೊಟ್ಟುದೆಮ್ಮಪರಾಧ; ಹೊರಲೋಕದಾಲೋಕ–
ದಿಂದವರ ಹೃದಯದಲಿ ಮೊಳೆತಿಹುದು ಕರುಣೆ ಕುಡಿ ;
ಅದ ಬೆಳೆಯಗೊಟ್ಟೆವೋ, ಅಸಿತಮುನಿಗಳು ಕಂಡು
ಪೇಳ್ದ ಮುಂಗಾಣ್ಕೆ ನಿಜವಹುದು; ಲೋಕದ ಜಟಿಲ
ಜಂಜಡವ ಕಂಡವರು ವೈರಾಗ್ಯವನು ತಳೆದು
ಸನ್ಯಾಸಿಯಾಗುವರು ; ಸರ್ವಸಾಹಸಗೈದು,
ಕರುಣೆಕುಡಿ ಬೆಳೆದು ವೈರಾಗ್ಯವಲ್ಲರಿಯಾಗಿ
ಹಬ್ಬದೊಲು ಹಂಚಿಕೆಯ ಕೈಗೊಳುವುದಿದೆ ನಮ್ಮ
ಕರ್ತವ್ಯ.

**ಶುದ್ಧೋದನ–** ಮುನಿಗಳ ಭವಿಷ್ಯವದು ಹುಸಿಯಹುದೆ?

**ಮಹಾನಾಮ–** ಎಂದಿಗೂ ಇಲ್ಲ. ಮುನಿ ನುಡಿದ ಪರಿಯುಲ್ಲವರು ಸಮ್ರಾಟರಾಗುವರು, ಇಲ್ಲವೋ ಸಂನ್ಯಾಸಿ. ಇಂದು ರಾಜಕುಮಾರರಿಹರು ಸಂದಿಗ್ಧತೆಯ
ಸ್ಥಿತಿಯಲ್ಲಿ, ಜೀವನದ ದಾರಿ ಕವಲೊಡೆದಿರುವ
ಇಕ್ಕಟ್ಟಿನಿರುಬಿನಲಿ; ಆ ಕವಲೊ ಈ ಕವಲೊ,
ನಮ್ಮ ಯತ್ನದ ಮೇಲೆ ನಿಂತಿರುವುದೀ ಪ್ರಶ್ನೆ,
ಅದರ ಪರಿಹಾರ.

**ಶುದ್ಧೋದನ–** ಈ ವಿಷಮ ಸಂದರ್ಭದಲಿ,
ನಮ್ಮ ಯತ್ನವದಾವುದದ ತಿಳಿಸಿ, ಮಂತ್ರಿಗಳೆ,
ನಿಮ್ಮ ಹಿತನುಡಿಯೇನು?

**ಮಹಾನಾಮ–** ರಾಜಭವನ ಸುವರ್ಣ–
ಪಂಜರದ ನಡುವೆ ಬಲಿಯುವ ವಜ್ರಪಂಜರವ.

**ಶುದ್ಧೋದನ–** ಒಗಟೆಯಂತಿಹ ನಿಮ್ಮ ವಾಕ್ಯದಿಂಗಿತವೇನು?

**ಮಹಾನಾಮ–** ವೈವಾಹ ವಿಧಿಯ ಬಂಧುರ ಬಂಧನದಿ ಬಿಗಿದು,
ಶೃಂಗಾರ ಸಾರಸಾಗರದಲಿ ಕೆಡಹುವುದು.

**ಶುದ್ಧೋದನ–** (ನೋವಿನ ವಿಕಟ ನಗೆ ನಕ್ಕು)
ಬರಿ ಭ್ರಾಂತಿ ! ವೈರಾಗ್ಯ ಲಕ್ಷಣದ ಯುವಕನಿಗೆ

ಹಿರಿಯ ದೊರೆಗಳೆ ತೀರ್ಪು ಕೊಡಲಿ. ಹಿಂದಿರುಗೋಣ
ಪುರಕೆ, ನಡೆಯಿರಿ....ಚೆನ್ನ, ಚೆನ್ನಾ.
(ಇನ್ನೂ ಗಟ್ಟಿಯಾಗಿ ಕೂಗುವನು.) ಚೆನ್ನಾ !
(ರಥ ಬರುವ ಸದ್ದಾಗುವುದು.)
ರಥವಿತ್ತಲೇ ಬರುತಲಿಹುದು, ಬನ್ನಿರಿ, ಬನ್ನಿ.

**ದೇವದತ್ತ–** ಅಂತೆಯಾಗಲಿ. ಮಹಾಪ್ರಭುಗಳೇ ತೀರ್ಪನ್ನು
ಕೊಡಲಿ–ರಥದಲ್ಲಿ ನನಗೂ ಸ್ವಲ್ಪ ಎಡೆಯುಂಟೊ ?

**ಗೌತಮ–** ನಮ್ಮ ರಥದಲಿ ಮಾತ್ರವಲ್ಲೆಮ್ಮ ಹೃದಯದಲು
ನಿನಗುಂಟು ಎಡೆ. ನೀನು ನನ್ನ ಹಗೆಯೇನಲ್ಲ.
[ಎಂದು ಮುಂದಕ್ಕೆ ಹೆಜ್ಜೆಯಿಡುವನು. ಮಹಾಬಲ,
ಅವನ ಹಿಂದೆ ದೇವದತ್ತ–ಹಿಂಬಾಲಿಸುವರು.]

(ತೆರೆ)

## ನೋಟ ೭

[ಮೊದಲ ನೋಟದಲ್ಲಿನ ಮಂತ್ರಾಲೋಚನೆಯ ಓಲಗಸಾಲೆ.]

**ಮಹಾಬಲ–** (ಕೈಕಟ್ಟಿ ನಿಂತಿರುವನು) ಮಹಾಪ್ರಭೂ,
ರಾಜಕುಮಾರರ ಇರವು ಚಿಂತಾಜನಕವೆನುತ
ತಾವು ತಿಳಿಸಿದ ಚಣವೆ ಆರಯ್ದೆನೆಲ್ಲವನು :
ತಾವು ನುಡಿದಂತವರು ಲೋಕವೇ ಬೇಡದೊಲು
ಖಿನ್ನರಾಗಿಹರು, ಏಕಾಂತವನು ಬಯಸುತ್ತ,
ಮೌನವನು ಕೆಳೆಗೊಂಡು, ಸುಖಭೋಗಗಳ ಕಡೆಗೆ
ಕಡೆಗಣ್ಣ ನೋಟವನು ಬೀರದೆಯೆ, ಬಳಿಸಾರೆ
ನಿದ್ದೆವೆಣ್ಣವಳನ್ನು ಓಡಿಸುತ, ವ್ಯಾಸಂಗ
ಕ್ರೀಡಾವಿನೋದಗಳ ಹಗೆಯಂತೆ ಬಗೆಯುತ್ತ,
ಕುಳಿತಲ್ಲಿ ನಿಂತಲ್ಲಿ ಕರೆಯುತ್ತ ನಿಟ್ಟುಸಿರ,
ನಡೆಬೊಂಬೆಯಾಗಿಹರು ; ಇದು ಮಾನಸಿಕ ರೋಗ–
ವೆಂಬ ಸಂಶಯಕಿಲ್ಲ ಎಡೆ ; ಮಹಾಬಲನನ್ನು
ಕೇಳಿ, ತುದಿಮೊದಲಿಂದ ಸಂದರ್ಭಸರಣಿಯನು

ನಡೆಯಲದರಂತೆ; ಮಂಗಳಕಾರ್ಯಕಣಿಮಾಡಿ.

**ಮಹಾನಾಮ–** ಅಪ್ಪಣೆ, ಮಹಾಪ್ರಭು. ಶುಭ ಕುಮಾರರಿಗಾಗಿ,
ರಾಜ್ಯಕ್ಕೆ ಜನಪದಕೆ ಸರ್ವಶುಭವಾಗಲಿ.

[ತೆರೆ]



ಮಗಳ ಕೊಡಲಿಚ್ಛಿಸುವ ಮೊದ್ದನೂ ಇಹನೇನು?
**ಮಹಾನಾಮ–** ಪ್ರಭುಸೇವೆಗೀ ದಾಸ ಸಿದ್ಧನಾಗಿಹನಲ್ತೆ?
**ಶುದ್ಧೋದನ–** (ಅಚ್ಚರಿಗೊಂಡು) ನಿಜವೋ ವಿನೋದವೊ? ಯಶೋಧರೆಯ
ಗೌತಮಗೆ
ಕೊಡಲಿರುವಿರಾ ನೀವು?
**ಮಹಾನಾಮ–** ಒಬ್ಬರೊಬ್ಬರನವರು
ಒಲಿದು ಮೆಚ್ಚಿರುವಂದು, ಮದುವೆಯೆನ್ನುವ ಮಾತು
ನಮ್ಮ ಸಂತಸಕಲ್ತೆ ?
**ಶುದ್ಧೋದನ–** ಅದು ದಿಟವೆ ಮಂತ್ರಿಗಳೆ?
**ಮಹಾನಾಮ–** ಇಬ್ಬರೊಲವಿನ ಸೂಕ್ಷ್ಮಗತಿ ಕಂಡರರಿತವಿದು.
**ಶುದ್ಧೋದನ–** (ಹಿಗ್ಗಿನಿಂದ) ನಿಮ್ಮ ನುಡಿಯನು ಕೇಳಿ, ಅವರ ಮದುವೆಯದೀಗ
ನಡೆದುದನು ನಾ ನೋಡಿ ನಲಿದನಿತೆ ಸಂತೋಷ–
ವಾಗಿಹುದು ನನಗಿಂದು. ಕನ್ಯಾಪಿತನಿಗೆಂತೊ
ವರನ ಪಿತನಿಗು ಅಂತೆ ಆತಂಕವಿಹುದಲ್ತೆ?
ಒಳ್ಳಿತಾಯ್ತಾದೊಡೆಯು, ನಮ್ಮ ವಂಶಾನುಗತ
ಪದ್ಧತಿಯ ರೀತಿ ಸ್ವಯಂವರವ ಸಮಕಟ್ಟೆ,
ಅವರ ಒಲವಿನ ಯೋಗಕಾಗದೆ ವಿಯೋಗ? ಈ
ಸಂದೇಹದೆಚ್ಚರಿಕೆಮುಳ್ಳು ಬಗೆಚುಚ್ಚುತಿದೆ;
'ಅತ್ತ ದರಿ ಇತ್ತ ಹುಲಿ'ಯೆನುವ ತೆರನಾಗಿಹುದು.
**ಮಹಾನಾಮ–** ಪ್ರಭುವೆ, ಮುಳ್ಳಿನ ಮೊನೆಯದಾಗಲೇ ಮುರಿದಿಹುದು,
ವ್ಯಥಿಸದಿರಿ. ಶೌರ್ಯಪ್ರದರ್ಶನದ ಪಂದ್ಯದಲಿ
ದೇವದತ್ತನ ಗೆಲಿದ ಗೌತಮನ ಗೆಲುವಂಥ
ವೀರ ರಾಜಕುಮರರಾರಿಹರೊ ನಾನರಿಯೆ.
ವೈವಾಹ ಪೂರ್ವ ಸ್ವಯಂವರದ ಸಿದ್ಧತೆಗೆ
ನೀಡಿರಾಣತಿಯ, ರಾಜಕುಮಾರರೊಳಿತನ್ನು
ಸಾಧಿಸಲುಪಾಯವಿದು, ಬೇರೊಂದ ನಾನರಿಯೆ;
ಇರಲರುಹಲದ ತಲೆಯಲಾನುವೆನು, ನಡಸುವೆನು
ಆಣತಿಯ.
**ಶುದ್ಧೋದನ–**ನಿಮ್ಮಭಿಪ್ರಾಯಕನುಮತಿಸಿರುವೆ,

# ಹೂವಾಡಿಗಿತ್ತಿ

ಹೂವನು ಮಾರುತ
ಹೂವಾಡಿಗಿತ್ತಿ
ಹಾಡುತ ಬರುತಿಹಳು ;
ಘಮ ಘಮ ಹೂಗಳು
ಬೇಕೇ ಎನುತ
ಹಾಡುತ ಬರುತಿಹಳು.
ಬಿಳುಪಿನ ಮಲ್ಲಿಗೆ
ಹಳದಿಯ ಸಂಪಿಗೆ
ಹಸುರಿನ ಹೊಸ ಮರುಗ
ಹಾಕಿ ಕಟ್ಟಿರುವೆ
ಬೇಕೇ ಎನುತ
ಹಾಡುತ ಬರುತಿಹಳು.
ಹೊಸ ಸೇವಂತಿಗೆ
ಹೊಸ ಇರುವಂತಿಗೆ
ಅರಿಸಿನ ತಾಳೆಯಿದೆ
ಅಚ್ಚ ಮಲ್ಲೆಯಲಿ
ಪಚ್ಚೆ ತೆನೆಗಳು
ಸೇರಿದ ಮಾಲೆಯಿದೆ.
ಕಂಪನು ಚೆಲ್ಲುವ
ಕೆಂಪು ಗುಲಾಬಿ
ಅರಳಿದ ಹೊಸ ಕಮಲ ;
ಬಿಳುಪಿನ ಜಾಜಿ,
ಹಳದಿಯ ಜಾಜಿ,
ಅರಳಿದ ಬಿಳಿ ಕಮಲ.

# ಇರುವೆ

ಇರುವೆ! ಇರುವೆ! ಇರುವೆ! ಇರುವೆ!
ಎಲ್ಲೆಲ್ಲೂ ಇರುವೆ!
ಎಲ್ಲಿ ನೋಡಿದರು ನೀನಿರುವೆ !
ಸಕ್ಕರೆ ಡಬ್ಬವ ತೆಗೆದರೆ ಇರುವೆ !
ಅಕ್ಕಿಯ ಮೂಟೆಯಲಲ್ಲೂ ಇರುವೆ !
ಬೆಲ್ಲದ ಅಚ್ಚನು ಮುತ್ತಿರುವೆ !
ಕಲ್ಲು ಸಕ್ಕರೆಯ ಸುತ್ತಿರುವೆ !
ಎಲ್ಲಿ ನೋಡಿದರು ನೀನಿರುವೆ !
ತುಪ್ಪದ ಗಡಿಗೆಯ ಮನೆಮಾಡಿರುವೆ !
ಹಪ್ಪಳ ಸಂಡಿಗೆಯನು ಕೊರೆದಿರುವೆ !
ಹಾಲಿನ ಒಳಗೂ ನೀನಿರುವೆ !
ಕಾಫಿಯ ಒಳಗೂ ನೀನಿರುವೆ !
ಎಲ್ಲಿ ನೋಡಿದರು ನೀನಿರುವೆ !
ಇರುವೆ! ಇರುವೆ! ಇರುವೆ! ಇರುವೆ!
ಎಲ್ಲೆಲ್ಲೂ ಇರುವೆ!
ಎಲ್ಲಿ ನೋಡಿದರು ನೀನಿರುವೆ!

* * * *

ಬಗೆ ಬಗೆ ಹೂಗಳು
ಬೇಕೇ ಎನುತ
ಹಾಡುತ ಬರುತಿಹಳು ;
ಹೂವನು ಮಾರುವ
ಹೂವಾಡಿಗಿತ್ತಿ
ಹಾಡುತ ಬರುತಿಹಳು.

* * * *

## ಮೊಸರ್ಬೇಕ್ ಮೊಸರು !

ಮೊಸರ್ಬೇಕ್ ಮೊಸರು ! ಮೊಸರ್ಬೇಕ್ ಮೊಸರು !
ನನ್ನಲ್ಲಿ ಕೊಂಡರೆ ಕೊಡುತೀನಿ ಕೊಸರು !
ನನ್ನದು ಶ್ರೀರಂಗಪಟ್ಟಣದ ಮೊಸರು,
ಎಲ್ಲರಿಗು ಗೊತ್ತು ಈ ಮೊಸರಿನ ಹೆಸರು
ನಾಕೆಮ್ಮೆ ಕಟ್ಟಿವಿನಿ : ಒಳ್ಳೆಯ ಹಸುರು
ಹುಲ್ಲನು ಮೇಯ್ತಾವೆ : ಅವುಗಳ ಮೊಸರು
ಚೌಕಾಸಿ ಮಾಡ್ಬೇಡಿ : ಒಳ್ಳೆಯ ಮೊಸರು–
ನೀರಾಗಿದ್ರೆ ಕೆಂಪಿ ಅಲ್ಲ ನನ್‌ಹೆಸರು
ಮೋಸ ಗೀಸ ಇಲ್ದೆ ಹಾಕ್ತೀನಿ ಮೊಸರು,
ಮೋಸ ಕಂಡರೆ ನನ್ನ ತಲೆಗಿಕ್ಕಿ ಕೆಸರು.
ನಿಂ ಹೊಟ್ಟೆ ತಣ್ಗಿರಲಿ, ಕೊಳ್ಳಿ ನನ್ನಮೊಸರು :
ನಿಂ ದುಡ್ಡು ಕೊಂಡು ಹೇಳ್ತೀನಿ ನಿಂ ಹೆಸರು.
ಮೊಸರ್ಬೇಕು ಮೊಸರು ! ಮೊಸರ್ಬೇಕ್ ಮೊಸರು !
ಶ್ರೀರಂಗಪಟ್ಟಣದ ಒಳ್ಳೆ ಗೆರಣೆ ಮೊಸರು!!

* * * *

# ಬಾತು ಕೋಳಿ ಕುಣಿತ



ಬಾತು ಕೋಳಿ ಪೀಪಿ ಹಿಡಿದು
        ಪೀ ಎಂದಿತು–ಪೀ ಪೀ ಎಂದಿತು ;
ಬಾತುಮರಿ ಕುಣಿದು ಕುಣಿದು
        ತೈ ಎಂದಿತು–ತೈ ತೈ ಎಂದಿತು.
ಪೀ ಪಿ ಪಿ ಪೀ ಪೀ ಪಿ ಪೀ ಪಿ
        ಪೀ–ಪೀ–ಪೀ
ತೈ ತಕ್ಕ ತೈ ತಕ್ಕ
        ತೈ–ತೈ–ತೈ.
ಪೀಪಿ ಕೇಳಿ ಬಾತು ಹಿಂಡು
        ಓಡಿ ಬಂದುವು–ಬಂದು ಪೀ ಎಂದುವು ;
ಎಲ್ಲ ಒಟ್ಟು ಕೂಡಿಕೊಂಡು
        ತೈ ಎಂದವು–ತೈ ತೈ ಎಂದುವು.
ಪಿ ಪೀ ಪೀ ಪಿ ಪಿ ಪೀ ಪೀ ಪಿ
        ಪೀ–ಪೀ–ಪೀ
ತಕ್ಕ ತೈ ತಕತ ತೈ
        ತೈ ತಕ್ಕ ತೈ

* * * *

## ಜಾಣ ಯಾರು ?

ಹೂಗಳಲೆಲ್ಲ ಗುಲಾಬಿಯೆ ಚೆಂದ;
ಆದರು ಮಲ್ಲಿಗೆ ಹೂವಿನ ಸುಗಂಧ
ಮನಸನು ಸೆಳೆಯುವುದು.
ನವಿಲನು ನೋಡಲು ಸಾಲವು ಕಣ್ಣು
ಕಾಣದ ಕೋಗಿಲೆ ಹಾಡದು ಚೆನ್ನು,
ಬೇಸರ ಕಳೆಯುವುದು.
ಒಂದೊಂದರಲ್ಲಿ ಒಂದೊಂದು ಗುಣ
ಉಂಟೆಂಬುದನರಿಯುವನೇ ಜಾಣ.

* * * *

## ಮಳೆ

ಆಗಸದಲ್ಲಿ ಮೋಡ ಕಟ್ಟುವುದು
ಗುಡುಗುಡು ಗುಡುಗು ಗುಡುಗುಟ್ಟುವುದು
ಥಳಿಲನೆ ಹೊಳೆವುದು ಮಿಂಚಿನ ಬಳ್ಳಿ
ಭೋರ್ಗರೆವುದು ಮಳೆ ಕ್ಷಣದಲ್ಲಿ!
ನೆಲವೆಲ್ಲಾ ಬರಿ ಕೆಸರಾಗುವುದು,
ಆದರೆ ಗಿಡಮರ ಹಸುರಾಗುವುದು;
ಬಿಸಿಲಿನ ತಾಪ ಹಿಂದೋಡುವುದು,
ತಂಗಾಳಿಯು ತಾನಾಡುವುದು.

* * * *

ಹೀಗೆಯೆ ರಂಗ
ಆದ ಪಟಿಂಗ.
ಪಟಿಂಗನೆಂದರೆ ಶುದ್ಧ ಒರಟ,
ತಿರುಳಿಲ್ಲದ ತೆಂಗಿನ ಕಾಯ್‌ಕರಟ !

* * * *

## ನಂ ಚಿಕ್ಕ

ಎಲ್ಲರಿಗಣ್ಣ ನಂ ಚಿಕ್ಕ :
ಲೆಕ್ಕ ಅಂದರೆ ಬಲು ದುಃಖ !
ಕೂಡುವುದೆಲ್ಲ ಕವಡೆ ಕಲ್ಲು
ಕಳೆಯುವುದೆಲ್ಲ ಪುಸ್ತಕ ಬಳಪ
ಗುಣಿಸುವುದೆಲ್ಲ ಗೋಡೆಯ ಚಿತ್ರ
ಭಾಗ್ಸೋದೆಲ್ಲ ಬಾಯಿನ ಒಳಗೆ !
ಜೇಬಿನ ತುಂಬ ರೂ. ಆ. ಪೈ !
ಎಲ್ಲಿತ್ತೆನೆ ಬಾಯ್‌ಬಿಟ್ಟರೆ ಸೈ !
ಬೀದಿಯ ಕುಣಿತ
ಚಿಕ್ಕನ ಗಣಿತ !
ಮನೆಯಲಿ ಜೋರು ಕೈಯಿ ಬಾಯಿ ;
ಪರೀಕ್ಷೆಯಲ್ಲಿ ಕುಂಬಳಕಾಯಿ !
ಎಲ್ಲರಿಗಣ್ಣ ನಂ ಚಿಕ್ಕ :
ಲೆಕ್ಕ ಎಂದರೆ ಬಲು ದುಃಖ !

* * * *

## ತುಂಟರು

ಕಿಟ್ಟು ಪುಟ್ಟು ಒಟ್ಟಿಗೆ ಸರ್ರನೆ
ಬೀದಿಯ ಬಚ್ಚಲ ಹಾರಿದರು ;
ಒಬ್ಬನು ಎಡವಲು ಇಬ್ಬರು ಜರ್ರನೆ
ಬಚ್ಚಲ ಕೊಚ್ಚೆಗೆ ಜಾರಿದರು.
ಅವರಿಗೆ ಮೈ ಕೈ ಕೆಸರಾಯ್ತು !
ತುಂಟರು ಎಂದು ಹೆಸರಾಯ್ತು !

* * * *

## ಕಳ್ಳ ಸಿದ್ದ

ಅಡಿಗೆ ಮನೆಗೆ ಹೋಗಿ ಸಿದ್ದ
ಕರಿಯ ಬೆಲ್ಲದಚ್ಚು ಕದ್ದ.
ಅಚ್ಚಿನಲ್ಲಿ ಬರಿಯ ಗೊದ್ದ !
ಕಾಣಲಿಲ್ಲ ಸಿದ್ದ, ಪೆದ್ದ–
ಹಾಗೆ ಹಾಗೆಯೇ ಮೆದ್ದ.
ಬಾಯ ಕಚ್ಚಲಾಗ ಗೊದ್ದ
ಅಳುತ ಅಳುತ ಅಲ್ಲೆ ಇದ್ದ ;
ಅಮ್ಮ ಬರಲು, ಸಿಕ್ಕಿಬಿದ್ದ !

* * * *

## ಪಟಿಂಗ ರಂಗ

ಗಣಗಣ ಹೊಡೆಯಿತು ಶಾಲೆಯ ಗಂಟೆ,
ಶಾಲೆಗೆ ಹೋಗಲು ರಂಗನ ತಂಟೆ.
ಚೊಯ್ಯೆಂದಿತು ಬಿಸಿ ಬಿಸಿ ಬಿಸಿ ದೋಸೆ
ಮರೆತನು ರಂಗನು ಪಾಠದ ಆಸೆ.
ಶಾಲೆಗೆ ಹೋದರೆ ಮೇಷ್ಟರ ಕಾಟ,
ಮನೆಯಲಿ ಉಳಿದರೆ ಆಟವೆ ಆಟ.–

# ಯಾರು ಚೆನ್ನು ?

ಗೋಡೆಯ ಮೇಲಿನ ಕನ್ನಡಿಯೆ,
ಹೇಳೆಲೆ ನಾ ಚೆನ್ನೆ ?
–ಎನ್ನುತ ಶಾರದೆ ಕೇಳಿದಳು.
ಗೋಡೆಯ ಮೇಲಿನ ಕನ್ನಡಿಯೆ
ಶಾರದೆಗಿಂತಲು ನಾ ಚೆನ್ನೆ ?
–ಎಂದು ಕೇಳಿದಳು ಕಮಲಾಕ್ಷಿ.
ಗೋಡೆಯ ಮೇಲಿನ ಕನ್ನಡಿಯೆ,
ಇಬ್ಬರಿಗಿಂತಲು ನಾ ಚೆನ್ನು
–ಎಂದು ಹೇಳಿದಳು ಪುಟ್ಟಚ್ಚಿ.
ಕನ್ನಡಿ ನಕ್ಕು
ಆಯಿತು ಮುಕ್ಕು !
ಹೇಳಿತು ಕೊನೆಗೆ
ಅದು ಹೀಗೆ :
ಶಾರದೆಯಾ ಮುಖ ಬಲು ಚೆನ್ನು–
ಅದರೆ, ಐಬು ಅವಳಿಗೆ ಕಣ್ಣು !
'ತುಂಬಾ ಲಕ್ಷಣ ಕಮಲಾಕ್ಷಿ–
ಆದರೆ ಬಣ್ಣ ಕಪ್ಪನೆ ದ್ರಾಕ್ಷಿ !
'ಹೊಟ್ಟೆಯ ಕಿಚ್ಚಿನ ಪುಟ್ಟಚ್ಚಿ
ನಾನೇ ಚೆನ್ನು ಎನ್ನುವ ಹುಚ್ಚಿ !
ಹೇಗಿರಲೇನು ?
ಎಲ್ಲಾ ಚೆನ್ನು :
ಒಳ್ಳೆಯ ಮನಸು
ಒಳ್ಳೆಯ ಮಾತು
ಒಳ್ಳೆಯ ನಡತೆ
ಉಳ್ಳವರೆಲ್ಲ
ಚೆನ್ನು, ಚೆನ್ನು.

* * * *

# ಕುರೋ ಕುರೋ ನಾಯಿಮರಿ

ಕುರೋ ಕುರೋ ನಾಯಿಮರಿ
ಓಡಿ ಬಾ ಬಾ !
ಅಮ್ಮ ಕೊಟ್ಟ ರೊಟ್ಟಿಚೂರು
ಅಪ್ಪ ಕೊಟ್ಟ ಬಿಸ್ಕತ್ತು
ಹಾಲು ಅನ್ನದೊಂದು ತುತ್ತು
ಕೊಡುವೆ ಬಾ ಬಾ !

ಕುರೋ ಕುರೋ ನಾಯಿಮರಿ,
ಓಡಿ ಬಾ ಬಾ !
ನಿನ್ನ ನಾನು ಹೊಡೆವುದಿಲ್ಲ,
ನನ್ನ ನೀನು ಕಚ್ಚಬೇಡ;
ಬೀದಿಯವರ ಕಂಡು ನೀನು
ಬಗುಳ ಬೇಡ, ತಿಳಿಯಿತೆ ?

ನಿನ್ನ ನಾನು ಬಿಡೆನು ; ನೀನು
ನನ್ನ ಬಿಟ್ಟು ಓಡಬೇಡ ;
ಎಲ್ಲಿ ಹೋದರಲ್ಲಿ ನಾವು
ಕೂಡಿರೋಣ ಜೊತೆಯಲಿ.
ಕುರೋ ಕುರೋ ನಾಯಿಮರಿ
ಓಡಿ ಬಾ ಬಾ!

ಇಂದಿನಿಂದ ನನ್ನ ಮರಿ–
ಹೊಟ್ಟೆ ತುಂಬ ತಿಂಡಿ ಕೊಡುವೆ,
ಮುದ್ದಾದ ಹೆಸರನಿಡುವೆ ;
ಕುರೋ ಎಂದು ಕರೆಯೆನು.
ಕುರೋ ಕುರೋ ನಾಯಿಮರಿ
ಓಡಿ ಬಾ ಬಾ !

# ನಮ್ಮ ಮನೆಯ ಕಂದ

ಹರಕು ಮೋಡ ಗಗನಕಂದ
ತೇಪೆ ಹಸುರ ನೆಲವು ಚೆಂದ
ಹರಕು ಬಟ್ಟೆ ತೊಟ್ಟರೇನು
ಚೆಂದ ನಮ್ಮ ಮನೆಯ ಕಂದ.

ಅರಳು ಹೂವು ತೋಟಕಂದ
ಹೊಳೆವ ತಾರೆ ಇರುಳಿಗಂದ
ನಗೆಯ ಮೊಗದ ಹೊಳೆವ ಕಣ್ಣ
ಕಂದ ನಮ್ಮ ಮನೆಗೆ ಚೆಂದ.

ಚಿಗಿವ ನೆಗೆವ ಕರುವೆ ಚೆಂದ
ಉಲಿವ ಹಾರು ಹಕ್ಕಿ ಚೆಂದ
ನಗುತ ನಲಿದು ಮನೆಯಲೆಲ್ಲ
ಹರಿವ ನಮ್ಮ ಕಂದ ಚೆಂದ.

ಎದುರು ಮನೆಯೊಳಿಷ್ಟು ಹೊತ್ತು
ನೆರೆಯ ಮೆನಯೊಳಷ್ಟು ಹೊತ್ತು
ಹೀಗೆ ಬೀದಿಗೆಲ್ಲ ಬೇಕು
ನಮ್ಮ ಮನೆಯ ಕಂದ–ಮುತ್ತು.

* * * *

# ಬಾನಿನ ಕನ್ನಡಿ

ಸಾರುತ ಬಾರ ತಿಂಗಳ ಚಂದಿರ
ಬಿಗಿಯುತ ಬಾನಲಿ ಜೊನ್ನದ ಹಂದರ
ಸುರಿಸುತ ಹಾಲಿನ ಮಳೆಯನ್ನು,
ಮುಳುಗಿಸುತದರಲಿ ತಿರೆಯನ್ನು.

ಆಡುವ ಬಾಲರು ನಿನ್ನನು ನೋಡಿ
"ಚಂದಕಿ ಮಾಮ" ಎನ್ನುತ ಹಾಡಿ,
ಜೊನ್ನದ ಹಾಲನು ಕುಡಿಕುಡಿದು
ತೇಗುತ ನಲಿವರು ಉಲಿದುಲಿದು.

ನೀ ಮೇಲೇರಲು ಬಾನಲಿ ನಗುತ
ಮಕ್ಕಳು ಕುಣಿವರು ನಿನ್ನನು ನೋಡುತ–
ನೀನಿರೆ ಹೊಳೆಯುತ ಬಾನಿನೊಳು
"ಬಾನಿನ ಕನ್ನಡಿ"ಯೆನ್ನುವರು.

ಬಾನಿನ ಕನ್ನಡಿಯೆನ್ನುತ ಹಾಡಿ
ಕರೆವರು ನಿನ್ನನು ಕರಗಳ ನೀಡಿ ;
ತಮ್ಮ ವದನವನು ಮುಕುರದಲಿ
ನೋಡುತ ನಲಿವರು ಹರುಷದಲಿ.

ಬಾ ಬಾ ಬಾ ಬಾ ಬಾನಿನ ಕನ್ನಡಿ,
ಬಾಲರ ಬಾಯೊಳು ಮೆರೆಯುವ ನಲ್ನುಡಿ–
ಬೀರುತ ಕಿರಣದ ತಂಪನ್ನು.
ಸಾರುತ ಬಾಳಿನ ಇಂಪನ್ನು !

* * * *

## ಹಾವು

ಇ
ಲ್ಲಿ
ಇ
ಲ್ಲಿ

ಹಾವು ಹಾವು ಹಾವು
ಹಾಹಾ ! ಹಾವು ಹಾ !
ಹಾ ಹಾ ಹಾ ಹಾ ಹಾ !
ಕಚ್‌ಚಿದೊಡೆ ಸಾವು !
ಹಾಕು ತಲೆಯ ಮೇಲೆ ಹೂವು.

ಗ
ಂ
ಟೆ
ಗ
ಣಗಣಗಂಟೆ

## ಇಲಿಯ ಬಾಲ

ಒಂದು
ಇಲಿ
ಕೋಣೆ
–ಯಲಿ
ಗೋಡೆ
ಬಳಿ
ಮೂಲೆ          ತು.
–ಯಲಿ          ಡಿ
ತೋಡಿ          ೦
ನೆಲ          ಕ
ಮಾಡಿ          ಗೆ
ಬಿಲ          ಹೀ
ಒ          ಲ
ಳ          ಬಾ
ಗೆ          ರ
ಹೋ          ದ
ಗೆ – ಅ

* * * *

ಎಂತಹ ಮುತ್ತು!
ಕನ್ನಡ ಮುತ್ತು.
ಬೇಕೇ ಮುತ್ತು?
ಬೇಕೇ ಬೇಕು.
ಏತಕೆ ಮುತ್ತು?
ಮುತ್ತಿನ ಸರಕೆ.
ಯಾರಿಗೆ ಆ ಸರ ?
ಕನ್ನಡ ತಾಯ್ಗೆ !

* * * *

## ಕಿಟ್ಟಿಯ ಪ್ರಶ್ನೆ

ನಾನೂ ಕಿಟ್ಟಿ ಸಂಜೆಯ ಹೊತ್ತು
ಬಯಲೊಳು ತಿರುಗುತ್ತಿರಲಾಗ
ಸೂರ್ಯನ ಬಿಂಬ ಕೆಳಕ್ಕೆ ಬಿತ್ತು
ಕೆಂಪಾಯ್ತಾಕಾಶವು ಬೇಗ

"ಏಕೆ ಆಕಾಶ ಕೆಂಪು, ಅಣ್ಣ?"
ಕಿಟ್ಟಿ ಪ್ರಶ್ನೆಯನು ಕೇಳಿದನು.
ಸೂರ್ಯ ಮುಳುಗಿದರೆ ಕೆಂಬಣ್ಣ
ಕಾಣುವುದೆನ್ನುತ ಹೇಳಿದನು.

"ಎಮ್ಮೇ ಪ್ಯಾಸನು ಮಾಡಿದ್ದೀಯ
ನಿನಗೇನೂ ತಿಳಿಯದು, ಅಣ್ಣ–
ನಮ್ಮ ಮನೆಯನೆಡವುತ ಸೂರ್ಯ
ಬಿದ್ದ, ರಕ್ತ ಹರಿಯುತ್ತಿದೆ. ಅಣ್ಣ."

* * * *

**ಕಿ**

ರೀಟ

ಧರಿಸುವ

ದೊರೆಗಳು

**ಇಲ್ಲ. ಟೋಪಿ**

ಹಾಕುವ ಜನರೆಲ್ಲ.

* * * *

## ಮುತ್ತಿನ ಸರ

ಮುತ್ತು! ಮುತ್ತು!
        ಕನ್ನಡ ಮುತ್ತು!
        ಎಂತಹ ಮುತ್ತು ?
ಬೆಳ್ಳಗೆ ನುಣ್ಣನೆ ಹೊಳೆಯುವ ಮುತ್ತು
        ಎಂತಹ ಬಿಳುಪು?
ಮಲ್ಲಿಗೆ ಹೂವಿನ ತಿಳಿ ಬಿಳುಪು.
        ಎಂತಹ ನುಣುಪು?
ಮಾವಿನ ಚಿಗುರಿನ ಮೈನುಣುಪು.
        ಎಂತಹ ಹೊಳಪು?
ನಗುತಿಹ ಕಂದನ ಕಣ್ಣಿನ ಹೊಳಪು.
        ಯಾರಾ ಕಂದ ?
        ಕನ್ನಡ ಕಂದ.
        ಎಂತಹ ಕನ್ನಡ ?
ಮುತ್ತಿನಂತಹ ಸಿರಿಸಿರಿ ಕನ್ನಡ.

ನಮ್ಮ ಹೊಟ್ಟೆ ಖಾಲಿ, ಖಾಲಿ !
ಸಂಪಿಗೆ ಮಲ್ಲಿಗೆ ರೋಜ
ಸೇಬು ದಾಳಿಂಬೆ ಚಕ್ಕೋತ
ಬೆಳೆಯೋ ತನಕ ನಾ ರಾಜ
ಬೆಳೆದಮೇಲೆ ನಮಗೆ ಖೋತ!

ಹಣ್ಣು ಹಂಪಲು ಬೆಳೆದು ದಣಿದು
ಕಷ್ಟಪಟ್ಟು ನೀರುಹುಯ್ದು
ಕಣ್ತುಂಬ ನೋಡ್ನೋಡಿ ತಣಿದು
ದಣಿಗೆ ಒಪ್ಪಿಸ್ಬೇಕು ಕುಯ್ದು.

ನಾನೊಬ್ಬ ತೋಟದ ಮಾಲಿ
ಬೆಳೆಯೋದು ಯಾರ್ದೊ ಹೂಹಣ್ಣು
ಸಾಕಾಗ್ದು ಸಿಕ್ಕೋ ಕೂಲಿ
ಹೆಂಡ್ರು ಮಕ್ಕಳ ಬಾಯ್ಗೆ ಮಣ್ಣು !

* * * *

## ಢುಂ ಢುಂ ಡೋಲು !

ಹುಡುಗಿ :

ಜುಟ್ಟು ಹೋಯ್ತು ಕ್ರಾಪು ಬಂತು
ಢುಂ ಢುಂ ಢುಂ
ದಟ್ಟಿ ಹೋಯ್ತು ಪ್ಯಾಂಟು ಬಂತು
ಢುಂ ಢುಂ ಢುಂ.

ಹುಡುಗ :

ಅರಿಸಿನ ಹೋಯ್ತು ಪೌಡರ್ ಬಂತು
ಢುಂ ಢುಂ ಢುಂ.
ಕರಿಮಣಿ ಹೋಯ್ತು ನೆಕ್ಲೆಸ್ ಬಂತು
ಢುಂ ಢುಂ ಢುಂ.

## ನವಿಲು ಮರಿ

ಬಣ್ಣಬಣ್ಣದಾ ನವಿಲುಗರಿ
ಹಾಕಿದೆ ಪುಸ್ತಕದಲ್ಲಿ ಮರಿ!

ಒಂದಿದ್ದುದು ನೂರಾಗಿದೆ, ಅಣ್ಣ,
ಎಲ್ಲಕ್ಕೂ ಇದೆ ಬಗೆಬಗೆ ಬಣ್ಣ !

ಗರಿಗಳೆಲ್ಲವೂ ತೆರೆವುವು ಕಣ್ಣ,
ಆಗ ನೋಡಲವು ಇನ್ನೂ ಚೆನ್ನ

ಬೆಳೆದೂ ಬೆಳೆದೂ ನವಿಲುಗರಿ,
ಕೊನೆಗಾಗುವುದು ನವಿಲುಮರಿ !

* * * *

## ಅಗ್ಗದ ರಾಗಿ

ಸುಗ್ಗಿಯಾಗೆ ನುಗ್ಗಿಹೋಗಿ
ಹಿಗ್ಗಾಮುಗ್ಗಾ ಜುಗ್ಗಿ ಜುಗ್ಗಿ
ಅಗ್ಗದ ಬೆಲೆಗೆ ಮುಗ್ಗಿದ ರಾಗಿ
ಎಗ್ಗ ತಂದ : ಹೆಂಡತಿ ಮೂಗಿ !

* * * *

## ತೋಟದ ಮಾಲಿ

ನಾನೊಬ್ಬ ತೋಟದ ಮಾಲಿ
ನನ್ನ ಹೆಂಡ್ತಿ ಹೆಸರು ಕಾಳಿ.
ಮಾಡೋದು ದೊಡ್ಡೋರ ಕೂಲಿ

# ಜಾಣಮಕ್ಕಳು

"ನಿಂ ತಂದೆಗೆ ಸಂಬಳ ಎಷ್ಟು?"
"ನಂಗೊತ್ತಿಲ್ಲಾರೀ."
"ನಿಂ ಅಣ್ಣಂಗೆ ಪ್ಯಾಸಾಯ್ತೇನೋ"
"ನಂಗೊತ್ತಿಲ್ಲಾರೀ."
"ನಿಂ ಅಕ್ಕಂಗೆ ಗಂಡ್ ಗೊತ್ತಾಯ್ತೆ?"
"ನಂಗೊತ್ತಿಲ್ಲಾರೀ."
"ನಿನ್ ಲಂಗಕ್ಕೆ ಏನ್ ಕೊಟ್ರಮ್ಮ ?"
"ನಂಗೊತ್ತಿಲ್ಲಾರೀ."
"ನಿಂ ಮನೆಗೆ ಬಾಡಿಗೆ ಎಷ್ಟು ?"
"ನಂಗೊತ್ತಿಲ್ಲಾರೀ."
"ಕಾಶೀಗ್ಹೋದ್ರೇನೋ ನಿಂ ತಾತ?"
"ನಂಗೊತ್ತಿಲ್ಲಾರೀ."
"ಯಾವಾಗ್ ಸಿಕ್ತಾರೆ ನಿಂ ತಂದೆ?"
"ನಂಗೊತ್ತಿಲ್ಲಾರೀ."
"ನಿಂ ತಾಯೆಲ್ಲಿ, ಮನೇಲಿಲ್ವೆ?"
"ನಂಗೊತ್ತಿಲ್ಲಾರೀ."
"ಮಕ್ಕಳು ಅಂದ್ರೆ ಹೀಗಿರಬೇಕು
ತುಂಬ ಜಾಣರು ನೀವು.
ನಾನು ಯಾರು ಗೊತ್ತು ತಾನೆ ?"
"ನಂಗೊತ್ತಿಲ್ಲಾರೀ."
"ನಂಗೊತ್ತಿಲ್ಲಾರೀ."

* * * *

ಹುಡುಗಿ :

ಚೆಂಡು ಬಿತ್ತು ಕ್ರಿಕೆಟ್ ಎತ್ತು
ಢುಂ ಢುಂ ಢುಂ.
ಗಂಡುತಲೆಗೆ ಬೈತಲೆ ಬಂತು
ಢುಂ ಢುಂ ಢುಂ.

ಹುಡುಗ :

ಒಂಟಿ ಜಡೆ ಡಬ್ಬಲ್ ಜಡೆ
ಆಯ್ತು ಢುಂ ಢುಂ
ಸೆಂಟು ಲಿಪ್‌ಸ್ಟಿಕ್ ಅಂಟಿಕೊಂಡುವು
ಢುಂ ಢುಂ ಢುಂ.

ಇಬ್ಬರೂ ಒಟ್ಟಿಗೆ :

ಸ್ಲೇಟ್ ಹೋಯ್ತು ನೋಟ್‌ಬುಕ್ ಬಂತು.
ಢುಂ ಢುಂ ಢುಂ.
ಬಳಪ ಹೋಯ್ತು ಪೆನ್ನು ಬಂತು
ಢುಂ ಢುಂ ಢುಂ.

ಕಾಸು ಹೋಯ್ತು ಪೈಸ ಬಂತು
ಢುಂ ಢುಂ ಢುಂ.
ಇಂಗ್ಲಿಷ್ ಹೋಯ್ತು ಹಿಂದಿ ಬಂತು
ಢುಂ ಢುಂ ಢುಂ.

* * * *

# ಕೊಲ್ಲದ ಕಾಳೆಗ

ಬನ್ನಿರಿ ಬಾಲರೆ ನಡೆಯಿರಿ ಗೆಳೆಯರೆ
ನಾಡಿನ ಬಿಡುಗಡೆ ಕಾಳೆಗಕೆ
ತನ್ನಿರಿ ನಿಮ್ಮ ಕಪ್ಪ ಕಾಣಿಕೆಯ
ಭಾರತ ಮಾತೆಯ ಓಲಗಕೆ !

ಸತ್ಯದ ಕುದುರೆಯನೆಲ್ಲರು ಹತ್ತಿ
ಹಿಡಿದು ಝಳಪಿಸಿರಿ ಅಹಿಂಸೆ ಕತ್ತಿ
ತಿರುಗಿಸಿ ಗಿರ‍್ರನೆ ನೂಲುವ ಚರಕ
ಹುಟ್ಟಡಗಲಿ ದಾರಿದ್ರ್ಯದ ನರಕ.

ಹಿಂದೂ ಮುಸ್ಲಿಮ ಸಿಕ್ಕ ಪಾರಸಿಕ
ಜೈನ ಬೌದ್ಧ ಈಸಾಯಿ ಯೆಹೂದ್ಯ
ಉಚ್ಚ ನೀಚ ಕುಲ ಸ್ಪೃಶ್ಯಾಸ್ಪೃಶ್ಯ
ಎಂಬೀ ಭೇದಗಳನು ಮರೆತು
ಒಂದೇ ಮನದಲಿ ನುಗ್ಗಿರಿ ಮುಂದಕೆ
ದ್ವೇಷ ಭಾವನೆಯ ತೊರೆದು !

ವೈರಿಗಳೆಲ್ಲರು ಮಿತ್ರರೆ ಅಂದು
ಅವರೆಲ್ಲರ ರಣರಂಗದಿ ಕೊಂದು
ಪಾಪವ ಗೈಯುವ ಉದ್ಯೋಗ
ಇಲ್ಲ : ನಮ್ಮದಾತ್ಮತ್ಯಾಗ.

ಮೂಡಿದಂದು ಸ್ವಾತಂತ್ರ್ಯದ ಸೂರ್ಯ
ಮುಗಿವುದು ನಮ್ಮ ಯುದ್ಧ ಕಾರ್ಯ ;
ಅದಕಾಗಿಯೆ ನಾವ್ ದುಡಿಯೋಣ,
ಅವಶ್ಯಬಿದ್ದರೆ ಮಡಿಯೋಣ !

* * * *

# ಜೀವಮಾನ

ಒಂದರಿಂದ ಹತ್ತು
ಪೆಪ್ಪರ್‌ಮೆಂಟ್ ಜಗತ್ತು.

ಹತ್ತರಿಂದ ಇಪ್ಪತ್ತು
ಯೌವನದ ಮತ್ತು.

ಇಪ್ಪತ್ತು ಮೂವತ್ತು
ಬಾಳ್ವೆ ಬಹಳ ಗತ್ತು.

ಮೂವತ್ತು ನಲವತ್ತು.
ನಲಿವು ನೋವಿಗೆ ತುತ್ತು.

ನಲವತ್ತು ಐವತ್ತು
ಕೊರಳಿಗೆ ಬಾಳು ಸುತ್ತು.

ಐವತ್ತು ಅರುವತ್ತು
ದೈವದ ಕಡೆಗೆ ಕತ್ತು

ಅರುವತ್ತು ಎಪ್ಪತ್ತು
ಬದುಕಿಹ ಸತ್ತು ಸತ್ತು.

ಎಪ್ಪತ್ತು ಎಂಬತ್ತು.
ಸಾವುದೇ ಸುಖಸಂಪತ್ತು.

ಎಂಬತ್ತು ತೊಂಬತ್ತು
ಬದುಕಿರೆ ಬಾಳೇ ಮಿತ್ತು.

ತೊಂಬತ್ತು ನೂರು
ಬದುಕಿಹರಾರು ?

* * * *

# ಬಾ ಬಾ ಗಣಪ

ಬಾ ಬಾ ಗಣಪ
ಬಾರೋ ಗಣಪ್ಪ.

ಬಾ ಬಾ ಗಣಪ
ಸೊಂಡಿಲ ಗಣಪ
ಸುಂಡಿಲಿ ಮೇಲೆ
ಕೂರೋ ಠೊಣಪ.

ಹಿಡಿಹಿಡಿ ಕಡುಬು
ಕಾಯಿಬೆಲ್ಲದ ಸಿಹಿಕಡುಬು
ಉದ್ದಿನ ಉದ್ದನೆ ಕಾರದ ಕಡುಬು
ತುಪ್ಪದ ಘಮಘಮ ಕರಿಗಡುಬು.

ಬೇಕಾದರೆ ತಗೊ ಬೇಲದ ಹಣ್ಣು
ಸಾಕಾದರೆ ಬಿಡು ಸೀಬೆಯ ಹಣ್ಣು
ಸೊಂಡಿಲ ಆಟಕೆ ಹಿಡಿ ರಸಗಬ್ಬು
ತಿಂಡಿಪೋತರ ಗುರು, ನೀಜರ್ಬು.

ಆನೆಯ ಮೊಗದವನೇ
ಅಂಕುಶವೇಕೆ ಕೈಯಲ್ಲಿ?
ಅಡ್ಡಿಯಾನೆಯ ತಿವಿಯಲಿಕೆಂದೆ?
ಮೊದ್ದುಬುದ್ಧಿಯ ತಿದ್ದಲಿಕೆಂದೆ?
ಹಾಗಿದ್ದರೆ ಸೈ, ಇರಲಿರಲಿ.

# ಬಾ ಸರಸ್ವತಿ

ಬಾ ಸರಸ್ವತಿ ಬಾರೆ ಭಾರತಿ
ಬೆಳಗುವೆವು ನಿನಗಾರತಿ ॥ಪ॥

ಹಾಸಿಹುದು ಹಸೆ ನಮ್ಮ ನಾಲಗೆ
ಬೆಳಗುತಿದೆ ಭಕುತಿ ॥ಅ.ಪ.॥

ಪದುಮಭವನ ಮನೋವಲ್ಲಭೆ
ಶರದ ಶಾರದ ಸನ್ನಿಭೆ
ಸದಯಳಾಗುತೆ ನೀಡು, ದೇವೀ,
ಮುದದೆ ನೀ ವಿದ್ಯಾಮತಿ.

ಕಳೆಯುತೆಮ್ಮಜ್ಞಾನ ತಿಮಿರವ
ಸುಳಿಸಿ ಸುಜ್ಞಾನ ಪ್ರಕಾಶವ
ಬೆಳಗಿ ನಮ್ಮ ಬುದ್ಧಿ ಭಾವವ
ಸಲಿಸು ಸಂತತ ಸನ್ಮತಿ.

* * * *

ಇನ್ನೊಂದು ಕೈಲಿ ಹಿಡಿದಿಹೆ ಪಾಶ :
ಕಟ್ಟುವೆಯಾ ಅಜ್ಞಾನದ ಮೂಟೆ ?
ಹಾಗಿರೆ, ಸುತ್ತಲ ಕತ್ತಲ ನಾಶ :
ಬೆಳಗಲಿ ಊರಲಿ ಜ್ಞಾನದ ಪೇಟೆ.

ನಕ್ಕನೆ ಚಂದ್ರ ಆಕಾಶದಲಿ ?
ಓಡಿಹೋಯಿತೇ ವಾಹನದ ಇಲಿ?
ಆಯಿತೆ ನಿನಗೆ ಅಪಮಾನ ?
ಹಾರಬೇಕೆ ನೀ ಚಂದ್ರನ ಬಳಿಗೆ ?
ಬಾ ಬಾ ಗಣಪ, ಕೊಡುವೆ ವಿಮಾನ :
ಇದು ಇಪ್ಪತ್ತನೆ ಶತಮಾನ.

ಹೋಗಿ ಬಾರಯ್ಯ,
ಬಾರಯ್ ಗಣಪತಿ.
ಲೋಕಲೋಕಗಳ
ಜ್ಞಾನವ ತಾರಯ್
ಕೊಡು ಕೊಡು ಬುದ್ಧಿ
ಕರುಣಿಸೊ ಸಿದ್ಧಿ
ಬಾ ಬಾ ಗಣಪತಿ
ಕೊಡು ಕೊಡು ಸನ್ಮತಿ.
ಬಾ ಬಾ ಗಣಪ
ಒಪ್ಪಿಸಿಕೊ ಇಡಿಗಾಯಿ.
ತಪ್ಪನು ಮನ್ನಿಸು
ನಮ್ಮನು ಕಾಯಿ.

* * * *

ಮುಷ್ಟಿಯೊಳಗೆ ರೂಪಾಯನು ಬರಿಸುವ,
ಆಮೇಲದು ಬರಿ ಹಿಡಿಮಣ್ಣು.

ಆಟ ಮುಗಿಸಿ ಹೊರಟನು ಹಾವಾಡಿಗ
ಹಾವಿನ ಬುಟ್ಟಿಯ ಹೊತ್ತು ;
ನೋಟ ನೋಡಿದರು ನೂರಾರು ಜನ,
ಕಾಸುಕೊಟ್ಟವರು ಜನ ಹತ್ತು.

* * * *

## ವ್ಯರ್ಥನೀತಿ

ನಮ್ಮ ತಾತ ಗಾಂಧಿ
ಕುಡೀಬೇಡ ಸೇಂದಿ
–ಅಂತ ಹೇಳ್ತಾರೆ.
ವಿಸ್ಕಿ ವೈನು ಬ್ರಾಂದಿ
ಕುಡೀತಾರೆ ಮಂದಿ
–ಯಾರು ಕೇಳ್ತಾರೆ ?

* * * *

## ಜಾಗರವಾಡೆಲೆ ನವಿಲೆ

ಬಂದಿತಿಗೋ ಮುಂಗಾರ ಮಳೆ
ಜಾಗರವಾಡೆಲೆ ನವಿಲೆ !
ಬಣ್ಣದ ಗರಿಗಳ ಕೆದರಿ
ಕಣ್ಣು ಸಾವಿರವ ತೋರಿ
ಗಂಡು ಗಾಡಿಯನು ಬೀರಿ
ಕುಣಿಕುಣಿದಾಡೆಲೆ ನವಿಲೆ !

# ಹಾವಾಡಿಗ

ಬಂದ ಬಂದ ಹಾವಾಡಿಗ ಬಂದ
ಹಾವಿನ ಬುಟ್ಟಿಯ ತಂದ ;
ಅಂಗಿಯ ಬಿಚ್ಚಿ ಪುಂಗಿಯ ಹಿಡಿದು
ಪುಂಯ್ ಪುಂಯ್ ಪುಂಯ್ ಪುಂಯ್ ಎಂದ.

ಚುಂಗಿನ ಪೇಟ ವೇಸ್ಟು ಕೋಟು
ಸಮಕಲು ಕಾಸಿನ ಮೆಡಲು ;
ಪುಂಗಿಯೂದಿ ಸಾಕಾಗಲು ತೆಗೆವ
ತೆಂಗಿನ ಚಿಪ್ಪಿನ ಫಿಡಲು.

ಬುಟ್ಟಿಯ ತುಂಬ ನಾಗರ ಹಾವು
ಕಟ್ಟು ಹಾವು ಕೇರೇಹಾವು
ಕಟ್ಟಿಗೆಯಂತೆ ಮಲಗಿ ಬಿದ್ದಿರುವುದು
ಹೆಗಲಮೇಲೆ ದಾಸರಹಾವು.

ಮುಚ್ಚಳ ತೆಗೆಯೆ ಕೈಯಲಿ ತಿವಿಯೆ
ಎಚ್ಚರಗೊಂಡನು ನಾಗಪ್ಪ ;
ಕಚ್ಚಲು ಹಲ್ಲೇ ಇಲ್ಲ ; ಸುಮ್ಮನೆ
ಬಿಚ್ಚಿದ ಹೆಡೆತಲೆ ತೂಗಪ್ಪ.

ಕಾಸು ಕೊಟ್ಟರೆ ಕಡೆಯಲಿ ಬಿಡುವನು
ಹಾವಿಗು ಮುಂಗುಸಿಗೂ ಜಗಳ ;
ಕಾಸುಕೊಡದವರ ಬಾಯಿಗೆ ಮಣ್ಣು
ಬೀಳಲಿ ಎನ್ನುವ ಬೈಗುಳ.

ಬುಟ್ಟಿಯ ಕೆಳಗೆ ಮಾವಿನ ಗಿಡವ
ಬೆಳಸಿ ಬಿಡಿಸುವನು ಹಣ್ಣು ;

ದೆವ್ವ ಭೂತದ ಕಾಟ
ಪರೀಕ್ಷೆಗೋದುವ ಪೀಕ್ಲಾಟ
ಕೆಲಸಕ್ಕೋಸುಗ ನೂಕ್ ನುಗ್ಗಾಟ
ಹೆಣ್ಣಿಗೆ ವರನನು ಹುಡುಕುವ ಕಾಟ
ಪೋಲಿಸ್ ಕಾಟ ಮೇಷ್ಟರ ಕಾಟ
ಸೊಳ್ಳೆಯ ಕಾಟ
ತಿಗಣೆಯ ಕಾಟ
ಛೂ ಮಂತ್ರಂ ಗಾಳಿ ಚಲೇ ಜಾವ್ !
ಚಲೇ ಜಾವ್ ಚಲೇ ಜಾವ್ !

* * * *

## ಪಟಾಕಿ–ತುಪಾಕಿ

ದೀಪಾವಳಿಗೆ ಸಾಕು ಪಟಾಕಿ ;
ಯುದ್ಧರಂಗಕೆ ಬೇಕು ತುಪಾಕಿ.

* * * *

## ಬಾರಯ್ಯ ಬಾ ಗಾಳಿ

ಮೆಲುಮೆಲನೆ ನಿಲುನಿಲುತ ನಡೆದು ಬಹ ಮೆಲುಗಾಳಿ
ಸುಳಿಸುಳಿದು ಸುತ್ತಾಡಿ ಅವಿತು ಬಹ ಸುಳಿಗಾಳಿ
ತೆಂಕಣಿಂ ತಂಪುಕಂಪುಗಳ ತಹ ತೆಂಗಾಳಿ
ಸಂಕಟದ ಬೇಗೆಯನು ತೊಲಗಿಸುವ ತಂಗಾಳಿ
ತರಗೆಲೆಯಮೇಲೆ ತಿರ್ರತಿರುಗಿಸುವ ಸುಟ್ಟುರೆಗಾಳಿ
ಮರಗಿಡವನುರಿಪ ಕಿಚ್ಚಿನ ಕೆಳೆಯ ನೆರೆಗಾಳಿ
ಸುಯ್ಯೆಂದು ಬಯಲೆಡೆಯ ಸೀಳಿ ಬಹ ಸುಯ್ಗಾಳಿ
ಹೊಯ್ಯೆಂದು ಮಳೆಜುಟ್ಟನೆಳೆದು ತಹ ಹೊಯ್ಗಾಳಿ:

ಬಂದಿತಿಗೋ ಬಂಗಾರ ಮಳೆ
ನಲಿನಲಿದಾಡೆಲೆ ನವಿಲೆ !
ಬಿಜ್ಜೆಯ ದೇವಿಯ ಮುಂದೆ
ಗೆಜ್ಜೆಯ ಹೆಜ್ಜೆಯನಿಡುತ
ಸಜ್ಜನ ಪೂಜೆಯ ಕೊಳುತ
ಜಾಗರವಿರಿಸೆಮ್ಮನು ನವಿಲೆ.

* * * *

## ಪದ್ಯ–ಅರ್ಥ

ಅರ್ಥವಾಗುವ ಪದ್ಯ
ಜೇನು ತುಪ್ಪ;
ಅರ್ಥವಾಗದ ಪದ್ಯ
ಬರೆವ ಬೆಪ್ಪ.

* * * *

## ಛೂ ಮಂತ್ರಂಗಾಳಿ

ಛೂ ಮಂತ್ರಂ ಗಾಳಿ ! ಛೂ ಮಂತ್ರಂ ಗಾಳಿ
ಚಲೇ ಜಾವ್, ಚಲೇ ಜಾವ್ !
ಹ್ರಾಂ ಹ್ರೀಂ ಹ್ರೂಂ ಹ್ರೋಂ
ಚಲೇ ಜಾವ್, ಚಲೇ ಜಾವ್ !

ಮೈ ಕೈ ಸೊಂಟದ ನೋವು
ಹೊಟ್ಟೆ ಬೆನ್ನಿನ ಬಾವು
ಕಾಲು ತೊಡೆಗಳ ಜೋವು
ಛೂ ಮಂತ್ರಂ ಗಾಳೀ ! ಚಲೇ ಜಾವ್ !

ಬಿಟ್ಟೆನಿದೊ ಬಿಟ್ಟೆನಿದೊ ಹಾರಿಹೋಗು ಗಿಣಿ !
ಕುಟ್ಟುಕಟ್ಟಲೆಯಿಲ್ಲ, ನಲಿ ನಲಿ ಗಿಣಿ.
ತುಟ್ಟಿಯಾಗುವ ತನಕ ಹಣ್ಣು ತಿಂದು ತಣಿ.
ಬಿಟ್ಟ ಹಿಂಡನು ಸೇರಿ ಬಿಡುಗಡೆಯಲಿ ಕುಣಿ.

* * * *

# ಮರಿಯ ಮುದ್ದಿನ ತಾಯಿ

ತಡೆಯಲಾರದ ಬಿಸಿಲ ಬೇಗೆ;
ಜೊತೆಗೆ ಬೆಟ್ಟವನಿಳಿದ ಕಾಲ್ಗಳು
ಬಿಡದೆ ನೋಯುತ ಒಯ್ದುವೆನ್ನನು
ಹಿತದ ಮಾಮರ ನೆರಳಿಗೆ.

ಅಲ್ಲಿ ಕುಳಿತೆನು ಹಸುರಮೇಲೆ;
ಹರುಷ ಮೆಲ್ಲನೆ ಅಡಿಯನಿಡುತಿರೆ
ಕೇಳಿಬಂದಿತು–"ಅಂಬೆ ಅಂಬೇ";
ಕೂಗು ಆಡಿನ ಮರಿಯದು.

ಪಾಪ, ಒಂದೇ ಒಂಟಿ ಮರಿಯದು
ತಾಪವೇರಲು ಕ್ರೂರ ಸೂರ್‍ಯನ
ಬಳಲಿ ಬಾಯಾರುತ್ತ ಹಾಲನು
ಕುಡಿಯೆ, ತಾಯನು ಕೂಗಿತು–

ಎಂದು ಸುಮ್ಮನೆ ಕುಳಿತೆನಲ್ಲಿಯೆ ;
ಅರಚುತಾ ಮರಿ ಮರಳಿ ಕೂಗಿತು,
ಹಿಂದು ಮುಂದೆಲ್ಲೆಡೆಯ ನೋಡಲು
ಮರಿಯ ತಾಯಿ ಕಾಣದು.

ಗುಡುಗು ಮಿಂಚೊಡನೆ ದಡದಡನೆ ಬಹ ಬಿರುಗಾಳಿ
ಗಡಗಡನೆ ನಡುಗಿಸುವ ಮಾಗಿಯಾ ಕೊರೆಗಾಳಿ
ಇಳೆಯ ನಲಿಸುವೆ ಕಾಡಿಸುವ ನೀನು ಬಲು ತುಂಟ
ಮಳೆಯರಾಯನ ನಂಟ ಪ್ರಳಯರುದ್ರನ ಬಂಟ
ಬಾರಯ್ಯ ಬಾ ಗಾಳಿ ಬಗೆಬಗೆಯ ರೂಪಗಳ ತಾಳಿ
ತೋರಯ್ಯ ದಯೆಯ ನಿನ್ನಿಂದ ಬದುಕಿಹವು ಜೀವಾಳಿ.

* * * *

## ಪಂಜರದ ಗಿಣಿ

ಪಂಜರದಿ ಕುಳಿತಿರುವ ಗಿಣಿಯ ನೋಡಕ್ಕ,
ಅಂಜಿ ಕುಳಿತಿದೆ, ಮುದ್ದು ಮಾತಾಡದೆ.
ಗಿಡಗಿಡಕೆ ಹಾರುತ್ತ ತನಿವಣ್ಣು ತಿನ್ನುತ್ತ
ಬಿಡುಗಡೆಯಲಿದ್ದ ಗಿಣಿ ಸೆರೆಯಾಗಿದೆ.

ಅದರ ಬಣ್ಣವ ನೋಡೆ, ಪಚ್ಚೆಹಸುರು–
ಚದುರನಾರದಕೆ ಈ ಬಣ್ಣ ಬಳಿದವನು ?
ಹಸುರು ತುಪ್ಪುಳ ಮೈಗೆ ಹವಳಗೆಂಪಿನ ಕೊಕ್ಕು
ಹಸುರೆಲೆಯ ದಾಳಿಂಬೆ ಗಿಡದ ಮೊಗ್ಗು.

ಬೆಕ್ಕು ಬರಬಹುದೆಂಬ ಹೆದರಿಕೆಯೊ, ಏನೋ,
ರೆಕ್ಕೆಗಳ ಮುದುರಿ ಮೈಯುಡುಗಿಸಿಹುದು;
ಅಕ್ಕರೆಯ ಕಲಿತೆರಡ ಮಾತನೂ ಆಡದಿದೆ,
ಇಕ್ಕಡೆಗು ತಿರುತಿರುಗಿ ನೋಡುತಿಹುದು.

ಹಿಂದಿನಂತೆಯೆ ನಾನು ಹಾರಾಡಲಾರೆ, ಹಾ!
ಬಂದಿಯಾಗಿಹೆನೆಂದು ಅದಕೆ ದುಃಖ;
ಮುಂದಾದರೂ ಹಾರುತಿರಲಿ ಮನಬಂದಲ್ಲಿ
ಇಂದದರ ಬಂಧನವ ಕಳೆವೆನಕ್ಕ.

ತಳಿರನೊಲ್ಲೆ, ಗರಿಕೆಯೊಲ್ಲೆ,
ಒಲಿದ ಮನುಜನ ಒಲವನೊಲ್ಲೆ;
ಇಳೆಯಲೊಂದೂ ನಿನಗೆ ಬೇಡವೆ
ಉಳಿದು ಮುದ್ದಿನ ತಾಯಿಯ?

* * * *

## ಜೋಗದ ಜಲಪಾತ

"ತಾತ ತಾತ ತಾತ ತಾತ
ಹೇಗಿದೆ ಜೋಗದ ಜಲಪಾತ?
ನೀನದನೆಲ್ಲ ನೋಡಿಹೆಯಂತೆ,
ಅಪ್ಪ ಅಮ್ಮ ಹೇಳಿದರೆಮಗೆ.
ಹೇಗಿದೆ ಹೇಗಿದೆ ಜಲಪಾತ ?
ಅದರ ವಿಚಾರವ ತಿಳಿಸು ತಾತ"
–ಎಂದು ಕೇಳಿದರು ರಾಮ ಸೀತ ;
ಮಗನ ಮಗಳ ಮಕ್ಕಳು ಇವರಿಬ್ಬರು,
ಬಿಟ್ಟಗಲಿರರು ಒಬ್ಬರನೊಬ್ಬರು.
ಮೊಮ್ಮಕ್ಕಳಿಗಿಂತೊರೆದನು ತಾತ :

"ಕೇಳಿರಿ ಮಕ್ಕಳೆ, ಹೇಳುವೆನೀಗ
ಬಲ್ಲಿರಿ ತಾನೆ ಶಿವಮೊಗ್ಗ ?
ಅದರ ಬಳಿಯಲೇ ಪ್ರಸಿದ್ಧ ಜೋಗ,
ನೋಡಲು ತುಂಬ ಚೆಲುವಿನ ಜಾಗ.
ನಿಮಗಿದ್ದರೆ ನೋಡುವ ಯೋಗ,
ನೋಡಿರಿ ದೊಡ್ಡವರಾದಾಗ.
ಚೆಲುವಿನ ಜೋಗದ ಜಲಪಾತ
ಪ್ರಪಂಚದಲ್ಲೇ ಬಲು ವಿಖ್ಯಾತ.

"ಪಶ್ಚಿಮ ಘಟ್ಟದಿ ಹುಟ್ಟುವಳಾ ನದಿ

"ಏಕೆ ಕೂಗುತ ನೀನು ಬಳಲುವೆ?
ಎಂದು ಹತ್ತಿರ ಹೋಗಿ ಮೆಲ್ಲನೆ
"ಬೇಕೆ ಗರಿಕೆ ನಿನಗೆ" ಎನ್ನುತ
ಒಂದು ಹಿಡಿಯನು ನೀಡಲು,

ಮತ್ತೆ ಕೂಗಿತು ಒಂದೆ ಉಸಿರಲಿ–
ಎತ್ತ ನೋಡಲು ಬಳಸುಬೇಲಿ ;
ಅದರ ಹೊರಗಡೆ ಮೇಯುತಿದ್ದಿತು
ತಾಯಿ, ಮರಿಯನು ಕಾಣದೆ.

ಹಾರಲಾರದು, ಬೇಲಿ ದೊಡ್ಡದು ;
ತಾಯಿಯೆಡೆಯನು ಸೇರಬೇಕು;
"ಬಾರ ಬಾರಾ ಅಂಬೆ" ಎನುತ
ಮರಳಿ ತಾಯಿಯ ಕೂಗಿತು.

"ನಾನು ನಿನ್ನನು ಹೊಡೆವುದಿಲ್ಲ,
ಚಿಗುರು ತೆಗೆದುಕೊ ತಿನ್ನು" ಎನುತ
ಸಾನುರಾಗದಿ ಅಪ್ಪಿ ಎತ್ತಲು
ನೆಗೆಯಿತಾಚೆಗೆ ಬೇಲಿಯ.

ಸಾರಿ ತನ್ನಯ ತಾಯ ಬಳಿಯನು
ಸೊಗದಿ ನಲಿಯುತ, ನೆಗೆದು ಕುಣಿಯುತ,
ಹೀರಿ ಹಾಲನು ತುಟ್ಟಿವಡೆಯುತ,
ಮೊಗವ ನೆಕ್ಕಿತು ತಾಯಿಯ.

ಎಲೆಲೆ, ಕಿರುಮರಿಯೆಂದು ತಿಳಿದೆನು !
ಒಂದು ಗಳಿಗೆಯ ಹಿಂದೆ ಬೇಲಿಯ
ನೆಗೆಯಲಾರದೆ ಕೂಗುತಿದ್ದೆ–
ಇಂದು ಹಾರಿದೆ, ಎಂತದು !

ಆಹಾ ! ಹಾರಿದಳೊಂದೇ ನೆಗೆತ
ನೆಗೆಯುತ್ತಿಹಳವಳಿಂದೂ ಸತತ.
ನೆಗೆಯುವಂದು ನಾಲ್ಕಾದಳು ಸೀಳು
ನಾಲ್ಕು ಕವಲು ಒಂದೇ ನೀರ್‌ಬೀಳು
ಇದುವೆ ಜೋಗದ ಜಲಪಾತ
ಅದ ಬಣ್ಣಿಸೆ ಕವಿಯಾಗಬೇಕಾತ"
ಎಂದು ನಿರೂಪಣೆ ನಿಲ್ಲಿಸೆ: "ತಾತ,
ಕವಿಗಿವಿ ಕಾಣೆವು, ನೀನೇ ಹೇಳು.
ಹೇಗಿದೆ ಜೋಗದ ಆ ನೀರ್‌ಬೀಳು ?"
ಎಂದು ಪ್ರಶ್ನಿಸಲು ಆ ಮೊಮ್ಮಕ್ಕಳು,
ಮುಂದುವರಿಸಿದನು ಇಂತಾ ತಾತ :

"ಆಹಾ ! ಆಹಾ ! ಆ ಜಲಕನ್ನಿಕೆ
ಕ್ಷಣದಲಾಗುವಳು ಕ್ಷೀರಕನ್ನಿಕೆ !
ಬೆಟ್ಟದ ಅಪ್ಸರೆ ಉಟ್ಟು ಬಿಳಿಸೀರೆ
ನರ್ತಿಸುವಂತಿದೆ ನೀರಿನ ಧಾರೆ.
ಆಕಾಶದ ಹಸು ಹಾಲ್ಗರೆಯುತ್ತಿರೆ
ಬುರುಬುರು ಬುರುಬುರು ಬಿಳಿಬಿಳಿ ನೊರೆನೊರೆ
ಸುರಿಸುರಿಯುತ್ತಿದೆ ಹಾಲು ತೊರೆತೊರೆ;
ನೊರೆಹಾಲ್ಗುಡಿಯಲು ಬಾಯ್‌ಬಿಟ್ಟಿದೆ ಧರೆ !
ನಿಟೆ ಮನ್ಮಥ ಮಲ್ಲಿಗೆ ಹೂಬಾಣ
ಹೂಮಳೆಗರೆಯುತ್ತಿದೆ ಈ ತಾಣ;
ಸೂಸುವರಾರೋ ಮುತ್ತಿನ ಅಕ್ಷತೆ,
ತಲೆಬಾಗಿರೆ ಜೋಗದ ವನವನಿತೆ ;
ಕಾಮನ ನಿಲ್ಲಿನ ಮರಿಗಳು ಬಂದು
ಕುಣಿವುವು ನೊರೆಮೋಡದ ಮೇಲ್ನಿಂದು.
ಇಂದ್ರನ ನಂದನವೀ ಚೆಲು ಜೋಗ,
ನಮಗಿಲ್ಲಿದೆ ನಿತ್ಯಾನಂದ ಭೋಗ.

ರಾಮಬಾಣದಿ ಶರಾವತಿ :
ಏನೋ ಹೇಳುವರಾ ಕತೆಯಿರಲಿ,
ನದಿಯ ನೀರ ಬೀಳಿನ ಪರಿ ಕೇಳಿ.
ಇಳಿಯುತ ಘಟ್ಟದ ಬೆಟ್ಟದ ಮೆಟ್ಟಿಲ
ಸಾರುತ ಕೆಳಗಿನ ಕಣಿವೆಯ ತೊಟ್ಟಿಲ
ಅಲ್ಲಿಂದೊಗೆಯುತ ಕಾಡಲಿ ನೆಗೆಯುತ
ಕುಣಿಯುತ ಮಣಿಯುತ ತಣಿಯುತ ದಣಿಯುತ
ನುಗ್ಗುತ ಬಗ್ಗುತ ಹಿಗ್ಗುತ ತಗ್ಗುತ
ತೆರಳುತ ಮರಳುತ ಹೊರಳುತ್ತುರುಳುತ
ಸರಸರ ಸರಿಯುತ ಭರಭರ ಹರಿಯುತ
ಬಾಗುತ ಬಳುಕುತ ತೂಗುತ ತುಳುಕುತ
ಹೊಂಗಿ ಹೊಮ್ಮುತ ಚಂಗನೆ ಚಿಮ್ಮುತ
ನಲಿಯುತ ನುಲಿಯುತ ಅಲೆಯುತ ಕೆಲೆಯುತ
ಕುಣಿದು ಕುಪ್ಪಳಿಸಿ ನೆಲವನಪ್ಪಳಿಸಿ
ಭೀತಿಯ ತೊರೆದು ಬಿಂಕವ ಮೆರೆದು
ನೆಲವನು ಕೊರೆದು ಬಂಡೆಯನರೆದು
ಮಳೆಯಲಿ ಹೆಚ್ಚಿ ದಡವನು ಕೊಚ್ಚಿ
ತೆರೆತೆರೆ ಕೂದಲ ರಾಶಿಯ ಬಿಚ್ಚಿ
ಜೊಂಡನು ಬಾಗಿಸಿ ಗಿಡತಲೆದೂಗಿಸಿ
ಉಬ್ಬಿ ಕೊಬ್ಬಿ ದಡತಬ್ಬಿ ಈ ಅಬ್ಬಿ
ನೀರ ಬಳ್ಳಿಯೆನೆ ನೀಳಕೆ ಹಬ್ಬಿ
ಹರಿವ ಹಾವಂತೆ ಫಳಫಳಹೊಳೆಯುತ
ಹರಿವ ಕಡೆಯೆಲ್ಲ ನೆಲಮೈತೊಳೆಯುತ
ತೋರಿ ಬಿಲ್ಲಿಂದ ಬಿಟ್ಟ ಬಾಣಗತಿ
ಹಾರಿ ಅಲ್ಲಿಂದ ದಿಟ್ಟ ಶರಾವತಿ
ಮುಂದನು ಕಾಣದೆ ಓಡಿಬರುತಿರೆ,
ಅಮಮಾ ಅಮಮಾ ! ಅರರೆ ಅರರೆ !
ಕೇಳಿರಿ ಕೇಳಿರಿ ಮುಂದಿನ ಅದ್ಭುತ–
ಕಂಡಳು ಮುಂಗಡೆ ಶಿಲಾಪ್ರಪಾತ

## ಬೇಕು–ಬ್ರೇಕು

ಅಂಚಿಲ್ಲದ ಸೀರೆ, ಹೆಂಚಿಲ್ಲದ ಸೂರು
ಗುಣವಿಲ್ಲದ ಹೆಣ್ಣು, ಹಣವಿಲ್ಲದ ಗಂಡು
ಹಿಂದೋಡುವ ಸೈನ್ಯ, ಹುಳುತಿಂದಿಹ ಧಾನ್ಯ
ಮನೆಯಿಲ್ಲದ ಬೀದಿ, ತೆನೆಗೂಡದ ರಾಗಿ
ಗೊನೆಯಿಲ್ಲದ ಬಾಳೆ, ಕೊನೆಯಿಲ್ಲದ ಪದ್ಯ
ಸಾಕಿಲ್ಲಿಗೆ ಸಾಕು, ಬೇಕೆಲ್ಲಕು 'ಬ್ರೇಕು'.

* * * *

## ಕಿವುಡ ಗವುಡ

ಒಂದು ಹಳ್ಳಿಯಲೊಬ್ಬ ಗವುಡ,
    ಅವಗೆ ಮೂವರು ಹೆಂಡಿರು;
ತಮಟೆ ಕೇಳದ ಹುಟ್ಟುಕಿವುಡ–
    ಇವನ ಜೊತೆ ಸುಖವುಂಡರು.

ನನಗೆ ಮಕ್ಕಳೆ ಆಗದೆಂದಿರಿ
    ಮದುವೆಯಾದಿರಿ ಇಬ್ಬರ–
ಎಂದ ಹಿರಿಹೆಂಡತಿಯ ಮಾತಿಗೆ
    ತಂದನವ ಚಿನ್ನದ ಸರ.

ನಾನು ಕಪ್ಪೆಂದೊಪ್ಪಿಕೊಂಡಿರಿ
    ಬೇರೆ ಬಿಳಿಯಳ ಬಡವೆಯ–
ಎಂದ ಎರಡನೆ ಹೆಂಡತಿಯ ಮೈ–
    ಮೇಲೆ ಹೇರಿದ ಒಡವೆಯ.

"ನಾಲ್ಕು ಸೀಳಿಗೂ ಇವೆ ನಾಲ್ಕು ಹೆಸರು :
ರಾಜ ರಾಣಿ ರಾಕೆಟ್ ರೋರರು.
ಕಾಂಬುದೊಂದರಲಿ ರಾಜನ ಠೀವಿ;
ಜೊತೆಯಲಿ ಬಳುಕುವ ಲಾವಣ್ಯದೇವಿ ;
ಬಾಣದಂತೆ ಬಹುದಿನ್ನೊಂದು ನೇರ ;
ಮಗುದೊಂದರಲಿ ಗರ್ಜನೆ ಘೋರ.
ರಾಮ ಸೀತೆ ಲಕ್ಷ್ಮಣ ಹನುಮ
ಎಂದಿಹುದೀ ಸ್ಥಳಪುರಾಣ ನಾಮ,
ಅದು ಚೆನ್ನೆಂದರು ನಮ್ಮ ವಿನೋಬಾ.
ಯಾವ ಹೆಸರಾದರೇನು ಮಹಾ
ಎನ್ನಬೇಡಿ, ಇವು ನಮಗೆ ಪ್ರಿಯ;
ಹೊಸ ಹೆಸರಿಟ್ಟವ ಪರಕೀಯ."

–ಎಂದಿಂತು ಮಾತ ನಿಲ್ಲಿಸೆ ತಾತ,
"ನಮ್ಮ ಹೆಸರ ಜೋಗದ ಜಲಪಾತ!
ಅದರೀ ಕತೆ ನಿಜವಾಗಿ ಅದ್ಭುತ!"
ಎನುತ ಹಿಗ್ಗಿದರು ರಾಮ ಸೀತ.

"ಇಷ್ಟೇ ಅಲ್ಲ" ಕೇಳಿರಿ ಮಕ್ಕಳೆ–
ಬೆಳಕಾಗುತ ಬಲವಾಗುವಳೀ ಹೊಳೆ,
ಇಲ್ಲೇ ಇಲ್ಲೇ ಈ ಜೋಗದಲೆ!
ಇಲ್ಲಿದೆ ಜಲವಿದ್ಯುತ್ತಿನ ಕೇಂದ್ರ,
ಮಹಾತ್ಮಗಾಂಧಿಯ ನಾಮವ ಮೆರೆದು
ಕನ್ನಡ ನಾಡಿನ ಭಾಗ್ಯವ ತೆರೆದು.
ಜ್ಯೋತಿರ್ಮಯಿಯೀ ಶರಾವತಿ,
ಶಕ್ತಿಪೂರ್ಣೆ ಈ ಶರಾವತಿ,
ಅನ್ನಪೂರ್ಣೆ ಈ ಶರಾವತಿ !"

ತಾತನ ಜಲಪಾತದ ಕತೆ ಕೇಳಿ
ನಲಿದರು ಮೊಮ್ಮಕ್ಕಳು ಮುದ ತಾಳಿ.

ಕೇರಿಯ ಜನರು ಬೆರಗಾಗಿದ್ದರು
ಭಟ್ಟರ ಕಾಳೆಗ ಕಂಡು ;
ಕಾರಣವೇನೊ ಕಾಣದೆಹೋದರು,
ಮಲಗಿದರೆಲ್ಲರುಂಡು.

* * * *

## ನಯಾ ಪೈಸಕೆ ಜೈ

ಬಂತು ಬಂತು ನಯಾ ಪೈಸ
ಬಾಲಜಗಕಿದು ತುಂಬ ಹರುಷ !
ಚಿಕ್ಕಮಕ್ಕಳಿಗಿನ್ನು ಲೆಕ್ಕ
ಬಹಳ ಸುಲಭ–ಇಲ್ಲ ದುಃಖ
ನೂರು ನಯೆ ಪೈಸೇ ರುಪಾಯಿಗೆ
ಪೈಸ ಬಿಟ್ಟರೆ ಬರಿ ರುಪಾಯೇ.
ಹತ್ತುಹತ್ತರ ಲೆಕ್ಕ ಸರಸರ
ಬರುವುದಿನ್ನೆಲ್ಲರಿಗೆ–ಇದು ವರ!
ಆಣೆ ಮೂಲೆಗೆ ಹೋಯಿತು.
ಪೈಸ ಪಟ್ಟಕ್ಕೇರಿತು !
ನಯಾ ಪೈಸಕೆ ಜೈ
ಹೊಸಾ ಕಾಸಿಗೆ ಜೈ!

* * * *

## ಕೊಡದೆ ತಿಂದ

ಕಿಟ್ಟಿ ಬಂದ
ರೊಟ್ಟಿ ತಂದ
ಕೊಡದೆ ತಿಂದ
ಆಯ್ತು ಮಂದ.

ಇಬ್ಬರೂ ನನಗಕ್ಕದಿರ ಸಮ
ಪ್ರೀತಿಸರು ಈ ತಂಗಿಯ
ಎಂದ ಕಿರಿಹೆಂಡತಿಯ ಕೂಸಿಗೆ
ತಂದ ಮಕಮಲ್ ಅಂಗಿಯ.

ಮೂವರೂ ತಮಗಿಂತು ದೊರೆತ
ಇಷ್ಟದೊಡವೆಯ ಕೊಂಡರು;
ಕಿವುಡಗಂಡನ ಜೊತೆಯೊಳಿಂತು
ದಿನದಿನವು ಸುಖವುಂಡರು.

* * * *

## ಭಟ್ಟರ ಕಾಳಗ

ಹೆಂಚಿನಂಚಿನ ಗೂಡ ಗುಬ್ಬಿಯ
ಅಳಿಲು ತಿಂದಿತು ;
ಹೊಂಚುಕುಳಿತ ಮನೆಯ ಬೆಕ್ಕು
ಅಳಿಲ ಕೊಂದಿತು;
ಅಳಿಲ ಕೊಂದು ತಿಂದ ಬೆಕ್ಕ
ನಾಯಿ ಕಂಡಿತು ;
ಘಳಿಲನೋಡಿ ಬಂದ ಬೆಕ್ಕ
ಹಿಡಿದುಕೊಂಡಿತು.
ಲ್ಯಾತಂಭಟ್ಟರ ಮನೆಯ ಬೆಕ್ಕು,
ತಿಪ್ಪಂಭಟ್ಟರ ನಾಯಿ;
ಕ್ಯಾತೆಜಗಳ ತೆಗೆದರು, ಆಯ್ತು
ಇಬ್ಬರಿಗೂ ಲಡಾಯಿ.
ಭಟ್ಟರ ಹೆಂಡಿರು ಸಟ್ಟುಗ ಹಿಡಿದು
ಬಂದರು, ಕಂಡರು ಕುಸ್ತಿ;
ಜುಟ್ಟುಹಿಡಿದು ಗಂಡರನೊಯ್ದರು,
ಮಾಡಿದರವರಿಗೆ ಶಾಸ್ತಿ.

# ಬೃಂದಾವನಗಾನ

ತಾ
ತ ನ
ತ ರ ನ ನ
ತ ನ
ನಾ
ನಾ
ಬೃಂದಾವನದಲಿ
ಕೃಷ್ಣನಕೊಳಲುಲಿ
ಮೊರೆಯುತಿದೆ
ಕರೆಯುತಿದೆ.
○△○△○
ವನತುಂಬಾ
ದನವಂಬಾ
ಎಂದೋಡುತ ಬರುತಿವೆ ಚಿಗಿದು
ಹಿಂದೆ ಬರಲು ಗೊಲ್ಲರು ನೆಗೆದು.
ಬೃಂದಾವನ ಗಾನವ ಕೇಳೆ
ಮಂದಗಮನೆಯಾದಳು ಯಮುನೆ.

* * * *

# ಯಾಕೆ ಸ್ಕೂಲಿಗೆ ಹೊತ್ತಾಯ್ತು?

(ಮೇಷ್ಟರ ಪ್ರಶ್ನೆಗೆ ಉತ್ತರ)

ಭರ್‌ಭರ್ ಭರ್‌ಭರ್ ಭರ್‌ರ್‌ರ್ ˜ ˜ ರಂತ
ಬಂದವು ಕಾರ್‌ಮೇಲ್ ಕಾರ್ :
ಫೋರ್ಡ್ ಫಿಯಟ್ ಬ್ಯೂಕ್ ಸ್ಟೂಡಿಬೇಕರ್
ಬೇಬಿ ಆಸ್ಟಿನ್ ಮಾರಿಸ್ ಮೈನರ್.
ಒಂದರ ಹಿಂದೊಂದ್ ಸರ್‌ರ್‌ರ್ ˜ ˜ ರಂತ
ಬಂದವು : ಇಲ್ಲ ಪೋಲೀಸ್‌ನೋರ್.
ರಸ್ತೆ ಒಳ್ಳೆ ನುಣ್ಣನೆ ಟಾರ್,
ಅತ್ಲಾಗಿಂದ ಇತ್ಲಾಗ್ಗೆ ಹಾರ್–
ಬಂದೇ ಬಂದ ಹಳ್ಳೀಗಮಾರ್!
ಬಾಳೇಹಣ್ಣಿನ ಸಿಪ್ಪೆ ಜಾರ್–
ಬಿದ್ದೇ ಬಿಟ್ಟ: ನಿಂತುವು ಕಾರ್.

ಆಗ ಬಂದ್ರು ಪೋಲೀಸ್‌ನೋರ್,
ಗುಂಪು ಸೇರಿತು ಜನ ನೂರಾರ್,
ನಾನೂ ನೋಡ್ತಾ ನಿಂತೆ, ಸಾರ್.
ಅದಕ್ ಸ್ಕೂಲಿಗೆ ಹೊತ್ತಾಯ್ತ್, ಸಾರ್.

* * * *

# ರಾಮಬಾಣ

ವಿಶ್ವಾಮಿತ್ರರ ಕಲಿಕೆಯ ಬಾಣ
ಸುಬಾಹುವನು ಸಂಹರಿಸಿದ ಬಾಣ
ಮಾರೀಚನ ತರುಬಟ್ಟಿದ ಬಾಣ
ಕೌಶಿಕಯಾಗವ ಕಾಯ್ದಾ ಬಾಣ
ತಾಟಕೀಪ್ರಾಣ ಹೀರಿದ ಬಾಣ
ಮಾಯಾಮೃಗವನು ಕೆಡವಿದ ಬಾಣ
ಏಳು ತಾಳತರು ಸೀಳಿದ ಬಾಣ
ವಾಲೀಹೃದಯವ ಹೊಕ್ಕಿರಿದ ಬಾಣ
ಕಡಲನು ದಾರಿಯ ಬಿಡಿಸಿದ ಬಾಣ
ಕುಂಭಕರ್ಣನುಸಿರೆಳೆದಾ ಬಾಣ
ರಾವಣಮಾರಣಪೂರಣ ಬಾಣ
ಲಂಕಾನಗರಿಗೆ ಬೆಂಕಿಯ ಬಾಣ
ಸೀತೆಯ ಸೆರೆಯನು ಬಿಡಿಸಿದ ಬಾಣ
ಭಯಾಪಹಾರಕ ಭೀಕರ ಬಾಣ
ಜಯ ಜಯ ರಾಮಶ್ರೀಕರ ಬಾಣ

* * * *

# ಪೆನ್ನು–ಗನ್ನು

ಕೈಯಲಿ ಹಿಡಿಯುವ ಪೆನ್ನು
ಒಳಗಿರೆ ಬರೆಯುವ ಶಾಯಿ;
ಭಾವಮದ್ದು ತುಂಬಿರೆ ಗನ್ನು
ಅದ ಹಿಡಿದವನು ಸಿಪಾಯಿ.

* * * *

# ಶಾಂತಿಯ ದೂತರು ನಾವು

ಶಾಂತಿಯ ದೂತರು ನಾವು
ಶಾಂತಿಯೊಸಗೆಯ ತಂದಿಹೆವು ॥ಪ॥

ಭಾರತಮಾತೆಯ ನಲ್ಮೆಯ ಮಕ್ಕಳು
ಭರತವರ್ಷದ ಒಲ್ಮೆಯ ಒಕ್ಕಲು ॥ಅ. ಪ॥

ಗೆಳತನದ ಮಳೆಯ ಕರೆಯುವೆವು
ಹಗೆತನವೆಲ್ಲವ ಮರೆಯುವೆವು
ಒಳಿತನೆ ಪಿಡಿದು ಕೆಡುಕನ್ನುಳಿದು
ನಗುನಗುತೆಲ್ಲರ ಬೆರೆಯುವೆವು.

ಪ್ರೇಮದಣುಬಾಂಬನೆಸೆಯುವೆವು
ದೇಶದೇಶಗಳ ಬೆಸೆಯುವೆವು
ಭೂಮಂಡಲವೊಂದೆಂಬ ಸತ್ಯದ
ಭಾಷೆಯ ತೊಡುವೆವು ತೊಡಿಸುವೆವು.

ನಮಗಿಲ್ಲ ಜಾತಿಮತ ಕುಲಭೇದ
ಒಡಬಾಳುವುದೆಮ್ಮದು ಶಪಥ
ಸಮತಾದೃಷ್ಟಿಯ ವಿಶ್ವಕುಟುಂಬದ
ರಚನೆಗೆ ದುಡಿವೆವು ನಾವು ಸದಾ.

* * * *

# ನವಭಾರತ ರತ್ನ ಜವಹರ್

೧

ಜವಹರಲಾಲ್ ! ಜವಹರಲಾಲ್ !
ಕಂದಾ, ನೀ ಕೇಳ್‌ಕೇಳ್ !
ಅವ ಭಾರತ ರತ್ನ,
ನವಭಾರತ ರತ್ನ !
ಅವನಂತಾಗಲು ಇಂದೇ
ನೀ ಮಾಡು ಪ್ರಯತ್ನ !

೨

ತಂದೆ ಮುತ್ತು, ತಾಯ್ ಸ್ವರೂಪೆ ;
ಬಂದನವರ ಚಂದ ಕುವರ–
ನೆಂದೆನಿಸುತ ಶಿಶುರತ್ನ :
ಅಂದಿನವ
ಇಂದಿನವ
ಎಂದೆಂದೂ
ನವೋನವ,
ನವಭಾರತ ರತ್ನ!
ವಿಜಯೆ ಕೃಷ್ಣೆ ತಂಗೆಯರು,
ಹೆಂಗಳಲುತ್ತುಂಗೆಯರು ;
ಪತ್ನಿ ಕಮಲೆ, ಮಗಳಿಂದಿರೆ
(ಜೋಡಿ, ಕಮಲೆ–ಕಮಲೋದ್ಭವೆ)–

ಇಂತಿದೆ ಜವಹರ ಕುಟುಂಬ
ಮುಂತಿದೆ ಹೆಸರಿಳೆತುಂಬ !

೩

ಜವಹರಲಾಲ್ ! ಜವಹರಲಾಲ್ !
ಅವ ಭಾರತ ರತ್ನ,
ನವ ಭಾರತ ರತ್ನ,

## ಚಂದ್ರನ ಮರಿ

ಚಂದ್ರನ ಮರಿ ಚಂದ್ರನ ಮರಿ
ಸುತ್ತುತ್ತಿವೆ ಗಿರಿಗಿರಿ !
ಅಮೆರಿಕ ರಷ್ಯಗಳು ಬಿಟ್ಟ
ವಿಜ್ಞಾನದ ಅಚ್ಚರಿ !

ಆಕಾಶದ ಗುಟ್ಟನೆಲ್ಲ
ಕಳಿಸಿ ನಮ್ಮ ನೆಲಕ್ಕೆ
ಸೀಕರಿಯಾಗುರಿದು ಕೊನೆಗೆ
ಬೀಳ್ವವಂತೆ ಕೆಳಕ್ಕೆ.

ಬಿಟ್ಟರೇನು ಚಂದ್ರನ ಮರಿ
ದೇಶವೆರಡು ವೈರಿ ;
ಕಟ್ಟಕಡೆಗೆ ಚಂದ್ರನ ಮರಿ
ಮುಟ್ಟಲಿ ಶಾಂತಿಯ ಗುರಿ.

ನೆಲದ ನಮ್ಮ ಚಂದ್ರನ ಮರಿ
ನೋಡಿದೊ ತೊಟ್ಟಲಲಿ !
ಇಳೆಯ ಶಾಂತಿಯೆಲ್ಲ ತುಂಬಿ
ತುಳುಕುತಿಹುದು ಮುಖದಲಿ !

* * * *

## ಹುಲಿಯ ವೇಷದ ಕತ್ತೆ

ಕಿರಿಚಬಾರದು ಹುಲಿಯ ವೇಷ ಹಾಕಿದ ಕತ್ತೆ;
ಅರಚಬಾರದು ಸೊಸೆಯ ಸೇವೆ ಮಾಡುವ ಅತ್ತೆ.

ಭಾರತ ಮಾತೆಯ ತಲೆಮಣಿ,
ನಮ್ಮೆಲ್ಲರ ಕಣ್ಣಮಣಿ,
ಜವಹರ ಜವಹರ ಜವಹರ
ತಾಯ ಕೊರಳ ವಜ್ರಹಾರ!
ನೆಹರು ನೆಹರು ನೆಹರು ನೆಹರು
ಇದಿನ್ನೊಂದು ಮುದ್ದು ಹೆಸರು !
ಬಿಡುಗಡೆಹೊಂದಿರುವ ನಮ್ಮ
ನಾಡ ಸುಖದ ಕಲ್ಪತರು!
ಗಾಂಧಿ ಬಿಟ್ಟ ಹೊಣೆಯ ನಿಧಿಗೆ
ಇವನೆ ಉತ್ತರಾಧಿಕಾರಿ,
ನಮ್ಮ ದಿಕ್ಕು ದೆಸೆ ದಾರಿ.

೪

ಜವಹರಲಾಲ್ ! ಜವಹರಲಾಲ್ !
ಕಂದಾ ನೀ ಕೇಳ್‌ಕೇಳ್ !
ಬಹುಪ್ರಿಯರಾತಗೆ ಮಕ್ಕಳು :
ಅವ ಹುಟ್ಟಿದ ದಿನ ಮೊಸಲು
ನಿನ್ನೇಳ್ಗೆಯ ಸಾಧಿಸಲು :
ಅವ ನಗುತಿಹ ನೀ ನಗಲು,
ಅದಕೋಸುಗ ನಗು ನಗು ;
ಅವನಾಗುವನೊಡನೆ ಮಗು !
ಮಕ್ಕಳ ನಡು ಮುದುಕ–ಮಗು!
ಮಕ್ಕಳೆ ನಾಡಿನ ಐಸಿರಿ–
ಅವನದಿದು ವಿಚಾರ ಲಹರಿ ;
ಮಕ್ಕಳೇಳ್ಗೆ ಆತನ ಗುರಿ,
ಮಕ್ಕಳವನ ಭಾಗದ ಹರಿ.
ಅದಕೋಸುಗ ನೀ ನಗು–
ಅವನಂತಾಗು !

* * * *

## ೧. ಕೋಡಂಗಿ

ನಮ್ಮೂರ ಬಯಲಾಟದ ಕೋಡಂಗಿ
ಜನರನು ನಗಿಸುವ ನಕಲಿಯ ನಾಗ;
ನಾಗನ ನಕಲಿಯ ನೋಟವನೊಂದನು
ಬಣ್ಣಿಸುವೆನು ಕೇಳಿರಿ ಈಗ.

ಬಂದನು ಬಯಲಾಟದ ಕೋಡಂಗಿ
ಬಾಯಲಿ ಕಚ್ಚುತ ಮೂಲಂಗಿ ;
ಜೊತೆಯಲಿ ಹೆಂಡತಿ ಉರಿಸಿಂಗಿ,
ಮಕ್ಕಳು ಜಗ್ಗಿಸುತಿವೆ ಅವನಂಗಿ.

ಬಣಬಣ್ಣದ ತೇಪೆಯ ಅಂಗಿ
ಷರಾಯಿ ಮೇಲ್ಗಡೆ ಚೌಕುಳಿಲುಂಗಿ
ಟೋಪಿಗೆ ಕೋಳಿಯ ಪುಕ್ಕದ ಚುಂಗಿ
ನೋಟಕೆ ತಮಾಷೆ ಕೋಡಂಗಿ.

"ಹೆಂಡತಿ ಮಕ್ಕಳು ಉಪವಾಸ
ಬಿಡುವುದಿಲ್ಲ ನಾ ಮಾಡಲು ವೇಸ
ಕೊಡಿ ಭಾಗವತರೆ ಅವಳಿಗೆ ಕಾಸ
ಸಾಕುಸಾಕಿವರ ಸಹವಾಸ".

ಕೋಡಂಗಿಯ ಮಾತನು ಕೇಳಿ
ಭಾಗವತರು ಕೋಪವ ತಾಳಿ,
ಹೇಳಿದರಿಂತು : "ಅವರನು ಮನೆಗೆ
ಕಳುಹಿಸು, ಕಾಸನು ಕೊಡುವೆನು ಕೊನೆಗೆ".

ಮದ್ದಳೆ ಬಾರಿಸಿದನು ಭಾಗವತ,
ಕೋಡಂಗಿ ಕುಣಿಯುತ ತೈತಕತ–
"ಸಾಕಪ್ಪಾ ಈ ಸಂಸಾರ,
ಮಕ್ಕಳು ಹೆಚ್ಚಿದರದು ಭಾರ"–

ಎನ್ನುತ ಜನರಿಗೆ ಕೈಮುಗಿದು
ಅಟ್ಟದಿಂದ ಹಾರಿದ ನೆಗೆದು.
ಬಿದ್ದು ಬಿದ್ದು ನಕ್ಕರು ಜನರು ;
ನಗುವಿನಿಂದ ಜೀವನ ಹಗುರು.

* * * *

## ೨. ಕಾಮನ ಬಿಲ್ಲಿನ ಬಣ್ಣ

ಕಾಮನ ಬಿಲ್ಲಿಗೆ ಬಣ್ಣಗಳೇಳು
ಯಾವುವು, ಬಲ್ಲೆಯ? ಹೇಳುವೆ ಕೇಳು :
ಕೆನ್ನೀಲಿ ನೀಲಿ ನೇರಿಳೆನೀಲಿ
ಹಸುರು ಹಳದಿ ಕಿತ್ತಳೆ ಕೆಂಪಿನಲಿ
ಒಡೆದೇಳಾಗಿದೆ
ಸೂರ್ಯನ ರಶ್ಮಿಯ ಅಚ್ಚಬಿಳಿ.
ಇವುಗಳೆ ಸೂರ್ಯನ ರಶ್ಮಿರಥವೆಳೆವ
ಏಳು ಬಣ್ಣಗಳ ಏಳು ಕುದುರೆಗಳು.

* * * *

## ೩. ಬೇರಿಗೆ ನೀರುಣಿಸು

ಬೇರಿಗೆ ನೀರುಣಿಸು
ಹೂವು ಹಣ್ಣು ಹುಲುಸು.

"ಮನೆಗೆ ಹೋಗೆ ನೀ ಮಹರಾಯ್ತಿ
ಖಂಡಿತ ಕಾಸನು ಈ ಸರತಿ
ತಂದು ಕೊಡುವೆ, ಏತಕೆ ಸಾಯ್ತಿ,
ಮಾಡಬೇಡ ಹೆಣ್ಣು ಕೋತಿಯ ಮೂತಿ"–

ಎನ್ನುತ ಹೆಂಡತಿ ಕಾಲಿಗೆ ಬಿದ್ದ
ಮುಗಿಯುತ ಕೈಯನು ಮೇಲಕ್ಕೆದ್ದ ;
ನಕ್ಕರು ನೋಡುವ ಜನರೆಲ್ಲ,
ಕೋಡಂಗಿಯ ಹೆಂಡತಿ ನಗಲಿಲ್ಲ.

"ನಮ್ಮ ಹೊಟ್ಟೆ ಹಾಕುತ್ತಿದೆ ತಾಳ
ಹುಟ್ಟುವುದಿಲ್ಲ ಎಲ್ಲೂ ಸಾಲ
ನೀನಿಲ್ಲಾಡಿಸುತಿರು ಕೈಕಾಲ
ಕಾಣೆ ನೀನು ನಮ್ಮೆಲ್ಲರ ಗೋಳ".

ಕೇಳಿ ಕೋಡಂಗಿ ಹೆಂಡತಿಯ ಮಾತ–
"ಬಾರಿಸಿ ಮದ್ದಳೆ ಭಾಗವತ ತಾತ
ಕುಣಿಯುವೆ ನಾನು ತೈತಕ ತಕತ"
ಎನ್ನುತ ಮೇಲಕೆ ನೆಗೆದನು ನೆಗೆತ.

ನೆಗೆದನು, ಬಿದ್ದನು, ಜಜ್ಜಿತು ಮೂತಿ–
"ಏಳೇಳೋ ನಿನಗೇನಾಗೈತಿ"
ಎನ್ನುತ ಬಂದಳು ಅವನ ಹೆಂಡತಿ,
ಮಾಡಿದಳವನ ಜೇಬಿನ ಝಡತಿ.

ಸಿಕ್ಕಿತು ಅವಳಿಗೆ ಒಂದು ರುಪಾಯಿ,
"ಇಲ್ಲಿಯೆ ಬಿದ್ದಿರು ಕುಣಿಯುತ ಸಾಯಿ"
ಎನ್ನುತ ನಡೆದಳು ಮಕ್ಕಳ ತಾಯಿ;
ಕೋಡಂಗಿಯೆದ್ದು, ಬಿಟ್ಟನು ಬಾಯಿ.

ಹೊಟ್ಟೆ ತುಂಬ ಭಾರವಾಗಿ
ಮೂಲೆ ಹುಡುಕಿ ಕೊಂಡು ಹೋಗಿ,
ಅಲ್ಲಲ್ಲಿಯೆ ಅಡಗಿಕೊಂಡು
ಸಂದಿಗೊಂದಿ ಬಿರುಕಿನಲ್ಲಿ
ಬಿಳಿಯ ಗುಳಿಗೆ ಮೊಟ್ಟೆಯಿಟ್ಟು,
ಇಹವು ವಾಸ ಮಾಡಿಕೊಂಡು
ನಮ್ಮ ನಿಮ್ಮ ಜೊತೆಯಲೇ
ನಮ್ಮ ನಿಮ್ಮ ಮನೆಯಲೇ–
ಯಾವ ಪ್ರಾಣಿ, ಗೊತ್ತೆ? ಹೇಳಿ :
ಗೊತ್ತಿಲ್ಲವೋ? ಸರಿ, ಕೇಳಿ.
'ಪಲ್' ಇಲ್ಲದ 'ಪಲ್–ಇಲಿ'
'ಪಲ್ಲಿ'–'ಹಲ್ಲಿ' ಆಯ್ತು ಕೇಳಿ :
'ಇಲಿ' ಎಂದರೆ 'ಇಲ್ಲದ್ದು' :
ಹಲ್ಲಿಲಿ ಹಲ್ಲಿಲ್ಲದ್ದು.
ಹೆದರಬೇಡಿ ಹಲ್ಲಿಗೆ–
ಬರುವುದಿಲ್ಲ ನಮ್ಮ ಬಳಿಗೆ;
ಹಲ್ಲೆ ಇಲ್ಲ ಕಚ್ಚಲು,
ಕೊಂಡಿಯಿಲ್ಲ ಕುಟುಕಲು.
ಆದರೊಂದು ಎಚ್ಚರಿಕೆ–
ಹಲ್ಲಿ ವಿಷದ ಪ್ರಾಣಿಯಂತೆ !
ಮರೆಯ ಬೇಡಿ ಮುಚ್ಚಲು
ಹಾಲು ಮೊಸರು ಅನ್ನ ಸಾರು
ಪಾತ್ರಗಳನು ನಿಚ್ಚಲು.
ಏನೆ ಹೇಳಿ, ಹಲ್ಲಿ ಪಲ್ಲಿ
ನಮಗೆ ಬಹಳ ಉಪಕಾರಿ :
ಜಿರಲೆ ಸೊಳ್ಳೆ ನೊಣಗಳು
ಹೆಚ್ಚದಂತೆ ಮಿತಿ ಮೀರಿ
ತಡೆವ ಪ್ರಾಣಿ ಹಲ್ಲಿಯ
ಕೊಲ್ಲ ಬೇಡಿರಿ.

## ೪. ದೇಶದ ಬಡತನ

ಗಾಂಧಿ ನೆಹರು ಜಯಪ್ರಕಾಶ
ಇವರಿಲ್ಲದೆ ಬಡವು ದೇಶ.

## ೫. ಒಂದು ಹಳೆಯ ಹಾಡು

ಕುಂಟ ಕಾಲಿಗೆ ಕುಣಿಮಿಣಿಗೆಜ್ಜೆ
ಸೈಲ ಕುಂಟಣ್ಣ.
ಒಳ್ಳೆಯ ಕಾಲಿಗೆ ಬೆಳ್ಳಿಯ ಗೆಜ್ಜೆ
ಸೈಲ ಕುಂಟಣ್ಣ.
ಕುಂಟ ಕಾಲಿಗೆ ಒಂದೇ ಗೆಜ್ಜೆ
ಸೈಲ ಕುಂಟಣ್ಣ
ಒಳ್ಳೆಯ ಕಾಲಿಗೆ ಸರಸರ ಗೆಜ್ಜೆ
ಸೈಲ ಕುಂಟಣ್ಣ
ಕುಣಿಯೊ ಕುಣಿಯೊ ಕುಂಟಣ್ಣ
ಕುಣಿದರೆ ಕಾಸು ಉಂಟಣ್ಣ.

* * * *

## ೬. ಹಲ್ಲಿ

ಇಲ್ಲಿ ಅಲ್ಲಿ ಎಲ್ಲೆಲ್ಲೂ
ಹತ್ತಿ ಹರಿದು ಗೋಡೆ ಮೇಲೆ
ಹುಡುಕಿ ಮನೆಯ ಮೂಲೆ ಮೂಲೆ
ಹೊಂಚು ಹಾಕಿ ಅಲುಗದೆ,
ಹತ್ತಿರಕ್ಕೆ ಹಾರಿ ಬಂದ
ಹುಳು ಹುಪ್ಪಟೆಗಳನು ಹಿಡಿದು
ಗಬಕ್ ಎಂದು ನುಂಗಿಬಿಟ್ಟು,

ಮಾರ್ಗಶಿರ ಪುಷ್ಯ ಹೇಮಂತ ಋತು–
ಚಳಿಗಾಲವು ಕಾಲೂರುವುದು;
ಮಂಜು ಬೀಳುವುದು ಬೆಳಗಾಗ,
ಸಂಜೆಯಾಗುವುದು ಬಲುಬೇಗ.

ಮಾಘ ಫಾಲ್ಗುಣವು ಶಿಶಿರಋತು–
ಚಳಿ ಗಾಳಿಗೆ ಎಲೆ ಉದುರುವುದು ;
ಪಯಿರನು ಕೊಯ್ಯಲು ರೈತರು ಹಿಗ್ಗಿ,
ಎಲ್ಲೆಲ್ಲೂ ಸಂತಸ ಸುಗ್ಗಿ.

* * * *

## ೮. ಹಬ್ಬದ ಗುಟ್ಟು

ಕೇಳಿರಿ ಹೇಳುವ ಹಬ್ಬದ ಮಟ್ಟು
ಕೇಳಿರಿ ಕೇಳಿರಿ ಕಿವಿಗೊಟ್ಟು.
ಯುಗಾದಿ ಹಬ್ಬಕೆ ಒಬ್ಬಟ್ಟು
ಕೋಸಂಬ್ರಿ ಪಾನಕ ರಾಮನಿಗೆ
ಹಿಟ್ಟಿನ ಹೋಳಿಗೆ ಕಾಮನಿಗೆ
ಮಂಗಳ ಗೌರಿಗೆ ತಂಬಿಟ್ಟು
ಗಣಪನ ತಾಯಿಗೆ ಗರುಗೊಬ್ಬಟ್ಟು
ಗಣಪಗೆ ಗರಿಗರಿ ಕರಿಗಡಬು
ಮುದುಕ ಅನಂತಗೆ ಮೃದು ಹೊಯ್ಗಡುಬು
ನವರಾತ್ರಿಯಲಿ ಬಗೆ ಬಗೆ ಭಕ್ಷ್ಯ
ನಮಗವುಗಳ ಮೇಲೇ ಲಕ್ಷ್ಯ
ಸರಸ್ವತೀ ದೇವಿಗೆ ಅತ್ರಾಸ
ದುರ್ಗಾದೇವಿಗೆ ಆಂಬೊಡೆ ಪಾಯಸ
ದೀಪಾವಳಿಯಲಿ ಅಳಿಯನೆ ದೇವರು
ಅವನುಪಚಾರ ಅತ್ತೆಗೆ ಬೆವರು
ಶೂನ್ಯಮಾಸ ಹಬ್ಬಕ್ಕೆ ಸೊನ್ನೆ

ಲೊಚ ಲೊಚ ಲೊಚ ಲೊಚಗುಟ್ಟುತ
ಶುಭದ ಶಕುನ ನುಡಿವ ಹಲ್ಲಿ
ಮನೆಯಲಿದ್ದು ಕೊಳ್ಳಲಿ.

* * * *

## ೭. ಋತುಗಳ ರೀತಿ

ಚೈತ್ರ ವೈಶಾಖ ವಸಂತ ಋತು–
ಗಿಡಮರ ಚಿಗುರುವುದಕ್ಕೆ ಗುರುತು ;
ರೈತರು ತಮ್ಮ ಗದ್ದೆ ಹೊಲ
ಹದಮಾಡಿ ಉಳಲು ಇದೆ ಕಾಲ.

ಜ್ಯೇಷ್ಠ ಆಷಾಢ ಗ್ರೀಷ್ಮ ಋತು–
ಬೇಸಗೆ ಬಿಸಿಲು ಈಗ ಮುಗಿಯಿತು ;
ದಟ್ಟ ಮೋಡ ಆಕಾಶದಿ ಕವಿದು
ಬೀಸುತ್ತಿರುವುದು ಬಿರುಗಾಳಿ.

ಶ್ರಾವಣ ಭಾದ್ರಪದವು ವರ್ಷ ಋತು–
ಮೋಡ ಬಿರಿದು ಮಳೆ ಸುರಿಯುವುದು ;
ರೈತರು ಹಾಕಿದ ಬೆಳೆ ಬೆಳೆದು
ಎಲ್ಲೆಲ್ಲೂ ಹಸುರಾಗುವುದು.

ಆಶ್ವೀಜ ಕಾರ್ತಿಕವು ಶರದ್‌ಋತು–
ಮಳೆ ನಿಂತಾಕಾಶವು ನೀಲಿ ;
ಹೊಲಗದ್ದೆಯ ಬೆಳೆ ತೆನೆಗೂಡಿ
ರೈತರು ನಲಿವರು ಕುಣಿದಾಡಿ.

ತಿನ್ನಬೇಕು । ತುಪ್ಪ । ತಿನ್ನಬೇಕು ।
ತಿಂದು ತಿಂದು । ದಪ್ಪ । ಆಗಬೇಕು ॥ ೧೦ ॥
ಆಗಬೇಕು । ದಪ್ಪ । ಆಗಬೇಕು ।
ಆಗಿ ಆಗಿ । ದಪ್ಪ । ದುಡಿಯಬೇಕು ॥ ೧೧ ॥
ದುಡಿಯಬೇಕು । ನಾವು । ದುಡಿಯಬೇಕು ।
ದುಡಿದು ದುಡಿದು । ದೇಶ । ಕಟ್ಟಬೇಕು ॥ ೧೨ ॥

* * * *

## ೧೦. ಹಾಡದ ಹಕ್ಕಿ

ಮಗ

"ನೋಡಮ್ಮ ಈ ಹಕ್ಕಿ, ಈಗ ಹಾಡುವುದಿಲ್ಲ,
ಗೂಡಿನೊಳಗೊಂದು ಕಡೆ ಕೂತುಕೊಂಡಿದೆ ಹೆದರಿ–
ಹಾಡದೆ ಹೋದರೆ ಹೊಡೆದು ಬಿಡುವೆ."

ಅಮ್ಮ

"ಗೂಡಿನ ಬಾಗಿಲನು ತೆರೆದು ನೋಡಾಗ
ಹಾಡುವುದು ತಾನಾಗಿ ಹಾರಿ ಹೊರಗೆ–
ಗೂಡು ಸೆರೆಮನೆ ಅದಕೆ, ಕಾಡು ಬಿಡುಬೀಸು."

ಮಗ

"ನಿನ್ನ ಮಾತನ್ನು ನಾನು ಕೇಳುವುದೆ ಇಲ್ಲ–
ನನ್ನ ಇಷ್ಟದ ಹಾಗೆ ಅದು ಹಾಡದಿದ್ದರೆ
ಹಣ್ಣು ಕೊಡುವುದೆ ಇಲ್ಲ ನಾನದಕ್ಕೆ."

ಅಮ್ಮ

"ಹಣ್ಣು ಕೊಡಲೇ ಬೇಡ, ಬಿಟ್ಟುಬಿಡೊ ಅದನು–
ಹಣ್ಣು ಕೊಡುವನು ಅದಕೆ ಬೇರೊಬ್ಬನು ;

ಶಿವರಾತ್ರಿಯಲಿ ಜಾರಿ ಜಾಗರಣೆ
ಸಂಕ್ರಾಂತಿಯಲಿ ಎಳ್ಳು ಕಬ್ಬು
ಹಬ್ಬಹಬ್ಬಕೂ ಸಂತಸದುಬ್ಬು
ತಿನ್ನದ ದೇವರ ಮುಂದಿಟ್ಟು
ತಿನ್ನುವುದೇ ಹಬ್ಬದ ಗುಟ್ಟು.

* * * *

## ೯. ಹಸು ಸಾಕಬೇಕು–ದೇಶ ಕಟ್ಟಬೇಕು

(ಕೋಲಾಟದ ಪದಗಳು)

ಸಾಕಬೇಕು । ಹಸು । ಸಾಕಬೇಕು ।
ಸಾಕಿ ಸಾಕಿ । ಹಾಲು । ಕರೆಯಬೇಕು ॥ ೧ ॥
ಕರೆಯಬೇಕು । ಹಾಲು । ಕರೆಯಬೇಕು ।
ಕರೆದು ಕರೆದು । ಹಾಲು । ಕಾಸಬೇಕು ॥ ೨ ॥
ಕಾಸಬೇಕು । ಹಾಲು । ಕಾಸಬೇಕು ।
ಕಾಸಿ ಕಾಸಿ । ಹೆಪ್ಪು । ಹಾಕಬೇಕು ।
ಹಾಕಬೇಕು । ಹೆಪ್ಪು । ಹಾಕಬೇಕು ।
ಹಾಕಿ ಹಾಕಿ । ಮೊಸರು । ಮಾಡಬೇಕು ॥ ೪ ॥
ಮಾಡಬೇಕು । ಮೊಸರು । ಮಾಡಬೇಕು ।
ಮಾಡಿ ಮಾಡಿ ಮೊಸರು । ಕಡೆಯಬೇಕು ॥ ೫ ॥
ಕಡೆಯ ಬೇಕು । ಮೊಸರು । ಕಡೆಯಬೇಕು ।
ಕಡೆದು ಕಡೆದು । ಬೆಣ್ಣೆ । ತೆಗೆಯಬೇಕು ॥ ೬ ॥
ತೆಗೆಯಬೇಕು । ಬೆಣ್ಣೆ । ತೆಗೆಯಬೇಕು ।
ತೆಗೆದು ತೆಗೆದು । ಬೆಣ್ಣೆ । ಕಾಸಬೇಕು ॥ ೭ ॥
ಕಾಸಬೇಕು । ಬೆಣ್ಣೆ । ಕಾಸಬೇಕು ।
ಕಾಸಿ ಕಾಸಿ । ತುಪ್ಪ । ಮಾಡಬೇಕು ॥ ೮ ॥
ಮಾಡಬೇಕು । ತುಪ್ಪ । ಮಾಡಬೇಕು ।
ಮಾಡಿ ಮಾಡಿ । ತುಪ್ಪ । ತಿನ್ನಬೇಕು ॥ ೯ ॥

ತುರುಬಿಗೆ ದಂಡೆ
ಕಟ್ಟಿದ ಮಲ್ಲಿಗೆ
ದೇವರ ಪೂಜೆಗೆ ಬಿಡಿಮಲ್ಲಿಗೆ
ಮದು ಮಕ್ಕಳಿಗೆ
ಮಾಲೆಯ ಮಲ್ಲಿಗೆ
ಮಲ್ಲಿಗೆ ಮೊಗ್ಗು ನಿಡುಜಡೆಗೆ.

ಅರಳಿದ ಮಲ್ಲಿಗೆ
ಮೊಗ್ಗಾದ ಮಲ್ಲಿಗೆ
ಮೈಸೂರು ಹುಡುಗಿ ನಾ ಮಲ್ಲಿ
ಬಂದೆ ನಿಮ್ಮಲ್ಲಿಗೆ
ಅಲ್ಲಿಗೆ ಇಲ್ಲಿಗೆ
ತಿರುಗಿಸಬೇಡಿ, ಹೂ ಕೊಳ್ಳಿ.

* * * *

## ೧೨. ಹೂ ಬಿಡುವ ಗಿಡ

ತೋಟದಲೊಬ್ಬನೆ
ಹೋಗುತ್ತಿದ್ದೆ;
ಏನನು ಮಾಡದೆ
ಯೋಚಿಸುತಿದ್ದೆ.

ಕಂಡೆನು ನೆರಳಲಿ
ಹೂವೊಂದನ್ನು ;
ನಕ್ಷತ್ರದಂತೆ
ಹೊಳೆಯುವುದನ್ನು.

ನಮಗನ್ನ ಕೊಡುವವನೆ ಹಣ್ಣದಕೆ ಕೊಡುವ,
ಹಕ್ಕಿಯನು ಬಿಟ್ಟುಬಿಡು – ಕೇಳದರ ಹಾಡು."

* * * *

## ೧೧. ಮಲ್ಲಿಯ ಮಲ್ಲಿಗೆ
(ಹಾಡು)

ಮಲ್ಲಿಗೆ ಮಲ್ಲಿಗೆ
ಬೇಕೇ ಮಲ್ಲಿಗೆ
ಬನ್ನೀ ಬನ್ನೀ ನನ್ನಲ್ಲಿಗೆ
ಹೊಚ್ಚ ಹೊಸ
ಅಚ್ಚ ಮಲ್ಲಿಗೆ
ಬೇಕಿದ್ರೆ ಬನ್ನಿ ನನ್ನಲ್ಲಿಗೆ.

ದುಂಡು ಮಲ್ಲಿಗೆ
ಸೂಜಿ ಮಲ್ಲಿಗೆ
ನಿತ್ಯಮಲ್ಲಿಗೆ ನಿಮಗೆ ಬೇಕೆ ?
ಚೆಂಡು ಮಲ್ಲಿಗೆ
ಸಂಜೆ ಮಲ್ಲಿಗೆ
ಕಾಡು ಹೂಗಳು, ನಿಮಗ್ಯಾಕೆ?

ಮೈಸೂರು ಮಲ್ಲಿಗೆ
ಮುಂಜಾನೆ ಮಂಜಲ್ಲಿ
ತೊಳೆದು ಅರಳಿದೆ ಬಿಳಿಮಲ್ಲಿಗೆ
ಘಮ ಘಮ ಪರಿಮಳ
ಬೀರುವ ಮಲ್ಲಿಗೆ
ಮೈಸೂರು ಮಲ್ಲಿಯ ಮುಡಿಮಲ್ಲಿಗೆ

ಪದ ಪದ ಪದ ಪದ – ದಪ ದಪ ದಪ ದಪ
ಗುರುಗಳ ತಿಳಿವಿಗೆ ಇಲ್ಲ ಸಮ.
ನಿಸ ನಿಸ ನಿಸ ನಿಸ – ಸನಿ ಸನಿ ಸನಿ ಸನಿ
ಗುರುವಿನ ವಚನ ಜೇನುಹನಿ.

* * * *

## ೧೪. ಬೀದಿ ಮಾರಿ

ಬಂತು ಬಂತು ಬೀದಿಮಾರಿ
ಅತ್ತ ಇತ್ತ ಧೂಳು ತೂರಿ
ಬೆನ್ನುಬಾಯ ಹೊಗೆಯ ಕಾರಿ
ತ್ರಾಂ ತ್ರೂಂ ಎಂದು ಚೀರಿ
ಹಳ್ಳತಿಟ್ಟು ಹಾರಿ ಹಾರಿ
ದಾರಿ ಜನಕೆ ಭಯವ ಬೀರಿ
ಆನೆಯಂತೆ ಜಿಗ್ಗುತ
ಗೂಳಿಯಂತೆ ನುಗ್ಗುತ !

ವೇಗದಲ್ಲಿ ಹದ್ದು ಮೀರಿ
ಹೆಂಡಕುಡುಕನಂತೆ ತೂರಿ
ಹೋದ ಕಡೆಯೆ ಅದರ ದಾರಿ ;
ಅದು ನಿಜಕ್ಕು ಬೀದಿಮಾರಿ–
ಲೋಹ ದೇಹ ಅದರದು,
ಯಾರಿಗೂ ಹೆದರದು.

ಕೋಳಿಪಿಳ್ಳೆ ನಾಯಿಮರಿ
ಮುದುಕ ಮುದುಕಿ ಮಕ್ಕಳು ಮರಿ
ಅದರ ಅಡಿಗೆ ಸಿಕ್ಕರೆ ಸರಿ
ಕ್ಷಣದಲ್ಲೆ ನುಗ್ಗು ನುರಿ :

ಕುಯ್ಯಲು ಹೋಗಲು
ಹೀಗೆಂದಿತು ಹೂ–
"ಬೇಡ, ಕುಯ್ದರೆ
ಬಾಡುವೆ ನಾನು."

ಕಿತ್ತೆನು ಗಿಡವನೆ
ಜೋಕೆಯಲಿ;
ನೆಟ್ಟೆನು ಮನೆಯಾ
ಅಂಗಳದಿ.

ಬೆಳೆಯಿತು ಯಾವುದೊ
ಮೂಲೆಯಲಿ ;
ಇನ್ನೂ ಬೆಳೆಯುತ
ಬಿಡುತಿದೆ ಹೂ.

ಬಿಡುವ ಹೂವನು
ನೋಡುವೆನು ;
ನೋಡುತ ನೋಡುತ
ನಲಿಯುವೆನು.

* * * *

## ೧೩. ಗುರುವಚನ ಗೀತ

ಸರಿ ಸರಿ ಸರಿ ಸರಿ – ರಿಸ ರಿಸ ರಿಸ ಸರಿ
ಗುರುಗಳು ಹೇಳುವ ಪಾಠ ಸರಿ.

ಗಮ ಗಮ ಗಮ ಗಮ – ಮಗ ಮಗ ಮಗ ಮಗ
ಗುರು ಹರಕೆಯ ಹೂ ಘಮಾ ಘಮ.

ಮಡದಿಯನು ಹುಡುಕುತಿರಲು
ತಮ್ಮನೊಡನೆ ರಾಮನು
ಕಡೆಗೆ ಕಪಿಗಳರಸನಾದ
ಸುಗ್ರೀವನ ಕಂಡನು.

ಲಂಕೆಯೊಡೆಯ ರಾವಣನು
ಸೀತೆಯನ್ನು ಆಪಹರಿಸಿ
ಮಂಕನಾಗಿ ಸೆರೆಯಲಿಟ್ಟ
ರಕ್ಕಸಿಯರ ಕಾವಲಿರಿಸಿ.

ಸೀತೆಯನ್ನು ಬಿಡಿಸಿಕೊಳಲು
ಕಡಲ ನಡುವೆ ಲಂಕೆಗೆ
ಸೇತುವನ್ನು ಕಟ್ಟಿರೆಂದು
ಆಜ್ಞೆಯಾಯ್ತುಃಟಚಿಟಿಞ ಕಪಿಗಳಿಗೆ.

ಕಲ್ಲು ಬಂಡೆಗಳನು ತಂದು
ರಾಶಿಹಾಕಿ ಕಪಿಗಳು
ಎಲ್ಲವನ್ನು ಕೂಡಿಸಿಡಲು
ಬೇಕಾಯಿತು ಮರಳು.

ಅಲ್ಲಿ ಓಡಿಯಾಡುತಿದ್ದ
ಅಳಿಲು ಇದನು ಅರಿಯಿತು;
ಸಿಳ್ಳುಕೂಗಿ ಕರೆಯೆ ಅಳಿಲ
ಬಳಗವಲ್ಲಿ ನೆರೆಯಿತು.

ಅಳಿಲ ದಂಡು ಕಡಲಿನಲ್ಲಿ
ಮುಳುಗಿ ದಂಡೆ ಮರಳಿನಲ್ಲಿ
ಕೆಳಗುಮೇಲಾಗಿ ಹೊರಳೆ
ಮೆತ್ತಿಕೊಂಡ ಮರಳನು

ಆನೆ ತುಳಿತದಪ್ಪಚ್ಚಿ
ಬದನೆಕಾಯಿ ಬಜ್ಜಿ !

ಯಂತ್ರ ಯುಗದ ಭೂತ ಮಾರಿ,
ಕುಡುಕನದರ ಪೂಜಾರಿ ;
ಸರಕು ಮೂಟೆಗಳನು ಹೇರಿ–
ಕೊಂಡು ಅಲೆವ ಅಲೆಮಾರಿ.
ಯಾರು ಗೊತ್ತೇ ಈಮಾರಿ ?
ಭಾರಿ ಲಾರಿ ! ಇರು ಹುಷಾರಿ !

* * * *

## ೧೫. ಅಳಿಲುಸೇವೆ

'ಅಳಿಲು ಸೇವೆ ಮಳಲ ಭಕ್ತಿ'
ಎಂಬ ಗಾದೆ ಮಾತಿಗೆ
ಹಳೆಯ ಕಥೆಯದಿರುವುದೊಂದು;
ಕೇಳಿರದನು ಹೇಳುವೆ.

ತಂದೆ ಮಾತ ನಡೆಸಲೆಂದು
ರಾಮ ನಡೆದ ಕಾಡಿಗೆ ;
ಹಿಂದುಗೂಡಿ ಹೊರಟರವನ
ಪತ್ನಿ ತಮ್ಮ ಜೋಡಿಗೆ.

ಕಾಡಿನಲ್ಲಿ ವಾಸವಿರಲು
ರಾಮ ಸೀತೆ ಲಕ್ಷ್ಮಣ,
ನೋಡಿ ಮೆಚ್ಚಿ ಸೀತೆಯನ್ನು
ಕದ್ದು ಒಯ್ದ ರಾವಣ.

# ೧೬. ತಬ್ಬಲಿ ಕಮಲೆ

೧

ಎಲ್ಲಿ ನೋಡಿದರಲ್ಲಿ ಕತ್ತಲೆ,
ಕಾರ್ಮುಗಿಲುಗಳು ತೇಲುತಿದ್ದುವು,
ಬಿರುಸುಗಾಳಿಯು ಭೋರ ಭೋರೆಂದಳುವ ತೆರ ತಾನಿದ್ದಿತು;
ಮರಗಿಡಗಳೊಕ್ಕಡೆಗೆ ಬಾಗಲು
ಕೆಲವು ನೆಲಕುರುಳಿದುವು ಧಡ್ಡನೆ,
ಉದುರಿದೆಲೆಗಳು ಹಾರುತಿದ್ದುವು ಗಾಳಿ ಧೂಳಿನ ಸಂಗದಿ.

೨

ಗುಡುಗು ಸಿಡಿಲೆಂದೆನುತ ಮೊಳಗಿತು,
ಗಾಳಿ ಭೋರ್ಗ್ಗರೆತವನು ಮೀರಿಸಿ ;
ಮಿಂಚು ಫಳ ಫಳ ಹೊಳೆದು ಚಣಚಣ ಬೆಳಕ ಹಾಯಿಸುತಿದ್ದಿತು ;
ಎಲ್ಲಿ ನೋಡಿದರಲ್ಲಿ ಕತ್ತಲೆ,
ಹಳ್ಳಿ ಮನೆಗಳ ಮಿಣುಕು ದೀಪಗ
ಳೆಲ್ಲ ತಟ್ಟನೆ ನಂದಿ ಹೋಗಲು ಬೆಳಕ ಸುಳಿವೇ ಕಾಣದು.

೩

"ಮೋಡ ಕವಿದಿದೆ ಬಾನಿನಗಲಕೆ,
ಗುಡುಗು ಮಿಂಚಿನ ಹೊಡೆತ ಹೆಚ್ಚಿದೆ ;
ಸಂಜೆ ಮೀರಿತು ; ಮಳೆ ಬರುವುದಕೆ ಮುಂಚೆಯೇ ನೀ
ನದಿಯನು
ಸೇರಿ ನೀರನು ತರಲು ಹೋಗಿಹ
ನಿನ್ನ ಚಿಕ್ಕವ್ವೆಯನು ಬೇಗನೆ
ಮನೆಗೆ ಕಳುಹಿಸು, ಹೊತ್ತು ಕೊಡವನು ಬಂದು ಬಿಡು
ನೀನೊಡನೆಯೇ."

---

ಈ ಪದ್ಯ ವರ್ಡ್ಸ್‌ವರ್ತ್ ಕವಿಯ "Lucy Gray" ಎಂಬ ಪದ್ಯ ಮಾದರಿಯಲ್ಲಿ ಬರೆದದ್ದು.

ಮೈಯ ಕೊಡವಿ ಸುರಿಯಲಾಗ
ಮರಳ ಬೆಟ್ಟ ಬೆಳೆಯಿತು;
ಕಲ್ಲುಸಂದುಗಳಿಗೆ ಮರಳ
ತುಂಬಲಾಯ್ತು ಕೊನೆಗೆ ಸೇತು.

ಅಳಿಲ ಮರಳ ಸೇವೆಯನ್ನು
ಮೆಚ್ಚಿಕೊಂಡ ರಾಮನು
ಬಳಿಗೆ ಬಂದ ಅಳಿಲ ಬೆನ್ನ
ಪ್ರೀತಿಯಿಂದ ಸವರಲು

ಹೊಳೆದು ಮೂಡಿ ಮೆರೆದುವಲ್ಲಿ
ಮೂರು ಬೆರಳ ಗೆರೆಗಳು ;
ಉಳಿದ ಅಳಿಲುಗಳಿಗು ಕೂಡ
ಆದುವವೇ ಗೆರೆಗಳು.

ಅಳಿಲ ಪುಟ್ಟ ಮರಳ ಸೇವೆ
ದೊಡ್ಡ ಕಾರ್ಯಕೊದಗಿತು ;
ರಾಮನ ಬೆರಳಚ್ಚುಗೆರೆಯ
ಮೆಚ್ಚುಗೆಯನು ಪಡೆಯಿತು.

ಅಳಿಲ ಸೇವೆ ಎಲ್ಲ ಕಾಲ–
ಕುಳಿವುದೆಂದು ಸಾರುತ
ಬಿಳಿಗೆರೆ ಮೂಡಿಹುದಿಂದಿಗು
ಬೆನ್ನಮೇಲೆ ಮೆರೆಯುತ.

* * * *

ಹೊಡೆಯಿತಾಗಲೆ ಏಳು ಗಂಟೆ,
ಹೋಗು, ನಡೆ, ಚಿಕ್ಕತಾಯ ಕರೆತಾ,
ನಿನಗೆ ಅಂಜಿಕೆಯಾದರೀ ಕೈ ದೀಪವನು ಹಿಡಿ ಕೈಯಲಿ"–

೮

ಎಂದು ದೀಪವ ಕೊಟ್ಟು ಮಗಳಿಗೆ,
ಮತ್ತೆ ಅವಳನು ಕಳಿಸಿಕೊಟ್ಟನು ;
ಮತ್ತೆ ಭೀಕರ ಪ್ರಕೃತಿಯನು ನೋಡುತ್ತ ನಡೆದಳು ಬಾಲಿಕೆ ;
ಈಗ ಹೆದರದೆ ಧೈರ್ಯ ಹೊಂದುತ
ಕಾಡ ಹೊಕ್ಕಳು ಬೇಗ ನಡೆಯುತ ;
ಆಗ ಗುಡುಗಿತು, ಮಿಂಚು ಹೊಳೆಯಿತು, ಭೋರೆನುತ
ಮಳೆ ಸುರಿಯಿತು.

೯

ಮಳೆಯ ರಭಸಕೆ ಮರದ ಕೊಂಬೆಗ–
ಳೆಲ್ಲವೂ ಮುರಿಮುರಿದು ಬಿದ್ದುವು ;
ಮುರಿದ ಕೊಂಬೆಗಳುರುಳಿ ತೇಲುತ ಮಳೆಯ ಹೊನಲಿನ ಜೊತೆಯಲಿ
ಕೊಚ್ಚಿಹೋದುವು ; ಕಾಲುದಾರಿಗ–
ಳೆಲ್ಲ ಕೆಸರಲಿ ಮುಚ್ಚಿಹೋದುವು.
ಕಮಲೆ ಮಳೆಯಲಿ ಅಳುತ ತಾಯಿಯ ಕೂಗಿ
ಕರೆಯುತ್ತಿದ್ದಳು.

೧೦

ಇತ್ತ ಕಮಲೆಯ ಚಿಕ್ಕ ತಾಯಿ
ಮಳೆಗೆ ಮುಂಚೆಯೆ ಮನೆಗೆ ಬಂದಳು ;
ಇರುಳು ಹೆಚ್ಚಿತು ; ನಿಂತಿತಾ ಮಳೆ ; ಬಾನು ನೀಲಿಗೆ
ತಿಳಿಯಿತು ;
ಕಮಲೆಯಿನ್ನೂ ಮನೆಗೆ ಬರದಿರೆ
ತಂದೆ ಕಳವಳಗೊಂಡು ಚಿಂತಿಸಿ
ಮಗಳ ಹುಡುಕಲು ಮನೆಯ ಬಿಡುತಿರೆ, ಅವನ ತಡೆದಳು ಹೆಂಡತಿ.

೪

ಮಗಳು ತಂದೆಯ ನುಡಿಯ ಕೇಳುತ
ಸ್ವಲ್ಪವೂ ಬೇಸರವ ತೋರದೆ,
"ನೀನು ಹೇಳಿದ ಹಾಗೆ ಮಾಡುವೆ, ಹೊಳೆಗೆ ಹೋಗುವೆ
ನೀಗಲೆ,
ಆದರೆಲ್ಲಿಲ್ಲಿಯೂ ಕತ್ತಲೆ,
ಕಾಡು ದಾಟಲು ನನಗೆ ಬಲು ಭಯ ;
ಆದರೊಬ್ಬಳೆ ಇಹಳು ತಾಯಿ, ಹೋಗಿಬರುವೆನು ಬೇಗನೆ"–

೫

ಎಂದು ನುಡಿಯುತ ನದಿಯ ಹಾದಿಯ
ಹಿಡಿದು ನಡೆದಳು ಬೇಗ ಬೇಗನೆ,
ಹಾದಿಯುದ್ದಕು ಹುಲ್ಲೆಮರಿಯೊಲು ಹಾರಿ ನಡೆದಳು
ಓಡುತ ;
ಮನೆ ಮನೆಗಳವು ಹಿಂದೆ ಸರಿದವು,
ಬೀದಿಗಳು ಕಳೆ ಕಳೆದು ಹೋದವು,
ಕೊನೆಗೆ ಕಗ್ಗತ್ತಲೆಯ ಕಾಡನು ಹೊಕ್ಕು ಹೆದರುತ ನಡೆದಳು.
ಸಿಡಿಲು ಬಡಿಯಿತು ; ಸಿಡಿಲ ಬಡಿತದ
ಹೊಡೆತಕಿಳೆ ತತ್ತರಿಸಿ ನಡುಗಿತು ;
ಮಿಂಚು ಫಳಿ ಫಳಿರೆಂದು ಹೊಳೆಯಿತು ಮುಗಿಲ
ಗೋಡೆಯ ಸೀಳುತ ;
ಎಂಟು ವರುಷದ ಹಸುಳೆ ಹುಡುಗಿ
ಹುಲ್ಲೆಯೊಲು ಬೆದರಿದಳು ಬೆಚ್ಚುತ ;
ಕಾಲುಬಾರದು ಮುಂದೆ ನಡೆಯಲು, ಮನೆಗೆ ಮರಳಿದಳೋಡುತ.

೬

ಮನೆಗೆ ಮರಳಿದ ಮಗಳ ಕಾಣುತ
ತಮದೆ ಕಿಡಿ ಕಿಡಿಯಾಗಿ ನುಡಿದನು–
"ಮಳೆಬರುವ ಹಾಗಿರಲು ಏತಕೆ ಬಂದೆ ತಾಯಿಯನಲ್ಲಿ ಬಿಟ್ಟು?

ಹುಡುಕುತ ;
ದಾರಿಯುದ್ದಕು ಕೆಸರು ಮಣ್ಣಲಿ
ಪುಟ್ಟ ಹೆಜ್ಜೆಯ ಗುರುತು ಕಾಣಲು,
ಗುರುತುಗಳನೇ ಹಿಡಿದು ನಡೆದನು, ಸೇರಿದನು ಹೊಳೆದಂಡೆಯ.

೧೫

ಹೊಳೆಯ ದಂಡೆಯ ಸೇರಿ ನೋಡಲು
ಅಲ್ಲಿ ಹೆಜ್ಜೆಯ ಗುರುತು ನಿಂತಿತು ;
ಅದನು ಕಾಣುತ ತಂದೆಯಲ್ಲಿಯೆ ಬೆಚ್ಚಿ ಬೆದರುತ ನಿಂತನು ;
ಕೊನೆಗೆ ದಡದುದ್ದಕೂ ಹೋಗಲು
ಮಗಳ ಹುಡುಕುತ ನದಿಯ ಅಂಚಲಿ
ಒಂದು ಹೊದರಿನ ಬುಡದಿ ಬಿದ್ದಿಹ ತನ್ನ ದೀಪವ ಕಂಡನು.

೧೬

ಕಮಲೆಯಂತಹ ಪುಟ್ಟ ಹುಡುಗಿಯ,
ಕಮಲೆಯಂತಹ ಒಳ್ಳೆ ಹುಡುಗಿಯ,
ಪಡೆಯಬಲ್ಲನೆ ಮತ್ತೆ ತಂದೆ, ಮತ್ತೆ ಕಾಣಲುಬಲ್ಲನೆ ?
ಸಂಜೆಗೆಂಪೊಳು ನದಿಯ ತಡಿಯಲಿ
ಕಮಲೆ ಚಿಕ್ಕಮ್ಮನನು ಕೂಗುತ
ಹಾಡಿಕೊಳ್ಳುತ್ತಿರುವಳೊಬ್ಬಳೆ–ಎಂದು ಜನ ನಂಬಿರುವರು.

* * * *

೧೧

ಹೆಂಡತಿಯ ಮಾತನ್ನು ಕೇಳದೆ,
ಹಿಡಿದು ದೀಪವನವನು ಮನೆಯನು
ಬಿಟ್ಟು ಹೊರಟನು ಮಗಳ ಹುಡುಕಲು ಹೊಳೆಯ
ಹಾದಿಯ ಹಿಡಿಯುತ ;
ಹೊಳೆಯ ದಂಡೆಯ ಸೇರಿ ಉದ್ದಕು
ತಿರುತಿರುಗಿ ಮಗಳನ್ನು ಹುಡುಕುತ,
ಎಲ್ಲಿಯೂ ಅವಳನ್ನು ಕಾಣದೆ, ಕೂಗಿ ಕರೆದನು ಹೆಸರನು.

೧೨

ಸುತ್ತ ಮುತ್ತಲು ಶಾಂತಿ ನೆಲಸಿತು,
ಸದ್ದಡಗಿ ಗಂಭೀರವಾಯಿತು
ನಭದಿ ನಕ್ಷತ್ರಗಳು ಮಿನುಮಿನುಗಿದುವು ಥಳ ಥಳನೆ;
ಗಜರಿ ಗರ್ಜಿಸಿ ಭರದಿ ಹರಿಯುವ
ತೊರೆಯ ಮೊರೆತವು ದೂರಕೂ ಸಹ
ಕೇಳುತಿರೆ, ಮರ್ಮರದ ಆ ದನಿ ಇರಳು ಶಾಂತಿಯ ಕೆಡಿಸಿತು.

೧೩

ಮಗಳ ಕರೆಯುತ ಬಂದ ತಂದೆ
ನದಿಯ ಮೊರೆತವ ಬಿಟ್ಟು ಬೇರೆಯ
ಉತ್ತರವನೇನೊಂದಪಡೆಯದೆ ಬರಿದೆ ಕೂಗಿದ ಹೆಸರನು ;
ಎಷ್ಟು ಕೂಗಿದರೇನು, ಸುಮ್ಮನೆ
ಎಷ್ಟು ಹುಡುಕಿದರೇನು ಮಗಳನು,
ಹೊತ್ತು ಮೀರಲು ಮಗಳ ಕಾಣದೆ ಮನೆಗೆ ಮರಳಿದ ದುಃಖದಿ.

೧೪

ಬೆಳಕು ಹರೆಯಲು ತಂದೆ ಕೊನೆ ಸಲ
ಮಗಳ ಹುಡುಕಲು ಮನೆಯ ಬಿಟ್ಟನು,
ತೊರೆಯ ದಾರಿಯ ಹಿಡಿದು ನಡೆದನು ಅಕ್ಕ ಪಕ್ಕದಿ

ನನ್ನ ಸತ್ಯವಂತ ಸೇವೆ
ನಾಡಿಗಾಗಿ ಮೀಸಲು.

ಝಾಡಮಾಲಿ

ಹೌದು, ನಾನು ಝಾಡಮಾಲಿ,
ಅವಮಾನದ ಮಾತಲ್ಲರಿ–
ಇದು ನೋಡಿರಿ ಪೊರಕೆ ಕೈಲಿ–
ಹಾದಿ ಬೀದಿ ಕಸದ ಜೊತೆಗೆ
ನಾಡ ಕೊಳೆಯ ಝಾಡಿಸಿ
ತಾಯ ಪಾದ ತೊಳೆವೆನು.

ವರ್ತಕ

ನಾ ವ್ಯಾಪಾರದ ವರ್ತಕ
ಮೋಸಗೈದೆನಿದು ತನಕ ;
ಇನ್ನು ಮುಂದೆ ತಕ್ಕಡಿಯಲಿ
ಮಾಡೆನೇರುಪೇರನು ;
ಕಾಳಸಂತೆಯನ್ನು ಕಟ್ಟಿ
ಹೆಚ್ಚು ಲಾಭ ಕೋರೆನು.
ತಕ್ಕಡಿಯಲಿ ಸತ್ಯ ಧರ್ಮ–
ಗಳನು ಬಿಡದೆ ನ್ಯಾಯವಾಗಿ
ಸರಕುಗಳನು ಅಳೆದು ತೂಗಿ
ಜನಕೆ ಹಂಚಿ ಕೊಡುವೆನು,
ನ್ಯಾಯಬೆಲೆಯ ಪಡೆವೆನು.

ನಾವಿಕ

ಕಡಲ ಕರೆಯ ಸುತ್ತಲೂ
ಹಡಗಿನಲ್ಲಿ ಹಗಲಿರುಳೂ
ನೀರಮೇಲೆ ಕಾವಲು ;
ಹೊರ ದೇಶಕ್ಕೆ ನಮ್ಮ ಜನ

# ೧೭. ಪ್ರತಿಜ್ಞೆ

[ಇದನ್ನು ದೃಶ್ಯಮಾಲಿಕೆಯಾಗಿಯೂ ಪ್ರದರ್ಶಿಸಬಹುದು]

ರೈತ

ನಾನು ನಾಡ ಹೊಲದ ರೈತ
ಉಳುಮೆಯ ಯೋಗಿ–
ಹಿಂಸೆ ಸಹಿಸಿ ತಾಯ ಬಸಿರು
ಕೊಡುವುದೊಲಿದು ಪಚ್ಚೆಪಯಿರು,
ಬೆಳೆವೆ ಬತ್ತ ಜೋಳ ರಾಗಿ–
ನಾಡಿನ ಜನಕಾಗಿ
ನಾಡಿನೇಳ್ಗೆಗಾಗಿ.

ಕೂಲಿ

ನಾನು ಊರ ಕೇರಿ ಕೂಲಿ
ಕಾರ್ಖಾನೆ ಗಿರಣಿಗಳಲಿ
ಕೆರೆ ಕಟ್ಟೆಯ ಕಟ್ಟುವಾಗ
ಎಲ್ಲಿ ಕೂಲಿ ಕೊಟ್ಟರಲ್ಲಿ
ನಗುತ ನಗುತ ದುಡಿವೆನು,
ಬಡವನಾಗಿ ಬಡತನವನು
ನೀಗಲೆಂದು ದುಡಿವೆನು.

ಕಾರಕೂನ

ಒಹೋ ! ನಾನು ಕಾರಕೂನ,
ನೋಡಿ ನನ್ನ ಬೆನ್ನ ಗೂನ !
ಅಕ್ಕರ ಲೆಕ್ಕಗಳ ಜಾಣ
ಇಕ್ಕಿದ ದಣಿಗೆನ್ನ ಪೇನ
ಸದಾ ಮೊಸಲು.
ರಾಜಕೀಯ ನನಗೆ ದೂರ,
ಯಾವ ಪಕ್ಷ ಬಂದರೇನು?

ನಾಡ ನೋವು ನಲಿವುಗಳನು
ಬರೆದಿಡುವೆನು ಅಚ್ಚೊತ್ತಿ.
ನನ್ನದಗೋಚರ ಶಕ್ತಿ,
ಬಲ ಕೊಡುವುದು ದೇಶಭಕ್ತಿ.

ಗಾಯಕ

ನಾನು ನಾಡ ಗಾಯಕ :
ನಾಡ ಕೀರ್ತಿಯನ್ನು ಹಾಡಿ,
ತಾಯ ಮಹಿಮೆಯನ್ನು ಹಾಡಿ,
ಕವಿಯ ನುಡಿಗೆ ನಾನೆ ಬಾಯಿ ;
ಕಿವಿ ಗೊಡುವಳು ನಾಡ ತಾಯಿ
ನನ್ನ ಗಾನಕೆ ;
ಹಾಡಿ ಜನರ ತಣಿಸುವೆ,
ಅವರ ಮನವ ಕುಣಿಸುವೆ.

ಎಲ್ಲರೂ ಒಟ್ಟಿಗೆ

ನಾವು ಭಾರತೀಯರು
ನಾವೆಲ್ಲರು ಒಂದೆ ಜನ ;
ಭಾರತ ಮಾತೆಗಾಗಿ ಮುಡಿಪು
ನಮ್ಮ ತನು ಧನಮನ.

* * * *

ನಮ್ಮ ಸರಕು ಹೋಗಿ ಸೇರಲು.
ನಾನು ಸದಾ ನೆರವಲು.

### ಸಿಪಾಯಿ

ನಾನು ನಾಡ ಭಟ, ಸಿಪಾಯಿ;
ಕೈಯಲಿಹುದಿದೋ ಕೋವಿ ;
ಬೆಟ್ಟಗುಡ್ಡ ಹಿಮಾಲಯ
ಎಲ್ಲಾಗಲಿ ನಾ ಸಹಾಯ ;
ಅಹಿಂಸೆ ನನ್ನ ಬಾಳ ಗುರಿ ;
ಬಂದು ಕೆಣಕೆ ಹೊರ ವೈರಿ
ನನ್ನ ಗುಂಡಿಗವನು ಗುರಿ–
ಇದೇ ನನ್ನ ಸೇವೆಯ ಪರಿ.

### ವೈಮಾನಿಕ

ನಾ ವಿಮಾನ ಚಾಲಕ
ಹದ್ದು ಹಾರುವಂತೆ ಸುತ್ತ
ಗಗನದಲ್ಲಿ ಹಾರುತ್ತ
ವೈರಿ ವಿಮಾನಗಳ ದಳ
ಬಾರದಂತೆ ತಡೆವೆನು
ಬರಲು ಹೊಡೆದು ಕೆಡಹುವೆನು–
ನಾನು ಗಗನ ಗರುಡನು,
ನಾಡಿಗಾಗಿ ಮಡಿವೆನು.

### ಕವಿ

ನಾನು ನಾಡ ಹೃದಯವಾಣಿ :
ನಾಡ ಸೇವೆಗೀ ಲೇಖನಿ
ನನ್ನ ಕೈಲಿ ಹಿರಿದ ಕತ್ತಿ ;
ದಬ್ಬಾಳಿಕೆ ಹೆಡೆಯೆತ್ತಿ
ಪೀಡಿಸುತಿರೆ ಇದರಿಂದಲೆ
ನಾಡ ಜನಕೆ ನಿತ್ಯಮುಕ್ತಿ.

# ದಾದಿ ರನ್ನೆ

ಕೆಂಪು ತಿರುಗಲು ಪಡುದೆಸೆಯ ಮೊಗ
ಹಕ್ಕಿಗಳು ಹಾರಿದುವು ಹಾಡುತ,
ಸಂಜೆಗೆಂಪಿನ ಸೊಬಗ ಸಾರುತ
ದಿಕ್ಕುದಿಕ್ಕಿನಲಿ;
ಚೆಲ್ಲಿದಾರತಿಯಲ್ಲಿ ಹುದುಗಿದ
ಮುತ್ತುಗಳೊ ಎನೆ ಮಿನುಗೆ ತಾರೆಗ–
ಳತ್ತ ಬಾನೊಳು ಮೇಲೆ ಚಂದಿರ
ಮೂಡಿ ಬೆಳಗಿದನು.

ಇಂತು ಸಂಜೆಯ ಸೊಗಸ ಸೂಸಲು,
ಉದಯಸಿಂಹನು ತನ್ನ ಗೆಳೆಯನ
ಜೊತೆಯೊಳಿದ್ದನು ಆಟವಾಡುತ
ಮಾಳಿಗೆಯ ಮೇಲೆ–
ಉದಯಸಿಂಹನು ರಾಜನಾದನು :
ಮರದ ಕುದುರೆಯನೊಂದನೇರಿ,
ಕರೆದು ಗೆಳೆಯನ,–"ಕೇಳು, ಭಾಳ,
ನಾನು ರಾಜನು : ನೀನು ಮಂತ್ರಿ ;
ಇಂದು ಚಂದಿರನನ್ನು ಗೆಲ್ಲುವ,
ಸೈನ್ಯವನು ಅಣಿಮಾಡು ಯುದ್ಧಕೆ"
ಎಂದು ಆಣತಿಯಿತ್ತನು.
ಭಾಳ ಮುಂಗಡೆ ಬಂದು, ನಮಿಸುತ,
"ಸೈನ್ಯವೇತಕೆ? ಕೇಳಿ ರಾಜರೆ :
ನಿಮ್ಮ ಕುದುರೆಯ ನನಗೆ ಕೊಟ್ಟರೆ
ಏರಿ ಕುದುರೆಯ, ಹಾರಿ ಹಿಡಿವೆನು
ಚಂದಿರನ, ನೋಡಿ"

ಎಂದು ದುಮುಕಿದಳಗ್ನಿಗೆ.
ನಿನ್ನ ಸಾಕಿದೆನಂದಿನಿಂದ,
ನಿನ್ನ ಹಿತವನೆ ಕೋರುತಿರುವೆನು :
ನಿನ್ನನುಳಿದೆನಗೆನ್ನ ಪುತ್ರನೆ ?
ನೀನೆ ಹಿರಿ ಮಗನು.
ಜಗವ ಕಾವನೆ ನಿನ್ನ ಕಾವನು,
ಜಗದೊಡೆಯನನೆ ನಂಬಿಕೊಂಡಿಹೆ"
ಎಂದು ಮನದಲಿ ದೇವನನು ಕೈ-
ಮುಗಿದು ಬೇಡಿದಳು.

ಬಾಲಚಂದ್ರನ ಕಾಂತಿಯೊಡನೆಯ
ಬಾಲಕೇಳಿಯು ಹೆಚ್ಚಿ ಮೆರೆಯಿತು :
ಪನ್ನೆಗೊಮ್ಮೆಯೆ ಹರುಷವುಕ್ಕಿತು,
ಉಕ್ಕಿ ಹೊನಲಾಯ್ತು :
ಕ್ಷಣದಿ ಓಡುತ ತಬ್ಬಿಕೊಂಡಳು
ಜೊತೆಯ ಬಾಲರನೊಂದೆ ತಬ್ಬಿಗೆ
ಕೊನೆಗೆ ಹರುಷಾರಣ್ಯದಲಿ ತಾ
ಹೊಲಬು ತಪ್ಪಿದಳು.

ಮುಗಿಲು ಮುಸುಕಿತು ಚಂದ್ರಬಿಂಬವ ;
ಕ್ಷಣದಿ ಕಾವಳ ಕವಿಯಿತೆಲ್ಲೆಡೆ :
ತಾರೆಯುದುರಿತು, ನೆಲವೆ ಅದುರಿತು :
ಪನ್ನೆ ಎಚ್ಚತ್ತೆದ್ದು ಬೆಚ್ಚಿದಳು !
"ಪನ್ನೆ, ಎಲ್ಲಿಹೆ ? ಪನ್ನೆ, ಪನ್ನೇ !
ಏಳು, ಜಾಗ್ರತೆ, ಜೋಕೆ, ತುಸ ಬಾ !"
ಎಂದು ಕಳವಳದಿಂದ ನುಡಿದನು
ರಾಜಸೇವಕನೊಬ್ಬನು.
"ಉದಯಸಿಂಹ, ಭಾಳನೊಡನಿರು"
ಎಂದು ಹೇಳುತ ತನ್ನ ತಮ್ಮನ

ಎಂದು ನುಡಿದನು–ಇವರ ಆಟವ
ನೋಡುತಲ್ಲಿಯೆ ಪನ್ನೆಯಿದ್ದಳು :
ಸ್ವಲ್ಪ ಎತ್ತರ ತೆರನ ಹೆಂಗಸು :
ರಾಜಪುತ್ರರ ವೀರ ರಕ್ತದ
ಕೆಂಪು ಛಾಯೆಯು ಅವಳ ಮೊಗದಲಿ
ಹೆಚ್ಚಿ ಹೊಳೆಯಿತು ಸಂಜೆಗೆಂಪನು
ತಳೆದು ಹೊಗರೇರಿ.

ಬಾಲಕೇಳಿಯ ನೋಡಿ ಹಿಗ್ಗುತ
ಹರುಷಗಡಲೊಳು ಮುಳುಗಿಹೋದಳು;–
"ದೈವಕೃಪೆಯಿರೆ ಮುಂದೆಯೂ ಒಡ–
ಗೂಡಿ ಬಾಳಿರಿ ಸುಖದಲಿ.

ಉದಯಸಿಂಹನು ರಾಜಪದವಿಯ–
ಲಿರಲು ಎನ್ನಯ ಪುತ್ರನವನನು
ಸೇವಿಪುದ ನಾನೆಂದು ನೋಳ್ಪೆನೊ!"
ಎಂದು ಹಂಬಲಿಸಿದಳು ಮನದಲ್ಲಿ.

ಉದಯಸಿಂಹನನೊಮ್ಮೆ ನೋಡುತ–
"ಹಿಂದೆ ನಿನ್ನಯ ಮಾತೆ ಕರ್ಣಾ–
ವತಿಯು ನಿನ್ನನು ನನಗೆ ಒಪ್ಪಿಸಿ :
'ನನ್ನ ಪನ್ನೆಯೆ, ದಾದಿ ರನ್ನೆಯೆ,
ನಿನ್ನ ಮಗನೊಡನೆನ್ನ ಮಗನನು
ಸಲಹು ಕರುಣದಲಿ.

ಬೇರೆ ದೈವವೆ ಪತಿಯನುಳಿದು?
ಆರು ಗತಿಯೆನಗಿನ್ನು ಮುಂದೆ?
ವೈರಿಗಳ ಹಂಗಿನಲಿ ಬಾಳ್ವೆನೆ ?
ಸೇರುವೆನು ಸಗ್ಗದಲಿ ಪತಿಯನು'

ಪುಟ್ಟ ರೆಕ್ಕೆಯ ಬಡಿದು ಹಾರುವ,
 ಹಾರಿ ಏರುವ ಮಕ್ಕಳು,
ಕೆಂಪು ಹೂಗಳು ಪಚ್ಚೆ ಗಿಡದಲಿ ;
ಮಿಂಚುಹೊಳಪಿನ ಹಣ್ಣುಗೊಂಚಲು ;
ಹೂವ ಬಳಸಿಹ ಹೊನ್ನ ಚಿಟ್ಟೆ ;
ಹಣ್ಣ ಸುತ್ತಲು ಹಾರಿ ನಲಿಯುವ,
ನಲಿಯುತುಲಿಯುವ ಬಣ್ಣಹಕ್ಕಿ :
 ಇವನು ನೋಡಿಹೆಯ ?
ಇವುಗಳಲ್ಲದೆ, ನವಿಲು ಕೋಗಿಲೆ
ಹಂಸೆ ಗಿಳಿ ಗೊರವಂಕ ಹೊರಸು
ಜಿಂಕೆ ಮೊಲ ಸಾರಂಗ ಮಂಗ
ತುಂಬಿರುವ ತೋಟವನು ನೋಡುವೆ,
ಕಕ್ಕ ಬರಲಾಮೇಲೆ ಹೋಗುವೆ"
ಎಂದು ಉದಯನ ಮನದೊಳಾಸೆಯ
 ಬಿತ್ತಿ ಬೆಳಸಿದಳು.
ಉದಯ ಹಿಗ್ಗುತಲಿರಲು, ಅಜಿತನು
ಹಣ್ಣು ಬುಟ್ಟಿಯ ಹೊತ್ತು ತಂದನು ;
ಪನ್ನೆಯನು ಕೈಸನ್ನೆಮಾಡುತ
 ಬಳಿಗೆ ಬರೆ ಕರೆದ.
ರಾಜಕುವರನೆತ್ತಿಕೊಂಡೇ
ಪನ್ನೆ ತಮ್ಮನ ಬಳಿಯ ಸೇರಲು,
"ಅಮ್ಮ ಹೋಗುವೆ ಎಲ್ಲಿ" ಗೆನ್ನುತ
 ಭಾಳ ಬೆಂಬಿಡಿದ.
ರಾಜಕುವರನನಿಳಿಸಿ ಪನ್ನೆ
ತನ್ನ ಕುವರನನೆತ್ತಿಕೊಂಡಳು :
"ಭಾಳ, ನಿನ್ನನು ಬಿಟ್ಟು ಎಲ್ಲಿಗೆ
 ನಾನು ಹೋಗುವೆ, ಕಾಣೆಯ ?
ಹಣ್ಣುಗಳ ಜೊತೆಯಲ್ಲಿ ಉದಯನು
ಗುಡಿಗೆ ಹೋಗುವನವನು ಮರಳಿ

ಬಳಿಯನೈದುತ–"ಏಕೆ ಕಳವಳ?
ಹೇಳು, ಹದನೇನಿಂದು ಅಜಿತ?"
–ಪನ್ನೆ ಕೇಳಿದಳು.
"ಅಯ್ಯೊ! ಹಾ, ಹಾ! ಏನು ಹೇಳಲಿ ?
ಉದಯಸಿಂಹನನೆಂತು ಕಾವುದು ?
ಖೂಳನಾ ಬನಬೀರ ಬರುವನು–
ರಾಜಕುವರನ ಕೊಲೆಗೆ ಬರುವನು.
        ಮುಂದೆ ಗತಿಯೇನು?"
ಎಂದು ನುಡಿದನು ನುಡಿಯಲಾರದೆ,
ನಿಂತೆಡೆಯೆ ಕದಲದೆಯೆ ನಿಂತನು
        ಮೌನಶೋಕದಲಿ

ನುಡಿಯ ಕೇಳುತ ಬೆಚ್ಚಿದಳು, ಬಲು
ಬೆದರಿದಳು, ಭಯಭ್ರಾಂತಳಾದಳು;
ತಿಳಿದು ತನ್ನೊಳು ತಾನು, ಮುಂದನು
ಚಿಂತಿಸುತ, ಮನದಂದು ನುಡಿದಳು
        ಧಾತ್ರಿ ಧೃತಿವಂತೆ:
"ಅಜಿತ, ಕಾಲವ ಕಳೆಯಲಾಗದು.
ಬುಟ್ಟಿತುಂಬ ಹಣ್ಣುಹಂಪಲ
ಕೊಂಡು ಜವದಿಂದೋಡಿಬಾರೈ"
        ಎಂದು ಬೆಸಸಿದಳು.
ಬರಿದೆ ನುಡಿಯುತ ಕಾಲ ಕಳೆಯದೆ
ಅಜಿತ ಹೊರಟನು : ಇತ್ತ ಪನ್ನೆ
ಉದಯಸಿಂಹನ ಬಳಿಯ ಸಾರುತ,
"ಮುದ್ದುಕುವರನೆ, ಬಾರ ಬಾ ಬಾ"
        ಎಂದು ಎತ್ತಿದಳಪ್ಪುತ.

"ಬೆಳ್ಳಿ ಹೊಳೆಯಲಿ ಹೊನ್ನ ಮೀನು :
ನೀಲಿ ಬಾನೊಳು ತೊಳಗಿ ಬೆಳಗುವ,

“ಇಂದು ನೀನೇ ಉದಯ, ಬಾ ಬಾ !
ಇಂದು ನೀನೇ ರಾಜ, ಬಾ ಬಾ !
ರಾಜಪುತ್ರನ ಹಡೆದ ನನ್ನಯ
ಪುಣ್ಯವೇ ಪುಣ್ಯ !’
ಎಂದು ಉದಯನ ಉಡುಗೆತೊಡುಗೆಯ
ತನ್ನ ಮಗನಿಗೆ ತೊಡಿಸಿ, ಮುದ್ದಿಸಿ,
‘ಕಂದ ಮಲಗುವ ಹೊತ್ತು ಆಯಿತು’
ಎಂದು ಮಗನೊಡನವಳು ಉದಯನ
ಮಲಗುಕೋಣೆಗೆ ಹೋದಳು.
ರಾಜಕುವರನ ಮಲಗುವಾಸೊಳು
ತನ್ನ ಮಗನನು ಹೊದಿಸಿ ಮಲಗಿಸಿ,
ತನ್ನ ಮಗನಾ ಬರಿಯ ಹಾಸೊಳು
ಅಡಕಿದಳು ಬರಿ ಬಟ್ಟೆಯ
ಅದರ ಮೇಗಡೆ ಅವನ ಹಚ್ಚಡ
ಹೊದಿಸಿ, ತನ್ನಯ ಮಗನೆ ಮಲಗಿರು–
ವಂತೆ ತೋರಿದಳು.
ಇತ್ತ ಭಾಳನು ಮಲಗಿಕೊಂಡಿರೆ
ಪನ್ನೆ ಸಾರುತಲವನ ಬಳಿಯನು,
ಪಿಡಿದವನ ಗಲ್ಲವನು, ಕುರುಳನು
ತಿದ್ದಿ, ಮುದ್ದಿಡುತ–
“ರಾಜಪುತ್ರನೆ ನೀನು, ಅಲ್ಲವೆ ?
ರಾಜಪುತ್ರನ ಪರಿಯ ತೋರುವೆ ;
ವೀರರಕ್ತದ ಪೆರ್ಮೆ ಮೆರೆಯುವೆ”
ಎಂದು ಹಿಗ್ಗಿಯೆ ನುಡಿದಳು.
ಉರಿವ ದೀಪದ ಬತ್ತಿಯಿಳಿಸುತ,
ಹಾಡಿ ಜೋಗುಳವನ್ನು ಮಗನನು
ನಿದ್ದೆವೋಗಿಸಿ, ಮುಸುಕನೆಳೆದಳು
ಅವನ ಮೈ ತುಂಬ ;
ಮತ್ತೆ ಕುವರನ ಕರವ ಪಿಡಿಯುತ,

ಬರುವವರೆಗೂ ನೀನೆ ರಾಜ :
ಅವನ ಕುದುರೆಯ ನೀನೆ ಏರುವೆ"
    ಎಂದು ಕಿವಿಯಲ್ಲೊರೆದಳು.
"ಎಲ್ಲವೂ ಸುಳ್ಳೆಲ್ಲ ಸುಳ್ಳು;
ಉದಯನೊಡನೆಯೆ ನಾನು ಹೋಗುವೆ :
ಅವನ ಬಿಟ್ಟೊಂಟಿಯಲಿ ನಾನರೆ–
    ಗಳಿಗೆ ಇರಲಾರೆ"–
ಎಂದ ಮಾತನು ಪನ್ನೆ ಕೇಳುತ,
"ರಾಜಪುತ್ರನೆ ನೀನು ನಿಜದಲಿ,
ಇಂದಿನಿರುಳಲಿ ಅದನು ಮೆರೆಯುವೆ :
ಎಂದು ಪುತ್ರನ ನೋಡಿ, ತಣಿಯುತ
    ಹರುಷಗೊಂಡಳು ಮನದಲಿ.
ಪನ್ನೆ ಬುಟ್ಟಿಯ ಹಣ್ಣ ಸುರಿದಳು :
ಭಾಳಗೆರಡನು ಕೊಡಲವನು "ಹೋ!"
ಎಂದು ಕುಣಿಯುತ, ದೂರಕೋಡುತ,
    ಕಚ್ಚಿ ತಿನ್ನುತಲಿದ್ದನು.
ಪನ್ನೆ ಉದಯನ ಕರೆದು ಮುದ್ದಿಸಿ,
ಅವನುಡುಗೆತೊಡುಗೆಗಳ ಕಳಚಿ,
ಬಳಿಕ ಬುಟ್ಟಿಯಲವನ ಕೂರಿಸಿ,
    ತಲೆಯ ನೇವರಿಸಿ–
"ಬುಟ್ಟಿ ಪಲ್ಲಕ್ಕಿಯೊಳು ಕುಳಿತಿಹ
ಪುಟ್ಟ ರಾಜರ, ಕಾಣದಂತೆಯೆ,
ಚಂದ್ರಲೋಕದ ವನಕೆ ತಳುವದೆ
    ಒಯ್ಯಬೇಕಜಿತಾ"
ಎಂದು ಬುಟ್ಟಿಯ ಮೇಲೆ ಮುಚ್ಚಲು,
ಉದಯನೊಳಗಡೆ ನಗುತಲಿದ್ದನು.
ಅಜಿತ ತ್ಯಾಗದ ಫಲದ ಭಾರವ
    ಹೊತ್ತು ಹೊರಹೊರಟ.
ಇತ್ತ ಪನ್ನೆಯು ಮಗನ ಕರೆಯುತ–

ಹೆಜ್ಜೆ ಹಾಕಿದ ಹಗುರ ಸಪ್ಪುಳ :
ಯಾರು ಸರಿಹೊತ್ತಿನಲಿ ಪನ್ನೆಯ
ಮನೆಗೆ ಬರುವವರು ?
ಯಾರು, ಮತ್ತಾರಲ್ಲದೆಯೆ ಜವ !
ಹಸುಳೆಗೊಲೆಗಳುಕದೆಯೆ, ಹೇಸದೆ,
ಬಂದನಾ ಬನಬೀರನು.
ಬಂದವನೆ ಕತ್ತಿಯನು ಹಿರಿಯುತ,
"ಪನ್ನೆ, ಹೇಳ್, ಎಲ್ಲಿಹನು ಉದಯ?
ಅವನ ತೋರಿಲ್ಲದೊಡೆ ಭಾಳನ
ಬಾಳ ಹತಿಗೊಡ್ಡುವೆನು : ಜಾಗ್ರತೆ!"
ಎಂದು ಬಗುಳಿದನು.
ಪನ್ನೆ ನಿಂತಳು ; ಹಿಂದೆ ಸರಿದಳು;
ಒಂದೆ ಹಿಡಿಯಲಿ ಜೀವವಿಡಿಯುತ,
ಕಂದನನು ಕೈನೀಡಿ ತೋರುತ
ಮೊಗವ ತಿರುಹಿದಳು.
ನುಸುಳಿ ಬರುತಿಹ ಜೊನ್ನವೆಳಗೊಳು
ಹಸುಳೆಕೈಯಲಿ ಉದಯಸಿಂಹನ
ಮಿಸುನಿವಜ್ರದ ಕಿರಿಯ ಮುದ್ರಿಕೆ
ಮೆರೆವುದನು ಕಂಡು,
ಕುರಿಯ ಮರಿಯನು ಕಂಡ ತೋಳನು
ಹಾರಿ ಮರಿಯನು ಬಗಿವ ತೆರದಲಿ
ಒಂದೆ ನೆಗೆತದಲಿರಿದು ಕೊಂದನು
ಕಂದನನು ಬನಬೀರನು.
ತನ್ನ ಕೆಲಸವು ಚಣದಿ ತೀರಿತು :
ಇನ್ನು ಉಳಿದುದು ಏನು, ಖೂಳಗೆ ?
ತನ್ನ ಕೆಲಸವ ತಾನೆ ಮೆಚ್ಚುತ
ಹಿಗ್ಗಿದನು ಕುಣಿದು.
ತನ್ನ ಕಂದನ ತೆತ್ತುದಾಯಿತು :
ಇನ್ನು ಉಳಿದುದು ಏನು, ಪನ್ನೆಗೆ ?

"ಕಂದ, ಸೊಗ ನಿದ್ದೆಯನು ಪಡೆಯೈ;
ನಿನ್ನ ನಿದ್ದೆಯೆ ನಿನ್ನನೆಂದಿಗು
ರಾಜಪುತ್ರನ ಮಾಳ್ಪುದೆ"ನ್ನುತ
ಮನದಿ ತೃಪ್ತಿಯ ತಳೆದಳು.
ಹೊತ್ತು ಮೀರುತ ಬಂದಿತಾಗ :
ಎತ್ತಲೆತ್ತಲು ಶಾಂತಿ ತುಂಬಿರೆ,
ಎತ್ತಲಿಂದಲೊ ಗೂಗೆ "ಗೂ ಗೂ"
ಎನುವ ದನಿ ಕೇಳೆ,
"ಹರಿ ಹರೀ ನಾರಾಯಣೆ"ನ್ನುತ
ಪನ್ನೆ ಕಿವಿಯನು ಮುಚ್ಚಿ ಕುಳಿತಳು–
ಎದೆಯು ತಟ್ಟನೆ ತುಡಿತುಡಿದುಕೊಳೆ
ತಡೆದಳಾ ತುಡಿತ.
ಏನು ಕಲ್‌ಮನ! ಏನು ಕೆಚ್ಚದು !
ಹಡೆದು ಸಲಹಿದ ಮುದ್ದು ಕುವರನ
ಸಾವ ಬಾಯೊಳಗೋವಿ ನೂಕಲು
ಎಂತು ಕಾದಿಹಳು !
ತಮ್ಮ ಹರಣವ ಕೊಡುವರುಂಟು–
ಓವಿ ಸಾಕಿದ ಗಿಣಿಯ ಕೊಲ್ವರೆ ?
ತಮ್ಮ ಕಣ್ಣನೆ ಕಿತ್ತು ಕೊಡುವರೆ ?
ಏನಿದಚ್ಚರಿಯು !
ಇರಲಿರಲು ಹೆಗ್ಗಾಳಿ ಬಿರ್ರನೆ
ಬೀಸಿ ನುಗ್ಗಿತು ; ಕೆಡಿಸಿ ದೀಪವ,
ಭೋರುಭೋರೆಂದಳುತ ಶಾಂತಿಯ
ಸೀಳಿ ಬೀಸುತಿರೆ–
ಅವಳ ಕಲ್ ಮನ ಕರಗಿಹೋಯಿತು :
ಆದೊಡೇಂ, ಕಂಬನಿಯ ಕರೆಯಳು :
ಜವನ ಬರವ ನಿರೀಕ್ಷಿಸುತ ಆ
ಧೀರೆ ಕುಳಿತಿಹಳು.
ಎಲ್ಲೊ ಬಾಗಿಲು ತೆರೆದ ಕಿರಕಿರ;

ನಿನ್ನು ಯಾರನು ಕಂದನೆನ್ನಲಿ?
ಚಿನ್ನ ಭಾಳನು ಹೋದನೇ, ಹಾ!"
ಎಂದು ಕಂದನನಪ್ಪಿಕೊಳ್ಳುತ
ಅವನೊಳೈಕ್ಯವ ಹೊಂದಿದಳೊ ಎನೆ
ಕೆಡೆದಳಾ ತಾಯಿ.
ಚುಕ್ಕಿಗಳು ಮಿಟುಕಿದವು ಬಾನೊಳು :
ಬಾಲ ಚಂದಿರನೊಮ್ಮೆ ಕಿಟಕಿಯಿ–
ನಿಣಿಕಿ ನೋಡುತ, ಹದನನರಿಯುತ,
ಮುಗಿಲ ಮರೆಯಲಿ ಮೌನವಾದನು :
ತಿರೆಯು ತಮಮಯವಾಯಿತು.
ಒಯ್ಯನೊಯ್ಯನೆ ತೀಡುತಲ್ಲಿಯೆ
ಸುಯ್ಯೆಲರು ಸುಳಿದಾಡುತಿದ್ದಿತು,
ತಾಯಿಮಕ್ಕಳು ಅಲ್ಲಿ ಮಲಗಿರೆ–
ಮಸಣ ಮೌನವು ನೆಲಸಿರೆ.

* * * *

ರೋದಿಸುವುದೇ ! –ಆದರುಸಿರನು
        ಹಿಡಿದು ಮೌನದಲಿದ್ದಳು.
ಹಂತಕನ ಎದುರಿನಲಿ ಅಳುವುದೆ ?
ದೈನ್ಯವನು ತೋರುವುದೆ ನೀಚನ
ಮುಂದೆ, ಮಗನನೆ ತೆತ್ತು ರಾಜ್ಯದ
        ಭಾಗ್ಯದಂಕುರ ಬೆಳೆಯಲು?
ಬಂದಳಲ ಬೆಂದೆದೆಯೊಳಡಗಿಸಿ
ಮುಂದಿನೊಳ್ಳಿತ ನೆನೆದು ಮನದೊಳು,
ಒಂದೆ ಮನದಲಿ ಧೀರಮೌನವ
        ತಳೆದಳಾ ಧಾತ್ರಿ.
ಪಾಪಪಂಕದ ಲೇಪವೋ ಎನೆ
ರಕ್ತ ಮೆತ್ತಿದ ಕತ್ತಿಯೆತ್ತಿಯೆ
'ಹಾ ಹ! ಹೋ ಹೋ!' ಎಂದು ಕೆಲೆಯುತ
ಖೂಳ ತೊಲಗಿದನು.
ಎಲ್ಲ ಅರಿವೂ ಅಳಿಸಿ, ಕಡೆಯಲಿ
ತಾಯ್ತನದ ಅರಿವೊಂದೆ ಉಳಿಯಿತು :
ಕಟ್ಟೆ ಕೂಡಲೆ ಒಡೆದುಹೋಯಿತು.
ತಡೆದ ದುಃಖದ ಜಲವು ಉಕ್ಕುತ
ಉರುಳುರುಳಿ ಬರುತಿರಲು ಪನ್ನೆಯು
        ಒಡನೆ 'ಅಯ್ಯೋ' ಎಂದು ಚೀರಿದಳು
ಮಡಿದ ಎಳಗರುವನ್ನು ನೋಡಿದ
ಆವು ಸುಮ್ಮನೆ ಅರಿಚುವಂದದಿ
"ಕಂದ, ಹಾ ಹಾ, ಕಂದ!" ಎನ್ನುತ
        ಚೀರಿದಳು ತಾಯಿ.
"ಎನ್ನ ಬಾಳಿನ ಬೆಳಕು ನಂದಿತೆ,
ಎನ್ನ ಕಣ್ಣಿನ ಹಾಹೆ ಸಿಡಿಯಿತೆ,
ಎನ್ನ ನೆತ್ತರು ತಣ್ಣಗಾದುದೆ
        ಮಣ್ಣು ಗೂಡುತಲಿ!
ಇನ್ನು ಯಾರಿಗೆ ಬದುಕಿರಲಿ, ನಾ–

# ಕನ್ನಡದ ಕತೆ

ಶಿವರಾಮಯ್ಯ ಬೆಂಗಳೂರು ನಗರದ ಒಂದು ಹೆಸರಾದ ಶಾಲೆಯಲ್ಲಿ ಕನ್ನಡ ಕಲಿಸುವ ಉಪಾಧ್ಯಾಯರು. ಅವರ ಮನೆ ಮಾತು ತೆಲುಗು. ಆದರೂ, ತಾವು ಅಚ್ಚಕನ್ನಡಿಗ ಎಂದು ಹೇಳಿಕೊಳ್ಳುವುದರಲ್ಲಿ ಅವರಿಗೆ ಹೆಮ್ಮೆ. ಮನೆಮಾತು ಯಾವುದೇ ಆಗಿದ್ದರೂ ಕನ್ನಡ ನಾಡಿನಲ್ಲಿ ಬಾಳುತ್ತಿರುವವರೆಲ್ಲ ಕನ್ನಡಿಗರು. ಮನೆಮಾತು ಕನ್ನಡ ಆಗಿರುವವರ ವಿಚಾರ ಹೇಳಬೇಕಾದದ್ದೇ ಇಲ್ಲ. ಕನ್ನಡಿಗರು ಕನ್ನಡವನ್ನು ಮೊದಲು ಪ್ರೀತಿಸಬೇಕು ; ಕನ್ನಡದ ಪ್ರೀತಿ ಇಲ್ಲದಿದ್ದರೆ ಕನ್ನಡ ಸಾಹಿತ್ಯ ಓದಿ ತಿಳಿದುಕೊಳ್ಳಬೇಕು ಎನ್ನುವ ಆಸೆ ಹುಟ್ಟುವುದಿಲ್ಲ. ಕನ್ನಡ ಸಾಹಿತ್ಯವನ್ನು ಚೆನ್ನಾಗಿ ಅರಿತುಕೊಳ್ಳದಿದ್ದರೆ, ಕನ್ನಡ ನಾಡಿನ ಮೇಲೆ ಅಕ್ಕರೆ ಉಂಟಾಗುವುದಿಲ್ಲ. ಕನ್ನಡ ನುಡಿ ನಾಡು ನಮ್ಮವು, ನಾವು ಕನ್ನಡಿಗರು ಎಂಬ ಅಭಿಮಾನ ಬೆಳೆಯದೆ ಹೋದರೆ ನಾವು ಭಾರತದ ಜನ–ಭಾರತೀಯರು–ಎಂಬ ದೇಶಭಕ್ತಿ ಬೆಳೆಯಲು ಸಾಧ್ಯವೇ ಇಲ್ಲ. ಮನೆಯ ಜನವನ್ನೇ ಪ್ರೀತಿಸದವನು ಕೇರಿಯ ಜನವನ್ನು ಪ್ರೀತಿಸಿಯಾನೆ ?

ಭಾರತದೇಶ ಎನ್ನುವ ಭಾರಿ ರಥವನ್ನು ಏಳೆಂಟು ಜೋಡಿ ಕುದುರೆಗಳು ಎಳೆಯುತ್ತಿವೆ. ಕನ್ನಡ ಮಾತಾಡುವ ಜನ ಇರುವ ಕನ್ನಡ ನಾಡು ಒಂದು ಸೊಗಸಾದ ಕುದುರೆ, ತಮಿಳರ ನಾಡು ಇನ್ನೊಂದು ಕುದುರೆ, ಹೀಗೆಯೇ ತೆಲುಗು ಸೀಮೆ, ಮಹಾರಾಷ್ಟ್ರ, ಬಂಗಾಳ, ಪಂಜಾಬು, ಮೊದಲಾದ ಬೇರೆ ಬೇರೆ ನಾಡುಗಳ ಕೂಟವೇ ಭಾರತ. ಭಾರತ ಅಜ್ಜಿ ಇದ್ದಹಾಗೆ, ಕನ್ನಡ ಅವಳ ಮಗಳು, ಕನ್ನಡಿಗರಾದ ನಾವೆಲ್ಲ ಕನ್ನಡ ತಾಯಿಯ ಮಕ್ಕಳು. ಹೀಗಿರುವುದರಿಂದಲೇ

ಜಯಹೇ ಕರ್ನಾಟಕ ಮಾತೆ
ಭಾರತ ಜನನಿಯ ತನುಜಾತೆ

ಎಂದು ಕವಿ ಹಾಡಿರುವುದು. ಈ ವಿಚಾರವೆಲ್ಲವನ್ನೂ ಚೆನ್ನಾಗಿ ಅರಗಿಸಿಕೊಂಡಿದ್ದ ಶಿವರಾಮಯ್ಯನವರು ತಾವು ಪಾಠ ಹೇಳುತ್ತಿದ್ದ ಶಾಲೆಯ ಮಕ್ಕಳಿಗೂ ಅದನ್ನು ಅರೆದು ಹುಯ್ಯಬೇಕು ಎಂದು ಬಯಸಿದರು. ಹಿಂದಿನ

ಇದು ಸಹಜವಾದ ಒಲವು. ಶಿವರಾಮಯ್ಯನವರಿಗೆ ಈ ಗುಟ್ಟು ಗೊತ್ತಿತ್ತು? ಆದ್ದರಿಂದ ಮಕ್ಕಳಿಗೆ ಬೇಸರವಾಗಬಾರದು ಎಂದು ಅವರು ತಮ್ಮ ಮಾತನ್ನು ಬೇಗನೆ ಮುಗಿಸಿಬಿಟ್ಟರು.

ಆದರೆ ಅವರ ತರಗತಿಯ ಕೆಲವು ಮಕ್ಕಳಿಗೆ ಬೇಸರವೇನೂ ಆಗಿರಲಿಲ್ಲ. ಕನ್ನಡ ಭಾಷೆ ಸಾಹಿತ್ಯಗಳ ವಿಚಾರವಾಗಿ ಇನ್ನೂ ಹೆಚ್ಚಾಗಿ ತಿಳಿದುಕೊಳ್ಳಬೇಕೆಂದು ಅವರಲ್ಲಿ ಕುತೂಹಲ ಚಿಗುರಿತ್ತು. ಮಾರನೆಯ ದಿನ ಶಿವಾರಾಮಯ್ಯನವರು ತರಗತಿಗೆ ಹೋದಾಗ ಪ್ರಶ್ನೆಗಳ ಸುರಿಮಳೆಯೇ ಆಯಿತು.

ಸುರೇಶ ಎದ್ದುನಿಂತು ಹೇಳಿದ :

"ಇವತ್ತು ವೇಳಾಪಟ್ಟಿಯ ಪಾಠ ಬೇಡ ಸರ್, ನಿನ್ನೆ ನಿಮ್ಮ ಭಾಷಣವನ್ನು ಕೇಳಿದ ಮೇಲೆ ಕನ್ನಡ ಭಾಷೆ, ಸಾಹಿತ್ಯ, ಇವುಗಳ ವಿಚಾರವಾಗಿ ಹೆಚ್ಚು ವಿಷಯ ತಿಳಿದುಕೊಳ್ಳಬೇಕು ಅಂತ ಆಸೆಯಾಗಿದೆ. ತಿಳಿಸಿಕೊಡಿ, ಸರ್".

ಶಿವರಾಮಯ್ಯ : ಆಗಲಿ. ಸಂತೋಷವಾಗಿ ತಿಳಿಸಿಕೊಡುತ್ತೇನೆ. ನೀವು ಪ್ರಶ್ನೆ ಕೇಳಿ ನಾನು ಉತ್ತರ ಹೇಳುತ್ತೇನೆ.

ರಮೇಶ : ಸರ್ ನಾವು.... ಪ್ರಶ್ನೆ...

ಶಿವರಾಮಯ್ಯ : ನೋಡಿ, ಮಾತು ಮಾತಿಗೂ ಸರ್, ಸಾರ್, ಸಾರು, ಹುಳಿ ಎನ್ನಬೇಡಿ. ಪಂಡಿತರೇ ಅನ್ನಿ, ಗುರುಗಳೇ ಅನ್ನಿ. ಹೊರಗಿನ ಭಾಷೆಯಾದ ಇಂಗ್ಲೀಷು ಮಾತುಗಳನ್ನು ಕನ್ನಡದಲ್ಲಿ ಬೇಕಾಬಿಟ್ಟಿ ಬೆರೆಸಬಾರದು ತಿಳಿಯಿತೆ ?

ರಮೇಶ್ : ತಿಳಿಯಿತು ಸಾರ್, ಅಲ್ಲ, ಮರೆತುಬಿಟ್ಟೆ, ಆಗಲಿ ಗುರುಗಳೆ.

ಸುರೇಶ : ಗುರು ಎನ್ನುವ ಮಾತು, 'ಗುರುಬ್ರಹ್ಮ ಗುರುರ್ವಿಷ್ಣುಃ ಗುರುದೇವ ಮಹೇಶ್ವರಃ' ಎಂದು ನಾವು ನಿತ್ಯ ಹೇಳುವ ಶ್ಲೋಕದಲ್ಲಿ ಬಂದಿದೆ. ಆದ್ದರಿಂದ 'ಗುರು' ಸಂಸ್ಕೃತ ಮಾತು, ಕನ್ನಡದಲ್ಲಿ ಸಂಸ್ಕೃತ ಬೆರೆಸುತ್ತೇವೆ. ಇಂಗ್ಲಿಷು ಯಾಕೆ ಬೆರಸಬಾರದು ?

ಶಿವರಾಮಯ್ಯ : ನಿನ್ನದು ಒಳ್ಳೆಯ ಪ್ರಶ್ನೆ, ಅದಕ್ಕೆ ಉತ್ತರ ಹೇಳುತ್ತೇನೆ, ಸ್ವಲ್ಪ ತಾಳು. ರಮೇಶ ಏನೋ ಪ್ರಶ್ನೆ ಕೇಳಬೇಕು ಅಂತ ಇದ್ದ. ಅವನ ಪ್ರಶ್ನೆಗೆ ಉತ್ತರ ಹೇಳಿ, ನಿನ್ನ ಪ್ರಶ್ನೆಗೆ ಉತ್ತರ ಹೇಳುತ್ತೇನೆ. ನಿನ್ನ ಪ್ರಶ್ನೆ ಏನು ರಮೇಶ್?

ರಮೇಶ್ : ಏನೂ ಇಲ್ಲ ಗುರುಗಳೆ, ಸುರೇಶನ ಪ್ರಶ್ನೆಗೆ ಉತ್ತರ ಹೇಳಿ, ಗುರುಗಳೆ.

ಶಿವರಾಮಯ್ಯ : ಕನ್ನಡದಲ್ಲಿ ಇಂಗ್ಲೀಷು ಯಾಕೆ ಬೆರಸಬಾರದು ಅಂತ ಸುರೇಶ ಕೇಳಿದಾನೆ. ಬೆರಸಬಹುದು ಅಂತಲೇ ನನಗೆ ಅನ್ನಿಸುತ್ತದೆ. ಇಂಗ್ಲೀಷು

ವರ್ಷಗಳಂತೆ ಆ ವರ್ಷವೂ ನವೆಂಬರ್ ಒಂದನೆಯ ತಾರೀಖಿನ ದಿನ ಕನ್ನಡ ರಾಜ್ಯೋತ್ಸವ ನಡೆಯುವ ಏರ್ಪಾಡಾಯಿತು. ಶಾಲೆಯ ಮಕ್ಕಳಿಗೆ ಕನ್ನಡ ನಾಡು ನುಡಿಗಳ ವಿಚಾರವಾಗಿ ನಾಲ್ಕು ಮಾತು ಹೇಳಬೇಕೆಂದು ಮುಖ್ಯ ಉಪಾಧ್ಯಾಯರು ಶಿವರಾಮಯ್ಯನವರನ್ನು ಕೇಳಿಕೊಂಡಿದ್ದರು. ಆ ಕೆಲಸ ಮಾಡಲು ಅವರು ಸಂತೋಷದಿಂದ ಒಪ್ಪಿಕೊಂಡರು. "ಬಹಳ ಹಿಂದಿನ ಕಾಲದಿಂದಲೂ ಕನ್ನಡ ನಾಡು ಒಂದಾಗಿಯೇ ಇತ್ತು. ಒಂದಾಗಿದ್ದ ನಾಡು ಇಂಗ್ಲಿಷರ ಆಳ್ವಿಕೆಯ ಕಾಲದಲ್ಲಿ ಹತ್ತಿಪ್ಪತ್ತು ತುಂಡುಗಳಾಗಿ ಮದರಾಸು, ಬೊಂಬಾಯಿ, ಹೈದರಾಬಾದು ಪ್ರಾಂತಗಳಲ್ಲಿ ಹಂಚಿಹೋಯಿತು, ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೆ, ೧೯೫೬ರಲ್ಲಿ ಕನ್ನಡ ನಾಡು ಮತ್ತೆ ಒಂದಾಯಿತು, ಹಾಗೆ ನೋಡಿದರೆ, ರಾಷ್ಟ್ರಕೂಟರ ಕಾಲದಲ್ಲಿ ಮಾತ್ರ ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿತ್ತು, ಆಮೇಲೆ, ವಿಸ್ತಾರವಾದ ಕನ್ನಡ ನಾಡು ಬೇರೆ ಬೇರೆ ಆಳುವರಸರ ಆಳುವಿಕೆಗೆ ಒಳಪಟ್ಟಿತ್ತು. ಹೀಗಿದ್ದರೂ, ಕನ್ನಡ ನಾಡು ಒಂದು ಎಂಬ ಭಾವನೆಯನ್ನು ಕಾಪಾಡಿಕೊಂಡು ಬಂದವರು ಕನ್ನಡ ಕವಿಗಳು. ಕನ್ನಡ ಕವಿಗಳು ಯಾವ ರಾಜ್ಯದಲ್ಲಿ ಯಾರಾದರೂ ಇದ್ದುಕೊಂಡಿರಲಿ, ಕನ್ನಡದಲ್ಲಿ ಕಾವ್ಯ ಬರೆದರು. ಈ ಕಾವ್ಯಗಳನ್ನು ಕೇಳುತ್ತ, ಓದುತ್ತ, ಕನ್ನಡ ಜನ ತಮ್ಮ ಕನ್ನಡ ತನವನ್ನು ಉಳಿಸಿಕೊಂಡು ಬಂದರು. ಯಾವ ದೇಶದಲ್ಲಿ ಬಹಳ ಕಾಲದಿಂದ ಸಾಹಿತ್ಯ ಬೆಳೆದು ರಾಶಿಯಾಗಿರುತ್ತದೆಯೋ ಆ ಸಾಹಿತ್ಯವನ್ನು, ಆ ಸಾಹಿತ್ಯದ ಭಾಷೆಯನ್ನು, ಆ ಭಾಷೆಯನ್ನು ಆಡುವ ಜನವನ್ನು ಬೇರೆ ಯಾವ ಭಾಷೆಯೂ, ಯಾವ ಸಾಹಿತ್ಯವೂ, ಯಾವ ಆಳುವ ಜನವೂ ನಾಶಮಾಡಲಾರವು. ಬಹಳ ಕಾಲದವರೆಗೆ ಕನ್ನಡದೊಂದಿಗೆ ಸಂಸ್ಕೃತದ ಸಂಬಂಧ ಇತ್ತು. ಆಮೇಲೆ ಇಂಗ್ಲೀಷಿನ ಸಂಬಂಧ ಉಂಟಾಯಿತು, ಈಗ ಹಿಂದಿಯ ಸಂಬಂಧ ಬೆಳೆಯತೊಡಗಿದೆ. ಈ ಎಲ್ಲ ಭಾಷೆಗಳ ಸಾಹಿತ್ಯಗಳಿಂದ ನಮ್ಮ ಕನ್ನಡ ಸಾಹಿತ್ಯ ಪ್ರಯೋಜನ ಹೊಂದಿದೆ. ಆದರೆ ಎಂದೂ ಹೊರಗಿನ ಭಾಷೆ ಸಾಹಿತ್ಯಗಳ ಮೇಲುತನಕ್ಕೆ ಒಳಗಾಗಿ ಕುಗ್ಗಿಹೋಗಿಲ್ಲ. ಅವುಗಳ ಸಾರವನ್ನು ಹೀರಿಕೊಂಡು ಸೊಂಪಾಗಿ ಬೆಳೆದಿದೆ. ಮೊದಲಿನಿಂದ ಇವೊತ್ತಿನವರೆಗೆ ಕನ್ನಡ ಭಾಷೆ ಸಾಹಿತ್ಯಗಳು ಬೆಳೆದು ಬಂದಿರುವ ಕತೆಯನ್ನು ನೀವೆಲ್ಲಾ ತಿಳಿದುಕೊಳ್ಳಬೇಕು" ಎಂದು ಹೇಳಿದರು.

ರಾಜ್ಯೋತ್ಸವದ ದಿನ ಕಾವ್ಯವಾಚನ, ಹಾಡು, ನಾಟಕ, ಮುಂತಾದ ಮನರಂಜನೆಯ ಕಾರ್ಯಕ್ರಮಗಳೂ ಇದ್ದುವು. ಶಾಲೆಯ ಮಕ್ಕಳಿಗೆ ಶಿವರಾಮಯ್ಯನವರ ಭಾಷಣಕ್ಕಿಂತ ಆ ಕಾರ್ಯಕ್ರಮಗಳಲ್ಲಿ ಆಸಕ್ತಿ ಹೆಚ್ಚಾಗಿತ್ತು.

ವಾಣಿ : ಕನ್ನಡ ಸಂಸ್ಕೃತದಿಂದ ಹುಟ್ಟಿದ್ದು ಎಂದು ಹೇಳುತ್ತಾರಲ್ಲ ?

ಶಿವರಾಮಯ್ಯ : ಅದು ತಪ್ಪು ತಿಳಿವಳಿಕೆ. ಉತ್ತರ ಭಾರತದ ಹಿಂದಿ, ಗುಜರಾತಿ, ಬಂಗಾಳಿ ಮುಂತಾದವು ಸಂಸ್ಕೃತದಿಂದ ಹುಟ್ಟಿದವು. ಇವೆಲ್ಲ ೯–೧೦ನೆಯ ಶತಮಾನದಿಂದ ಈಚೆಗೆ ಬೆಳೆದವು. ಈ ಭಾಷೆಗಳಿಗೂ ಹಿಂದೆ ಪ್ರಾಕೃತ ಮತ್ತು ಪಾಳಿ ಎಂಬ ಭಾಷೆಗಳು ಜನ ಮಾತಾಡುವ ಭಾಷೆಗಳಾಗಿದ್ದವು; ಜೈನ ಧರ್ಮದ, ಬೌದ್ಧ ಧರ್ಮದ ಗ್ರಂಥಗಳು ಆ ಭಾಷೆಗಳಲ್ಲಿವೆ. ಕರ್ನಾಟಕದಲ್ಲಿ ಜೈನ ಧರ್ಮ ಹೆಚ್ಚಾಗಿ ಹರಡಿದಾಗ, ಪ್ರಾಕೃತ ಭಾಷೆಯ ಮಾತುಗಳು ಕನ್ನಡಕ್ಕೆ ಬಂದುವು. ಅವುಗಳ ಮಾದರಿಯಲ್ಲಿಯೇ ಕನ್ನಡ ಕವಿಗಳೂ ಬುದ್ಧಿವಂತ ಜನರೂ ಸಂಸ್ಕೃತ ಮಾತುಗಳನ್ನು ಕನ್ನಡಕ್ಕೆ ತಿರುಗಿಸಿಕೊಂಡರು. ಸಂಸ್ಕೃತದ ವೃಷಭ ಕನ್ನಡದಲ್ಲಿ ಬಸವ ಆಯಿತು. ಹೀಗೆಯೇ ಶರ್ಕರಾ – ಸಕ್ಕರೆ, ಕ್ರಕಚ – ಗರಗಸ, ವಸತಿ– ಬಸದಿ, ಭೂತಿ–ಬೂದಿ, ಘಟಿಕಾ–ಗಳಿಗೆ, ವೀಧಿ–ಬೀದಿ, ವಾಪಿ–ಬಾವಿ. ಮುಂತಾಗಿ ಲೆಕ್ಕ ಮಾಡಲು ಆಗದಷ್ಟು ಸಂಸ್ಕೃತ ಮಾತುಗಳು ಕನ್ನಡಕ್ಕೆ ರೂಪ ಮರಸಿಕೊಂಡು ಬಂದವು. ಇಂಥ ಶಬ್ದಗಳನ್ನು ವ್ಯಾಕರಣದಲ್ಲಿ ತದ್ಭವ ಎನ್ನುತ್ತಾರೆ. ಸಂಸ್ಕೃತ ಮಾತುಗಳನ್ನು ಹಾಗೆ ಹಾಗೆಯೇ ತೆಗೆದುಕೊಂಡಿರುವದೂ ಉಂಟು. ಉದಾಹರಣೆಗೆ : ಕಮಲ, ಗಂಗೆ, ಆಕಾಶ, ವರ್ಷ, ಮಾಸ, ದಿನ, ದಿವಸ, ಶಿವ, ವಿಷ್ಣು, ಪಾರ್ವತಿ, ಲಕ್ಷ್ಮಿ, ಪದ್ಮ ಮುಂತಾದವು. ಇವನ್ನು ಸಮಸಂಸ್ಕೃತ ಅಥವಾ ತತ್ಸಮ ಎನ್ನುತ್ತಾರೆ. ಹೀಗೆ ಸಂಸ್ಕೃತದಿಂದ ಸಾವಿರಾರು ಪದಗಳು ಕನ್ನಡಕ್ಕೆ ಬಂದುವು. ದಿನ ಕಳೆದಂತೆ, ಸಂಸ್ಕೃತ ಪದಗಳು ಅಚ್ಚಗನ್ನಡ ನುಡಿಗಳಿಗೆ ಬದಲಾಗಿ ಅವುಗಳ ಎಡೆಯಲ್ಲಿ ಬಳಕೆಗೆ ಬರತೊಡಗಿದವು.

ವಾಣಿ : ಅದು ಹೇಗಾಯಿತು, (ದಯವಿಟ್ಟು ತಿಳಿಸಿ) ಗುರುಗಳೆ.

ಶಿವರಾಮಯ್ಯ : ಇಲ್ಲಿ ನೋಡಿ, ನಮ್ಮ ಸೊಗಸಾದ ಕನ್ನಡದ ಬಾನು ಹೋಗಿ ಆಕಾಶ ಬಂತು. ಮೀನು ಮತ್ತು ಅರಿಲ್ ಎಂಬ ನುಡಿಗಳು ಮರೆಯಾಗಿ ನಕ್ಷತ್ರ ಹುಟ್ಟಿತು. ಬೆಳ್ಳಿ ಎಂಥ ಚೆಂದವಾದ ಮಾತು, ಶುಕ್ರ (ನಕ್ಷತ್ರ) ಆಯಿತು. ಕನ್ನಡದ ನೇಸರು ಮುಳುಗಿ ಸೂರ್ಯ, ರವಿ, ಭಾಸ್ಕರ, ಆದಿತ್ಯ ಹುಟ್ಟಿದರು. ಕಡಲು ಸಮುದ್ರವಾಯಿತು. ಹೀಗೆಯೇ ಕನ್ನಡ ಮಾತುಗಳು ಕಳೆದು ಹೋಗುತ್ತಾ ಇರುವುದನ್ನು ಕಂಡುಕೊಂಡ ಕನ್ನಡ ಕವಿಗಳೂ ಕನ್ನಡಕ್ಕೆ ಬಗೆ ಬಗೆಯಲ್ಲಿ ಎಚ್ಚರಿಕೆ ನೀಡುತ್ತ ಬಂದರು. ಕನ್ನಡದ ಮೊದಲ ಗ್ರಂಥ ಎಂದು ಹೆಸರಾದ ಕವಿ ರಾಜಮಾರ್ಗದ ಕವಿ, ಕನ್ನಡವನ್ನೂ ಸಂಸ್ಕೃತವನ್ನೂ ಕೆಟ್ಟ ಕೆಟ್ಟದಾಗಿ ಬೆರಸಬೇಡಿ ಎಂದು ಹಾಗೆ ಬೆರಸಿದರೆ ಕುದಿಯುವ ಹಾಲಿಗೆ ಮಜ್ಜಿಗೆ ಹನಿ ಬೆರಸಿದ ಹಾಗೆ

ಮಾತ್ರ ಅಲ್ಲ, ಸಂಸ್ಕೃತವನ್ನೂ ಕೂಡ ತೀರ ಅಗತ್ಯ ಬಂದಾಗ ಮಾತ್ರ ಬಳಸಬೇಕು. ಇಲ್ಲಿ, ನಾವು ಒಂದು ಸಂಗತಿಯನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು. ಕನ್ನಡ ಸಂಸ್ಕೃತಗಳ ಬಾಂಧವ್ಯ, ಅಂದರೆ ನಂಟಸ್ತನ, ಕಡೆಯ ಪಕ್ಷ ೧,೫೦೦ ವರ್ಷಗಳಷ್ಟಾದರೂ ಹಳೆಯದು. ಹಲ್ಮಿಡಿ ಎಂಬ ಸ್ಥಳದಲ್ಲಿ ಒಂದು ಹಳೆಯ ಶಾಸನ ಸಿಕ್ಕಿದೆ. ಶಾಸನ ಎಂದರೆ ಕಲ್ಲಿನ ಹಲಗೆಯ ಮೇಲೆ ಕೆತ್ತಿದ ಬರಹ. ಇಂಥ ಶಾಸನಗಳು ಕನ್ನಡ ನಾಡಿನಲ್ಲಿ ಸಾವಿರಾರು ಇವೆ. ಇವುಗಳಲ್ಲಿ ರಾಜರ ವಂಶಗಳ ವಿಚಾರ, ಆ ರಾಜರು ಭೂಮಿದಾನ ಕೊಟ್ಟ ವಿಚಾರ, ಮುಂತಾದ ಕನ್ನಡ ನಾಡಿನ ಚರಿತ್ರೆ, ಕನ್ನಡ ಜನ ಬದುಕಿ ಬಾಳಿದ ರೀತಿ, ನೀತಿ, ಇವುಗಳನ್ನೆಲ್ಲ ಬರೆದಿರುತ್ತದೆ. ಈ ಶಾಸನಗಳ ಬರವಣಿಗೆಯನ್ನು ಶಾಸನ ಸಾಹಿತ್ಯ ಎನ್ನುತ್ತೇವೆ.

ಸುರೇಶ : ಹಲ್ಮಿಡಿಯ ಶಾಸನ ಎಂದಿರಲ್ಲ ಅದರ ವಿಚಾರ ಕೊಂಚ ಹೇಳಿ, ಗುರುಗಳೆ.

ಶಿವರಾಮಯ್ಯ : ಕನ್ನಡ ನಾಡಿನಲ್ಲಿ ಕನ್ನಡ ಅಕ್ಷರಗಳಲ್ಲಿ ಬರೆದಿರುವ ಶಾಸನಗಳಲ್ಲಿ ಇದು ಅತ್ಯಂತ ಹಳೆಯದು. ಇದರ ಕಾಲ ಸುಮಾರು ಕ್ರಿ.ಶ. ೪೫೦. ಬಹಳ ಹಿಂದೆ ಕನ್ನಡ ನಾಡನ್ನು ಆಳಿದ ಕದಂಬ ವಂಶದ ರಾಜರ ಕಾಲದ ಶಾಸನ ಇದು. ಆ ಕಾಲದಲ್ಲಿ ಸಂಸ್ಕೃತವನ್ನು ಹೆಚ್ಚಾಗಿ ಬಳಸುತ್ತಿದ್ದರು. ಆದ್ದರಿಂದ ಈ ಶಾಸನಗಳಲ್ಲಿ ಕನ್ನಡದ ಜೊತೆಗೆ ಸಂಸ್ಕೃತ ಪದಗಳೂ ಹೆಚ್ಚಾಗಿ ಬಳಕೆಯಾಗಿವೆ. ಬಳಸಿರುವ ಕನ್ನಡ ಹಳಗನ್ನಡಕ್ಕಿಂತಲೂ ಹಳಗನ್ನಡ. ಇದನ್ನು ಪೂರ್ವದ ಹಳಗನ್ನಡ ಎನ್ನಬಹುದು. ಹಿಂದಿನ ಕಾಲದ ಸಾಹಿತ್ಯ ಹಳಗನ್ನಡ ನಡುಗನ್ನಡಗಳಲ್ಲಿ ಇವೆ. ಈಗ ನಾವು ಮಾತಾಡುವುದು, ಬರೆಯುವುದು, ಹೊಸಗನ್ನಡ. ಇವು ಬೇರೆ ಬೇರೆ ಕನ್ನಡ ಭಾಷೆಗಳು ಎಂದು ತಿಳಿದುಕೊಳ್ಳಬೇಡಿ. ಕನ್ನಡ ಅತ್ಯಂತ ಪೂರ್ವದಲ್ಲಿ ಮೂಲ ದ್ರಾವಿಡ ಭಾಷೆ ಆಗಿತ್ತು. ಈ ಮೂಲ ದ್ರಾವಿಡ ಭಾಷೆ ಆರ್ಯರು ಇಂಡಿಯಾ ದೇಶಕ್ಕೆ ಬರುವುದಕ್ಕೂ ಮೊದಲು ದೇಶದಲ್ಲೆಲ್ಲಾ ನೆಲಸಿದ್ದ ದ್ರಾವಿಡ ಜನ ಆಡುತ್ತಿದ್ದರು. ಈ ಭಾಷೆ, ಒಂದೇ ಮರ ಕವಲುಗಳಾಗಿ ಒಡೆಯುವಂತೆ, ಬೇರೆ ಬೇರೆ ಭಾಷೆಗಳಾಗಿ ಒಡೆದವು. ಈ ಭಾಷೆಗಳೆಲ್ಲ ಚೆನ್ನಾಗಿ ಬೆಳೆದಿರುವುದು ದಕ್ಷಿಣ ಇಂಡಿಯ ದೇಶದಲ್ಲಿ ಮಾತ್ರ. ಇವು ಐದು, ಯಾವುವೆಂದರೆ: ತಮಿಳು, ಕನ್ನಡ, ತೆಲುಗು, ಮಲೆಯಾಳ ಮತ್ತು ತುಳು.

ವಾಣಿ : ಹಾಗಾದರೆ ಈ ದ್ರಾವಿಡ ಭಾಷೆಗಳಿಗೂ ಸಂಸ್ಕೃತಕ್ಕೂ ಸಂಬಂಧ ಇಲ್ಲವೆ, ಗುರುಗಳೆ ?

ಶಿವರಾಮಯ್ಯ : ಯಾವ ಸಂಬಂಧವೂ ಇಲ್ಲ.

ಪಾಠದ ಪುಸ್ತಕವನ್ನು ಕೈಗೆತ್ತಿಕೊಂಡು, ನಸು ನಗೆ ನಗುತ್ತಾ ವಿದ್ಯಾರ್ಥಿಗಳ ಕಡೆ ಕಣ್ಣಾಡಿಸಿದರು.

ಹಿಂದಿನ ದಿನ ಮೌನವಾಗಿದ್ದ ಹುಡುಗಿ ಒಬ್ಬಳು ಎದ್ದು ನಿಂತಳು.

ಶಿವರಾಮಯ್ಯ : (ನಗುತ್ತ) ಏನು, ಮೌನಗೌರಿ, ಎದ್ದು ನಿಂತೆ ?

ಮಂಗಳ ಗೌರಿ : ನನ್ನ ಹೆಸರು ಮೌನಗೌರಿ ಅಲ್ಲ ಗುರುಗಳೆ, ಮಂಗಳಗೌರಿ.

ಶಿವರಾಮಯ್ಯ : ಗೊತ್ತಮ್ಮ, ನಿನ್ನೆ ಇತರರ ಹಾಗೆ ನೀನೂ ಸುಮ್ಮನೆ ಕುಳಿತು ನನ್ನ ಮಾತು ಕೇಳುತ್ತಿದ್ದೆಯಲ್ಲಾ, ಅದಕ್ಕೆ ಹಾಗೆ ಕರೆದೆ.

ಮಂಗಳಗೌರಿ : ನೀವು ಹೇಳಿದ ಕನ್ನಡ ಭಾಷೆಯ ವಿಚಾರ ಅಷ್ಟು ಸೊಗಸಾಗಿತ್ತು. ಅದಕ್ಕೆ ನಾವೆಲ್ಲಾ ಸುಮ್ಮನೆ ಆಲಿಸುತ್ತ ಕುಳಿತಿದ್ದೆವು. ನೀವು ಇನ್ನೊಂದು ದಿನ ಕನ್ನಡ ಸಾಹಿತ್ಯದ ವಿಚಾರ ತಿಳಿಸುತ್ತೇನೆ ಎಂದಿದ್ದಿರಿ. ಇವತ್ತೇ ತಿಳಿಸಿಕೊಡಿ ಸಾರ್.

ಶಿವರಾಮಯ್ಯ : ಆಗಲಿ ಮೇಡಮ್, ಕೂತುಕೊಳ್ಳಿ. ಇವತ್ತು ನೀವು ಯಾರೂ ಪ್ರಶ್ನೆ ಕೇಳಕೂಡದು. ನಾನು ಕೇಳಿದರೆ, ನೀವು ಉತ್ತರ ಕೊಡಬೇಕು.

ಅಯ್ಯಾ, ಕೃಷ್ಣಪ್ಪ. ಕನ್ನಡದ ಆದಿ ಗ್ರಂಥ ಯಾವುದು, ಹೇಳಯ್ಯ ?

ಕೃಷ್ಣಪ್ಪ : ನಿನ್ನೆ ತಾನೆ ಹೇಳಿದಿರಲ್ಲಾ, ಪಂಡಿತರೇ ಕವಿ ರಾಜ ಮಾರ್ಗ ಅಂತ.

ಶಿವರಾಮಯ್ಯ : ಸರಿ ಈ ಕವಿರಾಜಮಾರ್ಗ ಒಂದು ಲಕ್ಷಣ ಗ್ರಂಥ. ಅಂದರೆ ಕಾವ್ಯ ಹೇಗಿರಬೇಕು, ಅದರಲ್ಲಿ ಎಷ್ಟು ಬಗೆಗಳಿವೆ, ಅದರಲ್ಲಿ ಉಪಯೋಗಿಸುವ ಅಲಂಕಾರಗಳು ಯಾವುವು, ಕಾವ್ಯ ಓದುವುದರಿಂದ ಆಗುವ ಪ್ರಯೋಜನ ಏನು, ಇವೇ ಮುಂತಾದ ವಿಷಯಗಳನ್ನು ತಿಳಿಸುವ ಗ್ರಂಥವೇ ಲಕ್ಷಣಗ್ರಂಥ. ಈ ಕವಿರಾಜಮಾರ್ಗವನ್ನು ಬರೆದವರು ಯಾರು ಗೊತ್ತೆ ?

ಸುರೇಶ : ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗ. ಇವನು ೮೧೪ ರಿಂದ ೮೭೭ರ ವರೆಗೆ ಆಳಿದ. ಕವಿರಾಜಮಾರ್ಗ ೮೫೦ರಲ್ಲಿ ರಚಿತವಾಯಿತಂತೆ. ನಮ್ಮ ಬೆಂಗಳೂರಿನ ನೃಪತುಂಗ ರಸ್ತೆ, ಇವನ ನೆನಪನ್ನು ಶಾಶ್ವತ ಮಾಡಿದೆ.

ಶಿವರಾಮಯ್ಯ : ನೀನು ಹೇಳಿದ್ದೆಲ್ಲ ಸರಿ. ಆದರೆ, ಕವಿರಾಜಮಾರ್ಗವನ್ನು ಬರೆದವನು ನೃಪತುಂಗ ಅಲ್ಲ, ಅವನ ಆಸ್ಥಾನ ಕವಿ ಶ್ರೀವಿಜಯ ಎಂದು ಈಗ ವಿದ್ವಾಂಸರು ನಿಶ್ಚಯ ಮಾಡಿದ್ದಾರೆ. ಈ ಗ್ರಂಥದಲ್ಲಿ ಕನ್ನಡ ನಾಡಿನ ವಿಸ್ತಾರವನ್ನು ಹೀಗೆ ಹೇಳಿದೆ–

ಆಗುತ್ತದೆ ಎಂದ. ಕುದಿಯುವ ಹಾಲು ಸ್ವಲ್ಪ ಆರಿದ ಮೇಲೆ ಮಜ್ಜಿಗೆ ಹನಿ ಸೇರಿಸಿದರೆ ಮೊಸರಾಗುತ್ತದೆ, ಕುದಿಯುವಾಗಲೇ ಹಾಕಿದರೆ ಹಾಲು ಒಡೆದುಹೋಗುತ್ತದೆ. ಇನ್ನೊಬ್ಬ ಕವಿ, ಕನ್ನಡ ಸಂಸ್ಕೃತಗಳ ಹದಗೆಟ್ಟ ಬೆರಕೆ ಮುತ್ತು ಮೆಣಸುಗಳನ್ನು ಪೋಣಿಸಿ ಸರ ಮಾಡಿದ ಹಾಗಾಗುತ್ತದೆ ಎಂದು ನಗೆಯಾಡಿದ್ದಾನೆ.

ರಹೀಮ : ಕನ್ನಡದಲ್ಲಿ, ಉರ್ದು ಮಾತುಗಳೂ ಬೆರೆತಿವೆ, ಅಲ್ಲವೆ ಗುರುಗಳೆ ?

ಶಿವರಾಮಯ್ಯ : ಹೌದು, ಹೈದರ್–ಟಿಪ್ಪೂಸುಲ್ತಾನರ ಕಾಲದಲ್ಲಿ ಕನ್ನಡಕ್ಕೆ ಹಲವು ಉರ್ದು ಮಾತುಗಳೂ ಸೇರಿಕೊಂಡವು. ಹಾಗೆಯೇ, ಪಾರ್ಸಿ, ಪೋರ್ತುಗೀಸು ಭಾಷೆಗಳಿಂದಲೂ ಕೆಲಕೆಲವು ಮಾತುಗಳು ಬಂದಿವೆ. ನಮ್ಮಲ್ಲಿ ಇಲ್ಲದೇ ಇರುವ ಪದಾರ್ಥಗಳು ಮತ್ತು ವಿಚಾರಗಳಿಗೆ ಬೇರೆಯ ಭಾಷೆಗಳ ಶಬ್ದಗಳನ್ನು ತೆಗೆದುಕೊಳ್ಳುವುದರಿಂದ ಭಾಷೆ ಬೆಳೆಯುತ್ತದೆ. ನಮ್ಮಲ್ಲೆ ಮಾತುಗಳು ಇರುವಾಗ ಹೆರರ ನುಡಿಗಳನ್ನು ತೆಗೆದುಕೊಳ್ಳಬಾರದು. ಅಯ್ಯಾ ಅಪ್ಪಾ, ಸ್ವಾಮೀ, ಎನ್ನೋಣ. ಸರ್ ಯಾಕೆ ? ಕೋಣೆಯನ್ನು ಬಿಟ್ಟು ರೂಮು ಹಿಡಿಯುತ್ತೇವೆ. ಮಕ್ಕಳು ಅಮ್ಮ, ಅಪ್ಪ, ಅತ್ತೆ, ಮಾವ ಎಂದು ಹೇಳಬೇಕಾದ ಕಡೆ ಮಮ್ಮಿ, ಡ್ಯಾಡಿ, ಆಂಟಿ, ಅಂಕಲ್ ಎಂದು ನಾವೇ ಹೇಳಿಕೊಡುತ್ತ ಇದೇವೆ. ಹೀಗೆ ಮಾಡುವುದು, ಮಕ್ಕಳಿಗೆ ವಿಷ ಬೆರಸಿ ಹಾಲು ಕುಡಿಸಿದ ಹಾಗೆ. ಮಹಲಿಂಗ ರಂಗ ಕವಿ– "ಸುಲಿದ ಬಾಳೆಯ ಹಣ್ಣಿನಂತೆ ಲಲಿತವಾಗಿರುವ ಕನ್ನಡ ನುಡಿಯಲ್ಲಿ ತನ್ನ ವಿಚಾರವನ್ನು ತಾನು ತಿಳಿದುಕೊಂಡು ಮೋಕ್ಷ ಪಡೆಯುವುದಕ್ಕೆ ಆಗುವುದಿಲ್ಲವೆ? ಸಂಸ್ಕೃತ ಯಾಕೆ, ಅದರ ಹೆಚ್ಚುಗಾರಿಕೆ ಏನು" ಎಂದು ಸವಾಲು ಹಾಕಿದ್ದಾನೆ ; ತತ್ವ ವಿಚಾರವನ್ನು ಕನ್ನಡದಲ್ಲೇ ಹೇಳಿದ್ದಾನೆ. ಈ ಮಾತನ್ನು ಇಂಗ್ಲೀಷು, ಹಿಂದಿ, ಮುಂತಾದ ಈಗಿನ ಪರಭಾಷೆಗಳಿಗೂ ನಾವು ಅನ್ವಯಿಸಿಕೊಳ್ಳಬೇಕು.

ಸುರೇಶ : ಈ ಮಹಲಿಂಗರಂಗ ಬರೆದಿರುವ ಪುಸ್ತಕ ಅನುಭವಾಮೃತ ಅಲ್ಲವೆ, ಗುರುಗಳೆ ?

ಶಿವರಾಮಯ್ಯ : ಹೌದು, ಸರಿಯಾಗಿ ಹೇಳಿದೆ. ಕನ್ನಡ ಭಾಷೆಯ ವಿಚಾರವಾಗಿ ಸ್ವಲ್ಪ ಹೇಳಿದ್ದೇನೆ. ಇನ್ನೊಂದು ದಿನ ಕನ್ನಡ ಸಾಹಿತ್ಯದ ವಿಚಾರ ತಿಳಿಸಿಕೊಡುತ್ತೇನೆ.

ಎಂದು ಅಂದಿನ ಪಾಠವನ್ನು ಮುಗಿಸಿದರು.

ಮರುದಿನವೂ ಕನ್ನಡದ ಪಾಠ ಇತ್ತು. ಶಿವರಾಮಯ್ಯನವರು ಬೇಕೆಂದೇ

ಸುರೇಶ : ಇದು ಜನಪದ ಸಾಹಿತ್ಯದ ಮಾತಾಯಿತು. ಉಳಿದ ಸಾಹಿತ್ಯ, ಬಹಳ ಹಳೆಯ ಕಾಲದ ಗದ್ಯ ಪದ್ಯ ಗ್ರಂಥಗಳು, ಇವು ಹೇಗೆ ಉಳಿದುಬಂದಿವೆ ಗುರುಗಳೆ?

ಶಿವರಾಮಯ್ಯ : ಕವಿಗಳು ಓಲೆಯ ಗರಿಗಳ ಮೇಲೆ ತಮ್ಮ ಕಾವ್ಯಗಳನ್ನು ಕಂಟ ಎಂಬ ಕಬ್ಬಿಣದ ಸಲಾಕಿಯಿಂದ ಕೊರೆದು, ಕಪ್ಪಿಡುತ್ತಿದ್ದರು. ಹಿಂದಿನ ಕಾಲದಲ್ಲಿ ಕಾಗದ, ಅಚ್ಚಿನ ಯಂತ್ರ, ಇವು ಇರಲಿಲ್ಲ. ಇಂಥ ಓಲೆಯ ಗರಿಯ ಕಟ್ಟುಗಳು ವಿದ್ಯೆ ಕಲಿಯುವ ಮನೆಗಳಲ್ಲಿ, ಅರಮನೆಗಳಲ್ಲಿ, ಧರ್ಮಗುರುಗಳ ಮಠಗಳಲ್ಲಿ, ಅಡಗಿಕೊಂಡಿದ್ದುವು. ಕಾಗದ ಬಳಕೆಗೆ ಬಂದಿದ್ದರೂ, ೧೯ನೆಯ ಶತಮಾನದವರೆಗೂ ಗ್ರಂಥಗಳನ್ನು ಓಲೆಯ ಗರಿಯ ಮೇಲೇ ಬರೆಯುತ್ತಿದ್ದರು. ಈ ಗ್ರಂಥಗಳಲ್ಲಿ ಪದ್ಯಕಾವ್ಯ, ಗದ್ಯ ಕಾವ್ಯ, ವ್ಯಾಕರಣ, ಛಂದಸ್ಸು, ಜ್ಯೋತಿಷ್ಯ, ಗಣಿತ ಆಯುರ್ವೇದ, ಗಜಶಾಸ್ತ್ರ, ಅಶ್ವಶಾಸ್ತ್ರ, ಪಾಕಶಾಸ್ತ್ರ, ಮುಂತಾದ ಶಾಸ್ತ್ರಗಳು– ಇವೆಲ್ಲಾ ಇವೆ. ಈ ಗ್ರಂಥ ರಾಶಿಯನ್ನು ಒಟ್ಟಾಗಿ ಪ್ರಾಚೀನ, ಎಂದರೆ ಹಳೆಯ ಕಾಲದ ಸಾಹಿತ್ಯ ಎನ್ನುತ್ತೇವೆ. ಅನೇಕ ಓಲೆಯ ಗರಿಯ ಗ್ರಂಥಗಳು ಅಚ್ಚಾಗಿವೆ, ಅಚ್ಚಾಗಬೇಕಾದವು ಬೇಕಾದಷ್ಟಿವೆ. ಇವನ್ನು ಕಾಪಾಡಬೇಕು. ಈ ಪ್ರಾಚೀನ ಕನ್ನಡ ಸಾಹಿತ್ಯದ ವಿಚಾರವಾಗಿ ಸ್ವಲ್ಪ ತಿಳಿಸುತ್ತೇನೆ.

ಕನ್ನಡದಲ್ಲಿ ಕಾವ್ಯಗಳನ್ನು ಮೊದಲು ಬರೆದವರು ಜೈನರು. ಕವಿರಾಜಮಾರ್ಗವನ್ನು ಬರೆದ ಶ್ರೀವಿಜಯ ಜೈನ. ಅನಂತರ ಪಂಪನೆಂಬುವನು ವ್ಯಾಸರು ಬರೆದ ಸಂಸ್ಕೃತ ಮಹಾಭಾರತದ ಕಥೆಯನ್ನು ಕನ್ನಡದಲ್ಲಿ 'ವಿಕ್ರಮಾರ್ಜುನ ವಿಜಯ' ಎಂಬ ಹೆಸರಿನಲ್ಲಿ ಬರೆದನು. ಚಾಲುಕ್ಯ ವಂಶದ ಅರಿಕೇಸರಿ ಎಂಬ ದೊರೆಯ ಆಸರೆಯಲ್ಲಿ ಇದ್ದ ಪಂಪ. ಅದಕ್ಕಾಗಿ ತಾನು, ಬರೆದ ಭಾರತದಲ್ಲಿ ಅರ್ಜುನನನ್ನು ಹೊಗಳುವ ನೆಪದಲ್ಲಿ ಉದ್ದಕ್ಕೂ ಅರಿಕೇಸರಿಯನ್ನು ಹೊಗಳಿಕೊಂಡು ಬಂದಿದ್ದಾನೆ. ಇದು 'ಪಂಪಭಾರತ' ಎಂದು ಹೆಸರಾಗಿದೆ. ಪಂಪನನ್ನು ಸರಿಗಟ್ಟುವ ಕವಿ ಬೇರೆ ಯಾರೂ ಇಲ್ಲ ಎಂದು ಅನೇಕ ಈಚಿನ ಕವಿಗಳು ಅವನನ್ನು ಹೊಗಳಿದ್ದಾರೆ. ಭಾರತ ಅಲ್ಲದೆ, ೨೪ ಜೈನ ತೀರ್ಥಂಕರರಲ್ಲಿ ಮೊದಲನೆಯವನಾದ ವೃಷಭದೇವನನ್ನು ಕುರಿತು ಒಂದು ಪುರಾಣವನ್ನು ೯೪೧ರಲ್ಲಿ ಬರೆದು ಮುಗಿಸಿದ.

ರಮೇಶ : ಕನ್ನಡ ಸಾಹಿತ್ಯ ಪರಿಷತ್ತು ಇರುವ ಬೀದಿಗೆ ಪಂಪಮಹಾಕವಿ ರಸ್ತೆ ಎಂದು ಹೆಸರಿಟ್ಟಿದ್ದಾರೆ.

ಶೀವರಾಮಯ್ಯ : ಹೌದು, ಎರಡು ಕಾವ್ಯಗಳೂ ಮಹಾ ಕಾವ್ಯಗಳು.

ಕಾವೇರಿಯಿಂದಮಾ ಗೋ
ದಾವರಿವರಮಿರ್ಪ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಳಯ ವಿಲೀನ ವಿಶದ ವಿಷಯ ವಿಶೇಷಂ

ಇಷ್ಟೇ ಅಲ್ಲ, ನಮ್ಮ ಕನ್ನಡದ ಜನ, "ಚದುರರ್ ನಿಜದಿಂ. ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್" ಎಂದು ಕವಿ ಅವರನ್ನು ಕೊಂಡಾಡಿದ್ದಾನೆ. ಎಂದರೆ ಕನ್ನಡಿಗರು ಹುಟ್ಟು ಜಾಣರು, ಓದಬೇಕು ಅಂತ ಓದದೆಯೇ ಕವಿತೆ ಕಟ್ಟುವ ಶಕ್ತಿ ಪಡೆದಿದ್ದರು, ಅಂತ ಆ ಮಾತಿಗೆ ಅರ್ಥ ಮಾಡಬಹುದು. ಇಂಥ ಓದುಬರಹ ಬಾರದ ಜನ ಹೊಲದಲ್ಲಿ ಕೆಲಸ ಮಾಡುವಾಗ, ಬಂಡಿ ಹೊಡೆಯುವಾಗ, ಮನೆಯಲ್ಲಿ ಬತ್ತ ಕುಟ್ಟುವಾಗ, ರಾಗಿ ಬೀಸುವಾಗ, ಮಕ್ಕಳನ್ನು ತೊಟ್ಟಿಲಲ್ಲಿ ತೂಗುವಾಗ, ತಮ್ಮ ನಲಿವು, ನೋವು, ನಂಬಿಕೆ, ನಡವಳಿಕೆ, ನೀತಿ ಇವೆಲ್ಲವನ್ನೂ ಕುರಿತು ಹಾಡು ಕಟ್ಟಿಕೊಂಡು ಬಂದರು. ಈ ಹಾಡುಗಳು, ನಾಡಪದಗಳು, ಬಾಯಿಂದ ಬಾಯಿಗೆ ಹರಿದು ಬಂದುವು. ಹೊಸನೀರು ಬಂದಾಗ ಅದು ಹಳೆಯ ನೀರನ್ನು ಕೊಚ್ಚಿಕೊಂಡು ಹೋಗುವ ಹಾಗೆ, ಎಷ್ಟೋ ಹಳೆಯ ಹಾಡುಗಳು ಈಗ ಜನಕ್ಕೆ ಮರೆತುಹೋಗಿವೆ. ಈಚಿನವು ಹಳ್ಳಿಗಾಡಿನಲ್ಲಿ ಇನ್ನೂ ನೆನಪಿನಲ್ಲಿ ಉಳಿದಿವೆ. ಇವನ್ನೆಲ್ಲಾ ಒಟ್ಟಿನಲ್ಲಿ ಜನಪದ ಸಾಹಿತ್ಯ ಎನ್ನುತ್ತೇವೆ. ಇದು ಹಾಳಾಗಬಾರದು ಅಂತ ಇದನ್ನು ಕಲೆ ಹಾಕಿ ಅಚ್ಚು ಹಾಕಿಸುವ ಕೆಲಸ ಈಗ ೩೦–೪೦ ವರ್ಷಗಳಿಂದ ನಡೆಯುತ್ತಿದೆ. ಮಾನವಮಿಯ ಪದ, ಗೋವಿನ ಕಥೆ, ಲಾವಣಿಗಳು, ಹೀಗೆ ಬೇಕಾದಷ್ಟು ಇವೆ. ನಮ್ಮ ಕನ್ನಡ ಶಾರದೆ ಇದಾಳಲ್ಲ, ವಾಣಿ, ಅವಳಿಗೆ ಗೊತ್ತಿರಬೇಕು, ಕೆಲವು. ಎಲ್ಲಮ್ಮಾ ಒಂದಾದರೂ ಹೇಳಮ್ಮ.......ಸಂಕೋಚ ಬೇಡ, ಹೇಳಮ್ಮಾ.

ವಾಣಿ : ನಮ್ಮಮ್ಮ ಹೇಳುತ್ತಾ ಇದ್ದ ಹಾಡುಗಳಲ್ಲಿ ಎಲ್ಲೋ ಒಂದೆರಡು ನೆನಪಿದೆ ಗುರುಗಳೆ. ಒದನ್ನ ಹೇಳ್ತೀನಿ–

ಯಾಕಳುವೆ ಎಲೆ ರಂಗ ಬೇಕಾದ್ದು ನಿನಗಿದೆ
ನಾಕೆಮ್ಮೆ ಕರೆದ ನೊರೆಹಾಲು
ನೊರೆಹಾಲು ಸಕ್ಕರೆ
ನೀಕೇಳಿದಾಗ ಕೊಡುವೆನು

ಶಿವರಾಮಯ್ಯ : ಕೇಳಿದಿರಾ ಎಷ್ಟು ಚೆನ್ನಾಗಿದೆ, ಇಂಥ ಪದಗಳು ಹಾಳಾಗದಂತೆ ನೀವು ಕಲೆ ಹಾಕಿ ಜೋಪಾನ ಮಾಡಬೇಕು.

'ಜೈಮಿನಿ ಭಾರತ'ವನ್ನೂ ನೀವೆಲ್ಲಾ ಬಲ್ಲಿರಿ. ಇವುಗಳಲ್ಲಿ ಕೃಷ್ಣನ ಮಹಿಮೆಗೆ ಹಿರಿಯ ಸ್ಥಾನ. ವಿಷ್ಣು ಭಕ್ತರಲ್ಲಿ ಹರಿ ದಾಸರದ್ದೇ ಒಂದು ಪಂಗಡ. ಇವರಲ್ಲಿ, ಪುರಂದರದಾಸರು ಕನಕದಾಸರು ತುಂಬ ಹೆಸರಾದವರು. ರೇಡಿಯೋದಲ್ಲಿ ಇವರ ಹಾಡುಗಳನ್ನು ನೀವು ಕೇಳುತ್ತಲೇ ಇರುವಿರಿ. ಇವರು ಹರಿ ಭಕ್ತಿಯನ್ನು ಸಾರಿದರು. ಶಿವಶರಣರಂತೆ ಜನರ ನಡತೆಯನ್ನು ತಿದ್ದಿದರು.

ವಾಣಿ : ಹಿಂದಿನ ಕಾಲದಲ್ಲಿ ಹೆಂಗಸರು ಏನೂ ಬರೆದಿಲ್ಲವೆ ಗುರುಗಳೆ?

ಶಿವರಾಮಯ್ಯ : ಬರೆದಿದ್ದಾರೆ, ಅವರ ಸಂಖ್ಯೆ ಬಲು ಕಡಿಮೆ. ವಚನಕಾರ್ತಿ ಮಹಾದೇವಿಯಕ್ಕ, 'ಚಂದ್ರಹಾಸನ ಕಥೆ' ಬರೆದ ಗಿರಿಯಮ್ಮ, 'ಹದಿಬದೆಯ ಧರ್ಮ' ಬರೆದ ಹೊನ್ನಮ್ಮ, ಇಷ್ಟು ಜನ ಜ್ಞಾಪಕಕ್ಕೆ ಬರುತ್ತಾರೆ, ಈಗ ಹೆಂಗಸರು ಹೆಚ್ಚಾಗಿ ಬರೆಯುತ್ತಿದ್ದಾರೆ.

ಒಟ್ಟಿನಲ್ಲಿ ಜಾತಿ ಮತ ಭೇದ ಇಲ್ಲದೆ ಎಲ್ಲ ಪಂಗಡದವರೂ ಕನ್ನಡ ಶಾರದೆಯ ಸೇವೆ ಮಾಡಿದ್ದಾರೆ. ಕನ್ನಡ ಜನವನ್ನು ಉದ್ಧಾರ ಮಾಡಿದ್ದಾರೆ. ಈ ಕವಿಗಳೆಲ್ಲ ಪೂಜ್ಯರು ಎಂದು ಹೇಳಿ ಕನ್ನಡದ ಕತೆಯನ್ನು ಮುಗಿಸೋಣ.

* * * *

ಚಂಪೂ ಎಂದರೆ ಗದ್ಯ ಪದ್ಯ ಮಿಶ್ರವಾಗಿರುವ ಕಾವ್ಯ. ಇವನ ಮೇಲುಪಂಕ್ತಿಯನ್ನು ಹಿಡಿದು ಪೊನ್ನ ಎಂಬ ಕವಿ ಶಾಂತಿನಾಥ ತೀರ್ಥಂಕರನ ಮೇಲೆ ಪುರಾಣ ಬರೆದಿದ್ದಾನೆ. ತೀರ್ಥಂಕರ ಎಂದರೆ ಮೋಕ್ಷಮಾರ್ಗ ತೋರಿಸಿಕೊಡುವ ಮಹಾಪುರುಷರು. ರನ್ನ ಕವಿ 'ಅಜಿತನಾಥ ಪುರಾಣ'ವನ್ನೂ ಭೀಮ ದುರ್ಯೋಧನರ 'ಗದಾಯುದ್ಧ'ವನ್ನು ವರ್ಣಿಸುವ 'ಸಾಹಸ ಭೀಮ ವಿಜಯ'ವನ್ನೂ ಬರೆದಿದ್ದಾನೆ. ಈ ಮೂವರೂ ಕನ್ನಡದ ರತ್ನತ್ರಯ' ಎಂದು ಹೆಸರಾಗಿದ್ದಾರೆ. ಇವರಲ್ಲದೆ, ನಾಗಚಂದ್ರ, ಜನ್ನ, ಮಧುರ, ನೇಮಿಚಂದ್ರ, ಆಚಣ್ಣ, ಎಂಬ ಜೈನ ಕವಿಗಳು ಜೈನ ಪುರಾಣಗಳನ್ನು ಬರೆದಿದ್ದಾರೆ.

ಈ ಜೈನ ಕವಿಗಳಾದ ಮೇಲೆ ೧೨ನೆಯ ಶತಮಾನದಲ್ಲಿ ಶಿವನ ಭಕ್ತರಾದ ಶಿವಶರಣರು ವಚನಗಳನ್ನು ಹೇಳಿದರು. ಇವರನ್ನು ವಚನಕಾರರು ಎಂದು ಕರೆಯುತ್ತೇವೆ. ಈ ವಚನಕಾರರಲ್ಲಿ ಅತ್ಯಂತ ಮುಖ್ಯರಾದವರು–ಅಲ್ಲಮಪ್ರಭು, ಬಸವೇಶ್ವರ, ಚೆನ್ನಬಸವಣ್ಣ, ಸಿದ್ಧರಾಮ ಮುಂತಾದವರು. ಈ ವಚನಗಳು ಗದ್ಯವಾದರೂ ಹಾಡಲು ತಕ್ಕವಾಗಿವೆ. ಪ್ರತಿಯೊಂದು ವಚನದ ಕೊನೆಯಲ್ಲೂ ವಚನಕಾರನ ಇಷ್ಟದೇವರ ಹೆಸರು ಇರುತ್ತದೆ. ಉದಾಹರಣೆಗೆ, ಬಸವಣ್ಣನವರ ಈ ವಚನವನ್ನು ಕೇಳಿ :

ಕಲ್ಲನಾಗರ ಕಂಡರೆ ಹಾಲನೆರೆ ಎಂಬರು<br>
ದಿಟದ ನಾಗರ ಕಂಡರೆ ಕೊಲ್ಲು ಎಂಬರಯ್ಯಾ<br>
ಉಂಬಜಂಗಮ ಬಂದರೆ ನಡೆಯೆಂಬರು.<br>
ಉಣ್ಣದ ಲಿಂಗಕ್ಕೆ ಬೋನವ ಹಿಡಿವರಯ್ಯಾ<br>
ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದರೆ<br>
ಕಲ್ಲುತಾಗಿದ ಮಿಟ್ಟೆಯಂತೆ ಅಪ್ಪರಯ್ಯಾ

ವಚನಕಾರರಲ್ಲದೆ, ಶಿವಭಕ್ತರಾದ ಕವಿಗಳೂ ಇದ್ದಾರೆ. ಇವರಲ್ಲಿ, 'ಗಿರಜಾಕಲ್ಯಾಣ' ಮತ್ತು ಶಿವಭಕ್ತರ ಕಥೆಗಳನ್ನು 'ರಗಳೆ' ಎಂಬ ಧಾಟಿಯಲ್ಲಿ ಬರೆದ ಹರಿಹರ, 'ಹರಿಶ್ಚಂದ್ರ ಕಾವ್ಯ'ವನ್ನು ಬರೆದ ರಾಘವಾಂಕ ಮುಖ್ಯರು. ೧೫ನೆಯ ಶತಮಾನದ ಸರ್ವಜ್ಞನ ವಚನಗಳ ವಿಚಾರ ನಿಮಗೆ ಗೊತ್ತೇ ಇದೆ. ವಚನಗಳು ಶಿವಭಕ್ತಿಯ ಜೊತೆಗೆ ನೀತಿಯನ್ನೂ ಬೋಧಿಸುತ್ತವೆ. ಶಿವಶರಣರು ಜಾತಿ ಭೇದಗಳನ್ನು ವಿರೋಧಿಸಿದರು, ದುಡಿಮೆಯ ಹಿರಿಮೆಯನ್ನು ಸಾರಿದರು.

ಶಿವಭಕ್ತರಾದಮೇಲೆ ವಿಷ್ಣುವಿನ ಭಕ್ತರು. ರುದ್ರ ಭಟ್ಟನು ಕೃಷ್ಣನ ಲೀಲೆಗಳನ್ನು 'ಜಗನ್ನಾಥ ವಿಜಯ'ದಲ್ಲಿ ವರ್ಣಿಸಿದ್ದಾನೆ. ಕುಮಾರವ್ಯಾಸನ ಭಾರತವನ್ನೂ ಲಕ್ಷ್ಮೀಶನ

## ಕಂಬನಿ ಕಾಣಿಕೆ

೧

ಓ ಕನ್ನಡದ ನೆಲನೆ, ಕನ್ನಡದ ಪೊಲನೆ,
        ಮೌನದಿಂ ಮರುಗಿಂ ;
        ಓ ಕನ್ನಡದ ಬಾನೆ,
ಕನ್ನಡದ ಬಾನೊಳಾಡುವ ಚೆನ್ನ ಮುಗಿಲೆ,
        ಕಂಬನಿಯ ಕರೆಯಿಂ ;
        ಓ ಕನ್ನಡದ ಎಲರೆ–
ಕನ್ನಡದ ಪಯಿರ ಪರಿಮಳ ಪೊತ್ತ ತಂಬೆಲರೆ,
ಕಾವೇರಿ ಕೃಷ್ಣೆಯರ ನಡುನಾಡೊಳೆಲ್ಲಂ
ಸುಯ್ಯುತ್ತೆ ಸುಯ್ಯುತ್ತೆ ಸುದ್ದಿಯಂ ಸಾರಯ್.
        ಓವೊ ಕನ್ನಡವಕ್ಕಿ,
ಎಂದಿನಂತಲ್ಲದೆಯೆ ಏನ್ ಮೂಗುವಟ್ಟಿರ್ಪಯ್?
ಕನ್ನಡದ ಮಕ್ಕಳ್ಗೆ ಸವಿನುಡಿಯನೊರೆಯಯ್,
        ಒರೆದು ಸಂತವಿಸಯ್.

೨

ಅಮ್ಮ, ಕನ್ನಡ ತಾಯೆ,
ನಿನ್ನಳಲ್ ಪಿರಿದಲ್ತೆ
        ಎಮ್ಮಳಲ್ಗಿಂ :
ನಿನ್ನ ಶ್ರೀಕಂಠಮೇ
        ಪೋಯ್ತು ತಾಯೆ
ಕಳಿಯೆ ಶ್ರೀಕಂಠನ್
ನಿನ್ನ ವರ ಪುತ್ರನ್
        ಪ್ರೇಮ ಪುತ್ರನ್ :
        ಕೊರಗದಿರ್
        ಮರುಗದಿರ್

ಕನ್ನಡದ ತೇಜ, ಕನ್ನಡದೋಜ, ಹರಸಯ್ :
ಸಗ್ಗದಾ ನಾಡಿಂದ
ಬಾನವರ ಬೀಡಿಂದ
ಕನ್ನಡಕೆ ಶುಭವ ಹರಸಯ್
ನೀನ್ ಕಂಡ ಹೊಂಗನಸು
ಅಕ್ಕೆ ನಾಳಿನ ನನಸು !
ನಿನ್ನ ಕಡೆ ಹಾರೈಕೆ ಸಲ್ಗೆ, ಸಲ್ಗೆ !

'ಸಿರಿಗನ್ನಡಂ ಗೆಲ್ಗೆ, ಕನ್ನಡದ ತಾಯ್ ಬಾಳ್ಗೆ' !
ಸಂತತಂ ಶ್ರೀ ಪೆಸರ್ ನಿಲ್ಗೆ, ನಿಲ್ಗೆ !

ಸೊರಗದಿರ್ :
ನಿನ್ನೆಲ್ಲ ಮಕ್ಕಳೊಳಮವನೆ ಧನ್ಯನ್
ನಿನ್ನೆಲ್ಲ ಮಕ್ಕಳೊಳಮವನೆ ಸನ್ಮಾನ್ಯನ್
ನಿನ್ನ ಸೇವೆಯೊಳವನೆ ಅಗ್ರಗಣ್ಯನ್
ನಿನಗುಸಿರ ಮುಡಿಪಿಟ್ಟ ಕನ್ನಡ ವರೇಣ್ಯನ್.

೩

ಓ ಗುರುವೆ, ಓ ಗುರುವೆ,
ಕನ್ನಡದ ಕಲ್ಪತರುವೆ,
ಕನ್ನಡದ ಸಿರಿಯೆ !
ಇನಿತು ಬೇಗದಿನೇಕೆ ಕಣ್‌ಮುಚ್ಚಿದಯ್,
ನಮಗೆ ಕಾವಳ ಮುಚ್ಚಿದಯ್ ?
ಬರಿದಾಯ್ತು ಕನ್ನಡದ ಆಚಾರ್ಯಪೀಠಂ :
ಮರೆಯಾಯ್ತು ಬೆಳಕೀವ ನಿನ್ನ ನೋಟಂ ;
ಕೇಳದಾಯ್ತಿನ್ನು ಕನ್ನಡದ ಕಲಕಂಠಂ :
ಬಿಮ್ಮೆನ್ನುತಿದೆ ನಾಡ ನುಡಿಯ ತೋಂಟಂ.

ನಿನ್ನ ಕೃತಿಗಳೆ, ನಿನ್ನ ನೆನಪೆ, ನಮಗಿಂದು ಸಿರಿ :
ನಿನ್ನ ಶಾಶ್ವತ ಕೀರ್ತಿ ನಿನ್ನ ತೇಜೋಮೂರ್ತಿ.
ನಿನ್ನ ಗೈಮೆಗಳೊಂದೆ, ಎರಡೆ, ಮೂರೆ ?
ಎನಿತು ಕೊಂಡಾಡುವುದೊ ನಮ್ಮ ಮನವಾರೆ ।
ಕನ್ನಡದ ಬಲ್ಮೆಯಂ ಬೀರಿದಯ್ ಗುರುವೆ
ಕನ್ನಡದ ನಯ ನಲ್ಮೆ ಸಾರಿದಯ್ ಗುರುವೆ
ನಾಡು ನುಡಿಯೊಕ್ಕೂಟಕೊರ್‌ದಾರಿ ತೋರಿಸಿದೆ
ಕುರಿಪಾಗಿ, ಕನ್ನಡದ ಬಾವುಟವ ಹಾರಿಸಿದೆ.
ನಿನ್ನಂತೆ ಕೊಟ್ಟರಾರ್ ತನು ಮನ ಧನವ ನುಡಿಗೆ,
ನಿನ್ನಂತೆ ಇಟ್ಟರಾರ್ ವಯಿರಮುಡಿ ತಾಯ ಮುಡಿಗೆ ?
ನಿನ್ನ ನೆನೆವೆವು, ಗುರುವೆ, ಅನುದಿನಂ ಅಡಿಗಡಿಗೆ ;
ನಿನಗೆ ಸದ್ಗತಿ ನೀಡಲೆಂದೆರಗುವೆವು ಪರಮನಡಿಗೆ.

ಮಾಡಿರುವ ಪ್ರಯೋಗ ಪರೀಕ್ಷೆಗಳೂ ಹಲವು ತರುಣ ಕವಿಗಳಿಗೆ ಮಾರ್ಗದರ್ಶಕವಾದುವು. ಈ ಸಂಗ್ರಹದಲ್ಲಿಯ ಗೀತಗಳು ಬಿಡಿಯಾಗಿ ಪತ್ರಿಕೆಗಳಲ್ಲಿ ಹಲವು ವರ್ಷಗಳ ಮೊದಲೇ ಬೆಳಕು ಕಂಡಿದ್ದುವು. ಅಲ್ಲದೆ, ೧೯೨೧ರಲ್ಲಿಯೇ ೧೩ ಗೀತೆಗಳನ್ನು ಒಳಕೊಂಡ 'ಇಂಗ್ಲಿಷ್ ಗೀತೆಗಳು' ಎಂಬ ಸಂಗ್ರಹ ಕರ್ಣಾಟಕ ಗ್ರಂಥಮಾಲೆಯಲ್ಲಿ ಅಚ್ಚಾಗಿತ್ತು. ಇವರು ೧೯೧೧ರ ಸುಮಾರಿನಲ್ಲಿ ಧಾರವಾಡದಲ್ಲಿ ಕೊಟ್ಟ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ಉಪನ್ಯಾಸವೂ 'ಕನ್ನಡಕ್ಕೆ ಒಂದು ಕಟ್ಟು' ಎಂಬ ಲೇಖನವೂ ಸೇರಿ ಕನ್ನಡ ಭಾಷೆಯ ವಿಚಾರಗಳು ಎಂಬ ಕಿರು ಹೊತ್ತಿಗೆ ಒಂದು ಇದಕ್ಕೂ ಮೊದಲೆ ೧೯೧೩ರಲ್ಲಿ ಪ್ರಕಟವಾಗಿ ಇವರ ಅಭ್ಯಾಸದ ಆಳ ವಿಸ್ತಾರಗಳು ಪಂಡಿತ ಪ್ರಪಂಚಕ್ಕೆ ಪರಿಚಯವಾಗಿದ್ದುವು. ಕವಿ ರನ್ನನ 'ಸಾಹಸ ಭೀಮವಿಜಯ' ಕಾವ್ಯದಿಂದ ೧೯೨೬ರಲ್ಲಿ ಇವರು ಕಟ್ಟಿದ 'ಗದಾಯುದ್ಧ ನಾಟಕ' ಕನ್ನಡ ನಾಡಿನ ಹಲವೆಡೆ ಆಡಿ ಜನರ ಮೆಚ್ಚಿಕೆ ಪಡೆದಿದೆ. ಸೊಫೊಕ್ಲೇಸಿನ 'ಏಜಾಕ್ಸ್' ರುದ್ರ ನಾಟಕದ ಆಧಾರದಮೇಲೆ ೧೯೨೯ರಲ್ಲಿ ಹಳಗನ್ನಡದಲ್ಲಿ ಇವರು ಬರೆದ ಸರಳ ರಗಳೆಯ ಛಂದಸ್ಸಿನ ಅಶ್ವತ್ಥಾಮನ್ ನಾಟಕ ಇವರ ಕನ್ನಡ ಪಾಂಡಿತ್ಯಕ್ಕೆ ಕಳಸದಂತೆ ಇದೆ. ೧೯೩೫ರಲ್ಲಿ ಇವರು ಕನ್ನಡಿಸಿದ ಅಯ್‌ಸ್ಕುಲೊಸ್ಸಿನ 'ಪಾರಸಿಕರು' ಎಂಬ ರುದ್ರ ನಾಟಕ ಬೆಂಗಳೂರು ಸೆಂಟ್ರಲ್ ಕಾಲೇಜಿನ ವಜ್ರೋತ್ಸವ ಸಮಾರಂಭದಲ್ಲಿ ಆಡಿ ಗೌರವ ಪಡೆಯಿತು. ೧೯೩೮ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ವಸಂತ ಸಾಹಿತ್ಯೋತ್ಸವದ ಸಮಯದಲ್ಲಿ ಇವರು ಸಂಪಾದಿಸಿ – ಪ್ರಕಟಿಸಿದ 'ಕನ್ನಡ ಬಾವುಟ' ಸಂಕಲನ ಇವರ ಉತ್ತಮ ಸಾಹಿತ್ಯಾಭಿರುಚಿಯ ಕುರುಹಾಗಿದೆ. ಮೈಸೂರು ವಿಶ್ವವಿದ್ಯಾನಿಲಯದವರು ಪ್ರಕಟಿಸಿರುವ 'ಕನ್ನಡ ಕೈಪಿಡಿ'ಯಲ್ಲಿ ಇವರು ಬರೆದಿರುವ ಛಂದಸ್ಸಿನ ಪ್ರಕರಣ ಇವರ ತುಂಬು ವಿದ್ವತ್ತಿಗೂ ಆಳವಾದ ಪರಿಶ್ರಮಕ್ಕೂ ನಿದರ್ಶನವಾಗಿದೆ. ೧೯೨೭ರಲ್ಲಿ ಇವರು ರಚಿಸಿದ ಮೈಸೂರರಸರ ಆಳಿಕೆಯ 'ರಜತ ಮಹೋತ್ಸವ ಪ್ರಗಾಥ'ವೂ ೧೯೩೭ರಲ್ಲಿ ರಚಿಸಿದ 'ಕನ್ನಡ ತಾಯ ನೋಟ' ಎಂಬ ಕವಿತೆಯೂ ಇವರ ಉಜ್ವಲ ದೇಶಪ್ರೇಮವನ್ನು ಸೂಸುತ್ತವೆ. ೧೯೪೧ರಲ್ಲಿ ಇವರು ರಚಿಸಿದ 'ಶುಕ್ರಗೀತೆ' ಇವರ ನಂಬಿಕೆ ಗುರಿಗಳನ್ನೂ ಶ್ರದ್ಧೆ ನಿಷ್ಠೆಗಳನ್ನೂ ಆದರ್ಶ ಧ್ಯೇಯಗಳನ್ನೂ ಸಾರುವ ಸಂದೇಶದಂತೆ ಇದೆ. ೧೯೪೩ನೆಯ ಡಿಸೆಂಬರಿನಲ್ಲಿ ತಮ್ಮ ಷಷ್ಟಿ ಪೂರ್ತಿಯ ಸಂದರ್ಭದಲ್ಲಿ ಇವರು ಮಿತ್ರರಿಗೆ ಹಂಚಿದ ತಮ್ಮ ಕವನಗಳ ಸಂಗ್ರಹಕ್ಕೆ ಇಟ್ಟ 'ಹೊಂಗನಸು' ಎಂಬ ಹೆಸರೆ ನಾಡು ನುಡಿಗಳ ಬಗ್ಗೆ ಇವರಿಗಿದ್ದ ಹಂಬಲವನ್ನು ಹೇಳುತ್ತದೆ. ೧೯೪೧ನೆಯ ಮೈಸೂರು ಜನಗಣತಿಯ ಸಂಪುಟಕ್ಕೆ

# 'ಶ್ರೀ'ಯವರ ಜೀವನ ಪರಿಚಯ

(ದಿ॥ ಕ. ವೆಂ. ರಾಘವಾಚಾರ್, ಎಂ.ಎ., ಬಿ.ಟಿ.)

ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಮೈಸೂರು ಸಂಸ್ಥಾನದ ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕು ಸಂಪಿಗೆ ಗ್ರಾಮದಲ್ಲಿ ಕ್ರಿ. ಶ. ೧೮೮೪ನೆಯ ಜನವರಿ ೩ರಲ್ಲಿ ಹುಟ್ಟಿದರು. ಇವರ ತಂದೆ ಶ್ರೀಮಾನ್ ಬೆಳ್ಳೂರು ಮೈಲಾರಯ್ಯನವರು ಶ್ರೀರಂಗಪಟ್ಟಣದಲ್ಲಿ ವಕೀಲರಾಗಿದ್ದರು. ಶ್ರೀಮಾನ್ ಶ್ರೀಕಂಠಯ್ಯನವರು ಪ್ರೌಢ ವಿದ್ಯಾಭ್ಯಾಸ ಮೈಸೂರು ಮಹಾರಾಜರವರ ಕಾಲೇಜಿನಲ್ಲೂ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲೂ ಸಾಗಿತು. ಬಿ.ಎಲ್. ವಿದ್ಯಾಭ್ಯಾಸ ಮದರಾಸಿನಲ್ಲಿ ನಡೆಯಿತು. ಇಂಗ್ಲಿಷ್ ಭಾಷೆಯಲ್ಲಿ ಮದರಾಸು ವಿಶ್ವವಿದ್ಯಾನಿಲಯದ ಎಂ.ಎ. ಪದವಿಯನ್ನು ಪಡೆದು, ತಮ್ಮ ೨೫ನೆಯ ವಯಸ್ಸಿನಲ್ಲಿ ಮೈಸೂರು ಮಹರಾಜರವರ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಸೇರಿದ್ದರು. ತಮ್ಮ ಇಂಗ್ಲಿಷ್ ವ್ಯಾಸಂಗದ ಜತೆಗೆ ಸ್ವಸಂತೋಷಕ್ಕಾಗಿ ಮೊದಲಿನಿಂದಲೂ ಕನ್ನಡದ ವ್ಯಾಸಂಗವನ್ನು ನಡಸಿಕೊಂಡು ಬಂದರು. ಇವರ ಕನ್ನಡ ಪಾಂಡಿತ್ಯವೂ ಇಂಗ್ಲಿಷ್ ಪಾಂಡಿತ್ಯವೂ ಸಮತೂಕವಾಗಿದ್ದು ಎರಡೂ ಅದ್ವಿತೀಯವಾಗಿದ್ದುವು. ಇವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಹಿರಿಯ ಇಂಗ್ಲಿಷ್ ಪ್ರೊಫೆಸರೂ ಗೌರವದ ಕನ್ನಡ ಪ್ರೊಫೆಸರೂ ಆಗಿದ್ದರು. ಕನ್ನಡಕ್ಕೂ ತಮಿಳಿಗೂ ಇರುವ ನಿಕಟ ಬಾಂಧವ್ಯವನ್ನು ಮೊದಲಿನಿಂದಲೂ ಇವರು ಅರಿತವರಾಗಿದ್ದು ತಮಿಳನ್ನು ಅಭ್ಯಾಸಮಾಡಿ ಅದರಲ್ಲಿ ಉತ್ತಮ ರೀತಿಯ ಪಾಂಡಿತ್ಯ ಸಂಪಾದಿಸಿದ್ದರು. ಸಂಸ್ಕೃತವನ್ನು ಸ್ವಂತವಾಗಿ ಅಭ್ಯಾಸಮಾಡಿ ಕಾವ್ಯ ನಾಟಕಗಳನ್ನೂ ಉಪನಿಷತ್ತುಗಳನ್ನೂ ಮೂಲದಲ್ಲಿ ವ್ಯಾಸಂಗ ಮಾಡಿದ್ದರು. ಸ್ವಂತ ವ್ಯವಸಾಯದಿಂದಲೇ ತಕ್ಕಮಟ್ಟಿನ ಗ್ರೀಕ್ ಪಾಂಡಿತ್ಯವನ್ನೂ ಗಳಿಸಿದ್ದರು.

ಜನರ ಕಣ್ಣಿಗೆ ಹೆಚ್ಚಾಗಿ ಬೀಳದೆ ಮರೆಯಾಗಿದ್ದು ಮೊದಲಿನಿಂದಲೂ ಕನ್ನಡದಲ್ಲಿ ಕೆಲಸಮಾಡುತ್ತಿದ್ದ ಶ್ರೀಮಾನ್ ಶ್ರೀಕಂಠಯ್ಯನವರು ೧೯೨೫ನೆಯ ಇಸ್ವಿಯಲ್ಲಿ ಪ್ರಕಟವಾದ ತಮ್ಮ ಇಂಗ್ಲಿಷ್ ಗೀತಗಳು ಕವನ ಸಂಗ್ರಹದಿಂದ ಹೊರಗಿನ ಜನರಿಗೆ ಮೊದಲು ಪರಿಚಯವಾಗಿ, ಒಮ್ಮೆಯೇ ಕನ್ನಡಿಗರೆಲ್ಲರ ಪ್ರೀತಿ ಮನ್ನಣೆಗಳನ್ನು ಪಡೆದರು. ಅದರಲ್ಲಿ ಬಳಸಿರುವ ಹೊಸ ಛಂಧಸ್ಸುಗಳೂ

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಪ್ರಧಾನ ಸಂಪಾದಕರಾಗಿದ್ದು ಹಳಗನ್ನಡ ಗ್ರಂಥಗಳ ಸಂಪಾದನ ಸಂಕಲನ ಕಾರ್ಯದಲ್ಲೂ ಹೊಸಗನ್ನಡದಲ್ಲಿ ಆಧುನಿಕ ವಿಷಯಗಳ ಮೇಲೆ ಗ್ರಂಥಗಳನ್ನು ಬರಸಿ ಪ್ರಕಟಿಸುವ ಕಾರ್ಯದಲ್ಲೂ ಬಹಳ ನೆರವಾಗಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್–ಕನ್ನಡ ನಿಘಂಟು ಸಮಿತಿಯ ಸದಸ್ಯರಾಗಿ ತಮ್ಮ ಪಾಂಡಿತ್ಯದ ಪ್ರಯೋಜನವನ್ನು ದೊರಕಿಸಿಕೊಟ್ಟಿದ್ದಾರೆ. ಮೈಸೂರು ಸಂಸ್ಥಾನದ ಅಕ್ಷರ ಪ್ರಚಾರ ಸಮಿತಿಯಲ್ಲೂ ಕರ್ನಾಟಕ ಏಕೀಕರಣ ಸಂಘದಲ್ಲೂ ಕರ್ನಾಟಕದ ವಿದ್ಯಾಪೀಠದ ಸಮಿತಿಯಲ್ಲೂ ಇವರು ಅಧಿಕಾರ ಸ್ಥಾನ ವಹಿಸಿ ಅಮೋಘ ಸೇವೆ ಸಲ್ಲಿಸಿದ್ದಾರೆ.

ತಾವೇ ಬರೆದು ಇತರರಿಂದ ಬರೆಸಿ ಕನ್ನಡ ಭಾಷೆ ಸಾಹಿತ್ಯಗಳ ಬಹುಮುಖ ಅಭಿವೃದ್ಧಿಗೆ ಕಾರಣರಾದವರೂ, ನಾಡು ನುಡಿ ಸೇವೆಗಳಿಂದ ಎಲ್ಲ ಕನ್ನಡಿಗರ ಗೌರವ ಪ್ರೀತಿಗಳನ್ನು ಸಂಪಾದಿಸಿದವರೂ ಆದ ಮಾನ್ಯ ಶ್ರೀಕಂಠಯ್ಯನವರನ್ನು ಮೈಸೂರರಸರವರೂ ಗೌರವಿಸಿ ೧೯೩೮ರಲ್ಲಿ 'ರಾಜಸೇವಾಸಕ್ತ' ಎಂಬ ಬಿರುದನ್ನು ಕೊಟ್ಟು ಆದರಿಸಿದರು.

ಹೀಗೆ, ಅವಿಶ್ರಾಂತವೂ ಸರ್ವತೋಮುಖವೂ ಆದ ತಮ್ಮ ಸೇವೆಯಿಂದ ಜನಮರ್ಯಾದೆ ರಾಜಮರ್ಯಾದೆಗಳನ್ನು ಪಡೆದ 'ಶ್ರೀ'ಯವರಿಗೆ ಇಡಿಯ ಕನ್ನಡ ನಾಡಿನ ಲೇಖಕರು ತಮ್ಮ ಲೇಖನ ಪುಷ್ಪಮಾಲಿಕೆಯ ಸಂಭಾವನೆಯನ್ನು (೧೪–೯–೧೯೪೧ರಲ್ಲಿ) ಒಪ್ಪಿಸಿ ಗೌರವಿಸಿದ್ದು ನಾಡಿಗೇ ಒಂದು ಹೆಮ್ಮೆ, ಸಮಾಧಾನ.

ಶತಮಾನಗಳು ಸರಿಯುತ್ತ ಶ್ರೀಯವರ ಇತರ ಸೇವೆಗಳು ಜನರ ದೃಷ್ಟಿಯಿಂದ ಸರಿದರೂ ಸರಿಯಬಹುದು. ಹಳೆಯ ಕಲ್ಕೆಯ ಗುಣ್ಪೂ ಹೊಸ ಕಲ್ಕೆಯ ಹರವೂ ಕೂಡಿ ಹದಗೊಂಡ ಅರಿವು ತಿಳಿವುಗಳ ಹೂವಾದ ಇವರ ಕೃತಿರತ್ನ 'ಅಶ್ವತ್ಥಾಮನ್' ಮಾತ್ರ ಲೋಕದಲ್ಲಿ ಕನ್ನಡ ಇರುವವರೆಗೆ ಬೆಳಗಿ ಶ್ರೀಯವರ ನೆನಪನ್ನು ಉಳಿಸುತ್ತದೆ.

ಕನ್ನಡವೆ ತಾಯಾಗಿ ಕನ್ನಡವೆ ತವರಾಗಿ ಕನ್ನಡವೆ ಕನಸಾಗಿ ಕನ್ನಡವೆ ನನಸಾಗಿ ಕನ್ನಡವೆ ಕರ್ಮವಾಗಿ ಕನ್ನಡವೆ ಧರ್ಮವಾಗಿ ಬಾಳಿದ ಶ್ರೀಯವರು ಕನ್ನಡವೆ ಕಡೆ ನೆನಹಾಗಿ ಕಣ್ಮರೆಯಾದರು. ಅವರ ಮೈ ಮರೆಯಾಯಿತು, ನಿಜ. ಆದರೆ ಅವರ ಹೆಸರು ಹೊನ್ನಾಗಿ ಸಾವಿರ ಕಾಲ ಸಲ್ಲುತ್ತದೆ.

* * * *

ಕನ್ನಡ ಭಾಷೆ ಸಾಹಿತ್ಯಗಳಲ್ಲಿ ೧೯೩೧–೪೧ರ ದಶಕದಲ್ಲಿ ನಡೆದಿರುವ ಕೆಲಸವನ್ನು ಇವರು ವಿವೇಚಿಸಿ ಬರೆದಿರುವ ವಿಮರ್ಶ ಪ್ರಬಂಧ ಆ ಸಂಪುಟಕ್ಕೆ ಕಳೆ ಕೊಟ್ಟಿದೆ.

ಇವರ ವೈದುಷ್ಯದ ಪ್ರೌಢಿಮೆಪರಿಪಾಕಗಳನ್ನೂ ಬೋಧನೆಯ ಸಾಮರ್ಥ್ಯಾನುಭವಗಳನ್ನೂ ಮನಗಂಡ ವಿಶ್ವವಿದ್ಯಾನಿಲಯದವರು ಅನಪೇಕ್ಷಿತವಾಗಿ ಕೊಟ್ಟ ಸೇವಾ ಕಾಲಾವಧಿಯ ವಿಸ್ತರಣವನ್ನು ಒಪ್ಪಿಕೊಂಡು ಮೂವತ್ತು ಮೂರು ವರ್ಷಗಳು ಅವಿಚ್ಛಿನ್ನವಾಗಿ ವಿದ್ಯಾಸೇವೆ ನಡಸಿ ೧೯೪೨ರಲ್ಲಿ ಇವರು ಬಿಡುವುಗೊಂಡರು. ಬಿಡುವಿಗೆ ಒಗ್ಗಿಕೊಳ್ಳುವುದರೊಳಗೆ ಮತ್ತೊಮ್ಮೆ ಮತ್ತೊಂದೆಡೆಯಿಂದ ಸೇವೆಯ ಕರೆ ಬಂತು. ಧಾರವಾಡದ ಕರ್ನಾಟಕ ಶಿಕ್ಷಣ ಸಮಿತಿಯವರು ಹೊಸದಾಗಿ ತೆರೆದ ಆರ್ಟ್ಸ್ ಕಾಲೇಜಿನ ಪ್ರಿನ್ಸಿಪಲ್ ಕೆಲಸದ ಹೊಣೆಯನ್ನು ಮಿತ್ರರ ಒತ್ತಾಯದಿಂದ ಹೊತ್ತು ೧೯೪೪ರಲ್ಲಿ ಧಾರವಾಡಕ್ಕೆ ಹೋಗಿ ನೆಲಸಿ, ಕನ್ನಡಿಗರ ದುರ್ದೈವದಿಂದ ಅಲ್ಲಿಯೆ ೫–೧–೧೯೪೬ರಲ್ಲಿ ಹೃದಯಸ್ತಂಭನದಿಂದ ತಮ್ಮ ಐಹಿಕ ವ್ಯಾಪಾರವನ್ನು ಮುಗಿಸಿದರು.

ಶ್ರೀಮಾನ್ ಶ್ರೀಕಂಠಯ್ಯನವರು ಕನ್ನಡ ನಾಡು ನುಡಿಗಳಿಗಾಗಿ ತನು ಮನಧನಗಳಿಂದ ಎಡೆಬಿಡದೆ ದುಡಿದರು. ಬಿಡುವು ದೊರೆತಾಗಲೆಲ್ಲ ಕರ್ನಾಟಕದ ನಾನಾ ಭಾಗಗಳನ್ನು ಸುತ್ತುವುದು ಕನ್ನಡ ತಾಯ ತೀರ್ಥಯಾತ್ರೆಯೆಂದು ಇವರ ಭಾವನೆ. ಮೈಸೂರು ವಿಶ್ವವಿದ್ಯಾನಿಲಯಕ್ಕೆ ಕನ್ನಡಕ್ಕಾಗಿ ಎರಡು ದತ್ತಿಗಳನ್ನು ಬಿಟ್ಟಿದ್ದಾರೆ : ತರುಣ ಕನ್ನಡ ಕವಿಗಳ ಉತ್ತೇಜನಕ್ಕಾಗಿ ಕೊಟ್ಟಿರುವ ಶ್ರೀ ಕೃಷ್ಣರಾಜ ರಜತ ಮಹೋತ್ಸವ ಸುವರ್ಣಪದಕದತ್ತಿ ; ಕನ್ನಡ ಆನರ್ಸ್ ತರಗತಿಯ ವಿದ್ಯಾರ್ಥಿಗಳಿಗಾಗಿ ವೇತನದತ್ತಿ. ಹೀಗೆಯೇ ಕನ್ನಡ ಸಾಹಿತ್ಯ ಪರಿಷತ್ತಿಗೂ ಎರಡು ದತ್ತಿಗಳನ್ನು ಬಿಟ್ಟಿದ್ದಾರೆ : ಗಮಕ ಶಿಕ್ಷಣಕ್ಕಾಗಿ ಒಂದು, ಪರಿಷತ್ತಿನ ಅಚ್ಚುಕೂಟಕ್ಕಾಗಿ ಒಂದು. ಇವರ ಕಾಣಿಕೆ ಸಲ್ಲದ ಕನ್ನಡ ಗುಡಿ ಇಲ್ಲ.

ಇವರು ೧೯೨೬–೩೦ರ ವರೆಗೆ ಮೈಸೂರು ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರರಾಗಿದ್ದಾಗ ಕನ್ನಡ ಎಂ.ಎ. ತರಗತಿ ತೆರೆಯಿತು. ಕಲ್ಬುರ್ಗಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೂ, ವಿಜಯನಗರ ಸಾಮ್ರಾಜ್ಯದ ಸಮ್ಮೇಳನಕ್ಕೂ, ೧೯೪೦ರಲ್ಲಿ ತಿರುಪತಿಯಲ್ಲಿ ನಡೆದ ಪ್ರಾಚ್ಯ ಸಮ್ಮೇಳನದ ಕನ್ನಡ ಶಾಖೆಗೂ, ಮೈಸೂರು ವಿಶ್ವವಿದ್ಯಾನಿಲಯದ ರಜತ ಮಹೋತ್ಸವ ಸಂದರ್ಭದಲ್ಲಿ ನಡೆದ ಕನ್ನಡ ಕವಿ ಸಮ್ಮೇಳನಕ್ಕೂ ಇವರು ಅಧ್ಯಕ್ಷರಾಗಿದ್ದರು. ೧೯೩೮ ರಿಂದ ಐದು ವರ್ಷಗಳು ಕನ್ನಡ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದು, ಅದರ ಕಾರ್ಯವನ್ನು ಬಹುಮುಖವಾಗಿ ವಿಸ್ತರಿಸಿದ್ದಲ್ಲದೆ ಅದಕ್ಕೆ ಅಂತಃಪುಷ್ಟಿಯನ್ನೂ ಕೊಟ್ಟಿದ್ದಾರೆ.

"ಏನೋ ಎಂದಿದ್ದೆ. ಇಷ್ಟೇ ತಾನೆ" ಎಂದು ಹೆಂಗಸು ಮನೆಯೊಳಕ್ಕೆ ಹೋದಳು. ಕನ್ನಡಮ್ಮ ಕೊರಗಿನಿಂದ ತಲೆಬಾಗಿ ಮುಂದೆ ಸಾಗಿದಳು.

ಉಸಿರು ೨

ಕನ್ನಡಮ್ಮ ಬೀದಿಯಲ್ಲಿ ನಡೆದು ಹೋಗುತ್ತಿದ್ದಳು.

ಅಲ್ಲಿ ಒಂದು ಹುಡುಗರ ಶಾಲೆ ; ಪಕ್ಕದ ಬಯಲಿನಲ್ಲಿ ಶಾಲೆಯ ಹುಡುಗರಿಗೆ ಶರೀರ ಶಿಕ್ಷಣ ಕೊಡುತ್ತಿತ್ತು.

ಕನ್ನಡಮ್ಮ ಹಿಗ್ಗಿದಳು : "ಆಹಾ, ಎಂಥ ಹಿಗ್ಗಿನ ನೋಟವಿದು! ಈ ಹುಡುಗರು, ಕನ್ನಡದ ಕುಡಿಗಳು, ಸಾಲಿಟ್ಟು ಹೇಗೆ ಕಂಗೊಳಿಸುತ್ತಿದ್ದಾರೆ ! ಕನ್ನಡ ನಾಡು ಕಾಯಲು, ಕನ್ನಡ ಕೋಟೆ ಕಟ್ಟಲು, ಒಡೆದ ನಾಡನ್ನು ಒಗ್ಗೂಡಿಸಲು, ನಾಡಿನ ಊರೂರಿನಲ್ಲಿ ಮನೆಮನೆಯ ಮೇಲೆ ಕನ್ನಡ ಬಾವುಟವನ್ನು ಹಾರಬಿಡಲು ಈ ಪರಿಯ ಕನ್ನಡ ಮಕ್ಕಳ ನೂರಾರು ಪಡೆ, ಸಾವಿರಾರು ಪಡೆ ಸಿದ್ಧವಾಗಬೇಕು, ಸಿದ್ಧವಾದೀತು" ಎಂದು ಬಗೆಯುತ್ತ ಹುಡುಗರ ಪಡೆಯ ಬಳಿ ಸಾರಿದಳು.

ಬಾನ ನೀಲಿಯ ಬಿಳಿ ಮುಗಿಲ ತಂಡವೊಂದು ಕೆಳಗಿಳಿದು ನೆಲದ ಹಸುರ ಮೇಲೆ ಸಾಲುಗೊಂಡು ಸಾಗುತ್ತಿರುವಂತೆ ತೋರಿತು ಕನ್ನಡಮ್ಮನಿಗೆ, ಬಿಳಿಯುಡುಪುಟ್ಟ ಆ ಹುಡುಗರ ಪಡೆ : ಅವಳ ಹಿಗ್ಗು ಇಮ್ಮಡಿಯಾಯ್ತು.

ಹುಡುಗರ ಸಾಲು ನಿಂತಿತು.

ಹಾಗೆಯೇ ನೋಡುತ್ತ ನಿಂತಳು ಕನ್ನಡಮ್ಮ.

ವಾದ್ಯ ತಾಳಗೊಡುತ್ತಿತ್ತು ; ಶಿಕ್ಷಕರು 'ಏಕ್, ದೋ, ತೀನ್,

ಚಾರ್' ಎಂದು ಎಣಿಕೆಗೊಡುತ್ತಿದ್ದರು ; ಹುಡುಗರು ತಾಳ ಹಿಡಿದು ಎಣಿಕೆಗೆ ತಕ್ಕಂತೆ, ಒಂದು ಬಗೆಯ ಕುಣಿತವಾಡುತ್ತಿದ್ದರು.

ಕನ್ನಡಮ್ಮನ ಕರುಳು ಹಿಂಡಿದಂತಾಯಿತು ; ಕಿವಿ ಮುಚ್ಚಿಕೊಂಡು ಮುಂದೆ ನಡೆದಳು.

"ನನ್ನ ನಾಡೇ ಒಡೆದು ಚೂರಾಗಿದೆ ; ಇನ್ನು ನನ್ನ ಕನಸೊಡೆದು ಚೂರಾದರೇನು!" ಎಂದು ನಿಟ್ಟುಸಿರು ಬಿಟ್ಟಳು.

ಉಸಿರು ೩

ಕನ್ನಡಮ್ಮ ಒಮ್ಮೆ ನಗರದ ಶೃಂಗಾರತೋಟಕ್ಕೆ ಹೋದಳು.

ತಂಗಾಳಿ ತಣ್ಣಗೆ ಬೀಸುತ್ತಿತ್ತು.

# ಕನ್ನಡಮ್ಮನ ಕೊರಗು

ಉಸಿರು ೧

ಕಾವ್ಯವನದ ಕುಟೀರ ಬಿಟ್ಟು, ತನ್ನ ಊರಮಕ್ಕಳನ್ನು ನೋಡಿಕೊಂಡು ಬರಬೇಕೆಂದು ಹಂಬಲಾಯ್ತು ಕನ್ನಡಮ್ಮನಿಗೆ : ಊರ ಸೇರಿ ನೋಡುತ್ತ ಹೊರಟಳು.

ಬೀದಿಯ ದೂಳಿನಲ್ಲಿ ಚೆಲುವು ಮಗುವೊಂದು ಆಟವಾಡುತ್ತಿತ್ತು :

'ಆಹಾ, ಕನ್ನಡ ಮಗುವಿನಲ್ಲಿ ಎನಿತು ಚೆಲುವುದುಂಬಿದೆ' ಎಂದು ಕನ್ನಡಮ್ಮ ತನ್ನಲ್ಲಿ ತಾನು ಹಿಗ್ಗುತ್ತಿರುವಾಗ, 'ಬೇಬೀ' ಎಂದು ಹೆಂಗಸೊಬ್ಬಳು ಕೂಗುತ್ತ ಮನೆಯಿಂದ ಹೊರಬಂದಳು ; "ನನ್ನ 'ಬೇಬಿ' ಕಂಡಿರಾ ಅಮ್ಮ" ಎಂದು ಕನ್ನಡಮ್ಮನನ್ನು ಕೇಳಿದಳು.

'ಬೇಬಿ' ಎಂಬ ಮಾತು ಕನ್ನಡಮ್ಮನ ಕಿವಿಗೆ ಹೊಸದಾಗಿ ಕೇಳಿತು. "ನಿಮ್ಮ ಮಗುವಿನ ಹೆಸರೇ?" ಎಂದು ಬಿಟ್ಟಬಾಯಲ್ಲಿ ಕೇಳಿದಳು.

"ಅಯ್ಯೋ ಹಳೆಗಾಲದ ಮುತ್ತೈದೆ ! 'ಬೇಬಿ' ಎಂದರೆ ಮಗು" ಎಂದು ಹೆಂಗಸು ಕಿಲಕಿಲನೆ ನಗುತ್ತ ಮುಂದುವರಿಯುತ್ತಿರುವಲ್ಲಿ ಮಗುವಿನ ಬಳಿ ಹೋಗುತ್ತಿದ್ದ ಹಸುವೊಂದು ಸರ್ರನೆ ತಿರುಗಿ ಮಗುವನ್ನು ತಿವಿಯಹೋಯಿತು. ಹೆಂಗಸು–"ಅಯ್ಯೋ ನನ್ನ ಕಂದಾ !" ಎಂದು ಮಿಂಚಿನಂತೆ ಮುಂದೆ ನುಗ್ಗಿ ಮಗುವನ್ನು ಸೆಳೆದಪ್ಪಿಕೊಂಡು ಹಾರಿಬಂದಳು. ಬೀದಿಯಂಚಿನಲ್ಲಿ ನಿಂತಿದ್ದ ಕನ್ನಡಮ್ಮನನ್ನು ಕುರಿತು–"ನಿಮ್ಮ ಪುಣ್ಯದಿಂದ ನನ್ನ ಬೇಬಿಗೆ ಏನೂ ಆಗಲಿಲ್ಲ" ಎಂದು ಹಿಗ್ಗುತ್ತ ಹೇಳಿದಳು.

ಕನ್ನಡಮ್ಮ : "ಮಗಳೇ ನಿನ್ನ ಮಗು ಸುರಕ್ಷಿತವಾಗಿದೆಯೆಂದು ಒಂದು ಸಂತೋಷ. ಆದರರೆ ನಿನ್ನ ಮಾತು ಕೇಳಿ ಕಡುಕೊರಗು."

"ಏಕೆ ತಾಯಿ?"

"ಹಸು ಮಗುವನ್ನು ತಿವಿಯಲು ಬಂದಾಗ ನಿನ್ನ ಕನ್ನಡ ತಾಯ್ಗರುಳು ಒಮ್ಮೆ 'ಕಂದಾ' ಎಂದು ಒರಲಿತು. ನನಗೆ ಅತ್ಯಂತ ಹರ್ಷವಾಯಿತು. ನಿನ್ನುಸಿರು 'ಬೇಬಿ' ಎಂದು ಮತ್ತೆ ಉಸಿರಿತು. ಕನ್ನಡ ಕಂದಗಳು 'ಬೇಬಿ'ಗಳಾಗುವ ಕಾಲ ಬಂತೆ ! ಕನ್ನಡ ಕಂದಗಳಿಗೆ ತಾಯ ಹಾಲು ತಪ್ಪಿಹೋಗುವ ಹಾಗಾಯಿತೆ ! ಅಯ್ಯೋ, ನನ್ನ ನಾಡಮಕ್ಕಳು ಯಾವ ವಿಷದ ಗಾಳಿ ಕುಡಿದರೋ–ನಾಡುಸಿರು, ನನ್ನುಸಿರು, ವಿಷಗೊಳ್ಳುತ್ತಿದೆಯಲ್ಲಾ ಎಂದು ನನಗೆ ಕೊರಗು."

ಬಯಲನಡುವೆ ಕಾಲುದಾರಿಯೊಂದಾಗಿತ್ತು.

ಒಂದು ದಿನ ಹಳ್ಳಿಯ ಮಂದಿ ಬಯಲಿನಲ್ಲಿ ಹೋಗುವಾಗ ನೋಡುತ್ತಾರೆ, ಅವರ ಪಳಕೆಯ ಕಾಲುದಾರಿ ಕಣ್ಮರೆಯಾಗಿತ್ತು ! ನಗರ ಸಭೆಯವರು ಬಯಲಿನ ಹಳ್ಳತಿಟ್ಟು ಸಮಮಾಡಿಸಿದ್ದರು.

ಒಬ್ಬ ಹಳ್ಳಿಯವನೆಂದ. "ನೆಲಾನೆಲ್ಲ ಅಗೆದು ಸಮಮಾಡ್ತವ್ರೆ. ಏನ್ ಮಾಡ್ತಾರೋ ತಿಳೀದಲ್ಲಣ್ಣ. ನಾವ್ ದಿನಾ ಕಾಲ್‌ದಾರೀಲೇ ಬರ್‌ತಿದ್ದೋ. ನಾವ್ ನಡೆಯೋಕೇನಾದ್ರೂ ದಾರಿ ಮಾಡ್ ಕೊಡ್ತಾರೇನೋ ಕಣಣ್ಣ."

ಮತ್ತೊಬ್ಬ ಮಾತು ಕೂಡಿಸಿದ : "ಹಂಗೇ ಕಾಣ್ತದೆ ಕಣಣ್ಣ."

ಒಂದೆರಡು ದಿನ ಕಳೆದಮೇಲೆ : ಹಳ್ಳಿಗರು ಎಂದಿನಂತೆ ಬಯಲ ಬಳಿ ಬಂದರು. ತಮ್ಮ ಕಣ್ಣನ್ನು ತಾವೇ ನಂಬಲಾರದೆ ಹೋದರವರು ; ಹಾಗೆ ನೆಲಸಿತ್ತು ಹಸುರು ಹುಲ್ಲಿನ ಹಸರ ಬಯಲಮೇಲೆಲ್ಲ.

ಒಬ್ಬನೆಂದ : "ಏನಣ್ಣ, ನಿನ್ನೆ ಇರ್‌ನಿಲ್ಲ, ಇವತ್ ನೋಡು ಹುಲ್ಲು ಹೆಂಗೆ ಬೆಳಸವ್ರೆ ! ಇದೇನು ಮಾಟ ಅಣ್ಣ ! ಪಾಪ, ಹಳ್ಳೀಂದ ಬರೋರು ಕಲ್ಲು ಮುಳ್ಳು ಯಾಕೆ ತುಳೀಬೇಕು, ಹುಲ್ಲಮೇಲೆ ನಡಕೊಂಡು ಹೋಗ್ಲಿ ಅಂತ ಬೆಳಸವ್ರೆ ಕಣಣ್ಣ. ಏನ್ ಪುಣ್ಯವಂತ್ರಣ್ಣ."

ಇನ್ನೊಬ್ಬ : "ನಿಂಗ್ ತಿಳೀದಣ್ಣ. ನಡೀಲಿ ಅಂತ ಯಾರಾದ್ರೂ ಹುಲ್ಲು ಬೆಳಸ್ತಾರೇನ್ಲ ? ಕಣ್‌ತುಂಬ ನೋಡ್ಲಿ ಅಂತ ಬೆಳಸ್ತಾರೆ."

"ಹುಲ್ಲು ಏನ್ಲ ನೋಡೋದು ? ಹಳ್ಳೀಲಿ ಹುಲ್ಲು ಇಲ್ವಾ ! ಸುಮ್ಕೆ ನಡೀಲ ಮುಂದೆ."

ಹೀಗೆಯೇ ಮಾತಾಡುತ್ತ ಬಯಲಿನಲ್ಲಿ ಬೆಳೆಯಹಾಕಿದ್ದ ಹುಲ್ಲು ಹಸರದ ಮೇಲೆಯೇ ನಡೆದುಹೋದರು.

ಅದರ ಮಾರನೆಯ ದಿನ ಅಲ್ಲಿಗೆ ಬಂದಾಗ ಹಳ್ಳಿಗರು ನೋಡುತ್ತಾರೆ, ಎದ್ದು ನಿಂತಿತ್ತು ಎಚ್ಚರಿಕೆಯ ಕೈಯಂತೆ ಒಂದು ತಿಳಿಸುಹಲಗೆ. (ಅದರಲ್ಲಿ 'ಕೀಪ್ ಆಫ್ ಗ್ರ್ಯಾಸ್' ಎಂದು ಇಂಗ್ಲಿಷಿನಲ್ಲಿ ಬರೆದಿತ್ತು.)

ಒಬ್ಬ : "ಇದೇನೋ ಇಲ್ಲಿ ನೆಟ್ಟವ್ರೆ ಕಣಣ್ಣ. ಏನೋ ಬರೆದೈತೆ."

ಇನ್ನೊಬ್ಬ : "ಏನ್ ಬರೆದೈತೋ ?"

ಮತ್ತೊಬ್ಬ : "ನಾವು ದಿನಾಗ್ಲೂ ಹಿಂಗೆ ಬರ್‍ತಿದ್ವು ನೋಡಿಲ್ಲಿ. ಕಾಲ್ ದಾರೀಲೇ ಬರ್‍ತಾ ಇದ್ದೋ. ಈಗ ದಾರಿ ಇಲ್ಲ. ನಮಗೆ ತಿಳೀಲಿ ಅಂತ, ಊರಿಗೆ ಇದೇ ದಾರಿ ಅಂತ ಬರೆದವ್ರೆ ಕಣಣ್ಣ. ಅಷ್ಟೆ, ನಡೀಲ ಮುಂದೆ."

"ಆಹಾ ! ತಂಗಾಳಿ ಎನಿತು ಹಿತವಾಗಿದೆ. ತಂಪಿನೊಡನೆ ಕಂಪನೂ ಹೊತ್ತು ತರಬಾರದೆ ಈ ಗಾಳಿ........." ಎಂದು ಕನ್ನಡಮ್ಮ ಅತ್ತ, ಇತ್ತ, ಸುತ್ತ ಕಣ್ಣು ಹರಿಸುತ್ತ ತೋಟ ಬಳಸಿ ಬಂದಳು. ನಿಂತು, ತನಗೆ ತಾನು ಉಸಿರಿದಳು:

"ಹೊರನಾಡುಗಳ ಹೂಗಿಡಗಳು ಕಣ್‌ಸೆಳೆಯುತ್ತಿವೆ, ದಿಟ ! ಆದರೆ ನನ್ನ ಕರುನಾಡಿನ ಕಂಪುವೂಗಿಡಗಳೊಂದೂ ಇಲ್ಲ : ಆ ಅರಳುಮಲ್ಲಿಗೆ, ದುಂಡುಮಲ್ಲಿಗೆ, ಸುತ್ತುಮಲ್ಲಿಗೆ ಕಾಣವು ! ಆ ಕೆಂಡಸಂಪಗೆಯಲ್ಲಿ ? ಆ ಜಾಜಿಯಲ್ಲಿ ? ಆ ಪಚ್ಚೆತೆನೆಯೆಲ್ಲಿ ? ಅರಿಸಿನ ತಾಳೆಯುಂಟೆ ?

"ಪಾದರಿ ? ಒಂದೂ ಇಲ್ಲ, ಒಂದೂ ಇಲ್ಲ.

"ತಾವರೆಯೊ ?–ಕೊಳವಿಲ್ಲ, ಕೆರೆಯಿಲ್ಲ ! ಇನ್ನು ತಾವರೆ ಎಲ್ಲಿಂದ ಬರಬೇಕು? ಅದರ ಹುಟ್ಟಡಗಿತಿನ್ನು ! ಹಳೆಗಾಲದ ಕಾವ್ಯ ಕುಸುಮವಾಯಿತು.

"ಚೆಂದೆಂಗು, ಕೌಂಗು, ಇಮ್ಮಾವು, ದಾಳಿಂಬ, ನೇರಿಳೆ ? ಇವು ಕಾಡುಮರಗಳು, ಹಳ್ಳಿಯ ಮರಗಳು ; ಶೃಂಗಾರ ತೋಟಕ್ಕೆ ಇವು ಒಪ್ಪವು !

"ಬಂಡನುಂಡು ನಲಿವ ತುಂಬಿವಿಂಡು ಇತ್ತ ಸುಳಿಯದು, ಕಂಪುವೂ ಇಲ್ಲವಾಗಿ ; ಕೋಗಿಲೆ ಬಾರದಿಲ್ಲಿ, ಕುಕಿಲದಿಲ್ಲಿ, ಮಾಂದಳಿರ ಚಿಗುರಿಲ್ಲವಾಗಿ; ಹಸುರು ಗಿಣಿ ಬಾನ್‌ಚಪ್ಪರಕ್ಕೆ ತೋರಣ ಕಟ್ಟಿ ಹಾರಾಡವಿಲ್ಲಿ, ಉಲಿಯವಿಲ್ಲಿ, ಹಣ್ಣು ಮರವಿಲ್ಲವಾಗಿ.

"ಕನ್ನಡದ ಕಂಪು, ಕನ್ನಡದಿಂಚರ ನಗರಿಗರಿಗೆ ತಲೆಶೂಲೆ !"

ಸುತ್ತಮುತ್ತ ನೋಡುತ್ತಿದ್ದ ಕನ್ನಡಮ್ಮ ಕೆಳಗೆ ದಿಟ್ಟಿ ತಿರುಗಿಸಿದಳು.

"ಆಹಾ! ಬೇಡಬೇಡವೆಂದರೂ ಬೆಳೆಯುವ ಹಸುರು ಹುಲ್ಲಿನ ಹಾಸೊಂದು ಹರವಾಗಿ ಹರಡಿದೆ. ನಗರದಲ್ಲಿ ಉಳಿದಿರುವ ನಾಡ ಸಿರಿಯ ಉಳಿಕೆ!" ಎಂದು ಬಳಲಿದ ಕನ್ನಡಮ್ಮ ಹಾಗೆಯೇ ಹಸುರು ಹಾಸಿನ ಮೇಲೆ ಪವಡಿಸಿದಳು.

ಕನ್ನಡಮ್ಮನ ಕಣ್ಣಿಂದ ಜಗುಳಿದ ಕಂಬನಿಯೆರಡು ಹಸುರು ಗರಿಕೆಯೊಂದರ ಮೇಲೆ ನೆಲಸಿ ಮುತ್ತಿನಂತೆ ಮೆರೆದುವು.

ಅಷ್ಟೆ ಕನ್ನಡಮ್ಮನ ಸಿರಿ, ಆ ಕಣ್ಣೀರ್ ಮುತ್ತು !

## ಉಸಿರು ೪

ಊರ ಒಕ್ಕಡೆಯ ಹರವು ; ಸಿರಿವಂತರ ನೆಲೆ ಅದು. ಹರವಿನ ಹರವಾಗಿ ಒಂದು ಬಯಲು, ಮಕ್ಕಳಾಟದ ಕಳ. ಅಲ್ಲಲ್ಲಿ ಹಸುರಿನ ತೇಪೆ.

ನೆರೆಹಳ್ಳಿಗಳಿಂದ ಮೊಸರು, ಸೌದೆ, ತರಕಾರಿ ಹೊತ್ತು ತರುವ ಹಳ್ಳಿಯ ಮಂದಿ ಬಯಲು ಹಾದು ಊರು ಸೇರುತ್ತಿದ್ದರು. ಅವರು ನಡೆದು ನಡೆದು

"ಬೋಲ್ಡು ಕಾಣ್‌ಲಿಲ್‌ವೇನ್ರೊ. ಕತ್ತೆಗಳಂಗೆ ನುಗ್ತಾರೆ, ಹಳ್ಳಿ ಗಮಾರ್ರು."

ಹಳ್ಳಿಗರು ಕನ್ನಡಮ್ಮನಲ್ಲಿ ಬಂದು ದೂರಿದರು : "ನೋಡ್ರವ್ವ. ದಿನಾಗ಼್ೂ ಇತ್ತಕಡೇನೇ ಬರ್ತಾ ಇದ್ದೀವಿ. ಯಾರೂ ಏನೂ ಕೇಳ್ತಾ ಇರ್ನಿಲ್ಲ. ಇವತ್ತು ನೋಡಿ ನಮ್ಮ ಗರಚಾರ."

"ಅಲ್ಲಿ ಬರೆದಿರುವುದು ನಿಮಗೆ ಕಾಣಲಿಲ್ಲವೆ ? ಅದನ್ನು ನೋಡಿಯೂ ಹಾಗೆ ಹೋದದ್ದು ತಪ್ಪಲ್ಲವೆ ?"

"ನಮ್ಮದೇನ್ರವ್ವ ತಪ್ಪು? ದಿನಾಗಲೂ ಅದೇನೋ ಬೋಲ್ಡಂತಲ್ಲ ಬೋಲ್ಡು. ಅದನ್ನ ನೋಡ್ತಾನೇ ಇದ್ದೀವಿ. ಅದೇನು ಬರೆದವ್ರೊ ಯಾರಿಗೆ ಗೊತ್ತು."

"ಮೊದಲು ತಿಳಿಯದ ಮಾತಿನಲ್ಲಿ ಬರೆದಿತ್ತು. ಈಗ ನಾವು ಆಡುವ ಮಾತಿನಲ್ಲಿ, ತಿಳಿಯುವ ಮಾತಿನಲ್ಲಿ ಬರೆದಿದೆ?"

"ಯಾವ ಮಾತಿನಲ್ಲಿ ಬರೆದರೇನ್ರವ್ವ. ನಮಗಂತೂ ಓದು ಬಾರದು. ನಾವು ಅಕ್ಸರ ಕಲಿತಿಲ್ಲ. ಅಂತೂ ಊರಿಗೆ ಇದೇ ದಾರಿ ಅಂತ ಬರೆದವ್ರೆ ಅಂತ ನಮ್ಮೋನು ಒಬ್ಬ ಹೇಳಿದ. ಅವನ ಚಿಕ್ಕಪ್ಪನ ಮಗ ಅಕ್ಸರ ಕಲೀತವ್ನೆ."

ಕನ್ನಡಮ್ಮನಿಗೆ ನಗು ಬಂತು, ನಿಂತಿತು ; ತಲೆ ಬಗ್ಗಿತು. ಹಳ್ಳಿಗರು ತಮ್ಮ ದಾರಿ ಹಿಡಿದುಹೋದರು.

ಕನ್ನಡಮ್ಮ ನಿಟ್ಟುಸಿರು ಬಿಟ್ಟು, ಉಸಿರಿಕೊಂಡಳು ತನಗೆ ತಾನೆ ; ಆದರೂ ಗಟ್ಟಿಯಾಗಿ :

"ಅಯ್ಯೋ, ತಾಯ್‌ನುಡಿಯೇ ಬಾರದು ಇವರಿಗೆ ; ಇನ್ನು ಹೆರನುಡಿ ತಿಳಿಯುವ ಬಗೆ ಹೇಗೆ ? ನಾಡಿನಲ್ಲಿ ಇನ್ನೆಷ್ಟು ಜನ ಹೀಗೆ ಅಕ್ಷರ ಬಾರದವರಿರುವರೊ ! ಕನ್ನಡದ ಒಕ್ಕಲಿಗೆ ಕನ್ನಡ ಓದುಬರಹ ಬಾರದಿದ್ದಲ್ಲಿ ಅವರು ಒಕ್ಕುಲವಾಗುವುದೆಂದು ? ಕನ್ನಡದ ಸೊಂಪು ಇಂಪು ನಾಡ ಜನಕ್ಕೆ ತಿಳಿಯುವುದೆಂದು ? ಅವರ ಬಾಳು ನಯವಾಗುವುದೆಂದು ? ಕನ್ನಡದ ಕಂಪು ಇಳೆಗೆಲ್ಲ ಹರಡುವುದೆಂದು ?

"ಕನ್ನಡ ನಾಡ ಮಕ್ಕಳು ಒಕ್ಕಲು ಅಕ್ಕತಂಗಿಯರೆಲ್ಲ ನಾಡನುಡಿಯ ಕಲಿಯುವವರೆಗೂ, ಅವರು ಓದುಗರಾಗುವವರೆಗೂ ಇದೆಲ್ಲ ಕನಸು !

"ಕನ್ನಡವರಿಯದ ಕನ್ನಡಿಗರು ! ನಾಡಿನಲ್ಲಿ ಕಾಡುಜನ ! ಇಳೆಗೆಲ್ಲ ಸಾರಬೇಕು ನಮ್ಮ ನಾಚಿಕೆಗೇಡಿನ ಇರವನ್ನು!".

"ಯಾಕಮ್ಮಾ ಇಷ್ಟು ಕೋಪ?" ಎಂದು ಯಾರೋ ಮೆಲುದನಿಯಲ್ಲಿ ಕೇಳಿದಂತಾಯಿತು.

ಮಗುದೊಬ್ಬ : "ಹೌದು ಕಣ್ರೋ, ಇವ ಹೇಳಿದ್ದು ಸರಿ. ಇವನ ಚಿಕ್ಕಪ್ಪನ ಮಗ ಮಠಕ್ಕೆ ಹೋಗ್ತಾನೆ, ಇವಂಗೆ ತಿಳೀದೆ ಏನಣ್ಣ?"

ಹೀಗೆ ಆ ದಿನವೂ ಹಳ್ಳಿಯವರು ಬೆಳೆಯುತ್ತಿದ್ದ ಹುಲ್ಲಮೇಲೆ ನಡೆದು ಹೋದರು.

ಅವರು ಹೋದ ತುಸುಹೊತ್ತಿನಮೇಲೆ ಕನ್ನಡಮ್ಮ ಅದೇ ಬಳಿ ಬಂದು ಹುಲ್ಲಮೇಲೆ ನಡೆದು ಹೋಗುತ್ತಿದ್ದಳು. ಆಳೊಬ್ಬ ಬಂದು ಗದರಿಕೊಂಡ.

"ಯಾಕಪ್ಪ?"

"ಕಾಣೋಕಿಲ್ವೇನಮ್ಮ ಬೋಲ್ಡು?"

"ಬೋಲ್ಡು ಅಂದರೇನಪ್ಪ?"

"ಎಲ್ಲರೂ ಓದಿಕೊಳ್ಳಲಿ ಅಂತ ಅಲ್ಲಿ ನಿಲ್ಲಿಸಿಲ್ವ, ಆ ಬರೆದಿರೋ ಹಲಗೆ,"

"ಏನಪ್ಪ ಅಲ್ಲಿ ಬರೆದಿರುವುದು?"

"ಹುಲ್ಲಮೇಲೆ ನಡೀಬಾರದು ಅಂತ."

"ಹಾಗೆಂದು ಬರೆದಿದೆಯೇನು? ಅಲ್ಲಿ ಬರೆದಿರುವ ಮಾತು ನನಗೆ ತಿಳಿಯದಪ್ಪ. ಅದು ಯಾವ ಮಾತಪ್ಪ ?"

"ಇಂಗ್ರೀಜು"

"ಯಾವುದೋ ಕಾಣದ ಮಾತಿನಲ್ಲಿ ಬರೆದರೆ ನನಗೆ, ನನ್ನ ಮಕ್ಕಳಿಗೆ, ನಾಡಜನಕ್ಕೆ ಹೇಗೆ ಗೊತ್ತಾಗುತ್ತದೆ ಅಣ್ಣ? ನಾಡ ಜನ ಆಡುವ ಮಾತಿನಲ್ಲಿ ಬರೆದು ಇಡುವ ಹಾಗೆ ಒಡೆಯರಿಗೆ ತಿಳಿಸಪ್ಪ. ದೊಡ್ಡ ಉಪಕಾರವಾಗುತ್ತೆ."

"ಆಗಲವ್ವ ಹೋಗಿ."

ಇನ್ನೆರಡು ಮೂರು ದಿನವಾದ ಮೇಲೆ ದಿನವೂ ಬರುತ್ತಿದ್ದ ಹಳ್ಳಿಗರ ಗುಂಪು ಎಂದಿನಂತೆ ಬಯಲ ಮೇಲೆ ನಡೆದು ಹೋಗುತ್ತಿತ್ತು. ಕನ್ನಡಮ್ಮನೂ ಅಲ್ಲಿಯೇ ಬಳಿಯಲ್ಲಿ ಬರುತ್ತಿದ್ದಳು. ತಿಳಿಸುಹಲಗೆ ಮೊದಲು ಕಣ್ಣಿಗೆ ಬಿತ್ತು : "ಮಕ್ಕಳ ಆಟದ ಬಯಲು. ಬೆಳೆಯುವ ಹುಲ್ಲು. ಹುಲ್ಲಿನ ಮೇಲೆ ತಿರುಗಬೇಡಿ" –ಎಂದಿತ್ತು. ಕನ್ನಡಮ್ಮನಿಗೆ ಸಮಾಧಾನವಾಯಿತು. ಹಳ್ಳಿಯ ಮಂದಿ ಅಲ್ಲಿಯೇ ನಡೆದುಹೋಗುತ್ತಿದ್ದುದು ಕಂಡು ಆಶ್ಚರ್ಯವೂ ಆಯಿತು : 'ಏನು ದಿಟ್ಟ ಜನ. ಬರೆದದ್ದನ್ನೂ ನೋಡದೆ ಹುಲ್ಲ ಮೇಲೇ ನಡೆದು ಹೋಗುತ್ತಿದ್ದಾರೆ" ಎಂದುಕೊಂಡಳು.

ಕಾವಲುಗಾರ ಹಳ್ಳಿಯವರನ್ನು ನೋಡಿದ ; ಓಡಿಬಂದ ; ಒಬ್ಬನಿಗೆ ಬಿಗಿದ ; ಎಲ್ಲರೂ ಹಿಂದಿರುಗಿ ಓಡಿದರು. ಕಾವಲವನು ಆರ್ಭಟಿಸಿದ :

ಅಷ್ಟು ಹೊತ್ತಿಗೆ ತಿರುಕರ ತಂಡವೊಂದು ಆ ಮನೆಯ ಬಾಗಿಲ ಬಳಿ ಹಾಡುತ್ತ ನಿಂತಿತು. ಹಾಡಿನ ಗಲಭೆ ಕೇಳಿ ಒಳಗಿನಿಂದ ಹುಡುಗರು ಮಕ್ಕಳು ಓಡಿಬಂದರು ; ಮನೆಯ ಒಡಕಿಯೂ ಆಳೂ ಕೂಡಿಬಂದರು. ತಿರುಕರನ್ನು ಎಲ್ಲರೂ ಗದರಿಸಿಕೊಂಡರು ; ನಾಯಿ ಬಗುಳತೊಡಗಿತು ; ಗಿಣಿಯೂ ಗಳಹ ತೊಡಗಿತು. ತಿರುಕರ ಹಾಡಾಗಲಿ, ಮಕ್ಕಳ ಒಡತಿಯ ಬೈಗುಳ ಮಾತಾಗಲಿ, ಗಿಣಿಯ ಮಾತಾಗಲಿ–ಒಂದೂ ತಿಳಿಯಲಿಲ್ಲ ಕನ್ನಡಮ್ಮನಿಗೆ. ಅವಳಿಗೆ ಕಕ್ಕಾಬಿಕ್ಕಿಯಾಯಿತು ; ತನಗೇ ಹುಚ್ಚು ಹಿಡಿದಿರಬೇಕು ಎಂದು ಕೊಂಡಳು.

ಆಳು ತಾನು ತಂದಿದ್ದ ಹಿಡಿಯಕ್ಕಿಯನ್ನು ತಿರುಕರಿಗೆಲ್ಲ ಹಂಚಿ ಅವರನ್ನು ಕಳಿಸಿ, ತನು ಒಳಕ್ಕೆ ಹೋದ ; ಹುಡುಗರೆಲ್ಲ ಅವರ ಪಾಡಿಗೆ ಅವರು ತೋಟದ ಕಡೆಗೆ ಓಡಿದರು ; ಮನೆಯೊಡತಿಯೊಬ್ಬಳು ಮಾತ್ರ ನಿಂತಿದ್ದಳು ; ಕನ್ನಡಮ್ಮನನ್ನು ಏನೋ ಕೇಳಿದಳು. ಕನ್ನಡಮ್ಮನಿಗೆ ಅರ್ಥವಾಗದಿದ್ದುದು ತಿಳಿಯಿತು.

'ನೀನು ಯಾರಮ್ಮ, ಬಲು ಬಡವಿಯಂತೆ ಕಾಣುವೆ? ಬಡ ಮುತ್ತೈದೆ, ಶುಕ್ರವಾರ, ಏನಾದರೂ ಕೊಡೋಣ ಎಂದು ಕರಸಿದೆ" ಎಂದು ಕನ್ನಡದಲ್ಲಿ ಹೇಳಿದಳು.

ನಾಯಿ ಬಗುಳಿತು ಮತ್ತೆ. "ಸುಮ್ಮನಿರು–ಕೀಪ್ ಕ್ವೈಎಟ್ ಟಾಮಿ" ಎಂದು ಜಬ್ಬರಿಸಿದಳು ಒಡತಿ. ನಾಯಿ ಸುಮ್ಮನಾಯಿತು.

ಕನ್ನಡಮ್ಮ ಕೇಳಿದಳು : "ಟಾಮಿ ನಾಯಿಯ ಹೆಸರೋ ?"

"ಹೌದು" ಎಂದಳು ಒಡತಿ.

ಕನ್ನಡಮ್ಮ : "ನಾನು ಕೇಳಿಯೇ ಇಲ್ಲ ಇಂಥ ಹೆಸರನ್ನು ; ಯಾವುದೋ ಹೊಸ ಹೆಸರು."

ಒಡತಿ : "ಅದು ಇಂಗ್ಲಿಷ್ ಹೆಸರು."

ಕನ್ನಡಮ್ಮ : "ಓಹೋ, ಹಾಗೋ !"

ಅಷ್ಟು ಹೊತ್ತಿಗೆ ಮನೆಯಾಳೂ ಒಂದು ತಟ್ಟೆಯಲ್ಲಿ ಅಕ್ಕಿ, ಬೇಳೆ, ಹಣ್ಣು, ಕಾಯಿ, ಹೂವು ಎಲ್ಲ ಇಟ್ಟುಕೊಂಡು ಬಂದು ಒಡತಿಯ ಕೈಗೆ ಕೊಟ್ಟ. ಒಡತಿ ತಟ್ಟೆಯನ್ನು ಕನ್ನಡಮ್ಮನ ಕಡೆ ಹಿಡಿದಳು.

ಕನ್ನಡಮ್ಮ ಹೇಳಿದಳು : "ನಾನು ತಿರುಕಿ ಎಂದು ತಿಳಿದು ನನ್ನನ್ನು ಒಳಕ್ಕೆ ಕರೆದಿರಲ್ಲವೆ ? ಹೌದಮ್ಮ, ನಾನು ತಿರುಕಿ. ಈಗ ಬಹು ಕಾಲದಿಂದ ತಿರುಪೆಯಲ್ಲೇ ನನ್ನ ಬಾಳು ಸವೆಯುತ್ತಿದೆ. ಆದರೆ, ದುಡ್ಡು, ತಿಂಡಿ ತೀರ್ಥ ಇವುಗಳಿಗಾಗಿ ನಾನು ತಿರುಪೆ ಬೇಡುತ್ತಿಲ್ಲ. ನನ್ನದು ಒಂದೇ ಭಿಕ್ಷೆ–ಕನ್ನಡದ ಭಿಕ್ಷೆ. ಅದನ್ನು

"ಕೋಪ! ಕೋಪವೇ? ಕೋಪವಲ್ಲ ಇದು, ಕೋಪವಲ್ಲ. ಕಡು ಕೊರಗಿನಿಂದ ಕಾದು ಹೊರಬಂದ ಎದೆಯುಸಿರ ತಾಪ ; ಎದೆಯ ಬೇಗುದಿ, ಬಿಸುಸುಯ್ಲು."

**ಉಸಿರು ೫**

ಕನ್ನಡಮ್ಮನಿಗೆ ಪಟ್ಟಣವಾಸ ಆಗಲೇ ಬೇಸರವಾಗುತ್ತ ಬಂತು. ತನ್ನ ಮಲೆನಾಡಿಗೆ, ಕಾಡಿಗೆ, ಹಳ್ಳಿಗಳ ಬೀಡಿಗೆ, ಕನ್ನಡದ ನೆಲೆವೀಡಿಗೆ ಹಿಂದಿರುಗಬೇಕೆಂಬ ಬಯಕೆ ಹತ್ತಿತ್ತು. ಆದರೂ ಪಟ್ಟಣದ ಮಕ್ಕಳೂ ತನ್ನ ಮಕ್ಕಳೇ ಅಲ್ಲವೇ ? ಅವರನ್ನೂ ಕಣ್ತುಂಬ ನೋಡಿ ನಲಿಯಬೇಕೆಂಬ ಆಸೆಯೂ ಇಂಗಿರಲಿಲ್ಲ ; ತನ್ನ ಕೊರಗಿಗೆ ಕಾರಣವಾದ ನೋಟಗಳನ್ನು ಕಂಡೂ ಅವಳ ಆಸೆ ಕುಗ್ಗಿರಲಿಲ್ಲ. ಎಲ್ಲವೂ ಹೀಗೆಯೇ ಇರಲಾರದು, ಮಾಗಿಯ ಕೊರಗು ನಿಂತೀತು, ಕನ್ನಡ ವಸಂತೋತ್ಸವ ಬಂದೀತು ಎಂಬ ಸವಿಗನಸು ಕಾಣುತ್ತ ಕನ್ನಡಮ್ಮ ಊರ ಹೆದ್ದಾರಿಯೊಂದರಲ್ಲಿ ತಲೆಬಾಗಿ, ಮೌನದಿಂದ, ನಿಧಾನವಾಗಿ ನಡೆದು ಹೋಗುತ್ತಿದ್ದಳು. ನೋಡಲು ತಿರುಕಿಯಂತೆ ಕಾಣುತ್ತಿದ್ದಳು.

ಯಾರೋ ಕೂಗಿದಂತಾಯಿತು, ಹಿಂದಿರುಗಿ ನೋಡಿದಳು. ಒಂದು ಮನೆಯ ಮುಂದೆ ನಿಂತು ಒಬ್ಬ ಆಳು ಕರೆಯುತ್ತಿದ್ದ. ಮನೆ ದೊಡ್ಡದು, ಸೊಗಸಾದ್ದು, ಸಿರಿವಂತರದು.

ಕನ್ನಡಮ್ಮ ಕೂಗಿದ ಕಡೆ ಹೋಗುವವಳು ; ಅಲ್ಲಿಗೂ ಹೋದಳು. ದೊಡ್ಡ ನಾಯಿಯೊಂದು ಬಗುಳಿತು. ಅವಳ ಪುಣ್ಯಕ್ಕೆ ಅದನ್ನು ಕಟ್ಟಿ ಹಾಕಿತ್ತು.

ಆಳು ತೆಲುಗಿನಲ್ಲಿ "ಸ್ವಲ್ಪ ನಿಂತಿರಮ್ಮ" ಎಂದು ಹೇಳಿ ಒಳಕ್ಕೆ ಹೋದ.

ನಾಯಿ ಬಗುಳತ್ತಲೇ ಇತ್ತು. 'ಕೀಪ್ ಕ್ವೈಎಟ್, ಟಾಮಿ, ಕೀಪ್ ಕ್ವೈಎಟ್' ಎಂಬ ತನಗೆ ಅರ್ಥವಾಗದ ನುಡಿಗಳು ಕೇಳಿಬಂದುವು. ಕನ್ನಡಮ್ಮನಿಗೆ. ಸ್ವರ ಇನಿದಾಗಿತ್ತು. ಇಂಚರ ಕೇಳಿಬಂದ ಕಡೆಗೆ ತಿರುಗಿದಳು : ಪಂಜರದಲ್ಲಿ ಗಿಣಿ, ಹಚ್ಚಹಸುರು ಗಿಣಿ, ತನ್ನ ಮುದ್ದು ಗಿಣಿ ! ಕನ್ನಡವಕ್ಕಿ ! ಕನ್ನಡಮ್ಮ ಕನ್ನಡವಕ್ಕಿಯ ಬಳಿಸಾರಿದಳು.

"ಹೆಲೋ, ಹೌ ಡು ಯು ಡು.........ಏಮಯ್ಯ, ಎಪ್ಪುಡು ವಸ್ತಿವಿ.....ಸುನೋ ಸುನೋ ಬನಕೇ ರಾಣಿ.......(ನಾಯಿ ಬಗುಳಿತು) ಟಾಮಿ, ಕೀಪ್ ಕ್ವೈಎಟ್.......ಜಾವ್, ಜಾರೆ. ಗೆಟ್ ಅವೇ.........." ಮುಂತಾಗಿ ತಡೆಯಿಲ್ಲದೆ ಗಳಹತೊಡಗಿತು ಕನ್ನಡವಕ್ಕಿ!

ಕನ್ನಡವಕ್ಕಿ ಹೇಳಿದ ಒಂದು ಮಾತೂ ಕನ್ನಡಮ್ಮನಿಗೆ ಅರ್ಥವಾಗಲಿಲ್ಲ. ಅವಳಿಗೆ ಆಶ್ಚರ್ಯವಾಯಿತು.

"ಹೆಣ್ಣುಮಕ್ಕಳ ಕೈಲೂ ಹೆರ ನುಡಿಯ ಹೊತ್ತಗೆ ಓಡಾಡುತ್ತಿರುವ ಈ ಕಾಲದಲ್ಲಿ, ಕನ್ನಡ ಹೊತ್ತಗೆಯನ್ನೋದುವ ಕನ್ನಡ ಪುತ್ರನನ್ನು ಕಂಡರೆ ಎಷ್ಟು ಆನಂದವಾಗುತ್ತದೆ !" ಎಂದು ಮನಸ್ಸಿನಲ್ಲಿಯೇ ಹಿಗ್ಗುತ್ತ, ಮತ್ತೆ ಕೇಳಿದಳು :

"ಪುಸ್ತಕದ ಹೆಸರೇನು, ಮಗು?"

"ರಾಮಾಶ್ವಮೇಧ."

"ನನ್ನ ಮುದ್ದುಗುವರ ಮುದ್ದಣನ ರಾಮಾಶ್ವಮೇಧವೇ?"

"ಹೌದು, ತಾಯಿ" ಎಂದು ಬೆರಗಾದ ತರುಣ. ಈ ಹರುಕು ಸೀರೆಯ ಹಳೆಗಾಲದ ಮುತ್ತೈದೆಗೆ ಕನ್ನಡ ಕಾವ್ಯಗಳ ಪರಿಚಯ ಹೇಗೆ ಆಗಿರಬಹುದೆಂದು ಅವನ ಬೆರಗು. "ಕ್ಷಮಿಸಿ, ತಾಯಿ. ನೀವು ಪಂಡಿತೆಯೆಂಬುದು ನನಗೆ ತಿಳಿದಿರಲಿಲ್ಲ. ಹಳ್ಳಿಯ ಹೆಂಗಸೆಂದು ಹಾಗೆ ಮಾತಾಡಿದೆ" ಎಂದು ತರುಣ ನಮ್ರನಾಗಿ ನುಡಿದ.

"ನಾಡಮಕ್ಕಳೆಲ್ಲ ನಿನ್ನಂತೆ ನುಡಿಯುವುದು ಕಲಿತರೆ ನಾಡು ನಂದನವನವಾದೀತು ! ನಾನೇನೊ ಪಂಡಿತೆಯಲ್ಲ. ಪಂಡಿತ ಪಂಡಿತೆಯರ, ಕವಿ ಕವಯಿತ್ರಿಯರ, ನುಡಿಯ ದುಡಿಮೆಯ ಫಲ ಯಾವ ನಾಡೊಕ್ಕಲಿಗೆಲ್ಲ ದೊರಕಬೇಕಾಗಿದೆಯೋ, ಆದರೆ ಯಾವ ನಾಡೊಕ್ಕಲ ನಾಲಗೆಯ ಮೇಲೆ ನಲಿಯದೆ ನಗರಗಳ ಕೆಲಮಂದಿಯ ಕೈಯೊಡವೆಯಾಗಿ ಕಳೆಗುಂದುತ್ತಿದೆಯೊ ಆ ನಾಡೊಕ್ಕಲ ಪ್ರತಿನಿಧಿ ನಾನು, ಅವರ ಉಸಿರಲರಿಯದ ಆಸೆಗಳನ್ನೆಲ್ಲ ಬಸಿರಿನಲ್ಲಿ ಹೊತ್ತು ಕೊರಗುತ್ತ ತಿರುಗುತ್ತಿರುವ ಅವರ ತಾಯಿ ನಾನು! ನನ್ನ ಅದೃಷ್ಟವಂತ ಮಕ್ಕಳು ಅದೃಷ್ಟಹೀನ ಮಕ್ಕಳ ಕಡೆಗೆ ಕಣ್ಣೆತ್ತಿ ನೋಡುತ್ತಿಲ್ಲವಲ್ಲ ! ಅಯ್ಯೊ, ಅಕ್ಕರವರಿಯದ ನಾಡೊಕ್ಕಲಿಗೆಲ್ಲ ಅಕ್ಕರವ ಕಲಿಸಬಾರದೆ. ಅಕ್ಕರೆಯೆರೆಯ ಬಾರದೆ? ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳೆಂದು ಹೆಸರಾಗಿದ್ದ ನನ್ನ ಮಕ್ಕಳಿಂದು ಕಾವ್ಯ ಬರೆಯುವುದಿರಲಿ, ಬರೆದ ಕಾವ್ಯಗಳ ಹೆಸರು ಕೂಡ ಕೇಳಿ ಅರಿಯರು. ಆ ಬೆಳ್ಳಕ್ಕರಿಗರು ಇನ್ನು ಓದುವ ಮಾತೆಲ್ಲಿಯದು, .......ರಾಮಾಶ್ವಮೇಧ! ಎಂಥ ಮುದ್ದಾದ ಕಾವ್ಯ ! ಇದರ ಸೊಗಸನ್ನು ನಾಡ ಮಕ್ಕಳೆಲ್ಲ ತಾವಾಗಿ ಸವಿಯಲಾಗುವ ಕಾಲವೆಂದಿಗೆ ಬರುವುದೊ? .......ಮಗೂ! ತಡೆಯಲಾರದೆ ನನ್ನ ಕೊರಗನ್ನೆಲ್ಲ ತೋಡಿಕೊಂಡೆ ; ನಿನಗೆ ಬೇಸರವಾಗಿರಬಹುದು; ನನಗಂತೂ ಬೇಸರವಾಗಿದೆ. ರಾಮಾಶ್ವಮೇಧವನ್ನು ಓದುವೆಯಾ ಕೇಳುತ್ತೇನೆ?"

ತರುಣನ ಕರುಳು ಕಿವಿಚಿದಂತಾಯಿತು ಈ ನೊಂದೆದೆಯ ನುಡಿಗಳ ಕೇಳಿ. ತನ್ನ ತಾಯೇ ನುಡಿಯುತ್ತಿರುವಂತೆ ಅವನಿಗೆ ತೋರಹತ್ತಿತು. ತಾಯ ಕನಸು ನನಸಾಗಲು ತನ್ನ ಕೈಲಾದುದನ್ನು ಮಾಡುವುದಾಗಿ ತಾಯ ಅಡಿಗಳನ್ನು

ನೀಡಮ್ಮ. ಕನ್ನಡ ನಾಡಿನಲ್ಲಿ ಕನ್ನಡದ ಭಿಕ್ಷೆ ಬೇಡುವ ದುರ್ಗತಿ ಬಂದಿದೆ ನನಗೆ. ಈ ನಾಡು ನನ್ನದು, ನ್ನನ ನಾಡಿನ ಹಿರಿಯೂರು ಇದು. ನನ್ನ ನುಡಿ ನೆಲೆತಪ್ಪಿದೆ ಇಲ್ಲಿ. ತಿರುಕರು ಕೂಡ ಕನ್ನಡ ಮಾತಾಡುವುದಿಲ್ಲ ಇಲ್ಲಿ. ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಎಂಥ ದುರ್ಭಿಕ್ಷ ! ನಾಡವರ ನಾಯ ಹೆಸರು ಕೂಡ ಕನ್ನಡವಲ್ಲ ! ನನ್ನ ಕನ್ನಡವಕ್ಕಿ ಕೂಡ ಕನ್ನಡ ಮಾತಾಡದು. ಇದಕ್ಕಿಂತ ಅನ್ಯಾಯ ಉಂಟೆ ?"

"ಸಾಕಮ್ಮ ನಿನ್ನ ಪುರಾಣ. ಇವಳಿಗೆ ಭಿಕ್ಷೆ ಬೇಡವಂತೆ. ಒಳಕ್ಕೆ ತೆಗೆದುಕೊಂಡುಹೋಗೊ" ಎಂದು ಹೇಳಿ ಒಡತಿ ಒಳಕ್ಕೆ ಹೋದಳು. ಆಳು 'ಹೊರಕ್ಕೆ ನಡೆ' ಎಂದು ಸನ್ನೆಮಾಡಿದ. ಕನ್ನಡಮ್ಮ ಮರುಮಾತಾಡದೆ ತನ್ನ ದಾರಿ ಹಿಡಿದುಹೋದಳು. ಹೋಗುತ್ತಿರಲು ಕನ್ನಡವಕ್ಕಿಯ ನೆನಪು ಬಂತು. ಅದನ್ನು ಕುರಿತು ಕೊರಗಿದಳು :

"ಅಯ್ಯೋ, ನಿರ್ಭಾಗ್ಯ ಕನ್ನಡವಕ್ಕಿ ! ಪಂಜರದಲ್ಲಿ ಸೆರೆಯಾಗಿ, ಹೆರರ ಹಂಗಿಗೆ ಸಿಲುಕಿ ನುಡಿಯ ಮೋಹಕ್ಕೆ ಒಳಗಾಗಿ, ನಿನ್ನ ನಲ್ ನುಡಿಯನ್ನು ಮರೆಯುತ್ತಿರುವೆ. ನಿನ್ನ ಬಿಡುಗಡೆ ಎಂದು ? ನೀನು ಮನಬಂದಂತೆ ನಾಡಿನಲ್ಲೆಲ್ಲ ಹಾರಾಡುತ್ತ ಕನ್ನಡ ಪಂಡಿತವಕ್ಕಿಯಾಗಿ ನಾಡ ಮಕ್ಕಳಿಗೆಲ್ಲ ನುಡಿ ಕಲಿಸುವುದೆಂದು?"

"ಎಂದು? ಎಂದು?" ಎಂಬ ಪ್ರಶ್ನೆ, ಅವಳ ಮನಸ್ಸಿನಲ್ಲಿ ಮಿಡಿಯುತ್ತಲೇ ಇತ್ತು.

### ಉಸಿರು ೬

ಶೃಂಗಾರತೋಟದ ಕೊಳವೊಂದರ ಕೆಲದ ಕಲ್ಲುಬಂಡೆಯ ಮೇಲೆ, ಹೊಂಗೆಯ ಮರದಡಿಯಲ್ಲಿ ತರುಣನೊಬ್ಬನು ಕುಳಿತು ಪುಸ್ತಕದೋದಿನಲ್ಲಿ ಮಗ್ನನಾಗಿದ್ದ.

ಕನ್ನಡಮ್ಮ ಅಲ್ಲಿ ಹೋಗುತ್ತಿದ್ದವಳು ಓದುತ್ತ ಕುಳಿತಿದ್ದ ತರುಣನನ್ನು ಕಂಡು ಮುಂದೆ ಹೋಗದೆ ನಿಂತಳು. ತರುಣನಲ್ಲಿ ಅವ್ಯಾಜವಾದ ಪುತ್ರವಾತ್ಸಲ್ಯವುಕ್ಕಿ, ಅವನ ಬಳಿಸಾರಿ ನಿಂತಳು.

ನಿಂತು ಕೇಳಿದಳು : "ಏನು ಮಗು, ನೀನು ಓದುತ್ತಿರುವುದು?"

"ಪುಸ್ತಕ, ತಾಯಿ."

ಹಳ್ಳಿಯ ಹೆಂಗಸಂತೆ ಕಂಡ ಕನ್ನಡಮ್ಮನಿಗೆ ಪುಸ್ತಕವೆಂಬ ಪದಾರ್ಥದ ವಸ್ತುಜ್ಞಾನವಿಲ್ಲವೆಂಬ ಭಾವನೆಯಿಂದ ತರುಣ ಹಾಗೆಂದ, ಪಾಪ!

"ಪುಸ್ತಕ ಎನ್ನುವುದು ಗೊತ್ತು, ಮಗು ; ಯಾವ ಪುಸ್ತಕ ?"

"ನಿಮಗೆ ಹೇಳಿದರೆ ತಿಳಿಯುತ್ತದೆಯೋ ಇಲ್ಲವೊ ; ಒಂದು ಕನ್ನಡ ಪುಸ್ತಕ."

"ಹೌ ನೈಸ್ ದಿ ಸ್ವಾನ್ಸ್, ಮೈ ಲವ್! (ಹಂಸಗಳು ಎಷ್ಟು ಚೆನ್ನಾಗಿವೆ, ನನ್ನೊಲವೆ!)" ಎಂದಳು ಯುವತಿ–ಪೂರ್ತಿ ಇಂಗ್ಲಿಷಿನಲ್ಲಿ.

"ಅವು ಸ್ವಾನ್ (ಹಂಸ) ಅಲ್ಲ ಸ್ವೀಟ್‌ಹಾರ್ಟ್ (ಇನಿಯೆ). ದೇ ಆರ್ ಡಕ್ ಮೈ ಡಿಯರ್ (ಅವು ಬಾತುಕೋಳಿ, ಪ್ರಿಯೆ)" ಎಂದು ಬೆರಕೆ ಮಾತಿನಲ್ಲಿ ಉತ್ತರಕೊಟ್ಟ ಯುವಕ.

ಅವರು ಆಡಿದ ಮಾತುಗಳು ಪೂರ್ತಿಯಾಗಿ ಕನ್ನಡಮ್ಮನಿಗೆ ಅರ್ಥವಾಗದಿದ್ದರೂ ಅವರು ಕನ್ನಡ ಮಕ್ಕಳೆಂದು, ಗಂಡ ಹೆಂಡಿರೆಂದು, ಸ್ಪಷ್ಟವಾಯಿತು.

ಅಡಿಗಡಿಗೆ ಕಿವಿಗೆ ಬಿದ್ದ ತನಗರ್ಥವಾಗದ ನುಡಿಗಳ ಅರ್ಥವೇನೆಂದು ತನಗೆ ಕಾವ್ಯವೋದಿದ ತರುಣನನ್ನು ಕುತೂಹಲದಿಂದ ಕೇಳಿದಳು ಕನ್ನಡಮ್ಮ.

ತರುಣ ವಿವರಿಸಿ ಹೇಳಿದ : "ನವನಾಗರಿಕತೆಯ ತರುಣದಂಪತಿಗಳು, ಪ್ರಣಯಿಗಳು, ಒಬ್ಬರನ್ನೊಬ್ಬರು ಸಂಭೋಧಿಸುವ ಪ್ರೇಮಸೂಚಕ ಇಂಗ್ಲಿಷ್ ಪದಗಳು" ಎಂದು.

ಕನ್ನಡಮ್ಮ ಕಡುನೊಂದು ನುಡಿದಳು :

"ಮಗೂ, ನೋಡಿದೆಯಾ ಕನ್ನಡ ಮಕ್ಕಳ ಕನ್ನಡತನವನ್ನು ! ಹೊರಗೆ ಕನ್ನಡತನವಿಲ್ಲ, ಒಳಗಿಲ್ಲ ; ನಡೆಯಲ್ಲಿಲ್ಲ, ನುಡಿಯಲ್ಲಿಲ್ಲ. ಮುದ್ದಣ ಮನೋರಮೆಯರ ಸರಸ ಸಲ್ಲಾಪದ ಸವಿನುಡಿ ಕೇಳಿದ ಕಿವಿ ಒಡನೆಯೇ ಈ ಕೃತಕ ಕರ್ಕಶವಾದ ಮಾತುಗಳನ್ನು ಕೇಳಬೇಕಾಯಿತೆ? ಮೊನ್ನೆ ಮೊನ್ನೆ ಕಾಲಿಟ್ಟ ಹೊರನುಡಿ ಹೆಂಗಳ ಹೃದಯವನ್ನೂ ಸೂರೆಗೊಂಡಿತೆ? ನನ್ನ ನಾಡ ಗಂಡಹೆಂಡಿರು, ನಲ್ಲನಲ್ಲೆಯರು, ಒಬ್ಬರನ್ನೊಬ್ಬರು ಒಲವಿನಿಂದ ಕರೆಯಲು ಕನ್ನಡದ ನಲ್ನುಡಿಗಳಿಲ್ಲವೆ ? ಮುದ್ದಣ ಎನಿತೊಂದು ಅಂತಹ ಮುದ್ದು ಮಾತುಗಳನ್ನು ಬಳಸಿ ತೋರಿಸಿದ್ದಾನೆ!–ರಮಣೀ, ದೇವೀ, ಎನ್ನರಸಿ, ಬಾಲೆ, ಬಾಲೇಂದುಫಾಲೆ, ಪೆಣ್ಮಣಿ, ಎನ್ನ ರನ್ನಗೈಪಿಡಿ, ಮೋಹನಾಂಗಿ, ಎನ್ನ ನಿಚ್ಚದ ಪೂಜೆಯ ಕಟ್ಟುಚ್ಚಿನ ಪ್ರಾಣಲಿಂಗಮೆ, ಒಚ್ಚೇರೆಗಣ್ಣ ಪೆಣ್ಣೆ, ಎನ್ನ ಸಿಂಗರದ ಸಿರಿಯೆ, ಎನ್ನ ಕೈಗಳಸಮೆ, ಎನ್ನ ಕುಲದೇವಿ–ಓ, ತನ್ನ ಮುದ್ದಿನ ಮನೋರಮೆಯನ್ನು ಎಷ್ಟು ಒಲವುನುಡಿಗಳಿಂದ ಕರೆದರೂ ತಣಿವಿಲ್ಲ ಮುದ್ದಣನಿಗೆ. ಅಂತೆಯೆ ಮನೋರಮೆಯೂ ತನ್ನ ಮನೋವಲ್ಲಭನನ್ನು ಎಷ್ಟು ಅಕ್ಕರೆಯಿಂದ ಕರೆಯುತ್ತಾಳೆ!– ಎನ್ನೆರೆಯ, ನಲ್ಲ, ಎನ್ನೊಡೆಯ, ರಮಣ, ಆಣ್ಮ....ಮಾತು ಕಡಮೆಯಾದರೂ ಒಲವು ಕಡಮೆಯಲ್ಲ : ತುಂಬಿದ ಒಲವನ್ನು ತಡೆದು ಹಿಡಿದಿದೆ ಲಜ್ಜೆ. ಆದರ್ಶ

ಮುಟ್ಟಿ ಪ್ರತಿಜ್ಞೆ ಕೈಗೊಂಡ. ತಾಯಕೋರಿಕೆಯಂತೆ ಕಾವ್ಯವನ್ನು ಓದತೊಡಗಿದ. ಎರಡು ಮೂರು ಗಂಟೆಗಳ ಕಾಲ ನಿಮಿಷ ಎಂಬಂತೆ ಕಳೆಯಿತು. ಮುದ್ದಣನ ರಸವಾಹಿನಿ ತಾಯಿಗೆ ತಂಪೂಡಿತು : ಕ್ಷಣಕಾಲ ಅವಳ ಕೊರಗು ಮರೆಯಾಗಿತ್ತು.

## ಉಸಿರು ೭

ಕನ್ನಡಮ್ಮನಿಗೆ ಕೊರಗುವುದೇ ನಿತ್ಯದ ಬಾಳು!

ಎಲ್ಲಿಯ ಶಾಂತಿ, ಹೇಗೆ ದೊರಕಬೇಕು ಶಾಂತಿ ?–ಕ್ಷಣಕ್ಷಣಕ್ಕೆ ಕೊರಗನ್ನು ಕೆರಳಿಸುವ ನೋಟಗಳೇ, ನುಡಿಗಳೇ, ಆಕೆಯ ಕಣ್ಣಿಗೆ ಬೀಳುತ್ತಿರಬೇಕಾದರೆ, ಕಿವಿಗೆ ಕೇಳುತ್ತಿರಬೇಕಾದರೆ?

ತನ್ನ ಕೋರಿಕೆಯಂತೆ 'ರಾಮಾಶ್ವಮೇಧ'ದ ಓದು ಸಾಗಿ ಮುಗಿಯಲು, ತಾಯಿ ತೃಪ್ತಿಸೂಚಕವಾದ ನಿಟ್ಟುಸಿರೊಂದನ್ನು ಬಿಟ್ಟು, ಕಾವ್ಯ ಓದಿ ತನಗೆ ಸಂತಸವೂಡಿ ಕನ್ನಡ ಸೇವೆಯ ದೀಕ್ಷೆ ಕೈಕೊಂಡಿದ್ದ ತನ್ನ ಮುದ್ದುಕುವರನನ್ನು ಹರಸಿ ಮೇಲಕ್ಕೇಳುವುದರಲ್ಲಿದ್ದಳು. ಅಷ್ಟರಲ್ಲಿ ಆಯೆಡೆಗೆ ಬಂದ ಯುವಕ ಯುವತಿಯರ ನೋಟ ತಾಯನ್ನು ಕೆಲಹೊತ್ತು ಮೂಕಳನ್ನಾಗಿ ಮಾಡಿ ಬಿಟ್ಟುವು.

ಯುವಕ ಯುವತಿಯರ ವೇಷಭೂಷಣ ತೀರ ಪರಕೀಯವಾಗಿ ಕಂಡುವು ಕನ್ನಡಮ್ಮನಿಗೆ. ಯುವಕನ ಹ್ಯಾಟು, ಬೂಟು, ಕೋಟು, ಬಾಯ ಸಿಗರೇಟು ; ಯುವತಿಯ ಕವಲು ಹೆರಳು, ಕೆದರಿದ ಮುಂಗುರುಳು, ಅರಿಸಿನಕ್ಕೆ ಬದಲು ಬೂದಿಯಂತೆ ಮುಖಚೂರ್ಣ ಬಳಿದ ಮುಖ ; ಕುಂಕುಮವಿಲ್ಲದ ಬರಿ ಹಣೆ ; ಕೃತಕವಾಗಿ ತಿದ್ದಿದ ಹುಬ್ಬು ; ಕಣ್ಣಿನ ಬಿಸಿಲುಕನ್ನಡಕ ; ಒಂದು ಕೈಯ ಬಳೆ, ಇನ್ನೊಂದು ಕೈಯ ಗಡಿಯಾರ ; ಒಂದು ಕೈಲಿ ತೊಗಲ ಕೈಚೀಲ ; ಇನ್ನೊಂದು ಕೈಲಿ ಮೋಟು ಕೊಡೆ ; ಕಾಲಿಗೆ ಎತ್ತರಹಿಮ್ಮಡಿಯ ಜೋಡು ; ಇವೆಲ್ಲ ಪ್ರಸಾಧನದ ಪರಾಕಾಷ್ಠೆಯಾಗಿ, ಮೈಯೆಲ್ಲವನ್ನೂ ಮಸುಕುಮಸುಕಾಗಿ ಕಾಣಗೊಡುತ್ತಿದ್ದ ನವಿರುಬಟ್ಟೆಯ ಸೀರೆ, ತೋಳಿಲ್ಲದ ಕುಪ್ಪಸ !

ಕನ್ನಡಮ್ಮ ಕೊಂಚ ಹೊತ್ತು ತಲೆ ತಗ್ಗಿಸಿಬಿಟ್ಟಳು.

"ನನ್ನ ನಾಡಿನ ಹೊಸ ಕಾಲದ ಮುತ್ತೈದೆಯಿವಳು !" ಎಂದು ನಿಟ್ಟುಸಿರು ಬಿಟ್ಟು, "ಕಾಲಮಹಿಮೆ ! ಹೋಗಲಿ. ಇಷ್ಟಕ್ಕೂ ಹೊರಗಿನ ಉಡುಗೆ ತೊಡಿಗೆ ಹೇಗಿದ್ದರೇನು ? ನಡೆ ನುಡಿ ಸರಿಯಾಗಿದ್ದರೆ ಸಾಕು" ಎಂದು ಸಮಾಧಾನ ತಂದುಕೊಂಡಳು ತಾಯಿ.

ಕೊಳದಲ್ಲಿ ಎಡೆಯಾಡುತ್ತಿದ್ದ ಬಾತುಕೋಳಿಗಳನ್ನು ನೋಡಿ,

ಹಾಗೆ ಮಾಡುವುದೇ ನ್ಯಾಯವೆಂದು ನನ್ನ ನಂಬಿಕೆ. ಆದರೆ, ನೀವು ತಂದೆಯ ಮಾತು ಕೇಳಲೇ ಬೇಕು ಎನ್ನುತ್ತೀರಿ."

"ಮಗೂ, ನೀನು ಹೇಳುವುದು ನ್ಯಾಯ. ಆದರೂ ನಿಮ್ಮ ತಂದೆಯ ಮಾತನ್ನು ಮನ್ನಿಸಬೇಕಾದ್ದು ನಿನ್ನ ಕರ್ತವ್ಯ."

"ತಂದೆಯ ಮಾತನ್ನು ನಡಸಹೋಗಿ, ಅನ್ಯಾಯವನ್ನು, ಅಧರ್ಮವನ್ನು ಆಚರಿಸುವುದು ತರವೆ?"

"ಅಲ್ಲ"

"ಹಾಗಾದರೆ ಏನು ಮಾಡಬೇಕು ?"

"ತಂದೆಯ ಮನಸ್ಸನ್ನು ನಿನ್ನ ಕಡೆಗೆ ಒಲಿಸಿಕೊಳ್ಳಬೇಕು."

"ಹಾಗೆ ಮಾಡಲು ನನಗೆ ಆಗದು. ನಮ್ಮ ತಂದೆ ನನ್ನ ಬಾಯಿ ಮುಚ್ಚಿಸಿಬಿಡುತ್ತಾರೆ. ಎದಿರು ವಾದಿಸಹೋಗಿಯೇ ಏಟು ತಿಂದದ್ದು."

ತಿಳಿವಳಿಕೆಯಿಲ್ಲದ ಕನ್ನಡ ತಂದೆತಾಯ್ಗಳನ್ನು ಕಂಡು, ಕನ್ನಡ ಮಕ್ಕಳ ಅಸಹಾಯಸ್ಥಿತಿ ಅರಿತು, ಕಡುನೊಂದಳು ಕನ್ನಡಮ್ಮ.

"ನಿನ್ನ ಪರವಾಗಿ ನಾನು ಎರಡು ಮಾತು ಹೇಳುತ್ತೇನೆ, ನಡೆ ಮಗು" ಎಂದು ಕನ್ನಡಮ್ಮ ಆ ಹುಡುಗನನ್ನು ಕೆರದುಕೊಂಡು ಅವನ ಮನೆಯೊಳಕ್ಕೆ ಹೋದಳು.

ಕನ್ನಡಮ್ಮ ಮನೆಯಾತನ ಕೈಲಿ ವಾದಿಸಹೋದಳು. ಬೀದಿಯಲ್ಲಿ ಹೋಗುವ ಹೆಂಗಸಿನ ಮಾತಿಗೆ ಬೆಲೆ ಕೊಡುವವರು ಯಾರು ? ಕನ್ನಡ ತಾಯ ಮೊರೆ ಬೋರೆಗಲ್ಲಮೇಲೆ ಮಳೆಗರೆದಂತಾಯ್ತು. ತಗ್ಗಿದ ಮುಖದೊಡನೆ, ಕುಗ್ಗಿದ ಹೃದಯದೊಡನೆ, ಹೊರಕ್ಕೆ ಬಂದಳು ಕನ್ನಡಮ್ಮ.

"ನಾಡಿನ ಮನೆ ಮನೆಯಲ್ಲಿಯೂ ಕನ್ನಡದ ಮಮತೆ ಪ್ರಜ್ವಲಿಸುವವರೆಗೂ ನನ್ನ ನಾಡು ಬೆಳಗದು, ನುಡಿ ಬೆಳಗದು" ಎಂದು ನೊಂದು ನುಡಿದಳು ಕನ್ನಡಮ್ಮ. ಗಾಳಿಯಲ್ಲಿ ತೇಲಿಹೋದುವು ಅವಳ ನುಡಿ.

## ಉಸಿರು ೯

ಕನ್ನಡದ ಮನೆಯೊಂದರಲ್ಲಿ ಮದುವೆಯೊಸಗೆ. ಹೊರಗೆ ಮಂಗಳ ವಾದ್ಯ ಮನೋಹರವಾಗಿ ಬಾಜಿಸುತ್ತಿತ್ತು. ಒಳಗೆ ನಂಟರಿಷ್ಟರ ಕೂಟ ನೆರೆದಿದ್ದವರ ಕಣ್ಮನಗಳಿಗೆ ಹಬ್ಬವೊದಗಿಸಿತ್ತು. ನೋಟದ ನಾಯಕ ನಾಯಿಕೆಯರಾಗಿ ಹಸೆಮಣೆಯ ಮೇಲೆ ಮದುವೆಯ ಗಂಡು ಹೆಣ್ಣು ಎಲ್ಲರ ಹರಕೆ ಹೊತ್ತು ನಗೆಗಡಲ ನಡುವೆ ತಮ್ಮದೇ ಆದ ಪ್ರೇಮನೌಕೆಯಲ್ಲಿ ತೇಲುತ್ತ ಕುಳಿತಿದ್ದರು.

ಕನ್ನಡ ಮಹಿಳೆ! ನಾಡಿನ ಒಬ್ಬೊಬ್ಬ ಕನ್ನಡಿಗ ಕನ್ನಡಿತಿಯೂ ಮುದ್ದಣ ಮನೋರಮೆಯರಾಗುವವರೆಗೂ ನನ್ನ ನುಡಿ ಮುಂದಾಗದು, ನಾಡು ಒಂದಾಗದು........ಮಗೂ, ನನ್ನ ನಿರಾಶೆಯ ಮಾತು ನಿನಗೆ ರುಚಿಸದಿರಬಹುದು. ಆದರೆ, ಮಗೂ, ಕೊರಗು ನಿರಾಶೆಗೆ ಎಡೆಗೊಡದೆ ಆಶೆಗೆ ಎಡೆಗೊಟ್ಟೀತೆ?"

## ಉಸಿರು ೮

ಕನ್ನಡಮ್ಮ ಎಂದಿನಂತೆ ಬೀದಿಯಲ್ಲಿ ನಡೆದುಹೋಗುತ್ತಿದ್ದಾಗ ನಡು ಹಾದಿಯಲ್ಲಿ ನಿಂತು ಅಳುತ್ತಿದ್ದ ಹುಡುಗನನ್ನು ಕಂಡಳು. ಎಲ್ಲ ಮಕ್ಕಳೂ ತನ್ನ ಮಕ್ಕಳೆ : ತಾಯ್‌ಕರುಳು ಚುರಕ್ ಎನ್ನಲು, ನಿಂತು ಹುಡುಗನನ್ನು ಆರಯ್ದಳು :

"ಯಾಕಪ್ಪ, ಮಗೂ, ಅಳುತ್ತಿದ್ದೀಯೇ?"

"ನಮ್ಮ ತಂದೆ ಹೊಡೆದರು."

"ಯಾಕೆ ಹೊಡೆದರು? ಹೇಳಿದಹಾಗೆ ಕೇಳಲಿಲ್ಲವೆ? ಏನಾದರೂ ಚೇಷ್ಟೆ ಮಾಡಿದೆಯಾ?"

ಹುಡುಗ ಮೌನವಾಗಿದ್ದ.

"ತಂದೆತಾಯಿ ದೇವರಿಗೆ ಸಮಾನ ; ಅವರ ಮಾತು ವೇದಕ್ಕೆ ಸಮಾನ. ಅವರ ಮಾತು ಮೀರಬಾರದು."

ಹುಡುಗ ಬಾಯಿಬಿಟ್ಟ :

"ಎಲ್ಲಾ ಸಂದರ್ಭಗಳಲ್ಲೂ ಅವರ ಮಾತು ಕೇಳಲೇ ಬೇಕೆ?"

"ಹೂಂ. ಕೇಳಲೇ ಬೇಕು."

"ಅವರು ಅನ್ಯಾಯವಾದದ್ದನ್ನು ಹೇಳಿದಾಗಲೂ ಕೇಳಬೇಕೆ?"

"ತಂದೆ ತಾಯಿ ಮಕ್ಕಳ ವಿಷಯದಲ್ಲಿ ಎಂದೂ ಅನ್ಯಾಯ ಬಗೆಯುವುದಿಲ್ಲ."

"ಆದರೆ ನಮ್ಮ ತಂದೆ ಹೇಳುತ್ತಿರುವುದು ನ್ಯಾಯವಲ್ಲ. ನಮ್ಮ ಶಾಲೆಯಲ್ಲಿ ಕನ್ನಡದ ಮೂಲಕವೂ ಕಲಿಸುತ್ತಾರೆ ; ಇಂಗ್ಲಿಷ್ ಮೂಲಕವೂ ಕಲಿಸುತ್ತಾರೆ. ಇಂಗ್ಲಿಷಿನ ಮೂಲಕ ಕಲಿಸುವ ತರಗತಿಗೆ ಸೇರಿಕೊಳ್ಳಬೇಕೆಂದು ನಮ್ಮ ತಂದೆ ಬಲವಂತ ಮಾಡುತ್ತಿದ್ದಾರೆ. ನನಗೆ ಅದು ಇಷ್ಟವಿಲ್ಲ. ಅಲ್ಲದೆ, 'ಕನ್ನಡದ ಮೂಲಕವೇ ಕಲಿಯಬೇಕಾದ್ದು ಕನ್ನಡ ಮಕ್ಕಳ ಕರ್ತವ್ಯ ; ಕನ್ನಡ ನಾಡಿನ, ನುಡಿಯ ಏಳಿಗೆಗೆ ದಾರಿ' ಎಂದು ನಮ್ಮ ದೇಶದ ಅನೇಕ ಮುಂದಾಳುಗಳು ಹೇಳುತ್ತಿರುವುದನ್ನು ಕೇಳುತ್ತಿದ್ದೇನೆ. ನಮ್ಮ ಕನ್ನಡದ ಉಪಾಧ್ಯಾಯರೂ ಹಾಗೆಯೇ ಹೇಳಿದರು.

ಎಂದರು; ಕಿಲಕಿಲ ನಕ್ಕರು. ಒಬ್ಬಳು ಥಳುಕಿನ ಹೆಣ್ಣು ಚಲನಚಿತ್ರದ ಹಿಂದಿಯ ಹಾಡುಗಳನ್ನು ಹೇಳಿದಳು; ಎಲ್ಲರೂ 'ಹಾ' ಎಂದು ಬಾಯಿ ಬಿಟ್ಟರು; ಇನ್ನೊಬ್ಬಳು ಗಾನಕಲಾವಿದೆ ತೆಲುಗಿನ ಕೃತಿಗಳನ್ನು ವೀಣೆಯಲ್ಲಿ ನುಡಿಸಿದಳು. ಕನ್ನಡಮ್ಮನಿಗೆ ತನ್ನ ಮಕ್ಕಳ ಕಲಾಭಿಜ್ಞತೆಯನ್ನು, ನುಣ್ ದನಿಯನ್ನು, ಕಂಡು ಕೇಳಿ ಕೊಂಚ ಹಿಗ್ಗಾಯಿತು ; ತನ್ನನ್ನು ಕಡೆಗಣಿಸಿದ್ದಕ್ಕಾಗಿ ಅದಕ್ಕೂ ಮಿಕ್ಕು ಕುಗ್ಗಾಯಿತು.

"ಉತ್ತರದ ಹೆಣ್ಣಿಗೆ ಮರುಳಾದರೆ ನನಗೆ ಕೊರಗಿಲ್ಲ: ನನಗೆ ಒಂದಿನಿತು ಗೌರವಕೊಟ್ಟು ಸೊಸೆಯಾಗಿ ಮನೆ ಬೆಳಗಲಿ. ನನ್ನ ತಂಗಿಯನ್ನು ಪ್ರೀತಿಯಿಂದ ಕಂಡರೆ ನನಗೆ ಕರುಬಿಲ್ಲ : ಚಿಕ್ಕಮ್ಮನನ್ನು ಆದರಿಸುವಂದು ಅಮ್ಮನನ್ನು ಮರೆಯದಿದ್ದರೆ ಸರಿ. ಆದರೆ.....ಎಲ್ಲರೂ ಮುತ್ತಬ್ಬೆಯನ್ನು ಮರೆತಂತೆಯೇ ಕಾಣುತ್ತದೆ. ಇದೇ ನನ್ನ ಕೊರಗು."

ಮನೆಯಾಕೆ ಅರಿಸಿನಕುಂಕುಮ ಕೊಡುವಂದು ನೋಡುತ್ತಾಳೆ, ನಾನು ಕರೆತಂದು ಕೂರಿಸಿದ್ದ ಹಿರಿಮುತ್ತೈದೆ ಕಾಣದಾಗಿದ್ದಳು.

ಮನ್ನಣೆಯಿಲ್ಲದೆಡೆ ಕುಳ್ಳಿರುವುದಕ್ಕಿಂತ ಬೀದಿಯ ಭಿಕಾರಿಣಿಯಾಗಿ ಇರುವುದು ಲೇಸೆಂದು ಕನ್ನಡಮ್ಮ ಎದ್ದು ಹೊರಟುಹೋಗಿದ್ದಳು.

ತನ್ನ ಮನೆಯಲ್ಲೆ ತನಗೆ ಮನ್ನಣೆಯಿಲ್ಲವಲ್ಲ, ಹೊರಗಿನವರು ಹೇಗೆ ಕೊಟ್ಟಾರು? ಎಂದು ಎಂದಿನ ಕೊರಗಿನಲ್ಲೆ ಮುಂದುಗಾಣದೆ ನಡೆದು ಹೋದಳು ನಾಡತಾಯಿ.

## ಉಸಿರು ೧೦

ಕನ್ನಡ ನಾಡಿನಲ್ಲಿ ಕನ್ನಡ ತಾಯಿಗೆ ಸಲ್ಲಬೇಕಾದ ಮನ್ನಣೆ ದೊರಕಿಸುವ ಸಲುವಾಗಿ ನಾಡಿನಲ್ಲೆಲ್ಲ ಚಳವಳಿ ಹಬ್ಬಿಸುವುದಕ್ಕಾಗಿ ದೊಡ್ಡ ಕನ್ನಡ ಸಭೆ ಸೇರಿತ್ತು. ಎಲ್ಲರೂ ಕನ್ನಡದ ಬಗೆಗೆ ಅಪೂರ್ವವಾದ ಅಭಿಮಾನ ತೊಟ್ಟು ಸಭೆಗೆ ಬಂದಿದ್ದರು. ಎಲ್ಲರ ಹೃದಯಪೀಠದಲ್ಲೂ ಕನ್ನಡ ತಾಯಿ ನೆಲಸಿದ್ದಳೆಂದ ಮೇಲೆ ಕನ್ನಡ ತಾಯಿ ಸಭೆಯಲ್ಲಿ ಇದ್ದಳೆಂದು ಬೇರೆ ಹೇಳಬೇಕೆ?

ಎಲ್ಲ ಮತ ಧರ್ಮಾನುಯಾಯಿಗಳೂ, ಎಲ್ಲ ಕಾಯಕದವರೂ ಕನ್ನಡಕ್ಕಾಗಿ ವಿಶೇಷ ಉತ್ಸಾಹದಿಂದ ವಾದಿಸಿ ಮಾತಾಡಿದರು. ವೀರನಾರಾಯಣನ ಕಿಂಕರನ ಕಿಂಕರರ ಕೆಚ್ಚಿನ ನುಡಿಗಳನ್ನು ಕೇಳಿ, ಕನ್ನಡಮ್ಮ ತಲೆದೂಗಿದಳು : ತನ್ನ ತೊತ್ತುಬಾಳು ಕೊನೆಗಾಣುವ ಕಾಲ ಬಂತೆಂದು ಹಿಗ್ಗಿದಳು.

ಭಾಷಣಗಳೆಲ್ಲ ಮುಗಿದವು. ಅಧ್ಯಕ್ಷರ ಭಾಷಣವಾದ ಮೇಲೆ ಸಭೆ ಚೆದರಲು

ಎಲ್ಲಿಗಾದರು ಸರಿಯೆ, ಕನ್ನಡ ಮನೆಯೆಂದರೆ ಕರೆಯದೆ ಹೋಗುವವಳು ಕನ್ನಡಮ್ಮ. ಬೀದಿಯಲ್ಲಿ ಹೋಗುತ್ತಿದ್ದ ಇವಳನ್ನು ಹಳೆಗಾಲದ ಹಿರಿ ಮುತ್ತೈದೆಯೆಂದು ಆರತಿಯಕ್ಷತೆಗೆ ಕರೆದಳು ಹೊರಕ್ಕೆ ಬಂದಿದ್ದ ಮನೆಯ ಹಿರಿಯಾಕೆ.

ಕನ್ನಡಮ್ಮ ಒಳಕ್ಕೆ ಹೋಗಿ ಹೆಂಗಸರ ನಡುವೆ ಕುಳಿತಳು. ಬಣ್ಣ ಬಣ್ಣದ ಸೀರೆಯುಟ್ಟು ಕಿಲಕಿಲನೆ ನಗುತ್ತ ಸುತ್ತಮುತ್ತ ಕುಳಿತಿದ್ದ ಚೆಲುವಿನ ಚಿಟ್ಟೆಗಳಂತಿದ್ದ ತರುಣಿಯರು, ಹುಡುಗಿಯರನ್ನು ಕಂಡು ಕನ್ನಡಮ್ಮ ಹಿಗ್ಗಿ ಹೋದಳು : "ನನ್ನ ನಾಡಿನ ಪೆಣ್ಮಣಿಗಳೆ ಕನ್ನಡದ ಕಣ್ಮಣಿಗಳು ! ಕನ್ನಡ ಮನೆಯಲ್ಲಿ ಹೆಂಗಸು ಕನ್ನಡ ತಾಯ ಹಾಲನ್ನು ಮಕ್ಕಳಿಗೆ ಊಡುತ್ತಿರುವವರೆಗೂ ಕನ್ನಡಕ್ಕೆ ಹೆದರಿಕೆಯಿಲ್ಲ : ಕುಟುಕು ಜೀವದಿಂದಲಾದರೂ ಬದುಕಿರಬಲ್ಲದು ; ಮಾಗಿ ಕಳೆದು ವಸಂತ ಬಾರದಿರದು, ಬಂದಾಗ ನಾನೂ ಇವರಂತೆ ಬಣ್ಣವುಟ್ಟು ನಲಿಯದಿರೆನು."

ಕಿಲಕಿಲ ನಗುವಿನ ನಡುವೆ ತಿಳಿಗನ್ನಡ ನುಡಿಗಳೊಡನೆ ಕೇಳಿಬಂದ ಅರ್ಥವಾಗದ ಇಂಗ್ಲಿಷು ನುಡಿಗಳು, ಬೆಳುದಿಂಗಳ ಬಾನಿನಲ್ಲಿ ನುಗ್ಗಿಬಂದ ಕರಿಮೋಡಗಳಂತೆ, ಕನ್ನಡಮ್ಮನ ಮನಸ್ಸಿಗೆ ಬೇಸರ ಹಿಡಿಸಿದುವು ; ಆಗತಾನೇ ಅರಳಿದ ಅವಳ ಹಂಬಲ ಹೂ ಬಾಡಿಹೋಯಿತು.

"ಅಯ್ಯೋ, ಕನ್ನಡದ ಪೆಣ್ಮಣಿಗಳಿರಾ! ಶಾಲೆಯಲ್ಲಿ ಈ ಹೆರನುಡಿ ಕಲಿಯುವುದಲ್ಲದೆ ಮನೆಮಾತಿನಲ್ಲಿಯೂ ಅದನ್ನೆ ಬಳಸಬೇಕೆ? ಕಾಲವೈಪರೀತ್ಯದಿಂದ ಗಂಡಸರ ಕೈಗೆ ಬಂದ ಹೊಸ ವ್ಯವಹಾರಶಸ್ತ್ರದಿಂದ ಮನೆಯ ಹೆಂಗುಸು ಕೊರಲು ಕೊಯ್ದುಕೊಳ್ಳಬೇಕೆ? ಮನೆಯ ಹೆಂಗಳು ಹೆರನುಡಿಗೆ ಮಾರು ಹೋದರೆ ಮನೆಯ ಮಕ್ಕಳು ಮನೆ–ತನವೆಂತು ಉಳಿಸುವರು, ಎಂತು ಬೆಳಸುವರು ? ತಾಯ ನುಡಿ ಕನ್ನಡವಾಗಿರುವುದು ತಪ್ಪಿದರೆ, ಕನ್ನಡತನ ಕಳೆದು ಕೊಂಡರೆ, ತಾಯಿನುಡಿ ಸಾಯಿನುಡಿಯಾಗದೆ?" ಎಂದು ತನ್ನಲ್ಲಿ ತಾನು ಕೊರಗಿದಳು.

ಅಷ್ಟರಲ್ಲಿ ಮನೆಯ ಹಿರಿಯಾಕೆ ಬಂದು ಕನ್ನಡಮ್ಮನನ್ನು ಕೇಳಿ ಕೊಂಡಳು –ಹಳೆಗಾಲದ ಹಾಡುಗಳನ್ನು ಹೇಳಿ, ಮದುಮಕ್ಕಳನ್ನು ಹರಸಬೇಕೆಂದು. ಕನ್ನಡಮ್ಮ ಹಾಡು ಹೇಳತೊಡಗಿದಳು. ಯಾರೂ ಎಂದೂ ಕೇಳಿಲ್ಲದ ಹಾಡುಗಳು ಒಂದೆರಡನ್ನು ಹಾಡಿದಳು : ಕರುಳಿಂದ ಹೊರಟ ಹಾಡುಗಳಿವು ; ಅವುಗಳಲ್ಲಿ ಹುರುಳಿತ್ತು, ತಿರುಳಿತ್ತು ; ತಾಯ ಒಲವಿತ್ತು, ಹರಕೆಯಿತ್ತು.

ಹೊಸಕಾಲದ ಹೆಂಗಳಿಗೆ ಈ ಹಾಡುಗಳು ಹಿಡಿಸಲಿಲ್ಲ. ಗುಸಗುಸ

ಕನ್ನಡಿಗಳಲ್ಲಿ ತಮ್ಮ ಅಂದಚೆಂದಗಳನ್ನು ತಿದ್ದಿಕೊಳ್ಳುವುದರಲ್ಲಿ ತೃಪ್ತರಾಗಿದ್ದಾರೆ. ನಾವು ಎಷ್ಟು ಒಂದುಗೂಡಿಸಹೋದರೂ ಇದು ಒಂದಾಗದು; ನನ್ನ ಕೈಲಿರುವವರೆಗೂ ಇದು ಒಡೆದ ಕನ್ನಡಿ. ಇದನ್ನು ಒಂದುಗೂಡಿಸುವ ಹುಚ್ಚು ಜನಕ್ಕೆ ಹಿಡಿಯಬಾರದೆ? ಒಬ್ಬೊಬ್ಬರ ಹೃದಯವೂ ಒಂದೊಂದು ಕನ್ನಡಿ ಚೂರು: ಹೃದಯಗಳೆಲ್ಲ ಒಂದಾದರೆ, ಕನ್ನಡಿ ಒಂದಾದಂತೆ. ಒಡೆದ ಕನ್ನಡಿ ಒಂದಾಗುವುದೆಂದೊ? ಅದರಲ್ಲಿ ನನ್ನ ಮುಖ ಮತ್ತೆ ಗೆಲವುಗೂಡಿ ಕಾಣುವುದೆಂದೊ? ನನ್ನ ಮಕ್ಕಳು ತಮ್ಮ ಹೊಸ ನಲ್‌ಬಾಳನ್ನು ನಾಡುನುಡಿಗನ್ನಡಿಯಲ್ಲಿ ಮತ್ತೆ ಕಾಣುವುದೆಂದೊ?"

"ಎಂದೊ, ಎಂದೊ?" ಎಂದು ತಾಯ ಜೊತೆಗೆ ತರುಣನೂ ಕೊರಗಿದ.

## ಉಸಿರು ೧೨

ಅಂದು ನಗರದಲ್ಲಿ ಕನ್ನಡ ಹಬ್ಬ. ಕನ್ನಡ ತಾಯ ನೆನಹಿನ ದಿನ. ತನ್ನನ್ನು ನೆನೆಯುವವರು ಕೆಲವರಾದರೂ ಇರುವರಲ್ಲಾ ಎಂಬ ಸಮಾಧಾನದಿಂದ, ಸಂತಸದಿಂದ, ಕನ್ನಡ ನಾಡಿನಲ್ಲಿ ಮೂಡಿದ ಈ ಹೊಸ ಹಬ್ಬದ ಸಡಗರವನ್ನು ನೋಡಬೇಕೆಂಬ ಹಂಬಲಿನಿಂದ ಕನ್ನಡಮ್ಮ ಹಬ್ಬ ನಡೆಯಲಿದ್ದ ಸಭಾಮಂದಿರವನ್ನು ಸೇರಿದಳು.

ಮಂದಿರ ತಳಿರುತೋರಣಗಳಿಂದ ಅಲಂಕೃತವಾಗಿತ್ತು. ಕನ್ನಡದ ಬಾವುಟ ಹಾರಾಡುತ್ತಿತ್ತು. ಓಲಗದ ಸುಮಧುರ ಗಾನ ಎಲ್ಲರನ್ನೂ ಬನ್ನಿರೆಂದು ಕರೆಯುವಂತೆ ಆಕರ್ಷಕವಾಗಿತ್ತು.

ಕನ್ನಡಮ್ಮನನ್ನು ಒಳಕ್ಕೆ ಕರೆಯುವವರಾರು? ಬಾಗಿಲ ಬಳಿ ನಿಂತಿದ್ದಳು.

ಓಲಗದ ಸಂಗೀತದಿಂದ ಆಕರ್ಷಿತರಾಗಿ ಮಂದಿರದ ಬಳಿ ಬಂದವರೆಲ್ಲ, "ಕನ್ನಡ ಹಬ್ಬ. ಎಲ್ಲರಿಗೂ ಆಹ್ವಾನವುಂಟು" ಎಂಬ ಪ್ರಕಟನೆಯನ್ನೋದಿಕೊಂಡು ಮುಂದಕ್ಕೆ ಹೆಜ್ಜೆಯನ್ನಿಡುತ್ತಿದ್ದರು.

ಹಳೆಗಾಲದ ಮುತ್ತೈದೆಯನ್ನು ಒಳಕ್ಕೆ ಕರೆಯುವವರಾರು? ಕನ್ನಡಮ್ಮ ಮಂದಿರದೊಳಕ್ಕೆ ಹೋಗಿ ಕುಳಿತಳು.

ಮಹಿಳೆಯರಿಗಾಗಿ ಏರ್ಪಡಿಸಿದ್ದ ಪ್ರತ್ಯೇಕ ಸ್ಥಳದಲ್ಲಿ ಕನ್ನಡಮ್ಮ ಒಬ್ಬಳೇ ಕುಳಿತಿದ್ದಳು. ಅಲ್ಲೊಬ್ಬರು ಇಲ್ಲೊಬ್ಬರಂತೆ ಹದಿನೈದು ಇಪ್ಪತ್ತು ಮಂದಿ ಗಂಡಸರು ಕುಳಿತಿದ್ದರು.

ಒಂದು ಗಂಟೆ ತಡವಾಗಿ ಕಾರ್ಯಕ್ರಮ ಮೊದಲಾದರೂ ಸಭೆಯಲ್ಲಿ

ಎದ್ದುನಿಂತಿತು. ವೀರ ಕನ್ನಡದಭಿಮಾನಿಯೊಬ್ಬರು 'ಕರ್ನಾಟಕ ಮಾತಾಕಿ ಜೈ!' ಎಂದು ಉದ್ಘೋಷಿಸಿದರು : ಸಭೆ ಒಕ್ಕೊರಲಿನಿಂದ ಆ ನುಡಿಗಳನ್ನು ದೆಸೆ ದೆಸೆ ಮೊಳಗುವಂತೆ ಉದ್ಘೋಷಿಸಿತು.

ಉದ್ಘೋಷದ ಹೊಳಲು ನಿಂತಮೇಲೆ, "ಗೆಲ್ ಕನ್ನಡ ತಾಯ್" ಎಂಬ ಮಾತುಗಳು ಯಾವುದೋ ಮೂಲೆಯಿಂದ ಕುಗ್ಗಿದ ದನಿಯಲ್ಲಿ ಹೊರಟವು. ಆ ಮಾತುಗಳನ್ನು ಯಾರೂ ಅಷ್ಟಾಗಿ ಲಕ್ಷಿಸಲಿಲ್ಲ.

ಆ ನುಡಿಗಳನ್ನು ಕೇಳಿದ ಕನ್ನಡಮ್ಮ, ನಗಲಾರದೆ, ಅಳಲಾರದೆ, ಬೆರಗಿನ ಕೊರಗಿನ ಮೌನದಿಂದ ಹೊರಹೊರಟಳು.

## ಉಸಿರು ೧೧

ರಾಜವೀಧಿಯ ಅಂಚಿನಲ್ಲಿ ಮರದಡಿಯ ಕೆಳಗೆ ಕುಳಿತು ಕನ್ನಡಮ್ಮ ಒಡೆದ ಕನ್ನಡಿಯ ಚೂರುಗಳನ್ನು ಕೂಡಿಸುತ್ತ, ಅದರಲ್ಲಿ ತನ್ನ ಮುಖ ನೋಡಿ ಕೊಳ್ಳಲು ಸಾಹಸಪಡುತ್ತಿದ್ದಳು.

ಯಾವ ಒಂದು ಚೂರಿನಲ್ಲಿಯೂ ಮುಖ ಪೂರ್ತಿಯಾಗಿ ಕಾಣುತ್ತಿರಲಿಲ್ಲ; ಒಟ್ಟಿಗೆ ಕೂಡಿಸಿ ನೋಡಿಕೊಂಡರೂ ಕೂಡ, ಮುಖ ವಿಕಾರವಾಗಿ ಕಾಣುತ್ತಿತ್ತು.

ಕನ್ನಡಮ್ಮನ ಉದ್ಯಮವನ್ನೆಲ್ಲ ಕಂಡ ದಾರಿಹೋಕರೆಲ್ಲ "ಇವಳೊಬ್ಬಳು ಹುಚ್ಚಿ" ಎಂದುಕೊಂಡು ಮುಂದೆ ಹೋಗುತ್ತಿದ್ದರು.

"ಹುಚ್ಚಿ" ಎಂದುದನ್ನು ಕೇಳಿದ ತರುಣನೊಬ್ಬ ಕನ್ನಡಮ್ಮನ ಬಳಿ ನಿಂತ. ಅವಳು ಹುಚ್ಚಿಯಂತೆ ಕಾಣುತ್ತಿರಲಿಲ್ಲ; ಆದರೆ, ಅವಳ ಪ್ರಯತ್ನವೇನೋ ಹುಚ್ಚು ಪ್ರಯತ್ನವಾಗಿ ಕಂಡಿತು.

"ಒಡೆದ ಕನ್ನಡಿಯನ್ನು ಮತ್ತೆ ಒಂದಾಗಿ ಕೂಡಿಸಲಾಗುವುದೆ ತಾಯಿ?" ಎಂದು ಕೇಳಿದ ತರುಣ.

"ಮಗೂ, ಇದು ನನ್ನ ಕನ್ನಡಿಯಲ್ಲವಪ್ಪ ; ನಾಡಿನ ಕನ್ನಡಿ, ನುಡಿಗನ್ನಡಿ. ಒಮ್ಮೆ ನಾನು ಗೆಲವಾಗಿದ್ದ ಕಾಲವೊಂದಿತ್ತು. ನನ್ನ ಗೆಲವು ಕಂಡು ಸೈರಿಸದವರು ನನ್ನ ನಾಡುನುಡಿಗನ್ನಡಿಯನ್ನು ಚೂರುಚೂರಾಗಿ ಒಡೆದರು. ಯಾರು ಎದುರಿಸಿದರೇನು, ಯಾರು ಬೆದರಿಸಿದರೇನು ? ನನ್ನ ನಾಡಿನ ಜನದ ಮನಸ್ಸು ಒಂದಾದರೆ, ನುಡಿಯ ಸೂತ್ರದಲ್ಲಿ ಎಲ್ಲರ ಗುರಿಗೈಮೆ ಒಂದಾದರೆ, ಕನ್ನಡಿ ಹೆಚ್ಚಿನ ಹೊಳಪಿನಿಂದ ತಾನಾಗಿ ಮರಳಿ ರೂಪಗೊಳ್ಳುವುದು. ನನ್ನ ಜನಕ್ಕೆ ತಮ್ಮ ಕನ್ನಡಿಯಲ್ಲಿ ತಮ್ಮ ಸ್ವಸ್ವರೂಪವನ್ನು ನೋಡಿಕೊಳ್ಳುವುದೇ ಬೇಕಿಲ್ಲ. ಇತರರ

ಕಾವೇರಿಯಿಂದ ಗೋದಾವರಿಯವರೆಗೆ ಇದ್ದಿರಬಹುದು. ಆದರಿಂದು ಹರಿದು ಹಂಚಿಹೋಗಿದೆ. ಪಂಪ ರನ್ನರಿದ್ದಿರಬಹುದು ; ಇಂದು ಅವರು ನಮ್ಮ ಜನಕ್ಕೆ ಬೇಡವಾಗಿದ್ದಾರೆ. ನಮ್ಮ ಸಂಸ್ಕೃತಿ, ನಮ್ಮ ಸಂಗೀತ, ನಮ್ಮ ಕಲೆ, ನಮ್ಮ ನುಡಿ ಒಂದೂ ಬೇಡವಾಗಿದೆ ನಮ್ಮ ಜನಕ್ಕೆ. ಮೊದಲು ಕನ್ನಡ ಕಲಿಯಿರಿ, ಬಳಿಕ ಬೇರೆಯ ನುಡಿಗಳು–ಎಂಬ ಮಾತು ದೇಶ ದ್ರೋಹವಂತೆ ! ಮೊದಲು ನಮ್ಮ ಮನೆ, ಆಮೇಲೆ ನಮ್ಮ ಕೇರಿ, ಊರು, ದೇಶ; ಕಡೆಗೆ ವಿಶಾಲ ಪ್ರಪಂಚ–ಈ ಸನಾತನ ಸತ್ಯ ಭಾಷೆಯ ವಿಚಾರದಲ್ಲಿ ಸಲ್ಲದಂತೆ. ಹಾಗೆನ್ನುವವರು ತಮ್ಮ ತಾಯ ಗೋಳಿನ ಬಾಳನ್ನು ಕಂಡರಿಯರು, ಕೇಳರಿಯರು ; ಕಂಡು ಅರಿತಿದ್ದರೆ ಮರೆತಿಹರು. ಅಂದಿನ ಗತವೈಭವವನ್ನು ನೆನೆದರೆ ಮುಂದಿನ ಗತಿ ಕಾಣಲಾಪೆವೆ? ಬಡಕಲಾದ ನಾವು ನಮ್ಮ ಬೆನ್ನು ನಾವೇ ತಟ್ಟಿಕೊಂಡರೆ ಬಲಗೊಳ್ಳುವೆವೆ? ಹಿಂದಿನದು ಇರಲಿ ಮುಂದಿನದು ಬರಲಿ. ಅದಕ್ಕಾಗಿ ಇಂದನ್ನು ಅರಿಯ ಬೇಕಾಗಿದೆ. ಇಂದು ಕನ್ನಡ ತಾಯಿ ಹೇಗಿದ್ದಾಳೆಂಬುದನ್ನು, ಅದೋ ನೋಡಿ ! ಮೂಲೆಯಲ್ಲಿ ಕುಳಿತಿದ್ದಾಳೆ ! ಬಡವೆ, ಕಡುಬಡವೆ ! ಅವಳ ನಾಡಿನ ಚಿನ್ನವೆಲ್ಲ ಹೆರರ ಪಾಲಾದಮೇಲೆ ಬಡವೆಯಾಗದೆ ಮತ್ತೇನು? ಎಲ್ಲಿಯ ಕಿರೀಟ, ಎಲ್ಲಿಯ ಸಿಂಹಾಸನ, ಎಲ್ಲಿಯ ರಾಣಿ ! ಎಲ್ಲ ಕನಸು, ಕಲ್ಪನೆ. ನಿಜಕ್ಕೂ ಇಂದು ನಮ್ಮ ತಾಯಿ ತಿರುಕಿಯಂತಿದ್ದಾಳೆ. ಅವಳ ಕುರುಳು ನೋಡಿ ಕೆದರಿದೆ; ಮೈ ನೋಡಿ, ಧೂಳಡರಿದೆ; ಕುಪ್ಪಸ, ಚಿಂದಿಚಿಂದಿ ; ಸೀರೆ, (ಅವಳ ನಾಡಿನಂತೆ) ಹರುಕು ಹರುಕು; ಒಡಲು ಬಡಕಲು ; ಕೈಯಲ್ಲಿ ಭಿಕ್ಷಾಪಾತ್ರೆ ; ಕೊರಲು ಕಟ್ಟಿಹೋಗಿದೆ–ಮಾತಾಡಲಾರಳು ; ಮಕ್ಕಳ ಕುರಿತನ ಕಂಡು, ಹೆರರ ತೋಳತನದ ಅನ್ಯಾಯಗಳನುಂಡು. ಆದರೂ, ಎದ್ದಳು ನೋಡಿ......ಉಸಿರು ಕೂಡಿಸಿಕೊಂಡು ಮಾತಾಡುತ್ತಿದ್ದಾಳೆ, ಕೇಳಿ : ಕಿವಿಗೊಟ್ಟು ಕೇಳಿ, ಎದೆಗೊಟ್ಟು ಕೇಳಿ ; ಏಳಿ, ಎಚ್ಚರವಾಗಿ, ಅರಳಿ ಬಾಳಿ !"

ಕನ್ನಡಮ್ಮ ಇಂತು ಆಡಿದಳು ತನ್ನಳಲ, ತೋಡಿದಳು ತೊಳಲ :
"ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ–ಹಿರಿದಾಗಿ
ಬಾಳಿದವಳೊಮ್ಮೆ :
ಈಗ ಬಡತನ, ಬಡವೆ, ಬಡವಾದೆ : ಬಡವಾದ ಮಕ್ಕಳನು ನೋಡಿ,
ಬತ್ತಿ, ಮತ್ತಿಮ್ಮಡಿಯ ಸೊರಗಿನಲಿ ಬಡವಾದೆ–ಸಾವಿಲ್ಲ ನನಗೆ !
ಸಾವಿಲ್ಲ–ಸಾಯುತಿಹೆ : ಹೊಸ ಮಳೆಗಳಾಗಿ, ನೆಲ ಹೊಸ ಹೊನಲು ಹರಿದು,

ಐವತ್ತು ಮಂದಿಗೆ ಮೇಲ್ಪಟ್ಟು ಇರಲಿಲ್ಲ.

"ನನ್ನ ಮಕ್ಕಳಿಗೆ ಇನ್ನೂ 'ನಮ್ಮ ನಾಡು ನಮ್ಮ ನುಡಿ' ಎನ್ನುವ ಸ್ವಾಭಿಮಾನ ಮೂಡಿಲ್ಲವಲ್ಲ ! ನನ್ನ ಅಕ್ಕತಂಗಿಯರ ಮನೆ ಎಷ್ಟೋ ಗೆಲವಾಗಿದೆಯಲ್ಲಾ ! ತಾಯ ಸೇವೆಯನ್ನೇ ಮರೆತವರು ಅಜ್ಜಿಯ ಸೇವೆ ಮಾಡಲು ಎಂತು ಮನ ತರುವರು ?" ಎಂದು ಕನ್ನಡಮ್ಮ ಬಿಸುಸುಯ್ಯುತ್ತ, ತಲೆಬಗ್ಗಿಸಿ ಕುಳಿತಿದ್ದಳು.

ಹೇಗೋ ಕಾರ್ಯಕ್ರಮ ಮೊದಲಾಯಿತು. ತುಂಬಿದ ಸಭೆಗೆ ಉಪನ್ಯಾಸ ಮಾಡಬೇಕೆಂಬ ಉತ್ಸಾಹದಿಂದ ಬಂದಿದ್ದ ಹಿರಿಯ ವಿದ್ವಾಂಸರೊಬ್ಬರು, ತುಂಬಿದ ಸಭೆಯಿರುವುದೆಂದೇ ಬಗೆದು, ಎತ್ತಿದ ಕಂಠದಲ್ಲಿ ಕನ್ನಡ ತಾಯ ಹಿರಿಮೆಯನ್ನು ಕುರಿತು ವರ್ಣರಂಜಿತ ಶೈಲಿಯಲ್ಲಿ ಬಣ್ಣಿಸತೊಡಗಿದರು.

"..........ಅದೋ ನೋಡಿ ! ನಮ್ಮ ಕರ್ಣಾಟಕ ಮಾತೆ ! ಸಮ್ರಾಜ್ಞಿ ! ರಾಜರಾಜೇಶ್ವರಿ! ಕನ್ನಡ ನಾಡಿನ ರಾಜಾಧಿರಾಜರೆಲ್ಲರೂ ಕನ್ನಡಾಂಬೆಯನ್ನು ಕನಕಪೀಠದಲ್ಲಿ ಕುಳ್ಳಿರಿಸಿ ಮೆರಸಿದ್ದಾರೆ. ಈಗಲೂ ಆಕೆ ಸಿಂಹಾಸನದಲ್ಲಿ ರಾಣಿಯಾಗಿ ಕುಳಿತು ನಮ್ಮನ್ನೆಲ್ಲಾ ಆಳುತ್ತಿದ್ದಾಳೆ. ಅವಳ ದಿವ್ಯ ಮೂರ್ತಿಯನ್ನು ನೋಡಿ ! ನೃಪತುಂಗನಿಟ್ಟ ಕಿರೀಟ ನೋಡಿ ! ಪಂಪ ರನ್ನ ಕುಮಾರವ್ಯಾಸ ಲಕ್ಷ್ಮೀಶಾದಿಗಳು ಅವಳಿಗೆ ತೊಡಿಸಿದ ದಿವ್ಯಾಭರಣಗಳನ್ನು ನೋಡಿ ! ರಾಜಾಧಿರಾಜರುಗಳು ಆಕೆಯ ಮುಂದೆ ಸುರಿದಿರುವ ಕಪ್ಪಕಾಣಿಕೆಗಳನ್ನು ಅವಲೋಕಿಸಿ ! ಕರ್ಣಾಟಕದ ಇತಿಹಾಸ, ಸಂಸ್ಕೃತಿ, ವಾಸ್ತುಶಿಲ್ಪ, ಸಂಗೀತ, ಕಲೆ–ಇವೆಲ್ಲವೂ ಕರ್ಣಾಟಕ ಮಾತೆಯ ಕೀರ್ತಿ ಕಿರಣಗಳು. ಆಕೆಯ ಗತವೈಭವವೆಷ್ಟು ಹಿರಿದೋ ಆಕೆಯ ಮುಂದಿನ ವೈಭವವನ್ನು ಅಷ್ಟೇ ಹಿರಿದಾಗಿ, ಅದನ್ನು ಮೀರಿ ಹಿರಿದಾಗಿ ಮಾಡುವ ಸಂತೋಷದ ಪವಿತ್ರಕರ್ತವ್ಯವೆಮ್ಮದು ! ಕರ್ಣಾಟಕ ಮಾತೆಯ ಪುತ್ರರಾದ ನಾವೇ ಧನ್ಯರು !............"

ಹಿರಿಯರ ಈ ಭಾಷಣಕ್ಕೆ ಎಲ್ಲರೂ ಚಪ್ಪಾಳೆ ತಟ್ಟಿದರು, ಬಾಯಿ ಚಪ್ಪರಿಸಿದರು, ಭೇಷ್ ಎಂದರು.

ಇಷ್ಟು ಹೊತ್ತಿಗೆ ನೂರು ಮಂದಿಯ ಹತ್ತಿರ ಹತ್ತಿರ ಸಭಿಕರು ನೆರೆದಿದ್ದರು.

ಅಂದಿನ ಕಾರ್ಯಕ್ರಮದಂತೆ ಭಾಷಣ ಮಾಡಬೇಕಾಗಿದ್ದ ಇನ್ನೊಬ್ಬರು ಕಿರಿಯರು ; ಕವಿವರ್ಯರು ; ನಾಡನ್ನು ಸುತ್ತಾಡಿದವರು ; ನಾಡು ನುಡಿಯ ನಿಜವಾದ ಇರವನ್ನು ಬಲ್ಲವರು ; ಕನ್ನಡಮ್ಮನ ಕಡುಕೊರಗಿನ ಸಾವು–ಬಾಳನ್ನು ಕಂಡರಿತವರು ; ಅವರೆದ್ದು, ತಮ್ಮ ನೊಂದ ಹೃದಯದ ನಿಜ ನುಡಿಗಳನ್ನು ಕೇಳುವವರ ಮುಂದಿಟ್ಟರು ; "ಕರ್ನಾಟಕ ಹಿರಿದಾಗಿ ಇದ್ದಿರಬಹುದು,

ತಾಯಿ, ನಿನ್ನ ಸಿಂಹಾಸನವೇರು ಮತ್ತೊಮ್ಮೆ......ಬಾರಮ್ಮ, ಹರಸು" ಎಂದು ಬೇಡಿದರು.

ಆಗ, "ನಕ್ಕಳಾ ತಾಯಿ!"

ಈ ಕರುನಾಡಿದು ನನ್ನ ಮನೆ

[ರಾಜಧಾನಿಯ ರಾಜಮಾರ್ಗದಲ್ಲಿ ರಾಜಕಾರ್ಯಸೌಧದ ಕಡೆಗೆ ಯುವಜನಸ್ತೋಮ ಮೆರವಣಿಗೆಯಲ್ಲಿ ನಿಧಾನವಾಗಿ ಸಾಗುತ್ತಿತ್ತು. ಇದ್ದಕ್ಕಿದ್ದಂತೆ ಮೆರವಣಿಗೆ ಮುನ್ನಡೆಯದೆ ನಿಂತಿತು. ದಾರಿಗೆ ಅಡ್ಡಲಾಗಿ ಒಬ್ಬಳು ಮುತ್ತಜ್ಜಿ ಮಲಗಿದ್ದಳು. ಮಂದಾಳು ಬಗ್ಗಿ ನಿಟ್ಟಿಸಿ ನೋಡಿದ ಅವಳ ಮುಖವನ್ನು. ಬೆರಗಾದ! ತಲೆಗೂದಲು ಬೆಳ್ಳಿ ! ಆದರೆ ಚಿರಯೌವನೆ, ಮುಖದಲ್ಲಿ ರಾಜಕಳೆ!ಉಟ್ಟಿದ್ದು ಸ್ವಲ್ಪ ಹಳೆಯದಾದರೂ ಬೆಲೆಬಾಳುವ ರೇಶಿಮೆಯ ಜರಿಸೀರೆ!]

ಮುಂದಾಳು : ಯಾರಮ್ಮ ನೀನು ?

ಮುತ್ತಜ್ಜಿ : ಕನ್ನಡಿಗರ ತಾಯಿ. ಕನ್ನಡ ಮಕ್ಕಳೆಲ್ಲ ನನ್ನ ಮಕ್ಕಳು.

ಮುಂದಾಳು : ಹುಚ್ಚಿಯರೆಲ್ಲ ಹಾಗೆಯೆ ಹರಟುತ್ತಾರೆ.

ಮುತ್ತಜ್ಜಿ ; ಹೌದಪ್ಪ, ನಾನು ಹುಚ್ಚಿ ! ನನ್ನ ಮಕ್ಕಳೆಲ್ಲ ಹೆರರ ಮನೆಯಲ್ಲಿ ಪರದೇಶಿಗಳಂತೆ ಬದುಕು ಮಾಡುತ್ತಿದ್ದರು. ಹೋರಾಡಿ ತಮ್ಮದೇ ಮನೆ ಮಾಡಿಕೊಂಡರು, ಅಂದಿದ್ದ ಇಂದಿಲ್ಲದ ನನ್ನ ಹಿರಿಯ ಮಕ್ಕಳು. ಈ ಮನೆಯಲ್ಲಿ ಮನೆಯೊಡತಿಯಾಗಿರು ಎಂದು ಕೇಳಿಕೊಂಡರು. ಇರಲು ಹೋದೆ. ಒಂದು ಕೋಣೆಯಿಂದ ಒಬ್ಬಳು ದೊರೆಸಾನಿಬಂದಳು, "ಯಾರೇ ನೀನು ? ಹುಚ್ಚಿ ! ಇದು ನನ್ನ ಭೋಗ್ಯದ ಮನೆ ! ತೊಲಗಾಚೆ !" ಎಂದು ಗದರಿದಳು. ಅತ್ತಣ ಇತ್ತಣ ಕೋಣೆಗಳಿಂದ ಅಕ್ಕತಂಗಿಯರು ನೆರೆನಾಡ ತವರುಮನೆಯವರು ಓಡಿಬಂದು– "ದಯವಿಟ್ಟು ಹೊರಗಿರಮ್ಮ! ಈ ಮೆನಯಲ್ಲಿ ನಮಗೆ ಸಮಪಾಲುಂಟು ! ಪಾಲಿಗಾಗಿ ನ್ಯಾಯಾಲಯಕ್ಕೆ ದೂರಿತ್ತಿದ್ದೇವೆ. ತೀರ್ಪು ಕೊಡುವ ತನಕ ತುಸ ಹೊರಗಿರಮ್ಮ !" ಎಂದು ಹೊರಕ್ಕಟ್ಟಿದರು, ಮಗೂ !

ಮುಂದಾಳು : ನಿನ್ನ ಗುರುತು ಹಿಡಿಯದ ನಮ್ಮ ತಪ್ಪು ಮನ್ನಿಸು ತಾಯಿ. ನೂರಾರು ವರ್ಷಗಳಿಂದ ನಮ್ಮ ಸಾವಿರ ತಪ್ಪು ತಾಳಿಕೊಂಡಿರುವೆ.

ಮುತ್ತಜ್ಜಿ : ಎಷ್ಟೆಂದು ತಾಳಲಿ ಮಗೂ ? ಎಲ್ಲ ತಾಯಂದಿರ ತಾಯಿ ನಲಿಯುವಳು, ನಾ ನಲಿದು, ನೀವು ನಲಿದು–ನನ್ನ ಮನೆ ನನಗೆ ದಕ್ಕಿದಂದು.

ಮುಂದಾಳು : ಹುಚ್ಚಿಯ ಮಕ್ಕಳು ಹುಚ್ಚರು ನಾವಿಂದು. ಹಿಡಿದಿದೆ ನಮಗೆ ಕನ್ನಡದ ಹುಚ್ಚು ! ನಿನ್ನ ಮನೆಗೆ ನಿನ್ನನ್ನು ಒಡತಿಯನ್ನಾಗಿ ಮಾಡುತ್ತೇವೆ.

ಹೊಸ ಹಮ್ಮು ಹಮುತ್ತ, ಎಲ್ಲರೂ ನನ್ನಕ್ಕತಂಗಿಯರು–ಚಿಗುರಿ
ಎಲ್ಲರೂ ಚೆಲುವಾದರೆಲ್ಲರೂ ಚಿನ್ನವಾದರು–ನೋಡು, ನೋಡು–
ಆ ಕಡೆಗೆ ಈ ಕಡೆಗೆ ತೂಗುವರು ತೊನೆಯುವರು, ಆ ಪೊಂಕ, ಬಿಂಕ!
ಪೇರೊಕ್ಕಲಾಗಿ ಪಾಡುವರು ;
ಅವರ ಮಕ್ಕಳು ಬೆಳೆದು ಕಳೆಗೂಡಿ ಮನೆ ಬೆಳಗಿ ಹಬ್ಬಮಾಡುವರು–
ತಾವ್ ಮೊದಲು ಬದುಕಿ,
ತಾಯ್ ಮೊದಲು ಬದುಕಿ
ಹೆರರ ಹೊರೆಗಳನಿಳಿಸೆ, ಹೆರರ ಸೆರೆಗಳ ಬಿಡಿಸೆ, ಕಯ್ಯ ನೀಡುವರು.
ಆ ಸಯ್ಪು, ಆ ಪುಣ್ಯ, ನನಗಿಲ್ಲ : ನನ್ನ ಮಕ್ಕಳಿಗಿಲ್ಲ ಹಬ್ಬ–
ನನ್ನ ಮಕ್ಕಳಿಗಿಲ್ಲ ಹಬ್ಬ :
ಮಳೆ, ಸುಗ್ಗಿ ; ಬೆಳೆ, ಬೆಳಕು ; ಹಾಡು, ಹಸೆ–ಕೂಗಾಟ,
ಕುಣಿದಾಟ, ಪಾಟ ;
ಒಲೆದಾಟ, ನಲಿದಾಟ, ಒಲುಮೆ ಬೀರಾಟ,
ನನ್ನ ಮಕ್ಕಳಿಗಿಲ್ಲ–ನನಗಿಲ್ಲ–ಬಾಳ್ಗೆ ಆ ಅಕ್ಕತಂಗಿಯರು !
ನಮಗಿಲ್ಲ ಬಾಳು.
ಎಲ್ಲರೂ ಬಾಳುವೆಡೆ ನಮಗೆ ಸಾವೆ ?
ಎಲ್ಲರೂ ನಲಿವ ಕಡೆ ನಮಗೆ ನೋವೆ ?
ಏನು ಕವಿಯಿತೊ ಮಂಕು, ಮಕ್ಕಳಿಗೆ ! ಯಾರೆರಚಿದರೊ ಬೂದಿ, ಕಾಣೆ,
ನನ್ನನೊಲ್ಲರು ನನ್ನ ಮಕ್ಕಳೇ ! ತಾವ್ ಬಾಳಿ, ತಾಯ ಬಾಳಿಸರು.
ಹೆರರ ನುಡಿ, ಹೆರರ ನಡೆ–ಹೆರರ ಕೂಗೇ ಕೂಗು ; ಹೆರರದೇ ಹೆಮ್ಮೆ!
ನನ್ನ ಮನೆ ಹಾಳು !
ನನ್ನ ನುಡಿ ಬೀಳು !
ನನ್ನ ನಾಡಿನಲಿರುಳು : ನನ್ನ ತೋಟವನಗೆವ, ತೆಂಗಡಕೆಯಿಡುವ,
ತಾವರೆಯ ಕಾಪಿಡುವ, ಮೊಲ್ಲೆ ಮಲ್ಲಿಗೆ ನೆಡುವ, ಆನಂದ ಕೊಡುವ
ಮಕ್ಕಳೆಲ್ಲಿಹರೆನಗೆ, ಹೆರರೊತ್ತೆ ಗಡಿ ಬಿಡುತ ಹದುಗುತ್ತ, ನುಗ್ಗೆ ಕುಗ್ಗುತ್ತ,
ಹೆರರ ಕೈ ಕಾಯುತ್ತ, ಸಾಯದೆಯೆ ಬದುಕದೆಯೆ ಬಾಳ ನೂಕುವೆನು."

ತಾಯಿ ನುಡಿದು ನಿಲ್ಲಿಸಿದಳು. ನೆನೆದವರೆಲ್ಲ ತಾಯ ಇರವನ್ನು ಕಣ್ಣಾರ ಕಂಡು ಮರುಗಿದರು, ಕೊರಗಿದರು. "ಬಾ ತಾಯಿ ಹರಸು. ತೇರೇರು ಬಾ

ನಿನ್ನನ್ನು ಬದುಕಿಸಿ ನಾವು ಬಾಳುತ್ತೇವೆ. ಹರಸಮ್ಮ ಹರಸು ತಾಯಿ.

["ಈ ಕರುನಾಡಿದು ನನ್ನ ಮನೆ" ಎಂಬ ಹಾಡು ಹಾಡುತ್ತ ಮೆರವಣಿಗೆ ಮುಂದೆ ಸಾಗುವುದು.]

* * * *

# ರನ್ನ

"ಕವಿಜನರಲ್ಲಿ 'ರತ್ನತ್ರಯ' (ಎಂದರೆ ಮೂರು ರತ್ನಗಳು) ಎಂದು ಹೆಸರಾದ ಪಂಪ, ಪೊನ್ನಿಗ, ಕವಿರತ್ನ ಈ ಮೂವರು ಕವಿಗಳು ಜಿನಧರ್ಮವನ್ನು ಬೆಳಗಿದವರು. ಇಂಥವರು ಬೇರೆ ಯಾರಾದರೂ ಇದ್ದಾರೆಯೆ?" ಎಂದು ಹೆಮ್ಮೆಯಿಂದ ಹೇಳಿಕೊಂಡಿರುವವನು ಕವಿರತ್ನ. ಅವನ ದರ್ಪದ ಮಾತನ್ನು ಕೇಳಿ :

"ರತ್ನಪರೀಕ್ಷಕನ್ ಆಂ, ಕೃತಿ–
ರತ್ನ ಪರೀಕ್ಷಕನೆನ್, ಎಂದು ಫಣಿಪತಿಯ ಫಣಾ–
ರತ್ನಮುಮಂ ರನ್ನನ ಕೃತಿ–,
ರತ್ನಮುಮಂ ಪೇಳ್ ಪರೀಕ್ಷಿಪಂಗೆ
ಎಂಟೆರ್ದೆಯೇ?"

"ನಾನು ರತ್ನಪರೀಕ್ಷಕ ಎಂದು ಹಾವಿನ ಹೆಡೆಯ ರತ್ನವನ್ನು ಪರೀಕ್ಷೆಮಾಡಲು ಕೈಹಾಕುವವನಿಗೂ ರನ್ನನ ಕೃತಿ ರತ್ನವನ್ನು ಪರೀಕ್ಷೆ ಮಾಡುತ್ತೇನೆ ಎನ್ನುವವನಿಗೂ ಎಂಟು ಎದೆಗಳಿವೆಯೆ? ಎಂಟುಪಟ್ಟು ಎದೆಗಾರಿಕೆಯಿದ್ದರೆ ಮಾತ್ರ ಆ ಸಾಹಸಗಳಿಗೆ ನುಗ್ಗಲಿ."

ರನ್ನನು ಶಕ್ತಿವಂತನಾದ ಕವಿ. ಅವನ ಕವಿತಾಶಕ್ತಿ ಅವನ 'ಅಜಿತಪುರಾಣ' ಎಂಬ ಜೈನಪುರಾಣದಲ್ಲಿ ಬೆಳಕಿಗೆ ಬರಲು ಹೆಚ್ಚು ಅವಕಾಶವಿಲ್ಲ. ಅದು ಮೇರೆ ಮೀರಿ ಉಕ್ಕಿ ಹರಿದಿರುವುದು ಅವನ 'ಗದಾಯುದ್ಧ'ದಲ್ಲಿ. ಇದು ನಿಜವಾಗಿಯೂ 'ಕೃತಿರತ್ನ'. ಕವಿರತ್ನ ಎಂಬ ಅವನ ಬಿರುದು ಸಾರ್ಥಕವಾಗಿರುವುದು ಈ ಕಾವ್ಯದಿಂದ.

**ಕವಿ ಚಕ್ರವರ್ತಿ**

'ಅಜಿತಪುರಾಣ'ವೂ ಕಳಪೆಯಾದ ಕೃತಿಯಲ್ಲ. ರನ್ನನಿಗಿಂತ ಮೊದಲು 'ಆದಿಕವಿ' ಎಂದು ಪ್ರಸಿದ್ಧನಾದ ಪಂಪನು ಆದಿತೀರ್ಥಂಕರನನ್ನು ಕುರಿತು ಕ್ರಿ.ಶ. ೯೪೧ರಲ್ಲಿ 'ಆದಿಪುರಾಣ'ವನ್ನು ರಚಿಸಿದನು. ಪೊನ್ನನು ಶಾಂತಿನಾಥ ಎಂಬ ತೀರ್ಥಂಕರನನ್ನು ಕುರಿತು 'ಶಾಂತಿ ಪುರಾಣ'ವನ್ನು ಬರೆದನು. ಇವರಿಬ್ಬರ ಮೇಲು ಪಂಕ್ತಿಯನ್ನು ಅನುಸರಿಸಿ ರನ್ನನು ಅಜಿತಪುರಾಣವನ್ನು ಬರೆದನು.

# ರನ್ನ

ಕವಿ ಚಕ್ರವರ್ತಿ ಎನ್ನಿಸಿಕೊಂಡ ಶ್ರೇಷ್ಠ ಕನ್ನಡ ಕವಿ. ಅಜಿತನಾಥ ಪುರಾಣ, ಸಾಹಸಭೀಮ ವಿಜಯ ಎಂಬ ಎರಡು ಕಾವ್ಯಗಳನ್ನು ರಚಿಸಿದ. ಈತನು ಶಕ್ತಿಕವಿ. ಈತ ವರ್ಣಿಸುವುದು ಕಣ್ಣಿಗೆ ಕಟ್ಟುತ್ತದೆ. ದುರ್ಯೋಧನನ ವಿಷಯದಲ್ಲಿ ಅನುಕಂಪ, ಮೆಚ್ಚುಗೆ ಬರುವಂತೆ ಅವನ ಪಾತ್ರವನ್ನು ಕಡೆದಿದ್ದಾನೆ.

ತಾನು ಹೊಯ್ಸಳವಂಶದ ರಾಜನಾದ ವೀರಬಲ್ಲಾಳನಿಂದಲೂ 'ಕವಿಚಕ್ರವರ್ತಿ' ಎಂಬ ಬಿರುದನ್ನು ಪಡೆದ ಸಂಗತಿಯನ್ನು ಸ್ಪಷ್ಟವಾಗಿ ತಿಳಿಸಿದ್ದಾನೆ.

ಹೀಗೆ, ಕನ್ನಡದಲ್ಲಿ ಮೂವರು ಕವಿರತ್ನರು ಮೂವರು ಕವಿಚಕ್ರವರ್ತಿಗಳು. ಕವಿರತ್ನ ಮತ್ತು ಕವಿಚಕ್ರವರ್ತಿ ಎಂದು ಪ್ರಸಿದ್ಧರಾಗಿರುವವರು ಇಬ್ಬರೇ, ಪೊನ್ನ ಮತ್ತು ರನ್ನ. ಚಕ್ರವರ್ತಿ ಎನ್ನುವುದು ಹೇಳಿ ಕೇಳಿ ಬಿರುದಿನ ಮಾತು. ಇಬ್ಬರಲ್ಲಿ ನಿಜವಾದ ಕವಿರತ್ನ ಯಾರು ಎಂದು ಕೇಳಿದರೆ, ರನ್ನ ಎನ್ನಬೇಕಾಗುತ್ತದೆ. 'ರನ್ನ' ಮನೆಯವರು ಇಟ್ಟ ಹೆಸರು ; 'ರತ್ನ' ಎಂಬ ಸಂಸ್ಕೃತ ಪದದ ಕನ್ನಡ ರೂಪ. 'ಕವಿರತ್ನ' ಅವನು ಇಟ್ಟುಕೊಂಡ ಹೆಸರಾದರೂ, ಅದು ಅವನ ಪ್ರತಿಭೆಯ ಹಾಗೂ ಸಾಧನೆಯ ಫಲ.

**ಮನೆತನ**

ಪೂರ್ವದ ಕನ್ನಡ ಕವಿಗಳೂ ತಮ್ಮ ವಿಷಯವಾಗಿ ಹೇಳಿಕೊಳ್ಳುವ ಪದ್ಧತಿ ಇಲ್ಲ. ಆದರೆ ಪಂಪ ರನ್ನರಂಥ ಕೆಲವರು ತಮ್ಮ ಬಗೆಗೆ ಕೆಲವು ಮುಖ್ಯ ಸಂಗತಿಗಳನ್ನು ತಿಳಿಸಿ ಉಪಕಾರ ಮಾಡಿದ್ದಾರೆ.

ಬೆಳುಗಲಿ ಅಯ್ನೂರು, ಎಂದರೆ ಅಯ್ನೂರು ಗ್ರಾಮಗಳುಳ್ಳ ಪ್ರಸಿದ್ಧವಾದ ಪ್ರಾಂತ ಇತ್ತು. ಅದರಲ್ಲಿ ಜಂಬುಖಂಡಿ (ಈಗಿನ ಜಮಖಂಡಿ) ಎಪ್ಪತ್ತು ಗ್ರಾಮಗಳನ್ನು ಒಳಗೊಂಡ ಪ್ರದೇಶ. ಇದಕ್ಕೆ ತಿಲಕದಂತಿದ್ದ, ಪ್ರಸಿದ್ಧವಾದ ಮುದುವೊಳಲಿನಲ್ಲಿ (ಈಗಿನ ಮುಧೋಳ) ಹುಟ್ಟಿ ಕವಿರತ್ನನು ಸುಪುತ್ರನೆನಿಸಿಕೊಂಡನು. ಈ ಬೆಳಗಲಿ ದೇಶವು ಪ್ರಸಿದ್ಧವಾದ ಗಟ್ಟಗೆ (ಘಟಪ್ರಭಾ) ನದಿಯೂ ಪೆರ್ದೊರೆ (ಎಂದರೆ, ಕೃಷ್ಣಾ) ನದಿಯೂ ಹರಿಯುತ್ತಿದ್ದ ಎಡೆಯಲ್ಲಿ ತದ್ದವಾಡಿಗೆ ತೆಂಕಲಿಗೂ (ದಕ್ಷಿಣಕ್ಕೂ) ತೊರಗಲಿಗೆ ಬಡಗಲಿಗೂ (ಉತ್ತರಕ್ಕೂ) ಇದ್ದಿತು. ಅದು ನೆಮ್ಮದಿಯ ನಾಡು. ಬೆಳುಗರೆ ನಾಡಿನಲ್ಲಿ ಹುಟ್ಟಿದ ಬಳೆಗಾರರ ಕುಲಕ್ಕೆ ಸೇರಿದವನು ಕವಿರತ್ನ ; ಕುಲಧರ್ಮವಾದ ಜೈನಧರ್ಮವನ್ನು ಬೆಳಗಿದವನು. ಅದನ್ನು ಹಾಗೆ ಬೆಳಗಲು ಹುರುಪುಗೊಳಿಸಿದವನು ತೈಲಪಚಕ್ರೇಶ್ವರನಿಗೆ ಮಂಡಲಾಧಿಪತಿಯಾಗಿದ್ದ ಚಾವುಂಡರಾಯ. ಮೊತ್ತ ಮೊದಲು ರತ್ನನು ಸಾಮಂತ ರಾಜರ ಪ್ರೋತ್ಸಾಹದಿಂದ ತುಸತುಸ ಮುಂದಕ್ಕೆ ಬಂದನು. ಮಂಡಲೇಶ್ವರನಾದ ಚಾವುಂಡರಾಯನಿಂದ ಹೆಚ್ಚಿನ ಏಳಿಗೆ ಹೊಂದಿದನು. ಚಕ್ರವರ್ತಿ ತೈಲಪನಿಂದ ಇನ್ನೂ ಅತಿಶಯವಾದ ಮೇಲ್ಮೆ ಪಡೆದನು.

ಹೀಗೆ, ಈ ಮೂವರೂ ತಮ್ಮ ಪುರಾಣ ಕಾವ್ಯಗಳಲ್ಲಿ ಜೈನಧರ್ಮದತಿರುಳನ್ನು ತೀರ್ಥಂಕರರನ್ನು ಕುರಿತ ಸ್ವಾರಸ್ಯ ಕಥೆಗಳ ಹುರುಳಿನೊಂದಿಗೆ ಬೆರಸಿ, ಜೈನಧರ್ಮವನ್ನು ಬೆಳಗಿದರು. 'ಜಿನಸಮಯ ದೀಪಕರು' ಎಂದು ಪ್ರಸಿದ್ಧರಾದರು.

ಇವರ ತರುವಾಯ ನಾಗವರ್ಮ, ನಾಗಚಂದ್ರ, ಜನ್ನ, ಆಚಣ್ಣ ಮುಂತಾದ ಜೈನಕವಿಗಳು ಜೈನಪುರಾಣಗಳನ್ನು ಬರೆದರು. ಆದರೆ, ಅವು ಯಾವವೂ ಈ ಮೂವರ ಕೃತಿಗಳ ಸಮಕ್ಕೆ ಬರಲಾರವು. ಈ ಸಂಗತಿಯನ್ನು ಮೊದಲೇ ಕಂಡುಕೊಂಡವನಂತೆ ರನ್ನ ಹೇಳಿದ್ದಾನೆ, ಹೀಗೆ: "ಜಗತ್ತಿನಲ್ಲಿ ಆದಿಪುರಾಣ ಪಂಪನಿಂದ ಪ್ರಸಿದ್ಧವಾಯಿತು ; ಪೊನ್ನನಿಂದ ಶಾಂತಿಪುರಾಣ ; ಕವಿ ರನ್ನನಿಂದ ಅಜಿತಪುರಾಣ. ಎಣೆಯಿಲ್ಲದ ಈ ಪುರಾಣಗಳ 'ರೇಖೆ'ಗೂ (ಎಂದರೆ, ಹತ್ತಿರಕ್ಕೂ) ಬರಲು ಸಮರ್ಥವಾಗಲಾರವು ಇತರ ಪುರಾಣದ ಕೃತಿಗಳು." ಇನ್ನು ಅವನ್ನು ಮೀರಿಸುವ ಮಾತೆಲ್ಲಿ ಬಂತು?

ಪಂಪನು ರಾಷ್ಟ್ರಕೂಟ ಚಕ್ರವರ್ತಿ ಮೂರನೆಯ ಕೃಷ್ಣನ ಸಾಮಂತನಾಗಿದ್ದ ಎರಡನೆಯ ಅರಿಕೇಸರಿಯಿಂದ ಬೇಕಾದಷ್ಟು ಮನ್ನಣೆ ಪಡೆದ. ಕನ್ನಡದಲ್ಲಿ ಪಂಪನೇ ನಿಜವಾದ 'ಕವಿಚಕ್ರವರ್ತಿ'. ಆದರೆ ಸಾಮಂತರಾಜನನ್ನು ಆಶ್ರಯಿಸಿದ ಪಂಪನಿಗೆ ಕವಿಚಕ್ರವರ್ತಿ ಎಂಬ ಬಿರುದು ಬರಲು ಸಾಧ್ಯವೇ ಇರಲಿಲ್ಲ. ಕೃಷ್ಣನ ಅಸ್ಥಾನ ಕವಿ ಯಾದ ಪೊನ್ನನಿಗೆ ಆ ಬಿರುದು ಲಭಿಸಿತು. 'ಕವಿ ಚಕ್ರವರ್ತಿ' ಎನ್ನಿಸಿಕೊಂಡ ಎರಡನೆಯ ಕವಿಯೆ ರನ್ನ.

ರನ್ನನು 'ಗದಾಯುದ್ಧ' ಕಾವ್ಯ ಬರೆಯುವ ಕಾಲಕ್ಕೆ ಕನ್ನಡ ನಾಡಿನಲ್ಲಿ ರಾಷ್ಟ್ರಕೂಟರೂ, ರನ್ನನಿಗೆ ಮೊದಲು ಆಶ್ರಯಕೊಟ್ಟಿದ್ದ ತಲಕಾಡಿನ ಗಂಗವಂಶದ ರಾಜರೂ ತಮ್ಮ ಪದವಿಗಳನ್ನು ಕಳೆದುಕೊಂಡಿದ್ದರು. ಚಾಲುಕ್ಯ ವಂಶದ ಎರಡನೆಯ ತೈಲಪನು ರಾಷ್ಟ್ರಕೂಟರ ಸ್ಥಾನಕ್ಕೆ ಬಂದು ಚಕ್ರವರ್ತಿ ಎನ್ನಿಸಿಕೊಂಡಿದ್ದನು. ರನ್ನನು ತೈಲಪನ ಆಸ್ಥಾನವನ್ನು ಸೇರಿ, 'ಸಾಹಸಭೀಮ ವಿಜಯ' ಅಥವಾ 'ಗದಾಯುದ್ಧ' ಎಂಬ ಕಾವ್ಯವನ್ನು ಬರೆದನು. ಇದು ತೈಲಪನ ಮೆಚ್ಚುಗೆಗೆ ಪಾತ್ರವಾಯಿತು. ಚಕ್ರವರ್ತಿ ತೈಲಪನು ರನ್ನನಿಗೆ 'ಕವಿಚಕ್ರವರ್ತಿ' ಎಂಬ ಬಿರುದನ್ನು ಕೊಟ್ಟನು. "ರನ್ನನು ತನ್ನ ಅತಿಶಯವಾದ ಮಹಿಮೆಯನ್ನೂ ಕವಿಚಕ್ರವರ್ತಿ ಎಂಬ ಹೆಸರನ್ನು ಕಡುಬಡವರಿಂದ ಪಡೆದನೇನು? ಇಲ್ಲ. ಚಕ್ರವರ್ತಿಯಾದ ತೈಲಪನಿಂದ ಪಡೆದನು" ಎಂದು ರನ್ನ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ರನ್ನನ ಮಾತು ಸುಳ್ಳಲ್ಲ ಎನ್ನುವುದಕ್ಕೆ ಜನ್ನನ ಮಾತು ಸಾಕ್ಷಿ. ಜನ್ನನು ತನ್ನ 'ಅನಂತನಾಥ ಪುರಾಣ'ದಲ್ಲಿ ಪೊನ್ನನು ಕೃಷ್ಣನಿಂದಲೂ, ರನ್ನನು ತೈಲಪನಿಂದಲೂ,

ಅವನಿಗೆ ಸಿದ್ಧಿಯನ್ನು ದೊರಕಿಸಿ ಕೊಟ್ಟಿತು. ಯಾವ ಕಾಲದಲ್ಲಿಯೇ ಆಗಲಿ, ಪಾಂಡಿತ್ಯದ ಬೆಂಬಲವಿಲ್ಲದೆ ಕೇವಲ ಪ್ರತಿಭೆಯ ಬಲದಿಂದ ದೀರ್ಘವಾದ ಪ್ರೌಢ ಕಾವ್ಯಗಳನ್ನು ಬರೆಯಲು ಸಾಧ್ಯವಿಲ್ಲ. ಸಹಜವಾದ ಕವಿತಾ ಶಕ್ತಿಯ ಜೊತೆಗೆ ಪಾಂಡಿತ್ಯದ ಬೀಗದ ಕೈಯನ್ನು ಪಡೆದುಕೊಂಡದ್ದರಿಂದ, ವಾಗ್ದೇವಿಯ ಭಂಡಾರದ ಮುದ್ರೆಯನ್ನು ಒಡೆಯಲು ಅವನು ಸಮರ್ಥನಾದನು. ಎರಡು ಕೃತಿರತ್ನಗಳು ಹೊರಬಂದವು – 'ಅಜಿತ ಪುರಾಣ' ಮತ್ತು 'ಸಾಹಸಭೀಮ ವಿಜಯ.'



ರನ್ನ ಚಾವುಂಡರಾಯನನ್ನು ಹೋಗಿ ಕಂಡನು.

ಜೈನ ಧರ್ಮವನ್ನು ಚೆನ್ನಾಗಿ ತಿಳಿದುಕೊಳ್ಳಬೇಕೆಂಬ ಆಸೆ ರನ್ನನಿಗೆ ಮೊದಲಿನಿಂದಲೂ ಇದ್ದಿತು. ಚಾವುಂಡರಾಯನ ಹಾಗೂ ಗಂಗರಸನ ಗುರುಗಳಾಗಿದ್ದ ಅಜಿತಸೇನಾಚಾರ್ಯರನ್ನು ಆಶ್ರಯಿಸಿ, ಜೈನ ಮತವನ್ನು ಆಳವಾಗಿ ಅಭ್ಯಾಸಮಾಡಿದನು. ಇದರಿಂದ ಜೈನ ಪುರಾಣವನ್ನು ಬರೆಯುವುದು ಸಾಧ್ಯವಾಯಿತು.

ಚಾವುಂಡರಾಯನ ಸಹಾಯದಿಂದ ರನ್ನನು ಅನೇಕ ಸಾಮಂತರ ರಾಜ್ಯಸಭೆಗಳಿಗೆ ಹೋಗಿದ್ದು, ಪಂಡಿತ ಮಂಡಲಿಗಳಲ್ಲಿಯೂ ಕವಿಗೋಷ್ಠಿಗಳಲ್ಲಿಯೂ ತನ್ನ ಪಾಂಡಿತ್ಯವನ್ನೂ ಕವಿತಾ ಶಕ್ತಿಯನ್ನೂ ಮೆರೆದು ಪ್ರಸಿದ್ಧನಾದನು. ಅನೇಕ ತೀರ್ಥಕ್ಷೇತ್ರಗಳನ್ನೂ ನೋಡಿ ಬಂದನು. ವಿದ್ಯಾಭ್ಯಾಸ, ದೇಶಸಂಚಾರ – ಇವೆರಡೂ ಮುಗಿದ ಮೇಲೆ ಹುಟ್ಟಿದೂರಿಗೆ ಹಿಂದಿರುಗುವ

**ವಿದ್ಯಾಭ್ಯಾಸ**

ಸೌಮ್ಯಮುಖದ ಕವಿರತ್ನ ಸೌಮ್ಯನಾಮ ಸಂವತ್ಸರದಲ್ಲಿ (ಎಂದರೆ ಕ್ರಿಸ್ತಶಕ ೯೪೯ರಲ್ಲಿ) ಹುಟ್ಟಿದನು. ಅವನ ತಂದೆ ಜಿನವಲ್ಲಭ, ತಾಯಿ ಅಬ್ಬಲಬ್ಬೆ. ತನ್ನ ಬಾಲ್ಯದಲ್ಲಿ ನೆರೆಹೊರೆಯ ಮುದ್ದಿನ ಹುಡುಗ. ಚಿಕ್ಕಂದಿನಿಂದ ಪದ್ಯ, ಹಾಡು, ಶ್ಲೋಕಗಳನ್ನು ಕಲಿತು, ಕಟ್ಟಿ, ಹೇಳುವುದರಲ್ಲಿ ಅಪಾರ ಅಕ್ಕರೆ. ಗಟ್ಟಿಮುಟ್ಟಾದ ಮೈಕಟ್ಟು. ಬಳೆಬಳೆದಂತೆ ಕುಲಕಸುಬಾದ ಬಳೆಗಾರ ವೃತ್ತಿ ಬೇಡವೆನಿಸಿತು. ಕುಲಧರ್ಮವಾದ ಜೈನಧರ್ಮವನ್ನು ಅರಿಯುವ ಆಸೆ ಒಂದು ಕಡೆ ; ಕಾವ್ಯ ಕಲೆಯನ್ನು ಕೈವಶ ಮಾಡಕೊಳ್ಳಬೇಕೆಂಬ ಬಯಕೆ ಮತ್ತೊಂದೆಡೆ. ಮುದುವೊಳಲಿನಲ್ಲಿ ಇದಕ್ಕೆ ಅವಕಾಶವಿರಲಿಲ್ಲ. ವಿದ್ಯೆ ಕಲಿಯುವ ಹಟ ತೊಟ್ಟು, ಆಗಿನ ದಿನಗಳಲ್ಲಿ ಜೈನ ಧರ್ಮಕ್ಕೂ ವಿದ್ಯೆಗೂ ನೆಲೆವೀಡು ಎನಿಸಿದ್ದ, ದೂರದ ಗಂಗರಾಜ್ಯಕ್ಕೆ ಪ್ರಯಾಣ ಮಾಡಿದನು. ಆಗ ರಕ್ಕಸ ರಾಚಮಲ್ಲನು ಗಂಗಮಂಡಲದ ಅಧಿಪತಿಯಾಗಿದ್ದನು (ಕ್ರಿ.ಶ. ೯೭೫ – ೯೮೬). ಅಲ್ಲಿ ಗಂಗ ದೊರೆಯ ಮಂತ್ರಿಯಾಗಿದ್ದವನು ಚಾವುಂಡರಾಯ. ಇವನು ಸ್ವತಃ ವಿದ್ಯಾವಂತ, ವಿದ್ಯಾಪಕ್ಷಪಾತಿ; ಕವಿ. ರನ್ನ ಈತನ ಬಳಿಗೆ ಹೋಗಿ ಕಂಡನು, ಪರಿಚಯ ಮಾಡಿಕೊಂಡನು, ವಿದ್ಯೆಯಲ್ಲಿ ಆಸಕ್ತಿ ಹೊಂದಿದ್ದ ಚಾವುಂಡರಾಯನಿಂದ ಸಹಾಯಪಡೆಯುವುದು ರನ್ನನಿಗೆ ಕಷ್ಟವಾಗಲಿಲ್ಲ. ಹೀಗೆ ದೊರೆತ ಸಹಾಯದಿಂದ ರನ್ನನು ಸದ್ಗುರುಗಳ ಬಳಿ ನೆಲಸಿ, ಭಾಷೆ ಸಾಹಿತ್ಯಗಳಲ್ಲಿ ಪಾಂಡಿತ್ಯವನ್ನು ಪಡೆದನು ; ಕನ್ನಡ, ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ನಿಪುಣನಾದನು. ಸಂಸ್ಕೃತದಲ್ಲಿ ರಾಮಾಯಣ ಮಹಾಭಾರತಗಳನ್ನೂ, ಭಾಸ, ಕಾಳಿದಾಸ, ಭಟ್ಟನಾರಾಯಣ, ಬಾಣ ಮುಂತಾದ ಕವಿಗಳ ಗದ್ಯ ಪದ್ಯ ನಾಟಕ ಗ್ರಂಥಗಳನ್ನೂ ಚೆನ್ನಾಗಿ ಓದಿಕೊಂಡನು. ವಾಲ್ಮೀಕಿ, ವ್ಯಾಸ, ಕಾಳಿದಾಸ, ಬಾಣ – ಈ ಕವಿಗಳು ರನ್ನನ ಮೆಚ್ಚಿನ ಕವಿಗಳು. ಅಲಂಕಾರಶಾಸ್ತ್ರ, ನಾಟ್ಯಶಾಸ್ತ್ರ ಮುಂತಾದ ಶಾಸ್ತ್ರಗಳನ್ನು ಅಭ್ಯಾಸಮಾಡಿದನು. 'ಗದಾಯುದ್ಧ'ದಲ್ಲಿ ಭೀಮ ದುರ್ಯೋಧನರ ಗದಾಯುದ್ಧ ಭಾಗವನ್ನು ರನ್ನ ವರ್ಣಿಸಿರುವ ರೀತಿಯನ್ನು ನೋಡಿದರೆ, ಗದಾಯುದ್ಧವನ್ನು ಅಭ್ಯಾಸಮಾಡಿ ಅದನ್ನು ತಿಳಿದುಕೊಂಡಿದ್ದನೇನೋ ಎನ್ನಿಸುತ್ತದೆ. ವ್ಯಾಕರಣ ಶಾಸ್ತ್ರದಲ್ಲಿ ಅವನಿಗೆ ವಿಶೇಷ ಪಾಂಡಿತ್ಯ. ಸಂಸ್ಕೃತದಲ್ಲಿ ಜೈನೇಂದ್ರ ಮತ್ತು ಪಾಣಿನಿ ಎಂಬವರ ವ್ಯಾಕರಣಗಳಲ್ಲಿ ತಾನು ಪಂಡಿತ ಎಂದು ರನ್ನನೇ ಹೇಳಿಕೊಂಡಿದ್ದಾನೆ. ಪಂಪಪೊನ್ನರ ಕಾವ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿ, ಕಾವ್ಯ ವಿದ್ಯೆಯ ಪರಿಚಯ ಮಾಡಿಕೊಂಡನು. ಪಟ್ಟುಹಿಡಿದು ಮಾಡಿದ ಈ ವಿದ್ವತ್ತಿನ ಸಾಧನೆ ಕಾವ್ಯ ಕಲೆಯಲ್ಲಿ

ಕೊಂಡಾಡಿದ್ದಾನೆ. ಬಹುಕಾಲದವರೆಗೆ ಅವನಿಗೆ ಮಕ್ಕಳಾಗಿರಲಿಲ್ಲ. ಕಾಲಾ ನಂತರದಲ್ಲಿ ೪೦ ವಯಸ್ಸು ದಾಟಿದ ಮೇಲೆ, ಇಬ್ಬರು ಮಕ್ಕಳಾದರು – ಒಬ್ಬ ಮಗ, ಒಬ್ಬಳು ಮಗಳು. ಗಂಗರಾಜ್ಯದಲ್ಲಿದ್ದಾಗ ತನಗೆ ಬಹು ವಿಧಗಳಲ್ಲಿ ಉಪಕಾರ ಮಾಡಿದ ಚಾವುಂಡರಾಯನ 'ರಾಯ' ಎಂಬ ಹೆಸರನ್ನು ಮಗನಿಗೆ ಇಟ್ಟನು ; ತನ್ನ ದೇಶಕ್ಕೆ ಹಿಂದಿರುಗಿದ ಮೇಲೆ, ಜೈನ ಭಕ್ತಿಯೂ ಕಾವ್ಯಪ್ರೇಮಿಯೂ ಆದ, ತನಗೆ ಆಶ್ರಯಕೊಟ್ಟು ತನ್ನಿಂದ ಕಾವ್ಯ ಬರೆಯಿಸಿದ ಅತ್ತಿಮಬ್ಬೆಯ ಹೆಸರನ್ನು ಮಗಳಿಗೆ ಇಟ್ಟನು. ಅಜ್ಜ ಅಜ್ಜಿಯರ, ಹತ್ತಿರದ ಬಂಧುಗಳ ಹೆಸರನ್ನು ಮಕ್ಕಳಿಗೆ ಇಡುವುದು ರೂಢಿ. ಉಪಕಾರ ಮಾಡಿದವರ ಹೆಸರನ್ನು ಮಕ್ಕಳಿಗೆ ಇಡುವುದು ಅಪೂರ್ವ. ಅವರ ವಿಷಯದಲ್ಲಿ ರನ್ನ ಎಷ್ಟು ಕೃತಜ್ಞನಾಗಿದ್ದನೆಂಬುದನ್ನು ಈ ಸಂಗತಿ ಎತ್ತಿ ತೋರಿಸುತ್ತದೆ. ಉಪಕಾರ ಸ್ಮರಣೆ ಒಂದು ದೊಡ್ಡ ಗುಣ.

**ರನ್ನನ ಕೃತಿಗಳು**

ರನ್ನನ ಅಜಿತ ಪುರಾಣದ ಒಂದು ಪದ್ಯದಿಂದ ಅವನು 'ಪರಶುರಾಮ ಚರಿತ', 'ಚಕ್ರೇಶ್ವರ ಚರಿತ,' 'ಅಜಿತ ತೀರ್ಥೇಶ್ವರ ಚರಿತ' (ಅಜಿತ ಪುರಾಣ) ಎಂಬ ಮೂರು ಕಾವ್ಯಗಳನ್ನು ಬರೆದಿರುವ ವಿಷಯ ತಿಳಿದುಬರುತ್ತದೆ. ಈ ಕಾವ್ಯದಲ್ಲಿ 'ಗದಾಯುದ್ಧ'ದ ಹೆಸರನ್ನು ಹೇಳಿಲ್ಲ. ಈ ಕಾರಣದಿಂದಲೂ, ಬೇರೆಯ ಶಾಸನಾಧಾರ ಮುಂತಾದ ಇತರ ಆಧಾರಗಳಿಂದಲೂ ಅಜಿತ ಪುರಾಣವನ್ನು ರಚಿಸಿದ ಹತ್ತಾರು ವರ್ಷಗಳಾದ ಮೇಲೆ 'ಗದಾಯುದ್ಧ'ವನ್ನು ರಚಿಸಿರಬೇಕೆಂದು ಕೆಲವರ ಹೇಳಿಕೆ. ಅಜಿತ ಪುರಾಣದ ಕಾಲಕ್ಕೆ (ಎಂದರೆ ೯೯೩ಕ್ಕೆ) ಮೊದಲೇ, ಸುಮಾರು ೯೮೨ರಲ್ಲಿ ಗದಾಯುದ್ಧ ಬರೆದಿರಬಹುದು ಎಂದು ಇನ್ನು ಕೆಲವರ ಅಭಿಪ್ರಾಯ. ಅವು ಹೇಗೇ ಇದ್ದರೂ, ಈ ನಾಲ್ಕು ಕಾವ್ಯಗಳು ರನ್ನ ಬರೆದವು. ಇದರಲ್ಲಿ ಸಂದೇಹವೇನಿಲ್ಲ. ಪರಶುರಾಮಚರಿತ, ಚಕ್ರೇಶ್ವರ ಚರಿತಗಳು ಇನ್ನೂ ಸಿಕ್ಕಿಲ್ಲ. ಇವುಗಳ ಕಥಾವಸ್ತು ಏನಿರಬಹುದು ಎಂದು ವಿದ್ವಾಂಸರು ಅನೇಕ ರೀತಿಗಳಲ್ಲಿ ಊಹೆ ಮಾಡಿದ್ದಾರೆ. ರನ್ನನು ತಾನು ಉಭಯಕವಿ ಎಂದರೆ, ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಕಾವ್ಯ ಬರೆದಿರುವವನು– ಎಂದು ಹೇಳಿಕೊಂಡಿದ್ದಾನೆ. ಆದರೆ ಅವನು ಬರೆದಿರಬಹುದಾದ ಸಂಸ್ಕೃತ ಗ್ರಂಥಗಳು ಯಾವವೂ ಸಿಕ್ಕಿಲ್ಲ. ೧೨ ಕಂದ ಪದ್ಯಗಳುಳ್ಳ ಒಂದು ಚಿಕ್ಕ ಗ್ರಂಥಭಾಗವೊಂದು ಸಿಕ್ಕಿದೆ. ಪ್ರತಿ ಪದ್ಯದಲ್ಲಿಯೂ ಕಠಿನವಾದ ಕನ್ನಡ ಶಬ್ದಗಳಿಗೆ ಅರ್ಥವನ್ನು ಹೇಳಿದೆ. ಉದಾಹರಣೆಗೆ, ಸಣ್ಣದು ಎಂದರೆ ಕಿರಿದು, ಪಣ್ ಎಂದರೆ

ಮನಸ್ಸಾಯಿತು. ಗುರುಗಳನ್ನೂ ಪೋಷಕನಾಗಿದ್ದ ಚಾವುಂಡರಾಯನನ್ನೂ ಬೀಳ್ಕೊಂಡು ತನ್ನ ಊರಿಗೆ ಹಿಂದಿರುಗಿದನು.

## ರನ್ನನ ರುಜು

ಶ್ರವಣಬೆಳ್ಗೊಳದ ಚಿಕ್ಕಬೆಟ್ಟದ ಒಂದು ಬಂಡೆಯ ಮೇಲೆ 'ಶ್ರೀ ಕವಿರತ್ನ' ಎಂದು ಕೊರೆದಿದೆ. ಈ ಹೆಸರಿನ ಅಕ್ಷರಗಳು ೯–೧೦ನೆಯ ಶತಮಾನದ ಆದಿಯಲ್ಲಿ ಇರುವುದರಿಂದ ಈಚೆಗೆ ಯಾರೋ ಬರೆದದ್ದಲ್ಲ. ರನ್ನನ ಕೈಬರಹ ಇದ್ದರೂ ಇರಬಹುದು; ಆದರೆ ಹಾಗೆಂದು ಖಂಡಿತವಾಗಿ ಹೇಳಲು ಸಾಧ್ಯವಿಲ್ಲ. ಅಂತೂ, ರನ್ನನು ಶ್ರವಣಬೆಳ್ಗೊಳಕ್ಕೆ ಹೋಗಿದ್ದನೆಂದು ಇದರಿಂದ ಗೊತ್ತಾಗುತ್ತದೆ. ರನ್ನನು ಅಜಿತಪುರಾಣವನ್ನು ಕ್ರಿ. ಶ. ೯೯೩ರಲ್ಲಿ ಬರೆದು ಮುಗಿಸಿದನು. ಅದನ್ನು ಬರೆಯಿಸಿದವಳು ಅತ್ತಿಮಬ್ಬೆ ಎಂಬ ಜಿನಭಕ್ತೆ. ಅತ್ತಿಮಬ್ಬೆ, ಶ್ರವಣಬೆಳಗೊಳದಲ್ಲಿ ಚಾವುಂಡರಾಯನು ಮಾಡಿಸಿದ ಗೊಮ್ಮಟೇಶ್ವರ ವಿಗ್ರಹದ ಪ್ರತಿಷ್ಠಾಪನೆಯ ಮಹೋತ್ಸವಕ್ಕೆ ಹೋಗಿದ್ದ ಸಂಗತಿಯನ್ನು ಅಜಿತಪುರಾಣದಲ್ಲಿ ರನ್ನ ಕಣ್ಣಿಗೆ ಕಟ್ಟಿದಂತೆ ವರ್ಣಿಸಿದ್ದಾನೆ. ಈ ಉತ್ಸವ ನಡೆದದ್ದು ಕ್ರಿ.ಶ. ೯೮೩ರಲ್ಲಿ. ಎಂದ ಮೇಲೆ, ಇದಕ್ಕಿಂತ ಮುಂಚೆಯೇ ರನ್ನ ಗಂಗರಾಜ್ಯದಿಂದ ತನ್ನ ನಾಡಿಗೆ ಹಿಂದಿರುಗಿದ್ದನೆಂದು ಹೇಳಬಹುದು. ವಿಗ್ರಹವನ್ನು ಮಾಡಿಸಿ, ಪ್ರತಿಷ್ಠೆ ಮಾಡಿಸಿದವನು ತನ್ನ ಪೋಷಕ ಚಾವುಂಡರಾಯ, ಮಹೋತ್ಸವವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿದವರು ಪೂಜ್ಯ ಗುರುಗಳಾದ ಅಜಿತಸೇನಾಚಾರ್ಯರು ; ರನ್ನನು ಈ ಉತ್ಸವಕ್ಕೆ ಹೋಗಿದ್ದುದರಲ್ಲಿ ಆಶ್ಚರ್ಯವೇನು ? ಈ ವೇಳೆಗೆ ರನ್ನನು ಅತ್ತಿಮಬ್ಬೆಯ ಆಶ್ರಯವನ್ನು ಪಡೆದಿದ್ದನೆಂದು ಕಾಣುತ್ತದೆ. ರನ್ನನು ಆಕೆಯೊಂದಿಗೆಯೇ ಶ್ರವಣಬೆಳ್ಗೊಳಕ್ಕೆ ಪ್ರಯಾಣ ಮಾಡಿರಬೇಕು. ಅತ್ತಿಮಬ್ಬೆ "ಅನ್ನಮಂ ಬಿಸುಟು ಪರ್ವತಂ ಪರಿದೇರಿ" ಜಿನನ ಬಳಿ ನಿಂತಾಗ ಈ ಜಿನಭಕ್ತೆಗಾಗಿ ಹೂಮಳೆಗರೆಯಿತೋ ಎನ್ನುವಂತೆ ಅಕಾಲದಲ್ಲಿ ಮಳೆಗರೆಯಿತಂತೆ!

## ರನ್ನನ ಮಡದಿ ಮಕ್ಕಳು

ರನ್ನನು ತನ್ನ ನಾಡಿಗೆ ಹಿಂದಿರುಗಿದ ಮೇಲೆ, ತೈಲಪನ ಆಸ್ಥಾನದಲ್ಲಿ ವಿದ್ವಾಂಸನೆನಿಸಿಕೊಂಡು ಅವನ ಆಶ್ರಿತನಾದನು. ಈ ವೇಳೆಗೆ ಅವನು ಮದುವೆ ಮಾಡಿಕೊಂಡಿದ್ದನೆಂದು ಕಾಣುತ್ತದೆ. ಅವನಿಗೆ ಜಕ್ಕಿ ಮತ್ತು ಶಾಂತಿ ಎಂಬ ಇಬ್ಬರು ಹೆಂಡತಿಯರು. ಇವರ ಸದ್ಗುಣಗಳನ್ನು ರನ್ನ ಮೆಚ್ಚಿಕೊಂಡು



ಚಕ್ರವರ್ತಿ ತೈಲಪನು ರನ್ನನಿಗೆ 'ಕವಿಚಕ್ರವರ್ತಿ' ಎಂಬ ಬಿರುದನ್ನು ಕೊಟ್ಟನು.

ಮಾಡು, ಬಳಿ ಎಂದರೆ ವಂಶ, ಹೀಗೆ ಅರ್ಥ ಹೇಳಿಕೊಂಡು ಹೋಗಿದೆ. ಪ್ರತಿಪದ್ಯವೂ 'ಕವಿರತ್ನ' ಎಂದು ಮುಗಿಯುವುದರಿಂದ ಈ ನಿಘಂಟು ರನ್ನ ಬರೆದದ್ದು ಎಂದು ಊಹಿಸಿದೆ.

**ಅತ್ತಿಮಬ್ಬೆ**

ಅಜಿತಪುರಾಣವನ್ನು ರನ್ನನಿಂದ ಬರೆಯಿಸಿದವಳು ಅತ್ತಿಮಬ್ಬೆ ಎಂದು ಹಿಂದೆಯೇ ಹೇಳಿದೆ. ಅತ್ತಿಮಬ್ಬೆಯಲ್ಲಿ ರನ್ನನಿಗೆ ಅಪಾರ ಗೌರವ. ಅವಳ ಮನೆತನ ಜೈನಧರ್ಮ ಶ್ರದ್ಧೆಗೂ ಕಾವ್ಯಪ್ರೇಮಕ್ಕೂ ಸ್ವಾಮಿ ಭಕ್ತಿಗೂ ಹೆಸರಾದದ್ದು. ತಂದೆ ಮಲ್ಲಪ, ಚಿಕ್ಕಪ್ಪ ಪೊನ್ನಮಯ್ಯ – ಇಬ್ಬರೂ ಆಹವಮಲ್ಲ ಚಾಲುಕ್ಯ ಚಕ್ರವರ್ತಿ ತೈಲಪನ ಸೇವೆಗಾಗಿ ದೇಹವನ್ನು ಮುಡುಪಾಗಿಟ್ಟಿದ್ದವರು. ಪೊನ್ನನಿಂದ ಶಾಂತಿಪುರಾಣವನ್ನು ಬರೆಯಿಸಿದವರು ಇವರು. ಹಿರಿಯನಾದ ಮಲ್ಲಪ ವಿದ್ಯಾನಿಧಿ; ಕಿರಿಯ ಪೊನ್ನಮಯ್ಯ ಚಾವುಂಡರಾಯನ ಭಕ್ತ. ಹೀಗಿದ್ದುದರಿಂದ, ರನ್ನನಿಗೆ ಈ ಮನೆತನದವರ ಪರಿಚಯಲಾಭವಾದದ್ದರಲ್ಲಿ ಆಶ್ಚರ್ಯವಿಲ್ಲ.

ಈ ಮನೆತನದವರ ಮೂಲಕವಾಗಿಯೇ ರನ್ನನಿಗೆ ತೈಲಪ ಚಕ್ರವರ್ತಿಯ ಆಸ್ಥಾನಕ್ಕೆ ಪ್ರವೇಶ ದೊರಕಿರಬೇಕು. ಈ ಸನ್ನಿವೇಶದಲ್ಲಿ, ಅತ್ತಿಮಬ್ಬೆಯ ಸದ್ಗುಣಗಳೂ ದಾನ ಕಾರ್ಯಗಳೂ ರನ್ನನ ಗಮನಕ್ಕೆ ಬಂದುವು. ರನ್ನನ ಪ್ರತಿಭೆಯನ್ನು ಆಕೆಯೂ ಗುರುತಿಸಿದಳು. ತನ್ನ ಹಿರಿಯರು ಪೊನ್ನನಿಂದ ಪುರಾಣ ಕಾವ್ಯವನ್ನು ಬರೆಯಿಸಿದಂತೆ, ಅವಳೂ ರನ್ನನಿಂದ ಅಜಿತ ಪುರಾಣವನ್ನು ಬರೆಯಿಸಿದಳು. ಅತ್ತಿಮಬ್ಬೆಯ ವ್ಯಕ್ತಿತ್ವವು ರನ್ನನ ಮನಸ್ಸನ್ನು ಸೂರೆಗೊಂಡಿತು. ಅವನು ಅವಳ ಭಕ್ತನೇ ಆಗಿಬಿಟ್ಟ. ಅವಳು ಅವನಿಗೆ ಒಬ್ಬ ತಪಸ್ವಿನಿಯಂತೆ ಕಂಡಳು. ಭಕ್ತಿಯಿಂದ, ಕೃತಜ್ಞತೆಯಿಂದ, ತನ್ನ ಕಾವ್ಯದಲ್ಲಿ ಅವಳಿಗೆ ಸ್ತೋತ್ರ ಮಾಲಿಕೆಯನ್ನು ಅರ್ಪಿಸಿದನು, ಜಿನ ಧರ್ಮಪತಾಕೆಯನ್ನು ಎತ್ತಿ ಹಿಡಿದ ಮಹಾಸತಿ ಅತ್ತಿಮಬ್ಬೆಯನ್ನು ಬಣ್ಣಿಸುವುದು ಪುಣ್ಯವೆಂದು ಭಾವಿಸಿದನು. ಜಿನಪದಭಕ್ತೆ, ಜಗತ್ತ್ರಯ ಜನವಂದಿತೆ, ಚಕ್ರವರ್ತಿ ಪೂಜಿತೆ, ಕಸವರಗಲಿ (ಎಂದರೆ ಚಿನ್ನವನ್ನು ದಾನ ಮಾಡುವುದರಲ್ಲಿ ಶೂರಳು), ಶೀಲಾಲಂಕೃತೆ, ಗುಣಮಾಲಾಲಂಕೃತೆ ಎಂದು ಮುಂತಾಗಿ ರನ್ನ ಮನಃಪೂರ್ವಕವಾಗಿ ಆಕೆಯನ್ನು ಕೊಂಡಾಡಿದ್ದಾನೆ. ಅವಳ ಶುಭ್ರವಾದ ಶೀಲ ಬಿಳಿಯ ಅರಳೆಯಂತೆ ಅಚ್ಚ ಬಿಳಿಪು; ಗಂಗಾಜಲದಂತೆ ನಿರ್ಮಲ ; ಗುರು ಅಜಿತ ಸೇನರ ಗುಣಗಳಂತೆ ಪವಿತ್ರ. ಅತ್ತಿಮಬ್ಬೆಯ ದಾನಗುಣವನ್ನು ಎಷ್ಟು ವರ್ಣಿಸಿದರೂ ರನ್ನನಿಗೆ ತೃಪ್ತಿಯಿಲ್ಲ.

ಉದ್ಧಾರ ಮಾಡುವ ಧರ್ಮವೆಂಬ ತೀರ್ಥವನ್ನು ಉತ್ಪತ್ತಿ ಮಾಡತಕ್ಕವನು' ಎಂದು ಅರ್ಥ. ತೀರ್ಥಂಕರರೂ ನಮ್ಮಂತೆಯೇ ಮನುಷ್ಯರು. ಪಾಪ ಕರ್ಮದಿಂದ ಪ್ರಾಣಿ ಜನ್ಮ, ನರಕವಾಸ, ಮುಂತಾದ ಕೀಳುಗತಿಯೂ, ಪುಣ್ಯ ಕರ್ಮದಿಂದ ಸ್ವರ್ಗಸುಖವನ್ನು ಅನುಭವಿಸುವ ದೇವಜನ್ಮವೂ ದೊರಕುವುವು. ಇದು ಜೈನಧರ್ಮದ ನಂಬಿಕೆ–ಹಿಂದೂ ಧರ್ಮದಲ್ಲಿ ಇರುವಂತೆ. ಪ್ರತಿ ಜನ್ಮದಲ್ಲಿಯೂ ಪುಣ್ಯ ಪಾಪ ಕಾರ್ಯಗಳನ್ನು ಮಾಡುತ್ತಲೇ ಇರುವುದರಿಂದ, ಜನ್ಮಾಂತರ ಅಥವಾ ಭವಾಂತರಗಳಿಗೆ ಕೊನೆ ಮೊದಲೇ ಇಲ್ಲ. ಪಾಪಕರ್ಮದ ಕಡೆಗೆ ಮನಸ್ಸು ಹೋಗದಂತಹ ಉತ್ತಮವಾದ ಮಟ್ಟದಲ್ಲಿ ಇರುತ್ತದೆ ತೀರ್ಥಂಕರನಾಗುವ ಜೀವಿಯ ಬದುಕು. ಹೀಗೆ, ತೀರ್ಥಂಕರರ ಕಥೆಗಳಲ್ಲಿಮಾನವಜನ್ಮ – ದೇವಜನ್ಮ, ಈ ಎರಡರ ನಡುವೆ ಜೀವನು ತೊಳಲಾಡುತ್ತಿರುತ್ತಾನೆ. ತೀರ್ಥಂಕರನಾಗುವ ಜೀವನು ಜನ್ಮ ಜನ್ಮಾಂತರಗಳಲ್ಲಿ ತೊಳಲಿ, ಕಡೆಗೆ ಒಂದು ಜನ್ಮದಲ್ಲಿ ಅತ್ಯಂತ ವೈರಾಗ್ಯ ಹೊಂದಿ, ತಪಸ್ಸು ಮಾಡಿ ಕರ್ಮದ ಕಟ್ಟಿನಿಂದ ಬಿಡುಗಡೆ ಹೊಂದಿ, ಶಾಶ್ವತವಾದ ಮೋಕ್ಷವನ್ನು ಪಡೆಯುತ್ತಾನೆ. ಜನ್ಮಾಂತರಗಳ ಕಥೆಯನ್ನು 'ಭವಾವಳಿ' ಎಂದು ಕರೆದಿದೆ. ಸಾಧಾರಣವಾಗಿ ಪ್ರತಿ ತೀರ್ಥಂಕರನ ಕಥೆಯಲ್ಲಿಯೂ ಈ ಭವಾವಳಿಯ ಕಥೆ ಉಂಟು. ತೀರ್ಥಂಕರನೆನಿಸುವವನು ಕಡೆಯಲ್ಲಿ ಹುಟ್ಟು ಸಾವುಗಳನ್ನು ಗೆಲ್ಲುವುದರಿಂದ 'ಜಿನ' ಎನ್ನಿಸಿಕೊಳ್ಳುತ್ತಾನೆ. ಜಿನ ಎಂದರೆ ಗೆದ್ದವನು ಎಂದು ಅರ್ಥ. ತೀರ್ಥಂಕರರು ಇತರರಿಗೆ ಮೋಕ್ಷ ಕೊಡಬಲ್ಲ ಜಿನಧರ್ಮವನ್ನು ಬೋಧೆ ಮಾಡಿ, ಕೈವಲ್ಯ ಪದವಿಯಲ್ಲಿ ಶಾಶ್ವತವಾಗಿ ನೆಲಸಿರುತ್ತಾರೆ. ಕೈವಲ್ಯ ಎಂದರೆ ಮೋಕ್ಷ. ಆದ್ದರಿಂದ ಜಿನರು 'ಕೇವಲಿ'ಗಳು ಎನ್ನಿಸಿಕೊಳ್ಳುತ್ತಾರೆ. ಇವರು ಪಡೆಯುವ ಜ್ಞಾನವೇ ಕೇವಲಜ್ಞಾನ. ಜೈನ ಧರ್ಮದಲ್ಲಿ ಇಂಥ ೨೪ ಮಂದಿ ತೀರ್ಥಂಕರರು ಆಗಿ ಹೋಗಿದ್ದಾರೆ. ಅಜಿತನಾಥನು ಎರಡನೆಯ ತೀರ್ಥಂಕರ.

ಪಂಪನು ಬರೆದಿರುವ ಆದಿಪುರಾಣದಲ್ಲಿ, ಮೊದಲನೆಯ ತೀರ್ಥಂಕರನಾದ ವೃಷಭಸ್ವಾಮಿಯ 'ಭವಾವಳಿ'ಯ ಕಥೆ ಅವನ ಹತ್ತು ಜನ್ಮಗಳನ್ನು ಒಳಕೊಂಡಿದೆ. ಅಜಿತನಾದರೋ ಎರಡೇ ಜನ್ಮಗಳಲ್ಲಿ ಮೋಕ್ಷಕ್ಕೆ ಅರ್ಹನಾದನು.

ಅಜಿತನು ಅದಕ್ಕೆ ಹಿಂದಿನ ಜನ್ಮದಲ್ಲಿ ವತ್ಸಕಾವತೀ ದೇಶದಲ್ಲಿ ಸುಸೀಮಾ ನಗರದಲ್ಲಿ ವಿಮಲವಾಹನನೆಂಬ ರಾಜನಾಗಿದ್ದನು. ಅವನು ಒಂದು ದಿನ ಕನ್ನಡಿಯಲ್ಲಿ ಕೆನ್ನೆಯ ಮೇಲೆ ನರೆತ ಕೂದಲನ್ನು ಕಂಡನು. ದೇಹ ದುಃಖಕ್ಕೆ ಕಾರಣ ಎಂದು ತೋರಿತು. ವೈರಾಗ್ಯ ಹುಟ್ಟಿತು. ಸಂಸಾರ ನಿಸ್ಸಾರವೆಂದು ಕಂಡಿತು : "ಕಡೆಯಿಲ್ಲದ ಸಂಸಾರದ ಕಡೆಯನ್ನು ಕಾಣಬೇಕೆಂಬ ಇಷ್ಟ ನಿನಗಿದ್ದರೆ

ಅತ್ತಿಮಬ್ಬೆಯನ್ನು 'ಕವಿವರರ ಕಾಮಧೇನು,' 'ದಾನ ಚಿಂತಾಮಣಿ' ಎಂದು ರನ್ನ ಹೊಗಳಿರುವುದು ಹೆಚ್ಚಿನ ಮಾತಲ್ಲ. ಅತ್ತಿಮಬ್ಬೆ ಹೊಸಕಾವ್ಯದ ರಚನೆಗೆ ಉತ್ತೇಜನ ಕೊಟ್ಟದ್ದು ಮಾತ್ರವಲ್ಲ ; ಹಿಂದಿನ ಕಾವ್ಯಗಳ ರಕ್ಷಣೆಗೂ ಗಮನಹರಿಸಿದಳು. ಪೊನ್ನನ ಶಾಂತಿಪುರಾಣ ಹೂತು, ಕೆಟ್ಟುಹೋಗುತ್ತದೆ ಎಂದು ಅದರ ಒಂದು ಸಾವಿರ ಪ್ರತಿಗಳನ್ನು ಮಾಡಿಸಿ ಹಂಚಿಸಿದಳು. ಅಚ್ಚಿನ ಅನುಕೂಲ ಇಲ್ಲದಿದ್ದ ಆ ಕಾಲದಲ್ಲಿ, ಸಂಪ್ರತಿಕಾರರಿಂದ ಪ್ರತಿ ಮಾಡಿಸಲು ಅಂಥವರು ಎಷ್ಟು ಜನಬೇಕು, ಅಷ್ಟು ಜನಕ್ಕೂ ಎಷ್ಟು ಹಣ ವೆಚ್ಚಮಾಡಬೇಕು ಎಂಬುದನ್ನು ಊಹಿಸಿಕೊಳ್ಳಬಹುದು. ಈ ಸಂಗತಿಯನ್ನು ರನ್ನ ಹೇಳಿರದಿದ್ದರೂ, ಅವನಿಗೆ ಅದು ಗೊತ್ತಿದ್ದಿರಬೇಕು ; ಶಾಂತಿಪುರಾಣದ ಕೊನೆಯ ಹೆಚ್ಚಿನ ಪದ್ಯಗಳಲ್ಲಿ ಇದನ್ನು ವರ್ಣಿಸಿದೆ. ಅತ್ತಿಮಬ್ಬೆ ಒಂದು ಸಾವಿರದ ಐದನೂರು ರತ್ನಖಚಿತವಾದ ಚಿನ್ನದ ಜಿನ ಪ್ರತಿಮೆಗಳನ್ನು ಮಾಡಿಸಿ ದಾನ ಮಾಡಿದ್ದನ್ನು ರನ್ನ ವರ್ಣಿಸಿದ್ದಾನೆ. ಅತ್ತಿಮಬ್ಬೆ ಒಂದು ಜಿನೇಂದ್ರ ಗೃಹವನ್ನು ಕಟ್ಟಿಸಿದ ಸಂಗತಿಯೂ ಒಂದು ಶಾಸನದಿಂದ ತಿಳಿದುಬರುತ್ತದೆ. ಅತ್ತಿಮಬ್ಬೆಯ ವ್ರತನಿಷ್ಠೆಯನ್ನೂ ದಾನಗುಣವನ್ನೂ ಕೆಲವೇ ಮಾತುಗಳಲ್ಲಿ ಹಿಡಿದಿಟ್ಟಿರುವ ರನ್ನನ ಒಂದು ಪದ್ಯವನ್ನು ಎತ್ತಿಬರೆದು ಈ ಪ್ರಕರಣವನ್ನು ಮುಗಿಸಬಹುದು :

"ಒಡಲನ್ ಉಪವಾಸದಿಂ ತ–<br>
ನ್ನೊಡಮೆಯನ್ ಅನವರತದಾನದಿಂ ತವಿಸಿ, ಜಸಂ –<br>
ಬಡೆದಳ್ : ನೂರ್ಮಡಿ ತೈಲನ<br>
ಪಡೆವಳ ತೈಲನ ಜನನಿಗೆ ಎಣೆ ಪೆರರ್ ಒಳರೇ ?"

"ಅತ್ತಿಮಬ್ಬೆ ತನ್ನ ದೇಹವನ್ನು ಉಪವಾಸದಿಂದ ಬಡವಾಗಿಸಿದಳು. ತನ್ನ ಸಂಪತ್ತನ್ನು ನಿತ್ಯ ದಾನದಿಂದ ಬರಿದು ಮಾಡಿಕೊಂಡಳು ; ಹೀಗೆ ಮಾಡಿ, ಯಶಸ್ಸನ್ನು ಪಡೆದಳು. ತೈಲಪನ ಸೇನಾಪತಿಯಾದ ತೈಲನ ತಾಯಿಗೆ ಸಮಾನರು ಬೇರೆ ಯಾರಾದರೂ ಇದ್ದಾರೆಯೆ?"

**ಅಜಿತ ಪುರಾಣ**

ಎರಡನೆಯ ತೀರ್ಥಂಕರನಾದ ಅಜಿತನಾಥನನ್ನು ಕುರಿತ ಪುರಾಣಕಾವ್ಯ ಈ ಕೃತಿ. ಪಂಪನ ಆದಿಪುರಾಣಕ್ಕೂ ಪೊನ್ನನ ಶಾಂತಿಪುರಾಣಕ್ಕೂ ಇದು ಸರಿಸಮಾನ ಎಂದು ರನ್ನ ಹೊಗಳಿಕೊಂಡಿದ್ದಾನೆ.

ತೀರ್ಥಂಕರ ಎಂದರೆ – 'ಹುಟ್ಟು ಸಾವುಗಳಿಂದ ಕೂಡಿದ ಸಂಸಾರ ಸಾಗರವನ್ನು ದಾಟಿಸಿ, ಮೋಕ್ಷವನ್ನು ಕೊಡತಕ್ಕವನು,' ಅಥವಾ 'ಜಗತ್ತನ್ನು

ಬಹು ದೀರ್ಘಕಾಲ ಈ ರೀತಿ ಉಪದೇಶಮಾಡಿ, ತನ್ನ ಆಯುಷ್ಯದಲ್ಲಿ ಒಂದು ತಿಂಗಳು ಉಳಿದಿರುವಾಗ, 'ಶುಕ್ಲಧ್ಯಾನ' ಎಂಬ ಶ್ರೇಷ್ಠ ರೀತಿಯ ಧ್ಯಾನದಿಂದ ಅತ್ಯಂತ ಸೂಕ್ಷ್ಮವಾದ ಕರ್ಮಗಳನ್ನು ನಾಶಮಾಡಿಕೊಂಡು ಮುಕ್ತಿಯನ್ನು ಪಡೆಯುವನು. ಇದೇ ಕಡೆಯ (೫) ಪರಿನಿರ್ವಾಣ ಕಲ್ಯಾಣ. ರನ್ನನು ಈ ಪಂಚಕಲ್ಯಾಣಗಳನ್ನು ತನ್ನದೇ ಆದ ಘನವಾದ ಶೈಲಿಯಲ್ಲಿ ಹೇಳಿಕೊಂಡು ಹೋಗಿದ್ದಾನೆ. ಇದು ಪುರಾಣವಾದ್ದರಿಂದ, ಶಾಸ್ತ್ರವಿಚಾರ ತುಂಬಿಹೋಗಿದೆ ; ಸಾಲದುದಕ್ಕೆ, ಅಜಿತನ ಕಥೆಯಲ್ಲಿ ಜನ್ಮಾಂತರಗಳ ಸಂಖ್ಯೆ ಕಡಿಮೆ; ಸ್ವಾರಸ್ಯವಾದ ಸನ್ನಿವೇಶಗಳೂ ಕಡಿಮೆ. ಆದ್ದರಿಂದ ರನ್ನನ ಕವಿತಾಶಕ್ತಿ ಒಂದೇ ಸಮನಾಗಿ ಇಲ್ಲಿ ಕಾಣಿಸಿಕೊಳ್ಳಲು ಅವಕಾಶವಿಲ್ಲ. ಆದರೂ, ಇಲ್ಲಿ ಕನ್ನಡ ಭಾಷೆ ತಿಳಿಯಾಗಿದೆ. ಹೇಳಿದ ಅರ್ಥವನ್ನು ಒತ್ತಿ ಒತ್ತಿ ಮನಸ್ಸಿಗೆ ಹಿಡಿಸುವಂತೆ ಮಾಡುತ್ತಾನೆ.

ಅಜಿತನು ತಪಸ್ಸಿಗೆ ಕುಳಿತಾಗ ಅವನ ಶಾಂತ ಮೂರ್ತಿಯನ್ನು ರನ್ನ ಹೀಗೆ ಕಡೆದಿಟ್ಟಿದ್ದಾನೆ :

ವದನಂ ಸ್ತಿಮಿತಾಕ್ಷಂ, ಶ್ಲಿ –
ಷ್ಟದಂತಂ, ಅಷ್ಟಾಂಗಪಾತಂ, ಅಭ್ರೂಭಂಗಾ –
ಸ್ಪದಂ, ಎಸೆದುದು ಯೋಗ ನಿಯೋ–
ಗದೊಳಜಿತ ಮಹಾಮುನಿಂದ್ರ ವೃಂದಾರಕನಾ.

ಅಜಿತ ಮಹಾಮುನಿ ಯೋಗದಲ್ಲಿ ಕುಳಿತಿದ್ದಾಗ ಅವನ ಮುಖದಲ್ಲಿ ಕಣ್ಣು ಏನನ್ನೂ ನೋಡದೆ ಇದ್ದುವು ; ಹಲ್ಲು ಕೂಡಿಕೊಂಡಿದ್ದುವು ; ಹುಬ್ಬು ಅಲುಗಾಡುತ್ತಿರಲಿಲ್ಲ; ಮುಖ ಎಂಟು ಬಗೆಯ ಧ್ಯಾನದಲ್ಲಿ ನೆಲಸಿತ್ತು.

ಆದಿ ಪುರಾಣದಲ್ಲಿ ವೃಷಭನ ಕಥೆಯೊಂದಿಗೆ ಆ ಕಾಲದ ಚಕ್ರವರ್ತಿಯಾಗಿದ್ದ ಭರತನ ಕಥೆ ಬರುವಂತೆ, ಅಜಿತನ ಕಥೆಯಲ್ಲಿ ಸಗರಚಕ್ರವರ್ತಿಯ ಕಥೆ ಬರುತ್ತದೆ,

ಸಗರನಿಗೆ ಅರವತ್ತು ಸಾವಿರ ಮಂದಿ ಪುತ್ರರು ! ಇವರೆಲ್ಲರೂ ಸಾಯುವಂತೆ ಒಂದು ಸನ್ನಿವೇಶ ಸೃಷ್ಟಿಯಾಗಿದೆ. ಅವರು ನಿಜವಾಗಿ ಸತ್ತಿರುವುದಿಲ್ಲ. ಯಾರಿಗೂ ಸಾವು ತಪ್ಪಿದ್ದಲ್ಲ. ಚಕ್ರವರ್ತಿಯಾದರೂ ಭೂಮಂಡಲವನ್ನು ಗೆಲ್ಲಬಹುದು, ಸಾವನ್ನು ಗೆದ್ದು ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎಂಬ ಸತ್ಯ ಸಗರನಿಗೆ ಮನದಟ್ಟಾಗುತ್ತದೆ. ಅವನು ವೈರಾಗ್ಯ ಹೊಂದಿ, ಮಕ್ಕಳೊಂದಿಗೆ ಅಜಿತನಿಂದ ಧರ್ಮೋಪದೇಶವನ್ನು ಕೇಳುತ್ತಾನೆ. ಇವರೆಲ್ಲರೂ ತಪಸ್ಸುಮಾಡಿ ಮೋಕ್ಷವನ್ನು ಪಡೆಯುತ್ತಾರೆ.

ಮೋಕ್ಷದ ಕಡೆಗೆ ಮನಸ್ಸು ಕೊಡು. ಎಲೆ ಜೀವ, ನಿನ್ನ ಕಾಲುಹಿಡಿದು ಕೇಳಿಕೊಳ್ಳುತ್ತೇನೆ, ನನ್ನ ಮಾತು ಕೇಳು : ಧರ್ಮವನ್ನು ಬಿಗಿಯಾಗಿ ಹಿಡಿದುಕೋ" ಎಂದು ಬದುಕನ್ನು ಮೋಕ್ಷದ ಕಡೆಗೆ ತಿರುಗಿಸಿದನು.

ವೈರಾಗ್ಯ ಹೊಂದಿದ ವಿಮಲವಾಹನನು ತನ್ನ ಮಗನಿಗೆ ಪಟ್ಟಕಟ್ಟಿ ತಪಸ್ಸಿಗಾಗಿ ಕಾಡಿಗೆ ತೆರಳಿದನು. ಜೈನದೀಕ್ಷೆಯನ್ನು ಪಡೆದು, ತಪಸ್ಸು ಮಾಡಿ, ಧ್ಯಾನ ಮಾಡುತ್ತ ಮರಣ ಹೊಂದಿದನು. ಮರುಜನ್ಮದಲ್ಲಿ, ಸ್ವರ್ಗದಲ್ಲಿ ಅಹಮಿಂದ್ರನೆಂಬ ದೇವನಾಗಿ ಹುಟ್ಟಿದನು. ಬೇಕಾದಷ್ಟು ಸ್ವರ್ಗಸುಖವನ್ನು ಅನುಭವಿಸಿದನು. ಬಹು ದೀರ್ಘಕಾಲದ ಸ್ವರ್ಗವಾಸದ ಆಯುಷ್ಯ ಕೂಡ ತೀರಿ ಹೋಗುವ ಸಮಯ ಬಂತು. ತಾನು ತೀರ್ಥಂಕರನಾಗಿ ಹುಟ್ಟುವ ಸೂಚನೆಗಳು ಕಂಡು ಬಂದು, ಆ ಜನ್ಮವೆತ್ತಲು ಸಿದ್ಧನಾದನು.

ಎಲ್ಲ ತೀರ್ಥಂಕರ ಪುರಾಣಗಳಲ್ಲಿರುವಂತೆ ಇಲ್ಲಿಯೂ ಪಂಚಕಲ್ಯಾಣಗಳ ವರ್ಣನೆ ಬರುತ್ತದೆ. ಪಂಚಕಲ್ಯಾಣ ಎಂದರೆ, ತೀರ್ಥಂಕರನ ಜೀವನದ ಐದು ಮುಖ್ಯ ಮಂಗಳಕರವಾದ ಸಂಗತಿಗಳು. ಇವು ಹೀಗಿವೆ : ಪ್ರತಿಯೊಬ್ಬ ತೀರ್ಥಂಕರನೂ ಭೂಲೋಕದಲ್ಲಿ ಅವತರಿಸುವುದಕ್ಕೆ ಮುಂಚೆ ದೇವತೆಯಾಗಿರುತ್ತಾನೆ. ಅವನು ಸ್ವರ್ಗವನ್ನು ಬಿಟ್ಟು, ತಾನು ಹುಟ್ಟಲಿರುವ ತಾಯಿಯ ಬಸಿರನ್ನು ಪ್ರವೇಶಿಸುವುದು ಮೊದಲನೆಯ (೧) ಗರ್ಭಾವರತಣ ಕಲ್ಯಾಣ. ಜಿನಶಿಶು ಹುಟ್ಟಿದ ಮೇಲೆ, ಇಂದ್ರನು ತಾಯಿಗೆ ಗೊತ್ತಾಗದಂತೆ ಜಿನಶಿಶುವನ್ನು ತರಿಸಿಕೊಂಡು ಶಿಶುವಿಗೆ ಹಾಲಿನ ಅಭಿಷೇಕ ಮಾಡಿ, ನಾಮಕರಣ ಮಾಡುವನು. ಇದು (೨) ಜನ್ಮಾಭಿಷೇಕ ಕಲ್ಯಾಣ. ತೀರ್ಥಂಕರನಾಗುವವನು ಸಂಸಾರ ಸುಖವನ್ನು ಅನುಭವಿಸಿದ ಮೇಲೆ ವೈರಾಗ್ಯ ಹೊಂದಿ, ತಪಸ್ಸು ಮಾಡಲು ವನಕ್ಕೆ ತೆರಳುವುದು (೩) ಪರಿನಿಷ್ಕ್ರಮಣ ಕಲ್ಯಾಣ. (ನಿಷ್ಕ್ರಮಣ ಎಂದರೆ ಮನೆ ಬಿಟ್ಟು ಹೊರಟು ಹೋಗುವುದು). ಅನಂತರ ಅವನು ಕಾಡಿನಲ್ಲಿ ಉಗ್ರವಾದ ತಪಸ್ಸು ಮಾಡಿ, ಹಿಂದಿನ ಜನ್ಮದ ಕರ್ಮಗಳನ್ನು ನಾಶಮಾಡಿಕೊಳ್ಳುವನು. ಅನಂತರ, ಭಿಕ್ಷೆಯೆತ್ತುತ್ತಾ ಊರೂರು ಅಲೆಯುವನು. ಶುಭಘಳಿಗೆಯಲ್ಲಿ ಅವನಿಗೆ 'ಕೇವಲ ಜ್ಞಾನ' ಹುಟ್ಟುವುದು. ಇದು (೪) ಕೇವಲ ಜ್ಞಾನೋತ್ಪತ್ತಿ ಕಲ್ಯಾಣ. ಕೇವಲಜ್ಞಾನವನ್ನು ಪಡೆದ ತೀರ್ಥಂಕರನಾಗುವನು. ಇವನು ಧರ್ಮೋಪದೇಶ ಮಾಡಲು ದೇವೇಂದ್ರನು ಒಂದು ಭವ್ಯವಾದ ಮಂಟಪವನ್ನು ನಿರ್ಮಿಸಿಕೊಡುವನು. ಇದಕ್ಕೆ ಸಮವಸರಣ ಮಂಟಪ ಎಂದು ಹೆಸರು. ಇಲ್ಲಿ ತೀರ್ಥಂಕರನ ಉಪದೇಶವನ್ನು ದೇವತೆ, ಮನುಷ್ಯರು, ಸಕಲ ಪ್ರಾಣಿಗಳೆಲ್ಲರೂ ಕೇಳುವರು. ಅಜಿತ ತೀರ್ಥಂಕರನು

ಮಾಡಿ ಬಳಲಬೇಕಾಗಿಲ್ಲ. ಮೊದಲಿಂದ ಕಡೆಯವರೆಗೆ ವೀರ, ಕರುಣ, ರೌದ್ರ, ಅದ್ಭುತ ರಸಗಳ ಪ್ರವಾಹದಲ್ಲಿ ರನ್ನ ನಮ್ಮನ್ನು ತೇಲಿಸಿಕೊಂಡು ಹೋಗುತ್ತಾನೆ. 'ರಸಘಟ್ಟಿ' ಎಂಬ ಮಾತು ಅಜಿತಪುರಾಣಕ್ಕಿಂತ ಹೆಚ್ಚಾಗಿ ಈ ಕಾವ್ಯಕ್ಕೆ ಸಲ್ಲುತ್ತದೆ.

ಗದಾಯುದ್ಧವನ್ನು ಓದುತ್ತಿದ್ದರೆ ಕಾವ್ಯವನ್ನು ಓದಿದಂತೆ ನಮಗೆ ಅನ್ನಿಸುವದೇ ಇಲ್ಲ. ನಾಟಕವನ್ನು ನೋಡಿದಂತೆ ಭಾಸವಾಗುತ್ತದೆ. ಕವಿ ಹಿಂದೆ ನಿಂತು, ಪಾತ್ರಗಳ ಸಂಬಾಷಣೆಗಳ ಮೂಲಕ ಕಥೆ ಹೇಳುತ್ತಾನೆ.

ಈಗ, 'ಗದಾಯುದ್ಧ ನಾಟಕ'ದ ಕೆಲವು ದೃಶ್ಯಗಳನ್ನು ನೋಡೋಣ.

ಗದಾಯುದ್ಧದ ಕಥೆ ಭೀಮ ದ್ರೌಪದಿಯರ ಸಂಭಾಷಣೆಯಿಂದ ಮೊದಲಾಗುತ್ತದೆ. ಒಬ್ಬ ವೃದ್ಧ ಕಂಚುಕಿ ಮತ್ತು ಕೆಳದಿಯೊಂದಿಗೆ ದ್ರೌಪದಿ ಭೀಮನಲ್ಲಿಗೆ ಬಂದು ದುಃಖವನ್ನು ತೋಡಿಕೊಳ್ಳುತ್ತಾಳೆ.

ದ್ರೌಪದಿ – ಕೃಷ್ಣನು ಸಂಧಿ ಮಾಡುವುದಕ್ಕೆ ಯತ್ನಿಸಿದ. ನನ್ನ ನಿನ್ನ ಪುಣ್ಯದಿಂದ ಅದು ಕೈಗೂಡಲಿಲ್ಲ. ಸುಯೋಧನ (ದುರ್ಯೋಧನ)ನೊಬ್ಬನು ಉಳಿದುಕೊಂಡು ಶತ್ರು ಸೈನ್ಯವೆಲ್ಲ ನಾಶವಾಗಿದೆ. ಭೀಷ್ಮ ಧೃತರಾಷ್ಟ್ರರು ಇದ್ದಾರೆ. ಅವರು ಹೇಳಿದರೆ, ನಮ್ಮರಸನು ಅವರ ಮಾತು ಕೇಳಿ ಎಲ್ಲಿ ಸುಯೋಧನನೊಂದಿಗೆ ಸಂಧಿಮಾಡಿಕೊಂಡು ಬಿಡುತ್ತಾನೋ ಎಂದು ನನಗೆ ವ್ಯಥೆಯಾಗಿದೆ. ಕೌರವರಿಗೆ ಯಮನಂತಿರುವ ನೀನೇ ನನ್ನ ಸಂಶಯವನ್ನು ಕಳೆಯಬೇಕು. ಧರ್ಮಸುತನಿಂದ ಸಂಧಿಯಾದರೆ, ನಿಮಗೆ ಮತ್ತೆ ವನವಾಸವೇ ಗತಿ. ನಾನು ಅಗ್ನಿಯಲ್ಲಿ ಹುಟ್ಟಿದೆ; ಅಗ್ನಿಗೆ ಬಿದ್ದು ಸಾಯುತ್ತೇನೆ. ದುಶ್ಯಾಸನನ ರಕ್ತವನ್ನು ಕುಡಿದಾಗ, ಆ ರಕ್ತ ನಿನ್ನ ಕೋಪವನ್ನು ತಣ್ಣಗೆ ಮಾಡಿತೇನು ?

(ದ್ರೌಪದಿ ಅಗ್ನಿಯಲ್ಲಿ ಹುಟ್ಟಿದವಳು ಎಂದು ನಂಬಿಕೆ. ತಮಗೆ ಎಲ್ಲ ಬಗೆಗಳಲ್ಲಿ ಅನ್ಯಾಯ ಮಾಡಿದ ದುರ್ಯೋಧನನಿಗೆ ಶಿಕ್ಷೆಯಾಗದೆ ಹೋದರೆ ತಾನು ಬೆಂಕಿಯಲ್ಲಿ ಬಿದ್ದು ಪ್ರಾಣಬಿಡುತ್ತೇನೆ ಎಂದು ದ್ರೌಪದಿಯ ಸೂಚನೆ)

ಕ್ಷತ್ರಿಯನಿಗೆ ಕೋಪ ಬರದಿದ್ದರೆ, ಉತ್ಸಾಹ ಹುಟ್ಟುವುದಿಲ್ಲ; ಉತ್ಸಾಹ ಹುಟ್ಟದೆ ವೀರ ಉಕ್ಕುವುದಿಲ್ಲ. ಕೌರವರಿಂದ ಮಾನಭಂಗ ಹೊಂದಿದ್ದ ದ್ರೌಪದಿಯ ಮನಸ್ಸು ಭೀಮನಿಗೆ ಅರ್ಥವಾಯಿತು. ಹಿಂದೆ ಅಣ್ಣನ ಸತ್ಯವಚನಕ್ಕೆ ಕಟ್ಟುಬಿದ್ದು ತಾನೂ ಅರ್ಜುನನೂ ಸುಮ್ಮನಿದ್ದುದಾಯಿತು. ಇನ್ನು ಸುಮ್ಮನಿರಲು ಸಾಧ್ಯವಿಲ್ಲ. ಪಶ್ಚಾತ್ತಾಪಪಟ್ಟು ನುಡಿದ :

"ದುಶ್ಯಾಸನನು ಎಳೆದಾಡಿದ ನಿನ್ನ ಕೂದಲರಾಶಿ ಇಳಿದುಬಿದ್ದಿರುವಾಗ, ನಿನ್ನ ಮುಖದಲ್ಲಿ ಕಣ್ಣೀರು ಇಳಿಯುತ್ತಿರುವಾಗ, ಈ ಭೀಮನ ಕೋಪ ಇಳಿದು

**‘ಸಾಹಸಭೀಮ ವಿಜಯ’ ಅಥವಾ ‘ಗದಾಯುದ್ಧ’**

ಜೈನನಾದ ರನ್ನ ವೈದಿಕಮತದ ಚಾಳುಕ್ಯ ದೊರೆಗಳ ಆಶ್ರಯವನ್ನು ಪಡೆದಮೇಲೆ ಈ ಕಾವ್ಯ ರಚಿತವಾಯಿತು. ಎರಡನೆಯ ತೈಲಪ ಚಕ್ರವರ್ತಿಯಾಗಿದ್ದಾಗ ಯುವರಾಜ ಸತ್ಯಾಶ್ರಯ ಇರಿವಬೆಡಂಗನು ಅನೇಕ ಯುದ್ಧಗಳಲ್ಲಿ ಭಾಗವಹಿಸಿ, ಕನ್ನಡ ರಾಜ್ಯವನ್ನು ಶತ್ರುಗಳ ಆಕ್ರಮಣದಿಂದ ಉಳಿಸಿದನು. ಇದರಿಂದ, ಕನ್ನಡ ಸಾಹಿತ್ಯದ ಉಳಿವಿಗೂ ಏಳಿಗೆಗೂ ಸಹಾಯವಾಯಿತು. ರನ್ನನು ಸತ್ಯಾಶ್ರಯನ ಸಾಹಸಕಾರ್ಯಗಳಲ್ಲಿ ಮಹಾಭಾರತದ ಭೀಮನ ಸಾಹಸ ಪರಂಪರೆಯನ್ನು ಗುರುತಿಸಿದನು. ಸತ್ಯಾಶ್ರಯನು ಸಾಹಸಭೀಮನಾಗಿ ಕಂಡನು. ಕಾವ್ಯದ ಪ್ರಾರಂಭದಲ್ಲಿ ರನ್ನ ಸತ್ಯಾಶ್ರಯನ ವಂಶಾವಳಿಯನ್ನೂ ಸಾಹಸ ವಿಜಯಗಳನ್ನೂ ವರ್ಣಿಸಿ, ಕಾವ್ಯ ಬರೆಯುವುದರಲ್ಲಿ ತನ್ನ ಗುರಿ ಏನು ಎನ್ನುವುದನ್ನು ತಿಳಿಸಿದ್ದಾನೆ :

“ಪೃಥ್ವೀವಲ್ಲಭನಾದ ಸತ್ಯಾಶ್ರಯದೇವನೆ ಕಥಾ ನಾಯಕ. ಅವನನ್ನು ಭೀಮನೊಂದಿಗೆ ಹೋಲಿಸಿ ಮಹಾಕವಿ ರನ್ನನು ಈ ಗದಾಯುದ್ಧವನ್ನು ಹೇಳಿದನು. ಚಕ್ರವರ್ತಿ ಸಾಹಸಭೀಮನೇ ಕಾವ್ಯಕ್ಕೆ ಒಡೆಯ.”

“ಕೌರವರ ಮೇಲೆ ಬದ್ಧವೈರವನ್ನು ಹೊಂದಿದ ಪ್ರಸಿದ್ಧರಾದ ಕುಂತೀಪುತ್ರರಲ್ಲಿ, ಹಗೆ ತೀರಿಸಿಕೊಳ್ಳುವ ವಿಷಯದಲ್ಲಿ, ಭೀಮ ಮೊದಲು ಬರತಕ್ಕವನು. ಪಾಂಡವರ ಮೇಲೆ ಬದ್ಧವೈರ ಸಾಧಿಸುವ ವಿಷಯದಲ್ಲಿ ದುರ್ಯೋಧನ ಮೊದಲಿಗೆ. ಧರ್ಮಯುದ್ಧದಲ್ಲಿ ಭೀಮನು ಅವನನ್ನು ಕೊಂದನು. ಆದ್ದರಿಂದ ಭೀಮ ಜಯೋದ್ಧಾಮ. ಅವರಿಬ್ಬರ ಗದಾಯುದ್ಧವನ್ನು ರನ್ನ ಹೇಳಿದ್ದಾನೆ.”

‘ಒಳಹೊಕ್ಕು ನೋಡಿದರೆ ಭಾರತದೊಳಗಣ ಕಥೆಯೆಲ್ಲವೂ ಗದಾಯುದ್ಧದಲ್ಲಿ ಒಳಗೊಂಡಿದೆ, ಎಂದು ಹೇಳಲು ಸಾಧ್ಯವಾಗುವಂತೆ ಸಿಂಹಾವಲೋಕನಕ್ರಮದಿಂದ ರನ್ನ ಕಥೆ ಹೇಳಿದ್ದಾನೆ. ಕಾಡಿನಲ್ಲಿ ಸುತ್ತಮುತ್ತ ತನ್ನ ಆಹಾರದ ಪ್ರಾಣಿಗಳು ಎಲ್ಲಿ ಇವೆ ಎಂದು ಸಿಂಹ ಈ ಕೊನೆಯಿಂದ ಆ ಕೊನೆಯವರೆಗೆ ಮುಖ ಹೊರಳಿಸಿ, ಹುಡುಕುನೋಟವನ್ನು ಬೀರುವುದಂತೆ. ಆ ರೀತಿಯಲ್ಲಿ ಭಾರತದ ಆದಿಯಿಂದ ಅಂತ್ಯದವರೆಗೆ ರನ್ನನು ತನ್ನ ದೃಷ್ಟಿಯನ್ನು ಹಾಯಿಸಿ, ಭಾರತದ ಮುಖ್ಯ ಕಥಾಪ್ರಸಂಗಗಳೆಲ್ಲವೂ ಓದುಗರ ನೆನಪಿಗೆ ಬರುವಂತೆ ಅವುಗಳನ್ನು ಬಲು ಚಮತ್ಕಾರದಿಂದ ಪಾತ್ರಗಳ ಬಾಯಿಂದ ಹೇಳಿಸಿದ್ದಾನೆ.

ಗದಾಯುದ್ಧದಲ್ಲಿ ಅಜಿತಪುರಾಣದಲ್ಲಿರುವಂತೆ ಕಥೆಗೆ ಬೇಕಿಲ್ಲದ ವರ್ಣನೆಗಳ ಹಾವಳಿಯಿಲ್ಲ. ಓದುಗರು ಮತ ವಿಚಾರಶಾಸ್ತ್ರದ ಮರುಭೂಮಿಯಲ್ಲಿ ಪ್ರಯಾಣ

ಮುಂದೆ ಅವರ ಕೈ ನಡೆಯಲಿಲ್ಲ ಎಂದು ಅವನ ವಾದ. ಸಂಜಯನ ಮಾತು ದುರ್ಯೋಧನನನ್ನು ಇನ್ನಷ್ಟು ಕೆರಳಿಸುತ್ತದೆ. ಪಾಂಡವರನ್ನೂ, "ಅರ್ಜುನನಿಗೆ ಸಾರಥಿಯಾಗಿ ಹನ್ನೊಂದನೆಯ 'ಸೂತಾವತಾರ' ಎತ್ತಿದ" ಎಂದು ಕೃಷ್ಣನನ್ನೂ ತೆಗಳಿ ಮಾತನಾಡುತ್ತಾನೆ. "ನಿನಗೆ ದೈವ ಅನುಕೂಲವಾಗಿಲ್ಲ, ಪಾಂಡವರಿಗೆ ದೈವ ಸಹಾಯವಿದೆ, ಹೆಚ್ಚು ವಿವರಿಸಿ ಪ್ರಯೋಜನವಿಲ್ಲ" ಎಂದ ಸಂಜಯನ ನುಡಿಗೆ ದುರ್ಯೋಧನ ಬೇಸರಗೊಳ್ಳುತ್ತಾನೆ ; ಪಾಂಡವರೊಂದಿಗೆ ಒಬ್ಬೊಂಟಿಗನಾಗಿ ಕಾದಿ ಪೌರುಷವನ್ನು ಮೆರೆಯುತ್ತೇನೆ ಎಂದು ತನ್ನ ಹಟವನ್ನೇ ಮುಂದೆ ಮಾಡುತ್ತಾನೆ. ಸಂಜಯ ಸ್ವಾಮಿ ಭಕ್ತ ; ಈ ಹಟಮಾರಿಯನ್ನು ತಿದ್ದುವುದಾಗದು ಎಂದು ಯೋಚಿಸಿ, "ಬಲರಾಮ, ಅಶ್ವತ್ಥಾಮ, ಕೃಪ, ಕೃತವರ್ಮ, ಇವರಲ್ಲಿ ಒಬ್ಬರಿಗೆ ಸೇನಾಪತಿ ಪಟ್ಟವನ್ನು ಕಟ್ಟು, ಹಗೆ ತೀರಿಸಿಕೋ" ಎಂದು ಸಲಹೆ ಮಾಡುತ್ತಾನೆ. ಬಲರಾಮ ತೀರ್ಥಯಾತ್ರೆಯಲ್ಲಿದ್ದಾನೆ. ಉಳಿದ ಮೂವರನ್ನು ದುರ್ಯೋಧನ ನಂಬಲಾರ. ಹಗೆ ತೀರುವುದಿದ್ದರೆ ಕರ್ಣನಿಂದ, ದುಶ್ಯಾಸನನಿಂದ ತೀರಬೇಕಿತ್ತು. ತನ್ನಿಂದ ತೀರೀತು. ಬೇರೆಯರಿಂದ ಸಾಧ್ಯವಿಲ್ಲ. ಇದು ಅವನ ದೃಢವಾದ ಅಭಿಪ್ರಾಯ.

ಈ ವೇಳೆಗೆ ಮಗನ ಸ್ಥಿತಿಯನ್ನು ಚಾರರಿಂದ ತಿಳಿದ ಧೃತರಾಷ್ಟ್ರ ಗಾಂಧಾರಿಯರು ಮಗನನ್ನು ಸಮಾಧಾನ ಪಡಿಸುವುದಕ್ಕಾಗಿ ರಣರಂಗಕ್ಕೆ ಬರುತ್ತಾರೆ. ಮಡಿದು ಮಲಗಿದ್ದ ದುಶ್ಯಾಸನನನ್ನು ಕಂಡು ಅವರಿಗಾದ ದುಃಖ ಅಷ್ಟಿಷ್ಟಲ್ಲ. ದುರ್ಯೋಧನನೊಬ್ಬನಾದರೂ ಉಳಿದಿರುವನಲ್ಲಾ ಎಂಬುದೇ ಅವರ ಸಮಾಧಾನ. "ಸಂಧಿಗಾಗಿ ಸಂಜಯನನ್ನು ಅಟ್ಟುತ್ತೇನೆ, ಸಂಧಿ ಮಾಡಿಕೋ" ಎಂದು ಕುರುಡರಾಜ ಧೃತರಾಷ್ಟ್ರನು ಮಗನ ಕಾಲು ಹಿಡಿದು ಬೇಡಿಕೊಂಡರೂ ದುರ್ಯೋಧನನ ಹಟ ಸಡಿಲವಾಗಲಿಲ್ಲ. "ಅರ್ಜುನನನ್ನೂ ಭೀಮನನ್ನೂ ಕೊಂದು, ಕರ್ಣ ದುಶ್ಯಾಸನರ ಸಾವಿಗೆ ಸೇಡು ತೀರಿಸಿಕೊಂಡು, ಬಳಿಕ ಸಂಧಿ ಮಾಡಿಕೊಳ್ಳುತ್ತೇನೆ, ಧರ್ಮಪುತ್ರನೊಂದಿಗೆ ನಿಮ್ಮ ಸೇವೆ ಮಾಡುತ್ತೇನೆ" ಎಂದು ದುರ್ಯೋಧನ ತಂದೆಗೆ ಉತ್ತರ ಕೊಡುತ್ತಾನೆ. "ಹೋಗಲಿ, ಭೀಷ್ಮರ ಸಲಹೆ ಕೇಳಿ ಮುಂದಿನ ಕಾರ್ಯ ಮಾಡು" ಎಂದ ತಂದೆಯ ಮಾತಿಗೆ ಒಪ್ಪಿ, ಗದೆಯನ್ನು ಹೊತ್ತು ಭೀಷ್ಮರನ್ನು ಕಾಣುವುದಕ್ಕಾಗಿ ಯುದ್ಧಭೂಮಿಯಲ್ಲಿ ನಡೆದು ಹೋಗುತ್ತಾನೆ.

ಯುದ್ಧಭೂಮಿಯಲ್ಲಿ ಭಾರಿ ಹೆಣಗಳ ರಾಶಿ, ಮುರಿದು ಬಿದ್ದ ಆಯುಧಗಳು ಇವನ್ನೆಲ್ಲಾ ಮೆಟ್ಟಿ ಮೆಲ್ಲನೆ ನಡೆದು ಹೋಗುತ್ತಿದ್ದಾನೆ ಕುರುಪತಿ. ಚಕ್ರವರ್ತಿಯಾಗಿದ್ದವನು ಬರಿಗಾಲಿನಲ್ಲಿ ನಡೆಯುವುದನ್ನು ಕಂಡು ಸಂಜಯನಿಗೆ

ಹೋಗುತ್ತದೆಯೇನು ? ನೀನು ಅಗ್ನಿಪುತ್ರಿ ; ನಾನು ವಾಯುಪುತ್ರ. ನಾನಿರುವವರೆಗೆ ಸಂಧಿಯ ಮಾತೆಲ್ಲಿ ? ಕಿಚ್ಚೂ ಗಾಳಿಯೂ ಜೊತೆಗೂಡಿದರೆ ಹಗೆಯನ್ನು ಸುಟ್ಟು ಹಾಕದೆ ಇದ್ದೀತೆ ? ಕೌರವರ ಮಕ್ಕಳನ್ನು ಕೊಂದಿದ್ದೇನೆ. ಕೌರವನ ತಮ್ಮ (ದುಶ್ಶಾಸನ)ನ ರಕ್ತವನ್ನು ಕುಡಿದಿದ್ದೇನೆ. ಎರಡು ಪ್ರತಿಜ್ಞೆಗಳನ್ನು ತೀರಿಸಿ ಆಯ್ತು. ಹಗೆಯನ್ನು ತೀರಿಸದೆ ಇರುವೆನೆ?

ಕೌರವನ ತೊಡೆಗಳನ್ನು ಮುರಿದು ಹಾಕುತ್ತೇನೆ. ಅವನ ಕಿರೀಟವನ್ನು ಒದೆಯುತ್ತೇನೆ. ಬಿಚ್ಚಿ ಕೆದರಿದ ನಿನ್ನ ಮುಡಿಯನ್ನು ಕಟ್ಟುತ್ತೇನೆ. ಅಣ್ಣನ ಮಾತನ್ನೂ ಭೀಷ್ಮರ ಮಾತನ್ನೂ ತಳ್ಳಿಹಾಕುತ್ತೇನೆ. ಸಂಧಿಗೆ ಅವಕಾಶ ಕೊಡುವುದಿಲ್ಲ."

ರನ್ನ ಗದಾಯುದ್ಧವನ್ನು ಮೊದಲು ನಾಟಕವಾಗಿ ಬರೆದು, ಆಮೇಲೆ ಅದನ್ನು ಕಾವ್ಯವಾಗಿ ತಿರುಗಿಸಿದನೆಂದು ಕಾಣುತ್ತದೆ. ಈ ಸಂಭಾಷಣೆ ಮುಗಿದ ಮೇಲೆ ವಿದೂಷಕನ ಮಾತೂ ಬರುತ್ತದೆ. ಕಂಚುಕಿಯಂತೆ, ವಿದೂಷಕ ನಾಟಕಗಳಲ್ಲಿ ಮಾತ್ರ ಬರುವ ಪಾತ್ರ, ಹಾಸ್ಯದ ಪಾತ್ರ. ಅವನು ಹೇಳಿದ :

"ಇನ್ನೆಲ್ಲಿಯ ಧೃತರಾಷ್ಟ್ರ ! ಎಲ್ಲಿಯ ಭೀಷ್ಮ ! ಎಲ್ಲಿಯ ಸಂಧಿಕಾರ್ಯ ! ನಮ್ಮ ಭೀಮ ನೂರುಮಂದಿ ಕೌರವರನ್ನು ಕೊಂದಿಕ್ಕಿದ. ಉಳಿದಿರುವ ದುರ್ಯೋಧನ ನೊಬ್ಬನನ್ನು ಕೊಲ್ಲುವುದೂ ಗೆಲ್ಲುವುದೂ ನಮ್ಮ ಅರಸಂಗೆ ಅದೇನು ಮಹಾ!" (ಎಂದು ದ್ರೌಪದಿಯ ಮುಖವನ್ನು ನೋಡಿ) "ಅದಕ್ಕೆ ಯೋಚಿಸಬೇಡಮ್ಮಾ ! ನೀನು ಸಾಮಾನ್ಯಳೇ? ಕುರುಕುಲವನ್ನು ನುಂಗಿ ನೀರು ಕುಡಿದೆ ! ಕುರುಪತಿಯನ್ನೂ ನುಂಗಲಿದ್ದೀಯೆ. ನಮ್ಮ ಅರಸ ಎರಡನೆ(ಯ) ಹಿಡಿಂಬೆಯಾದ ನಿನ್ನನ್ನು ಎಲ್ಲಿ ತಂದನೋ ಕಾಣೆ!"

ಹೀಗೆ, ಅಳುತ್ತ ಬಂದ ತನ್ನನ್ನು ನಗುವಂತೆ ಮಾಡಿದ ವಿದೂಷಕನ ಪರಿಹಾಸದಿಂದ ದ್ರೌಪದಿ ಸಂತೋಷಗೊಂಡು ಹಿಂದಿರುಗುತ್ತಾಳೆ.

ಮುಂದಿನ ದೃಶ್ಯ ರಣರಂಗದಲ್ಲಿ, ಭೀಷ್ಮರು ಬಾಣಗಳ ಹಾಸಿನ ಮೇಲೆ ಮಲಗಿದ್ದಾರೆ. ಗುರು ದ್ರೋಣ, ಮಯ್ದುನ ಜಯದ್ರಥ, ಪ್ರೀತಿಯ ತಮ್ಮ ದುಶ್ಶಾಸನ, ನಚ್ಚಿನ ಬಂಟ ಕರ್ಣ, (ಪಾಂಡವರ) ಸೋದರಮಾವ ಶಲ್ಯ ಇವರೆಲ್ಲರ ಮರಣದಿಂದ ದುಃಖಿತನಾದ ದುರ್ಯೋಧನ, ಅಭಿಮಾನಧನನಾದ ಮಹಾಶೂರ, ಗದೆಯನ್ನು ಹೆಗಲಿಗೇರಿಸಿಕೊಂಡು, ಸಂಜಯನೊಂದಿಗೆ ನಡೆದು ಬರುತ್ತಿದ್ದಾನೆ. ಅಶ್ವತ್ಥಾಮ ದ್ರೋಣರು ತಮ್ಮ ಅನ್ನದ ಋಣವನ್ನು ಸರಿಯಾಗಿ ಯುದ್ಧಮಾಡಿ ತೀರಿಸಲಿಲ್ಲ ಎಂದು ಅವರ ಮೇಲೆ ದುರ್ಯೋಧನನಿಗೆ ಅಪಾರ ಕೋಪ. ಸಂಜಯನು ಅವರ ಪರವಾಗಿ ನುಡಿಯುತ್ತಾನೆ ; ಶೂರರಾದ ಪಾಂಡವರ



'ನೀನಿಲ್ಲದೆ ಇವೆಲ್ಲಂ ಒಳವೆ, ಅಂಗಾಧಿಪತೀ ?'

ನೀನುಳ್ಳೊಡೆ ಉಂಟು ಪೀಳಿಗೆ ;
ನೀನಿಲ್ಲದೆ ಇವೆಲ್ಲಂ ಒಳವೆ, ಅಂಗಾಧಿಪತೀ?

ನೀನು ಇದ್ದರೆ ಮಾತ್ರ ರಾಜ್ಯ, ಪಟ್ಟ, ಬಿಳಿಯ ಕೊಡೆ ಎಲ್ಲ. ನೀನಿಲ್ಲದ ಮೇಲೆ, ಇವೆಲ್ಲ ಇದ್ದರೇನು ಇಲ್ಲದಿದ್ದರೇನು? ಎಂದು ಅಂಗರಾಜ್ಯದ ರಾಜನಾಗಿದ್ದ ಕರ್ಣನ ಶವವನ್ನು ನೋಡುತ್ತಾ ಹೇಳುತ್ತಾನೆ. ನೆಲಕ್ಕಾಗಿ ಅಲ್ಲ, ಛಲಕ್ಕಾಗಿ ಯುದ್ಧಮಾಡಲು ನಿಶ್ಚಯಿಸುವನು.

ಬಲರಾಮ ಬರುವವರೆಗೆ ನೀನು ಕೊಳದಲ್ಲಿ ಅಡಗಿಕೊಂಡಿರು ಎಂದು ಭೀಷ್ಮರು ದುರ್ಯೋಧನನಿಗೆ ಜಲ ಮಂತ್ರವನ್ನು ಉಪದೇಶಿಸುವರು. ಕೌರವ ಹಾಗೆಯೇ ಮಾಡುವನು. ಪಾಂಡವರು ಕೌರವನನ್ನು ಹುಡುಕಿಕೊಂಡು ಬರುವರು. ಅವನು ಕೊಳದಲ್ಲಿರುವುದು ಗೊತ್ತಾಗುವುದು. ಭೀಮನ ಮೂದಲಿಕೆಯ ನುಡಿಗಳನ್ನು ಕೇಳಿ ನೀರೊಳಗಿದ್ದರೂ ಕೌರವ ಬೆವತನಂತೆ! ಅಷ್ಟು ಕೋಪ ಉಕ್ಕಿತು ! ಇನ್ನು ಕೇಳಬೇಕೆ ? ಅವನು ಗದಾಸಹಿತನಾಗಿ ಹೊರಕ್ಕೆ ನೆಗೆದುಬಂದ. ಭೀಮ ದುರ್ಯೋಧನರಿಗೆ ಗದಾಯುದ್ಧ ನಡೆಯಿತು. ಗದಾಯುದ್ಧದಲ್ಲಿ ತೊಡೆಗೆ ಹೊಡೆಯಬಾರದು. ಆದರೂ, ಕೃಷ್ಣ ತೊಡೆ ತಟ್ಟಿ ಸನ್ನೆಮಾಡಿದ; ಭೀಮ ಕೌರವನ ತೊಡೆಗೇ ಹೊಡೆದ! ಕೌರವ ನೆಲಕ್ಕುರುಳಿಬಿದ್ದ. ಭೀಮ ಅವನ ಕಿರೀಟವನ್ನು ಒದೆದ. ದ್ರೌಪದಿಯ ಮುಡಿಯನ್ನು ಕಟ್ಟಿ, ತನ್ನ ಪ್ರತಿಜ್ಞೆಗಳನ್ನು ತೀರಿಸಿಕೊಂಡ. ಸಾಹಸಭೀಮ ವಿಜಯ! ಸಾಹಸಭೀಮನಿಗೆ ಪಟ್ಟಾಭಿಷೇಕ !

ದುಃಖ. ಕೌರವ ಅವನನ್ನು ಸಂತೈಸಿ, ಧೀರನಾಗಿ ನಡೆದುಬರುತ್ತಿರುವಾಗ ಹೆಣಗಳನ್ನು ತಿಇನ್ನುತ್ತಿರುವ ಮರುಳುಗಳು ಕಾಣಿಸುತ್ತವೆ. (ಮರುಳುಗಳು ಯುದ್ಧಭೂಮಿಯಲ್ಲಿ ವಾಸಿಸುವ ಪಿಶಾಚಗಳು.) ಒಂದು ಹುಲುಮರುಳು ದುರ್ಯೋಧನನನ್ನು ಹಂಗಿಸುತ್ತದೆ :

"ಗುರುದ್ರೋಣರ ರಕ್ತ ಕುಡಿಯೋಣವೆಂದರೆ, ಅವನು ಬ್ರಾಹ್ಮಣ. ನಿನ್ನ ತಮ್ಮ ದುಶ್ಯಾಸನನ ನೆತ್ತರು ಕುಡಿಯೋಣವೆಂದರೆ, ಭೀಮನೇ ಹೀರಿಬಿಟ್ಟಿದ್ದಾನೆ; ಭಿಷ್ಮನ ನೆತ್ತರು ಕುಡಿಯೋಣವೆಂದರೆ, ಅವನು ಇನ್ನೂ ಬದುಕಿದ್ದಾನೆ. ಕುರುರಾಜ, ನಿನ್ನ ನೆತ್ತರನ್ನು ಸವಿ ನೋಡಲು ಬಯಸಿ ಉಬ್ಬಿಹೋಗಿದ್ದೇನೆ."

ಮರುಳು ಹೀಗೆ ಎನ್ನುತ್ತಿರುವಾಗಲೇ, ಕೌರವ ಕಾಲು ಜಾರಿ ಬೀಳುತ್ತಾನೆ. ಸಂಜಯ ಅವನನ್ನು ಎತ್ತಿಹಿಡಿದು, "ತೊಡೆ ಮುರಿಯಲಿಲ್ಲ ತಾನೆ" ಎಂದು ಕೇಳುತ್ತಾನೆ. ಆಗ ಆ ಹುಲುಮರುಳು, "ಭೀಮಕೋಪದಿಂದ ನಿನ್ನ ತೊಡೆ ಮುರಿಯದೆ ಇರುತ್ತದೆಯೇ? ಮುರಿದೇ ಮುರಿಯುತ್ತೆ" ಎಂದು ಲೇವಡಿಮಾಡುತ್ತದೆ. ಆಗ, ದುರ್ಯೋಧನನಿಗೆ ಹಿಂದೆ ತನ್ನಿಂದ ಅಪಮಾನಿತರಾಗಿದ್ದ ಮೈತ್ರೇಯರು ಕೊಟ್ಟ ಶಾಪದ ನೆನಪಾಗುತ್ತದೆ. 'ಮರುಳಿನ ಮಾತಿನಲ್ಲಿ ಹುರುಳೇನು?' ಎಂದು ಕೌರವ ಉದಾಸೀನತೆಯಿಂದ ಮುನ್ನಡೆಯುತ್ತಾನೆ.

ರನ್ನ ಈ ಮರುಳಿನ ಪ್ರಸಂಗವನ್ನು ತಂದೊಡ್ಡಿ, ಬಹು ಚಮತ್ಕಾರದಿಂದ ಮುಂದಾಗುವುದನ್ನು ಸೂಚಿಸಿದ್ದಾನೆ. ದುರ್ಯೋಧನನ ಕೋಪ ಹೆಚ್ಚುವಂತೆ ಮಾಡಿದ್ದಾನೆ. ಗದಾಯುದ್ಧ ನಡೆದೇ ತೀರುತ್ತದೆ.

ಯುದ್ಧಭೂಮಿಯಲ್ಲಿ ಕೌರವನು ತನ್ನ ಕಡೆಯವರು ಮಡಿದು ಬಿದ್ದಿರುವುದನ್ನು ನೋಡುತ್ತಾ, ಪ್ರತಿಯೊಬ್ಬ ವೀರನಿಗೂ ತನ್ನ ಕಣ್ಣೀರಿನ ಕಾಣಿಕೆಯನ್ನು ಸಲ್ಲಿಸುತ್ತಾ ಕರ್ಣನ ಬಳಿ ಬಂದಾಗ ಅವನ ಧೈರ್ಯದ ಕಟ್ಟೆ ಒಡೆದು ದುಃಖದ ಕೋಡಿಹರಿಯುತ್ತದೆ. ಈ ಸನ್ನಿವೇಶದಲ್ಲಿ ಕೌರವನ ಬಾಯಿಂದ ರನ್ನ ಹೇಳಿಸಿರುವ ಪದಗಳು ಕರ್ಣ ದುರ್ಯೋಧನರ ದಿವ್ಯ ಸ್ನೇಹದ ಚಿತ್ರವನ್ನು ನಮ್ಮ ಕಣ್ಣ ಮುಂದೆ ತರುತ್ತವೆ ; ದುರ್ಯೋಧನನಲ್ಲಿ ನಮಗೆ ಮರುಕವುಂಟಾಗುತ್ತದೆ; ಗೌರವ ಹುಟ್ಟುತ್ತದೆ. ಕವಿ ರತ್ನನ ಆ ಪದ್ಯರತ್ನಗಳಲ್ಲಿ ಯಾವುದನ್ನು ಎತ್ತಿ ಬರೆಯುವುದು, ಯಾವುದನ್ನು ಬಿಡುವುದು? ಒಂದು ಪದ್ಯ ಸಾಲದೆ, ರನ್ನನ ಕವಿತಾ ಶಕ್ತಿಯನ್ನು – ಪರೀಕ್ಷಿಸುವುದಕ್ಕಲ್ಲ, ಅರಿಯುವುದಕ್ಕೆ ?

ನೀನುಳ್ಳೊಡೆ ಉಂಟು ರಾಜ್ಯಂ,
ನೀನುಳ್ಳೊಡೆ ಪಟ್ಟಮುಂಟು, ಬೆಳ್ಗೊಡೆಯುಂಟಯ್ ;

ಕಥಾನಾಯಕನೇನೋ ಸಾಹಸಭೀಮನೆ. ಆದರೆ, ಈ ಕೃತಿ ರತ್ನದಲ್ಲಿ ನಮ್ಮ ಮೆಚ್ಚುಗೆಯನ್ನೂ ಮರುಕವನ್ನೂ ಸೆಳೆದುಕೊಂಡು ನಾಯಕರತ್ನವಾಗಿ ಮೆರೆಯುವವನು ದುರ್ಯೋಧನ.

**ಕವಿತಾ ಸಾಮ್ರಾಜ್ಯಂ**
**ತಾಳ್ದಿದುನ್ನತಿಯಿಂದಂ –**

ಚಾಲುಕ್ಯ ಚಕ್ರವರ್ತಿ ತೈಲಪ ರನ್ನನಿಗೆ ಕವಿ ಚಕ್ರವರ್ತಿ ಎಂಬ ಬಿರುದನ್ನು ಕೊಟ್ಟನಷ್ಟೆ. ಈ ಕವಿ ಚಕ್ರವರ್ತಿ ಪದವಿ ತನಗೆ ಹೇಗೆ ಒಪ್ಪುತ್ತದೆ ಎಂಬುದನ್ನು 'ಅಜಿತಪುರಾಣ'ದಲ್ಲಿ ರನ್ನ ಹೀಗೆ ವರ್ಣಿಸಿದ್ದಾನೆ :

'ಬುದ್ಧಿಯೆ (ಹಣಕಾಸಿನ) ಭಂಡಾರ ; ಪದವಿದ್ಯೆ (ವ್ಯಾಕರಣ ಶಾಸ್ತ್ರದ ಜ್ಞಾನ) ಕತ್ತಿನ ಹಾರ ; ಯಶಸ್ಸು ಬಿಳಿಯ ಛತ್ರಿ ; ಸರಸ್ವತಿಯೇ ಮಹಾರಾಣಿ ; ಪದ್ಯ ರಚನೆಯ ಶೈಲಿ ಭೇರೀನಾದ ; ಪಾಂಡಿತ್ಯವೇ ಸಿಂಹಾಸನ ; ಕಾವ್ಯದ ಅಲಂಕಾರವೇ ಬೀಸುವ ಚಾಮರ; (ಈ ಚಕ್ರವರ್ತಿ ಪದವಿಯ ಚಿಹ್ನೆಗಳಿಂದ ಕೂಡಿದ) ಕವಿತಾ ಸಾಮ್ರಾಜ್ಯವನ್ನು ಹೊಂದಿರುವ ಮೇಲ್ಮೆಯಿಂದ ರನ್ನನಿಗೆ ಕವಿಚಕ್ರವರ್ತಿ ಎಂಬ ಹೆಸರು ಚೆನ್ನಾಗಿ ಒಪ್ಪಿದೆ'.

ರನ್ನನ ಈ ಮಾತಿನಿಂದ ಅವನು ತನ್ನ ಕವಿತಾಶಕ್ತಿಯಲ್ಲಿ ಹೊಂದಿದ್ದ ನಂಬಿಕೆ ಎಷ್ಟು ಎಂಬುದು ಗೊತ್ತಾಗುತ್ತದೆ. ಕವಿಚಕ್ರವರ್ತಿ ಎಂಬ ಬಿರುದನ್ನು ಕೊಟ್ಟು ಗೌರವಿಸಿದ್ದಕ್ಕಾಗಿ ರನ್ನ ತೈಲಪ ಚಕ್ರವರ್ತಿಗೆ ಕೃತಜ್ಞನಾಗಿದ್ದನು. ಒಂದು ವೇಳೆ ಬಿರುದನ್ನು ಕೊಡದಿದ್ದರೂ ಕವಿತಾ ಸಾಮ್ರಾಜ್ಯಕ್ಕೆ ತಾನು ಚಕ್ರವರ್ತಿ ಎಂಬ ಆತ್ಮವಿಶ್ವಾಸ ರನ್ನನಿಗಿದ್ದಿತು. ಆತ್ಮವಿಶ್ವಾಸವಿಲ್ಲದ ಕವಿ ಶ್ರೇಷ್ಠವಾದ ಕಾವ್ಯವನ್ನು ರಚಿಸಲಾರನು.

* * * *

# ವೈಣಿಕ ವಿದ್ವಾನ್ ಎಲ್. ರಾಜಾರಾವ್

**ಮನೆತನ**

ಕನ್ನಡ ನವೋದಯದ ಹರಿಕಾರರಾದ ದವಂಗತ ಬಿ. ಎಂ. ಶ್ರೀಕಂಠಯ್ಯನವರು ತಮ್ಮ ಒಂದು ಕವನದಲ್ಲಿ–

ವೀಣೆಯ ಬೆಡಗಿದು ಮೈಸೂರು
ನಾಲ್ಮಡಿ ಕೃಷ್ಣನ ಮೈಸೂರು

ಎಂದು ಮೈಸೂರಿನ ಹೆಚ್ಚುಗಾರಿಕೆಯನ್ನು ಹೊಗಳಿದ್ದಾರೆ. ಈ ಸಾಲುಗಳನ್ನು ಬರೆಯುವಾಗ ಅವರ ಮನಸ್ಸಿನಲ್ಲಿ ವೀಣೆ ಶೇಷಣ್ಣನವರ ಲೋಕಪ್ರಸಿದ್ಧವಾದ ವೀಣಾವಾದನದ ವೈಖರಿಯ ನೆನಪು ಸುಳಿದುಹೋಗಿದ್ದಿರಬೇಕು. ಶೇಷಣ್ಣನವರ ವೀಣಾವಾದನದ ಶೈಲಿ 'ಮೈಸೂರು ಶೈಲಿ' ಎಂದೇ ಪ್ರಸಿದ್ಧವಾಯಿತು ವೀಣಾವಾದನದ 'ಮೈಸೂರು ಶೈಲಿ'ಯ ಗುರುಶಿಷ್ಯ ಪರಂಪರೆಯಲ್ಲಿ ಜನ್ಮ ತಾಳಿದವರು ವೈಣಿಕ ವಿದ್ವಾನ್ ಗಾನಕಲಾಭೂಷಣ ಎಲ್. ರಾಜಾರಾವ್. 'ಎಲ್' ('ಲ') ಎಂದರೆ ಲಕ್ಷ್ಮೀನಾರಣಪ್ಪ ; ರಾಜಾರಾಯರ ಪೂಜ್ಯ ತಂದೆ.

ಲಕ್ಷ್ಮೀನಾರಣಪ್ಪನವರು ಮೈಸೂರು ವೀಣೆ ಶೇಷಣ್ಣನವರ ಅಚ್ಚು ಮೆಚ್ಚಿನ ಶಿಷ್ಯರಲ್ಲಿ ಒಬ್ಬರು, ಲಕ್ಷ್ಮೀನಾರಣಪ್ಪನವರ ತಾತ ಮುತ್ತಾತಂದಿರು ಎಲ್ಲರೂ ವೀಣೆ ನುಡಿಸುವುದರಲ್ಲಿ ಗಟ್ಟಿಗರು ; ಸಂಗೀತ ಶಾಸ್ತ್ರಜ್ಞರು. ಮುತ್ತಾತ ಕೃಷ್ಣಪ್ಪನವರು ಮುಮ್ಮಡಿ ಕೃಷ್ಣರಾಜ ಒಡೆಯರವರ ಕಾಲದಲ್ಲಿ ವೈಣಿಕರಾಗಿ ಬೆಳಗಿದವರು ; ಅವರು ಕೆಲವು ಸಂಗೀತ ಕೃತಿಗಳನ್ನೂ ರಚಿಸಿದ್ದರಂತೆ. ಕೃಷ್ಣಪ್ಪನವರು 'ಅರುವತ್ತೊಕ್ಕಲು ಮಾಧ್ವರು' ಎಂಬ ವೈಷ್ಣವ ಬ್ರಾಹ್ಮಣ ಪಂಗಡಕ್ಕೆ ಸೇರಿದವರು. ಅವರ ಮಕ್ಕಳು ಚಿಕ್ಕ ಲಕ್ಷ್ಮೀನಾರಾಣಪ್ಪನವರು ಮುಮ್ಮಡಿಯವರ ಆಶ್ರಿತರಾಗಿದ್ದ ಸಂಗೀತ ವಿದ್ವಾಂಸರು. ಆಗಮಶಾಸ್ತ್ರದ ದೇವತಾಪೂಜಾವಿಧಾನದಲ್ಲಿ ಹೇಳಿರುವ ಅನೇಕಾನೇಕ ಉಪಚಾರಗಳಲ್ಲಿ – ಮುಖ್ಯವಾಗಿ ದೇವಾಲಯಗಳಲ್ಲಿ ನಡೆಸಬೇಕಾದ ಉಪಚಾರಗಳಲ್ಲಿ – ಸಂಗೀತ ಸೇವೆಯೂ ಒಂದು. ಅರಸರ ಅಪ್ಪಣೆಯಂತೆ ಚಿಕ್ಕ ಲಕ್ಷ್ಮೀನಾರಣಪ್ಪನವರು ಅರಮನೆಯ ಆಡಳಿತಕ್ಕೆ ಸೇರಿದ್ದ ಶ್ರೀ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದಲ್ಲಿ ಪ್ರತಿನಿತ್ಯ ಪೂಜಾಕಾಲದ ಸಂಗೀತ ಸೇವೆಯ ಕೈಂಕರ್ಯ ನಡೆಸುವ ಭಾಗ್ಯವನ್ನು ಪಡೆದಿದ್ದರು. ಹೊಟ್ಟೆಯ ಪಾಡಿನ ನೆವದಲ್ಲಿ ದೇವರ

ಹುಟ್ಟುವಂತೆ ಕಲಾಕುಸುಮ ಅರಳುವುದು ಇಂಥಲ್ಲಿಯೆ ಎಂದು ಕಾಣುತ್ತದೆ. ನಗರದ ಈ ಭಾಗ 'ಬಂಡಿಕೇರಿ' ಎಂದು ಪ್ರಸಿದ್ಧವಾಗಿತ್ತು.

ಲಕ್ಷ್ಮೀನಾರಣಪ್ಪನವರ ಮಕ್ಕಳ ಪೈಕಿ ಮೂರು ನಾಲ್ಕು ಚಿಕ್ಕ ವಯಸ್ಸಿನಲ್ಲಿಯೇ ಕಣ್ಣುಮುಚ್ಚಿದುವು. ಐದು ಜನ ಗಂಡು ಮಕ್ಕಳಲ್ಲಿ ಹಿರಿಯರಾದ ಕೃಷ್ಣಪ್ಪ ಮತ್ತು ರಾಘವೇಂದ್ರ ಸಂಗೀತಾಭ್ಯಾಸದ ಕಡೆಗೆ ಮನಸ್ಸು ಕೊಡಲಿಲ್ಲ. ಉಳಿದ ಮೂವರು ಮಕ್ಕಳೂ ರಾಜಾರಾವ್, ಗೋಪಾಲರಾವ್, ಶೇಷಗಿರಿರಾವ್ – ಸಂಗೀತ ಮನೆತನದ ಹೆಸರನ್ನು ಸಾರ್ಥಕಪಡಿಸಿದರು ; ತಾವೂ ಕೃತಾರ್ಥರಾದರು. ಬಾಲಕರಾದ ರಾಜನಿಗೆ ಮತ್ತು ಗೋಪಾಲನಿಗೆ ತಂದೆಯೇ ಸಂಗೀತ ಶಿಕ್ಷಣ ನೀಡಿದ ಗುರು. ನಮ್ಮ ದೇಶದಲ್ಲಿ ಸಂಗೀತ ವಿದ್ಯೆ, ಇತರ ಕಸಬು ಕಲೆಗಳು, ಸಾಗಿ ಬರುತ್ತಿದ್ದುದೇ ಹೀಗೆ – ತಂದೆಯಿಂದ ಮಗನಿಗೆ ; ತಲೆಯಿಂದ ತಲೆಗೆ, ಮಕ್ಕಳ ಜೊತೆಗೆ ಸಂಗೀತ ಕಲಿಯಲು ಆಸೆ ಉಳ್ಳ ಇತರ ಶಿಷ್ಯರೂ ಇರುತ್ತಿದ್ದರು. ರಾಜನ ವೀಣೆಯ ಕಲಿಕೆ, ಅಭ್ಯಾಸ, ನೈಪುಣ್ಯ ಸಾಧನೆ ಎಲ್ಲ ಮನೆಯಲ್ಲಿ, ತೀರ್ಥರೂಪರ ಚರಣಸನ್ನಿಧಿಯಲ್ಲಿ. ಲಕ್ಷ್ಮೀನಾರಣಪ್ಪನವರು ತೀರಿಕೊಳ್ಳುವ ಕಾಲಕ್ಕೆ ಶೇಷಗಿರಿ ತುಂಬ ಚಿಕ್ಕವನು. ರಾಜಾರಾಯರೇ ಶೇಷಗಿರಿಯ ವೀಣಾ ಶಿಕ್ಷಣದ ಗುರು.

ರಾಜಾರಾಯರು ಮೈಸೂರಿನಲ್ಲಿ 1909ನೆಯ ಇಸವಿಯ ಮಾರ್ಚಿ 25 ರಂದು ಆಸ್ಥಾನ ವಿದ್ವಾನ್ ಭೈರವೀಲಕ್ಷ್ಮೀನಾರಣಪ್ಪನವರ ಮೂರನೆಯ ಮಗನಾಗಿ ಬಂಡಿಕೇರಿಯಲ್ಲಿ ತಂದೆಯ ಸ್ವಗೃಹದಲ್ಲಿ ಜನಿಸಿದರು. ಅಂದೂ ಇಂದೂ ನೂರಡಿ ರಸ್ತೆ ಎಂದು ಪ್ರಸಿದ್ಧವಾಗಿರುವ ರಾಜಮಾರ್ಗದಲ್ಲಿ ಸುಬ್ಬರಾಯನ ಕೆರೆಯ ಅಂಗಳ. ಅದರ ಎದುರು ಸಾಲಿನ ಅಂಗಡಿ ಮುಂಗಟ್ಟುಗಳ ನಡುವೆ ಒಂದು ಗಲ್ಲಿ. ಅದರಲ್ಲಿ ಹತ್ತು ಮಾರು ನಡೆದುಹೋದರೆ ಸಿಕ್ಕುವುದೇ ಲಕ್ಷ್ಮೀನಾರಣಪ್ಪನವರ ಮನೆ ; ನಾಡು ಹೆಂಚು ಹೊದಿಸಿದ, ಕೆಮ್ಮಣ್ಣು ಬಳಸಿ ಕಟ್ಟಿದ ಪುಟದ ಗೋಡೆಗಳ, ಐದು ಅಂಕಣಗಳ ಸಾಧಾರಣವಾದ ಮನೆ. ಬಿ.ಎಸ್‌ಸಿ. ಪದವಿ ಪರೀಕ್ಷೆಯ ಓದಿಗಾಗಿ ಬೆಂಗಳೂರಿಗೆ ಹೋಗುವವರೆಗೂ 'ರಾಜ'ನ ಆಟಪಾಟ, ಓದು ಬರಹ, ಸಂಗೀತ ಶಿಕ್ಷಣ, ಎಲ್ಲವೂ ಈ ಮನೆಯಲ್ಲೆ.

ಸೇವೆ ಮಾಡುತ್ತಿದ್ದರು ; ಪ್ರಭುಸೇವೆಯೂ ಆಗುತ್ತಿತ್ತು. ಚಿಕ್ಕ ಲಕ್ಷ್ಮೀನಾರಣಪ್ಪನವರ ಮಕ್ಕಳಾದ ಶೀನಪ್ಪ ಮತ್ತು ಕೃಷ್ಣಪ್ಪ ಕೂಡ ತಂದೆಯಂತೆಯೇ ಸಂಗೀತ ವಿದ್ವಾಂಸರುಗಳು. ಕೃಷ್ಣಪ್ಪನವರ ಮಗನೇ ರಾಜಾರಾಯರ ತಂದೆಯವರಾದ ಲಕ್ಷ್ಮೀನಾರಣಪ್ಪನವರು. ರಾಜಾರಾಯರೇ ಬರೆದಿರುವ 'ಭೈರವೀ ಲಕ್ಷ್ಮೀನಾರಣಪ್ಪ' ಎಂಬ ಕಿರುಹೊತ್ತಿಗೆಯಲ್ಲಿ ಅವರ ವ್ಯಕ್ತಿತ್ವದ ಮನೋಜ್ಞವಾದ ಚಿತ್ರಣವನ್ನು ಕಾಣಬಹುದು. ಲಕ್ಷ್ಮೀನಾರಣಪ್ಪನವರು ಹದಿನೆಂಟರ ಹರೆಯದಲ್ಲಿದ್ದಾಗ ಶ್ರೀಕೃಷ್ಣಸ್ವಾಮಿ ದೇವಸ್ಥಾನದಲ್ಲಿ ವಂಶ ಪಾರಂಪರ್ಯವಾಗಿ ನಡೆದುಬಂದ ಸಂಗೀತ ಸೇವೆಯ ಹುದ್ದೆಗೆ ನೇಮಕಗೊಂಡರು. ಈ ಸಂಗೀತ ಸೇವೆಯಲ್ಲಿ ಅವರ ತಮ್ಮ ವೆಂಕಟರಾಮಯ್ಯನೂ ಪಾಲುಗೊಳ್ಳುತ್ತಿದ್ದನು.

**ಸಂಗೀತದ ವಾತಾವರಣ**

'ಪಂಡಿತ ಪುತ್ರ' ಎಂಬ ಮಾತು ಒಂದಿದೆ. ಅದರ ವಿಶೇಷಾರ್ಥ 'ಪಂಡಿತನ ಮಗ' ಎಂದಲ್ಲ ; 'ಶುದ್ಧ ದಡ್ಡ' ; 'ಪಂಡಿತನ ಮಗ' ಎನ್ನಿಸಿಕೊಳ್ಳಲು 'ಅನರ್ಹನಾದವನು' ಎಂದು. ಪಾಂಡಿತ್ಯವನ್ನು ಗಳಿಸಿಕೊಳ್ಳಲು ಬಹಳ ಶ್ರಮಪಡಬೇಕು ; ಪಾಂಡಿತ್ಯದ ಕಡೆಗೆ ಒಲವು ಇದ್ದರೆ ಸಾಲದು. ಜೊತೆಗೆ, ಪಂಡಿತರ ನಡುವೆ ಓಡಾಡಬೇಕು. ಸಂಗೀತ, ಸಾಹಿತ್ಯ, ಕಲೆಗಳ ಮಾತು ಬೇರೆ. ಈ ಕಲೆಗಳಲ್ಲಿ ಆಸಕ್ತಿ, ಶಕ್ತಿ, ಅಭಿವ್ಯಕ್ತಿ (ಎಂದರೆ, ಕಲೆಯನ್ನು ಪ್ರದರ್ಶಿಸಬಲ್ಲ ಹುಟ್ಟುಗುಣ) ಇವು ಬಲುಮಟ್ಟಿಗೆ ವಂಶಪಾರಂಪರ್ಯವಾಗಿ ಸಾಗಿಬಂದು ಕಲೆಗಾರನಲ್ಲಿ ನೆಲಸಿರತಕ್ಕವು. ಕುಟುಂಬದಲ್ಲಿ ಧಂಡಿಯಾಗಿ ಮಕ್ಕಳು ಇರುತ್ತಿದ್ದ ಆ ಕಾಲದಲ್ಲಿ ಒಬ್ಬ ಮಗನಲ್ಲಿ ಅಲ್ಲದೆ ಹೋದರೆ ಇನ್ನೊಬ್ಬ ಮಗನಲ್ಲಿ ಸಂಗೀತ ವಿದ್ಯೆ ಅನುಕೂಲವಾದ ವಾತಾವರಣದಲ್ಲಿ ಹೊರಹೊಮ್ಮುತ್ತಿತ್ತು. ರಾಜಾರಾಯರ ತಂದೆ – ತಾಯಿ ಲಕ್ಷ್ಮೀನಾರಣಪ್ಪ ಮತ್ತು ಪದ್ಮಾವತಮ್ಮನವರಿಗೆ ಹದಿನಾಲ್ಕು ಮಕ್ಕಳು ! ಮನೆ ತುಂಬ ಮಕ್ಕಳು ಇರಬೇಕು, ಮನೆ ನಂದಗೋಕುಲ ಆಗಿರಬೇಕು ಎನ್ನುವುದು ಆಗಿನ ಕಾಲದವರ ಆಸೆ. ಅದಕ್ಕೆ ತಕ್ಕಂತೆ ಲಕ್ಷ್ಮೀನಾರಣಪ್ಪನವರ ಮನೆ ನಂದಗೋಕುಲ. ಈ ಹೆಸರನ್ನು ಸಾರ್ಥಕ ಪಡಿಸಲೋ ಏನೋ ಎಂಬಂತೆ ಸುತ್ತಮುತ್ತ ಗೊಲ್ಲರ ಹಟ್ಟಿಗಳು, ಯಾವ ಗಲ್ಲಿ ಹೊಕ್ಕರೂ ಅಲ್ಲಿ ಓಡಾಡುವ ಜನಕ್ಕಿಂತ ಓಡಾಡುವ, ಮಲಗಿ ಮೆಲುಕು ಹಾಕುವ, ಹಸು ಕರು ; ಅಡ್ಡ ನಿಂತ ಮಹಿಷಪುರಿಯ ಮಹಿಷಗಳು ! ಅರ್ಧ ಮೇದ ಜೋಳದಕಡ್ಡಿಯ, ನೆಲ್ಲುಹುಲ್ಲಿನ, ಕಸಕಡ್ಡಿಯ ಹರಹು ! ಗೋಮಯ ಗಂಜಳಗಳ ಪರಿಮಳ ! ಕೆಸರಿನಲ್ಲಿ ಕಮಲ

ರಾಜ ತಂದೆಯಲ್ಲಿ ಸಂಗೀತ ಶಿಕ್ಷಣವನ್ನು ಪಡೆಯುವುದರ ಜೊತೆಗೆ ತಂದೆಯ ಉತ್ತೇಜನದಿಂದ ಲೌಕಿಕ ವಿದ್ಯೆಯಲ್ಲಿಯೂ ಮುಂದೆ ಬಂದು, ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವವರೆಗೂ ಮೈಸೂರಿನಲ್ಲಿಯೇ ವಿದ್ಯಾಭ್ಯಾಸ ಮಾಡಿದ.

**ಶೇಷಣ್ಣನವರ ಆಶೀರ್ವಾದ**

ರಾಜಾರಾಯರು ತಮ್ಮ ಒಂಭತ್ತನೆಯ ವಯಸ್ಸಿನಲ್ಲಿಯೇ ತಂದೆಯ ಬಳಿ ವೀಣೆ ಮತ್ತು ಬಾಯಿಹಾಡಿಕೆ ಎರಡನ್ನೂ ಹನ್ನೆರಡು ವರ್ಷಕಾಲ ಅಭ್ಯಾಸ ಮಾಡಿ ವಿದ್ಯಾರ್ಥಿದಶೆಯಲ್ಲಿದ್ದಾಗಲೇ ಸಾರ್ವಜನಿಕ ಕಚೇರಿಗಳಲ್ಲೂ ಅರಮನೆಯ ಸಂಗೀತ ವಿದ್ವಾಂಸರುಗಳ ಸಮ್ಮುಖದಲ್ಲಿಯೂ ವೀಣೆ ನುಡಿಸಿ, ಹಾಡಿ, ಅವರುಗಳ ಮೆಚ್ಚಿಗೆ ಗಳಿಸಿದ್ದರು. ಒಮ್ಮೆ ಕೃಷ್ಣೋತ್ಸವ ಸಂದರ್ಭದಲ್ಲಿ ಬಾಲಕ ರಾಜನ ವೀಣೆಯ ನುಡಿಕೆ ಕೇಳಿ ವೀಣೆ ಶೇಷಣ್ಣನವರು ತಮ್ಮ ಶಿಷ್ಯ ಲಕ್ಷ್ಮೀನಾರಣಪ್ಪನನ್ನು ಕುರಿತು–

"ಲಕ್ಷ್ಮೀನಾರಾಯಣ, ನೀನು ಪುಣ್ಯವಂತ. ನಿನ್ನ ಮಗ ರಾಜ ನಿನ್ನ ಹೆಸರು ಹೇಳುತ್ತಾನೆ, ಮನೆತನದ ಕೀರ್ತಿ ಉಳಿಸುತ್ತಾನೆ. ವೇಣುಗೋಪಾಲನ ಕೃಪೆಯಿಂದ ಅವನು ಉತ್ತರೋತ್ತರ ವೀಣಾವಿಶಾರದನೆಂದು ಖ್ಯಾತಿ ಪಡೆಯುತ್ತಾನೆ. ಆನೆಯ ಹೊಟ್ಟೆಯಲ್ಲಿ ಆನೆ ಹುಟ್ಟದೆ ಸೊಳ್ಳೆ ಹುಟ್ಟುತ್ತದೆಯೆ?" ಎಂದು ಬಾಯಿತುಂಬ ಹರಸಿದರು. ಆ ಚಿಕ್ಕ ವಯಸ್ಸಿನಲ್ಲಿಯೇ ಬಾಲಕನು ವೀಣೆಯಂಥ ಕಷ್ಟಸಾಧ್ಯ ವಾದ್ಯವಾದನದಲ್ಲಿ ಮೆರೆದ ಸ್ವರಕಲ್ಪನೆಯ ಸೂಕ್ಷ್ಮತೆಗಳನ್ನು ಶೇಷಣ್ಣನವರು ಮೆಚ್ಚಿಕೊಂಡರು. ಶೇಷಣ್ಣನವರ ಮೆಚ್ಚುಗೆಯ ಮಾತು ವೀಣಾವಿಶಾರದೆ ಶಾರದೆಯ ವರವಾಗಿಯೇ ಪರಿಣಮಿಸಿತು. ಇಪ್ಪತ್ತರ ಹರೆಯದ ವೇಳೆಗೆ ರಾಜ ಮೈಸೂರು ನಗರದ ಸಂಗೀತ ವಿದ್ವಾಂಸರ ಗೋಷ್ಠಿಯಲ್ಲಿ ಪರಿಚಿತನಾದ ತರುಣ ವಿದ್ವಾಂಸನಾದನು. ಆಗಿನ ಕಾಲದಲ್ಲಿ ಘಟಾನುಘಟಿಗಳಾಗಿದ್ದ ಚಿಕ್ಕ ರಾಮರಾಯರು, ಬಿಡಾರಂ ಕೃಷ್ಣಪ್ಪನವರು, ವೀಣೆ ವೆಂಕಟಗಿರಿಯಪ್ಪನವರು, ಕೆ. ವಾಸುದೇವಾಚಾರ್ಯರು, ವೀಣೆ ವೆಂಕಟಗಿರಿಯಪ್ಪನವರು, ಕೆ. ವಾಸುದೇವಾಚಾರ್ಯರು, ಬಿ. ದೇವೇಂದ್ರಪ್ಪನವರು ಇವರೆಲ್ಲರೂ ಲಕ್ಷ್ಮೀನಾರಣಪ್ಪನವರ ಮನೆಯಲ್ಲೋ ಇತರ ಕಡೆಗಳಲ್ಲಿ ನಡೆಯುತ್ತಿದ್ದ ಕಚೇರಿಗಳಲ್ಲೋ ತರುಣ ರಾಜನ ವೀಣಾವಾದನವನ್ನು ಮತ್ರವಲ್ಲದೆ ಅವನ ಹಾಡಿಕೆಯನ್ನೂ ಕೇಳಿ ತುಂಬ ಮೆಚ್ಚಿಕೊಂಡಿದ್ದರು.



ಬಾಲಕರಾದ ರಾಜನಿಗೆ ಮತ್ತು ಗೋಪಾಲನಿಗೆ ತಂದೆಯೇ
ಶಿಕ್ಷಣ ನೀಡಿದ ಗುರು

ಲಕ್ಷ್ಮೀನಾರಣಪ್ಪನವರು ಮೃದು ಸ್ವಭಾವದವರು, ಸಾಧು ಸತ್ಪುರುಷರು ; ಮಕ್ಕಳನ್ನು ಎಂದೂ ದಂಡಿಸುತ್ತಿರಲಿಲ್ಲ. ಅವರು ಸಿರವಂತರಲ್ಲ, ದಟ್ಟದರಿದ್ರರೂ ಅಲ್ಲ. ಮನೆಯಲ್ಲಿ ನಿತ್ಯ ದೇವತಾರ್ಚನೆ. ಹಬ್ಬಹರಿದಿನಗಳು ತಪ್ಪದೆ ಜರುಗುತ್ತಿದ್ದವು. ಲಕ್ಷ್ಮೀ ನಾರಾಣಪ್ಪನವರು ಮಿತಭಾಷಿಗಳು ; ನವುರಾದ ಹಾಸ್ಯ ಪ್ರವೃತ್ತಿ ಅವರಲ್ಲಿ ಮನೆ ಮಾಡಿಕೊಂಡಿತ್ತು. ಅಂದಿನ ಕಾಲಕ್ಕೆ ಎಷ್ಟು ಬೇಕೋ ಅಷ್ಟು ಲೌಕಿಕ ವಿದ್ಯೆಯನ್ನೂ ಬಲ್ಲವರಾಗಿದ್ದರು. ಲೌಕಿಕ ವಿದ್ಯೆಗೆ ದಿನೇ ದಿನೇ ಪ್ರಾಶಸ್ತ್ಯ ಹೆಚ್ಚುತ್ತಿದ್ದುದನ್ನು ಅರಿತು, ಅವರು ದೂರದೃಷ್ಟಿಯಿಂದ ತಮ್ಮ ಪುತ್ರರಿಗೆ ಕಾಲೇಜುಮಟ್ಟದ ವಿದ್ಯಾಭ್ಯಾಸವನ್ನು ಕೊಡಿಸಲು ಮನಸ್ಸು ಮಾಡಿದ್ದರು. ಬಾಲಕ

ಗೋಧಿಯ ಬಣ್ಣ ; 'ಸಾಮ' (ಶ್ಯಾಮ) ವರ್ಣ ಎಂದರೂ ಸಲ್ಲುತ್ತದೆ. ಹಿಂದೆ ತುಸು ಇಳಿಬಿದ್ದ ಜೋಲು ಕುರುಳಿನ ನಡು ಬೈತಲೆ ತೆಗೆದ ಕ್ರಾಪು ಮುಖದ ಅಂದವಾದ ಮಾಟಕ್ಕೆ ಒಪ್ಪಕೊಟ್ಟಿತ್ತು. ತಿದ್ದಿದ ಹುಬ್ಬಿನ ಕೆಳಗೆ ಕಣ್ಣು ಸ್ವಲ್ಪ ಕಿರಿದೇ ಆದರೂ ಹೊಳಪಿನ ನೋಟದಿಂದ ತೆಳ್ಳನೆಯ ಕುಡಿ ತುಟಿಯ ತುದಿಯಲ್ಲಿ ಸದಾ ಅರಳುತ್ತಿದ್ದ ನಗೆಮುಗುಳಿನ ಮೇಲೆ ಬೆಳಕನ್ನು ಚಿಮುಕಿಸುವಂತಿತ್ತು. ಈ ಆಕರ್ಷಕ ವ್ಯಕ್ತಿ ಕಾಲೇಜಿನ ವಾದ್ಯಗೋಷ್ಠಿಯ ಕೇಂದ್ರಬಿಂದು.

**ಕಾಲೇಜಿನ ವಾದ್ಯಗೋಷ್ಠಿ**

ಅಂದಿನ ದಿನಗಳಲ್ಲಿ ಮಹಾರಾಜರವರ ಕಾಲೇಜು ಮತ್ತು ಇಂಟರ್‌ಮಿಡಿಯಟ್ ಕಾಲೇಜುಗಳು ಪಕ್ಕಪಕ್ಕದಲ್ಲೆ ಇದ್ದುದರಿಂದಲೂ, ಕಲಾವಿಷಯಗಳ ಪಾಠಪ್ರವಚನಕ್ಕೆ ಮಹಾರಾಜಾ ಕಾಲೇಜಿನ ಅಧ್ಯಾಪಕ ಪ್ರಾಧ್ಯಾಪಕರುಗಳು ಇಂಟರ್‌ಮಿಡಿಯಟ್ ಕಾಲೇಜಿಗೂ ಈ ಕಾಲೇಜಿನ ಅಧ್ಯಾಪಕರುಗಳು ಆ ಕಾಲೇಜಿಗೂ ಹೋಗಿ ಪಾಠ ಹೇಳುತ್ತಿದ್ದರಿಂದಲೂ ಎರಡು ವಿದ್ಯಾಸಂಸ್ಥೆಗಳಿಗೂ ಒಂದೇ 'ಯೂನಿಯನ್' (ವಿದ್ಯಾರ್ಥಿಸಂಘ) ಇದ್ದಿತು. ಯೂನಿಯನ್ ಆಶ್ರಯದಲ್ಲಿ ನಡೆಯುತ್ತಿದ್ದ ವಾದ್ಯಗೋಷ್ಠಿಯಲ್ಲಿ (Orchestra) ವೀಣೆ, ಪಿಟೀಲು, ಕೊಳಲು, ತಬಲ, ಮೃದಂಗ–ಇವುಗಳ ಕೂಡುಬಾಜನೆ ಆಗುತ್ತಿತ್ತು. ಆಗಿನ ದಿನಗಳಲ್ಲಿ ಅರಮನೆಯ ವ್ಯವಸ್ಥೆಯಲ್ಲಿ ಜರುಗುತ್ತಿದ್ದ ಕರ್ನಾಟಕ ಬ್ಯಾಂಡನ್ನು (Karnataka Band : ಪಾಶ್ಚಾತ್ಯ ವಾದ್ಯಗಳಲ್ಲಿ ನುಡಿಸುತ್ತಿದ್ದ ಕರ್ನಾಟಕ ಸಂಗೀತದ ವಾದ್ಯಮೇಳ) ಬಿಟ್ಟರೆ ಮೈಸೂರು ನಗರದಲ್ಲಿ ಕಾಲೇಜಿನ ವಾದ್ಯಗೋಷ್ಠಿಯೇ ಮೊತ್ತಮೊದಲಿನದು ಎಂದು ತೋರುತ್ತದೆ. ಆಗ ಯೂನಿಯನ್ನಿನ ಅಧ್ಯಕ್ಷರಾಗಿದ್ದವರು ಡಾ॥ ಎಂ.ವಿ. ಗೋಪಾಲಸ್ವಾಮಿ (ಮನಶ್ಶಾಸ್ತ್ರದ ಪ್ರಾಧ್ಯಾಪಕರು) ; ಶ್ರೀ ಎ. ಎನ್. ಮೂರ್ತಿರಾಯರು ಅಧ್ಯಾಪಕ ಕಾರ್ಯದರ್ಶಿ. ದಿವಂಗತ ಸಿ. ನರಸಿಂಹಮೂರ್ತಿ ವಿದ್ಯಾರ್ಥಿಕಾರ್ಯದರ್ಶಿ. ಈ ಮೂವರೂ ಕಲಾಭಿಮಾನಿಗಳು, ಸಂಗೀತ ಪ್ರೇಮಿಗಳು. ಯೂನಿಯನ್ ಅಧಿಕಾರಿಗಳು ಅದು ಹೇಗೆ ಸಾವಿರಾರು ಸಂಖ್ಯೆಯ ವಿದ್ಯಾರ್ಥಿ ಸಮುದಾಯದಲ್ಲಿ ಪ್ರವರ್ಧಮಾನಕ್ಕೆ ಬರುತ್ತಿದ್ದ ತರುಣ ಸಂಗೀತ ಕಲಾವಿದರನ್ನು ಪತ್ತೆಹಚ್ಚಿ ಒಂದು ಕಡೆ ಕಲೆ ಹಾಕಿದರೋ ದೇವರೇ ಬಲ್ಲ ! ಅಂತೂ, ಈ ವಿದ್ಯಾರ್ಥಿ–ಸಂಗೀತ ಕಲಾವಿದರ ತಂಡವೇನೋ ಸಿದ್ಧವಾಯಿತು. ಈ ತಂಡದ ಸದಸ್ಯರೆಂದರೆ, ಎಲ್. ರಾಜಾರಾವ್ (ವೀಣೆ) : ಎಂ. ಚೆಲುವರಾಯ ಸ್ವಾಮಿ (ಪ್ರಸಿದ್ಧ ವೀಣಾ ವಿದ್ವಾಂಸರೂ

## ಕಾಲೇಜಿನ ವಿದ್ಯಾಭ್ಯಾಸ

ತರುಣ ರಾಜ ಮೈಸೂರು ನಗರದ ಮಹಾರಾಜ (ಸರ್ಕಾರಿ) ಹೈಸ್ಕೂಲಿನಲ್ಲಿ ಪ್ರೌಢ ವ್ಯಾಸಂಗವನ್ನು ಮುಗಿಸಿದ ಮೇಲೆ ಉನ್ನತ ವ್ಯಾಸಂಗಕ್ಕಾಗಿ ಕಲಾವಿಷಯಗಳನ್ನು ಆಯ್ದುಕೊಳ್ಳದೆ ಭೌತಶಾಸ್ತ್ರ, ರಸಾಯನಶಾಸ್ತ್ರ ಮತ್ತು ಗಣಿತಗಳನ್ನು ಆಯ್ಕೆ ಮಾಡಿಕೊಂಡು, ಈಗ ಯುವರಾಜ ಕಾಲೇಜು ಎಂದು ಪ್ರಸಿದ್ಧವಾಗಿರುವ ಮೈಸೂರಿನ ಇಂಟರ್‌ಮಿಡಿಯಟ್ ಕಾಲೇಜಿನಲ್ಲಿ ತನ್ನ ವ್ಯಾಸಂಗವನ್ನು ಮುಂದುವರಿಸಿದನು. ರಾಜಾರಾಯರು ತಾರುಣ್ಯದಲ್ಲಿ ಸಂಗೀತವನ್ನು ತಂದೆಯೇ ಆದ ಗುರುವಿನಿಂದ ಕಲಿತು ಹತ್ತಿಪ್ಪತ್ತು ವರ್ಷಕಾಲ ಕಷ್ಟಪಟ್ಟು ಸಾಧನೆಮಾಡಿದ್ದರು. ಬಿ.ಎಸ್‌ಸಿ. ಪದವಿ ಪರೀಕ್ಷೆ ಕೊಟ್ಟು ಭೌತಶಾಸ್ತ್ರ, ಗಣಿತಶಾಸ್ತ್ರಗಳನ್ನು ವ್ಯಾಸಂಗ ಮಾಡಿದ್ದರು. ತಂದೆಯವರಿಂದ ಕೈಗೆ ಬಂದ ಸಂಸ್ಕೃತ ಮತ್ತು ತೆಲುಗು ಭಾಷೆಗಳ ಸಂಗೀತಶಾಸ್ತ್ರಗ್ರಂಥಗಳನ್ನೂ ಓದಿಕೊಂಡರು. ಇಂಗ್ಲಿಷಿನಲ್ಲಿ ಪ್ರಕಟವಾಗಿದ್ದ ಕರ್ನಾಟಕ ಸಂಗೀತಶಾಸ್ತ್ರ ವಿಷಯಕವಾದ ಗ್ರಂಥಗಳನ್ನೂ ಓದಿದರು. ಕಾಲೇಜಿನ ವಿದ್ಯಾಭ್ಯಾಸದ ತಳಹದಿ ಇಲ್ಲದಿದ್ದರೆ ಭಾರತೀಯ ಸಂಗೀತಶಾಸ್ತ್ರವನ್ನು ಆಧುನಿಕ ವಿಜ್ಞಾನದ ದೃಷ್ಟಿಯಿಂದ ಅರ್ಥಮಾಡಿಕೊಂಡು ತಮ್ಮ ಪಕ್ವವಾದ ಸಂಗೀತ ಜ್ಞಾನಾನುಭವಗಳನ್ನು ವೀಣಾವಾದನಗಾಯನ ಕಲೆಯ ಮೂಲಕವೂ ಸಂಗೀತಶಾಸ್ತ್ರ ಗ್ರಂಥಗಳ ರಚನೆಯ ಮೂಲಕವೂ ವ್ಯಕ್ತಪಡಿಸಲು ರಾಜಾರಾಯರಿಗೆ ಸಾಧ್ಯವಾಗುತ್ತಿರಲಿಲ್ಲ. ಸಂಗೀತ ಸಾಧನೆ ಮತ್ತು ವಿಜ್ಞಾನದ ತಿಳಿವಳಿಕೆ, ಇವೆರಡರ ಸಂಗಮದಿಂದ ರಾಜಾರಾಯರು ಕಾಲಕ್ರಮದಲ್ಲಿ ಸಂಗೀತ ಕಲಾವಿದರೂ, ಸಂಗೀತ ಶಾಸ್ತ್ರಕಾರರೂ ಕನ್ನಡ ಕೃತಿಗಳ ರಚನಕಾರರೂ ಆಗಿ ಪರಿಣಮಿಸಲು ಸಾಧ್ಯವಾಯಿತು.

## ಕಾಲೇಜಿನ ದಿನಗಳು

ಕಾಲೇಜಿನ ದಿನಗಳು ಮೈಸೂರು ಮತ್ತು ಬೆಂಗಳೂರುಗಳಲ್ಲಿ ಕಳೆದುಹೋದುವು. ಮೈಸೂರಿನಲ್ಲಿ ತರುಣ ರಾಜನ ವಿದ್ಯಾರ್ಥಿ ದಶೆ ವಿವಿಧ ಚಟುವಟಿಕೆಗಳಿಂದ ತುಂಬಿಹೋಗಿತ್ತು. ರಾಜಾರಾಯರ ಬದುಕಿನಲ್ಲಿ ಸಂಗೀತವೇ ತುಂಬಿ ತುಳುಕುತ್ತಿದ್ದುದರಿಂದ ಕಾಲೇಜು ರಂಗದಲ್ಲೂ ಅದು ವಿಜೃಂಭಣೆಯಿಂದ ವಿದ್ಯಾರ್ಥಿಲೋಕವನ್ನು ರಂಜಿಸಿ, ತರುಣ ರಾಜನನ್ನು ಆಕರ್ಷಕ ವ್ಯಕ್ತಿಯನ್ನಾಗಿ ಮಾಡಿತು. ರೂಪದಿಂದಲೂ ರಾಜ ಆಕರ್ಷಕನಾಗಿದ್ದ. ಕುಳ್ಳೂ ಅಲ್ಲದ, ಎತ್ತರವೂ ಅಲ್ಲದ ಅವನು 'ಮಟ್ಟಸ'ನಾಗಿದ್ದ ; ಬಣ್ಣ ಕಪ್ಪೂ ಅಲ್ಲದ, ಬಿಳಿಪೂ ಅಲ್ಲದ,

**ನಗರದಲ್ಲಿ ಕಚೇರಿಗಳು**

30ರ ದಶಕದಲ್ಲಿ ಟಿಕೀಟು ಮಾರಿ ಬಂದ ಆದಾಯದಿಂದ ನಡೆಯುವ ಸಂಗೀತ ಸಭೆ ಒಂದೂ ಮೈಸೂರಿನಲ್ಲಿ ಇರಲಿಲ್ಲ. ಪ್ರಸಿದ್ಧ ಸಂಗೀತಗಾರರೆಲ್ಲ ಅರಮನೆಯ ಆಸ್ಥಾನ ವಿದ್ವಾಂಸರು ; ಬಿಡಾರಂ ಕೃಷ್ಣಪ್ಪನವರು, ಮುತ್ತೈಯ ಭಾಗವತರು, ಕೆ. ವಾಸುದೇವಾಚಾರ್ಯರು, ವೀಣೆ ಸುಬ್ಬಣ್ಣನವರು, ವೀಣೆ ವೆಂಕಟಗಿರಿಯಪ್ಪನವರು, ವೀಣೆ ಲಕ್ಷ್ಮೀನಾರಣಪ್ಪನವರು, ಚಿಕ್ಕರಾಮರಾಯರು, ಬಿ. ದೇವೇಂದ್ರಪ್ಪನವರು, ಬೆಳಕವಾಡಿ ಶ್ರೀನಿವಾಸ ಅಯ್ಯಂಗಾರ್, ತಿಟ್ಟೆ ಕೃಷ್ಣಯ್ಯಂಗಾರ್ ಮುಂತಾದವರು. ಶನಿವಾರದ ದಿನ ಕೆಲವರ ಮನೆಗಳಲ್ಲಿ, ಶುಕ್ರವಾರ ಕೆಲವರ ಮನೆಗಳಲ್ಲಿ, ಗುರುವಾರದಂದು ಕೆಲವರ ಮನೆಗಳಲ್ಲಿ, ದೇವತಾರಾಧನೆಯ ರೂಪದಲ್ಲಿ, ದೇವರ ಪ್ರೀತ್ಯರ್ಥ, ವಿದ್ವಾಂಸರು ತಾವು ಸಂಗೀತ ನಡಸದ ದಿನಗಳಲ್ಲಿ ಇತರ ವಿದ್ವಾಂಸರ ಮನೆಗಳಿಗೆ ಹೋಗಿ ಅವರ ಹಾಡಿಕೆಯನ್ನೋ ವಾದ್ಯ ವಾದನವನ್ನೋ ಆಲಿಸಿ ಸುಖಿಸುವರು. ಸಂಗೀತವಿದ್ವಾಂಸರಾದವರೇ ಸಹೃದಯರಾಗಿ ಸಂಮುಖದಲ್ಲಿ 'ಭೇಷ್ ಭೇಷ್' ಎನ್ನುತ್ತಾ ಕುಳಿತಿದ್ದರೆ ವಾದ್ಯ ನುಡಿಸುವವನಿಗೆ, ಹಾಡುವವನಿಗೆ, ಸಾಕ್ಷಾತ್ ಸರಸ್ವತಿಯೇ ಹೃದಯದಲ್ಲಿ ನೆಲಸಿ ಹುರುಪು ಹೆಚ್ಚಿಸಿದಂತಾಗುವುದು. ಶ್ರೋತೃಗಳಾದ ಸಂಗೀತ ವಿದ್ವಾಂಸರೂ ಇತರ ಸಂಗೀತ ರಸಿಕರೂ ಇಂಥ ರಸಮಯ ಸನ್ನಿವೇಶಗಳಲ್ಲಿ ಮೈಮರೆತು ಸಂಗೀತಸುಧಾ ರಸಪಾನ ಮಾಡುತ್ತಿದ್ದರು.

ನಮ್ಮ ರಾಜ ಬೆಳೆದದ್ದು ಇಂಥ ಸಂಗೀತದ ವಾತಾವರಣದಲ್ಲಿ. ನಮ್ಮ ತಂದೆಯ ಜೊತೆ ಇತರ ಸಂಗೀತ ವಿದ್ವಾಂಸರ ಮನೆಗಳಿಗೆ ಹೋಗಿ, ಬೇರೆ ಬೇರೆ 'ಬಾನಿ'ಗಳ (ಬಾಣಿ<ವಾಣಿ, ಹಾಡಿಕೆಯ ಶೈಲಿ) ಹಾಡಿಕೆಯನ್ನು ಆಲಿಸಿ, ವೀಣೆ ಶೇಷಣ್ಣನವರೇ ಮೊದಲಾಗಿ ಇತರ ಅರಿತ ನುರಿತ ವೈಣಿಕರ ವೀಣಾವಾದನ ವೈಖರಿಗಳನ್ನು ಪ್ರತ್ಯಕ್ಷ ಕಂಡು ಕೇಳಿ, ತಂದೆಯಿಂದ ದೊರೆತ ಶಿಕ್ಷಣಕ್ಕೆ ಸಾಣೆ ಹಿಡಿಯುತ್ತಿದ್ದ. ಸ್ವಂತ ಗೃಹದಲ್ಲಿ ತಂದೆಯೊಂದಿಗೆ, ತಮ್ಮ ಗೋಪಾಲನೊಂದಿಗೆ, ವೀಣೆ ನುಡಿಸಿ, ಬಾಯಲ್ಲಿ ಹಾಡಿ, ನೆರೆದಿದ್ದ ಪ್ರಾಜ್ಞ ಸಂಗೀತ ರಸಿಕರ ಶಾಭಾಸುಗಿರಿ ಪಡೆಯುತ್ತಿದ್ದ. ರಾಜನ ತಂದೆ ಲಕ್ಷ್ಮೀನಾರಣಪ್ಪನವರ ಮನೆಯಲ್ಲಿ ಪ್ರತಿ ಶುಕ್ರವಾರವೂ ನಡೆಯುತ್ತಿದ್ದ ಸಂಗೀತ ಗೋಷ್ಠಿ ರಾಜನಿಗೆ ಮತ್ತು ಗೋಪಾಲನಿಗೆ ಎಂಥ ಪ್ರಾಯೋಗಿಕ ಶಿಕ್ಷಣ ಶಾಲೆಯಾಗಿ ಪರಿಣಮಿಸಿತ್ತು ಎನ್ನುವುದನ್ನು ಆ ಗೋಷ್ಠಿಯ ಸ್ವರೂಪ ವರ್ಣನೆಯಿಂದ ಊಹಿಸಿ ತಿಳಿದು ಕೊಳ್ಳಬಹುದು. ಈ ಪುಸ್ತಕದ ಲೇಖಕನೂ ಆ ಗೋಷ್ಠಿಗಳ ಸ್ವರೂಪವನ್ನು ಬಲ್ಲವನಾದರೂ ತಮ್ಮ

ಆಸ್ಥಾನ ವಿದ್ವಾಂಸರೂ ಕರ್ನಾಟಕ ಬ್ಯಾಂಡಿನ ಶಿಕ್ಷಕರೂ ಆಗಿದ್ದ ಎಂ. ವೆಂಕಟಗಿರಿಯಪ್ಪ ಅವರ ಶಿಷ್ಯರು; ಈಗ ಆಕಾಶವಾಣಿಯಲ್ಲಿ ವೀಣಾ ವಿದ್ವಾಂಸರಾಗಿರುವ ಸಿ. ಕೃಷ್ಣಮೂರ್ತಿಯವರ ತಂದೆ) (ವೀಣೆ): ಶ್ರೀಮತಿ ಎನ್ ಶಾರದಾಂಬಾ ಮತ್ತು ಕುಮಾರಿ ಚಂದ್ರವದನಾ (ವೀಣೆ); ಎಸ್. ಕೆ. ರಾಮಾಚಾರ್ (ಕೊಳಲು); ಎಂ.ವಿ. ಸೀತಾರಾಮಯ್ಯ : (ಮೃದಂಗ); ಕೆ. ದೊರೆಸ್ವಾಮಿ (ತಬಲ). ಈ ತಂಡದಲ್ಲಿದ್ದ ಏಕೈಕ ಅಧ್ಯಾಪಕ ಕಲಾವಿದರೆಂದರೆ, ಮಹಾರಾಜ  ಕಾಲೇಜಿನ ತೆಲುಗು ಪಂಡಿತರು, ರಾಳ್ಲದಲ್ಲಿ ಅನಂತಕೃಷ್ಣಶರ್ಮ ಅವರು. ರಾಜಾರಾಯರು ಮೈಸೂರಿನಲ್ಲಿ ಕಾಲೇಜು ವಿದ್ಯಾಭ್ಯಾಸ ಮಾಡಿದ ಎರಡು ವರ್ಷ ಈ ವಾದ್ಯಗೋಷ್ಠಿ ವಿದ್ಯಾರ್ಥಿಗಳಿಗೆ ಸಂಗೀತದ ರಸದೌತಣ ನೀಡಿ, ಅವರಲ್ಲಿ ಸಂಗೀತ ಪ್ರೀತಿಯನ್ನು ಬೆಳಸಿತು. ಈ ಶ್ರೇಯಸ್ಸಿನ ಬಹುಪಾಲು ರಾಜಾರಾಯರಿಗೆ ಸಲ್ಲುತ್ತದೆ. ಏಕೆಂದರೆ, ಎಲ್ಲ ವಾದ್ಯಗಾರರ ನುಡಿಕೆಯಲ್ಲಿ ಜಮಾವಣೆಯನ್ನು ಮೂಡಿಸಿ ಏಕಮುಖವಾಗಿ ಮಾಡುವಲ್ಲಿ ರಾಜಾರಾಯರ ಪಾತ್ರ ಪ್ರಧಾನವಾಗಿತ್ತು. ಗೋಷ್ಠಿಯ ಒಂದು ಕಾರ್ಯಕ್ರಮ ಯಶಸ್ವಿಯಾಗಿ ಪರಿಣಮಿಸಬೇಕಾದರೆ ವಾರಕ್ಕೆ ಎರಡು ದಿನಗಳಂತೆ ಎಂಟು ಹತ್ತು ದಿನಗಳಾದರೂ ಎಲ್ಲರೂ 'ಯೂನಿಯನ್' ಕಟ್ಟಡದಲ್ಲಿ ಒಂದು ಕಡೆ ಸೇರಿ ಒಬ್ಬರ ನೇತೃತ್ವದಲ್ಲಿ ಹೊಂದಿಕೊಂಡು ಅಭ್ಯಾಸ ಮಾಡಬೇಕಾಗಿದ್ದಿತು. ಒಂದೆರಡು ದಿನ ಉತ್ಸಾಹದಿಂದ ಪೂರ್ವಾಭ್ಯಾಸಕ್ಕೆ ಬಂದ ಕಲಾವಿದರು ತಪ್ಪಿಸಿಕೊಳ್ಳಲು ಮೊದಲು ಮಾಡಿದರು. ಪೂರ್ವಾಭ್ಯಾಸದ ದಿನ ಕಾಲೇಜಿನ ಆವರಣದಲ್ಲಿಯೆ ಇದ್ದ ರಾಮಯ್ಯರ್ ಅವರ 'ಹೆಲ್ತ್‌ಕಿಚನ್'ನಿಂದ ಗೋಷ್ಠಿಯುಲ್ಲಿ ಪಾಲುಗೊಳ್ಳುವವರಿಗೆ ತಿಂಡಿ ತರಿಸಿಕೊಡಲಾಗುತ್ತಿತ್ತು. ರಾಜಾರಾಯರು ಒಂದು ಉಪಾಯ ಹೂಡಿದರು ; ವಿದ್ಯಾರ್ಥಿ ಕಾರ್ಯದರ್ಶಿಗೆ ಅದನ್ನು ಸೂಚಿಸಿದರು. "ನರಸಿಂಹ ಮೂರ್ತಿ, ಶಾರದಾ ದೇವಿಗೆ ನೈವೇದ್ಯ ಸಾಲದು. ಭರ್ಜರಿಯಾದ ಚೆರಪು ಸಿಕ್ಕುವ ಹಾಗಿದ್ದರೆ ತಾನೆ ಭಕ್ತರು ದೇವರ ಬಳಿಗೆ ಬರುವುದು? ದಮರೋಟು, ಜಾಮೂನ್, ಬಾದಾಮಿಹಲ್ವ, ಮಸಾಲೆದೋಸೆ, ಉದ್ದಿನವಡೆ, ನಂಜನಗೂಡು ರಸಬಾಳೆ, ಬೀಡ ಇತ್ಯಾದಿ ಇತ್ಯಾದಿ ತರತೀಪು ಪುಷ್ಕಳವಾಗಿ ವಿನಿಯೋಗವಾದರೆ 'ರಿಹರ್ಸಲ್'ಗೆ ಪೂರ್ತಿ ಹಾಜರಾತಿ ಖಾತರಿ !" ಈ ಉಪಾಯ ಫಲಕಾರಿಯಾಯಿತು ಎಂದು ಬೇರೆ ಹೇಳಬೇಕಾಗಿಯೇ ಇಲ್ಲ. ಬಡ ವಿದ್ಯಾರ್ಥಿ ಕಲಾವಿದರ ಬಾಯಲ್ಲಿ ನೀರೂರದೆ ಇರುತ್ತದೆಯೆ?

ರಾಜಾರಾಯರ ವಿಷಯದಲ್ಲಿ ಸಂಗೀತಕಲೆ ಹೇಗೆ ವಂಶವಿದ್ಯೆ ಆಗಿತ್ತು ಎಂಬುದನ್ನು ನೋಡಿದ್ದೇವೆ. ಎಲ್ಲ ಮಕ್ಕಳಲ್ಲಿಯೂ ವಂಶವಿದ್ಯೆ ಪ್ರಕಾಶಕ್ಕೆ ಬರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ರಾಜಾರಾಯರ ಅಣ್ಣಂದಿರೇ ಇದಕ್ಕೆ ನಿದರ್ಶನ. ಮೇಲಿನ ಪದ್ಯದಲ್ಲಿ ಬರುವ 'ಕವಿತೆ'ಗೆ ಬದಲಾಗಿ 'ಸಂಗೀತ' ಬಳಸಿದರೆ ಸರಿ. ಆತನಲ್ಲಿ ಸಹಜವಾದ ಸಂಗೀತ ಪ್ರತಿಭೆ ಇತ್ತು ; ಸಂಗೀತದ ಶಾಸ್ತ್ರ ಭಾಗವನ್ನೂ, ಸಾಹಿತ್ಯ ಭಾಗವನ್ನೂ ರೂಢಿಸಿಕೊಳ್ಳುವುದಕ್ಕೆ ಬೇಕಾಗುವ ವಿವಿಧ ಜ್ಞಾನ ಶಾಖೆಗಳ ಪರಿಚಯ ಇತ್ತು; ಸಾಕ್ಷಾತ್ ತಂದೆಯೇ ಗುರುವೂ ಆದ್ದರಿಂದ ಪಿತೃಭಕ್ತಿಯೂ, ಗುರುಭಕ್ತಿಯೂ ಒಂದೇ ಕಡೆ ನೆಲೆಸಿ, ತಂದೆಯ ಚರಣಸನ್ನಿಧಿಯಲ್ಲಿ ಸಂಗೀತ ಶಾಸ್ತ್ರವನ್ನೂ, ಕಲೆಯನ್ನೂ ಎಡೆಬಿಡದೆ ಬೇಸರಪಡದೆ ಅಭ್ಯಾಸ ಮಾಡಿದ್ದರಿಂದ ಅವು ಸಂಪೂರ್ಣವಾಗಿ ರಾಜಾರಾಯರ ವಶವಾದವು. ಜೊತೆಗೆ, ವಾಗ್ಗೇಯಕಾರರಾಗಿದ್ದ ಕೆ. ವಾಸುದೇವಾಚಾರ್ಯರ ಸಾನ್ನಿಧ್ಯದಲ್ಲಿ ಸಂಗೀತ ಕೃತಿರಚನೆಗೆ ಸಂಬಂಧಪಟ್ಟ ಎಷ್ಟೋ ಸೂಕ್ಷ್ಮ ವಿಚಾರಗಳನ್ನು ತರುಣ ರಾಜ ಗ್ರಹಿಸಿದನು. ಈ ವಿಶೇಷಜ್ಞಾನ ಲಭ್ಯವಾದದ್ದರಿಂದ ಮುಂದೆ ಹರಿದಾಸರ ಕೃತಿಗಳಿಗೆ ಸ್ವರ ಸಂಯೋಜನೆ ಮಾಡುವುದಕ್ಕೂ ಸ್ವಂತ ಕೃತಿಗಳನ್ನು ರಚಿಸುವುದಕ್ಕೂ ಆತನಿಗೆ ಅವಕಾಶವಾಯಿತು. ಮನೆಯಲ್ಲಿಯೇ ಸಂಗೀತ ಪ್ರಪಂಚದ ಅನೇಕ ದಿಗ್ಗಜಗಳ ಪರಿಚಯ ಆಗಿ, ಅವರ ಸಂಗೀತಕಚೇರಿಗಳಿಗೆ ಹೋಗಿ ವಿವಿಧ ಶೈಲಿಗಳ ಸಂಗೀತ ಶ್ರವಣದಿಂದ ತಮ್ಮ ಸಂಗೀತ ಶೈಲಿಯನ್ನು ರೂಪಿಸಿಕೊಳ್ಳಲು ಸುವರ್ಣಾವಕಾಶ ದೊರಕಿತು. ಹಾಡಿಕೆಯಲ್ಲಿ ವಾಸುದೇವಾಚಾರ್ಯರೂ ಟೈಗರ್ ವರದಾಚಾರ್ಯರೂ ರಾಜನ ಆದರ್ಶ; ಅವರ ಪ್ರಭಾವ ಆತನ ಹಾಡಿಕೆಯಲ್ಲಿ ಬಲ್ಲವರು ಗುರುತಿಸಬಹುದಾಗಿತ್ತು. ವೀಣಾವಾದನದಲ್ಲಿ ತಂದೆಯ ಶೈಲಿ ಅವತರಿಸಿತು. ಆ ಪ್ರಭಾವ ಎಷ್ಟು ದಟ್ಟವಾಗಿತ್ತು ಎಂದರೆ ಹಾಡುವಾಗ ಅವರುಗಳಲ್ಲಿ ಕಾಣಬರುತ್ತಿದ್ದ ಮುಖಭಂಗಿ, ಅಂಗಚೇಷ್ಟೆಗಳು ಈತ ಹಾಡುವಾಗಲೂ ಗೋಚರಿಸುತ್ತಿದ್ದುವು.

**ನಟ–ರಾಜ**

ನಟನ ಅಥವಾ ಅಭಿನಯ ಕೌಶಲ ರಾಜಾರಾಯರ ಹುಟ್ಟುಗುಣ. ನಾಟಕ ಶಿರೋಮಣಿ ಎ. ವಿ. ವರದಾಚಾರ್ಯರ ರತ್ನಾವಳಿ ನಾಟಕ ಕಂಪನಿ, ಚಾಮರಾಜ ಒಡೆಯರವರ ಕಾಲದಲ್ಲಿ ಅರಮನೆಯ ಆಶ್ರಯದಲ್ಲಿ ರೂಪುಗೊಂಡು ಬೆಳೆದ ಮಹಾರಾಜರವರ ಕಂಪನಿ ನಿಂತುಹೋದಮೇಲೆ ಅಲ್ಲಿನ ಕೆಲವು ನಟರು ಸ್ಥಾಪಿಸಿದ

ತೀರ್ಥರೂಪರನ್ನು ಕುರಿತು ರಾಜಾರಾಯರೇ ಬರೆದಿರುವ 'ಭೈರವೀ ಲಕ್ಷ್ಮೀನಾರಣಪ್ಪ' ಎಂಬ ಕಿರು ಹೊತ್ತಿಗೆಯಿಂದ ಅವರ ಮನೆಯಲ್ಲಿ ನೆರೆಯುತ್ತಿದ್ದ ಶುಕ್ರವಾರದ ಸಂಗೀತ ಗೋಷ್ಠಿಯ ಪರಿಚಯ ಮಾಡಿಕೊಳ್ಳಬಹುದು.

ವೈಣಿಕ ಪ್ರವೀಣ ಭಕ್ಷಿ ಸುಬ್ಬಣ್ಣನವರು, ಆಸ್ಥಾನ ವಿದ್ವಾನ್ ಬಿ. ದೇವೇಂದ್ರಪ್ಪನವರು, ಟೈಗರ್ ವರದಾಚಾರ್, ಸಂಗೀತ ಶಾಸ್ತ್ರರತ್ನ ಕೆ. ವಾಸುದೇವಾಚಾರ್, ಇವರುಗಳಿಗೆ ಲಕ್ಷ್ಮೀನಾರಣಪ್ಪನವರ ವೀಣಾವಾದನದಲ್ಲಿ ಅಪಾರ ಪ್ರೇಮ. ಟೈಗರ್ ವರದಾಚಾರ್ಯರು ಮೈಸೂರಿನಲ್ಲಿ ಆರೇಳು ವರ್ಷಕಾಲ ನೆಲಸಿದ್ದರು. ಅವರಿಗೆ ಮನಸ್ಸು ಬಂದಾಗ ಪತ್ನೀ ಸಮೇತನಾಗಿ ಲಕ್ಷ್ಮೀನಾರಣಪ್ಪನವರ ಮನೆಗೆ ಬಂದು, ಅವರ ವೀಣಾವಾದನ ಕೇಳಿ ಸುಖಿಸಿ, ತಂದೆಯವರ ಜೊತೆ ಆಗೊಮ್ಮೆ ಈಗೊಮ್ಮೆ ವೀಣೆ ನುಡಿಸುತ್ತಿದ್ದ ರಾಜನ ಬೆನ್ನು ತಟ್ಟಿ, ಖುಷಿ ಬಂದಾಗ ತಾವೂ ಸರಿಹೊತ್ತಿನವರೆಗೂ ಹಾಡಿ ಲಕ್ಷ್ಮೀನಾರಣಪ್ಪನವರ ಸಂಗೀತ ಸಹವಾಸವನ್ನು ಅನುಭವಿಸಿ ಸುಖಪಡುತ್ತಿದ್ದರು. ಬೆಳಕವಾಡಿ ಶ್ರೀನಿವಾಸಯ್ಯಂಗಾರ್ಯರಿಗೆ ಲಕ್ಷ್ಮೀನಾರಣಪ್ಪನವರಲ್ಲಿ ಸೋದರಪ್ರೇಮ. ಇವರಿಬ್ಬರೂ ಪಿಟೀಲು ವೀಣೆಗಳನ್ನು ಒಟ್ಟಿಗೆ ಅಭ್ಯಾಸ ಮಾಡಿ, ಒಟ್ಟಿಗೆ ನುಡಿಸಿ, ಮೈಸೂರು ನಗರದಲ್ಲಿ ಅನೇಕ ಕಡೆಗಳಲ್ಲಿ ಕಚೇರಿಗಳನ್ನು ನೀಡಿ, ರಸಿಕವೃಂದವನ್ನು ತೃಪ್ತಿಪಡಿಸುತ್ತಿದ್ದರು. ಈ ರೀತಿ ಲಕ್ಷ್ಮೀನಾರಣಪ್ಪನವರ ಸಾಧಾರಣ ನಾಡಹೆಂಚಿನ ಮನೆ ಒಂದು ಚಿಕ್ಕ ('ಮಿನಿ') ಗಂಧರ್ವಲೋಕವೇ ಆಗಿತ್ತು.

ಲಕ್ಷ್ಮೀನಾರಣಪ್ಪನವರ ಮನೆಯ ಈ ಸಂಗೀತದ ವಾತಾವರಣದಲ್ಲಿ ತರುಣ ರಾಜನ ಸಂಗೀತಕಲಾಕುಸುಮ ಚೆನ್ನಾಗಿ ಅರಳಿತು. ಕಾವ್ಯರಚನೆಯ ವಿಷಯದಲ್ಲಿ ಕಾವ್ಯ ಶಾಸ್ತ್ರಜ್ಞರು ಹೇಳಿರುವ ಮಾತು ಸಂಗೀತ ಕಲೆಗೂ ಅನ್ವಯಿಸುತ್ತದೆ. ನಾಗವರ್ಮನು ತನ್ನ 'ಕಾವ್ಯಾವಲೋಕನ' ಎಂಬ ಲಕ್ಷಣ ಗ್ರಂಥದಲ್ಲಿ ಕಾವ್ಯರಚನೆಗೆ ಕಾರಣಗಳು ಯಾವುವು ಎಂಬುದನ್ನು ಹೀಗೆ ತಿಳಿಸಿದ್ದಾನೆ :

ಪ್ರತಿಭಾನಂ ಕಾವ್ಯವಿದ್ಯಾಪ್ರಚಯ ಪರಿಚಯಂ
ವೃದ್ಧಸೇವಾನುರಾಗಂ.
ಸತತಾಭ್ಯಾಸ ಪ್ರಯತ್ನಂ–ಕವಿತೆಗೆ ನಿಯತಂ ಕಾರಣಂ ;
ಪೇಳ್ವೊಡೆ ಅಂತಾ
ಪ್ರತಿಭಾನಂ ಶಕ್ತಿ, ಲೋಕಾಗಮ ಸಕಲ ಕಲಾವೇದನಂ
ವಿದ್ಯೆ, ಶಾಸ್ತ್ರಾ–
ನ್ವಿತನಪ್ಪಂ ವೃದ್ಧಂ ; ಆಲಸ್ಯಮನುಳಿದೆಸಪುದ್ಯೋಗಂ
ಅಭ್ಯಾಸಕರ್ಮಂ.



'ಗದಾಯುದ್ಧ' ನಾಟಕದ ಭೀಮನ ಪಾತ್ರದಲ್ಲಿ ಎಲ್. ರಾಜಾರಾವ್

ಶಾಕುಂತಲ ನಾಟಕ ಕಂಪನಿ, ಅಲ್ಲಿಯ ಇನ್ನು ಕೆಲವು ನಟರು ಆಮೇಲೆ ಸ್ಥಾಪಿಸಿದ ಚಾಮುಂಡೇಶ್ವರಿ ನಾಟಕ ಕಂಪನಿ, ವಿನೋದ ರತ್ನಾಕರ ವೀರಣ್ಣನವರ ಗುಬ್ಬಿ ಕಂಪನಿ, ಮೈಸೂರಿಗೆ ಆಗಾಗ್ಗೆ ಬರುತ್ತಿದ್ದ ಶಿರಹಟ್ಟಿ ಕಂಪನಿ, ಇನ್ನೂ ಅನೇಕ ಸಣ್ಣ ಪ್ರಮಾಣದ ನಾಟಕ ಕಂಪನಿಗಳು – ಇವೆಲ್ಲವೂ ಸಾಮೂಹಿಕವಾಗಿ ಅಂದಿನ ಮೈಸೂರು ಪ್ರಾಂತದಲ್ಲಿ ಸಂಗೀತ ಪ್ರಧಾನವಾದ ನಾಟಕ ಪ್ರಪಂಚವೊಂದನ್ನು ನಿರ್ಮಾಣ ಮಾಡಿದ್ದುವು. ವಿದ್ಯಾವಂತರು, ವಿದ್ಯಾವಂತರಲ್ಲದವರು – ಎಲ್ಲರೂ ಕಂಪನಿ ನಾಟಕಗಳಿಗೆ ಪ್ರೋತ್ಸಾಹ ಕೊಡುತ್ತಿದ್ದರು. ರಾಜಾರಾಯರ ಚಿಕ್ಕಪ್ಪ ವೆಂಕಟರಾಮಯ್ಯ ಚಾಮುಂಡೇಶ್ವರಿ ಕಂಪನಿಯ ನಟವರ್ಗದಲ್ಲಿ ಒಬ್ಬರು. ಸಂಗೀತ ವಿದ್ವಾಂಸರಾದ ಅವರಿಗೆ ಸೂತ್ರಧಾರನ ಪಾತ್ರ ಮೀಸಲು. ಬಾಲಕ ರಾಜ ತಂದೆಯ ಜೊತೆ, ಚಿಕ್ಕಪ್ಪನ ಜೊತೆ, ಆಗ ರಂಗದ ಮೇಲೆ ಪ್ರದರ್ಶಿತವಾಗುತ್ತಿದ್ದ ಎಲ್ಲ ನಾಟಕಗಳನ್ನೂ ನೋಡಿದ್ದನು. ಚಿಕ್ಕಪ್ಪನ ಪ್ರಭಾವಕ್ಕೆ ಒಳಗಾಗಿ ರಾಜ ಯಾವುದಾದರೂ ನಾಟಕ ಕಂಪನಿಗೆ ಸೇರಿಬಿಟ್ಟಿದ್ದರೆ ನಾಟಕ ಪ್ರಪಂಚಕ್ಕೆ ದೊಡ್ಡ ಲಾಭವಾಗಿ ಸಂಗೀತ ಪ್ರಪಂಚಕ್ಕೆ ಅಷ್ಟೇ ದೊಡ್ಡ ನಷ್ಟ ಆಗುತ್ತಿತ್ತು. ಕಂಪನಿ ನಾಟಕಗಳ ಉಚ್ಛ್ರಾಯ ಕಾಲ ಮುಗಿದುಹೋಗಿ ಅವನತಿಯ ಕಾಲದ ಮುನ್ಸೂಚನೆಗಳು ಆಗಲೇ ಕಾಣಿಸಿಕೊಂಡಿದ್ದುವು. ಅಲ್ಲದೆ, ಕಾಲೇಜು ವಿದ್ಯಾಭ್ಯಾಸದ ಪರಿಣಾಮವಾಗಿ ವಿದ್ಯಾವಂತರ, ವಿದ್ಯಾರ್ಥಿಗಳ ಸಮುದಾಯಗಳಲ್ಲಿ ಷೇಕ್ಸ್‌ಪಿಯರ್, ಷೆರಿಡನ್, ಗೋಲ್ಡ್‌ಸ್ಮಿತ್, ಗಾಲ್ಸ್‌ವರ್ದಿ, ಬರ್ನಾರ್ಡ್‌ಷಾ, ಮೋಲಿಯೇರ್, ಮುಂತಾದ ಪಾಶ್ಚಾತ್ಯ ನಾಟಕಕಾರರ ಸಂಗೀತರಹಿತ, ವಾಸ್ತವ ದೃಷ್ಟಿಯ ಸಾಹಿತ್ಯಪ್ರಧಾನ ನಾಟಕಗಳು ಪ್ರಿಯವಾಗತೊಡಗಿದ್ದವು. ಕಾಲೇಜಿನಲ್ಲಿ ಷೇಕ್ಸ್‌ಪಿಯರ್ ಮತ್ತು ಮೋಲಿಯೇರ್‌ನ ನಾಟಕಗಳನ್ನು ವಿದ್ಯಾರ್ಥಿಗಳ ನಾಟಕ ತಂಡಗಳು ಆಡುತ್ತಲೂ ಇದ್ದುವು. ಕಾಲೇಜಿನಿಂದ ಹೊರಗೆ ಲಿಟರರಿ ಅ್ಯಂಡ್ ಡ್ರಮಾಟಿಕ್ ಅಸೋಸಿಯೇಷನ್ (LDA) ಎಂಬ ಸಂಸ್ಥೆ ಇಂಗ್ಲೀಷು ನಾಟಕಗಳನ್ನು ಪ್ರದರ್ಶಿಸುತ್ತಿದ್ದುವು. ಇದೇ ಕಾಲದಲ್ಲಿ ಕೈಲಾಸಂ ಬೆಂಗಳೂರು, ಮೈಸೂರುಗಳಲ್ಲಿ ತಮ್ಮ ಹಾಸ್ಯಪ್ರಧಾನವಾದ ಗದ್ಯನಾಟಕಗಳನ್ನು ಪ್ರದರ್ಶಿಸಿದ ಮೇಲೆ, ಶಾಲಾಕಾಲೇಜುಗಳಲ್ಲಿ ಇಂಗ್ಲೀಷು ನಾಟಕಗಳ ಜೊತೆಗೆ ಅವುಗಳ ಪ್ರಭಾವದಿಂದ ರಚಿತವಾದ ಹೊಸ ಹೊಸ ಕನ್ನಡ ಗದ್ಯನಾಟಕಗಳನ್ನೂ, ಸರಳರಗಳೆಯ ಪದ್ಯನಾಟಕಗಳನ್ನೂ ಪ್ರದರ್ಶಿಸುವುದು ರೂಢಿಗೆ ಬಂತು. ಕಾಲೇಜು ವಿದ್ಯಾರ್ಥಿಯಾಗಿದ್ದ ರಾಜ ಸಹಜವಾಗಿಯೆ ಹೊಸ ಬಗೆಯ ನಾಟಕದಲ್ಲಿ ಆಸಕ್ತನಾದ.

ಸಾಮರ್ಥ್ಯವಿತ್ತು. ಆದರೆ, ಮೈಸೂರನ್ನು ಬಿಟ್ಟು ಅವರು ಬೆಂಗಳೂರಿಗೆ ಬಂದಾಗ (1930) ಬಣ್ಣ ಹಾಕಲು ಹಲವು ವರ್ಷ ಕಾಯಬೇಕಾಯಿತು. ಬೆಂಗಳೂರಿನಲ್ಲಿ ಬಹುಶಃ ಅವರು ಮೊತ್ತ ಮೊದಲು ರಂಗದ ಮೇಲೆ ಕಾಣಿಸಿಕೊಂಡದ್ದು 'ಶ್ರೀ' ಯವರ 'ಪಾರಸಿಕರು' ನಾಟಕದಲ್ಲಿ. ನಾಟಕ ಪ್ರದರ್ಶನವೇ ಸಪ್ಪೆಯಾಗಿ ಪರಿಣಮಿಸಿದ್ದರಿಂದ ಇವರ ಪಾತ್ರ ಶೋಭಿಸಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತು 1944ರಲ್ಲಿ ನಾಟಕ ಶಾಖೆಯನ್ನು ತೆರೆದು, ಅನೇಕ ಕಲಾವಿಲಾಸಿ ನಾಟಕ ಸಂಘಗಳು ಅದರ ಆಶ್ರಯದಲ್ಲಿ ಸಣ್ಣ ದೊಡ್ಡ ನಾಟಕಗಳನ್ನು ಪ್ರದರ್ಶಿಸಲು ಅವಕಾಶವಾಯಿತು. ಈ ಲೇಖಕನು ಆ ಶಾಖೆಯ ಕಾರ್ಯದರ್ಶಿ. ಸಿ. ಕೆ. ನಾಗರಾಜರಾಯರು ಉತ್ಸಾಹದಿಂದಲೂ, ದಕ್ಷತೆಯಿಂದಲೂ ನಡಸುತ್ತಿದ್ದ 'ಯುನೈಟೆಡ್ ಆರ್ಟಿಸ್ಟ್ಸ್' ಸಂಘವು ಎಂ.ವಿ.ಸೀ. ಅವರ 'ಕವಿಯ ಹೆಂಡತಿ', ಎಚ್. ಯೋಗಾನರಸಿಂಹಂ ಅವರ 'ಮನಸ್ಸಿಲ್ಲದ ಮದ್ವೆ', ಕುವೆಂಪು ಅವರ 'ವಾಲ್ಮೀಕಿಯ ಭಾಗ್ಯ' ನಾಟಕಗಳನ್ನು ಅತ್ಯಂತ ಯಶಸ್ವಿಯಾಗಿ ಪ್ರದರ್ಶಿಸಿತು. ಉಭಯರಿಗೂ ಮಿತ್ರರಾಗಿದ್ದ ರಾಜಾರಾಯರನ್ನು ಅವರು ಮರೆಯುವುದಾದರೂ ಹೇಗೆ? 'ವಾಲ್ಮೀಕಿಯ ಭಾಗ್ಯ'ದಲ್ಲಿ ರಾಜಾರಾಯರು ತಮ್ಮ ಶಿಷ್ಯರಾದ ಶ್ರೀ ಟಿ.ಎನ್. ರಾಮಚಂದ್ರರಾವ್ ಅವರ ಪಿಟೀಲು ವಾದನದೊಂದಿಗೆ ಒದಗಿಸಿದ ವೀಣಾವಾದನದ ಹಿನ್ನೆಲೆ ಸಂಗೀತ ನಾಟಕ ಪ್ರದರ್ಶನಕ್ಕೆ ಕಳೆ ಕೊಟ್ಟಿತು ; ಕರುಣರಸವನ್ನು ಎತ್ತಿ ಹಿಡಿಯಿತು. 'ಕವಿಯ ಹೆಂಡತಿ'ಯಲ್ಲಿ ಕಂಟ್ರಾಕ್ಟರ್ ಕೆಂಪಣ್ಣನ ಪಾತ್ರದಲ್ಲಿ ಅತ್ಯಂತ ಸಹಜವಾಗಿ ಅಭಿನಯಿಸಿದ ರಾಜಾರಾಯರೇ 'ಮನಸ್ಸಿಲ್ಲದ ಮದ್ವೆ' ನಾಟಕದಲ್ಲಿ ಹಿರಿಯ ಮುತ್ತೈದೆಯ ಪಾತ್ರವನ್ನು ಅಭಿನಯಿಸಿದರು ಎಂದರೆ ನಂಬುವುದೇ ಕಷ್ಟವಾಗಿತ್ತು. 1953ರಲ್ಲಿ ರನ್ನ ಮಹಾಕವಿಯ ಸಹಸ್ರ ವಾರ್ಷಿಕೋತ್ಸವ ಸಂದರ್ಭದಲ್ಲಿ ಯುನೈಟೆಡ್ ಆರ್ಟಿಸ್ಟ್ಸ್ ಅವರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಪ್ರದರ್ಶಿಸಿದ ರನ್ನನ 'ಗದಾಯುದ್ಧ' ಕಾವ್ಯದ ನಾಟಕ ರೂಪದಲ್ಲಿ ಭೀಮನ ಪಾತ್ರವನ್ನು ನೋಟಕರ ಕಣ್ಮನ ಪಾತ್ರಾಭಿನಯದಲ್ಲಿ ಲೀನವಾಗಿಬಿಡುವಂತೆ, ನಾಟಕದ ವೀರ ರೌದ್ರ ರಸಗಳಿಗೆ ಆಕಾರ ಕೊಟ್ಟು ಅಭಿನಯಿಸಿದರು. ಹಳಗನ್ನಡ ಪದ್ಯಗಳ ವಾಚಕಾಭಿನಯಕ್ಕೆ ಅವರ ಗಮಕಕಲಾನೈಪುಣ್ಯ ನೆರವಿಗೆ ಬಂದಿತು. ದುರ್ಯೋಧನನ ಪಾತ್ರವನ್ನು ನಿರ್ವಹಿಸಿದ ಅಭಿನಯ ಪಟು ಶ್ರೀ ಸಿ.ಕೆ. ನಾಗರಾಜರಾಯರೊಂದಿಗೆ 'ಭೀಮ'ನಾಗಿದ್ದ ರಾಜಾರಾಯರು ಗದಾಯುದ್ಧವೆಸಗಿದ ಸನ್ನಿವೇಶದಲ್ಲಿ ಮೂದಲೆಗೆ ಪ್ರತಿ ಮೂದಲೆ ಹಾರಾಡಿದ, ಏಟಿಗೆ ಮಾರೇಟು ಕೊಟ್ಟ ದೃಶ್ಯ ರುದ್ರಮನೋಹರವಾಗಿತ್ತು.

ರಾಜ ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ಮೈಸೂರು ಮಹಾ ರಾಜ ಕಾಲೇಜಿನ ಇತಿಹಾಸದ ವಿದ್ಯಾರ್ಥಿಗಳು ಇತಿಹಾಸ ಸಂಘವನ್ನು ಸ್ಥಾಪಿಸಿಕೊಂಡಿದ್ದರು. ಈ ಸಂಘ ವರ್ಷದ ಕೊನೆಯಲ್ಲಿ ವಾರ್ಷಿಕ ಸಮಾರಂಭದ ಅಂಗವಾಗಿ ಯಾವುದಾದರೂ ಕನ್ನಡ ಐತಿಹಾಸಿಕ ನಾಟಕವನ್ನು ಆಯ್ದುಕೊಂಡು ಆಡುತ್ತಿದ್ದರು. ಈ ನಾಟಕಗಳಲ್ಲಿ ನಾಯಕ ಪಾತ್ರ ಇತಿಹಾಸ ವಿದ್ಯಾರ್ಥಿಯಾಗಿದ್ದ ಕೆ.ಜಿ. ಸಂಪತ್ಕುಮಾರಾಚಾರ್ ಎಂಬಾತನಿಗೆ ಮೀಸಲು ; ಈತನ ಭವ್ಯವಾದ ಎತ್ತರವಾದ ಆಕೃತಿ, ಕಂಚಿನ ಕಂಠ, ನಡೆಯ ಗತ್ತು, ನುಡಿಯ ಗಮ್ಮತ್ತು, ಇವು ನಾಯಕ ಪಾತ್ರಕ್ಕೆ ಹೇಳಿ ಮಾಡಿಸಿದ ಹಾಗಿದ್ದವು. ಸಂಪತ್ಕುಮಾರಾಚಾರ್ ಶಾಸ್ತ್ರೀಯವಾಗಿ ಸಂಗೀತಾಭ್ಯಾಸ ಮಾಡದಿದ್ದರೂ ಕೇಳ್ಮೆಯಿಂದಲೇ ರಾಗಜ್ಞಾನವನ್ನು ರೂಢಿಸಿಕೊಂಡು ದಾಸರ ಪದಗಳನ್ನೂ ಆಧುನಿಕ ಭಾವಗೀತೆಗಳನ್ನೂ ಸೊಗಸಾಗಿ ಹಾಡುತ್ತಿದ್ದರು. ಮಹಾರಾಜರವರ ಕಾಲೇಜಿನಲ್ಲಿಯ ಪುಸ್ತಕ ಭಂಡಾರದ ಪಾಲಕರಾಗಿದ್ದ 'ಲೈಬ್ರರಿ' ಕೃಷ್ಣರಾಯರು, ಕಾಲೇಜಿನ ಬಳಿಯೇ ವಾಸವಾಗಿದ್ದ ಭಾರತ ಬಿಂದೂರಾಯರು, ಇವರು ನಡಸುತ್ತಿದ್ದ ಕಾವ್ಯವಾಚನದಿಂದ ಸ್ಫೂರ್ತಿಗೊಂಡು ಸ್ವಪ್ರಯತ್ನದಿಂದಲೇ ಗಮಕ ಕಲೆಯನ್ನೂ ಸ್ವಾಧೀನ ಪಡಿಸಿಕೊಂಡಿದ್ದರು, ಸಂಪತ್ಕುಮಾರಾಚಾರ್ಯರು. ಸಂಗೀತ ಮತ್ತು ಗಮಕಗಳು ರಾಜಾರಾಯರ ಮತ್ತು ಸಂಪತ್ಕುಮಾರಾಚಾರ್ಯರ ಆತ್ಮೀಯ ಸ್ನೇಹಕ್ಕೆ ಸೇತುವೆಯಾಗಿ ಪರಿಣಮಿಸಿದುವು. ಸಂಪತ್ಕುಮಾರಾಚಾರ್ಯರು ರಾಜಾರಾಯರಿಗೆ 'ಸಂಪತ್ತು' ; ಅವರಿಗೆ ರಾಜರಾಯರು 'ರಾಜಣ್ಣ'.

ರಾಜಾರಾಯರು ರಂಗಮಂಚವನ್ನು ಮೆಟ್ಟುವುದಕ್ಕೂ ಗಮಕ ಕಲೆಯಲ್ಲಿ ಆಸಕ್ತಿ ತೋರಿಸುವುದಕ್ಕೂ ಸಂಪತ್ಕುಮಾರಾಚಾರ್ಯರು ಮುಖ್ಯ ಕಾರಣಕರ್ತರು. ಕಾಲೇಜಿನ ಇತಿಹಾಸ ಸಂಘ ಪ್ರದರ್ಶಿಸುತ್ತಿದ್ದ 'ವಿದ್ಯಾರಣ್ಯ ವಿಜಯ', 'ಯದುರಾಯವಿಜಯ', 'ವಿಗಡ ವಿಕ್ರಮರಾಯ' ಮುಂತಾದ ನಾಟಕಗಳಲ್ಲಿ ಒಂದೆರಡು ಸಣ್ಣ ಪಾತ್ರಗಳಾದರೂ ಅಭಿನಯ ಸಾಮರ್ಥ್ಯವನ್ನು ಮೆರೆಯಲು ಅವಕಾಶವಿದ್ದ ಪಾತ್ರಗಳನ್ನು ತಮ್ಮ ಗೆಳೆಯನಿಗೆ ದೊರಕಿಸಿಕೊಟ್ಟರು 'ಸಂಪತ್ತು', ಇಲ್ಲಿಬೆಳಕಿಗೆ ಬಂದ 'ರಾಜಣ್ಣ'ನ್ನು 'ಎಲ್‌ಡಿಎ' ಕಲಾಭಿಮಾನಿಗಳ ಸಂಘ ತನ್ನ ತೆಕ್ಕೆಗೆ ಸೆಳೆದುಕೊಂಡಿತು. ಈ ಸಂಘ ಪ್ರದರ್ಶಿಸಿದ ಅ.ನ.ಕೃ. ಅವರ ಚೊಚ್ಚಲು ನಾಟಕ 'ಮದುವೆಯೋ ಮನೆ ಹಾಳೋ'ವಿನಲ್ಲಿ ಮನೆಯ ಸೇವಕನ ಪಾತ್ರದಲ್ಲಿ ರಾಜಾರಾಯರ ಗ್ರಾಮ್ಯ ಭಾಷೆಯ ವೈಖರಿ ಅಸದೃಶವಾಗಿತ್ತು.

ರಾಜಾರಾಯರಿಗೆ ಯಾವ ಪಾತ್ರವನ್ನಾದರೂ ನಿರ್ವಹಿಸುವ

ಹಾಡಿಕೆಯನ್ನು ಮರೆಯುವಂತಿಲ್ಲ. ಪ್ರಸಿದ್ಧ ಗಮಕಿಗಳಾದ ಸಂಪತ್ಕುಮಾರಾಚಾರ್, ಗಮಕಿ ಚಂದ್ರಶೇಖರಯ್ಯ, ಗಮಕಿ ರಾಘವೇಂದ್ರರಾವ್ ಇವರು ರಾಜಾರಾಯರ ಪ್ರಭಾವವಲಯಕ್ಕೆ ಸಿಲುಕಿ ತಮ್ಮ ಗಮಕಕಲೆಯನ್ನು ಉತ್ತಮ ಪಡಿಸಿಕೊಂಡದ್ದಲ್ಲದೆ, ಅವರ ಮೆಚ್ಚುಗೆಗೂ ಪಾತ್ರರಾಗಿದ್ದರು.ಗಮಕಕಲೆಯ ಮರ್ಮವನ್ನು ಅರಿತಿದ್ದ ರಾಜಾರಾಯರು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ನಡಸುತ್ತಿದ್ದ ಗಮಕ ಪರೀಕ್ಷೆಗಳ ಪರೀಕ್ಷಕರಾಗಿಯೂ ಗಮಕಕಲೆಯ ಬೆಳವಣಿಗೆಗೆ ಸಹಾಯ ಮಾಡಿದ್ದಾರೆ ; ಗಮಕಸಮ್ಮೇಳನ, ಗಮಕಗೋಷ್ಠಿಗಳಲ್ಲಿ ಗಮಕಕಲೆಯ ವಿಷಯವಾಗಿ ವಿಚಾರಪೂರ್ಣ ಭಾಷಣಗಳನ್ನು ಮಾಡಿದ್ದಾರೆ. ರಾಜಾರಾಯರಿಗೆ ಗಮಕಕಲೆಯಲ್ಲಿದ್ದ ಪ್ರಭುತ್ವದಿಂದಾಗಿ ಅವರ ಗಾಯನಕಲೆ ವಿಶೇಷ ಮಹತ್ವವನ್ನು ಪಡೆಯಿತು. ಸಂಗೀತಕೃತಿಗಳನ್ನು ಹಾಡುವಾಗ ಸಾಹಿತ್ಯಕ್ಕೆ ಅಪಚಾರವಾಗದ ರೀತಿಯಲ್ಲಿ ಹಾಡಬಲ್ಲ ಕೆಲವೇ ಗಾಯಕರಲ್ಲಿ ರಾಜಾರಾಯರೂ ಒಬ್ಬರಾಗಿದ್ದರು.

**ಸಿದ್ಧಿ–ಸಾಧನೆ**

ಬಾಯಿ ಹಾಡಿಕೆ ಮತ್ತು ವೀಣಾವಾದನ ಎರಡರಲ್ಲೂ ರಾಜಾರಾಯರು ಸಾಧಿಸಿದ್ದ ಸಿದ್ಧಿ ಉನ್ನನತಮಟ್ಟದ್ದು. ಸಮಾನ್ಯಜನರನ್ನು ಮೆಚ್ಚಿಸುವ ಕಡೆಗೆ, ಕೀರ್ತಿಯ ಬೆನ್ನಟ್ಟುವ ಕಡೆಗೆ, ದ್ರವ್ಯ ಸಂಪಾದನೆಯ ಕಡೆಗೆ, ಅವರ ಒಲವು ಇರಲಿಲ್ಲ. ವಿದ್ಯಾರ್ಥಿ ದೆಸೆಯಲ್ಲಿ ಗರಡಿ ಸಾಧನೆ, ಇತರ ನಗೆಯ ವ್ಯಾಯಾಮಗಳನ್ನು ಮಾಡಿ, ಮೈಕಟ್ಟನ್ನು ಬೆಳೆಸಿಕೊಂಡಿದ್ದ ಅವರು ಯಾವುದೇ ಕ್ಷೇತ್ರದಲ್ಲಿ ಸಾಧನೆ ಮಾಡದೆ ಸಿದ್ಧಿ ದೊರಕದು ಎಂದು ನಂಬಿದ್ದರು ; ನಂಬಿದ್ದಂತೆ ಸಾಧನೆ ಮಾಡಿದರು.

ರಾಜಾರಾಯರು ಸಂಗೀತರಸಿಕ ಮಿತ್ರರನ್ನು ಸಂಘಾದಿಸಿದ್ದರು. ಜನಜಂಗುಳಿಯ ಮೆಚ್ಚಿಗೆಗಿಂತ ಸಂಗೀತರಸಿಕರ ಮೆಚ್ಚಿಗೆಗೆ ಬೆಲೆಕೊಟ್ಟಿದ್ದ ಕಾರಣ, ಅನುದಿವೂ ವೀಣಾವಾದನ ಕಲೆಯ ಆಳಗಲಗಳನ್ನು, ಸೂಕ್ಷ್ಮಗಳನ್ನು, ಅರಿತುಕೊಳ್ಳುವುದಕ್ಕಾಗಿ ಪ್ರಯತ್ನ ಪಡುತ್ತಿದ್ದರು ; ಪ್ರಯಾಸ ಪಡುತ್ತಿದ್ದರು. ಪ್ರತಿ ದಿನವೂ ಬಿಡುವಾದಾಗಲೆಲ್ಲ ಏಕಾಂತದಲ್ಲಿ ವೀಣಾವಾದನವನ್ನು ಸ್ವಸಂತೋಷಕ್ಕಾಗಿ ಮಾತ್ರವಲ್ಲ 'ಸಾಧಕ'ದ ದೃಷ್ಟಿಯಿಂದಲೂ ಒಂದು ದಿನಚರಿಯಾಗಿ ಮಾಡಿಕೊಂಡಿದ್ದರು.

ಪ್ರತಿ ಶುಕ್ರವಾರ ಇಷ್ಟದೇವತಾ ಪ್ರೀತ್ಯರ್ಥವಾಗಿ, ಸ್ವಸಂತೋಷಕ್ಕಾಗಿ, ರಸಿಕ ಮಿತ್ರವೃಂದಕ್ಕೆ ಸಂಗೀತ ಸುಧೆಯನ್ನು ಉಣಬಡಿಸುವುದಕ್ಕಾಗಿ, ತಮ್ಮ ಮನೆಯಲ್ಲಿ

**ಗಮಕಕಲೆ**

ಪದ್ಯವಾಗಲಿ, ಗದ್ಯವಾಗಲಿ, ವಾಚನಕಲೆ ರಾಜಾರಾಯರಿಗೆ ಸಹಜವಾಗಿ ಸಿದ್ಧಿಸಿತ್ತು. ಅದನ್ನು ಅವರು ಗುರು ಮುಖೇನ ಅಭ್ಯಾಸ ಮಾಡಿದವರಲ್ಲ. ಅವರು ವಿದ್ಯಾಭ್ಯಾಸವನ್ನು ಮುಂದುವರಿಸುವ ಸಲುವಾಗಿ ಮೈಸೂರಿನಿಂದ ಬೆಂಗಳೂರಿಗೆ ಹೋದಾಗ, 1932ರಲ್ಲಿ ಸೆಂಟ್ರಲ್ ಕಾಲೇಜಿನ ಆಶ್ರಯದಲ್ಲಿ ನಡೆದ ಭಾರತ ವಾಚನ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವಾಗಿ ಚಿನ್ನದ ಪದಕವನ್ನು ಗಳಿಸಿದರು.



ಭಾರತವಾಚನ ಸ್ಪರ್ಧೆಯಲ್ಲಿ ಚಿನ್ನದ ಪದಕವನ್ನು ಗಳಿಸಿದರು

ಮೈಸೂರಿನಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ರಾಮೋತ್ಸವ ಸಭೆಗಳಲ್ಲಿ ಹಾಡಿ, ಅವರು ಗಾಯಕರೆಂದು ಪ್ರಸಿದ್ಧರಾಗಿದ್ದರು. ಆ ಸಭೆಗಳಲ್ಲಿ ಅವರು ಜಗನ್ನಾಥ ದಾಸರ 'ಹರಿಕಥಾಮೃತಸಾರದ' ಒಂದೆರಡು ಪದ್ಯಗಳನ್ನು ಗಮಕರೀತಿಯಲ್ಲಿ ವಾಚನ ಮಾಡುತ್ತಿದ್ದರು. ಅವರು ವಾಚನ ಮಾಡುತ್ತಿದ್ದ 'ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ" ಎಂಬ ಪದ್ಯವನ್ನು ಆಲಿಸಿದವರು ಯಾರೂ ಅವರ

ಇವು ಸುಪ್ರಸಿದ್ಧ ಸಂಗೀತ ವಿದ್ವಾಂಸರನ್ನು ಕರೆಯಿಸಿಕೊಂಡು ಸಾರ್ವಜನಿಕ ಸಂಗೀತ ಕಚೇರಿಗಳನ್ನು ವ್ಯವಸ್ಥೆ ಮಾಡುತ್ತಿದ್ದುವು. ಈ ಸಂಸ್ಥೆಗಳ ಆಶ್ರಯದಲ್ಲಿ ಹಾಡುವುದೇ ಒಂದು ಪ್ರತಿಷ್ಠೆಯ ಮಾತಾಗಿತ್ತು. ಅದಕ್ಕಿಂತ ಹೆಚ್ಚಿನ ಗೌರವದ ಸಂಗತಿ ಎಂದರೆ, ಮೈಸೂರು ಮಹರಾಜರ ಕೃಪೆಗೆ ಪಾತ್ರರಾಗಿ 'ಆಸ್ಥಾನ ವಿದ್ವಾಂಸ' ಪದವಿಯನ್ನು ಪಡೆಯುವುದು. ರಾಜಾರಾಯರು ಮೈಸೂರಿನಲ್ಲಿದ್ದಾಗ ಇನ್ನೂ ವಿದ್ಯಾರ್ಥಿಗಳು, ತರುಣರು. ಗಾಯನ–ವೀಣಾವಾದನಗಳಲ್ಲಿ ಪ್ರಾವೀಣ್ಯ ಪಡೆದಿದ್ದರೂ 'ದೊಡ್ಡ ದೊಡ್ಡ ಕಡೆ'ಗಳಲ್ಲಿ ಕಚೇರಿ ಮಾಡಲು ಆಹ್ವಾನ ಇರುತ್ತಿರಲಿಲ್ಲ. ಆದರೆ, ಇವರ ಪ್ರಾವೀಣ್ಯವನ್ನು ಅರಿತಿದ್ದ ಸಂಗೀತ ರಸಿಕರು ಗಣಪತಿ ಮಂಗಳಾರತಿ, ರಾಮೋತ್ಸವ ಮುಂತಾದ ಶುಭಸಂದರ್ಭಗಳಲ್ಲಿ ಇವರನ್ನು ಆಹ್ವಾನಿಸುತ್ತಿದ್ದರು. ಆ ದಿನಗಳಲ್ಲಿ ವೀಣಾವಾದನಕ್ಕಿಂತ ಹಾಡಿಕೆಯಲ್ಲಿ ರಾಜಾರಾಯರಿಗೆ ಹೆಚ್ಚಿನ ಒಲವು.

ರಾಜಾರಾಯರು ವೈಣಿಕರಾಗಿ ಪ್ರಸಿದ್ಧಿಗೆ ಬಂದದ್ದು ಬೆಂಗಳೂರಿಗೆ ಬಂದಮೇಲೆ ಎಂದು ಹೇಳಬಹುದು. ಬಾಲ್ಯದಲ್ಲಿಯೇ ಕಿರಿಯ ಸೋದರ ಗೋಪಾಲನೊಂದಿಗೆ ತಂದೆಯ ಸನ್ನಿಧಿಯಲ್ಲಿ ಜೊತೆಜೊತೆಯಲ್ಲಿ ವೀಣೆ ಕಲಿತಿದ್ದರಿಂದ, ಅವರಿಬ್ಬರಲ್ಲಿ ಅನ್ಯಾದೃಶವಾದ ಸಹೋದರಪ್ರೇಮ ಬೆಳೆದಿತ್ತು ; ವೀಣೆ ಅವರಿಬ್ಬರನ್ನೂ ಬಂಧುಪ್ರೇಮದಲ್ಲಿ ಬಂಧಿಸಿತ್ತು.

ಒಡನಾಡಿ, ಒಡನೋದಿ, ಒಡಬೆಳೆದು ಒಬ್ಬರನ್ನೊಬ್ಬರು ಅಗಲದೆ ಬೆಳೆದ ರಾಜಾರಾಯರೂ ಗೋಪಾಲರಾಯರೂ ಜೋಡಿ ವೀಣೆ ನುಡಿಸುವುದನ್ನು ರೂಢಿಸಿಕೊಂಡು "ಮೈಸೂರು ಸಹೋದರರು" ಎಂದು ಖ್ಯಾತನಾಮರಾದರು. ಈ ಮೈಸೂರು ಸಹೋದರರು ಕರ್ನಾಟಕದ ಒಳಗೂ ಹೊರಗೂ ಪ್ರವಾಸ ಮಾಡಿ ವೀಣಾವಾದನದಲ್ಲಿ ಅಪಾರ ಖ್ಯಾತಿಯನ್ನು ಗಳಿಸಿದರು. ಈ ಕಾಲದಲ್ಲಿ ತಿರುಚಿ, ಮದರಾಸು, ಬೊಂಬಾಯಿ ಆಕಾಶವಾಣಿಗಳು ಇವರನ್ನು ಆಹ್ವಾನಿಸಿ ಇವರ ವೀಣಾವಾದನವನ್ನು ಪ್ರಸಾರ ಮಾಡಿದ್ದರೂ 1953ರಲ್ಲಿ ಮೈಸೂರಿನಿಂದ ಬೆಂಗಳೂರಿಗೆ ಸ್ಥಳಾಂತರಗೊಂಡ ಬೆಂಗಳೂರಿನ ಆಕಾಶವಾಣಿ ಇವರನ್ನು ಅನೇಕ ವರ್ಷಗಳವರೆಗೆ ಆಹ್ವಾನಿಸಲಿಲ್ಲ ! ಇದಕ್ಕೆ ಕಾರಣ ಇವರು ಪೂರ್ವಪರೀಕ್ಷೆಗೆ ಒಳಗಾಗಲು ಒಪ್ಪಿಕೊಳ್ಳದೇ ಹೋದದ್ದು. ಅದಕ್ಕೆ ಅವರ ಆತ್ಮಾಭಿಮಾನವೇ ಕಾರಣ. ಕೊನೆಗೂ ಅವರ ಆತ್ಮಾಭಿಮಾನಕ್ಕೇ ಗೆಲವು. ವೀಣಾವಾದನವನ್ನು ಪ್ರಸಾರ ಮಾಡಲು ಬೆಂಗಳೂರು ಆಕಾಶವಾಣಿ ಅವರಿಗೆ ಕರೆಕಳಿಸಿತು.

ರಾಜಾರಾಯರು ಬೆಂಗಳೂರಿನಲ್ಲೂ ಹೊರಗೂ ನೂರಾರು ಕಚೇರಿಗಳನ್ನು

ವೀಣೆ ನುಡಿಸುವರು, ಹಾಡುವರು. ಇಂಗ್ಲೀಷಿನಲ್ಲಿ Blessing in disguise ಎಂಬ ಸೂಕ್ತಿ ಇದೆ. ಮನುಷ್ಯ ಯಾವಾಗಲೂ ಸುಖವನ್ನೇ ಬಯಸುತ್ತಾನೆ, ದುಃಖಕರ ಸಂಕಷ್ಟಗಳನ್ನು ಅಪೇಕ್ಷಿಸುವುದಿಲ್ಲ. ನಾವು ಬಯಸದಿದ್ದರೂ ಕಷ್ಟಕೋಟಲೆ ನಮ್ಮ ಮೇಲೆ ಕಡಲ ಅಲೆಗಳಂತೆ ಒಂದರ ಮೇಲೆ ಒಂದರಂತೆ ಎರಗಿ ಬರುತ್ತವೆ. ರಾಜಾರಾಯರು ಮಾತಾಪಿತೃಗಳ ವಿಯೋಗವಾದ ಮೇಲೆ ಇಬ್ಬರು ಪತ್ನಿಯರ ವಿಯೋಗವನ್ನು ಸಹಿಸಬೇಕಾಯಿತು. ದೈವಭಕ್ತಿ ಮನೆತನದ ಬಳುವಳೀ ಆದ್ದರಿಂದ "ಆದದ್ದೆಲ್ಲ ಒಳಿತೇ ಆಯಿತು. ಶ್ರೀಧರ ಸೇವೆಗೆ ಸಂಪತ್ತಾಯಿತು" ಎಂದು ಎದೆಗುಂದದೆ ದೈವಚಿಂತನೆಯಲ್ಲೂ ಸಂಗೀತ ಕಲಾ ಸೇವೆಯಲ್ಲೂ ಸಂಗೀತ ರಸಿಕರ ಸಹವಾಸದಲ್ಲೂ ಕಾಲವನ್ನು ಸದುಪಯೋಗ ಮಾಡುತ್ತ ಬಂದರು. ಅವರ ಪುಣ್ಯಕ್ಕೆ ಗುರುಸೇವೆಯಲ್ಲಿ ಜೀವನಸಾರ್ಥಕ್ಯವನ್ನು ಕಾಣುತ್ತ, ಗುರುವಿನ ಒಲವನ್ನು ಸಂಪಾದಿಸಿಕೊಂಡು, ಅವರಲ್ಲಿ ವೀಣೇ ಪಿಟೀಲು ಹಾಡಿಕೆಗಳನ್ನು ಕಲಿಯುವ ಇಬ್ಬರು ಮೂವರು ಶಿಷ್ಯರೂ ಅವರ ಪರಿಚರ್ಯೆಗೆ ಸದಾ ಸಿದ್ಧವಾಗಿದ್ದರು. ಸುಮಾರು 34-35ರ ಹರೆಯದ, ಸುದೃಢ ದೇಹದ, ಸುಲಕ್ಷಣದ, ಸಂಗೀತಪಾಠಗಳಿಂದ ತಕ್ಕಮಟ್ಟಿನ ವರಮಾನ ಉಳ್ಳ ಅವರಿಗೆ ಅಂದಿನ ದಿನಗಳಲ್ಲಿ ಕನ್ಯಾದಾನ ಮಾಡಲು ಯಾರೂ ಹಿಂಜರಿಯುತ್ತಿರಲಿಲ್ಲ. ಆದರೆ ಅವರು ಹಿತೈಷಿಗಳ ಬುದ್ಧಿವಾದಕ್ಕೂ ಒತ್ತಾಯಕ್ಕೂ ಮಣಿಯದೆ ಗೋಪ್ಯವಾಗಿ ಒಂದು ಅಭೂತಪೂರ್ವ ಕಲಾಸಾಧನೆಯಲ್ಲಿ ನಿರತರಾಗಿದ್ದರು. ಅದೇಂದರೆ, ಹರಿದಾಸರ ಕೃತಿಗಳಿಗೆ ಸ್ವರಸಂಯೋಜನೆ ಮಾಡುವ ಕಷ್ಟದ ಕೆಲಸ. ಈ ಕಾಲದಲ್ಲಿಯೇ, ಶಾಸ್ತ್ರೀಯ ಗಾಯನ ಪದ್ಧತಿಗೆ ಅಳವಡುವ ಸ್ವತಂತ್ರ ಕನ್ನಡ ರಚನೆಗಳು ಇಲ್ಲವಲ್ಲಾ ಎಂದು ಕೊರಗುತ್ತಿದ್ದ ಅವರು ಕನ್ನಡ ಕೃತಿರಚನೆಗೂ ಕೈಹಾಕಿದರು. 1941-42 ರಲ್ಲಿ ಸುಮಾರು 40 ಸಂಗಿತಕೃತಿಗಳನ್ನು ರಚಿಸಿದರು. 1972ರಲ್ಲಿ ಮಾತ್ರ ತ್ಯಾಗರಾಜರ ಮೇಲಿನ ಒಂದೇ ಒಂದು ಕೃತಿಯನ್ನು ರಚಿಸಿರುವರು. ಸ್ವರಸಂಯೋಜನೆ ಮಾಡಿದ ಹರಿದಾಸರ ಕೃತಿಗಳ ಪ್ರಥಮ ಸಂಕಲನ 1942ರಲ್ಲಿ ಪ್ರಕಟವಾಯಿತು. ಈ ಅಮೋಘವಾದ ಕೆಲಸ ಸುಮಾರು 1935ರಿಂದ 1950ರವರೆಗೆ ಹಂತಹಂತವಾಗಿ ಸಾಗುತ್ತಲೇ ಇತ್ತು.

**ಸಾರ್ವಜನಿಕ ಸಂಗೀತ ಕಚೇರಿಗಳು**

ರಾಜಾರಾಯರು ಬಹಳ ಆತ್ಮಭಿಮಾನಿಗಳು. ಆಗಿನ ದಿನಗಳಲ್ಲಿ ಮೈಸೂರಿನ ಬಿಡಾರಂ ಕೃಷ್ಣಪ್ಪನವರ ಶ್ರೀ ರಾಮಮಂದಿರ, ಬೆಂಗಳೂರಿನ ಗಾಯನ ಸಮಾಜ

ಮಾಡಿ, ಸಂಗೀತ ಕಲಾಭಿಮಾನಿಗಳ ಗೌರವಾದರಗಳನ್ನು ಗಳಿಸಿದರು. ಎಲ್ಲವೂ ಪತ್ರಿಕೆಗಳ ಸುದ್ದಿ ಆಗಿ ಪ್ರಕಟವಾಗುತ್ತಿದ್ದವು. ಆದರೆ, ಅವರ ಕಲಾವ್ಯಕ್ತಿತ್ವ ಪೂರ್ಣ ನೈಜಸ್ವರೂಪದಲ್ಲಿ ಅಭಿವ್ಯಕ್ತವಾಗಿ ಕಲಾರಸಿಕರನ್ನು ತಣಿಸುತ್ತಿದ್ದುದು ಅವರು ಪ್ರತಿ ಶುಕ್ರವಾರವೂ ತಮ್ಮಮನೆಯಲ್ಲಿ ನಡಸುತ್ತಿದ್ದ ವೀಣಾವಾದನ–ಗಾಯನ ಕಚೇರಿಗಳಲ್ಲಿ ; ಹಾಗೂ ಅತ್ಯಂತ ಆಪ್ತರಾದ ಕಲಾಭಿಮಾನಿ ಮಿತ್ರರು ಆಹ್ವಾನಿಸಿ ಏರ್ಪಡಿಸುತ್ತಿದ್ದ ವಿಶೇಷ ಸಂದರ್ಭಗಳಲ್ಲಿ. ಮೈಸೂರು ಶ್ರೀಮನ್ ಮಹರಾಜರವರು–ನಾಲ್ಮಡಿ ಕೃಷ್ಣರಾಜ ಒಡೆಯರು ಮತ್ತು ಶ್ರೀ ಜಯಚಾಮರಾಜ ಒಡೆಯರು–ಬೆಂಗಳೂರಿಗೆ ದಯಮಾಡಿಸಿದ್ದಾಗ 'ವೀಣಾ ಸಹೋದರ'ರನ್ನು ಬರವಾಡಿಕೊಂಡು ವೀಣಾವಾದನವನ್ನು ಆಲಿಸಿ ಆನಂದಪಟ್ಟರು. ಈ ಮಹಾರಾಜರುಗಳ ಕೃಪಾಶ್ರಯ ರಾಜಾರಾಯರನ್ನು ಆಕರ್ಷಿಸಲಿಲ್ಲ. ರಾಜಾರಾಯರಿಗೆ ತಮ್ಮನಾದ ಗೋಪಾಲ, ಹಾಗೂ ಆತನ ವೀಣೆ ನುಡಿಕೆಯ ಸವಿಯಲ್ಲಿ ತುಂಬೊಲವು ; ಹೀಗಿರುತ್ತ, ಜೋಡಿ ವೀಣೆ ನುಡಿಕೆಯ 'ಏನಕೆ' (ಕೇಳಿಸುವುದು)ಯನ್ನು ಸಂಗೀತ ಪ್ರೇಮಿಗಳು ಮಾತ್ರವಲ್ಲದೆ ಸ್ವತಃ ಸಂಗೀತ ಶಾಸ್ತ್ರವನ್ನು ಬಲ್ಲವರಾಗಿದ್ದ ಪ್ರಭುಗಳಿಗೆ ತೋರಬೇಕೆಂಬುದೇ ರಾಜಾರಾಯರಿಗಿದ್ದ ಬಯಕೆ. ಅವರ ಬಯಕೆ ನೆರವೇರಿತು ; ಪ್ರಭುಗಳು ವೀಣಾವಾದನವನ್ನು ಮೆಚ್ಚಿಕೊಂಡು, ತಮ್ಮ ಮೆಚ್ಚಿಕೆಯನ್ನು ಎದೆತುಂಬಿ ಬಾಯಿತುಂಬ ತಿಳಿಸಿದರೆಂದೂ, ಸಂಗೀತಜ್ಞರಾದ ಪ್ರಭುಗಳ ಮೆಚ್ಚಿಗೆ ಅವರು ನೀಡಬಹುದಾಗಿದ್ದ ಬಿರುದು ಬಾವಲಿಗಳಿಗಿಂತ ಹೆಚ್ಚಿನ ನೆಲೆಯುಳ್ಳದ್ದೆಂದೂ ರಾಜಾರಾಯರು ಸ್ಮರಿಸಿಕೊಳ್ಳುತ್ತಿದ್ದರು. ಈ ಸಂದರ್ಭದಲ್ಲಿ, 'ಅಭಿನವ ಕಾಳಿದಾಸ' ಎಂದು ಹೆಸರಾಂತ ಬಸವಪ್ಪ ಶಾಸ್ತ್ರಿಗಳು ರಚಿಸಿರುವ ಒಂದು ಸೊಗಸಾದ ಪದ್ಯದಲ್ಲಿ "ಅರಸರು ಕೊಡುವ ಕಂಕಣಕ್ಕಿಂತ (ಎಂದರೆ, ಚಿನ್ನದ ಬಳೆ, ತೋಡ) ಸರಸರು (ಎಂದರೆ, ರಸಿಕರು) ಕೊಡುವ ಕಂಕಣವೇ (ಕಂಕಣವೇ, ಎಂದರೆ ನೀರಿನ ಹನಿಯೆ, ಅರ್ಥಾತ್ ಕಣ್ಣೀರು, ಆನಂದಬಾಷ್ಪ) ಕವಿಗೆ ಹೆಚ್ಚು ಇಷ್ಟವಾದದ್ದು" ಎಂಬ ಸೊಗಸಾದ, ಎಲ್ಲ ಕಾಲಕ್ಕೂ ಎಲ್ಲ ದೇಶಕ್ಕೂ ಅನ್ವಯಿಸುವ ಮಾತಿದೆ. ಪ್ರಭುದ್ವಯರು ವೈಣಿಕದ್ವಯರಿಗೆ ಚಿನ್ನದ ತೋಡ ಕೊಡದಿದ್ದರೂ ವೀಣಾವಾದನವನ್ನು ಕೇಳಿ ಅತ್ಯಾನಂದಪಟ್ಟದ್ದನ್ನು ಕಿರಿಯ ಕಲಾವಿದರಿಗೆ ಖುದ್ದಾಗಿ ತಿಳಿಸಿದ್ದಲ್ಲದೆ ಆಪ್ತ ಕಾರ್ಯದರ್ಶಿಗಳ ಮೂಲಕ ಮೆಚ್ಚುಗೆಯೋಲೆ ಬರೆಯಿಸಿ ಕಳಿಸಿದರು.

**ಶುಕ್ರವಾರದ ಭಜನೆ**

ವೀಣಾಪಾಣಿ ಕಲಾಭಿಮಾನಿ ದೇವತೆ ಶ್ರೀ ಶಾರದೆಗೆ ಮೊಸಲಾದ

ವಿಶೇಷ ಸಂದರ್ಭಗಳಲ್ಲಿ ವೀಣೆ ನುಡಿಸಬೇಕೆಂದು ಸಹೃದಯದ ಮಿತ್ರರು ಕೇಳಿಕೊಂಡರೆ ರಾಜಾರಾಯರು ಎಂದೂ ನಿರಾಕರಿಸುತ್ತಿರಲಿಲ್ಲ. ಇಂಥ ಸಂದರ್ಭಗಳು ಹಲವು. ಒಂದನ್ನು ಇಲ್ಲಿ ಎತ್ತಿ ಹೇಳಲೇಬೇಕು ಸುಪ್ರಸಿದ್ಧ ವಿದ್ವಾಂಸರೂ, ಕೆಲವು ಕಾಲ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯೂ ಆಗಿದ್ದ ಕ. ವೆಂ. ರಾಘವಾಚಾರ್ಯರು ತಮ್ಮ ಗ್ರೀಕ್ ಭಾಷಾ ಗುರುಗಳ ಗೌರವಾರ್ಥ ಒಂದು ಸತ್ಕಾರಕೂಟ ಏರ್ಪಡಿಸಿದ್ದರು. ಮುಖ್ಯ ಅತಿಥಿಗಳಾದ ಮೌಲ್ಟನ್ ದಂಪತಿಗಳೊಡನೆ ಸುಮಾರು 30-40 ಜನ ಸಾಹಿತ್ಯ ಸಂಗೀತ ರಸಿಕ ಅತಿಥಿಗಳಿಗೆ ಏರ್ಪಡಿಸಿದ್ದ ಔತಣ ಎಂದೂ ನೆನಯತಕ್ಕದ್ದು ; ಬಾಯ ಸವಿಯನ್ನು ತಣಿಸಿದ ಆ ಕೂಟಕ್ಕೆ ಕಿವಿಸವಿಯನ್ನು ಹೊಯ್‌ಕಯ್ಯಾಗಿ ಒದಗಿಸಿದ್ದು ರಾಜಾರಾಯರ ವೀಣೆ ನುಡಿಕೆ. ಇದನ್ನು ಕೇಳಿ ಆನಂದಿಸಿದ ರೆ! ಎಚ್.ಕೆ. ಮೌಲ್ಟನ್ (H. K. Moulten) ಅವರು (ಬೆಂಗಳೂರು ಸೆಯಂಟ್ ಜೋಸೆಫ್ಸ್ ಕಾಲೇಜಿನಲ್ಲಿ ಗ್ರೀಕ್ ಪ್ರಾಧ್ಯಾಪಕರು) ರಾಘವಾಚಾರ್ ಅವರಿಗೆ ಬರೆದ ಪತ್ರದಲ್ಲಿ.

> "We thoroughly enjoyed the music
> which was a real treat to listen to.
> So often people simply use music
> as background to conversation."

> "ನಾವು ಸಂಗೀತವನ್ನು ಕೇಳಿ ತುಂಬ ಆನಂದ ಪಟ್ಟೆವು.
> ಕೇಳುವುದಕ್ಕೆ ನಿಜವಾಗಿ ಆಪ್ಯಾಯಮಾನವಾಗಿತ್ತು.
> ಎಷ್ಟೋ ವೇಳೆ ಮಾತು ಕತೆಗೆ ಹಿನ್ನೆಲೆಯಾಗಿ ಬಳಸಿ
> ಜನ ಸಂಗೀತವನ್ನು ವ್ಯರ್ಥ ಮಾಡುತ್ತಾರೆ."

–ಎಂದು ಬರೆದಿದ್ದರು.

ರಾಜಾರಾಯರ ವೀಣಾವಾದನವಾಗಲಿ, ಗಾಯನವಾಗಲಿ, ಜನಸ್ತೋಮವನ್ನು ಮೆಚ್ಚಿಸುವ 'ಜನರಂಜನೀ' ಸಂಗೀತ ಆಗಿರಲಿಲ್ಲ; ಸಂಗೀತಜ್ಞರಾದ ಆಪ್ತಜನಕ್ಕೆ ಮೀಸಲಾಗಿದ್ದ ರಸದೌತಣ. ಆದ ಕಾರಣ, ಶ್ರೇಷ್ಠ ಸಂಗೀತಗಾರನಿಗೆ ದೊರಕಬೇಕಾದ ಮಾನಸನ್ಮಾನಗಳು ಅವರಿಗೆ ಸ್ವಲ್ಪ ತಡವಾಗಿ ಬಂದುವು. ಅವುಗಳ ಬೆನ್ನಟ್ಟಿ ಹೋಗುವ ಕೀರ್ತಿಕಾಮಿಗಳಾಗಿರಲಿಲ್ಲ ಅವರು; ಅವೇ ಇವರನ್ನು ಅರಸಿಕೊಂಡುಬಂದುವು.

ಶುಕ್ರವಾರದಂದು ಶ್ರೀ ರಾಜಾರಾಯರು ತಮ್ಮ ಮನೆಯಲ್ಲೇ ಭಜನೆಯ ರೂಪದಲ್ಲಿ ವೀಣಾವಾದನ–ಗಾಯನ ಸೇವೆಯನ್ನು ನಡಸುತ್ತಿದ್ದರು. ಅವರು ಯಾರಿಗೂ ಆಹ್ವಾನವನ್ನು ಕಳಿಸದಿದ್ದರೂ ಮಿತಸಂಖ್ಯೆಯಲ್ಲಿ–ಹತ್ತಿಪ್ಪತ್ತು ಜನ–ಸಾಹಿತ್ಯ ಸಂಗೀತ ಕಲಾಭಿಮಾನಿಗಳೂ ರಸಿಕರೂ ಸಂಗೀತ ರಸಿಕರೂ ಅವರ ಮನೆಯ ಹಜಾರದ ತುಂಬ ನೆರೆಯುತ್ತಿದ್ದರು. ಹೂವಿನ ನರುಗಂಪು ದುಂಬಿಗಳ ಬಳಗವನ್ನು ಮಕರಂದ ರಸಾಸ್ವಾದನಕ್ಕೆ ಸೆಳೆಯುವಂತೆ ರಾಜಾರಾಯರ ಗಾಯನ – ವಾದನ ಗುಣವಿಶೇಷ ರಸಿಕ ಮಿತ್ರವೃಂದವನ್ನು ಬರಮಾಡಿಕೊಳ್ಳುತ್ತಿತ್ತು. ಗೋಪಾಲ ಮೈಸೂರಿನಿಂದ ಬಂದ ವೇಳೆ ಅಣ್ಣನ ಜೊತೆ ವೀಣೆ ನುಡಿಸುತ್ತಿದ್ದನು. ಸಾಧಾರಣವಾಗಿ ಶಿಷ್ಯರಾದ ರತ್ನಗಿರಿ ಸುಬ್ಬಶಾಸ್ತ್ರಿಗಳೋ ಇಲ್ಲವೆ ಟಿ. ಎನ್. ರಾಮಚಂದ್ರರಾವ್ ಅವರೋ ಪಿಟೀಲು ನುಡಿಸುತ್ತಿದ್ದರು. ಈ ಲೇಖಕ, ಇಲ್ಲವೆ ಶ್ರೀ ಲಕ್ಷ್ಮಣಪ್ಪ ಮೃದಂಗ ನುಡಿಸುತ್ತಿದ್ದರು ಈ ಸಹೃದಯ ಗೋಷ್ಠಿಗೆ ಬರುತ್ತಿದ್ದವರಲ್ಲಿ ಮುಖ್ಯರೆಂದರೆ, ಶ್ರೀಯುತರಾದ ಸಿ. ಕೆ. ವೆಂಕಟರಾಮಯ್ಯ, ವೀಣೆ ಶೇಷಣ್ಣನವರ ವಂಶಜರಾದ ಎ.ಎಸ್. ಚಂದ್ರಶೇಖರಯ್ಯ, ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು, ಅ.ನ.ಕೃ., ಸಂಗೀತ ವಿದ್ವಾನ್ ಸುಬ್ಬರಾಮಯ್ಯ, ಶೇಷಾದ್ರಿ ಗವಾಯಿ, ಸಿ. ಕೆ. ನಾಗರಾಜರಾವ್, ಸ. ವೆಂಕಟಾಚಲಪತಿ, ಗಮಕಿ ಚಂದ್ರಶೇಖರಯ್ಯ, ಗಮಕಿರಾಘವೇಂದ್ರರಾವ್, ಗಮಕಿ ಸಂಪತ್ಕುಮಾರಾಚಾರ್ ಮುಂತಾದವರು. ಒಮ್ಮೆ ಧಾರವಾಡದ ಪಂಚಾಕ್ಷರಿ ಗವಾಯಿಗಳು (ಇವರು ಕರ್ನಾಟಕ ಹಿಂದೂಸ್ಥಾನಿ ಶೈಲಿಗಳೆರಡರಲ್ಲಿಯೂ ಪರಿಣತರು; ಕಣ್ಣುರುಡರು) ಒಂದು ಶುಕ್ರವಾರ ದಯಮಾಡಿಸಿದ್ದವರು, ರಾಜಾರಾಯರ ಗಾಯನ–ವಾದನಗಳನ್ನು ಕೇಳಿ ನಿಜವಾಗಿಯೂ ಆನಂದಭಾಷ್ಪ ಸುರಿಸಿದರು.

ಈ ಗೃಹಗೋಷ್ಠಿಗಳಲ್ಲಿ ರಾಜಾರಾಯರು ತಮ್ಮ ಮನೋಧರ್ಮವನ್ನು ಪೂರ್ತಿಯಾಗಿ ಅನುಸರಿಸಿ, ಎದೆತುಂಬಿ ಮನಬಿಚ್ಚಿ ಹಾಡುತ್ತಿದ್ದರು. ಅವರ ಗಾಯನ–ವಾದನಗಳನ್ನು ಅಂಥ ರಸಮಯ ಸನ್ನಿವೇಶದಲ್ಲಿ ಕೇಳಿ ಸುಖಿಸಿದವರು ಭಾಗ್ಯವಂತರು. ಡಿ.ವಿ.ಜಿ. ಅವರು ರಾಜಾರಾಯರ ಅಭಿಮಾನಿಗಳು; ಅವರನ್ನು ಕರೆಸಿಕೊಂಡು ಆಗಾಗ್ಗೆ ಸಂಗೀತರಾಗಗಳ ವಿಷಯವಾಗಿ, ಶಾಸ್ತ್ರ ವಿಚಾರವಾಗಿ, ವಿಚಾರ ವಿನಿಮಯ ಮಾಡುತ್ತಿದ್ದರು. ಬಿ. ಎಂ. ಶ್ರೀ. ಯವರೂ ರಾಜಾರಾಯರ ಅಭಿಮಾನಿಗಳು. ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಮೊತ್ತ ಮೊದಲಿಗೆ ಹರಿದಾಸರ ಕೃತಿಗಳ ಸಂಕಲನ ಪ್ರಕಟವಾಗಲು ಬಿ. ಎಂ. ಶ್ರೀ. ಯವರ ಅಭಿಮಾನವೇ ಕಾರಣ.

ಅಧ್ಯಕ್ಷ ಭಾಷಣದಲ್ಲಿ, ಸಂಗೀತ ಕಲೆ ಮತ್ತು ಸಂಗೀತ ಶಾಸ್ತ್ರದ ಬಗೆಗೆ ಅವರು ಪಡೆದಿರುವ ಪರಿಪಕ್ವವಾದ ಜ್ಞಾನಾನುಭವಗಳ ಪರಿಚಯ ನಮಗೆ ಆಗುತ್ತದೆ. ಅವರ ಭಾಷಣದ ಸಾರಾಂಶವನ್ನು ಅವರ ಮಾತುಗಳಲ್ಲಿಯೇ ಹೀಗೆ ಸಂಗ್ರಹಿಸಬಹುದು.

**1) ಸಂಗೀತ ಹೃದಯದ ಭಾಷೆ**

"ಲಲಿತ ಕಲೆಗಳಲ್ಲಿ ಸಂಗೀತ ಶ್ರೇಷ್ಠವಾದ ಸಾರ್ವತ್ರಿಕವಾದ ಕಲೆ. ಸಾಹಿತ್ಯಕ್ಕಿಂತ ಸಂಗೀತ ಸುಲಭಗ್ರಾಹ್ಯ. ಸಾಹಿತ್ಯವನ್ನು ಸವಿಯುವುದಕ್ಕೆ ಅದು ರಚಿತವಾಗಿರುವ ಭಾಷೆಯ ಪರಿಚಯ ಬೇಕು. ಆದ್ದರಿಂದಲೇ ಸಂಗೀತವನ್ನು ಹೃದಯದ ಭಾಷೆ ಎಂದು ಕರೆಯುತ್ತೇವೆ."

**2) ಸಂಗೀತದ ಗುರಿ ಮೋಕ್ಷ**

"ಧರ್ಮ ಮತ್ತು ಸಂಗೀತಗಳು ಎಲ್ಲೆಡೆ ಒಟ್ಟಿಗೆ ಬೆಳೆದಿವೆ, ಪರಸ್ಪರ ಪ್ರೇರಕಗಳಾಗಿವೆ. ಧರ್ಮ ಪ್ರಚಾರಕ್ಕೆ ಸಾಹಿತ್ಯ ಶಿಲ್ಪಗಳಂತೆ ಸಂಗೀತವೂ ಮಾಧ್ಯಮವಾಗಿದೆ; ತುಂಬಾ ಆಕರ್ಷಕವಾದ ಮಾಧ್ಯಮವಾಗಿದೆ. ಭಾರತೀಯ ಸಂಗೀತದ ಪೂರಾ ನಮಗೆ ಕಂಡುಬರುವುದು ಧಾರ್ಮಿಕ ಹಿನ್ನೆಲೆ, ಧಾರ್ಮಿಕ ಪ್ರಭಾವ, ಧಾರ್ಮಿಕ ವಿಷಯ, ವ್ಯಕ್ತಿಗಳೇ. ಇದರಿಂದ ಅನಿವಾರ್ಯವಾಗಿ ಎಲ್ಲ ಶಾಸ್ತ್ರಗಳ ಗುರಿಯಂತೆ ಸಂಗೀತದ ಗುರಿಯೂ ಮೋಕ್ಷವೇ ಎಂದಾಯಿತು."

**3) ಕರ್ನಾಟಕ ಸಂಗೀತ ಪಿತಾಮಹ**

"ದಾಸಪಂಥಕ್ಕೆ ಸೇರಿದ ಪುರಂದರದಾಸರಿಂದಲೇ ಸಂಗೀತಕ್ಕೆ ಭದ್ರವಾದ ಬುನಾದಿ ನಿರ್ಮಿತವಾಯಿತು. ಇದು ನಿರ್ವಿವಾದವಾದ ವಿಷಯ".

**4) ಸಂಗೀತಕ್ಕೆ ರಾಜಾಶ್ರಯ**

"ಹಿಂದಿನವರು ಸಂಗೀತವನ್ನು ಭಗವತ್ಸಾಕ್ಷಾತ್ಕಾರಕ್ಕಾಗಿ ಬಳಸಿಕೊಂಡರೇ ವಿನಾ ದುಃಖ ಶಮನಕ್ಕಾಗಲಿ ಮನೋಲ್ಲಾಸಕ್ಕಾಗಲಿ ಅಲ್ಲ. ಕಾಲಕ್ರಮೇಣ ಅನೇಕ ಸಂಗೀತ ವಿದ್ವಾಂಸರು ರಾಜಾಶ್ರಯ ಪಡೆದು ಸಂಗೀತವನ್ನು ಭಗವದಾರಾಧನೆಗೊಂದೇ ಅಲ್ಲದೆ ರಾಜಸಂಪ್ರೀತಿಗೂ ಬಳಸಿದರು....ಕರ್ನಾಟಕ ಸಂಗೀತದಲ್ಲಿ 'ಕಚೇರಿ' ಸಂಪ್ರದಾಯ ಇಲ್ಲಿಂದ ಆರಂಭವಾಯಿತೆಂದು ಊಹಿಸಬಹುದು. ಕರ್ನಾಟಕ ಸಂಗೀತ ಚರಿತ್ರೆಯಲ್ಲಿ ರಾಜಾಶ್ರಯ ಒಂದು

**ಮಾನಸನ್ಮಾನ**

ವಿದ್ಯಾರ್ಥಿ ದೆಸೆಯಲ್ಲಿಯೇ ಭಾರತವಾಚನಕ್ಕಾಗಿ ರಾಜಾರಾಯರಿಗೆ ಸೆಂಟ್ರಲ್ ಕಾಲೇಜಿನ ಸಂಘ ಚಿನ್ನದ ಪದಕ ನೀಡಿದ್ದನ್ನು ಈ ಹಿಂದೆಯೇ ಹೇಳಿದೆ. 1946ರ ಅಕ್ಟೋಬರ್ 5 ರಂದು ಬೆಂಗಳೂರಿನಲ್ಲಿ ಸಂಗೀತ ಕಲಾಭಿಮಾನಿಗಳಾದ ಮಹಾಜನರು ರಾಜಾರಾಯರ ಗೌರವಾರ್ಥ ಸನ್ಮಾನ ಸಭೆಯನ್ನು ಏರ್ಪಡಿಸಿ "ಗಾನಕಲಾಭೂಷಣ" ಎಂಬ ಬಿರುದನ್ನು ನೀಡಿದರು. 1956ರ ಜನವರಿ 1ರಂದು ಕೋಲಾರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕು ಗೂಳೂರು ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಜಗದ್ಗುರು ಶ್ರೀ ಚೆನ್ನಬಸವ ರಾಜ ದೇಶಿಕೇಂದ್ರ ಮಹಾಸ್ವಾಮಿಗಳವರು "ರಾಗರಸಭಾಗ್ಯ" ಎಂಬ ಬಿರುದನ್ನು ನೀಡಿ ಗೌರವಿಸಿದರು. 28-12-1970 ರಂದು ಮೈಸೂರಿನ ಪ್ರಖ್ಯಾತ ಸಂಗೀತಗಾರರಾದ ಆಸ್ಥಾನ ವಿದ್ವಾನ್ ಶ್ರೀ ಬಿ. ದೇವೇಂದ್ರಪ್ಪನವರು ತಮ್ಮ ನಿವಾಸದಲ್ಲಿ ತಪ್ಪದೆ ನಡಸುತ್ತಿದ್ದ ಸಾಂವತ್ಸರಿಕ ಹುಮಜ್ಜಯಂತ್ಯುತ್ಸವದಲ್ಲಿ ಶ್ರೀಯುತರನ್ನು ಬರಮಾಡಿಕೊಂಡು ಅವರಿಗೆ "ಗಾನ–ವಾದನ–ಪ್ರವೀಣ" ಎಂಬ ಬಿರುದನ್ನಿತ್ತು ಗೌರವಿಸಿದರು. ಇವೆಲ್ಲಕ್ಕೂ ಮಿಗಿಲಾಗಿ ಅವರಿಗೆ ಸಂದಗೌರವ ಎಂದರೆ 1974ನೆಯ ಇಸವಿಯಲ್ಲಿ ಕರ್ನಾಟಕ ಗಾನಕಲಾ ಪರಿಷತ್ತಿನ ನಾಲ್ಕನೆಯ ಸಮ್ಮೇಳನದ ಮತ್ತು ಸಂಗೀತೋತ್ಸವದ ಅಧ್ಯಕ್ಷರಾಗಿ ಆಯ್ಕೆ ಆದದ್ದು. ಸಮ್ಮೇಳನದ ಆರಂಭದ ಅಧಿವೇಶನದಲ್ಲಿ ಅವರು ಮಾಡಿದ



ಶ್ರೀಮತಿ ಚಂದ್ರಾ ಗೋವಿಂದನಾರಾಯಣ್‌ರವರಿಂದ ಸನ್ಮಾನ ಪ್ರಶಸ್ತಿ ಸ್ವೀಕರಿಸುತ್ತಿದ್ದಾರೆ

## 8) ಇಂದಿನ ವಿದ್ಯಾಭ್ಯಾಸದಲ್ಲಿ ಸಂಗೀತ

"ಹಿಂದೆ ಗುರುಕುಲ ಶಿಕ್ಷಣ ಪದ್ಧತಿಯಲ್ಲಿ ಸಂಗೀತ ವಿದ್ಯೆಯನ್ನು ಕಲಿಸಲಾಗುತ್ತಿತ್ತು. ಆದರೆ ಈಗ ಅದು ಸಾಧ್ಯವಿಲ್ಲದ ಮಾತು. ಸಂಗೀತಶಿಕ್ಷಣದಲ್ಲಿ ಮುಖ್ಯವಾದ ಅಂಶವೆಂದರೆ ಗುರುಶಿಷ್ಯ ಬಾಂಧವ್ಯ. ಇದಕ್ಕೆ ಶಿಷ್ಯವರ್ಗದ ಸಂಖ್ಯೆ ಎಷ್ಟು ಕಡಿಮೆ ಇದ್ದರೆ ಅಷ್ಟೂ ಒಳ್ಳೆಯದು.... ಇತರ ಪಠ್ಯ ವಿಷಯಗಳಂತೆ, ಪ್ರಾಯೋಗಿಕ ಪ್ರಾಶಸ್ತ್ಯವುಳ್ಳ ಸಂಗೀತವನ್ನು ಶೇಕಡ 35ರ ಮೌಲ್ಯವರ್ಗಕ್ಕೆ ಸೇರಿಸುವುದು ಸರಿಯಲ್ಲ. ರಾಗ, ತಾಳ, ಮನೋಧರ್ಮ ವಿಭಾಗ, ಶಾರೀರ ಸಂಪತ್ತಿ ಮುಂತಾದ ಎಲ್ಲ ಅಂಗಗಳಲ್ಲೂ ಶುದ್ಧಿ ಮತ್ತು ಪರಿಪೂರ್ಣತೆ ಇದ್ದು ಶೇಕಡ 100ರಷ್ಟು ಮೌಲ್ಯವನ್ನು ಪಡೆದ ಹೊರತೂ ಯಾವನೂ ನಿಜವಾದ ಸಂಗೀತಗಾರನೆನಿಸಿಕೊಳ್ಳಲು ಸಾಧ್ಯವಿಲ್ಲ."

ಮೇಲೆ ಉದ್ಧರಿಸಿರುವ ಅಭಿಪ್ರಾಯಗುಚ್ಛದಿಂದ ರಾಜಾ ರಾಯರು ಸಂಗೀತದ ವಿಷಯದಲ್ಲಿ ಎಂಥ ಚಿಂತನಪರರೂ ಜ್ಞಾನಾನುಭವಗಳನ್ನು ಪಡೆದವರೂ ಆಗಿದ್ದರು ಎನ್ನುವುದು ಸ್ಪಷ್ಟಪಡುತ್ತದೆ.

**ವಾಗ್ಗೇಯಕಾರ**

'ವಾಕ್' ಎಂದರೆ ಮಾತು; ಸಾಹಿತ್ಯ. 'ಗೇಯ' ಎಂದರೆ ಹಾಡಿಕೆ; 'ದಕ್ಷಿಣಾದಿ' ಅಥವಾ ಉತ್ತರ ಭಾರತದಲ್ಲಿ ಪ್ರಚುರವಾಗಿರುವ 'ಉತ್ತರಾದಿ' ಅಥವಾ 'ಹಿಂದೂಸ್ಥಾನಿ' ಸಂಗೀತದಲ್ಲಿ ರಾಗ ವಿನ್ಯಾಸಕ್ಕೆ ಪ್ರಾಧಾನ್ಯ. ಕರ್ನಾಟಕ ಸಂಗೀತ ಪರಂಪರೆಯಲ್ಲಿ 'ಮಾತು' ಅಥವಾ 'ಸಾಹಿತ್ಯ'ಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಕರ್ಣಾಟಕ ಸಂಗೀತ ಧರ್ಮದ ಚೌಕಟ್ಟಿನಲ್ಲಿ, ಭಕ್ತಿಪಂಥದ ಪರಿಸರದಲ್ಲಿ ಬೆಳೆಯಿತು. ಈ ಬೆಳವಣಿಗೆಗೆ ಶಿವಶರಣರೂ ಹರಿದಾಸರೂ ಮುಖ್ಯ ಕಾರಣರು. ಈ ಪ್ರಭಾವ ಆಂಧ್ರಸೀಮೆ, ತಮಿಳುನಾಡುಗಳಲ್ಲಿಯೂ ಹರಡಿತು. ಸಂಗೀತ ಜ್ಞಾನವುಳ್ಳ ಭಕ್ತವರೇಣ್ಯರೂ ತತ್ವಜ್ಞಾನಿಗಳೂ ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಅಮೋಘವಾದ ಸಂಗೀತ ಕೃತಿಗಳನ್ನು ರಚಿಸಿದರು. ಇವರಲ್ಲಿ ಅನ್ನಮಾಚಾರ್ಯರು, ಭದ್ರಾಚಲ ರಾಮದಾಸರು, ಸದಾಶಿವ ಬಹ್ಮೇಂದ್ರರು, ತ್ಯಾಗರಾಜರು, ಶ್ಯಾಮ ಶಾಸ್ತ್ರಿಗಳು, ಮುತ್ತುಸ್ವಾಮಿ ದೀಕ್ಷಿತರು ಇವರು ಪ್ರಮುಖರು. ಹರಿದಾಸರ, ಶಿವಶರಣರ ಕೃತಿಗಳು ಕನ್ನಡದಲ್ಲಿದ್ದರೂ 'ಮಾತು' ಹೆಚ್ಚಾಗಿ ರಾಗಭಾವ ವಿನ್ಯಾಸಕ್ಕೆ ಅವಕಾಶ ಕಡಿಮೆ. ಮೈಸೂರು ಸದಾಶಿವರಾಯರು,ಕೆ. ವಾಸುದೇವಾಚಾರ್ಯರು ಕನ್ನಡಿಗರೆ ಆದರೂ ತೆಲುಗಿನಲ್ಲಿ ಕೃತಿರಚನೆ ಮಾಡಿದರು. ಕನ್ನಡದಲ್ಲಿ ಸಂಗೀತಕೃತಿರಾಶಿ ಬಹಳ ಕಡಮೆ ಎಂಬ ಕೊರಗು ರಾಜಾರಾಯರನ್ನು ಕಾಡುತ್ತಿತ್ತು. ಈ ಕೊರತೆಯನ್ನು

ಪ್ರಮುಖ ಘಟ್ಟವೆನ್ನಬಹುದು. ಕಲೆಯ ಬೆಳವಣಿಗೆಗೆ ರಾಜಾಶ್ರಯವೂ ಒಂದು ಕಾರಣ."

**5) ಸಂಗೀತ ವಿಶ್ವಭಾಷೆ**

"ವಿಶ್ವದ ಯಾವ ಜನಾಂಗದ ಸಂಗೀತವನ್ನು ಪರಿಶೀಲಿಸಿದರೂ ಭಾವ ಪ್ರದರ್ಶನಕ್ಕೆ ಪ್ರಯೋಗವಾಗಿರುವುದು ಸಪ್ತಸ್ವರಗಳೇ. ಹೃದಯದ ಭಾಷೆಯಾದ ಸಂಗೀತ ಎಲ್ಲ ಕಡೆಗಳಲ್ಲೂ ಭಾವ ಸಂವಹನಕ್ಕೆ ಬಳಸಲ್ಪಟ್ಟಿದೆ ಎಂದಮೇಲೆ ಸಂಗೀತವು ವಿಶ್ವಭಾಷೆಯೇ ಸರಿ. .......ವಸ್ತುಸ್ಥಿತಿ ಹೀಗಿದ್ದ ಮೇಲೆ ವಾಗ್ಗೇಯ ಕಾರರು ತಮ್ಮ ತಮ್ಮ ಭಾಷೆಗಳಲ್ಲೆ. ಕೃತಿ ರಚನೆ ಮಾಡಿದರೂ ವಿಶ್ವಭಾಷೆಯಾದ ಸಂಗೀತವೇ ಮೂಲವಾಹಕವಾಗಿದೆ."

**6) ಸಂಗೀತ–ಸಮಾಜ**

"ಸಂಗೀತದ ಆಕರ್ಷಣ ಶಕ್ತಿ ಮನೋರಂಜನ ಗುಣಗಳು ಸಂಗೀತದಿಂದ ಸಮಾಜದೊಡನೆ ಸುಸಂಪರ್ಕ ಸಾಧಿಸಲು ವಾಗ್ಗೇಯಕಾರರಿಗೆ ಅನುವಾದುವು. ಸಂಗೀತದ ಮೂಲಕ ಸಮಾಜದ ವ್ಯವಸ್ಥೆಯನ್ನು ಚಿತ್ರಿಸಿರುವವರು, ಅದರ ಲೋಪದೋಷಗಳನ್ನು ಎತ್ತಿ ತೋರಿಸಿರುವವರು ಕೆಲವೇ ವಾಗ್ಗೇಯಕಾರರು ಮಾತ್ರ. ಇದರಲ್ಲಿ ಹೆಸರಿಸಬಹುದಾದವರು ಹರಿದಾಸರು ಮತ್ತು ತ್ಯಾಗರಾಜರು."

**7) ಪಾಂಡಿತ್ಯ ಪ್ರದರ್ಶನ**

"ಜನತೆಯೊಡನೆ ಸಂಪರ್ಕ ಸಾಧಿಸಲು ಸಂಗೀತ ಅತ್ಯಂತ ಸುಲಭವಾದ, ಆಕರ್ಷಕವಾದ ಮಾಧ್ಯಮ. ಆದರೆ, ಕಸರತ್ತು ಪಾಂಡಿತ್ಯ ಪ್ರದರ್ಶನಗಳು ಹೆಚ್ಚಿದಂತೆ ಸಂಪರ್ಕ ದೂರವಾಗುವ ಅಪಾಯ ತಲೆದೋರಿ, ಶಾಸ್ತ್ರೀಯ ಸಂಗೀತಕ್ಕೆ ಪ್ರೋತ್ಸಾಹ ಕಡಮೆಯಾಗಬಹುದೆಂಬ ಭಯ ನನಗೆ ಬರುತ್ತಿದೆ. ಇಂದಿನ ಜನತೆ ಶಾಸ್ತ್ರೀಯ ಸಂಗೀತದಲ್ಲಿ ಉತ್ಸಾಹ ಕಳೆದುಕೊಂಡು 'Pop' ಸಂಗೀತ, 'Jazz' ಸಂಗೀತ, ಸಿನಿಮಾ ಸಂಗೀತಗಳಲ್ಲಿ ಹೆಚ್ಚು ಒಲವು ಹೊಂದುತ್ತಿರುವುದಕ್ಕೆ ಇದೂ ಒಂದು ಕಾರಣವೇನೋ. ಬರಿಯ ಸಂಗೀತ ವಿದ್ವಾಂಸರೇ ಸೇರಿರುವ ಗೋಷ್ಠಿಯಲ್ಲಿ ಹೆಚ್ಚಿನ ಪಾಂಡಿತ್ಯ ಪ್ರದರ್ಶನಕ್ಕೆ ಅಡ್ಡಿಯೇನೂ ಇಲ್ಲ."



ಅನೇಕ ಕೃತಿಗಳನ್ನು ರಚಿಸಿದರು

ಎಲ್ಲ ಕೃತಿಗಳೂ ಒಂದಲ್ಲ ಒಂದು ರೀತಿಯಲ್ಲಿ ಆತ್ಮನಿರೀಕ್ಷೆಯ ಪರಿಣಾಮವಾಗಿ ಭಗವಂತನಲ್ಲಿ ಸಲ್ಲಿಸಿದ ಪ್ರಾರ್ಥನಾ ಕುಸುಮಗಳು.

**ಕೃತಿ ರಚನೆ**

ಕನ್ನಡ ಸಾಹಿತ್ಯದಲ್ಲಿ ಶಾಸ್ತ್ರ ಸಾಹಿತ್ಯ ಎಂಬ ದೊಡ್ಡ ವಿಭಾಗ ಒಂದು ಉಂಟು. ಇದರಲ್ಲಿ ಕಾವ್ಯಶಾಸ್ತ್ರ, ಸಂಗೀತಶಾಸ್ತ್ರ, ಜ್ಯೋತಿಷ್ಯಾದಿ ಇತರ ಅನೇಕ ಶಾಸ್ತ್ರಗಳ ವಿಷಯವಾಗಿ ಬಹಳ ಪ್ರಾಚೀನ ಕಾಲದಿಂದಲೂ ಗ್ರಂಥಗಳು ರಚಿತವಾಗುತ್ತ ಬಂದಿವೆ. ಸಂಗೀತಶಾಸ್ತ್ರ ಗ್ರಂಥಗಳನ್ನು ರಚಿಸಿರುವವರೆಲ್ಲರೂ ಕನ್ನಡಿಗರಲ್ಲದಿದ್ದರೂ ಅನೇಕರು ಕನ್ನಡಿಗರು ; ಅದರೆ, ಅವರೆಲ್ಲರ ಗ್ರಂಥಗಳು ಸಂಸ್ಕೃತದಲ್ಲಿವೆ. ಅವುಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿದರೂ ಕೂಡ,

ಹೋಗಲಾಡಿಸುವ ಸಲುವಾಗಿ ೧೯೪೧–೪೨ರ ಸುಮಾರಿನಲ್ಲಿ ಕೃತಿರಚನೆಯ ಕೆಲಸವನ್ನು ಕೈಗೊಂಡರು. ಕೇವಲ ಎರಡು ವರ್ಷಗಳ ಅವಧಿಯಲ್ಲಿ ಸ್ವರಪ್ರಸ್ತಾರ ಸಹಿತ ಸುಮಾರು ೫೦ ಕೃತಿಗಳನ್ನು ರಚಿಸಿದರು ; ಈ ಎಲ್ಲ ಕೀರ್ತನೆಗಳ ಮುದ್ರಿಕೆ 'ಪುರುಷೋತ್ತಮ'. ಬಹಳ ವರ್ಷಗಳಾದ ಮೇಲೆ ೧೯೭೨–೭೩ರಲ್ಲಿ ಎರಡು ಕೃತಿಗಳನ್ನು ರಚಿಸಿದರು. ಆದರೆ ಈಗ ನಮಗೆ ಅವರ ಸ್ವಹಸ್ತಾಕ್ಷರದಲ್ಲಿ ಉಳಿದುಬಂದಿರುವವು ಸುಮಾರು ೪ ಮಾತ್ರ. ಇವು ಯಾವುವೂ ಇನ್ನೂ ಬೆಳಕು ಕಂಡಿಲ್ಲ. ಇವುಗಳ ಪೈಕಿ ಸ್ವರಜತಿಗಳು ೪, ವರ್ಣಗಳು ೫, ೩೧ ಕೀರ್ತನೆಗಳು ಕನ್ನಡದಲ್ಲಿವೆ. ಇದರಿಂದ, ರಾಜಾರಾಯರ ಕನ್ನಡ ಭಾಷಾಪ್ರೇಮ ವ್ಯಕ್ತಪಡುತ್ತದೆ. ಬಿಡಾರಂ ಕೃಷ್ಣಪ್ಪನವರು ಕೆಲವು ಕನ್ನಡ ಕೀರ್ತನೆಗಳನ್ನು ರಚಿಸಿರುವುದು ಉಂಟು. ರಾಜಾರಾಯರ ಗುರುಗಳೇ ಆದ ವಾಸುದೇವಾಚಾರ್ಯರು ಒಂದೋ ಎರಡೋ ಕೀರ್ತನೆಗಳನ್ನು ಕನ್ನಡದಲ್ಲಿ ರಚಿಸಿದ್ದಾರೆ. ನಾವು ಬಲ್ಲಮಟ್ಟಿಗೆ ಇಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಶಾಸ್ತ್ರೀಯ ಚೌಕಟ್ಟಿನಲ್ಲಿ ಕೃತಿರಚನೆ ಮಾಡಿರುವ ಆಧುನಿಕ ವಾಗ್ಗೇಯಕಾರರು ಯಾರೂ ಇಲ್ಲವೆಂದರೆ ತಪ್ಪೆನಿಸದು.

ರಾಜಾರಾಯರ ಕೀರ್ತನೆಗಳೆಲ್ಲ ಪ್ರಾಯಿಕವಾಗಿ ಭಗವತ್ ಭಕ್ತನೊಬ್ಬನು ದೈವದೊಡನೆ ನಡೆಸಿದ ಆತ್ಮೀಯ ಸಂವಾದ. 'ದಯಬಾರದೆ ದಾಶರಥೆ' ಎಂಬ ಕೀರ್ತನೆಯಲ್ಲಿ–"ಬಯಲಾದ ಜೀವವೆನ್ನದು ಭಯಬಿಡಿಸಿ ನೀನುದ್ಧರಿಸಯ್ಯ, ಒಡಲಿಗಾಗಿ ತಿರುತಿರುಗಿ ಒಡೆಯ ನಿನ್ನ ಸ್ಮರಣೆ ಮರೆತೆ" ಎಂದು ಭಗವಂತನಲ್ಲಿ ಮೊರೆಯಿಟ್ಟಿದ್ದಾರೆ. ಇನ್ನೊಮ್ಮೆ, "ಅರೆ ನಿಮಿಷ ನಿನ್ನ ಧ್ಯಾನ ಮಾಡಲಿಲ್ಲ. ಪರಸೇವೆಯಲ್ಲಿ ಜನ್ಮ ಕಳೆದನಲ್ಲ" ಎಂದು ಕೊರಗಿದ್ದಾರೆ. "ಪರಮ ದುಷ್ಟನಾಗಿ ಮೆರೆದು ಅರಿಯದುಳಿದೆ ನಿನ್ನ ಮಹಿಮೆ" ಎನ್ನುವೀ ಉಕ್ತಿಯಿಂದ, ಅವರು ಎಂದು ದುಷ್ಟರಾಗಿದ್ದರು ಎಂಬ ಸಂದೇಹ ಹುಟ್ಟುತ್ತದೆ. ಅವರನ್ನು ಚೆನ್ನಾಗಿ ಬಲ್ಲವರಿಗೆ. ಅವರು ದುಷ್ಟರಲ್ಲ ಎನ್ನುವುದನ್ನು ಅವರ ಮನೆಯವರೂ, ಪರಿಚಿತರೂ ಬಲ್ಲರು. "ಸೇರಿ ನಿನ್ನ ದಾಸರನ್ನು ಧ್ಯಾನ ಮಾಡಲಿಲ್ಲವೋ" ಎಂದು ಹಳಹಳಿಸಿದ್ದಾರೆ. ಹರಿದಾಸರ ಸತ್ಸಂಗದ ಅಪೇಕ್ಷೆ ಅವರನ್ನು ಕಾಡಿದೆ ; ಹರಿದಾಸ ಸಾಹಿತ್ಯದಲ್ಲಿ ಅಪಾರ ಆಸಕ್ತಿ ಶ್ರದ್ಧಾಭಕ್ತಿ ಇಟ್ಟಿದ್ದ ಅವರಿಗೆ ಹೀಗೆನ್ನಿಸಿದ್ದು ಸಹಜವೇ. "ಪರಿಪರಿಯಲಿ ಸರಸವಾಡಿ ದುರಿತಕೀಡಾದೆನಯ್ಯ" ಎಂದು ಪರಿತಪಿಸಿದ್ದಾರೆ. ರಾಜಾರಾಯರು ಸದಭಿರುಚಿಯ ಹಾಸ್ಯಪ್ರಿಯರು, ಆಪ್ತಮಿತ್ರರೊಡನೆ ಸರಸವಾಡುತ್ತಿದ್ದರು. ಸರಸದ ವೇಳೆಯಲ್ಲಿ ಭಗವಂತನ ನಾಮಸ್ಮರಣೆ ಮಾಡಬಹುದಾಗಿತ್ತಲ್ಲಾ ಎಂದು ಪಶ್ಚಾತ್ತಾಪ ಪಟ್ಟು, ನಂದ ಗೋಪಾಲ ಬಾಲನ ಒಲವಿಗಾಗಿ ಬೇಡಿಕೊಂಡಿದ್ದಾರೆ. ಒಟ್ಟಿನಲ್ಲಿ,

ಮೇಳೈಸುವಂತೆ ಸ್ವರಸಂಯೋಜನೆ ಮಾಡಿದ್ದಾರೆ. ಈ ಗ್ರಂಥಗಳ ಮಾದರಿಯಲ್ಲಿಯೆ ೫೦ ಶಿವಶರಣರ ಕೃತಿಗಳನ್ನು ಸ್ವರಸಂಯೋಜನೆ ಮಾಡಿ ಪ್ರಕಟಿಸಿದರು. ಈ ಕೃತಿಗಳನ್ನು ಸಂಗೀತ ರಸಿಕರು ಮೆಚ್ಚಿಕೊಂಡರು. ಇದರ ಫಲವಾಗಿ, ಬಸವೇಶ್ವರರ ವಚನಗಳು ಸ್ವರಪ್ರಸ್ತಾರದೊಂದಿಗೆ ಪ್ರಕಟವಾಯಿತು. ರಾಜಾರಾಯರ ಈ ಅಪೂರ್ವವಾದ ಸಾಧನೆಗೆ ಕನ್ನಡ ಸಾಹಿತ್ಯ ಪರಿಷತ್ತು ಮೊದಲಿನಿಂದಲೂ ಪ್ರೋತ್ಸಾಹ ನೀಡುತ್ತ ಬಂದಿತು.

ರಾಜಾರಾಯರು ಬೆಂಗಳೂರು ಆಚಾರ್ಯ ಪಾಠಶಾಲೆ ಕಾಲೇಜಿನ ಸಂಗೀತ ವಿಭಾಗದ ಪ್ರಾಧ್ಯಾಪಕರಾಗಿ ಹಲವು ವರ್ಷ ಸೇವೆ ಸಲ್ಲಿಸಿದರು. ಅವರು ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಕಾಲದಲ್ಲಿ ಮೈಸೂರು ಬೆಂಗಳೂರು ವಿಶ್ವವಿದ್ಯಾನಿಲಯಗಳ ಸಂಗೀತ ಪಠ್ಯ ವಿಷಯ ನಿಯಾಮಕ ಮಂಡಲಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ಈ ಕಾಲದಲ್ಲಿ, ಭಾರತೀಯ ಸಂಗೀತ ವಾದ್ಯಗಳು (೧೯೬೯) ಎಂಬ ಗ್ರಂಥವನ್ನು ಅವರಿಂದ ಬರೆಯಿಸಿ ಬೆಂಗಳೂರು ವಿಶ್ವವಿದ್ಯಾನಿಲಯ ಪ್ರಕಟಿಸಿದೆ. ಇದು ಪ್ರಕಟವಾಗುವ ಮೊದಲು ಇಂಥ ಒಂದು ವಿಚಾರಪೂರ್ಣ ಸ್ವಾರಸ್ಯಕರ ಪ್ರಮಾಣಭೂತ ಗ್ರಂಥ ಒಂದು ಇದ್ದಿಲ್ಲ. ಸಂಗೀತವಾದ್ಯಗಳ ಪ್ರಾಚೀನತೆ, ಸಂಗೀತ ವಾದ್ಯಗಳ ವರ್ಗೀಕರಣ, ತಂತೀವಾದ್ಯಗಳು, ಸುಷಿರ ವಾದ್ಯಗಳು, ಅವನದ್ಧ ವಾದ್ಯಗಳು, ಸಂಗೀತ ವಾದ್ಯಗಳ ರಕ್ಷಣೆ, ಗಾನಕಲಾ ಶಿಲ್ಪ – ಎಂಬೀ ಏಳು ಅಧ್ಯಾಯಗಳಲ್ಲಿ ಅನೇಕ ಆಂಗ್ಲ ಭಾಷಾ ಗ್ರಂಥಗಳಲ್ಲಿ ಅಡಗಿದ್ದ, ಚೆದರಿಹೋಗಿದ್ದ, ಮಹತ್ವದ ವಿಷಯಗಳನ್ನು ಅಂಗೈಯ ನೆಲ್ಲಿಯ ಕಾಯಂತೆ ಹಿಡಿತಕ್ಕೆ ತಂದುಕೊಂಡು ಶಾಸ್ತ್ರಬದ್ಧವಾದ ಭಾಷೆಯಲ್ಲಿ ನಿರೂಪಿಸಿ, ಕನ್ನಡದ ಶಾಸ್ತ್ರಸಾಹಿತ್ಯಕ್ಕೆ ಅಮೂಲ್ಯವಾದ ಕಾಣಿಕೆಯನ್ನು ನೀಡಿದ್ದಾರೆ. ಭಾರತೀಯ ವಾದ್ಯಗಳ ಚರಿತ್ರೆಯೇ ಈ ಗ್ರಂಥದ ವಸ್ತು. ಗ್ರಂಥ ಕರ್ತರ ಮಾತಿನಲ್ಲೇ ಹೇಳುವುದಾದರೆ, “ಆದಿಯಲ್ಲಿ ಹಾಡುಗಾರಿಕೆಗೆ ಸಹಕಾರ ಕೊಡಲು ಬಳಕೆಗೆ ಬಂದ ಸಂಗೀತ ವಾದ್ಯಗಳು ಕಾಲಕ್ರಮದಲ್ಲಿ ಭಾರತೀಯ ಸಂಗೀತವು ಶಾಸ್ತ್ರೀಯತೆಯನ್ನು ಪಡೆದು ಬೃಹತ್ತಾಗಿ ಬೆಳೆಯಲು ಮೂಲ ಪ್ರಚೋದಕ ಶಕ್ತಿಯಾಗಿ ಪರಿಣಮಿಸಿದೆ. ಈ ಅಂಶ ನಿರ್ವಿವಾದವೆಂದು ಭಾರತೀಯ ಸಂಗೀತದ ಚರಿತ್ರೆಯಿಂದ ಸ್ಥಿರಪಟ್ಟಿದೆ.

---

* ಈ ವಿಷಯವಾಗಿ ಶ್ರೀ ರಾಜಾರಾಯರ ಶಿಷ್ಯೆ (ಈಗ ಅಮೆರಿಕದಲ್ಲಿರುವ) ಶ್ರೀಮತಿ ವಿಜಯ ಪ್ರಭಾಕರ್ ಹಾಗೂ ಶಿಷ್ಯ ಶ್ರೀ ಕೆ.ಎಸ್. ರಾಮಚಂದ್ರರಾವ್ ಉಪಯುಕ್ತವಾದ ಮಾಹಿತಿಯನ್ನು ಒದಗಿಸಿದ್ದಾರೆ. ಅವರಿಗೆ ಲೇಖಕ ಕೃತಜ್ಞ.

ಸಂಗೀತ ವಿದ್ಯಾರ್ಥಿಗಳು ಅವುಗಳಿಂದ ಹೆಚ್ಚಿನ ಪ್ರಯೋಜನ ಪಡೆಯಲಾರರು. ಕನ್ನಡದಲ್ಲೇ ಬರೆದವರ ಸಂಖ್ಯೆ ಕಡಿಮೆ. ಈಚಿನ ದಿನಗಳಲ್ಲಿ ದಿವಂಗತ ಮು. ವೆಂಕಟಕೃಷ್ಣನವರು ಒಂದೆರಡು ಕಿರಿಯ ಗ್ರಂಥಗಳನ್ನು ರಚನೆ ಮಾಡಿದ್ದರು. ಆಳವಾದ ಗಾನ ವಿದ್ಯೆಯ ಅನುಭವ, ಸಂಗೀತವನ್ನು ಈಗಿನ ಅಗತ್ಯಗಳಿಗೆ ತಕ್ಕಂತೆ ಪಾಠಹೇಳಿ ಪಡೆದ ಪ್ರಾಯೋಗಿಕ ಅನುಭವ. ಕನ್ನಡ ಭಾಷಾ ಪಾಂಡಿತ್ಯ, ಸಂಗೀತ ಶಾಸ್ತ್ರಜ್ಞಾನ, ಕನ್ನಡ ಭಾಷೆಗೂ ಸಂಸ್ಕೃತಿಗೂ ಸೇವೆ ಸಲ್ಲಿಸಬೇಕೆಂಬ ನಿಜವಾದ ಕಳಕಳಿ, ಈ ಎಲ್ಲ ಬಗೆಯ ಅಧಿಕಾರಗಳನ್ನೂ ಪಡೆದ ವ್ಯಕ್ತಿಗಳೂ ಒಬ್ಬರಿಬ್ಬರು ಇದ್ದಾರು. ಪ್ರಸ್ತುತ ರಾಜಾರಾಯರು ಈ ಎಲ್ಲ ಅಧಿಕಾರಗಳನ್ನೂ ಪಡೆದಿದ್ದರು. ತಮ್ಮ ಮನೆಯನ್ನು ಗುರುಕುಲವನ್ನಾಗಿ ಮಾಡಿಕೊಂಡು ಅನೇಕ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಸಂಗೀತ ಪಾಠ ಹೇಳಿ ಪ್ರಾಯೋಗಿಕ ಅನುಭವವನ್ನು ಗಳಿಸಿಕೊಂಡಿದ್ದರು. ಬೆಂಗಳೂರಿನ ಆಚಾರ್ಯ ಪಾಠಶಾಲೆಯ ಕಾಲೇಜಿನಲ್ಲಿ ಸಂಗೀತದ ಉಪಪ್ರಾಧ್ಯಾಪಕ (ರೀಡರ್)ರಾಗಿ ಕೆಲಸ ಮಾಡಿ, ಮೈಸೂರು ವಿಶ್ವವಿದ್ಯಾನಿಲಯದ ಸಂಗೀತ ಪಠ್ಯ ವಿಷಯ ಮಂಡಲಿಯ ಸದಸ್ಯರಾಗಿ, ಕಾಲೇಜು ಮಟ್ಟದ ವಿದ್ಯಾರ್ಥಿಗಳಿಗೆ ಪಠ್ಯಕ್ರಮಾನುಸಾರ ಪಾಠ ಹೇಳಿ ಶೈಕ್ಷಣಿಕ ಅನುಭವವನ್ನು ಪಡೆದಿದ್ದರು. ಆದ್ದರಿಂದ, ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಇತರರಿಗೂ ಅನುಕೂಲವಾಗುವಂತೆ ಸಂಗೀತಶಾಸ್ತ್ರ ವಿಷಯವಾಗಿ ಎರಡು ಗ್ರಂಥಗಳನ್ನು ರಚಿಸಿರುವರು. ಮೊದಲನೆಯದು, ಸಂಗೀತ ಶಾಸ್ತ್ರಸಾರ (೧೯೬೨) ; ಕೆಲಮಟ್ಟಿಗೆ ಈ ಕಿರುಹೊತ್ತಿಗೆಯ ವಿಸ್ತೃತ ರೂಪ ಎನ್ನಬಹುದಾದರೂ ಅನೇಕ ಹೊಸ ವಿಚಾರ ವಿಷಯ ವಿಭಾಗಗಳಿಂದ ಕೂಡಿದ್ದು, ಸಂಶೋಧನಾತ್ಮಕವಾಗಿಯೂ ಇರುವ ಸಂಗೀತ ಶಾಸ್ತ್ರ ಚಂದ್ರಿಕೆ (೧೯೬೫) ಒಂದು ವಿದ್ವತ್ಪೂರ್ಣವಾದ ಕೃತಿ.

'ಭೈರವಿ ಲಕ್ಷ್ಮಿ ನಾರಣಪ್ಪ' ಮತ್ತು 'ಮೈಸೂರು ಸದಾಶಿವ ರಾಯರು' ಎಂಬ ಕೃತಿಗಳನ್ನೂ ರಚಿಸಿದ್ದಾರೆ. ಆಯಾ ವ್ಯಕ್ತಿಗಳ ಪೂರ್ಣಪರಿಚಯವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಈ ಎರಡು ಗ್ರಂಥಗಳನ್ನು ರಚಿಸುವುದಕ್ಕೂ ಮೊದಲೆ, ದೀರ್ಘಕಾಲ ಪರಿಶ್ರಮ ಮಾಡಿ 'ಹರಿದಾಸರ ಕೃತಿಗಳು' (೧೯೪೨) ಮತ್ತು 'ಹರಿದಾಸ ಕೃತಿ ಮಂಜರಿ' (೧೯೫೨) ಎಂಬೆರಡು ಕೃತಿಗಳನ್ನು ಹೊರತಂದರು. ಇವುಗಳಲ್ಲಿ ಸುಮಾರು ನೂರು ಆಯ್ದ ಹರಿದಾಸ ಕೃತಿಗಳಿಗೆ ರೂಢಿಯಲ್ಲಿರುವ ರಾಗಗಳನ್ನೂ ಹೊಸ ರಾಗಗಳನ್ನೂ ಬಳಸಿಕೊಂಡು ಸಾಹಿತ್ಯಭಾವಕ್ಕೆ ಅನುಗುಣವಾಗಿ ರಾಗಭಾವ

ಕಲಿಸಿದ್ದು ಸೋಜಿಗದ ಸಂಗತಿಯೇ. ಹೀಗೆ ಪಿಟೀಲು ಕಲಿತವರಲ್ಲಿ ಶ್ರೀಯುತರಾದ ರತ್ನಗಿರಿ ಸುಬ್ಬಶಾಸ್ತ್ರಿ, ರಾಮಚಂದ್ರರಾವ್. ಅನಂತರಾಮಯ್ಯ ಮತ್ತು ಸುಪ್ರಸಿದ್ಧ ಸಾಹಿತಿಯಾಗಿದ್ದ ದಿವಂಗತ ಸಿ.ಕೆ. ವೆಂಕಟರಾಮಯ್ಯನವರ ಪುತ್ರ ಸಿ. ವಿ. ನಾಗರಾಜ್ ಇವರುಗಳು ಈಗ ಸಂಗೀತ ಪ್ರಪಂಚದಲ್ಲಿ ಹೆಸರಾದವರು. ನಾಗರಾಜ್ ಹಾಡಿಕೆಯನ್ನೂ ಗುರುವಿನಲ್ಲಿ ಅಭ್ಯಾಸ ಮಾಡಿ ಕರ್ನಾಟಕದ ಹೊರಗೂ ಕಚೇರಿಗಳನ್ನು ಮಾಡಿ, ಕೀರ್ತಿಶಾಲಿಯಾಗಿ ಗುರುವಿಗೆ ಗೌರವ ತಂದಿದ್ದಾನೆ. ರತ್ನಗಿರಿ ಸುಬ್ಬಶಾಸ್ತ್ರಿ ತುಂಬ ಪ್ರಸಿದ್ದರು.

ರಾಜಾರಾಯರಲ್ಲಿ ಶಿಷ್ಯವೃತ್ತಿ ಮಾಡಿ ವೀಣಾವಾದನದಲ್ಲಿ ಪ್ರವೀಣರಾದ ಶಿಷ್ಯರ ಪೈಕಿ, ಆಕಾಶವಾಣಿಯ ಮೂಲಕವೂ ಪರಿಚಿತರಾದ ಎಲ್. ಶೇಷಗಿರಿರಾವ್–ರಾಜಾರಾಯರ ತಮ್ಮ ; ಅಣ್ಣನ ಕೈವಾಡ ಇವರ ವೀಣೆ ನುಡಿಕೆಯಲ್ಲಿ ಪಡಿಮೂಡಿದೆ ; ಮನೆತನದ ಗೌರವವನ್ನು ಕಾಪಾಡುತ್ತಿದೆ. ಪ್ರಸಿದ್ಧ ಲೇಖಕರೂ ನಟರೂ ಆದ ಶ್ರೀ ಸಿ.ಕೆ. ನಾಗರಾಜರಾಯರ ತಮ್ಮ ಶ್ರೀ ಸಿ.ಕೆ. ಶಂಕರ ನಾರಾಯಣರಾವ್ ಈಗ ಬೊಂಬಾಯಿಯಲ್ಲಿ ನೆಲಸಿ, ಸ್ವಯಂ ಶಿಕ್ಷಕರಾಗಿ ಶಿಷ್ಯ ಪ್ರಶಿಷ್ಯ ಪರಂಪರೆ ಬೆಳೆಯಲು ಕಾರಣರಾಗಿದ್ದಾರೆ. ಕೃಷ್ಣಮೂರ್ತಿ ಬಲುಮಟ್ಟಿಗೆ ಗುರುಕುಲ ವಾಸ ಮಾಡಿಯೇ ವೀಣೆ ಕಲಿತು, ಸ್ವತಃ ಶಿಷ್ಯ ಶಿಷ್ಯೆಯರಿಗೆ ವೀಣಾಬೋಧಕರಾಗಿ ಗುರುವಿನ ಹೆಸರನ್ನು ಸ್ಮರಣೀಯವಾಗಿ ಮಾಡಿದ್ದಾರೆ.

ಶಿಷ್ಯೆಯರ ಪೈಕಿ, ರಾಜಾರಾಯರ ಪುತ್ರಿಯೇ ಆದ ಶ್ರೀಮತಿ ವೀಣಾ ಈಗ ಅಮೆರಿಕದಲ್ಲಿ ನೆಲೆಸಿದ್ದಾರೆ. ತಂದೆಯೂ ಗುರುವೂ ಆದ ರಾಜಾರಾಯರ ವಂಶವಿದ್ಯೆಯನ್ನು ಅವರ ಮನೆತನದಲ್ಲಿ ಮುಂದುವರಿಸಿ ಉಳಿಸಿ ಬೆಳೆಸುತ್ತಿರುವವರು ಇವರೊಬ್ಬರೇ. ಅಮೆರಿಕದಲ್ಲಿ ನೆಲಸಿರುವ ಇನ್ನೊಬ್ಬ ವೀಣಾ ಶಿಷ್ಯೆ ಶ್ರೀಮತಿ ವಿಜಯಾ ಪ್ರಭಾಕರ್. ವೀಣಾ–ವಿಜಯರು ಅಮೆರಿಕದಲ್ಲಿ ವೀಣಾ ದಿಗ್ವಿಜಯದಲ್ಲಿ ನಿರತರಾಗಿದ್ದಾರೆ. ನೆನಪಿಗೆ ಬರುವ ಇನ್ನಿಬ್ಬರು ಶಿಷ್ಯೆಯರೆಂದರೆ, ಹಿಂದೆ ಮೈಸೂರು ಸರ್ಕಾರದ ಡೆವಲಪ್‌ಮೆಂಟ್ ಸೆಕ್ರೆಟರಿಯಾಗಿದ್ದ ದಿವಂಗತ ಎಂ. ವೆಂಕಟನಾರಾಯಣಪ್ಪನವರ ಪುತ್ರಿ ಶ್ರೀಮತಿ ಇಂದಿರಮ್ಮ ಮತ್ತು ಸುಪ್ರಸಿದ್ಧ ವಿದ್ವಾಂಸರಾದ ದಿವಂಗತ ಸಿ. ಹಯವದನರಾಯರ ಮೊಮ್ಮಗಳು ಶ್ರೀಮತಿ ಮಾಲತಿ ; ವಸಂತ ಇನ್ನೊಬ್ಬಳು ಶಿಷ್ಯೆ.

**ಪಾಠಕ್ರಮ**

ಹಾಡಿಕೆಗೆ ಸಂಬಂಧಪಟ್ಟಂತೆ ಆಗಲಿ ವೀಣೆ ಕಲಿಸುವುದರಲ್ಲಿಯೇ ಆಗಲಿ,

ಈ ಗುರುತರವಾದ ಪ್ರಧಾನ ಪಾತ್ರವನ್ನು ನಿರ್ವಹಿಸುವುದರಲ್ಲಿ ಐನೂರಕ್ಕೂ ಹೆಚ್ಚಿನ ಸಂಗೀತ ವಾದ್ಯಗಳು ರೂಪರಚನಾ ವೈವಿಧ್ಯಗಳನ್ನು ತೋರಿದೆ. ಈ ಕಾರಣದಿಂದ ಭಾರತೀಯ ಸಂಗೀತ ವಾದ್ಯಗಳ ಚರಿತ್ರೆಯೇ ಒಂದು ಪ್ರತ್ಯೇಕ ವಾಙ್ಮಯವಾಗಿದೆ." ಇಷ್ಟು ವಿಸ್ತಾರವಾದ ವಿಷಯವನ್ನು ಸುಮಾರು ೯೦ ಪುಟಗಳಲ್ಲಿ ಅಡಗಿಸಿ ತಿಳಿಸಿರುವುದು ಶ್ರೀಯುತರ ಲೇಖನ ಕಲೆಯ ಪ್ರೌಢಿಮೆಗೆ ನಿದರ್ಶನ.

**ಶಿಷ್ಯಸಂಪತ್ತು – ಪಾಠಕ್ರಮ***

ರಾಜಾರಾಯರು ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದ ಕಾಲದಲ್ಲಿ ೧೯೩೦–೩೧ ವಿದ್ಯಾಭ್ಯಾಸದ ವೆಚ್ಚವನ್ನು ಸರಿದೂಗಿಸುವುದಕ್ಕಾಗಿ ಸಂಗೀತ ಪಾಠವನ್ನು ಮುಖ್ಯವಾಗಿ, ವೀಣೆ ಮತ್ತು ಪಿಟೀಲುಗಳನ್ನು ಹೇಳಿಕೊಡಲು ಪ್ರಾರಂಭಿಸಿದ್ದರು. ಕೆಲವರು ವಿದ್ಯಾರ್ಥಿನಿಯರಿಗೆ ಅವರವರ ಮನೆಗೇ ಹೋಗಿ ಪಾಠ ಹೇಳುತ್ತಿದ್ದರು ; ಇವರು ಆಗ ರಾಮೇಶ್ವರನ ಗುಡಿಯ ಆವರಣದಲ್ಲಿದ್ದ ಒಂದು ಷೆಡ್ಡಿನ ಭಾಗವಾಗಿದ್ದ, ಒಂದು ಚಿಕ್ಕ ಕೋಣೆಯಲ್ಲಿ ವಾಸವಾಗಿದ್ದರು. ವಿದ್ಯಾರ್ಥಿಗಳು ಇವರು ಇದ್ದಲ್ಲಿಯೇ ಬಂದು ಪಾಠ ಕಲಿಯುತ್ತಿದ್ದರು. ಇವರು ಒಳ್ಳೆಯ ಶಿಕ್ಷಕರೆಂದು ಬೇಗನ ಪ್ರಸಿದ್ಧಿಗೆ ಬಂದಮೇಲೆ ಸಂಪಾದನೆ ಹೆಚ್ಚಿತು ; ಬೆಂಗಳೂರು ಬಸವನಗುಡಿಯಲ್ಲಿ ಕೆಲವು ವರ್ಷ, ವಿಶ್ವೇಶ್ವರಪುರದಲ್ಲಿ ಹಲವು ವರ್ಷ, ಮನೆಯನ್ನು ಬಾಡಿಗೆಗೆ ಹಿಡಿದು ವಾಸಮಾಡತೊಡಗಿದರು. ರಾಜಾರಾಯರು ಶ್ರೀಮಂತರಾಗುವ ಮಟ್ಟಿಗೆ ಗಳಿಸದಿದ್ದರೂ ನೆಮ್ಮದಿಯಾಗಿ ಜೀವನ ಮಾಡುವ ಮಟ್ಟಿಗೆ ಕೈತುಂಬ ಗಳಿಸಿದರು. ಕೆಲವು ಕಾಲ ಸಂಸಾರ ಸುಖದಿಂದ, ವಂಚಿತರಾದರೂ ದಾರಿದ್ರ್ಯ ಅವರನ್ನು ಕಾಡಲಿಲ್ಲ. 'ಗುರುಮುಷ್ಟಿ' ಎಂಬ ಬಳಕೆಯ ನುಡಿಗಟ್ಟು ಒಂದಿದೆ ; ಗುರು ಎಲ್ಲವನ್ನೂ ಶಿಷ್ಯರಿಗೆ ಧಾರೆಯೆರೆಯದೆ ಸ್ವಲ್ಪವನ್ನು ತನ್ನ ವಶದಲ್ಲಿ (ಮುಷ್ಟಿಯಲ್ಲಿ 'ಹಿಡಿ'ತದಲ್ಲಿ) ಉಳಿಸಿಕೊಂಡಿರುತ್ತಾನೆ ಎಂದು ಅದರ ಅರ್ಥ. ರಾಜಾರಾಯರು ಈ ಸ್ವಭಾವದವರಾಗಿರಲಿಲ್ಲ. ತಮಗೆ ತಿಳಿದುದನ್ನೆಲ್ಲ ಮನಬಿಚ್ಚಿ ಎದೆಬಿಚ್ಚಿ ಹೇಳಿಕೊಡುತ್ತಿದ್ದರು.

ಸಾಧಾರಣವಾಗಿ, ವೀಣೆಯಲ್ಲಿ ಪ್ರವೀಣನಾದ ಗುರು ವೀಣೆಯ ಶಿಕ್ಷಣವನ್ನು ಮಾತ್ರ ನೀಡುವುದು ರೂಢಿ. ರಾಜಾರಾಯರು ಸ್ವಯಂ ಗಾಯನಪಟುವೂ ಆದದ್ದರಿಂದ ವೀಣೆಯಲ್ಲದೆ ಹಾಡಿಕೆಯನ್ನೂ ಹೇಳಿಕೊಡಬಲ್ಲವರಾಗಿದ್ದರು. ಪಿಟೀಲುವಾದ್ಯವನ್ನೇ ಮುಟ್ಟದ ಇವರು ಕೆಲವು ಶಿಷ್ಯರಿಗೆ ಆ ವಾದ್ಯವನ್ನು

ಹೇಳಿಕೊಡುತ್ತಿದ್ದರು. ಇದನ್ನು ಅಚ್ಚುಕಟ್ಟಾಗಿ ಒಪ್ಪಿಸಿದ ಮೇಲೆಯೇ ಮುಂದಿನ ಪಾಠ. ಎಷ್ಟು ಸಲವಾಗಲಿ, ಬೇಸರವಿಲ್ಲ, ದಣಿವಿಲ್ಲ, ಈ ಕ್ರಮದಿಂದ ಹೇಳಿಕೊಟ್ಟ ಪಾಠ ವಿದ್ಯಾರ್ಥಿಗಳ ಮನದಲ್ಲಿ ಊರುತ್ತಿತ್ತು ; ಕಂಠದಲ್ಲಿ ಕೂರುತಿತ್ತು. ಶ್ರುತಿಶುದ್ಧಿಗೂ, ಲಯಬದ್ಧತೆಗೂ ವಿಶೇಷ ಗಮನ ಕೊಡುತ್ತಿದ್ದರು.

ವೀಣೆಯ ವಿದ್ಯಾರ್ಥಿಗಳಿಗೆ, ವೀಣೆಯ 'ವ್ಯಾಳಿ' ಮುಖದ ತಲೆ, 'ದಂಡಿ', 'ಕೊಡ', 'ಎದೆಹಲಗೆ', 'ಕುದುರೆ', ಏಳು ತಂತಿಗಳು ಮತ್ತು ಏಳು ಬಿರಡೆಗಳು, ಸೋರೆಬುರುಡೆ, ರೇಕುಗಳು, ೨೪ ಮೆಟ್ಟಲುಗಳು – ಇವುಗಳ ಸ್ವರೂಪವನ್ನು ನಾದ–ಶ್ರುತಿ–ಸ್ವರಗಳ ಉತ್ಪತ್ತಿಯಲ್ಲಿ ಇವುಗಳ ಸ್ಥಾನವನ್ನೂ ವಿದ್ಯಾರ್ಥಿ ಒಂದು ಮೇಲ್ಮಟ್ಟದ ಕಲಿಕೆಯನ್ನು ತಲಪಿದ ಮೇಲೆ ಹೇಳಿಕೊಡುತ್ತಿದ್ದರು.

ರಾಜಾರಾಯರು ತಮ್ಮ ಗುರುಸ್ಥಾನದ ಘನತೆ ಗೌರವಗಳನ್ನು ಉಳಿಸಿಕೊಂಡು ಕೂಡ ವಿದ್ಯಾರ್ಥಿಗಳೊಂದಿಗೆ ಬಹು ಸಲಿಗೆಯಿಂದ ವರ್ತಿಸುತ್ತಿದ್ದರು ; ಪಾಠದ ನಡುವೆ ಹಾಸ್ಯದ ಚಟಾಕಿಗಳನ್ನು ಹಾರಿಸಿ, ವಿದ್ಯಾರ್ಥಿಗಳನ್ನು ಗೆಲುವಾಗಿರಿಸಿ, ಬೇಸರವಾಗದಂತೆ ನೋಡಿಕೊಳ್ಳುತ್ತಿದ್ದರು. ಒಟ್ಟಿನಲ್ಲಿ, ಇವರೊಬ್ಬ ಆದರ್ಶ ಸಂಗೀತ ಕಲಾಶಿಕ್ಷಕ.

## ವ್ಯಕ್ತಿತ್ವ

ರಾಜಾರಾಯರು ಯಾರಿಗೂ ಒಬ್ಬ ಆಕರ್ಷಕ ವ್ಯಕ್ತಿಯಾಗಿ ಕಾಣುವಂಥವರು. ಅವರ ಹೊರನೋಟ ಹೇಗಾದರೂ ಇರಲಿ, ಹೊರಗೊಂದು ಒಳಗೊಂದು ಇಲ್ಲದ, ಮುಗ್ಧ, ಪ್ರಾಮಾಣಿಕ, ಸರಳಜೀವಿ, 'ಕವಿಗೆ ಕವಿ ಮುನಿವಂ' ಎಂಬ ಉಕ್ತಿಯನ್ನು ಸಂಗೀತ ಕಲಾವಿದರಿಗೂ ಅನ್ವಯಿಸಬಹುದು. ಆದರೆ ರಾಜಾರಾಯರು ಇದಕ್ಕೆ ಅಪವಾದವಾಗಿದ್ದರು. ಇವರ ಸಂಗೀತ ವಿದ್ಯೆಗೆ ಭಾಷಣಕಲೆ, ಅಭಿನಯ ಕಲೆ, ಗಮಕ ಕಲೆ, ಕಾವ್ಯ ಕಲೆ ಎಲ್ಲವೂ ಪೋಷಕವಾಗಿ ಮೆರುಗುಕೊಟ್ಟಿದ್ದು, ಇಷ್ಟೊಂದು ಕಲಾಸಂಪತ್ತು ಒಂದೆಡೆ ಮೇಳೈಸಿರುವ ವ್ಯಕ್ತಿ ಸಂಗೀತ ಪ್ರಪಂಚದಲ್ಲಿ ದುರ್ಲಭ. ಅನೇಕ ಸಂಗೀತ ವಿದ್ವಾಂಸರು ತಾವು ಹಾಡುವ ಇಲ್ಲವೆ ನುಡಿಸುವ ಕೃತಿಯ ಭಾಷೆ ಸಾಹಿತ್ಯಗಳ ಕಡೆಗೇ ಲಕ್ಷ್ಯ ಕೊಡದಿರುವಾಗ ಸಂಗೀತ ಪ್ರಪಂಚದ ಹೊರಗೆ ಅವರಿಂದ ಭಾಷಾ ಸಾಹಿತ್ಯ ಪ್ರೇಮಗಳನ್ನು ನಿರೀಕ್ಷಿಸುವುದು ತಪ್ಪಾಗುತ್ತದೆ. ರಾಜಾರಾಯರು ಕಟ್ಟಾ ಕನ್ನಡ ಅಭಿಮಾನಿ ; ಹರಿದಾಸ ಸಾಹಿತ್ಯದಲ್ಲಿ ಪಂಚಪ್ರಾಣ. ಅನೇಕ ಸುಪ್ರಸಿದ್ಧ ಸಾಹಿತಿಗಳೊಂದಿಗೆ ಆತ್ಮೀಯ ಸ್ನೇಹವಿತ್ತು. ಗರ್ವ, ಅಹಂಕಾರಗಳು ಇವರ ಬಳಿ ಸುಳಿಯುತ್ತಲೂ ಇರಲಿಲ್ಲ. ಗುಣಗ್ರಾಹಿಯಾದ

ಶ್ರೀ

ಡಿ|| ಎಲ್. ರಾಜರಾಯರ ಬರವಣಿಗೆ.

ಮನೆಯಲ್ಲಿ ಶಿಷ್ಯರಿಗೆ ಪಾಠ ಹೇಳುವಾಗ ಕೆಲವು ಅಂಶಗಳಲ್ಲಿ ಸಮಾನವಾದ ಕ್ರಮವನ್ನು ಅನುಸರಿಸುತ್ತಿದ್ದರು. ಅವರ ಪಾಠಕ್ರಮ ಒಟ್ಟಿನ ಮೇಲೆ ನೇರ ಮತ್ತು ಸರಳ. ವಿದ್ಯಾರ್ಥಿಗಳಿಗೆ ಸರದಿಯ ಮೇಲೆ ದಿನಬಿಟ್ಟು ದಿನ ಪಾಠ ಹೇಳುತ್ತಿದ್ದರು. ಪ್ರಾಚೀನ ಸಂಪ್ರದಾಯವನ್ನು ಅನುಸರಿಸಿ ನಿಷಿದ್ಧ ದಿನಗಳಲ್ಲಿ ಪಾಠ ಇಡುತ್ತಿರಲಿಲ್ಲ. ಹೇಳಿಕೊಟ್ಟ ಪಾಠವನ್ನು ವಿದ್ಯಾರ್ಥಿ ಸರಿಯಾಗಿ ಒಪ್ಪಿಸುವವರೆಗೂ ಮುಂದಿನ ಅವಕಾಶವೇ ಇಲ್ಲ. ತಾಳದ ಆವೃತ್ತಿ, ಸ್ವರದ ಶ್ರುತಿ, ಮುಂತಾದ ಸಂಜ್ಞೆಗಳನ್ನು ಒಂದು ದಿನದ ಪಾಠಕ್ಕೆ ಒಂದು ಆವೃತ್ತ ಸ್ವರ, ಅದರ ಸಾಹಿತ್ಯ, ಇಷ್ಟನ್ನು ಮಾತ್ರ

ಇವರು ಇತರ ಗಾಯಕ ವೈಣಿಕರ ಕಲೆಯನ್ನು ಮನಸಾರ ಗೌರವಿಸುತ್ತಿದ್ದರು. ಕೀರ್ತಿಗಾಗಲಿ ಹಣಕ್ಕಾಗಲಿ ಎಂದೂ ಬಾಯಿಬಿಟ್ಟವರಲ್ಲ. ಎಲ್ಲಕ್ಕಿಂತ ಮೇಲಾಗಿ ಶುದ್ಧ ಚರಿತ್ರರು. ಮೊದಲ ಪತ್ನಿ ಆಗಲಿ, ಎರಡನೆಯ ಪತ್ನಿ ರೋಗಗ್ರಸ್ತೆಯಾಗಿ ತೀರಿಕೊಂಡ ಮೇಲೆ, ಅನೇಕ ವರ್ಷಗಳ ಕಾಲ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬಂದರು. ಅನೇಕ ವರ್ಷಗಳ ಕಾಲ ಗೃಹ ಜೀವನದ ಸೌಖ್ಯದಿಂದ ವಂಚಿತರಾಗಿದ್ದ ಇವರು ಸಂಗೀತ ವಿದ್ಯೆಯ ಸಾಧನೆ ಬೋಧನೆಗಳಲ್ಲಿ ಕೈವಲ್ಯವನ್ನು ಕಾಣುತ್ತಿದ್ದರು.

ಬೆಂಗಳೂರು ನರಸಿಂಹರಾಜ ಕಾಲೋನಿಯಲ್ಲಿ ಒಂದು ಪುಟ್ಟ ಮನೆಯನ್ನು ಸ್ವಂತದ್ದಾಗಿ ಮಾಡಿಕೊಂಡಮೇಲೆ, ಆಪ್ತೇಷ್ಟರ ಹಿತ ವಚನವನ್ನು ಪಾಲಿಸಿ, ಸುಮಾರು ನಲವತ್ತರ ಪ್ರಾಯದಲ್ಲಿ ಮೂರನೆಯ ಮದುವೆ ಮಾಡಿಕೊಂಡರು. ಬಡವರ ಮನೆಯ ಹೆಣ್ಣುಮಗಳಾದ ಇಂದಿರಾಬಾಯಿ ಇವರ ಭಾಗದ ಭಾಗ್ಯಲಕ್ಷ್ಮಿಯಾಗಿ ಬಂದರು. ಎಲ್ಲ ಭಾಗ್ಯಗಳ ಜೊತೆಗೆ ಸಂತಾನ ಭಾಗ್ಯ ಸ್ವಲ್ಪ ಮಿತಿಮೀರಿಯೆ ದೊರೆಯಿತೆನ್ನಬೇಕು. ಮದುವೆಯಾದ ಮೇಲೆ ಮನೆ ನಿಜಕ್ಕೂ ನಂದಗೋಕುಲವಾಯಿತು. ೧೫ ವರ್ಷಗಳ ಅವಧಿಯಲ್ಲಿ ಹತ್ತು ಮಕ್ಕಳ ತಂದೆಯಾದರು ; ಅವರನ್ನು ಮುಂದಕ್ಕೆ ತರುವ ಹೊಣೆ ಹೊತ್ತರು. ಆದರೆ ಜೀವದ ಉಸಿರಾದ ಸಂಗೀತವನ್ನು ಕೈಬಿಡಲಿಲ್ಲ ; ವೀಣೆಯನ್ನು ತೊರೆಯಲಿಲ್ಲ. ಜೀವನದುದ್ದಕ್ಕೂ ವೀಣೆಯೇ ಅವರ ಸರ್ವಸ್ವ. ಮನೆಗೂ ವೀಣೆಯ ಹೆಸರು ; ಮೊದಲ ಮಗಳಿಗೂ 'ವೀಣಾ' ಹೆಸರು. ೨೮–೧೧–೧೯೭೯ರಂದು ಕೊನೆಯುಸಿರು ಎಳೆಯುವವರೆಗೂ ಅವರು "ವೀಣೆ ರಾಜಾರಾಯರು."

* * * *

# ಯುಧಿಷ್ಠಿರ

ಧರ್ಮಪುತ್ರನ ತಂದೆ ಯಮರಾಜ ; ಅವನ ತಾಯಿ ಕುಂತಿ ; (ಶ್ರೀಕೃಷ್ಣನ ತಂದೆಯಾದ) ವಸುದೇವ ಮೈದುನ ; ಯುದ್ಧವೆಂದರೆ ಅವನಿಗೊಂದು ಆಟ, ಅದೇ ಅವನು ಮಾಡುವ ಪೂಜೆ ; ಅವನ ತಮ್ಮಂದಿರೋ, ಪ್ರಸಿದ್ಧರಾದ ಭೀಮಾರ್ಜುನರು ಮತ್ತು ಅವಳಿ ಸೋದರರಾದ ನಕುಲ ಸಹದೇವರು ; (ಕೋಪಗೊಳ್ಳದ ಅವನು ಕೋಪಗೊಂಡರೆ) ಅವನ ಕೋಪ ಎಂದಿಗೂ ವ್ಯರ್ಥವಾಗದು ; ಬಿಲ್ಲುವಿದ್ಯೆಯ ಗುರು ದ್ರೋಣಾಚಾರ್ಯ – ಎಂದ ಮೇಲೆ,ಚಂದ್ರವಂಶದಲ್ಲಿ ಹುಟ್ಟಿದವನೂ ಭರತವಂಶಕ್ಕೆ ಕಿರೀಟಪ್ರಾಯನೂ ಆದ ಧರ್ಮಪುತ್ರನು ಸಾಮಾನ್ಯನಲ್ಲ.

ದಾನಮಾಡಿದರೆ ಅದು ಒಳ್ಳೆಯ ಮಾತಿನಿಂದ ಕೂಡಿರಬೇಕು, ಜ್ಞಾನವನ್ನು ಹೊಂದಿರುವವನು ಗರ್ವವನ್ನು ಹೊಂದಿರಬಾರದು, ಶೂರನಾದವನು ದಯೆಯಿಂದ ಕೂಡಿರಬೇಕು – ಎಂಬ ಈ ಮಾತಿಗೆ ಅನುಗುಣವಾಗಿ ಇದ್ದುವು, ಧರ್ಮಪುತ್ರನು ಮಾಡುತ್ತಿದ್ದ ದಾನ, ಅವನ ಜ್ಞಾನ ಮತ್ತು ಅವನ ಕ್ಷಮಾಗುಣ.

ನಾರಾಯಣಂ ನಮಸ್ಕೃತ್ಯ ನರಂ ಚೈವ
ನರೋತ್ತಮಂ ದೇವೀಂ ಸರಸ್ವತೀಂ
ವ್ಯಾಸಂ ತತೋ ಜಯ ಮುದೀರಯೇತ್

"ನಾರಾಯಣ (ಕೃಷ್ಣ), ನರರಲ್ಲಿ ಉತ್ತಮನಾದ ನರ (ಅರ್ಜುನ), ಸರಸ್ವತಿದೇವಿ, ವ್ಯಾಸಮಹರ್ಷಿ ಇವರಿಗೆ ನಮಸ್ಕಾರ ಮಾಡಿ ಆಮೇಲೆ ಭಾರತದ ಕಥೆಯನ್ನು ಹೇಳಬೇಕು." ಇದು ಸಂಪ್ರದಾಯ.

ಯಾರಾದರೂ ಬಹಳ ನ್ಯಾಯವಾಗಿ ನಡೆಯುತ್ತಾರೆ, ಒಳ್ಳೆಯವರು ಎಂದು ಹೇಳಬೇಕಾದರೆ 'ಅವನೊಬ್ಬ ಧರ್ಮರಾಯ' ಎನ್ನುತ್ತೇವೆ.

'ಧರ್ಮರಾಯ' ಎನ್ನಿಸಿಕೊಂಡವನು, ಸಾವಿರಾರು ವರ್ಷಗಳಿಂದ ಜನರ ಮನಸ್ಸಿನಲ್ಲಿ ನೆಲೆ ನಿಂತವನು ಮಹಭಾರತದ ಯುಧಿಷ್ಠಿರ.

ಪಾಂಡವ ಕೌರವರ ಕಥೆಯೇ ಮಹಾಭಾರತ. ಇವರು ಕುರುವಂಶಕ್ಕೆ ಸೇರಿದ ರಾಜರು. ಪಾಂಡವರು ಪಾಂಡುಮಹಾರಾಜನ ಮಕ್ಕಳು. ಕೌರವರು ಧೃತರಾಷ್ಟ್ರನ ಮಕ್ಕಳು. ಕುರುಕುಲ ಪಿತಾಮಹನಾದ ಧೃತರಾಷ್ಟ್ರನ ಮಕ್ಕಳು. ಕುರುಕುಲ ಪಿತಾಮಹನಾದ ಭೀಷ್ಮನ ಲಾಲನೆಪಾಲನೆಯಲ್ಲಿ ಇವರೆಲ್ಲ ಬೆಳೆದರು.

ಧರ್ಮಸ್ವರೂಪನಾಗಬೇಕೆಂದು ಪಾಂಡು ಇಷ್ಟಪಟ್ಟಿದ್ದನು ; ಯಮಧರ್ಮನ ವರದಿಂದ ಅಂತಹ ಮಗನನ್ನು ಪಡೆಯಬೇಕೆಂದು ಕುಂತಿಗೆ ಹೇಳಿದನು. ಅದರಂತೆ ಅವಳು ಯಮಧರ್ಮನ ವರದಿಂದ ಪಾಂಡುವಿಗಾಗಿ ಹಿರಿಯ ಮಗನನ್ನು ಪಡೆದಳು. ಆದ್ದರಿಂದ ಅವನು ಧರ್ಮಪುತ್ರ ಎಂದು ಹೆಸರು ಪಡೆದನು. ಮನಸ್ಸಿನಲ್ಲಿ ನಡೆಯುವ ಒಳಿತು ಕೆಡುಕುಗಳ ಹೋರಾಟದಲ್ಲಿ ಅವನ ಮನಸ್ಸು ಕದಲದೆ ಸ್ಥಿರವಾಗಿರುತ್ತಿತ್ತು ; ಒಳಿತರ ಕಡೆಗೇ ಬಾಗುತ್ತಿತ್ತು. ಧರ್ಮಯುದ್ಧದಲ್ಲಿ ಸ್ಥಿರವಾದ ಮನಸ್ಸನ್ನು ಉಳ್ಳ ಈ ಧರ್ಮಪುತ್ರನಿಗೆ ಯುಧಿಷ್ಠಿರ ಎಂದು ಹೆಸರಾಯಿತು. ಈ ಹೆಸರು ಧರ್ಮ ಪುತ್ರನ ಬಾಳಿನ ಉದ್ದಕ್ಕೂ ಸಾರ್ಥಕ ಎನಿಸಿತು. ಯುಧಿಷ್ಠಿರ ಧರ್ಮವಂತನಾಗಿ, ಸತ್ಯವಂತನಾಗಿ, ಬಾಳಿದನು ; ಧರ್ಮರಾಜ ಎಂದು ಲೋಕಪ್ರಸಿದ್ಧನಾದನು. ಧರ್ಮ ಯಾವ ಕಡೆಗೆ ಇರುತ್ತದೆಯೋ ಆ ಕಡೆ ಜಯ ಸಿದ್ಧ ಎಂಬ ಸತ್ಯವನ್ನು ನೆಲೆಗೊಳಿಸಿದನು.

ಕೆಲವು ಕಾಲದ ಮೇಲೆ ಪಾಂಡು ತೀರಿಕೊಂಡನು. ಮಾದ್ರಿ ಗಂಡನೊಂದಿಗೆ ಸಹಗಮನ ಮಾಡಿದಳು. ಗಂಡನನ್ನು ಕಳೆದುಕೊಂಡ ಕುಂತಿ ಐದು ಮಂದಿ ಪಾಂಡು ಕುಮಾರರೊಂದಿಗೆ ಹಸ್ತಿನಾವತಿಗೆ ಹಿಂದಿರುಗಿ, ಧೃತರಾಷ್ಟ್ರನ ಆಸರೆಯಲ್ಲಿ ನೆಲಸಿದಳು.

**ಕೌರವರ ದ್ವೇಷದ ಉರಿ ಹೊತ್ತಿತು**

ಕುಂತಿ ಮಾದ್ರಿಯರು ಮಕ್ಕಳನ್ನು ಪಡೆದಾಗಲೇ ಧೃತರಾಷ್ಟ್ರನ ಮಡದಿಯಾದ ಗಾಂಧಾರಿಯೂ ನೂರು ಮಂದಿ ಗಂಡು ಮಕ್ಕಳನ್ನೂ ಒಂದು ಹೆಣ್ಣು ಕೂಸನ್ನೂ ಪಡೆದಳು. ನೂರರಲ್ಲಿ ದುರ್ಯೋಧನನೇ ಹಿರಿಯ ; ಎರಡನೆಯವನೇ ದುಶ್ಶಾಸನ. ಯುಧಿಷ್ಠಿರನು ಹುಟ್ಟಿದ ದಿನವೇ ದುರ್ಯೋಧನನೂ ಹುಟ್ಟಿದನು. ಪಾಂಡುವಿನ ಮಕ್ಕಳೂ ಧೃತರಾಷ್ಟ್ರನ ಮಕ್ಕಳೂ ಒಂದೇ ಕುರುವಂಶಕ್ಕೆ ಸೇರಿದವರು. ಆದರೂ ಧೃತರಾಷ್ಟ್ರನ ಮಕ್ಕಳು ಮಾತ್ರ ಕೌರವರೆಂದು ಪ್ರಸಿದ್ಧರಾದರು.

ಧೃತರಾಷ್ಟ್ರನ ಮೇಲ್ವಿಚಾರಣೆಯಲ್ಲಿ ಕೌರವ ಪಾಂಡವರಿಗೆ ಅಸ್ತ್ರಶಸ್ತ್ರಗಳ ಶಿಕ್ಷಣವಾಯಿತು. ಧನುರ್ವಿದ್ಯಾಪಾರಂಗತರಾಗಿದ್ದ ದ್ರೋಣಾಚಾರ್ಯರು ಎಲ್ಲರಿಗೂ ಗುರು.

ದ್ರೋಣಾಚಾರ್ಯರ ಬಳಿ ವಿದ್ಯಾಭ್ಯಾಸ ಮಾಡಿದವರಲ್ಲಿ ಭೀಮ ದುರ್ಯೋಧನರು ಗದಾಯುದ್ಧದಲ್ಲಿ ನಿಪುಣರಾದರು. ಭೀಮನನ್ನು ಕಂಡರೆ ದುರ್ಯೋಧನನಿಗೆ ಮೊದಲಿನಿಂದಲೂ ಆಗದು ; ಈಗಂತೂ ಅವನ ಮೇಲಿನ ಹಗೆತನ ಹೆಚ್ಚಾಯಿತು ; ಅವನನ್ನು ಕೊಲ್ಲಬೇಕೆಂದು ಹಲವು ಸಲ ಪ್ರಯತ್ನಪಟ್ಟನು.

ಭೀಷ್ಮನು ತಾನು ಮದುವೆಯಾಗುವುದಿಲ್ಲವೆಂದೂ, ತನ್ನ ಮಲತಮ್ಮನಾದ ವಿಚಿತ್ರವೀರ್ಯನಿಗೇ ರಾಜ್ಯವನ್ನು ವಹಿಸಿಕೊಡುವುದಾಗಿಯೂ ತನ್ನ ತಂದೆಗೆ ಮಾತು ಕೊಟ್ಟಿದ್ದನು. ವಿಚಿತ್ರವೀರ್ಯನು ಅಲ್ಪಾಯುವಾಗಿ ತೀರಿಕೊಂಡ ಮೇಲೆ, ಇನ್ನೂ ಚಿಕ್ಕವರಾಗಿದ್ದ ಅವನ ಮಕ್ಕಳು ಧೃತರಾಷ್ಟ್ರನನ್ನೂ ಪಾಂಡವನ್ನೂ ಅಕ್ಕರೆಯಿಂದ ಬೆಳೆಸಿ, ಮುಂದಕ್ಕೆ ತಂದನು. ಅವರಿಬ್ಬರಿಗೂ ಸಕಾಲದಲ್ಲಿ ಮದುವೆ ಮಾಡಿಸಿದನು. ಧೃತರಾಷ್ಟ್ರನ ಹೆಂಡತಿ ಗಾಂಧಾರಿ. ಪಾಂಡುವಿಗೆ ಇಬ್ಬರು ಹೆಂಡಿರು; ಮೊದಲನೆಯವಳು ಕುಂತೀಭೋಜ ಎಂಬ ರಾಜನ ಸಾಕುಮಗಳಾದ ಕುಂತಿ. ಇವಳು ವಸುದೇವನ ತಂಗಿ; ಶ್ರೀಕೃಷ್ಣನ ಸೋದರತ್ತೆ. ಎರಡನೆಯ ಹೆಂಡತಿ ಮುದ್ರರಾಜನ ಮಗಳಾದ ಮಾದ್ರಿ. ಧೃತರಾಷ್ಟ್ರ ಹುಟ್ಟು ಕುರುಡ. ಆದ್ದರಿಂದ ಪಾಂಡುವೇ ದೊರೆಯಾಗಿದ್ದನು.

ಪಾಂಡುವಿನ ಹಿರಿಯ ಹೆಂಡತಿಯಾದ ಕುಂತಿ ಕನ್ಯೆಯಾಗಿದ್ದಾಗ ದೂರ್ವಾಸ ಮುನಿಗೆ ಅತೀಥಿಸತ್ಕಾರ ಮಾಡಿ, ಆತನನ್ನು ಸಂತೋಷಪಡಿಸಿದ್ದಳು, ಸಂತುಷ್ಟರಾದ ಅವರು ಅವಳಿಗೆ ಐದು ಮಂತ್ರಗಳನ್ನು ಉಪದೇಶಿಸಿದ್ದರು. ಕನ್ಯೆಯಾಗಿದ್ದಾಗಲೇ ಸೂರ್ಯಮಂತ್ರದ ಬಲದಿಂದ ಕರ್ಣನನ್ನು ಪಡೆದಿದ್ದಳು. ಜನ ಆಡಿಕೊಳ್ಳುವರೆಂದು ಹೆದರಿ, ಮಗುವನ್ನು ಅವಳು ಗಂಗೆಗೆ ಹಾಕಿಬಿಟ್ಟಿದ್ದಳು.

ಅನೇಕ ವರ್ಷ ರಾಜ್ಯವಾಳಿದ ಮೇಲೆ ಪಾಂಡುವಿಗೆ ವೈರಾಗ್ಯವುಂಟಾಗಿ, ತಪಸ್ಸು ಮಾಡಲು ಕಾಡಿಗೆ ತೆರಳಿದನು. ಅವನ ಹೆಂಡಿರೂ ಅವನನ್ನು ಹಿಂಬಾಲಿಸಿದರು. ಅಲ್ಲಿ ಅವರೆಲ್ಲರೂ ತಪಸ್ಸು ಮಾಡುತ್ತ ನಿಶ್ಚಿಂತೆಯಾಗಿದ್ದರು. ಎಷ್ಟು ತಪಸ್ಸು ಮಾಡಿದರೇನು? ಗಂಡು ಮಕ್ಕಳಿಲ್ಲ ಎಂದು ಪಾಂಡು ಕೊರಗಿದನು; ತನ್ನ ಕೊರಗನ್ನು ಕುಂತಿಯ ಮುಂದೆ ತೋಡಿಕೊಂಡನು. ಆಗ ಕುಂತಿ ದುರ್ವಾಸರಿಂದ ತನಗೆ ದೊರೆತಿದ್ದ ಮಂತ್ರಗಳ ವಿಚಾರವನ್ನು ಪಾಂಡುವಿಗೆ ತಿಳಿಸಿದಳು. ಅವನ ಒಪ್ಪಿಗೆ ಪಡೆದು, ಕುಂತಿ ಯಮಧರ್ಮನ ವರದಿಂದ ಯುಧಿಷ್ಠಿರನನ್ನೂ, ವಾಯುದೇವನ ವರದಿಂದ ಭೀಮಸೇನನನ್ನೂ, ಇಂದ್ರನ ವರದಿಂದ ಅರ್ಜುನನನ್ನೂ ಪಡೆದಳು. ಉಳಿದಿದ್ದ ಒಂದು ಮಂತ್ರವನ್ನು ಮಾದ್ರಿಗೆ ಹೇಳಿಕೊಟ್ಟಳು. ಮಾದ್ರಿ ಅಶ್ವಿನೀ ದೇವತೆಗಳ ವರದಿಂದ ನಕುಲ, ಸಹದೇವ ಎಂಬ ಅವಳಿ ಮಕ್ಕಳನ್ನು ಪಡೆದಳು.

ಪ್ರಪಂಚದ ಒಂದು ರಣರಂಗ ; ಮನುಷ್ಯನ ಮನಸ್ಸು ಅವನ ಅಂತರಂಗ. ಎರಡರಲ್ಲಿಯೂ ಒಳ್ಳೆಯತನಕ್ಕೂ ಕೆಟ್ಟತನಕ್ಕೂ ಯಾವಾಗಲೂ ಹೋರಾಟ ನಡೆಯುತ್ತಲೇ ಇರುತ್ತದೆ. ಒಳ್ಳೆಯ ತನವೇ ಧರ್ಮ ; ಅದರಿಂದಲೇ ಜಗತ್ತು ನಿಂತಿರುವುದು. ಯಮ ಧರ್ಮಸ್ವರೂಪ;ಕ್ರೂರಿಯಲ್ಲ. ತನ್ನ ಹಿರಿಯ ಮಗನೂ

**ರಾಣಿಯೊಡನೆ ಮತ್ತೆ ರಾಜ್ಯಕ್ಕೆ**

ಕಾಡಿನಿಂದ ಕಾಡಿಗೆ ಅಲೆಯುತ್ತ ಪಾಂಡವರು ಬ್ರಾಹ್ಮಣವೇಷದಲ್ಲಿ ಏಕಚಕ್ರಪುರವನ್ನು ಪ್ರವೇಶಿಸಿದರು. ಅಲ್ಲಿ ಒಬ್ಬ ಬಡಬ್ರಾಹ್ಮಣನ ಮನೆಯಲ್ಲಿ ಬಿಡಾರ ಮಾಡಿದರು. ಮೊದಲು ಅರಮನೆಯಲ್ಲಿ ಸುಖವಾಗಿದ್ದ ಪಾಂಡವರು ಭಿಕ್ಷಾನ್ನದಿಂದ ಹೊಟ್ಟೆ ಹೊರೆಯುವ ಕಾಲ ಬಂದಿತು.

ಈ ಸಮಯದಲ್ಲಿ ಪಟ್ಟಣದ ಕುಟುಂಬಗಳಿಗೆಲ್ಲ ಮೃತ್ಯುಪ್ರಾಯನಾಗಿದ್ದ ಬಕ ಎಂಬ ರಾಕ್ಷಸನನ್ನು ಭೀಮನು ಕೊಂದು, ತಮಗೆ ಆಶ್ರಯ ಕೊಟ್ಟಿದ್ದ ಬ್ರಾಹ್ಮಣ ಕುಟುಂಬವನ್ನು ಕಾಪಾಡಿದನು.

ಹೀಗಿರಲು, ಪಾಂಡವರು ಇಳಿದುಕೊಂಡಿದ್ದ ಮನೆಗೆ ಒಬ್ಬ ಬ್ರಾಹ್ಮಣನು ಅತಿಥಿಯಾಗಿ ಬಂದನು. ಅವನು ತನ್ನ ದೇಶಸಂಚಾರದ ಅನುಭವಗಳನ್ನು ತಿಳಿಸುತ್ತ, ಪಾಂಚಾಲದೇಶದ ದೊರೆಯಾದ ದ್ರುಪದನು ತನ್ನ ಮಗಳಾದ ದ್ರೌಪದಿಯ ಸ್ವಯಂವರವನ್ನು ಏರ್ಪಡಿಸಿರುವ ವಿಚಾರವನ್ನು ತಿಳಿಸಿದನು. ಕುಂತಿಯ ಒಪ್ಪಿಗೆ ಪಡೆದು, ಪಾಂಡವರು ಬ್ರಾಹ್ಮಣರ ವೇಷದಲ್ಲಿಯೇ ಪಾಂಚಾಲ ದೇಶಕ್ಕೆ ಹೋದರು.

ದ್ರೌಪದಿಯ ಸ್ವಯಂವರಕ್ಕೆ ನಾನಾ ದೇಶಗಳಿಂದ ರಾಜರು ಬಂದಿದ್ದರು. ಬ್ರಾಹ್ಮಣವೇಷದಲ್ಲಿದ್ದ ಪಾಂಡವರೂ ಸ್ವಯಂವರ ಮಂಟಪಕ್ಕೆ ಹೋಗಿ ಬ್ರಾಹ್ಮಣರ ಮಧ್ಯೆ ಕುಳಿತರು. ಕ್ಷತ್ರಿಯರಾರಿಗೂ ಅಲ್ಲಿ ಇರಿಸಿದ್ದ ಬಿಲ್ಲಿಗೆ ಹೆದೆಯೇರಿಸಲು ಕೂಡ ಆಗಲಿಲ್ಲ. ಆಗ ಅರ್ಜುನನು ಎದ್ದು ಹೋಗಿ ಮತ್ಸ್ಯಯಂತ್ರವನ್ನು ಭೇದಿಸಿದನು. ದ್ರೌಪದಿ ಅವನ ಕೊರಳಿಗೆ ಹೂಮಾಲೆ ಹಾಕಿದಳು.

ಅರ್ಜುನನು ಸ್ವಯಂವರದಲ್ಲಿ ಗೆದ್ದ ದ್ರೌಪದಿಯೊಂದಿಗೆ ಪಾಂಡವರು ತಮ್ಮ ಬಿಡಾರಕ್ಕೆ ಹಿಂದಿರುಗಿದರು. ಮನೆಯ ಬಾಗಿಲ ಮುಂದೆ ನಿಂತು – "ಅಮ್ಮಾ! ಭಿಕ್ಷೆ ತಂದಿದ್ದೇವೆ" ಎಂದು ಗಟ್ಟಿಯಾಗಿ ಕೂಗಿ ಹೇಳಿದರು. ಕುಂತಿ – "ಎಂದಿನ ಹಾಗೆ ನೀವೆಲ್ಲರೂ ಸಮವಾಗಿ ಹಂಚಿಕೊಳ್ಳಿ" ಎಂದು ಒಳಗಿನಿಂದಲೇ ಹೇಳಿಬಿಟ್ಟಳು. ಪಾಂಡವರು ಒಬ್ಬರ ಮುಖವನ್ನು ಒಬ್ಬರು ನೋಡಿ ನಕ್ಕರು. ಕುಂತಿ ಹೊರಗೆ ಬಂದು ನೋಡುತ್ತಾಳೆ, ಅವರು ತಂದಿದ್ದ ಭಿಕ್ಷೆ ಒಬ್ಬ ಹೆಣ್ಣು !

ಕುಂತಿ, "ಎಂಥ ಮಾತು ನನ್ನಿಂದ ಹೊರಟು ಬಿಟ್ಟಿತು ! ಈ ಹೆಣ್ಣು ಯಾರು? ಹೇಗೆ ನಿಮ್ಮ ಜೊತೆ ಬಂದಳು !" ಎಂದು ಆಶ್ಚರ್ಯಪಟ್ಟು ಕೇಳಿದಳು.

ಯುಧಿಷ್ಠಿರನು, ಸ್ವಯಂವರದಲ್ಲಿ ದ್ರೌಪದಿಯನ್ನು ಅರ್ಜುನ ಗೆದ್ದ ಸಂಗತಿಯನ್ನು ವಿವರಿಸಿದನು.

ಆದರೆ ಅವನ ಪ್ರಯತ್ನ ಯಾವುದೂ ನಡೆಯಲಿಲ್ಲ. ಪಾಂಡವರನ್ನೆಲ್ಲಾ ಒಟ್ಟಿಗೆ ನಾಶ ಮಾಡಿಬಿಟ್ಟರೆ ತಾವು ಅಣ್ಣತಮ್ಮಂದಿರು ರಾಜ್ಯವಾಳಿಕೊಂಡು ಸುಖವಾಗಿ ಇರಬಹುದು ಎಂಬ ಕೆಟ್ಟ ಯೋಚನೆ ಹೊಂದಿದ್ದನು.

ಯುಧಿಷ್ಠಿರನು ರಥದಲ್ಲಿ ಕುಳಿತು ಯುದ್ಧ ಮಾಡುವುದರಲ್ಲಿ ಗಟ್ಟಿಗನಾದನು. ನಕುಲ ಸಹದೇವರು ಖಡ್ಗ ವಿದ್ಯೆಯಲ್ಲಿ ಸಮರ್ಥರಾದರು. ಅರ್ಜುನನು ಎಲ್ಲ ವಿದ್ಯೆಗಳನ್ನೂ ಕಲಿತು, ಬಿಲ್ಲುವಿದ್ಯೆಯಲ್ಲಿ ಎಲ್ಲರನ್ನೂ ಮೀರಿಸಿದನು ; ದ್ರೋಣರ ಮೆಚ್ಚಿನ ಶಿಷ್ಯನಾದನು. ಇದು ದುರ್ಯೋಧನನ ಪಾಂಡವದ್ವೇಷವನ್ನು ಹೆಚ್ಚುಮಾಡಿತು.

"ಪಾಂಡವರಲ್ಲಿ ಹಿರಿಯನಾದ ಯುಧಿಷ್ಠಿರನೇ ರಾಜನಾಗಲು ತಕ್ಕವನು. ಅವನು ಧರ್ಮಶೀಲ ; ಸತ್ಯವಂತ ; ತಾಳ್ಮೆಯುಳ್ಳವನು ; ಗುರುಹಿರಿಯರಲ್ಲಿ ಭಕ್ತಿಯುಳ್ಳವನು. ಯಾರಿಗೂ ಕೆಡುಕನ್ನು ಬಗೆಯದೆ ಎಲ್ಲರಿಗೂ ಒಳ್ಳೆಯದನ್ನೇ ಮಾಡುವವನು. ಅವನು ರಾಜನಾದರೆ ಪ್ರಜೆಗಳೂ ನೆಮ್ಮದಿಯಿಂದಿರುತ್ತಾರೆ" ಎಂದು ಜನರೆಲ್ಲಾ ಧರ್ಮಪುತ್ರನ ಗುಣವನ್ನು ಕೊಂಡಾಡುತ್ತಿದ್ದರು.

ಜನರ ಮಾತು ದುರ್ಯೋಧನನ ಕಿವಿಗೂ ಬಿತ್ತು. ಅವನು ತನ್ನ ತಂದೆಯ ಬಳಿಗೆ ಹೋಗಿ, ಜನ ಹೇಳಿಕೊಳ್ಳುತ್ತಿರುವಂತೆ ರಾಜನಾಗಿಬಿಟ್ಟರೆ ತಾವೆಲ್ಲ ಪಾಂಡವರ ಅಡಿಯಾಳುಗಳಂತೆ ಇರಬೇಕಾಗುವುದೆಂದು ತನ್ನ ದುಃಖವನ್ನು ತೋಡಿಕೊಂಡನು.

ಯುಧಿಷ್ಠಿರನ ಸದ್ಗುಣಗಳೆಲ್ಲವನ್ನೂ ಧೃತರಾಷ್ಟ್ರನು ಅರಿತವನಾಗಿದ್ದನು. ಪಾಂಡುವಿನ ಬಳಿಕ ಅವನ ಹಿರಿಯ ಮಗನಾದ ಯುಧಿಷ್ಠಿರನೇ ರಾಜನಾಗುವುದು ನ್ಯಾಯ ಎಂದು ತಿಳಿಯಹೇಳಿದನು. ಆದರೆ ದುರ್ಯೋಧನನಿಗೆ ತಾನೇ ರಾಜನಾಗಬೇಕೆಂಬ ಹೆಬ್ಬಯಕೆ. ಅವನು ತಂದೆಯ ಮನಸ್ಸನ್ನು ಒಲಿಸಿಕೊಂಡು, ವಾರಣಾವತ ಎಂಬ ಪಟ್ಟಣದಲ್ಲಿ ಕಟ್ಟಿಸಿದ್ದ ಅರಗಿನ ಮನೆಯಲ್ಲಿ ಪಾಂಡವರನ್ನು ಸುಡಿಸುವ ಸನ್ನಾಹ ಮಾಡಿದನು. ಸಂಚಿನ ಸುಳಿವನ್ನು ಅರಿತಿದ್ದ ವಿದುರನು ವಾರಣಾವತಕ್ಕೆ ಹೋದ ಪಾಂಡವರನ್ನು ಮೊದಲೇ ಎಚ್ಚರಿಸಿದ್ದನು. ಅವರು ಅರಗಿನ ಮನೆಗೆ ತಾವೇ ಬೆಂಕಿ ಹಾಕಿ ಸುರಂಗಮಾರ್ಗದಿಂದ ಹೊರಬಿದ್ದರು.

ಪಾಂಡವರು ಅರಗಿನ ಮನೆಯಲ್ಲಿ ಭಸ್ಮವಾದರೆಂಬ ಸುದ್ದಿಯೇನೋ ಹಸ್ತಿನಾವತಿಗೆ ಮುಟ್ಟಿತು. ಹೀಗೆ ಅಪಾಯದಿಂದ ಪಾರಾಗಿ, ಅವರು ಕಾಡುಮೇಡು ಅಲೆಯುತ್ತ, ದಕ್ಷಿಣ ದಿಕ್ಕಿನ ಕಡೆಗೆ ಪ್ರಯಾಣ ಮಾಡಿ, ದಟ್ಟವಾದ ಒಂದು ಕಾಡನ್ನು ಸೇರಿದರು.

ಈಗ ತಾವು ಅನುಭವಿಸುತ್ತಿರುವ ರಾಜ್ಯವನ್ನು ಯುಧಿಷ್ಠಿರನು ಎಲ್ಲಿ ಕಿತ್ತುಕೊಂಡು ಬಿಡುವನೋ ಎಂದು ದುರ್ಯೋಧನನ ಭಯ. ಅವರನ್ನು ಹೇಗಾದರೂ ಮಾಡಿ ತೀರಿಸಿಬಿಡಬೇಕೆಂದು ಅವನು ಆಲೋಚಿಸಿದನು. ಮಗನ ಇಷ್ಟ ನಡೆಯಲಿ ಎಂದು ಒಳಗೊಳಗೆ ಧೃತರಾಷ್ಟ್ರನ ಹಂಬಲ. ಆದರೆ, ಭೀಷ್ಮ ವಿದುರರಂತಹ ಹಿರಿಯರು ಹೇಳಿದ ಬುದ್ಧಿವಾದವನ್ನು ಮೀರುವುದಕ್ಕೂ ಅವನಿಗೆ ಇಷ್ಟವಿರಲಿಲ್ಲ. ಹಾಗೂ ಹೀಗೂ ತೂಗಾಡಿ, ಪಾಂಡವರನ್ನು ಪಾಂಚಾಲ ನಗರದಿಂದ ಹಸ್ತಿನಾವತಿಗೆ ಕರೆಸಿಕೊಂಡನು ; ಅವರಿಗೆ ಅರ್ಧ ರಾಜ್ಯವನ್ನು ಕೊಡಿಸಿ, ಖಾಂಡವಪ್ರಸ್ಥವೆಂಬ ಪ್ರದೇಶದಲ್ಲಿ ಅವರನ್ನು ನೆಲೆಗೊಳಿಸಿದನು. ಅಲ್ಲಿ ಪಾಂಡವರು ಇಂದ್ರಪ್ರಸ್ಥವೆಂಬ ಸೊಗಸಾದ ನಗರವನ್ನು ಕಟ್ಟಿಸಿಕೊಂಡು ನೆಮ್ಮದಿಯಿಂದ ಇದ್ದರು.

**ದಾಳ ಅಪಮಾನಕ್ಕೆ,**
**ಕಾಡಿಗೆ ಉರುಳಿಸಿತು.**

ಯುಧಿಷ್ಠಿರನು ತಮ್ಮಂದಿರ ಸಹಾಯದಿಂದ ಸಮಸ್ತ ರಾಜರನ್ನೂ ಗೆದ್ದು, ವೈಭವದಿಂದ ರಾಜಸೂಯ ಯಾಗವನ್ನು ನೆರವೇರಿಸಿದನು. ಯಾದವರು, ಕೌರವರು ಮುಂತಾಗಿ ರಾಜಾಧಿರಾಜರೆಲ್ಲ ಯಾಗಕ್ಕೆ ಬಂದಿದ್ದರು. ಯುಧಿಷ್ಠಿರನು ಶ್ರೀಕೃಷ್ಣನಿಗೆ ಅಗ್ರಪೂಜೆ ಮಾಡಿದ ಮೇಲೆ, ಯಾಗಕ್ಕೆ ಬಂದಿದ್ದ ಅತಿಥಿಗಳೆಲ್ಲ ತಮ್ಮ ತಮ್ಮ ಸ್ಥಳಗಳಿಗೆ ಹಿಂದಿರುಗಿದರು. ದುರ್ಯೋಧನ ಶಕುನಿಯರಿಬ್ಬರು ಮಾತ್ರ ಉಳಿದುಕೊಂಡರು. ಯಾಗದ ಅತಿಥಿಗಳಿಗಾಗಿ ಯುಧಿಷ್ಠಿರನು ಕಟ್ಟಿಸಿದ್ದ ರಾಜಭವನದಲ್ಲಿ ದುರ್ಯೋಧನನು ಒಮ್ಮೆ ಕೊಳದಂತೆ ಕಾಣುತ್ತಿದ್ದ ಹೊಳಪು ನೆಲದ ಮೇಲೆ ಎಚ್ಚರಿಕೆಯಿಂದ ನಡೆಯುತ್ತ, ಕೊಳವೇ ಸಿಕ್ಕಿದಾಗ ನೆಲವೆಂದು ಭ್ರಮಿಸಿ ಅದರಲ್ಲಿ ಬಿದ್ದುಬಿಟ್ಟನು. ಅಲ್ಲಿದ್ದ ಭೀಮಾರ್ಜುನರು ಗೊಳ್ಳನೆ ನಕ್ಕರು. ಇದರಿಂದ ಅವನಿಗೆ ಅಪಮಾನವಾದಂತೆ ಆಯಿತು. ಪಾಂಡವರು ರಾಜಸೂಯ ಯಾಗವನ್ನು ಮಾಡಿ ಏಳಿಗೆ ಹೊಂದಿದ್ದುದನ್ನು ಕಂಡು ಅವನಿಗೆ ಮೊದಲೇ ಹೊಟ್ಟೆಯಕಿಚ್ಚು ; ಈಗ ಆದ ಅಪಮಾನದಿಂದ ಅದಕ್ಕೆ ಗಾಳಿ ಬೀಸಿದಂತಾಯಿತು. ಅವನು ತನ್ನ ದುಃಖವನ್ನು ಶಕುನಿಯ ಮುಂದೆ ಹೇಳಿಕೊಂಡನು. ಶಕುನಿ – "ಯುಧಿಷ್ಠಿರನನ್ನು ಗೆದ್ದರೆ ಪಾಂಡವರನ್ನು ಗೆದ್ದ ಹಾಗೆಯೆ. ಅವನಿಗೆ ಪಗಡೆಯ ಆಟ ಎಂದರೆ ಪ್ರಾಣ. ಆದರೆ ಆಡುವುದು ಗೊತ್ತಿಲ್ಲ. ಅವನನ್ನು ಪಗಡೆಯ ಜೂಜಿಗೆ ಒಪ್ಪಿಸಿ ಕರೆದು ತಾ. ನಾನು ಅವನನ್ನು ಸೋಲಿಸಿ, ಅವನ ಐಶ್ವರ್ಯವನ್ನೂ ರಾಜ್ಯವನ್ನೂ ಗೆದ್ದು ಕೊಡುತ್ತೇನೆ" ಎಂದು ಉಪಾಯ ಹೇಳಿಕೊಟ್ಟನು.

ದುರ್ಯೋಧನನು ತಂದೆಯ ಬಳಿಗೆ ಹೋಗಿ ತನ್ನ ಸಂಕಟವನ್ನು

ಕುಂತಿ ಯುಧಿಷ್ಠಿರನನ್ನು ಕುರಿತು – "ಮಗೂ, ನೀವು ಅನ್ನ ತಂದಿರುವಿರಿ ಎಂದು ತಿಳಿದು ನಾನು ಹಾಗೆ ಹೇಳಿಬಿಟ್ಟೆ. ಐವರು ಒಬ್ಬಳನ್ನು ಮದುವೆಯಾಗುವುದು ಅಧರ್ಮ. ಯುಧಿಷ್ಠಿರಾ, ಈ ಸಮಸ್ಯೆಯನ್ನು ನೀನೇ ಬಗೆಹರಿಸಬೇಕು" ಎಂದಳು.

ಯುಧಿಷ್ಠಿರ – "ಅಮ್ಮಾ, ತಾಯಿಯ ಮಾತು ಮೀರತಕ್ಕದ್ದಲ್ಲ. ಆದರೂ, ಅವಳನ್ನು ಗೆದ್ದವನು ಅರ್ಜುನ. ಅವನು ಅವಳನ್ನು ಮದುವೆಯಾಗಲಿ. ಇದು ನ್ಯಾಯ."

ಅರ್ಜುನ – "ಅಣ್ಣಾ, ಇದು ಲೋಕದ ನ್ಯಾಯ. ಆದರೆ ಧರ್ಮವಲ್ಲ. ನನ್ನನ್ನು ಅಧರ್ಮಕ್ಕೆ ಗುರಿಮಾಡುವೆಯಾ? ತಾಯಿಯ ಮಾತನ್ನು ನಡೆಸಬೇಕಾದದ್ದು ಎಲ್ಲಕ್ಕಿಂತ ಹಿರಿಯ ಧರ್ಮ. ನಿಜವಾದ ಸಂಗತಿ ತಿಳಿಯದೆ ಆಡಿದ ಮಾತು, ದಿಟ. ನಾವು ಕೂಡ ಹಿಂದೆ ಮುಂದೆ ನೋಡದೆ ಹೆಣ್ಣನ್ನು ಭಿಕ್ಷೆ ಎಂದು ವಿನೋದಕ್ಕೆ ಹೇಳಿಬಿಟ್ಟೆವು. ತಾಯಿಯ ಮಾತು ನಿರ್ಮಲವಾದ ಹೃದಯದಿಂದ ಬಂದದ್ದು. ಆದ್ದರಿಂದ, ಅದರಂತೆ ನಾವು ನಡೆಯಬೇಕು."

ಯುಧಿಷ್ಠಿರ – "ನಿನ್ನ ಅಭಿಪ್ರಾಯ ತಿಳಿದ ಹಾಗಾಯಿತು. ದ್ರೌಪದಿ ನಿನ್ನ ಹೆಂಡತಿಯಾಗಬೇಕಾದವಳು. ಅವಳನ್ನೂ ಒಂದು ಮಾತು ಕೇಳಬೇಕಾದದ್ದು ಅಗತ್ಯ."

ಹೀಗೆ ಹೇಳಿ, ಯುಧಿಷ್ಠಿರನು "ನಿನ್ನ ಇಷ್ಟ ಏನು?" ಎಂದು ಕೇಳುವಂತೆ ದ್ರೌಪದಿಯ ಕಡೆ ತಿರುಗಿ ನೋಡಿದನು. ದ್ರೌಪದಿ ಮಾತನಾಡಲಿಲ್ಲ; ಪಂಚಪಾಂಡವರ ಮುಖವನ್ನು ಒಂದು ಸಲ ನೋಡಿ, ಮುಗುಳುನಗೆ ಬೀರಿದಳು; ನಾಚಿಕೆಯಿಂದ ತಲೆ ತಗ್ಗಿಸಿದಳು.

ಯುಧಿಷ್ಠಿರನು ದ್ರೌಪದಿಯ ಮನಸ್ಸನ್ನು ಅರಿತನು. ತಾಯಿಯ ಕಡೆ ತಿರುಗಿ, "ಅಮ್ಮಾ, ನಿನ್ನ ಮಾತನ್ನು ಸುಳ್ಳಾಗಿಸಲು ನಾವು ಯಾರೂ ಸಿದ್ಧರಿಲ್ಲ. ನಮ್ಮೆಲ್ಲರ ಪತ್ನಿಯಾಗಿರಲು ದ್ರೌಪದಿಯೂ ಒಪ್ಪಿದ ಹಾಗೆ ಕಾಣುತ್ತದೆ. ಅವಳು ಐವರಿಗೂ ಹೆಂಡತಿಯಾಗಿದ್ದುಕೊಳ್ಳಲಿ" ಎಂದು ತನ್ನ ನಿಶ್ಚಯವನ್ನು ತಿಳಿಸಿದನು.

ಬ್ರಾಹ್ಮಣವೇಷದಲ್ಲಿ ಬಂದಿದ್ದವರು ಯಾರೆಂಬುದು ದ್ರುಪದನಿಗೂ ಗೊತ್ತಾಯಿತು. ಅವನು ವಿಧಿಪೂರ್ವಕವಾಗಿ ದ್ರೌಪದಿಯನ್ನು ಐದು ಮಂದಿಗೂ ಮದುವೆ ಮಾಡಿಕೊಟ್ಟನು. ಮದುವೆಗೆ ಕೌರವರೂ ಹೋಗಿದ್ದರು. ಪಾಂಡವರಿಗೆ ದ್ರುಪದರಾಜನಂತಹ ಪ್ರಬಲನಾದ ದೊರೆಯ ಸಂಬಂಧ ದೊರೆತದ್ದು ದುರ್ಯೋಧನನ ಹೊಟ್ಟೆಯ ಕಿಚ್ಚಿಗೆ ತುಪ್ಪ ಎರೆದ ಹಾಗಾಯಿತು ; ಅವರನ್ನು ಕಂಡು ಭಯವೂ ಹೆಚ್ಚಿತು. ದ್ರುಪದ, ಕೃಷ್ಣ, ಬಲರಾಮ ಮುಂತಾದವರ ನೆರವಿನಿಂದ

ಧೃತರಾಷ್ಟ್ರನನ್ನು ಬೇಡಿಕೊಂಡನು. ಅವನ ಬುದ್ಧಿವಾದ ವ್ಯರ್ಥವಾಯಿತು. ಯುಧಿಷ್ಠಿರನು ಪಣದ ಮೇಲೆ ಪಣ ಒಡ್ಡುತ್ತ, ತನ್ನ ಸಕಲ ಐಶ್ವರ್ಯವನ್ನೂ ತಮ್ಮಂದಿರನ್ನೂ ಸೋತನು ; ಕೊನೆಗೆ ತನ್ನನ್ನೇ ಪಣವಾಗಿ ಒಡ್ಡಿ ಸೋತನು.

ಆಗ, ಮಾಯಾವಿಯೂ ನೀಚನೂ ಆದ ಶಕುನಿ – "ಯುಧಿಷ್ಠಿರಾ, ನಿನ್ನ ಬಳಿ ಒಂದು ರತ್ನ ಉಳಿದಿದೆ ; ಸ್ತ್ರೀರತ್ನ, ದ್ರೌಪದಿ. ಅವಳನ್ನು ಒಡ್ಡಿ, ಈ ಆಟವನ್ನಾದರೂ ಗೆಲ್ಲು ; ಸೋತಿರುವುದನ್ನೆಲ್ಲಾ ಹಿಂದಕ್ಕೆ ಪಡೆದುಕೋ" – ಎಂದು ಆಶೆ ಹುಟ್ಟಿಸಿದನು.

ಯುಧಿಷ್ಠಿರ ಒಂದು ಕ್ಷಣ ಮೌನವಾಗಿದ್ದ ; "ಹೌದು, ದ್ರೌಪದಿಯನ್ನು ಒಡ್ಡಿ, ಸೋತಿರುವುದನ್ನೆಲ್ಲಾ ಏಕೆ ಮರಳಿ ಪಡೆಯಬಾರದು?" ಎಂದು ಜೂಜುಕೋರರಿಗೆ ಸಹಜವಾದ ರೀತಿಯಲ್ಲಿ ಆಲೋಚಿಸಿ, "ಇದೋ, ದ್ರೌಪದಿಯನ್ನು ಪಣವಾಗಿ ಒಡ್ಡಿದ್ದೇನೆ" ಎಂದು ಘೋಷಿಸಿದನು. ಜೂಜಿನ ಸಭೆ 'ಪರಿಣಾಮ ಏನಾಗುವುದೋ' ಎಂದು ನಿಬ್ಬೆರಗಾಗಿ ನಿರುಕಿಸುತ್ತ ಕುಳಿತಿತ್ತು. ಕೆಲವರಿಗೆ ಆಶ್ಚರ್ಯ. ಕೆಲವರಿಗೆ, "ಧರ್ಮರಾಜ ಎಂಥ ಕೆಲಸ ಮಾಡಿಬಿಟ್ಟ!" ಎಂದು ಕೋಪ. ಇನ್ನು ಕೆಲವರಿಗೆ, "ಅಯ್ಯೋ, ಎಂಥ ಕೇಡುಗಾಲ ಬಂತು" ಎಂದು ದುಃಖ. ಭೀಷ್ಮ ದ್ರೋಣರು ಕಂಗೆಟ್ಟರು ; ವಿದುರ ದಿಕ್ಕುಕಾಣದಾದ. ದುರ್ಯೋಧನಾದಿಗಳಿಗೆ ಮಾತ್ರ ಒಳಗೊಳಗೇ ಹಿಗ್ಗು.

ಶಕುನಿ ದಾಳ ಉರುಳಿಸಿದನು ; "ಗೆದ್ದೆ" ಎಂದು ಸಾರಿದನು.

ದುರ್ಯೋಧನನು ವಿದುರನ ಕಡೆ ತಿರುಗಿ, "ವಿದುರ, ನೀನು ಹೋಗಿ ದ್ರೌಪದಿಯನ್ನು ಕರೆದುಕೊಂಡು ಬಾ, ಇನ್ನು ಅವಳು ನಮ್ಮ ದಾಸಿ!" ಎಂದನು. ಈ ಕೀಳು ಕೆಲಸ ಮಾಡಲು ವಿದುರನು ಒಪ್ಪಲಿಲ್ಲ. ಆಗ, ದುರ್ಯೋಧನನು ಪ್ರಾತಿಕಾಮಿ ಎಂಬ ತನ್ನ ಸಾರಥಿಯ ಮಗನನ್ನು ಕಳುಹಿಸಿದನು.

ಪ್ರಾತಿಕಾಮಿ ದ್ರೌಪದಿಯ ಬಳಿಗೆ ಹೋಗಿ, "ಅಮ್ಮಾ, ಯುಧಿಷ್ಠಿರನು ಜೂಜಿನಲ್ಲಿ ನಿನ್ನನ್ನು ಸೋತಿದ್ದಾನೆ. ನೀನು ಈಗ ಕೌರವರ ದಾಸಿಯಂತೆ. ಬಾ ತಾಯಿ" ಎಂದನು. ದ್ರೌಪದಿ ಬೆರಗಾಗಿ, ನಿಜಸಂಗತಿ ತಿಳಿದ ಮೇಲೆ, ಧರ್ಮಪುತ್ರನು ತನ್ನನ್ನು ಸೋತದ್ದು ಸರಿಯೇ ಎಂಬ ಪ್ರಶ್ನೆಗೆ ಸಭಿಕರಿಂದ ಉತ್ತರ ತರುವಂತೆ ಪ್ರಾತಿಕಾಮಿಯನ್ನು ಕಳಿಸಿದಳು. "ದ್ರೌಪದಿಯೇ ಬಂದು ಸಭೆಯಲ್ಲಿ ಕೇಳಲಿ" ಎಂದು ದುರ್ಯೋಧನನು ಪ್ರಾತಿಕಾಮಿಯನ್ನು ಮತ್ತೆ ಕಳಿಸಿ, ದ್ರೌಪದಿಯನ್ನು ಕರೆಸಿಕೊಂಡನು. ಅವನು ದೈವದ ಮೇಲೆ ಭಾರ ಹಾಕಿ, ಉಟ್ಟಸೀರೆಯಲ್ಲಿ ಸಭೆಗೆ ಬಂದು ದೂರದಲ್ಲಿ ನಿಂತಳು. ಅಣ್ಣನ ಅಪ್ಪಣೆಯಂತೆ ದುಶ್ಯಾಸನನು

ಹೇಳಿಕೊಂಡನು; ಶಕುನಿ ಹೇಳಿಕೊಟ್ಟ ಉಪಾಯವನ್ನೂ ತಿಳಿಸಿದನು. ಧರ್ಮರಾಜನನ್ನು ಪಗಡೆಯ ಜೂಜಿಗೆ ಕರೆಸಬೇಕೆಂದು ಹಟ ಹಿಡಿದನು; 'ಹಾಗೆ ಮಾಡದಿದ್ದರೆ ಸಾಯುತ್ತೇನೆ' ಎಂದು ಹೆದರಿಸಿದನು. ಮಗನ ಮೇಲಿನ ಪ್ರೀತಿಯಿಂದ ಧೃತರಾಷ್ಟ್ರ ಧರ್ಮರಾಜನನ್ನು ಪಗಡೆಯ ಆಟಕ್ಕೆ ಕರೆಸಲು ಒಪ್ಪಿಕೊಂಡನು.

ಪಾಂಡವರನ್ನು ಜೂಜಿಗೆ ಕರೆಯುವ ಭಾರ ವಿದುರನ ಮೇಲೆ ಬಿದ್ದಿತು. ವಿದುರನು ಮನಸ್ಸಿಲ್ಲದ ಮನಸ್ಸಿನಿಂದ ಇಂದ್ರಪ್ರಸ್ಥಕ್ಕೆ ಹೋಗಿ,ತಾನು ಬಂದ ಕಾರ್ಯದ ವಿಚಾರವನ್ನು ಯುಧಿಷ್ಠಿರನಿಗೆ ತಿಳಿಸಿದನು; "ಜೂಜು ಕೆಟ್ಟದ್ದೆಂದು ನಾನು ಬಲ್ಲೆ. ನಿನಗೂ ಹಾಗೆಯೇ ಹೇಳುತ್ತೇನೆ. ಆದರೆ, ಧೃತರಾಷ್ಟ್ರನ ಕೋರಿಕೆಯಂತೆ ನಿನ್ನನ್ನು ಕರೆಯಲು ಬಂದೆ. ಏನು ಮಾಡಿದರೆ ಒಳ್ಳೆಯದೋ ಹಾಗೆ ಮಾಡು" ಎಂದು ವಿದುರನು ಹೇಳಿದನು.

ಯುಧಿಷ್ಠಿರ – "ಕೌರವರ ಕಡೆ ಜೂಜು ಆಡುವವರು ಯಾರು?"

ವಿದುರ – "ಮುಖ್ಯವಾಗಿ ಆಡುವವನು ಶಕುನಿ. ಇತರರೂ ಆಡುತ್ತಾರೆ."

ಶಕುನಿಯ ಹೆಸರನ್ನು ಕೇಳಿದ ಕೂಡಲೆ ಧರ್ಮಪುತ್ರನಿಗೆ ಚೇಳು ಕುಟುಕಿದಂತಾಯಿತು. ಜೂಜಿನ ಪರಿಣಾಮ ಒಳ್ಳೆಯದಾಗುವುದಿಲ್ಲ ಎಂದು ತೋರಿತು.

ಯುಧಿಷ್ಠಿರ – "ಶಕುನಿ ಪಕ್ಕಾ ಮೋಸಗಾರ. ಅವನ ಸಂಗಡ ಆಡುವುದಕ್ಕೆ ನನಗೆ ಇಷ್ಟವಿಲ್ಲ. ಆದರೆ ಧೃತರಾಷ್ಟ್ರ ಮಹಾರಾಜನ ಅಪ್ಪಣೆಯನ್ನು ಮೀರಲಾರೆ. ನಾನಾಗಿ ಜೂಜಾಡುವುದಿಲ್ಲ ; ಜೂಜಿಗೆ ಕರೆದರೆ ಒಲ್ಲೆ ಎನ್ನುವುದಿಲ್ಲ. ಇದು ಕ್ಷತ್ರಿಯ ಧರ್ಮ ; ನನ್ನ ವ್ರತ. ಆದ್ದರಿಂದ, ಜೂಜಿಗೆ ಬರುತ್ತೇನೆ" – ಎಂದು ಜೂಜಿಗೆ ಹೋಗಲು ಒಪ್ಪಿಕೊಂಡನು ; ತಮ್ಮಂದಿರು ಮತ್ತು ದ್ರೌಪದಿಯೊಂದಿಗೆ ಹಸ್ತಿನಾವತಿಗೆ ಹೋದನು. ಅಲ್ಲಿ ಆಟ ಮೊದಲಾಯಿತು.

ಆಟಕ್ಕೆ ಮುಂಚೆ ಪಣ ಒಡ್ಡಬೇಕು. ದುರ್ಯೋಧನ, ಯುಧಿಷ್ಠಿರ ಇಬ್ಬರೂ ರತ್ನದ ಒಡವೆಗಳನ್ನು ಪಣವಾಗಿ ಒಡ್ಡಿದರು. ಶಕುನಿ ದಾಳವನ್ನು ಉರುಳಿಸಿದನು; ಅವನು ಹೇಳಿದ ಗರ ಬಿದ್ದಿತು. ಶಕುನಿ ಗೆದ್ದನು. ಆಟ ಸಾಗಿತು. ಯುಧಿಷ್ಠಿರನು ಸಾವಿರ ಸಾವಿರ ಹೊನ್ನು, ರಥ, ಆನೆ, ಕುದುರೆ, ದಾಸದಾಸಿಯರು – ಇವೆಲ್ಲವನ್ನೂ ಪಣವಾಗಿ ಒಡ್ಡಿ, ಸೋತನು.

ಯುಧಿಷ್ಠಿರ ಸೋಲುತ್ತ ಬಂದುದನ್ನು ಕಂಡು, 'ಇದು ಏಕೋ ವಿಪರೀತಕ್ಕೆ ಇಟ್ಟುಕೊಂಡಿತು' ಎಂದು ವಿದುರನಿಗೆ ದಿಗಿಲಾಯಿತು ; ಆಟವನ್ನು ನಿಲ್ಲಿಸುವಂತೆ

ಗುಣವುಳ್ಳವನು. ಆದ್ದರಿಂದ ನನ್ನ ಮಕ್ಕಳು ನಿಮ್ಮ ವಿಚಾರದಲ್ಲಿ ತೋರಿಸಿದ ದುಷ್ಟತನವನ್ನು ಮರೆತುಬಿಡು. ಇಂದ್ರಪ್ರಸ್ಥಕ್ಕೆ ಹೋಗಿ ರಾಜ್ಯವಾಳಿಕೊಂಡು ಸುಖವಾಗಿರಿ'' ಎಂದು ಒಳ್ಳೆಯ ಮಾತಾಡಿ ಪಾಂಡವರನ್ನು ಕಳಿಸಿಕೊಟ್ಟನು. ಪಾಂಡವರು ಇಂದ್ರಪ್ರಸ್ಥಕ್ಕೆ ಹಿಂದಿರುಗಿದರು.

ದುಷ್ಟ ಚತುಷ್ಟಯರು ಎನಿಸಿದ ದುರ್ಯೋಧನ, ದುಶ್ಶಾಸನ, ಕರ್ಣ, ಶಕುನಿ ಇವರುಗಳಿಗೆ ಧೃತರಾಷ್ಟ್ರನು ಮಾಡಿದ ಏರ್ಪಾಡು ಸರಿಬೀಳಲಿಲ್ಲ. ದುರ್ಯೋಧನನು ತನ್ನ ಮೂವರೂ ಸಂಗಡಿಗರೊಂದಿಗೆ ಧೃತರಾಷ್ಟ್ರನ ಬಳಿಗೆ ಹೋಗಿ, "ಪಾಂಡವರನ್ನು ಮತ್ತೆ ಜೂಜಿಗೆ ಕರೆಯೋಣ. ಅವರು ಜೂಜಿನಲ್ಲಿ ಸೋತರೆ, ಹನ್ನೆರಡು ವರ್ಷ ವನವಾಸ ಮಾಡಬೇಕು. ಒಂದು ವರ್ಷ ಅಜ್ಞಾತವಾಸ. ಅಜ್ಞಾತ ವಾಸದಲ್ಲಿ ಅವರನ್ನು ಕಂಡುಹಿಡಿದರೆ, ಮತ್ತೆ ಹನ್ನೆರಡು ವರ್ಷ ವನವಾಸ, ಇದು ಜೂಜಿನ ಕಟ್ಟಳೆ'' ಎಂದು ಶಕುನಿ ಹೇಳಿಕೊಟ್ಟಿದ್ದ ಉಪಾಯವನ್ನು ವಿವರಿಸಿ, ತಂದೆಯನ್ನು ಒಲಿಸಿಕೊಂಡನು.

ಜೂಜಾಡಲು ಧೃತರಾಷ್ಟ್ರನಿಂದ ಮತ್ತೆ ಪಾಂಡವರಿಗೆ ಕರೆ ಹೋಯಿತು. ಸುಖದುಃಖಗಳು ಒದಗುವುದು ದೈವ ಸಂಕಲ್ಪದಿಂದ ; ಅದನ್ನು ಮೀರಲು ಸಾಧ್ಯವಿಲ್ಲ ; ಅಲ್ಲದೆ, ಹಿರಿಯನಾದ ಧೃತರಾಷ್ಟ್ರನ ಇಷ್ಟದಂತೆ ನಡೆಯುವುದು ಕರ್ತವ್ಯ ಎಂದು ಆಲೋಚಿಸಿ, ಯುಧಿಷ್ಠಿರನು ಪಗಡೆಯಾಟಕ್ಕೆ ಒಪ್ಪಿಕೊಂಡನು. ಮೊದಲಿನ ಹಾಗೆಯೇ ಹಸ್ತಿನಾವತಿಯಲ್ಲಿ ಜೂಜು ನಡೆಯಿತು. ಯುಧಿಷ್ಠಿರನು ಸೋತನು ; ಜೂಜಿನ ಗೊತ್ತುಪಾಡಿನಂತೆ ತಮ್ಮಂದಿರನ್ನೂ ದ್ರೌಪದಿಯನ್ನೂ ಕೂಡಿಕೊಂಡು ಕಾಡಿಗೆ ತೆರಳಿದನು. ಕುಂತಿ ಮಾತ್ರ ವಿದುರನ ಮನೆಯಲ್ಲಿ ಉಳಿದುಕೊಂಡಳು.

**'ನನಗೆ ಧರ್ಮ**
**ಪ್ರಾಣಕ್ಕಿಂತ ಹೆಚ್ಚು'**

ವನವಾಸಕ್ಕೆ ತೆರಳಿದ ಪಾಂಡವರನ್ನು ಪುರಜನರು ದುಃಖದಿಂದ ಬೀಳ್ಕೊಟ್ಟರು. ಯುಧಿಷ್ಠಿರನು ಹಿಂದಿರುಗುವಂತೆ ಒತ್ತಾಯಮಾಡದೆ ಹೋಗಿದ್ದರೆ, ಅವರು ಅವನನ್ನು ಕಾಡಿಗೆ ಹಿಂಬಾಲಿಸಿ ಹೋಗುವುದಕ್ಕೂ ಸಿದ್ಧವಾಗಿದ್ದರು. ಯುಧಿಷ್ಠಿರ ಎಂದರೆ, ಪುರಜನಕ್ಕೆ ಅಷ್ಟು ಪ್ರೀತಿ ; ಅಪಾರ ಗೌರವ.

ದ್ವೈತವನದಲ್ಲಿದ್ದಾಗ ಒಂದು ದಿನ ಪಾಂಡವರು ತಮ್ಮ ಸ್ಥಿತಿಗತಿಯನ್ನು ಕುರಿತು ಮಾತಾಡುತ್ತಿದ್ದರು. ಆಗ ದ್ರೌಪದಿ, ಯುಧಿಷ್ಠಿರನ ಸಹನೆ ಸಜ್ಜನಿಕೆ ದಯೆ ದಾಕ್ಷಿಣ್ಯ ಮುಂತಾದ ಗುಣಗಳು ಸ್ವಲ್ಪ ಅತಿಯಾದುವೆಂದು ಮೃದುವಾಗಿ

ಅವಳ ಕೂದಲನ್ನು ಹಿಡಿದೆಳೆದು ಸಭೆಯ ಮಧ್ಯದಲ್ಲಿ ನಿಲ್ಲಿಸಿದನು. ದ್ರೌಪದಿ ಕೋಪದಿಂದಲೂ ದುಃಖದಿಂದಲೂ ತನ್ನ ಪತಿಗಳ ಕಡೆ ತಿರುಗಿ ನೋಡಿದಳು. ಧರ್ಮಪುತ್ರನು ಸುಮ್ಮನಿದ್ದನು ; ಅವನ ತಮ್ಮಂದಿರಿಗೆ ಕೋಪ ಉಕ್ಕೇರಿತು. ಅಪ್ಪಣೆಗಾಗಿ ಅಣ್ಣನ ಮುಖವನ್ನು ನೋಡಿದರು. ಯುಧಿಷ್ಠಿರನು ಶಾಂತವಾಗಿಯೆ ಇದ್ದನು. ಭೀಮನು ಕೋಪವನ್ನು ತಡೆಯಲಾಗದೆ, ಬಾಗಿಲಿನ ಭಾರಿ ಅಗಣಿಯನ್ನು ದುರುಗುಟ್ಟಿ ನೋಡಿದನು. ತಮ್ಮನ ಮನಸ್ಸು ಕೆರಳಿದೆ ಎಂದು ಅರಿತ ಯುಧಿಷ್ಠಿರನು ಸಹನೆಯಿಂದಿರುವಂತೆ ಅವನಿಗೆ ಸನ್ನೆ ಮಾಡಿದನು. ಆದರೆ, ಕೇಡುಗರಾದ ಕೌರವ ಸೋದರರು ಸುಮ್ಮನಿರಬೇಕಲ್ಲ. ದುಶ್ಯಾಸನನು ದ್ರೌಪದಿಯ ಸೀರೆಯನ್ನು ಸೆಳೆಯತೊಡಗಿದನು ; ದೈವ ಕೃಪೆಯಿಂದ ಅದು ಅಕ್ಷಯವಾಯಿತು. ಇತ್ತ ದುರ್ಯೋಧನನು ದ್ರೌಪದಿಯನ್ನು ದಾಸಿ ಎಂದು ಕರೆದು, ತನ್ನ ತೊಡೆಯನ್ನು ತಟ್ಟಿ ತೋರಿಸಿದನು. ದ್ರೌಪದಿ ಕೆರಳಿ, "ನಿನ್ನ ತೊಡೆಯಿಂದಲೇ ನಿನಗೆ ಮರಣವಾಗಲಿ" ಎಂದು ಶಪಿಸಿದಳು.

ಆಗ ತುಂಬಿದ ಸಭೆಯಲ್ಲಿ ದ್ರೌಪದಿಗಾದ ಅಪಚಾರವನ್ನು ಕಂಡು ಭೀಮನ ಸಹನೆ ಮೀರಿತು. ಅವನು ಸಿಂಹದಂತೆ ಕೆರಳಿ ಗರ್ಜಿಸಿ, "ಯುದ್ಧದಲ್ಲಿ ದುಶ್ಯಾಸನನ ಬಸಿರನ್ನು ಬಗಿದು, ಅವನ ರಕ್ತವನ್ನು ಕುಡಿಯುತ್ತೇನೆ. ದುರ್ಯೋಧನನ ತೊಡೆಯನ್ನು ಗದೆಯಿಂದ ಮುರಿಯುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು. ಆಗ ಅರಮನೆಯಲ್ಲಿ ಅಪಶಕುನಗಳಾದವು. ಇದನ್ನು ಕಂಡು, ತನ್ನ ಮಕ್ಕಳಿಗೆ ಕೇಡು ಕಾದಿದೆ ಎಂದು ಧೃತರಾಷ್ಟ್ರನು ಹೆದರಿದನು. ಭೀಷ್ಮನೂ ವಿದುರನೂ– "ದ್ರೌಪದಿಯನ್ನು ಸಮಾಧಾನಪಡಿಸು" ಎಂದು ಅವನಿಗೆ ಬುದ್ಧಿವಾದ ಹೇಳಿದರು. ಆಗ ಧೃತರಾಷ್ಟ್ರನು ದ್ರೌಪದಿಯನ್ನು ಬಳಿಗೆ ಕರೆದು, "ಅಮ್ಮಾ, ನೀನು ನನ್ನ ಮಗಳ ಸಮಾನ. ನಿನಗೆ ಇಷ್ಟ ಬಂದ ವರವನ್ನು ಕೇಳಿಕೋ, ಕೊಡುತ್ತೇನೆ" ಎಂದನು. ಐವರು ಪತಿಗಳಿಗೂ ಬಿಡುಗಡೆಯಾಗಲಿ, ಅವರ ರಥಗಳೂ ಆಯುಧಗಳೂ ಅವರಿಗೆ ಮತ್ತೆ ದೊರಕುವಂತಾಗಲಿ ಎಂದು ಎರಡು ವರಗಳನ್ನು ಕೇಳಿಕೊಂಡಳು. ಧೃತರಾಷ್ಟ್ರನು 'ಆಗಲಿ' ಎಂದು, ಇನ್ನೂ ಒಂದು ವರವನ್ನು ನೀಡಿದನು.

ಯುಧಿಷ್ಠಿರನು ಧೃತರಾಷ್ಟ್ರನ ಬಳಿಗೆ ಹೋಗಿ, "ಮಹಾರಾಜ, ನಿನ್ನ ಅಪ್ಪಣೆಯಂತೆ ನಡೆಯುತ್ತೇವೆ, ದಯವಿಟ್ಟು ಅಪ್ಪಣೆ ಮಾಡು" ಎಂದು ವಿನಯದಿಂದ ಕೇಳಿಕೊಂಡನು. ಧೃತರಾಷ್ಟ್ರನು, "ಯುಧಿಷ್ಠಿರಾ! ನೀನು ಅಜಾತಶತ್ರು ; ಜ್ಞಾನಿ ; ಧರ್ಮಸ್ವರೂಪವನ್ನು ಬಲ್ಲವನು ; ವಿನಯಶಾಲಿ ; ಕ್ಷಮಾಮೂರ್ತಿ ; ಶಾಂತ

ಪಾಂಡವರು ದ್ವೈತವನದಲ್ಲಿದ್ದಾಗ ಅವರು ಕಷ್ಟಪಡುವುದನ್ನು ನೋಡಿ ಸಂತೋಷಪಡಬೇಕೆಂದು ದುರ್ಯೋಧನನಿಗೆ ಆಸೆಯಾಯಿತು. ಅವನು ಸೇನಾಪರಿವಾರ ಸಮೇತನಾಗಿ ದ್ವೈತವನದ ಸಮೀಪಕ್ಕೆ ಬಂದನು. ಅಲ್ಲಿ ಕೆಲವರು ಗಂಧರ್ವರಿಗೂ ಕೌರವರಿಗೂ ಹೋರಾಟ ಮೊದಲಾಯಿತು. ದುರ್ಯೋಧನನೇ ಮೊದಲಾದವರು ಗಂಧರ್ವರ ಸೆರೆಯಾಳುಗಳಾದರು. ಕೌರವನ ಪರಿವಾರದವರು ಯುಧಿಷ್ಠಿರನ ಬಳಿಗೆ ಬಂದು ಮೊರೆಯಿಟ್ಟರು. "ಕೌರವರಿಗೆ ತಕ್ಕ ಶಾಸ್ತಿಯಾಯಿತು. ಅವರಿಗೆ ಸಹಾಯ ಮಾಡಕೂಡದು" ಎಂದು ಭೀಮನು ಅಡ್ಡಿಪಡಿಸಿದನು. ಯುಧಿಷ್ಠಿರನು, "ಸಹಾಯ ಕೇಳಿ ಬಂದವರಿಗೆ ಸಹಾಯ ಮಾಡಬೇಕಾದದ್ದು ಕ್ಷತ್ರಿಯಧರ್ಮ. ನಾವೂ ಕೌರವರೂ ದಾಯಾದಿಗಳು. ಆದ್ದರಿಂದ ರಾಜ್ಯಕ್ಕಾಗಿ ಅವರು ನಮ್ಮ ಮೇಲೆ ಹಗೆತನ ಬೆಳೆಸಿದರು. ಇಷ್ಟೇ ಹೊರತು, ಹೊರಗಿನ ಶತ್ರುಗಳ ವಿಷಯದಲ್ಲಿ ನಾವೂ ಅವರೂ ಒಂದೇ ಕುಟುಂಬ" ಎಂದು ಅವನಿಗೆ ತಿಳಿವಳಿಕೆ ಕೊಟ್ಟು, ಕೌರವನನ್ನು ಸೆರೆಯಿಂದ ಬಿಡಿಸುವಂತೆ ತಮ್ಮಂದಿರಿಗೆ ಹೇಳಿದನು. ಅದರಂತೆ ಅವರು ಹೋಗಿ, ಗಂಧರ್ವರೊಂದಿಗೆ ಹೋರಾಡಿ ಕೌರವರನ್ನು ಬಿಡುಗಡೆ ಮಾಡಿದರು.

### ಯಕ್ಷಪ್ರಶ್ನೆ

ಪಾಂಡವರು ದ್ವೈತವನದಲ್ಲಿದ್ದಾಗ ಒಂದು ವಿಚಿತ್ರ ಸಂಗತಿ ನಡೆಯಿತು. ಒಂದು ದಿನ ಬ್ರಾಹ್ಮಣನೊಬ್ಬನು ಪಾಂಡವರಿದ್ದಲ್ಲಿಗೆ ಬಂದನು. ಹೋಮಕಾರ್ಯಕ್ಕೆ ಅಗ್ನಿ ಉತ್ಪತ್ತಿ ಮಾಡುವ ತನ್ನ ಅರಣಿ ಕಡ್ಡಿಗಳನ್ನು ಜಿಂಕೆಯೊಂದು ಕೊಂಬಿಗೆ ಸಿಕ್ಕಿಸಿಕೊಂಡು ಓಡಿಹೋಯಿತೆಂದೂ, ಅವನು ತಂದುಕೊಡಬೇಕೆಂದೂ ಬೇಡಿದನು. ಬ್ರಾಹ್ಮಣರಲ್ಲಿ ಅಪಾರ ಭಕ್ತಿಯುಳ್ಳ ಯುಧಿಷ್ಠಿರನು ತನ್ನ ತಮ್ಮಂದಿರ ಜೊತೆ ಜಿಂಕೆಯನ್ನು ಹುಡುಕಿಕೊಂಡು ಹೊರಟನು. ಜಿಂಕೆಯೇನೋ ಕಣ್ಣಿಗೆ ಬಿದ್ದತು. ಆದರೆ ಅದು ಬೆನ್ನಟ್ಟಿ ಬಂದ ಇವರ ಕೈಗೆ ಸಿಕ್ಕದೆ ನಾಗಾಲೋಟದಲ್ಲಿ ಓಡುತ್ತಿತ್ತು. ಎಲ್ಲರಿಗೂ ತಡೆಯಲಾರದ ಬಾಯಾರಿಕೆ. ಧರ್ಮರಾಜನ ಸೂಚನೆಯಂತೆ, ನಕುಲನು ಒಂದು ಮರವನ್ನು ಹತ್ತಿ ನೋಡಿದನು. ಸ್ವಲ್ಪ ದೂರದಲ್ಲಿ ಒಂದು ಸರೋವರವು ಗೋಚರಿಸಿತು. ಯುಧಿಷ್ಠಿರನು ನೀರನ್ನು ತರಲು ನಕುಲನನ್ನು ಅಲ್ಲಿಗೆ ಕಳಿಸಿದನು. ನಕುಲನು ಸರೋವರದ ಬಳಿಗೆ ಹೋಗಿ, ನೀರನ್ನು ತೆಗೆದುಕೊಳ್ಳುವುದಕ್ಕೆ ಮೊದಲು ತಾನು ನೀರು ಕುಡಿಯಲು ಹೋದನು. "ಅಯ್ಯಾ, ಇದು ನನ್ನ ಸರೋವರ. ನನ್ನ ಅಪ್ಪಣೆ ಇಲ್ಲದೆ ನೀರು

ಆಕ್ಷೇಪಿಸಿದಳು ; ಕ್ಷತ್ರಿಯರಿಗೆ ಕೋಪವೂ ಅಗತ್ಯವೆಂದೂ ವಾದಿಸಿದಳು ; 'ನಿನ್ನ ಧರ್ಮ ನಿನ್ನನ್ನು ಕಾಪಾಡುತ್ತಿಲ್ಲ' ಎಂದಳು. ಆಗ ಯುಧಿಷ್ಠಿರನು, "ದ್ರೌಪದೀ, ಒಳ್ಳೆಯ ಗುಣ ಹೆಚ್ಚಾದರೆ ನಮಗೆ ಮಾತ್ರ ಸ್ವಲ್ಪ ಕೆಡುಕೆನಿಸಬಹುದು. ಕೋಪ ಅತಿಯಾದರೆ ತನಗೂ ಕೇಡು, ಪರರಿಗೂ ಕೇಡು. ಒಟ್ಟಿನಲ್ಲಿ ಕೋಪವೇ ಕೆಟ್ಟದ್ದು. ಕೋಪದಿಂದ ಎಲ್ಲ ಬಗೆಯ ಅನರ್ಥಗಳೂ ಸಂಭವಿಸುತ್ತವೆ. ಧರ್ಮಕ್ಕಾಗಿ ಧರ್ಮವನ್ನು ಆಚರಿಸಬೇಕು ; ಅದರಿಂದ ಫಲವನ್ನು ನಿರೀಕ್ಷಿಸಬಾರದು' ಎಂದನು. ಯುಧಿಷ್ಠಿರನ ಮಾತಿನಿಂದ ದ್ರೌಪದಿಗೆ ಸಮಾಧಾನ ಆಗಲಿಲ್ಲ. ಭೀಮನೂ ಅವಳಿಗೆ ಒತ್ತಾಸೆ ಕೊಟ್ಟು ಮಾತನಾಡಿದನು. ಸೈನ್ಯಬಲವನ್ನು ಕೂಡಿಸಿಕೊಂಡು ಕೌರವರೊಂದಿಗೆ ಯುದ್ಧ ಮಾಡಿ ರಾಜ್ಯವನ್ನು ಹಿಂದಕ್ಕೆ ಪಡೆಯಬೇಕೆಂದು ಅವರ ಅಪೇಕ್ಷೆ. ಯುಧಿಷ್ಠಿರನು –

"ಭೀಮಾ, ನೀವಿಬ್ಬರೂ ದುಃಖದಿಂದ ಈ ರೀತಿ ಮಾತನಾಡುತ್ತಿರುವಿರಿ. ನಿಧಾನವಾಗಿ ಆಲೋಚನೆ ಮಾಡಿ ನೋಡಿ. ನಾನು ರಾಜಧರ್ಮಕ್ಕೆ ಕಟ್ಟುಬಿದ್ದು ದ್ಯೂತಕ್ಕೆ ಹೋದೆ. ನಾನು ಸೋತದ್ದಕ್ಕೆ ಶಕುನಿಯ ಮೋಸದ ಆಟ ಕಾರಣ. ಈಗ ವನವಾಸದ ಪ್ರತಿಜ್ಞೆಯನ್ನು ಪೂರಯಿಸಬೇಕಾದದ್ದು ನಮ್ಮ ಧರ್ಮ. ನನಗೆ ಧರ್ಮ ಪ್ರಾಣಕ್ಕಿಂತ ಹೆಚ್ಚು. ನಿಮ್ಮನ್ನು ಸಂತೋಷಪಡಿಸುವುದಕ್ಕೆ ಅಥವಾ ಗಡುವಿಗೆ ಮುಂಚೆ ರಾಜ್ಯವನ್ನು ಪಡೆಯುವುದಕ್ಕೆ, ನಾನು ಧರ್ಮವನ್ನು ಬಿಟ್ಟು ನಡೆಯಲಾರೆ. ಒಳ್ಳೆಯ ಕಾಲ ಬಂದೇ ಬರುತ್ತದೆ. ಸಕಾಲದಲ್ಲಿ, ಅಗತ್ಯ ಬಿದ್ದರೆ ಯುದ್ಧ ಮಾಡಿ, ನಮ್ಮ ರಾಜ್ಯವನ್ನು ಹಿಂದಕ್ಕೆ ಪಡೆದುಕೊಳ್ಳೋಣ. ವಿದ್ಯೆಗೆ ವಿನಯ ಹೇಗೆ ಭೂಷಣವೋ ಶೌರ್ಯಕ್ಕೆ ತಾಳ್ಮೆ ಹಾಗೆ ಭೂಷಣ" ಎಂದು ಭೀಮನನ್ನೂ ದ್ರೌಪದಿಯನ್ನೂ ಸಮಾಧಾನಪಡಿಸಿದನು.

ಇದೇ ಕಾಲದಲ್ಲಿ ಅರ್ಜುನನು ಅಣ್ಣನ ಅನುಜ್ಞೆಯಂತೆ ಇಂದ್ರಕೀಲ ಪರ್ವತದಲ್ಲಿ ಘೋರವಾದ ತಪಸ್ಸು ಮಾಡಿ ಪರಮೇಶ್ವರನಿಂದ ಪಾಶುಪತಾಸ್ತ್ರವನ್ನೂ ಇಂದ್ರಾದಿ ದೇವತೆಗಳಿಂದ ಇನ್ನೂ ಅನೇಕ ದಿವ್ಯಾಸ್ತ್ರಗಳನ್ನೂ ಸಂಪಾದಿಸಿದನು.

ಪಾಂಡವರು ವನವಾಸ ಕಾಲದಲ್ಲಿ ಒಂದೇ ಕಡೆ ಇರುತ್ತಿರಲಿಲ್ಲ. ಬೇರೆ ಬೇರೆ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸುತ್ತಿದ್ದರು. ಹೋದ ಕಡೆಯಲ್ಲೆಲ್ಲಾ ಋಷಿಗಳೂ ತಪಸ್ವಿಗಳೂ ಯುಧಿಷ್ಠಿರನನ್ನು ಬಹಳ ಗೌರವದಿಂದ ಕಂಡು ಉಪಚಾರ ಮಾಡುತ್ತಿದ್ದರು. ಅವರು ಹೇಳುತ್ತಿದ್ದ ಅನೇಕ ಪುರಾಣಕಥೆಗಳನ್ನೂ ಪುಣ್ಯ ಕಥೆಗಳನ್ನೂ ಕೇಳಿ, ಯುಧಿಷ್ಠಿರನ ಧರ್ಮಶ್ರದ್ಧೆ ಬಲವಾಗುತ್ತಿತ್ತು; ಅವನ ತಮ್ಮಂದಿರ ಮನಸ್ಸಿಗೆ ಶಾಂತಿ ದೊರಕುತ್ತಿತ್ತು.

ಯಕ್ಷ – "ಧನ ಯಾವುದರಿಂದ ಲಭಿಸುತ್ತದೆ ? ಉತ್ತಮವಾದ ಧನ ಯಾವುದು ? ನಿಜವಾದ ಭಾಗ್ಯ ಯಾವುದು ?"

ಯುಧಿಷ್ಠಿರ – "ದುಡಿಮೆಯಿಂದ ಧನ. ವಿದ್ಯೆಯೇ ಉತ್ತಮವಾದ ಧನ. ಆರೋಗ್ಯವೇ ನಿಜವಾದ ಭಾಗ್ಯ."

ಯಕ್ಷ – "ಭೂಮಿಗಿಂತ ದೊಡ್ಡ ವಸ್ತು ಯಾವುದು? ಆಕಾಶಕ್ಕಿಂತ ಎತ್ತರವಾದದ್ದು ಯಾವುದು?"

ಯುಧಿಷ್ಠಿರ – "ಭೂಮಿಗಿಂತ ದೊಡ್ಡ ವಸ್ತು ತಾಯಿ. ಆಕಾಶಕ್ಕಿಂತ ಉನ್ನತವಾದ ವಸ್ತು ತಂದೆ."

ಯಕ್ಷ – "ಗಾಳಿಗಿಂತ ವೇಗವಾದದ್ದು ಯಾವುದು? ಮನುಷ್ಯನನ್ನು ಯಾವಾಗಲೂ ಕಾಡುವುದು ಯಾವುದು?"

ಯುಧಿಷ್ಠಿರ – "ಗಾಳಿಗಿಂತ ವೇಗವಾದದ್ದು ಮನಸ್ಸು. ಮನುಷ್ಯನನ್ನು ಯಾವಾಗಲೂ ಕಾಡುವುದು ಚಿಂತೆ."

ಯಕ್ಷ – "ಮಹಾಪುರುಷನು ಯಾರು ?"

ಯುಧಿಷ್ಠಿರ – "ಅಹಿಂಸೆಯಲ್ಲಿ ಪ್ರೀತಿಯುಳ್ಳವನು."

ಯಕ್ಷ – "ನಿನ್ನ ಉತ್ತರಗಳಿಂದ ನಾನು ಸುಪ್ರೀತನಾದೆನು. ನಿನ್ನ ತಮ್ಮಂದಿರಲ್ಲಿ ಯಾರು ಬದುಕಲಿ?"

ಯುಧಿಷ್ಠಿರ – "ನಕುಲ."

ಹೀಗೆ ಕ್ರಮವಾಗಿ ಯುಧಿಷ್ಠಿರನು ತನ್ನ ತಮ್ಮಂದಿರನೆಲ್ಲಾ ಬದುಕಿಸಿಕೊಂಡನು. "ಒಡಹುಟ್ಟಿದವರಾದ ಭೀಮಾರ್ಜುನರನ್ನು ಮೊದಲು ಬದುಕಿಸಿಕೊಳ್ಳಲಿಲ್ಲ, ಮಲತಾಯಿಯ ಮಕ್ಕಳಾದ ನಕುಲ ಸಹದೇವರನ್ನು ಬದುಕಿಸಿಕೊಂಡದ್ದೇಕೆ?" ಎದು ಯಕ್ಷನು ಕೇಳಿದನು. "ನನಗೆ ಸ್ವಂತ ತಮ್ಮಂದಿರು, ಮಲತಮ್ಮಂದಿರು ಎಂಬ ಭೇದವಿಲ್ಲ" ಎಂದು ಯುಧಿಷ್ಠಿರನು ಉತ್ತರ ಕೊಟ್ಟನು. ಆಗ ಯಕ್ಷರೂಪದ ಯಮಧರ್ಮನು ತನ್ನ ನಿಜರೂಪವನ್ನು ತೋರಿಸಿ, "ನೀವು ಧರ್ಮಪರರಾದ್ದರಿಂದ ನಿಮಗೆ ಜಯಲಭಿಸುತ್ತದೆ" ಎಂದು ಹರಸಿ, ಅಂತರ್ಧಾನನಾದನು.

ಅನಂತರ, ಪಾಂಡವರು ಅರಣಿಯನ್ನು ತಂದು ಬ್ರಾಹ್ಮಣನಿಗೆ ಕೊಟ್ಟರು.

**ಯುದ್ಧ ಬಿಟ್ಟು ಬೇರೆ ದಾರಿಯಿಲ್ಲ**

ಪಾಂಡವರು ಹನ್ನೆರಡು ವರ್ಷಗಳ ವನವಾಸವನ್ನ ಮುಗಿಸಿ, ಒಂದು ವರ್ಷಕಾಲ ಅಜ್ಞಾತವಾಸ ಮಾಡಲು ವಿರಾಟನ ರಾಜ್ಯವನ್ನು ಆರಿಸಿಕೊಂಡರು.

ಕುಡಿಯಕೂಡದು. ನನ್ನ ಪ್ರಶ್ನೆಗಳಿಗೆ ಉತ್ತರ ಕೊಟ್ಟು ನೀರು ಕುಡಿ" ಎಂದು ಯಾರೋ ಮಾತನಾಡಿದ ಹಾಗಾಯಿತು. ಸುತ್ತ ನೋಡಿದರೆ ಯಾರೂ ಇಲ್ಲ ! ನಕುಲನಿಗೆ ಬಹಳ ಬಾಯಾರಿಕೆಯಾಗಿತ್ತು. ಕೇಳಿಬಂದ ಮಾತಿಗೆ ಬೆಲೆ ಕೊಡದೆ ನೀರು ಕುಡಿದನು ; ದಡಕ್ಕೆ ಬಂದಕೂಡಲೆ, ಕೆಳಕ್ಕೆ ಉರುಳಿಬಿದ್ದನು.

ಹಿಂದಿರುಗಿ ಬಾರದವರನ್ನು ಹುಡುಕುವುದಕ್ಕೂ ನೀರು ತರುವುದಕ್ಕೂ ಯುಧಿಷ್ಠಿರನು ಕಳಿಸಿದ ಉಳಿದ ತಮ್ಮಂದಿರಿಗೂ ಅದೇ ಗತಿ ಕಾದಿತ್ತು.

ಕೊನೆಯ ಧರ್ಮರಾಜನೇ ಅಲ್ಲಿಗೆ ಧಾವಿಸಿದನು. ಸತ್ತು ಒರಗಿದ್ದ ತಮ್ಮಂದಿರನ್ನು ಕಂಡನು. ಬಳಿಯಲ್ಲಿ ಯಾರೂ ಇಲ್ಲ ! ಕ್ರೂರ ಮೃಗಗಳ ಸುಳಿವಿಲ್ಲ ! ಅವರ ಸಾವಿಗೆ ಕಾರಣ ಏನೆಂದು ಧರ್ಮರಾಜನಿಗೆ ತಿಳಿಯಲಾಗಲಿಲ್ಲ. ಬಾಯಾರಿಕೆಯಿಂದ ಬಳಲಿದ್ದ ಅವನೂ ನೀರು ಕುಡಿಯಹೋದನು. ಅವನಿಗೂ ಅದೇ ಅಶರೀರವಾಣಿ ಕೇಳಿಬಂದಿತು. ಆಗ ಯುಧಿಷ್ಠಿರನು – "ಅಯ್ಯಾ, ನೀನು ಯಾರು? ನನ್ನ ತಮ್ಮಂದಿರ ಸಾವಿಗೆ ನೀನೇ ಕಾರಣ ಎಂದು ತೋರುತ್ತಿದೆ. ವಿನಯದಿಂದ ಕೇಳಿಕೊಳ್ಳುತ್ತೇನೆ, ನೀನು ಯಾರು?" ಎಂದು ಕೇಳಿದನು. "ಹೌದು, ನಿನ್ನ ತಮ್ಮಂದಿರನ್ನು ಕೊಂದವನು ನಾನೆ. ನಾನು ಈ ಸರೋವರದ ಒಡೆಯನಾದ ಯಕ್ಷ. ನನ್ನ ಪ್ರಶ್ನೆಗಳಿಗೆ ಉತ್ತರ ಕೊಡದೆ ನೀರು ಕುಡಿದದ್ದರಿಂದ ನಿನ್ನ ತಮ್ಮಂದಿರು ಸತ್ತರು. ನೀರು ಕುಡಿಯಬೇಕಿದ್ದರೆ, ನನ್ನ ಪ್ರಶ್ನೆಗಳಿಗೆ ಉತ್ತರ ಕೊಡು" ಎಂದು ಯಕ್ಷ ಪ್ರತ್ಯಕ್ಷನಾದನು. ಯುಧಿಷ್ಠಿರನು, "ನಾನು ತಿಳಿದಮಟ್ಟಿಗೆ ಉತ್ತರ ಹೇಳುತ್ತೇನೆ" ಎಂದು ಒಪ್ಪಿಕೊಂಡನು.

ಯಕ್ಷ – "ಸಮುದ್ರಕ್ಕೆ ಸಮನಾದದ್ದು ಯಾವುದು? ಭೂಲೋಕಕ್ಕೆ ಒಳ್ಳೆಯದನ್ನು ಮಾಡುವವರು ಯಾರು? ಮನುಷ್ಯರಿಗೆ ತಾಯಿ ಯಾರು? ಸೂರ್ಯನ ಪ್ರಕಾಶಕ್ಕೆ ಸರಿಯಾದದ್ದು ಯಾವುದು?"

ಯುಧಿಷ್ಠಿರ – "ಸಮುದ್ರಕ್ಕೆ ಸಮ ಆಕಾಶ. ಭೂಮಿಗೆ ಹಿತವನ್ನು ಮಾಡುವವನು ದೇವೇಂದ್ರ. ಮನುಷ್ಯರಿಗೆ ಗೋಮಾತೆಯೇ ತಾಯಿ. ಸೂರ್ಯನ ಬೆಳಕಿಗೆ ಸರಿಯಾದದ್ದು ಸತ್ಯ."

ಯಕ್ಷ – "ಬ್ರಾಹ್ಮಣರಲ್ಲಿ ಶ್ರೋತ್ರಿಯನು ಯಾರು?

ಕ್ಷತ್ರಿಯರಲ್ಲಿ ಶ್ರೇಷ್ಠನಾದವನು ಯಾರು?"

ಯುಧಿಷ್ಠಿರ – "ಶ್ರುತಿಯನ್ನು ಬಲ್ಲವನೆ ಶ್ರೋತ್ರಿಯಾದ ಬ್ರಾಹ್ಮಣ. ಸಾವಿಗಂಜದೆ ಶಸ್ತ್ರಾಸ್ತ್ರಗಳನ್ನು ಹಿಡಿದು ಯುದ್ಧ ಮಾಡುವವನೆ ಶ್ರೇಷ್ಠನಾದ ಕ್ಷತ್ರಿಯ."

ಪಡೆಯಬೇಕೆಂದು ವಾದಿಸಿದರು. ಆದರೆ, ಅಣ್ಣನ ಮಾತನ್ನು ಮೀರಲು ಅವರು ಸಿದ್ಧರಾಗಿರಲಿಲ್ಲ.

ಯುಧಿಷ್ಠಿರನ ಅಪೇಕ್ಷೆಯಂತೆ ಶ್ರೀಕೃಷ್ಣನು ಪಾಂಡವರಿಗೂ ಕೌರವರಿಗೂ ಸಂಧಿ ಮಾಡಿಸಲು ಯತ್ನಿಸಿದನು. ಆದರೆ ಅವನ ಪ್ರಯತ್ನ ಮುರಿದುಬಿತ್ತು. ಕೊನೆಗೆ ಯುದ್ಧವೇ ನಡೆಯಬೇಕಾಯಿತು.

**'ನಾಯಿ ಬರದಿದ್ದರೆ ಸ್ವರ್ಗ ಬೇಡ'**

ಕೌರವ ಪಾಂಡವ ಸೇನೆಗಳು ಯುದ್ಧಕ್ಕಾಗಿ ಕುರುಕ್ಷೇತ್ರದಲ್ಲಿ ನೆರೆದುವು. ಎರಡು ಕಡೆಯೂ ಅಪಾರ ಸಂಖ್ಯೆಯ ಸೈನ್ಯವಿದ್ದಿತು. ಯುದ್ಧವು ಹದಿನೆಂಟು ದಿನಗಳ ಕಾಲ ಘೋರವಾಗಿ ನಡೆಯಿತು. ಯುದ್ಧದಲ್ಲಿ ದ್ರೋಣ, ಕರ್ಣ, ಶಲ್ಯ, ಮುಂತಾದ ಮಹಾವೀರರೆಲ್ಲ ಮಡಿದರು. ಪಾಂಡವರ ಕಡೆಯೂ ಅನೇಕರು ಮಡಿದರು ; ಅಭಿಮನ್ಯು ಘಟೋತ್ಕಚರು ಯುದ್ಧದಲ್ಲಿ ಮಡಿದರು. ಆಗ ಯುಧಿಷ್ಠಿರನ ದುಃಖ ಹೇಳತೀರದು. ಕಡೆಯ ದಿನ, ಭೀಮನು ಗದಾಯುದ್ಧದಲ್ಲಿ ದುರ್ಯೋಧನನನ್ನು ಕೊಂದು ತನ್ನ ಪ್ರತಿಜ್ಞೆಯನ್ನು ನೆರವೇರಿಸಿಕೊಂಡನು.

ಕುರುಕ್ಷೇತ್ರದ ಮಹಾಯುದ್ಧದಲ್ಲಿ ಉದ್ದಕ್ಕೂ ಶ್ರೀ ವಿಷ್ಣುವಿನ ಅವತಾರವಾದ ಶ್ರೀಕೃಷ್ಣನ ಸಹಾಯ ಇದ್ದೇ ಇದ್ದಿತು. ಎಂಥ ಇಕ್ಕಟ್ಟಿನ ಪ್ರಸಂಗದಲ್ಲೂ ಯುಧಿಷ್ಠಿರನು ಧರ್ಮದ ದಾರಿಯನ್ನು ಬಿಟ್ಟು ಕದಲುತ್ತಿರಲಿಲ್ಲ. ಯುದ್ಧ ಮಾಡಲೇಬೇಕಾಗಿ ಬಂದಾಗ, ಕ್ಷತ್ರಿಯ ಧರ್ಮಕ್ಕೆ ಅನುಸಾರವಾಗಿ ಯುದ್ಧಕ್ಕೆ ಹೋದನು. ಎಷ್ಟೋ ಸಂದರ್ಭಗಳಲ್ಲಿ ಸ್ವತಃ ಆಯುಧವನ್ನು ಹಿಡಿದು ಯುದ್ಧ ಮಾಡಿದನು. ಶಾಂತಿಕಾಲದಲ್ಲೂ ಯುದ್ಧಕಾಲದಲ್ಲೂ ಸ್ಥಿರಮನಸ್ಸಿನಿಂದ ಕೂಡಿದವನಾಗಿ, ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡನು. ಹೀಗೆ, ಧರ್ಮದಿಂದ ನಡೆದುಕೊಂಡು, ಕುರುವಂಶದ ರಾಜ್ಯವನ್ನು ಗೆದ್ದು, ಅದಕ್ಕೆ ಒಡೆಯನಾದನು. ತಮ್ಮಂದಿರೊಡಗೂಡಿ ರಾಜ್ಯವಾಳತೊಡಗಿದನು. ಯುದ್ಧ ಮುಗಿಯವ ಹೊತ್ತಿಗೆ ಎಲ್ಲರಿಗೂ ಹಿರಿಯನಾದ ಭೀಷ್ಮನು ಗಾಯಗೊಂಡು ಬಾಣಗಳ ಹಾಸಿಗೆಯ ಮೇಲೆ ಮಲಗಿದ್ದನು. ಶ್ರೀಕೃಷ್ಣನ ಮಾತಿನಂತೆ ಯುಧಿಷ್ಠಿರನು ಅವನನ್ನು ಕಂಡನು. ಮಹಾಜ್ಞಾನಿಯಾದ ಭೀಷ್ಮನು ಆತನಿಗೆ, ರಾಜನಾದವನು ಹೇಗೆ ನಡೆದುಕೊಳ್ಳಬೇಕು, ಪ್ರಜೆಗಳ ಸುಖವನ್ನು ಹೇಗೆ ಸಾಧಿಸಬೇಕು ಎಂಬುದನ್ನು ವಿವರಿಸಿದನು. ಯುಧಿಷ್ಠಿರನು ತನಗಿದ್ದ ಸಂದೇಹಗಳನ್ನು ಅವನ ಮುಂದೆ ಇಟ್ಟು ತಿಳಿವಳಿಕೆ ಪಡೆದನು. ಆದರೆ, ದಾಯಾದಿಗಳನ್ನು ಕೊಂದು ಪಡೆದ ಜಯದಿಂದ ಯುಧಿಷ್ಠಿರನಿಗೆ ಸಂತೋಷವಿರಲಿಲ್ಲ. ತಾನು ಮಾಡಿದ ಪಾಪಕೃತ್ಯದ ಪರಿಹಾರಕ್ಕಾಗಿ ವ್ಯಾಸರ

ವಿರಾಟ ನಗರಕ್ಕೆ ಹೋಗುವುದಕ್ಕೆ ಮುಂಚೆ ಪಾಂಡವರು ತಮ್ಮ ವೇಷಗಳನ್ನೂ ಹೆಸರುಗಳನ್ನೂ ಬದಲಾಯಿಸಿಕೊಂಡರು.

ಯುಧಿಷ್ಠಿರನು ಕಂಕಭಟ್ಟನೆಂಬ ಬ್ರಾಹ್ಮಣನಾಗಿ, ಭೀಮನು ವಲಲ ಎಂಬ ಅಡಿಗೆಯ ಭಟ್ಟನಾಗಿ, ಅರ್ಜುನನು ಬೃಹನ್ನಳೆ ಎಂಬ ನಪುಂಸಕವೇಷದ ನಾಟ್ಯಾಚಾರ್ಯನಾಗಿ, ನಕುಲನು ಗ್ರಂಥಿಕ ಎಂಬ ಕುದುರೆಲಾಯದ ಅಧಿಕಾರಿಯಾಗಿ, ನಿಂತರು. ಸಹದೇವನು ತಂತ್ರೀಪಾಲ ಎಂಬ ಗೋಶಾಲೆಯ ಗೋರಕ್ಷಕನಾಗಿ, ದ್ರೌಪದಿ ರಾಣಿ ವಾಸದಲ್ಲಿ ಸೈರಂಧ್ರಿಯಾಗಿ ಕೆಲಸಗಳನ್ನು ಪಡೆದುಕೊಂಡು ಕಾಲ ಕಳೆಯತೊಡಗಿದರು.

ಅಜ್ಞಾತವಾಸ ಮುಗಿಯುವಷ್ಟರಲ್ಲಿ, ದ್ರೌಪದಿಯನ್ನು ಮೋಹಿಸಿದ ರಾಣಿ ಸುಧೇಷ್ಣೆಯ ತಮ್ಮ ಕೀಚಕನು ಭೀಮನಿಂದ ಹತನಾದನು. ಕೀಚಕನ ವಧೆ ಕೌರವರಿಗೆ ಪಾಂಡವರ ಸುಳಿವನ್ನು ಕೊಟ್ಟಿತು. ಅವರು ಪಾಂಡವರನ್ನು ಕಂಡುಹಿಡಿಯುವ ಉದ್ದೇಶದಿಂದ ವಿರಾಟನ ಗೋವುಗಳನ್ನು ಹಿಡಿದರು. ಅರ್ಜುನನು ವಿರಾಟಪುತ್ರ ಉತ್ತರನ ಸಾರಥಿಯಾಗಿ ಹೋಗಿ ಗೋವುಗಳನ್ನು ಬಿಡಿಸಿಕೊಂಡು ಬಂದನು. ಈ ವೇಳೆಗೆ ಅಜ್ಞಾತವಾಸದ ಅವಧಿ ಮುಗಿದಿತ್ತು. ಪಾಂಡವರು ವಿರಾಟನಿಗೆ ತಮ್ಮ ನಿಜಸ್ವರೂಪವನ್ನು ಬಹಿರಂಗಪಡಿಸಿದರು. ವಿರಾಟನು ಸಂತೋಷಪಟ್ಟು, ಜಯಶಾಲಿಯಾಗಿದ್ದ ಅರ್ಜುನನನ್ನು ಗೌರವಿಸಲು ಅವನ ಮಗ ಅಭಿಮನ್ಯುವಿಗೆ ತನ್ನ ಮಗಳು ಉತ್ತರೆಯನ್ನು ಕೊಟ್ಟು ಮದುವೆ ಮಾಡಿದನು.

ಈಗ ಯುಧಿಷ್ಠಿರನು ತನ್ನ ಪ್ರತಿಜ್ಞೆಯನ್ನು ನೆರವೇರಿಸಿ, ಸತ್ಯವನ್ನು ಪರಿಪಾಲಿಸಿ, ಪೊರೆ ಬಿಟ್ಟ ಹಾವಿನಂತೆ ಹೊಸ ಕಳೆಯಿಂದಲೂ ಶಕ್ತಿಯಿಂದಲೂ ಬೆಳಗುತ್ತಿದ್ದನು. ಅವನಿಗೆ ಶ್ರೀ ಕೃಷ್ಣ, ವಿರಾಟ, ದ್ರುಪದ ಮುಂತಾದ ಅನೇಕ ರಾಜರ ಸಹಾಯವಿದ್ದಿತು. ಅವನ ತಮ್ಮಂದಿರೇನೂ ಧೈರ್ಯ ಶೌರ್ಯಗಳಲ್ಲಿ ಕಡಿಮೆಯಾದವರಲ್ಲ. ಅವನು ಮನಸ್ಸು ಮಾಡಿದ್ದರೆ, ತನ್ನ ಕಡೆಯವರನ್ನೆಲ್ಲಾ ಕಟ್ಟಿಕೊಂಡು ಕೌರವರ ಮೇಲೆ ದಂಡೆತ್ತಿ ಹೋಗಿ, ಅವರನ್ನು ಸೋಲಿಸಿ, ತನ್ನ ರಾಜ್ಯವನ್ನು ಪಡೆಯಬಹುದಾಗಿತ್ತು.

ಆದರೆ, ಯುಧಿಷ್ಠಿರನಿಗೆ ಬೇಕಾಗಿದ್ದುದು ಶಾಂತಿ ; ಯುದ್ಧವಲ್ಲ. ಧರ್ಮಮಾರ್ಗದಲ್ಲಿ ನಡೆದು, ತಮಗೆ ಬರಬೇಕಾದ ಅರ್ಧ ರಾಜ್ಯವನ್ನು ಒಳ್ಳೆಯ ಮಾತಿನಿಂದಲೇ ಕೌರವರಿಂದ ಪಡೆಯಬೇಕಂಬುದು ಧರ್ಮರಾಜನ ಸಂಕಲ್ಪ. ಅವನ ತಮ್ಮಂದಿರು ಯುದ್ಧ ಮಾಡಿಯೇ ತಮ್ಮ ಅರ್ಧ ರಾಜ್ಯವನ್ನು

ಇಂದ್ರ – "ನಾಯಿಗೆ ನರಕವಲ್ಲದೆ ಸ್ವರ್ಗಲೋಕವುಂಟೆ? ಏನು ಮಾತಾಡುತ್ತೀಯೆ ನೀನು?"

ಯುಧಿಷ್ಠಿರ – "ದೇವೇಂದ್ರ, ನನ್ನನ್ನು ನಂಬಿದವರನ್ನೂ ಶರಣಾಗತರನ್ನೂ ಎಂದಿಗೂ ಕೈಬಿಡಲಾರೆ. ಇದು ನನ್ನ ವ್ರತ. ನನ್ನನ್ನು ನಂಬಿ ಹಿಂಬಾಲಿಸಿದ ನಾಯಿಗೆ ಸ್ವರ್ಗದಲ್ಲಿ ಸ್ಥಳವಿಲ್ಲದಿದ್ದರೆ, ಆ ಸ್ವರ್ಗ ನನಗೂ ಬೇಡ."

ಆ ನಾಯಿ, ನಾಯಿಯ ರೂಪದಲ್ಲಿದ್ದ ಯಮಧರ್ಮ; ಯುಧಿಷ್ಠಿರನ ತಂದೆ. ಅವನು ಪ್ರತ್ಯಕ್ಷನಾಗಿ ಯುಧಿಷ್ಠಿರನನ್ನು ಕುರಿತು – "ನೀನು ಮಹಾಪುರುಷ, ಧರ್ಮಿಷ್ಠ, ನಿನ್ನ ಭೂತದಯೆಯು ಅಮೋಘವಾದದ್ದು. ನಿನಗೆ ತಮ್ಮಂದಿರು ಹೆಚ್ಚಲ್ಲ, ನಾಯಿ ಕಡೆಯಲ್ಲ. ನಿನ್ನ ನಡತೆ ಭೂಲೋಕದವರಿಗೆ ಮೇಲ್ಪಂಕ್ತಿಯಾಗಿ ಉಳಿಯುತ್ತದೆ. ಈಗ ನಿಶ್ಚಿಂತನಾಗಿ ರಥವನ್ನು ಹತ್ತು" ಎಂದನು.

ಯುಧಿಷ್ಠಿರನಿಗೆ ನೆಮ್ಮದಿಯಾಯಿತು ; ತಂದೆಗೂ ಇಂದ್ರನಿಗೂ ನಮಸ್ಕಾರ ಮಾಡಿ, ರಥವನ್ನು ಏರಿದನು. ಇಂದ್ರನೊಂದಿಗೆ ದೇವಲೋಕವನ್ನು ಸೇರಿದನು. ಅಲ್ಲಿ ದಿವ್ಯ ದೇಹಧಾರಿಗಳಾಗಿದ್ದ ಬಂಧುಬಾಂಧವರನ್ನು ಕಂಡು ಸುಖಪಟ್ಟನು.

* * * *

ಸಲಹೆಯಂತೆ ಅಶ್ವಮೇಧ ಯಾಗವನ್ನು ಮಾಡಿದನು.

ಕೆಲವು ಕಾಲವಾದ ಮೇಲೆ ಧೃತರಾಷ್ಟ್ರ, ವಿದುರ, ಗಾಂಧಾರಿ, ಕುಂತಿ – ಇವರು ತಪೋವನಕ್ಕೆ ತೆರಳಿದರು. ಯುಧಿಷ್ಠಿರನಿಗೂ ರಾಜ್ಯಭಾರದಲ್ಲಿ ಬೇಸರವಾಗಿ, ವೈರಾಗ್ಯ ಹುಟ್ಟಿತು. ಈ ವೇಳೆಗೆ ಕೃಷ್ಣ, ಧೃತರಾಷ್ಟ್ರ, ವಿದುರ – ಇವರೆಲ್ಲ ತೀರಿಕೊಂಡಿದ್ದರು. ಯುಧಿಷ್ಠಿರನು ದುರ್ಯೋಧನನ ಅರ್ಧ ರಾಜ್ಯವನ್ನು ವಿದುರನ ಮಗನಾದ ಯುಯುತ್ಸುವಿಗೂ, ತಮ್ಮ ಭಾಗದ ರಾಜ್ಯವನ್ನು ಅಭಿಮನ್ಯುವಿನ ಮಗನಾದ ಪರೀಕ್ಷಿತನಿಗೂ ಕೊಟ್ಟು ಪಟ್ಟಗಟ್ಟಿದ ; ಬಳಿಕ, ಧರ್ಮ ಸಾಧನೆಗಾಗಿ ತಮ್ಮಂದಿರೊಂದಿಗೆ ಮಹಾ ಯಾತ್ರೆಯನ್ನು ಕೈಗೊಂಡನು. ಹೋಗುವಾಗ ಪಾಂಡವರು ಎಲ್ಲವನ್ನೂ ತೊರೆದು, ಪುರಜನರನ್ನು ಬೀಳ್ಕೊಂಡು, ನಾರುಬಟ್ಟೆಯುಟ್ಟು ಹೊರಟರು. ಎಲ್ಲರೂ ಹಿಂದಿರುಗಿದರೂ ಒಂದು ನಾಯಿ ಮಾತ್ರ ಪಾಂಡವರನ್ನು ಯಾತ್ರೆಯುದ್ದಕ್ಕೂ ಹಿಂಬಾಲಿಸುತ್ತಿತ್ತು.

ಪಾಂಡವರು ಅನೇಕ ಸ್ಥಳಗಳನ್ನು ದಾಟಿ ಮೇರು ಪರ್ವತವನ್ನು ಏರುತ್ತಿದ್ದರು; ನಾಯಿಯೂ ಹಿಂಬಾಲಿಸುತ್ತಿತ್ತು. ದಾರಿಯಲ್ಲಿ ನಕುಲನಿಂದ ತೊಡಗಿ ದ್ರೌಪದಿಯವರೆಗೆ ಎಲ್ಲರೂ ಒಬ್ಬೊಬ್ಬರಾಗಿ ಕೆಳಕ್ಕೆ ಬಿದ್ದು ದೇಹ ತ್ಯಾಗ ಮಾಡಿದರು.

ಯುಧಿಷ್ಠಿರನು ದುಃಖವಾದರೂ ಸಂಕಲ್ಪವನ್ನು ಬಿಡದೆ ಮುಂದೆ ಮುಂದೆ ಹೋಗುತ್ತಿದ್ದನು. ನಾಯಿ ಹಿಂಬಾಲಿಸುತ್ತಲೇ ಇತ್ತು.

ಆಗ, ದೇವೇಂದ್ರನು ಯುಧಿಷ್ಠಿರನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗಲು ದಿವ್ಯವಾದ ರಥಸಮೇತ ಬಂದು, "ರಥವನ್ನು ಏರು, ಬಾ" ಎಂದು ಕರೆದನು.

ಯುಧಿಷ್ಠಿರ – "ನನ್ನ ತಮ್ಮಂದಿರೆಲ್ಲಾ ಸತ್ತು ಬಿದ್ದಿದ್ದಾರೆ. ಅವರನ್ನು ಬಿಟ್ಟು, ಸ್ವರ್ಗವಾದರೂ ನನಗೆ ಬೇಡ."

ಇಂದ್ರ – "ಧರ್ಮಪುತ್ರಾ, ನೀನು ತಮ್ಮಂದಿರು ಮತ್ತು ದ್ರೌಪದಿ ತಮ್ಮ ಮನುಷ್ಯ ದೇಹಗಳನ್ನು ಇಲ್ಲಿ ಬಿಟ್ಟರು, ಅಷ್ಟೆ. ಅವರೆಲ್ಲಾ ದಿವ್ಯದೇಹಗಳನ್ನು ಪಡೆದು ಆಗಲೇ ಸ್ವರ್ಗಕ್ಕೆ ಹೋಗಿದ್ದಾರೆ. ಯುದ್ಧದಲ್ಲಿ ಸತ್ತ ಕೌರವರೇ ಮುಂತಾದ ಎಲ್ಲ ವೀರರೂ ಸ್ವರ್ಗ ಪಡೆದಿದ್ದಾರೆ. ನೀನು ಯೋಚನೆ ಮಾಡಬೇಡ. ನೀನು ಎಲ್ಲರಿಗಿಂತಲೂ ಪುಣ್ಯಶಾಲಿಯಾದ್ದರಿಂದ ಈ ಮನುಷ್ಯ ದೇಹದಿಂದಲೇ ಸ್ವರ್ಗಕ್ಕೆ ಬರಬಹುದು. ಬಾ, ರಥವನ್ನೇರು."

ಯುಧಿಷ್ಠಿರ – "ಈ ನಾಯಿ ನನ್ನನ್ನೇ ಹಸ್ತಿನಾವತಿಯಿಂದ ಹಿಂಬಾಲಿಸಿಕೊಂಡು ಬಂದಿದೆ. ಅದು ನನ್ನಲ್ಲಿ ಅಷ್ಟೊಂದು ವಿಶ್ವಾಸ ತೋರುತ್ತಿದೆ. ಅದನ್ನು ಬಿಟ್ಟು ನಾನೊಬ್ಬನೇ ಬರಲು ಇಷ್ಟವಿಲ್ಲ."

## ಅಧ್ಯಾಯ ೧

# ತಂದೆಯ ಬುದ್ಧಿವಾದ

ನಾನು ೧೬೩೨ನೆಯ ಇಸವಿಯಲ್ಲಿ, ಯಾರ್ಕ್ ಪಟ್ಟಣದಲ್ಲಿ, ಒಂದು ಸದ್ವಂಶದಲ್ಲಿ ಹುಟ್ಟಿದೆ. ನಮ್ಮ ವಂಶದ ಪೂರ್ವಿಕರು ಆ ಪಟ್ಟಣಕ್ಕೆ ಸೇರಿದವರಲ್ಲ; ಬ್ರೆಮೆನ್ ಪಟ್ಟಣದವನಾಗಿದ್ದ ನನ್ನ ತಂದೆ ಮೊದಲು ಹಲ್ ಪಟ್ಟಣಕ್ಕೆ ಬಂದು ನೆಲಸಿದರು. ಅವರು ವ್ಯಾಪಾರೋದ್ಯಮದಲ್ಲಿ ಒಳ್ಳೆಯ ಆಸ್ತಿಯನ್ನು ಸಂಪಾದಿಸಿ, ವ್ಯಾಪಾರವನ್ನು ಬಿಟ್ಟುಬಿಟ್ಟು, ತರುವಾಯ ಯಾರ್ಕ್‌ಪಟ್ಟಣದಲ್ಲಿ ನೆಲಸಿ, ಮದುವೆಯಾದರು. ತನ್ನ ತಾಯಿಯ ಮನೆತನದ ಹೆಸರು ರಾಬಿನ್‌ಸನ್ ಎಂದು; ಆ ಒಳ್ಳೆಯ ಮನೆತನದ ಹೆಸರು ಹಿಡಿದು ನನ್ನನ್ನು ರಾಬಿನ್‌ಸನ್ ಕ್ರೂಸೊ ಎಂದು ಕರೆದರು.

ನನಗೆ ಇಬ್ಬರು ಅಣ್ಣಂದಿರಿದ್ದರು ; ನನ್ನ ಹಿರಿಯಣ್ಣನು ಆಗ ಫ್ಲ್ಯಾಂಡರ್ಸಿನಲ್ಲಿದ್ದ ಇಂಗ್ಲಿಷ್ ಪದಾತಿ ಸೈನ್ಯದ ತುಕಡಿಯೊಂದರ ಉಪನಾಯಕನಾಗಿದ್ದನು ; ಡಂಕರ್ಕಿನ ಬಳಿ ಸ್ಪೈನ್ನಿನವನ ಮೇಲೆ ನಡೆದ ಕಾಳೆಗದಲ್ಲಿ ಅವನು ಹೋರಾಡಿ ಮಡಿದನು ; ನನ್ನ ಕಿರಿಯಣ್ಣನೇನಾದನೋ ನಾನರಿಯೆ.

ಕುಟುಂಬದ ಮೂರನೆಯ ಮಗನಾದ ನನಗೆ ಯಾವೊಂದು ವೃತ್ತಿಯ ಶಿಕ್ಷಣವನ್ನೂ ಕೊಟ್ಟಿರಲಿಲ್ಲ ; ತೀರ ಸಣ್ಣ ವಯಸ್ಸಿನಲ್ಲಿಯೇ ದೇಶ ದೇಶ ತಿರುಗುವ ಆಲೋಚನೆಗಳು ನನ್ನ ತಲೆಯಲ್ಲಿ ಸುಳಿದಾಡತೊಡಗಿದುವು. ಬಹಳ ಹಳೆಯ ಕಾಲದವರಾದ ನನ್ನ ತಂದೆ ನನಗೆ ಮನೆಯಲ್ಲೂ ಊರಿನ ಉಚಿತ ಪಾಠಶಾಲೆಯಲ್ಲೂ ಎಷ್ಟುಮಟ್ಟಿನ ವಿದ್ಯಾಭ್ಯಾಸವನ್ನು ಕೊಡಿಸಬಹುದೊ ಅಷ್ಟುಮಟ್ಟಿನ ವಿದ್ಯಾಭ್ಯಾಸವನ್ನು ಕೊಡಿಸಿ, ನಾನು ವಕೀಲವೃತ್ತಿಗೆ ಸೇರಬೇಕೆಂದು ಉದ್ದೇಶಪಟ್ಟಿದ್ದರು. ಆದರೆ, ನಾವಿಕನಾಗುವುದು ಹೊರತಾಗಿ ಬೇರೆ ಯಾವುದರಿಂದಲೂ ನನಗೆ ತೃಪ್ತಿಯಾಗುವಂತಿರಲಿಲ್ಲ.

ವಿವೇಕಶಾಲಿಯಾದ ನನ್ನ ತಂದೆ ನನ್ನ ಸಂಕಲ್ಪವೇನೆಂಬುದನ್ನು ಮನಗಂಡು, ಅದನ್ನು ವಿರೋಧಿಸಿ ಬಹಳ ಒಳ್ಳೆಯ ಬುದ್ಧಿವಾದವನ್ನು ಹೇಳಿದರು. ಒಂದುದಿನ

ಮಾತ್ರ ದೊರೆಯತಕ್ಕವು. ಮಧ್ಯಮ ದರ್ಜೆಯಲ್ಲಿರುವವರು ತಮ್ಮ ಇಹಲೋಕದ ಜೀವನವನ್ನು ಸುಗಮವಾಗಿ ಸಾಗಿಸಬಲ್ಲರು. ಅವರು ಕೈಗಳ ಕೆಲಸದಿಂದಾಗಲಿ ಬುದ್ಧಿಯ ಬಳಲಿಕೆಯಿಂದಾಗಲಿ ದಣಿಯಬೇಕಾಗಿಲ್ಲ ; ಹಿಡಿಕೂಳಿಗಾಗಿ ಗುಲಾಮಗಿರಿಯನ್ನು ಮಾಡಬೇಕಾಗಿಲ್ಲ. ಈರ್ಷ್ಯಾಸೂಯೆಗಳನ್ನೂ ಹೆಬ್ಬಯಕೆಗಳನ್ನೂ ಹೃದಯದಲ್ಲಿ ಹುದುಗಿಸಿಟ್ಟುಕೊಂಡು ಬೇಗುದಿಗೊಳ್ಳಬೇಕಾಗಿಲ್ಲ. ಒಟ್ಟಿನ ಮೇಲೆ ಈ ನಡುತೆರದ ಬಾಳು ಸವಿಯಾದುದು."

ಹೀಗೆ ಹೇಳಿ, ನನ್ನ ಸದ್ಯದ ಜೀವನದಲ್ಲಿ ಕನಸಿನಲ್ಲೂ ಕಾಣಲಾಗದಂಥ ಕಷ್ಟಪರಂಪರೆಗಳಿಗೆ ನಾನಾಗಿ ಸಿಲುಕಿಕೊಳ್ಳಬಾರದೆಂದು ಅತ್ಯಂತ ಪ್ರೀತಿಯಿಂದ ಒತ್ತಾಯಪಡಿಸಿದರು :

"ನೀನು ಹೊಟ್ಟೆಯ ಪಾಡಿಗಾಗಿ ಅನಾವಶ್ಯಕವಾಗಿ ದುಡಿಯಬೇಕಾದ ಸ್ಥಿತಿಯಲ್ಲಿಲ್ಲ. ನಾನು ಯಾವ ಬಗೆಯ ಜೀವನದಲ್ಲಿ ಸುಖಶಾಂತಿಗಳು ಉಂಟೆಂದು ನಿನಗೆ ಹೇಳುತ್ತಿರುವೆನೋ ಆ ಜೀವನದಲ್ಲಿ ನಾನು ನಿನ್ನನ್ನು ನೆಲೆಗೊಳಿಸುತ್ತೇನೆ. ನಾನು ಹಾಗೆ ನೆಲೆಗೊಳಿಸಿದ ಎಡೆಯಲ್ಲಿ ನಿನಗೆ ಸುಖ ದೊರೆಯದೆ ಹೋದರೆ ಅದು ನಿನ್ನ ದುರದೃಷ್ಟ, ಇಲ್ಲವೆ ನಿನ್ನ ತಪ್ಪಿನಿಂದ ಉಂಟಾಗುವ ಕೆಟ್ಟ ಪರಿಣಾಮ. ಅದಕ್ಕೆ ನಾನು ಹೊಣೆಯಲ್ಲ. ನೀನು ಸುಖವಾಗಿರುವಂತೆ ಒಂದು ಉದ್ಯೋಗದಲ್ಲಿ ನಿನ್ನನ್ನು ನೆಲೆಗೊಳಿಸುವುದು ಮಾತ್ರ ನನ್ನ ಹೊಣೆ. ನಾನು ಹೇಳಿದಂತೆ ಕೇಳಿ ನೀನು ಮನೆಯಲ್ಲೇ ಉಳಿಯುವುದಾದರೆ ನಿನ್ನನ್ನು ಏಳಿಗೆಗೆ ತರಲು ನಾನು ನೆರವಾಗಬಲ್ಲೆ ; ಹಾಗಲ್ಲದೆ ನನ್ನ ಮಾತನ್ನು ಮೀರಿ ನೀನು ಮನೆಯುಳಿದು ಎಲ್ಲೋ ದೂರ ಪ್ರಾಂತದಲ್ಲಿ ವಿಪತ್ತಿಗೆ ಒಳಗಾದರೆ ನಾನು ನನ್ನ ನೆರವಿನ ಕೈಯನ್ನು ನೀಡಲಾರೆ. ಹೀಗಿರುವುದರಿಂದ, ಮನೆಬಿಟ್ಟು ಹೋಗಬೇಕೆಂಬ ನಿನ್ನ ಬಯಕೆಗೆ ನಾನು ಹೇಗೆ ಒತ್ತಾಯ ಕೊಡಲಿ ? ನಿನ್ನ ಅಣ್ಣನ ನಿದರ್ಶನವನ್ನೇ ತೆಗೆದುಕೊ : ಹೊರನಾಡಿನಲ್ಲಿ ನಡೆಯುತ್ತಿದ್ದ ಯುದ್ಧಕ್ಕೆ ಹೋಗಬೇಡವೆಂದು ಬಗೆಬಗೆಯಾಗಿ ಬೇಡಿಕೊಂಡೆ ; ಎಳೆತನದ ಹುಟ್ಟುಬಯಕೆಗಳು ಅವನನ್ನು ಸೈನಿಕನ ಸಾಹಸ ಜೀವನಕ್ಕೆ ದೂಡಿದುವು, ಸಾವಿನ ಬಾಯಿಗೆ ಈಡುಮಾಡಿದುವು. ನನ್ನ ಮಾತನ್ನು ಮೀರಿಯೇ ನೀನು ಹೊರಟರೂ ನಾನೇನೊ ನಿನಗೆ ಶುಭವನ್ನೇ ಕೋರಿ ದೇವರಲ್ಲಿ ಮೊರೆಯಿಡುತ್ತಿರುತ್ತೇನೆ ; ಆದರೆ ಅವಿವೇಕದ ಮಾರ್ಗದಲ್ಲಿ ಹೆಜ್ಜೆಯಿಟ್ಟಿರುವ ನಿನಗೆ ದೇವರು ಆ ಶುಭವನ್ನು ಕರುಣಿಸುವನೋ ಇಲ್ಲವೋ ನಾನರಿಯೆ. ಕಳೆದುಹೋದ ಸುಖಜೀವನವನ್ನು ಮರಳಿ ಹೊಂದಲು ಯಾರ ನೆರವೂ ದೊರೆಯದೆ ಇರುವಾಗ ನನ್ನ ಬುದ್ಧಿವಾದವನ್ನು ಕಡೆಗಂಡದ್ದಕ್ಕಾಗಿ ನೀನು ಪಶ್ಚಾತ್ತಾಪಪಡುವೆ."

ಬೆಳಗ್ಗೆ, ಸಂಧಿವಾತದಿಂದ ನರಳುತ್ತ ತಮ್ಮ ಕೋಣೆಯಲ್ಲೇ ಸೆರೆಯಾಗಿದ್ದ ನನ್ನ ತಂದೆ ನನ್ನನ್ನು ತಮ್ಮ ಕೋಣೆಗೆ ಬರಮಾಡಿಕೊಂಡು, ಬಹಳ ವಾತ್ಸಲ್ಯವನ್ನು ತೋರುತ್ತ, ಈ ವಿಷಯವಾಗಿ ಬುದ್ಧಿವಾದ ಹೇಳಿ ಎಚ್ಚರಿಸಿದರು. ತಂದೆ ಮನೆಯನ್ನೂ, ತನ್ನ ಹುಟ್ಟುನಾಡನ್ನೂ ತೊರೆಯುವುದಕ್ಕೆ ಬರಿಯ ಅಲೆದಾಟದ ಗೀಳಲ್ಲದೆ ಬೇರೆ ಯಾವ ಕಾರಣಗಳು ಇವೆಯೆಂದೂ, ಹುಟ್ಟುನಾಡಿನಲ್ಲಿಯೇ ನೆಲಸಿದರೆ ನನ್ನ ಸಂತತವಾದ ಉದ್ಯಮದಿಂದಲೂ ಪರಿಶ್ರಮದಿಂದಲೂ ನನ್ನ ಸಂಪತ್ತನ್ನು ಹೆಚ್ಚಿಸಿಕೊಂಡು ಸುಖಜೀವನವನ್ನು ನಡಸುವ ಸುಯೋಗವನ್ನು ಹೊಂದಬಹುದಲ್ಲವೇ ಎಂದು ಕೇಳಿದರು. ನನ್ನ ತಂದೆ ತಮ್ಮ ಮಾತನ್ನು ಹೀಗೆ ಮುಂದುವರಿಸಿದರು :

"ಪರದೇಶಗಳಿಗೆ ಹೋಗಿ ತಮ್ಮ ಭಾಗ್ಯವನ್ನು ಹೆಚ್ಚಿಸಿಕೊಳ್ಳುವ ಸಾಹಸಕ್ಕೆ ಕೈ ಹಾಕುವವರು, ಏನನ್ನಾದರೂ ಮಾಡಿ ಭಾಗ್ಯವಂತರಾಗಬೇಕೆಂಬ ಹಟತೊಟ್ಟ ನಿರ್ಭಾಗ್ಯರಾಗಿರಬೇಕು, ಇಲ್ಲವೆ, ಭಾಗ್ಯದೇವಿಯೇ ಅವರನ್ನು ಹಾಗೆ ಬರಮಾಡಿಕೊಳ್ಳುವ ಸೌಭಾಗ್ಯ ಶಾಲಿಗಳಾಗಿರಬೇಕು. ನೀನಾದರೋ ನಿರ್ಗತಿಕನೂ ಅಲ್ಲ, ಭಾಗ್ಯವಂತನಾಗುವ ಸಂಭವವುಳ್ಳವನೂ ಅಲ್ಲ. ಪರದೇಶಗಳಲ್ಲಿ ಸಾಹಸಕಾರ್ಯಗಳನ್ನೆಸಗಿ ಕೀರ್ತಿಶಾಲಿಯಾಗಬೇಕೆನ್ನುವುದು ನಿನಗೆ ಸಲ್ಲದು. ನಾವು ಸಮಾಜದಲ್ಲಿ ಮಧ್ಯಮ ದರ್ಜೆಗೆ ಸೇರಿದವರು. ಪ್ರಪಂಚದಲ್ಲಿ ಈ ಮಧ್ಯಮ ದರ್ಜೆಯ ಜೀವನದಷ್ಟು ಸುಖವುಳ್ಳದ್ದು ಬೇರೊಂದಿಲ್ಲ. ಇದನ್ನು ನನ್ನ ದೀರ್ಘಾನುಭವದಿಂದ ಕಂಡುಕೊಂಡಿದ್ದೇನೆ. ಮಧ್ಯಮ ದರ್ಜೆಯ ಜೀವನದಲ್ಲಿ ಬಡತನದ ಕಷ್ಟ ಕಾರ್ಪಣ್ಯಗಳಾಗಲಿ, ದುಡಿಮೆ ದಾಸ್ಯಗಳಾಗಲಿ, ಶ್ರೀಮಂತಿಕೆಯ ಹೆಮ್ಮೆ ಹಮ್ಮುಗಳಾಗಲಿ ಲೋಭ ಲೋಲು ಪತೆಗಳಾಗಲಿ ಇಲ್ಲ. ಕೆಲವು ವೇಳೆ ದೊರೆಗಳು ಕೂಡ ಮಧ್ಯಮ ದರ್ಜೆಯ ನಡುತೆರದ ಸುಖಕ್ಕಾಗಿ ಹಾತೊರೆದಿರುವುದುಂಟು. ಬುದ್ಧಿವಂತನು ಬಡತನವನ್ನೂ ಬಯಸನು, ಸಿರಿತನವನ್ನೂ ಕೋರನು. ಬಡವರು ಬಡತನದ ಕೊರಕಲಿನಲ್ಲಿ ಬಿದ್ದು ಮೇಲಕ್ಕೆ ಬರಲಾರದೆ ಪೇಚಾಡುತ್ತಿದ್ದರೆ, ಭಾಗ್ಯವಂತರು ಸೌಭಾಗ್ಯ ಶಿಖರದ ತುತ್ತತುದಿಯ ಇಕ್ಕಟ್ಟಿನ ಎಡೆಯಲ್ಲಿ ನಿಂತು ಎಂದಾದರೊಮ್ಮೆ ಎಡೆತಪ್ಪಿ ಕೆಳಗಿನ ಕೊರಕಲಿಗೆ ಬೀಳುವ ಅಪಾಯ ಸಂಭವಕ್ಕೆ ಒಳಗಾಗಿರುತ್ತಾರೆ. ಇಬ್ಬಗೆಯ ಕಷ್ಟಗಳೂ ಇಲ್ಲದ ನಡುನೆಲೆಯಾದ ನೆಲದ ಮೇಲೆ ಓಡಾಡುವ ಮಧ್ಯಮ ದರ್ಜೆಯ ಜೀವನದಲ್ಲಿ ಹುಟ್ಟಿರುವವರೇ ಧನ್ಯರು. ಸುಖ, ಶಾಂತಿ, ಸದ್ಗುಣ, ಸ್ನೇಹಭಾವ, ಆರೋಗ್ಯ, ಹಿತಮಿತವಾದ ವಿನೋದಗಳು – ಇವೆಲ್ಲವೂ ಮಧ್ಯಮ ದರ್ಜೆಯ ಜೀವನದಲ್ಲಿ

ನಾವಿಕ ಜೀವನ ನನಗೆ ಒಗ್ಗದೆ ಹೋದರೆ ನಾನು ಮನೆಯಲ್ಲೇ ಉಳಿಯುವೆ. ವ್ಯರ್ಥವಾಗಿ ಕಾಲಕಳೆದುದರಿಂದ ಆದ ನಷ್ಟಕ್ಕೆ ಪರಿಹಾರವಾಗಿ ಒಂದಕ್ಕೆ ಎರಡರಷ್ಟು ಶ್ರದ್ಧೆಯಿಂದ ನನಗೆ ವಹಿಸಿದ ಕಾರ್ಯವನ್ನು ಮಾಡುವೆನೆಂದು ಮಾತುಕೊಡುತ್ತೇನೆ."

ನನ್ನ ನುಡಿಗಳನ್ನು ಕೇಳಿ ನನ್ನ ತಾಯಿಯ ಮನಸ್ಸು ತುಂಬ ಕಲಕಿಹೋಯಿತು. ಅವಳು ನನಗೆ ಈ ರೀತಿ ಹೇಳಿದಳು : "ಈ ವಿಷಯವಾಗಿ ನಿನ್ನ ತಂದೆಯಕೂಡ ನಾನು ಮಾತನಾಡುವುದರಿಂದ ಏನೂ ಪ್ರಯೋಜನವಿಲ್ಲ. ನಿನ್ನ ಹಿತವೇನೆಂಬುದು ಅವರಿಗೆ ಚೆನ್ನಾಗಿ ಗೊತ್ತು. ನಿನಗೆ ಕೇಡುತರುವ ಯಾವುದಕ್ಕೂ ಅವರು ಸಮ್ಮತಿಸಲಾರರು. ನಿನ್ನ ತಂದೆ ಎಷ್ಟು ಮೃದುವಾದ ಮಾತುಗಳನ್ನು ಆಡಿದರೂ ನಿನ್ನ ಮನಸ್ಸು ಕರಗದೆ ನೀನು ಈ ರೀತಿ ಛಲ ಹಿಡಿದಿರುವುದು ಬಹಳ ಆಶ್ಚರ್ಯಕರವಾಗಿದೆ. ವಿನಾಶಹೊಂದಬೇಕೆಂದು ನಿನ್ನ ಹಣೆಯಲ್ಲಿ ಬರೆದಿದ್ದರೆ ಅದನ್ನು ಯಾರೂ ತಪ್ಪಿಸಲಾರರು. ನೀನು ವಿನಾಶದ ಮಾರ್ಗವನ್ನು ಹಿಡಿದು ಹೊರಟಿರುವುದನ್ನು ನಿನ್ನ ತಂದೆ ಒಪ್ಪದಿರುವಾಗ, ನಾನಾದರೂ ಅದನ್ನು ಒಪ್ಪುವುದು ಸಾಧ್ಯವಿಲ್ಲ."

ನನ್ನ ತಾಯಿ ಈ ವಿಷಯವಾಗಿ ನನ್ನ ತಂದೆಯೊಡನೆ ಮಾತನಾಡಲು ಮೊದಲು ನಿರಾಕರಿಸಿದ್ದರೂ ಕೂಡ, ಅವಳು ತನಗೂ–ನನಗೂ ನಡೆದ ಸಂಭಾಷಣೆಯೆಲ್ಲವನ್ನೂ ನನ್ನ ತಂದೆಗೆ ತಿಳಿಸಿದಳಂತೆ. ಅದಕ್ಕೆ ನನ್ನ ತಂದೆ "ಮನೆಯಲ್ಲೇ ಇದ್ದರೆ ಆ ಹುಡುಗ ಸುಖವಾಗಿದ್ದಾನು. ದೇಶಾಂತರಕ್ಕೆ ಹೋದರೆ ಹಾಳಾಗಿ ಹೋಗುತ್ತಾನೆ. ಅದಕ್ಕೆ ನಾನು ಒಪ್ಪಲಾರೆ" ಎಂದು ಖಂಡಿತವಾಗಿ ನುಡಿದರಂತೆ.

## ಬಿಟ್ಟಿಯ ಪಯಣ

ಯಾವುದಾದರೂ ಉದ್ಯೋಗವನ್ನು ಕೈಕೊಂಡು ಜೀವನದಲ್ಲಿ ನೆಲಸಬೇಕೆಂದು ನನ್ನ ತಂದೆ ಒತ್ತಾಯಮಾಡುತ್ತಲೇ ಬಂದರು ; ನನ್ನ ಮನಸ್ಸಿಗೆ ಒಗ್ಗದ ದಾರಿಯಲ್ಲಿ ಹೋಗಬೇಕೆಂದು ನನ್ನ ತಾಯಿ ತಂದೆ ಬಲವಂತ ಮಾಡುತ್ತಿರುವುದು ಸರಿಯಲ್ಲವೆಂದು ನಾನು ಅವರೊಡನೆ ವಾದಮಾಡುತ್ತಲೇ ಇದ್ದೆ. ಅವರ ಧೃಡ ನಿಶ್ಚಯವನ್ನು ಅವರು ಸಡಿಲಿಸಲಿಲ್ಲ. ನನ್ನ ಹಟವನ್ನು ನಾನು ಬಿಡಲಿಲ್ಲ. ಹೀಗೆ ಒಂದು ವರ್ಷ ಕಳೆಯಿತು.

ಬಳಿಕ ಒಂದು ದಿನ ನಾನು ಅಕಸ್ಮಾತ್ತಾಗಿ ಹಲ್ ಪಟ್ಟಣಕ್ಕೆ ಹೋಗಿದ್ದೆ. ಆ ವೇಳೆಯಲ್ಲಿ ಮನೆಯನ್ನು ತೊರೆದು ಓಡಿಹೋಗಬೇಕೆಂಬ ಉದ್ದೇಶ ನನಗೆ ಇರಲಿಲ್ಲ. ಆದರೆ ನನ್ನ ಒಡನಾಡಿಗಳಲ್ಲೊಬ್ಬನು ತನ್ನ ತಂದೆಯ ಹಡಗಿನಲ್ಲಿ

ಆಹಾ! ನಮ್ಮ ತಂದೆಯ ಹಿತೋಕ್ತಿಯಲ್ಲಿ ಅಡಗಿದ್ದ ಭವಿಷ್ಯವಾಣಿ ನನಗೆ ಅಂದು ಕೇಳಿಸಲಿಲ್ಲ ; ನಮ್ಮ ತಂದೆಗೇ ಅದರ ಅರಿವಿರಲಿಲ್ಲವೆಂದು ನನಗೆ ತೋರುತ್ತದೆ. ಅವರು ಕಡೆಯ ಮಾತುಗಳನ್ನು ಹೇಳುತ್ತಿದ್ದಾಗ, ಅದರಲ್ಲಿಯೂ ನನ್ನ ಮಡಿದ ಅಣ್ಣನನ್ನು ನೆನೆದು ಮರುಗಿದಾಗ, ನಾನು ಮುಂದೆ ಪಶ್ಚಾತ್ತಾಪಪಡಬೇಕಾದೀತು ಎಂದು ಹೇಳಿ ಮಾತು ನಿಲ್ಲಿಸಿದಾಗ, ಅವರ ಕಣ್ಣುಗಳಿಂದ ಕಣ್ಣೀರು ಕೋಡಿಹರಿಯುತ್ತಿತ್ತು. ಉದ್ವೇಗದ ಬರದಲ್ಲಿ ಅವರ ಕೊರಳು ಕಟ್ಟಿಹೋಗದೆ ಇದ್ದಿದ್ದರೆ, ನನಗೆ ಎಷ್ಟು ಬುದ್ಧಿ ಹೇಳಿದರೂ ಅವರು ಬೇಸರಗೊಳ್ಳುತ್ತಿರಲಿಲ್ಲವೆಂದು ನನಗೆ ತೋರುತ್ತದೆ.

ಅವರ ವಿವೇಕವಾಣಿಗೆ ನನ್ನ ಮನಸ್ಸು ಕರಗಿತು. ಯಾರ ಮನಸ್ಸು ತಾನೆ ಕರಗದೆ ಇದ್ದೀತು? ದೇಶಾಂತರಕ್ಕೆ ಹೋಗುವ ಯೋಚನೆಯನ್ನೇ ಮಾಡುವುದಿಲ್ಲವೆಂದು ತೀರ್ಮಾನಮಾಡಿದೆ ; ನನ್ನ ತಂದೆ ಬಯಸಿದಂತೆ ಮನೆಯಲ್ಲೇ ಉಳಿಯುವೆನೆಂದುಕೊಂಡೆ. ಆದರೆ, ಅಯ್ಯೋ! ಕೆಲವು ದಿನಗಳಾದ ಮೇಲೆ ನನ್ನ ಮನಸ್ಸು ಮತ್ತೆ ಚಂಚಲವಾಯಿತು. ನನ್ನ ತಂದೆ ಹೆಚ್ಚಿನ ಒತ್ತಾಯಮಾಡಲು ಅವಕಾಶವಿಲ್ಲದಿರುವಂತೆ ಅವರಿಗೆ ಮುಂದಾಗಿ ತಿಳಿಸದೆ ಓಡಿಹೋಗುವುದಾಗಿ ನಿರ್ಧಾರಮಾಡಿದೆ. ಆದರೂ ನಿರ್ಧಾರದ ಕಾವು ಕೊಂಚ ಇಳಿದಾಗ, ನನ್ನ ತಾಯಿ ಎಂದಿಗಿಂತಲೂ ಪ್ರಸನ್ನಳಾಗಿರುವಳೆಂದು ತೋರಿದಾಗ, ಅವಳ ಬಳಿಗೆ ಹೋದೆ ; ಪ್ರಪಂಚವನ್ನೆಲ್ಲಾ ಸುತ್ತಾಡಿ ನೋಡಿ ಬರಬೇಕೆಂದು ಮನಸ್ಸು ಮಾಡಿರುವೆನೆಂದೂ, ನಮ್ಮ ತಂದೆ ಬಯಸಿದಂತೆ ಇದ್ದಕಡೆಯೇ ಇದ್ದುಕೊಂಡಿರಲು ನನ್ನ ಮನಸ್ಸು ಒಡಂಬಡದೆಂದೂ, ತಂದೆಯ ಒಪ್ಪಿಗೆಯಿಲ್ಲದೆ ನಾನು ಓಡಿಹೋದೆನೆನ್ನುವುದಕ್ಕಿಂತ ನನ್ನ ತಂದೆ ನನ್ನನ್ನು ಆಶೀರ್ವದಿಸಿ ಬೀಳ್ಕೊಡುವುದು ಮೇಲೆಂದೂ ನನ್ನ ತಾಯಿಗೆ ತಿಳಿಯಹೇಳಿ, ಹೀಗೆ ಬೇಡಿಕೊಂಡೆ :

"ಅಮ್ಮಾ. ಈಗ ನನಗೆ ಹದಿನೆಂಟು ವರ್ಷ ವಯಸ್ಸು. ಯಾವ ಉದ್ಯೋಗದಲ್ಲಿ ಶಿಕ್ಷಣ ಹೊಂದುವುದಕ್ಕೂ ಈಗ ಕಾಲ ಮೀರಿಹೋಗಿದೆ. ಒಂದು ವೇಳೆ ಯಾವುದಾದರೂ ಉದ್ಯೋಗ ಶಿಕ್ಷಣಕ್ಕೆ ಸೇರಿದರೂ, ಶಿಕ್ಷಣದ ಕಾಲ ಮುಗಿಯುವುದರೊಳಗಾಗಿ ಒಡೆಯನಿಗೆ ತಿಳಿಸದೆಯೇ ಓಡಿಹೋಗಿ, ನಾನು ನಾವಿಕನಾಗುವುದು ಖಂಡಿತ. ನನ್ನ ಮನಸ್ಸು ಏನೆಂಬುದು ನನಗೆ ಚೆನ್ನಾಗಿ ಗೊತ್ತು ; ನೀನು ಅಪ್ಪನಿಗೆ ಹೇಳಿ ನಾನು ಒಮ್ಮೆ ಕಡಲಮೇಲೆ ಹೋಗಿ ಬರಲು ಅವಕಾಶ ದೊರಕಿಸಿಕೊಡು. ನಾನು ಹಾಗೆ ಹೋಗಿ ಹಿಂದಿರುಗಿ ಬಂದಮೇಲೆ,

ಅನುಭವವೇ ಇಲ್ಲದ ನನಗೆ ಇಷ್ಟೇ ಸಾಕಾಯಿತು. ಪ್ರತಿಯೊಂದು ಅಲೆಯೂ ಹಡಗಿನಲ್ಲಿದ್ದ ನಮ್ಮನ್ನು ನುಂಗಿಬಿಡುವುದೆಂದು ಎಣಿಸಿದೆ ; ಅಲೆಯೊಡನೆ ಮೇಲಕ್ಕೆದ್ದು ಅಲೆಯಿಳಿದಾಗ ಅದರೊಡನೆ ದುಮುಕುವಂತೆ ಕಾಣುತ್ತಿದ್ದ ಹಡಗು ಮಗುಚಿಕೊಂಡುಬಿಡುವುದೆಂದು ಬಗೆದೆ. ನನ್ನ ಮನಸ್ಸು ಪ್ರಾಣಸಂಕಟಕ್ಕೆ ಸಿಲುಕಿ ಈ ರೀತಿ ಹೊಯ್ದಾಡುತ್ತಿದ್ದಾಗ, ದೇವರ ದಯದಿಂದ ಈ ಒಂದು ಪ್ರಯಾಣದಲ್ಲಿ ನಾನು ಬದುಕಿ ಪಾರಾಗಿ ಮತ್ತೆ ನೆಲದ ಮೇಲೆ ಕಾಲಿಟ್ಟರೆ ನೇರವಾಗಿ ಮನೆಗೆ ತೆರಳುವೆನೆಂದೂ ನನ್ನ ತಂದೆಯ ಸಲಹೆಯಂತೆ ನಡೆಯುವೆನೆಂದೂ ನಾನು ಬದುಕಿರುವವರೆಗೂ ಮತ್ತೆ ಎಂದೆಂದೂ ಹಡಗಿಗೆ ಕಾಲಿಡುವುದಿಲ್ಲವೆಂದೂ ಮುಂತಾಗಿ ಅನೇಕ ಸತ್ಸಂಕಲ್ಪಗಳನ್ನು ಮಾಡಿದೆ ; ಹಲವು ಬಾರಿ ಆಣೆಯಿಟ್ಟುಕೊಂಡೆ. ಮಧ್ಯಮದರ್ಜೆಯ ಜೀವನದ ವಿಚಾರವಾಗಿ ನನ್ನ ತಂದೆ ಆಡಿದ ಮಾತುಗಳ ವಿವೇಕವು ಈಗ ನನಗೆ ಗೋಚರಿಸತೊಡಗಿತು.

ಬಿರುಗಾಳಿ ಮಳೆಇದ್ದಷ್ಟು ಕಾಲವೂ, ಮತ್ತು ಆಮೇಲೂ ಕೂಡ ಕೆಲವು ಕಾಲದವರೆಗೆ ನನ್ನ ಈ ಒಳ್ಳೆಯ ಭಾವನೆಗಳು ಮನಸ್ಸಿನಲ್ಲಿದ್ದುವು. ಆದರೆ, ಮಾರನೆಯ ದಿನ ಗಾಳಿ ತಗ್ಗಿತು, ಕಡಲು ಸ್ವಲ್ಪ ಶಾಂತವಾಯಿತು. ಕಡಲ ಮೇಲಿನ ಬಾಳಿಗೆ ನಾನು ಕೊಂಚ ಕೊಂಚ ಪಳಗಿಕೊಳ್ಳತೊಡಗಿದೆ. ಆದರೂ ಕೂಡ, ಆ ದಿನವೆಲ್ಲಾ ಕಡಲ ಪಯಣದ ಪಿತ್ತ ಇನ್ನೂ ಇಳಿದಿರಲಿಲ್ಲವಾದ್ದರಿಂದ, ನಾನು ಮಂಕಾಗಿಯೇ ಇದ್ದೆ. ಆದರೆ, ರಾತ್ರಿಯ ಮುನ್ನ ವಾತಾವರಣ ತಿಳಿಯಾಯಿತು, ಗಾಳಿ ನಿಂತಿತು ; ಸಂಜೆ ಬಹು ಸೊಗಸಾಗಿತ್ತು ; ಆ ಸಂಜೆ ಸೂರ್ಯನು ಮುಳುಗಿದ್ದೂ, ಮಾರನೆಯ ಬೆಳಗ್ಗೆ ಮೂಡಿದ್ದೂ ಸ್ಪಷ್ಟವಾಗಿ ಸುಂದರವಾಗಿದ್ದುವು ; ಹಿಂದಿನ ಸಂಜೆಯಂತೆಯೇ ಗಾಳಿ ಇರಲಿಲ್ಲ, ಕಡಲು ಶಾಂತವಾಗಿತ್ತು ; ಕಡಲಮೇಲೆ ಬಿಸಿಲು ಫಲಫಳಿಸಿ ಹರಡಿತ್ತು. ಇಂಥ ಹಿಗ್ಗು ಹುಟ್ಟಿಸುವ ನೋಟವನ್ನು ಹಿಂದೆ ನಾನೆಂದೂ ಕಂಡಿರಲಿಲ್ಲ.

ಹಿಂದಿನ ರಾತ್ರೆ ನಿದ್ರೆ ಬಂದಿತ್ತು ; ಈಗ ಕಡಲ ಪಿತ್ತ ಅಷ್ಟು ಇರಲಿಲ್ಲ ; ಬಹಳ ಉಲ್ಲಾಸವಾಗಿಯೇ ಇದ್ದೆ. ಮುನ್ನಿನ ದಿನ ಅಷ್ಟೊಂದು ಕಲಕಿ ಹೋಗಿದ್ದ ಕಡಲು ಇಂದು ಬಹುಬೇಗ ಶಾಂತವಾಗಿಯೂ ಆಹ್ಲಾದಕರವಾಗಿಯೂ ಇದ್ದುದು ನನಗೆ ಅಚ್ಚರಿಯನ್ನುಂಟು ಮಾಡಿತು. ನನ್ನ ಮನಸ್ಸಿನಲ್ಲಿ ಮೊಳೆತಿದ್ದ ಸದ್ಭಾವನೆಗಳು ಎಲ್ಲಿ ಬೇರೂರಿಬಿಡುವುವೋ ಎಂದು ಅವನ್ನು ಕಿತ್ತುಹಾಕಲು ಬಂದನೋ ಎಂಬಂತೆ ನನ್ನನ್ನು ಕಡಲ ಪಯಣದತ್ತ ಸೆಳೆದಿದ್ದ ನನ್ನ ಗೆಳೆಯನು ನನ್ನ ಬಳಿಗೆ ಬಂದು ಮಾತನಾಡಿಸಿದನು ; ನನ್ನ ಬೆನ್ನು ತಟ್ಟಿ ನಾನು ಹೇಗಿರುವೆನೆಂದು ವಿಚಾರಿಸಿದನು.

ಸಮುದ್ರ ಮಾರ್ಗವಾಗಿ ಲಂಡನ್ ಪಟ್ಟಣಕ್ಕೆ ಹೋಗುವ ಸಿದ್ಧತೆಯಲ್ಲಿದ್ದನು. ನಾನು ಹೋಗುವುದಾದರೆ ನನ್ನನ್ನೂ ಜೊತೆಯಲ್ಲಿ ಕರೆದೊಯ್ಯುವುದಾಗಿಯೂ ಪ್ರಯಾಣದ ವೆಚ್ಚವೇನನ್ನೂ ನಾನು ವಹಿಸಿಕೊಳ್ಳಬೇಕಾಗಿಲ್ಲವೆಂದೂ ನನ್ನ ಗೆಳೆಯನು ನನಗೆ ಆಹ್ವಾನ ಕೊಟ್ಟನು. ಬಿಟ್ಟಿಯ ಪ್ರಯಾಣದ ಮಾತು ನನ್ನ ಬಗೆಮೀನಿಗೆ ಗಾಳವಾಗಿ ಪರಿಣಮಿಸಿತು. ನಾನು ನನ್ನ ತಾಯಿ ತಂದೆಗಳನ್ನು ಮತ್ತೆ ಸಲಹೆ ಕೇಳುವ ಯೋಚನೆ ಮಾಡಲಿಲ್ಲ ; ನಾನು ಪಯಣ ಹೊರಡುವ ವಿಷಯವಾಗಿ ಅವರಿಗೆ ಸುದ್ದಿಯನ್ನಾದರೂ ಮುಟ್ಟಿಸಲಿಲ್ಲ ; ಅದು ಅವರಿಗೆ ತಾನಾಗಿ ತಿಳಿಯಬೇಕಾಯಿತು. ದೇವರ ರಕ್ಷೆಯನ್ನಾಗಲಿ ತಂದೆಯ ಹರಕೆಯನ್ನಾಗಲಿ ಕೋರದೆ, ಸಮಯ ಸಂದರ್ಭಗಳನ್ನಾಗಲಿ ಫಲಾಫಲಗಳನ್ನಾಗಲಿ ಎಣಿಸದೆ, ೧೬೫೧ನೆಯ ಸೆಪ್ಟೆಂಬರ್ ಮೊದಲನೆಯ ತಾರೀಕಿನ ದಿನ ಲಂಡನ್ನಿಗೆ ಹೊರಟಿದ್ದ ಹಡಗನ್ನು ಹತ್ತಿದೆ. ನಾನು ಹೊರಟದ್ದು ಕೆಟ್ಟ ಘಳಿಗೆಯೋ ಏನೋ, ದೇವರೇ ಬಲ್ಲ.

ಲೋಕದಲ್ಲಿ ಸಾಹಸ ಕಾರ್ಯಗಳಲ್ಲಿ ತೊಡಗಿದವರು ಅನೇಕಾನೇಕ ಮಂದಿ. ಆದರೆ ಯಾರಿಗೂ ನನಗೆ ಸಂಭವಿಸಿದ ಹಾಗೆ ತೊಡಗಿದಾಗಲೇ ವಿಪತ್ಪರಂಪರೆಗಳು ತಲೆದೋರಿ ಕಡೆಯವರೆಗೂ ಬೆನ್ನು ಹತ್ತಿರಲಾರವು. ಹಡಗು ಅಂಬರ್ ರೇವನ್ನು ಬಿಟ್ಟಿತೋ, ಇಲ್ಲವೋ, ಗಾಳಿಯೆದ್ದು ಅಲೆಗಳು ಭಯಂಕರವಾಗಿ ಏಳತೊಡಗಿದುವು ; ನಾನು ಹಿಂದೆಂದೂ ಕಡಲಮೇಲೆ ಹೋದವನೇ ಅಲ್ಲವಾದ್ದರಿಂದ, ಹೇಳಲಾರದಷ್ಟು ದೇಹಾಲಸ್ಯ ಉಂಟಾಯಿತು. ಮನಸ್ಸು ಅತ್ಯಂತ ಕಳವಳಗೊಂಡಿತ್ತು.

ನಾನು ಕೈಕೊಂಡಿದ್ದ ಕಾರ್ಯದ ವಿಚಾರವಾಗಿ ಈಗ ಚಿಂತಿಸತೊಡಗಿದೆ. ತಂದೆಯ ಮನೆಯನ್ನು ತೊರೆದು, ಕೈಕೊಳ್ಳ ಬೇಕಾಗಿದ್ದ ಕರ್ತವ್ಯವನ್ನು ಬಿಟ್ಟು ಬಂದದ್ದಕ್ಕಾಗಿ ದೈವವು ಈ ರೀತಿ ನನ್ನ ಮೇಲೆ ಮುನಿದಿರುವುದು ನ್ಯಾಯವಾಗಿರಬೇಕೆಂದು ತೋರಿತು ; ನನ್ನ ತಾಯಿ ತಂದೆಗಳ ಕರುಳು ಮುಟ್ಟುವ ಹಿತದ ನುಡಿಗಳು, ತಂದೆಯ ಕಂಬನಿಗಳು, ತಾಯಿಯ ಮೊರೆ, ಎಲ್ಲವೂ ನನ್ನ ಮನಸ್ಸಿನಲ್ಲಿ ಮೂಡಿ ಕಂಡುವು. ಇನ್ನೂ ಜಡವಾಗದಿದ್ದ ನನ್ನ ಅಂತರಾತ್ಮವು ನನ್ನ ದುಡುಕಿನ ಕಾರ್ಯಕ್ಕಾಗಿ ನನ್ನನ್ನು ಹಳಿಯತೊಡಗಿತು.

ಈ ಮಧ್ಯೆ ಬಿರುಗಾಳಿಮಳೆ ಹೆಚ್ಚಿತು. ಕಡಲಿನ ಅಲೆಗಳು ಬಹು ಎತ್ತರಕ್ಕೆ ಚಿಮ್ಮಿದವು. ಮುಂದೆ ಕೆಲವು ದಿನಗಳಾದಮೇಲೆ ನಾನು ಕಂಡ ಕಡಲಿನ ಅಲ್ಲೋಲಕಲ್ಲೋಲಕ್ಕೆ ಹೋಲಿಸಿದರೆ ಈಗಿನದು ಅಲ್ಪವೇ. ಕಡಲ ಪಯಣದಲ್ಲಿ

ಕೊಚ್ಚಾಟಕ್ಕೆ ಸಿಲುಕಿತು ; ಹಡಗಿನ ಲಂಗರು ಎಲ್ಲೋ ಕಿತ್ತು ಹೋಗಿರಬೇಕೆಂದು ಒಮ್ಮೊಮ್ಮೆ ತೋರುತ್ತಿತ್ತು. ಅದರಿಂದಾಗಿ ಇದ್ದ ಲಂಗರಿನ ಜೊತೆಗೆ ದೊಡ್ಡ ಲಂಗರನ್ನೂ ಬಿಡಬೇಕೆಂದು ಹಡಗಿನ ಒಡೆಯನು ಅಪ್ಪಣೆ ಮಾಡಿದನು ; ಹೀಗೆ ಎರಡು ಲಂಗರು ಹಾಕಿಕೊಂಡು ಹಡಗು ತೇಲಾಡುತ್ತಿತ್ತು.

ಈ ಹೊತ್ತಿಗೆ ಭಯಂಕವಾದ ಬಿರುಗಾಳಿಯೆದ್ದಿತು. ಪಳಗಿದ ನಾವಿಕರ ಮುಖಗಳಲ್ಲಿ ಕೂಡ ಭಯ ದಿಗ್ಭ್ರಮೆಗಳು ಕಾಣತೊಡಗಿದುವು. ಹೀಗೆ ನಾವಿಕರು ದಿಕ್ಕುತೋರದೆ ಪೇಚಾಡುತ್ತಾ ಅಲ್ಲಿಂದಲ್ಲಿಗೆ ಓಡಾಡುತ್ತಿದ್ದಾಗ ನಾನು ನನ್ನ ಕೋಣೆಯಲ್ಲಿ ಏನು ಮಾಡುವುದಕ್ಕೂ ತೋರದೆ ಸುಮ್ಮನೆ ಮಲಗಿದ್ದೆ. ಆಗಿನ ನನ್ನ ಮನಸ್ಸಿನ ಸ್ಥಿತಿಯನ್ನು ನಾನು ವರ್ಣಿಸಲಾರೆ. ಮೊದಲು ಒಮ್ಮೆ ನನ್ನ ಮನಸ್ಸಿನಲ್ಲಿ ಪಶ್ಚಾತ್ತಾಪ ಭಾವನೆಯನ್ನು ನಾನಾಗಿ ತೊತ್ತಳದುಳಿದು ಇಲ್ಲವೆನ್ನಿಸಿ, ನನ್ನ ಮನಸ್ಸನ್ನು ಕಠಿನಗೊಳಿಸಿಕೊಂಡಿದ್ದೆ ; ಈಗ ಮತ್ತೆ ಆ ಭಾವನೆಯನ್ನು ಬೆಳಸುವುದು ದುಸ್ಸಾಧ್ಯವಾಗಿತ್ತು. ಅಲ್ಲದೆ, ಮೊದಲಿನ ಹಾಗೆಯೇ ಸಾವು ನಮ್ಮನ್ನು ಸೋಕಿಕೊಂಡು ಹೇಗಿ ಹಿಂದುಳಿಸುವುದೆಂದು ಬಗೆದೆ. ಆದರೆ ನನ್ನ ಕೋಣೆಯ ಬಳಿ ದಿಗ್ಭ್ರಮೆ ಹಿಡಿದು ಓಡಾಡುತ್ತಿದ್ದ ಹಡಗಿನ ಒಡೆಯನು ನಾವೆಲ್ಲರೂ ನಾಶ ಹೊಂದುವೆವೆಂದು ಪಿಟಗುಟ್ಟುತ್ತಾ ನಡುಗುವ ದನಿಯಲ್ಲಿ ಮೆಲ್ಲನೆ ದೇವರಿಗೆ ಮೊರೆಯಿಡುತ್ತಿದ್ದುದನ್ನು ಕೇಳಿದಾಗ ನನ್ನ ಮನಸ್ಸಿನಲ್ಲಿ ದಿಗಿಲು ಒಮ್ಮೆಯೇ ಭುಗಿಲನೆದ್ದಿತು. ಕೋಣೆಯಿಂದ ಹೊರಕ್ಕೆ ಬಂದು ನೋಡಿದೆ. ಅಂಥ ಭೀಕರ ದೃಶ್ಯವನ್ನು ನಾನೆಂದೂ ನೋಡಿರಲಿಲ್ಲ ; ಕಡಲು ಬೆಟ್ಟದೆತ್ತರಕ್ಕೆ ನೆಗೆದು, ನಿಮಿಷ ನಿಮಿಷಕ್ಕೂ ನಮ್ಮ ಮೇಲೆ ಉರುಳಿಬರುತ್ತಿದ್ದಿತು. ಸುತ್ತಲೂ ಏನೂ ಕಾಣುತ್ತಿರಲಿಲ್ಲ. ಒಮ್ಮೊಮ್ಮೆ ಏನಾದರೂ ಕಂಡರೆ, ಅದು ಬರಿಯ ಕಷ್ಟಕ್ಲೇಶಗಳ ನೋಟವಾಗಿತ್ತು. ನಮ್ಮ ಬಳಿಯೇ ತೇಲಾಡುತ್ತಿದ್ದ ಎರಡು ಹಡಗುಗಳು ತುಂಬ ಹೇರುತುಂಬಿಕೊಂಡಿದ್ದುವಾದ್ದರಿಂದ ಅವುಗಳ ಕೂವೆಗಳನ್ನು ಕತ್ತರಿಸಿಹಾಕಿಬಿಟ್ಟಿದ್ದರು; ನಮ್ಮ ಹಡಗಿನ ಮುಂದೆ ಒಂದು ಮೈಲಿಯ ಆಚೆ ತೇಲುತ್ತಿದ್ದ ಇನ್ನೊಂದು ಹಡಗು ಮುಳುಗಿಹೋಯಿತೆಂದು ನಮ್ಮ ಹಡಗಿನ ಮಂದಿ ಕೂಗಿದರು. ಮತ್ತೆರಡು ಹಡಗುಗಳ ಲಂಗರು ಕಿತ್ತುಹೋಗಿ, ಒಂದು ಕೂವೆಯೂ ಇಲ್ಲದೆ, ಅವು ನಿಲ್ಲೆಡೆಯನ್ನು ಬಿಟ್ಟು ನಡುಗಡಲ ಕಡೆಗೆ ಕೊಚ್ಚಿಕೊಂಡು ಹೋಗಿದ್ದುವು. ಹಗುರವಾದ ಹಡಗುಗಳು ಮಾತ್ರ ಹೆಚ್ಚು ಪ್ರಯಾಸವಿಲ್ಲದೆ ತೇಲಾಡುತ್ತಿದ್ದುವು ; ಅವುಗಳಲ್ಲಿ ಕೂಡ ಎರಡು ಮೂರು ದಿಕ್ಕಾಪಾಲಾಗಿ ಹರಿದಾಡುತ್ತಿದ್ದುವು.

"ಎಂಥ ಬಿರುಗಾಳಿ!" ಎಂದದ್ದಕ್ಕೆ, "ಇದು ಬಿರುಗಾಳಿಯೇ? ಬರಿಯ ಬಯಲುಗಾಳಿ. ಈಗ ಹವ ಎಷ್ಟು ಸೊಗಸಾಗಿದೆ ನೋಡು? ಎಲ್ಲಿ, ಬಾ ; ಒಂದಿಷ್ಟು 'ಪಂಚ್' ಮದ್ಯ ಕುಡಿಯೋಣ" ಎಂದು ನನ್ನನ್ನು ಜೊತೆಗೆ ಕರೆದು, ನನಗೆ ಬೇಕಾದಷ್ಟು ಮದ್ಯವನ್ನು ಕುಡಿಸಿದ. ಒಂದು ರಾತ್ರಿಯ ಕುಡಿತದ ಕೀಳುನಡತೆ ನನ್ನ ಪಶ್ಚಾತ್ತಾಪವನ್ನೆಲ್ಲಾ ನಂದಿಸಿ, ನನ್ನ ಸತ್ಸಂಕಲ್ಪಗಳನ್ನೆಲ್ಲ ಮುರಿದುಬಿಟ್ಟಿತು. ಕಡಲು ತನ್ನ ಅಲೆಯ ನಾಲಗೆಯನ್ನು ಚಾಚಿ ನನ್ನನ್ನು ನೊಣೆಯಬಹುದೆಂಬ ಹೆದರಿಕೆ ಹಾರಿಹೋಯಿತು ; ಕಡಲ ಸೊಗಸು ನೋಟ ನನ್ನ ಮೊದಲಿನ ಬಯಕೆಗಳ ಭಿತ್ತಿಗೆ ಹೊಯ್ನೀರೆರೆಯಿತು. ಐದಾರು ದಿನ, ಒಡನಾಡಿಗಳ ಜೊತೆ ಕುಡಿಯುವುದರಲ್ಲೂ ವಿನೋದದಲ್ಲೂ ಕಾಲಕಲೆದು, ಸತ್ಸಂಕಲ್ಪಗಳ ಪ್ರೇರಕವಾದ ಅಂತರಾತ್ಮವನ್ನು ಅದುಮಿ ಅಡಗಿಸಿಬಿಟ್ಟೆ. ಆದರೆ ದೈವವು ಇನ್ನೂ ಒಮ್ಮೆ ನನ್ನನ್ನು ಪರೀಕ್ಷೆಗೊಡ್ಡಿತು. ಆರನೆಯ ದಿನ ನಾವು ಯಾರ್‌ಮೌತ್ ಎಂಬ ಹಡಗು ನಿಲ್ಲುವ ಎಡೆಗೆ ಬಂದೆವು. ಇನ್ನೂ ಏಳೆಂಟು ದಿನಗಳ ಕಾಲದವರೆಗೂ ಗಾಳಿ ಪ್ರತಿಕೂಲವಾಗಿದ್ದುದರಿಂದ ನಾವು ಅಲ್ಲಿ ಹಡಗಿಗೆ ಲಂಗರು ಹಾಕಿ ಉಳಿದುಕೊಳ್ಳಬೇಕಾಯಿತು. ಈ ಕಾಲದಲ್ಲಿ ನ್ಯೂ ಕ್ಯಾಸಲ್‌ನಿಂದ ಅನೇಕ ಹಡಗುಗಳು ನದಿಯ ಮೇಲೆ ಬಂದು, ಮುಂದಿನ ಪ್ರಯಾಣಕ್ಕೆ ಅನುಕೂಲವಾದ ಗಾಳಿಗಾಗಿ ಕಾಯುತ್ತಿದ್ದುವು.

ನಾವು ಇಲ್ಲಿ ಹೆಚ್ಚುಕಾಲ ಲಂಗರು ಹಾಕಿ ನಿಲ್ಲದೆ ಸಮುದ್ರದ ಉಬ್ಬರದೊಡನೆ ನದಿಯೊಳಕ್ಕೆ ಪ್ರಯಾಣ ಮಾಡಬೇಕಾಗಿತ್ತು ; ಆದರೆ, ನಾವು ಹೀಗೆ ನಾಲ್ಕೈದು ದಿನ ಲಂಗರು ಹಾಕಿ ನಿಂತಿದ್ದ ಮೇಲೆ, ಕೊಂಚ ಬಲವಾಗಿದ್ದ ಗಾಳಿ ಇನ್ನೂ ಬಲವಾಗಿ ಬೀಸತೊಡಗಿತು. ತೀರದ ಬಳಿಯ ಈ ಹಡಗುನಿಲ್ಲೆಡೆ ರೇವಿನಷ್ಟೆ ಸುರಕ್ಷಿತವೆಂಬ ಎಣಿಕೆ ಇದ್ದುದರಿಂದಲೂ, ಹಡಗಿಗೆ ಚೆನ್ನಾಗಿ ಲಂಗರು ಹಾಕಿದ್ದುದರಿಂದಲೂ, ಹಾಯಿಕೂವೆಗಳನ್ನು ಎತ್ತಿ ಇಳಿಸುವ ಸಜ್ಜು ಬಲವಾಗಿದ್ದುದರಿಂದಲೂ, ಹಡಗಿನ ಮಂದಿ ಏನೂ ಕಳವಳಗೊಳ್ಳದೆ, ಯಾವ ಅಪಾಯವನ್ನೂ ಶಂಕಿಸದೆ, ನಿರಾತಂಕವಾಗಿ ಕಾಲ ಕಳೆಯುತ್ತಿದ್ದರು. ಆದರೆ ಎಂಟನೆಯ ದಿನ ಬೆಳಗ್ಗೆ ಗಾಳಿ ಬಿರುಸಾಯಿತು ; ಹಡಗು ಹೊಯ್ದಾಡದೆ ಲಂಗರು ಬಿಟ್ಟುಕೊಂಡು ನಿಂತೆಡೆಯಲ್ಲಿ ನಿಂತಿರುವಂತೆ ಮಾಡುವುದಕ್ಕಾಗಿ, ಎಲ್ಲರೂ ಸೇರಿ ಮೇಲಣ ಕೂವೆಗಳನ್ನು ಇಳಿಸಬೇಕಾಯಿತು. ಮಧ್ಯಾಹ್ನದ ಹೊತ್ತಿಗೆ ಅಲೆಗಳು ಬಹಳ ಎತ್ತರಕ್ಕೆ ಎದ್ದು, ಹಡಗಿನ ಅಟ್ಟದ ಮುಂಭಾಗವು ನೀರಿನಲ್ಲಿ ಮುಳುಗಿಹೋಯಿತು ; ಹಡಗು ಹಾಗೆಯೇ ತೇಲುತ್ತಾ ಹಲವಾರು ಅಲೆಗಳ

ಮನಃಪೂರ್ವಕವಾಗಿ ಕೆಲಸಮಾಡತೊಡಗಿದೆ. ಈ ಕೆಲಸ ಸಾಗುತ್ತಿದ್ದಾಗ, ನಮ್ಮ ಹಡಿನ ಒಡೆಯನು ಕೆಲವು ಹಗುರವಾದ ಕಲ್ಲಿದ್ದಲ ಹಡಗುಗಳನ್ನು ನೋಡಿದನು; ಬಿರುಗಾಳಿಮಳೆಯಲ್ಲಿ ಅವು ಲಂಗರು ಬಿಟ್ಟುಕೊಂಡು ತೇಲುತ್ತಾ ನಿಂತಿರಲಾರದೆ ಕಡಲೊಳಕ್ಕೆ ಹರಿದುಬಂದು ನಮ್ಮ ಹಡಗಿನ ಸಮೀಪಕ್ಕೆ ಬರಲಿರುವುವೆಂದು ಆತನಿಗೆ ಗೊತ್ತಾಗಲು, ವಿಪತ್ಸೂಚನೆಯಾಗಿ ಒಂದು ಗುಂಡು ಹಾರಿಸುವಂತೆ ಅಪ್ಪಣೆ ಮಾಡಿದನು. ಇದರ ಅರ್ಥವೇನೋ ನನಗೆ ಆಗ ತಿಳಿಯಲಿಲ್ಲ ; ನಾನು ಬಹಳ ಬೆರಗುಗೊಂಡು, ಎಲ್ಲೋ ಹಡಗು ಮುರಿದು ಹೋಗಿರಬೇಕೆಂದು ಯೋಚಿಸಿದೆ. ನನಗೆ ಎಷ್ಟು ನಿಬ್ಬೆರಗಾಯಿತೆಂದರೆ, ಆ ಮಾತು ಕೇಳಿದ ಕೂಡಲೆ ಕೆಲವು ಕಾಲ ಮೂರ್ಛೆ ಬಿದ್ದಂತೆ ಬಿದ್ದಿದ್ದೆ. ಆಗ ಪ್ರತಿಯೊಬ್ಬನೂ ತನ್ನ ಪ್ರಾಣವನ್ನು ಕಾಪಾಡಿಕೊಳ್ಳುವ ಮುಂಜಾಗ್ರತೆಯಲ್ಲಿ ಇರುವಂಥ ಸಮಯವಾದ್ದರಿಂದ ಯಾರೂ ನನ್ನನ್ನು ಗಮನಿಸಲೇ ಇಲ್ಲ ; ಒಮ್ಮೆ ಒಬ್ಬನು ಪಂಪಿನ ಬಳಿಗೆ ಕಾಲಿನಿಂದ ಪಕ್ಕಕ್ಕೆ ತಳ್ಳಿ ಎಡೆ ಮಾಡಿಕೊಂಡು ಹೋಗಿದ್ದ ; ಬಹಳ ಹೊತ್ತಾದಮೇಲೆ ನನಗೆ ಎಚ್ಚರವಾಯಿತು.

ನಾವು ಕೆಲಸಮಾಡುತ್ತಲೇ ಇದ್ದೆವು. ಆದರೂ ಸಾಮಾನುಕುಳಿಯಲ್ಲಿ ನೀರು ಹೆಚ್ಚುಹೆಚ್ಚಾಗಿ ತುಂಬಿಕೊಳ್ಳುತ್ತಿತ್ತು. ಬಿರುಗಾಳಿ ಕೊಂಚ ತಗ್ಗತೊಡಗಿದರೂ, ಒಂದು ರೇವು ಸಿಕ್ಕುವವರೆಗೂ ತೇಲಿಕೊಂಡು ಹೋಗಲು ನಮ್ಮ ಹಡಗಿಗೆ ಸಾಧ್ಯವಿರಲಿಲ್ಲ. ಆದ್ದರಿಂದ, ಸಹಾಯ ಬೇಕೆಂಬುವ ಸೂಚನೆಯಾಗಿ ಒಡೆಯನು ಗುಂಡುಹಾರಿಸುತ್ತಲೇ ಇದ್ದನು. ಆಗ ನಮ್ಮ ಮುಂದುಗಡೆ ತೇಲಿಹೋಗುತ್ತಿದ್ದ ಒಂದು ಹಗುರವಾದ ಹಡಗು ನಮಗೆ ಸಹಾಯಮಾಡುವುದಕ್ಕಾಗಿ ಒಂದು ದೋಣಿಯನ್ನು ಬಹಳ ಸಾಹಸದಿಂದ ತೇಲಬಿಟ್ಟಿತು. ದೋಣಿಯೋನೋ ನಮ್ಮ ಸಮೀಪಕ್ಕೆ ಬಹಳ ಕಷ್ಟದಿಂದ ಬಂದಿತು. ಆದರೆ, ದೋಣಿಯನ್ನು ಹತ್ತಲು ನಮಗೆ ಅಸಾಧ್ಯವಾಗಿತ್ತು ; ಅಂತೆಯೇ ನಮ್ಮ ಹಡಗಿನ ಪಕ್ಕದ ಬಳಿ ಬಂದು ನಿಲ್ಲಲು ದೋಣಿಗೂ ಅಸಾಧ್ಯವಾಗಿತ್ತು. ಕಟ್ಟಕಡೆಗೆ ದೋಣಿಯಲ್ಲಿದ್ದವರು ಬಹಳ ಧೈರ್ಯಸಾಹಸಗಳಿಂದಲೂ ತಮ್ಮ ಪ್ರಾಣಗಳನ್ನಾದರೂ ತೆತ್ತು ನಮ್ಮನ್ನು ಉಳಿಸಬೇಕೆಂಬ ದೃಢಸಂಕಲ್ಪದಿಂದಲೂ ಕೂಡಿದವರಾಗಿ, ಬಹಳ ಉತ್ಸಾಹದಿಂದ ಹುಟ್ಟುಹಾಕುತ್ತಾ ಬರುತ್ತಿದ್ದರು. ಆಗ ನಮ್ಮ ಹಡಗಿನವರು ಒಂದು ದೊಡ್ಡ ಹಗ್ಗಕ್ಕೆ ಒಂದು ತೇಲುವೆಯನ್ನು ಕಟ್ಟಿ ಅದು ದೋಣಿಯನ್ನು ಸಮೀಪಿಸುವಂತೆ ಬಹುದೂರಕ್ಕೆ ಎಸೆದರು. ದೋಣಿಯವರು ಬಹಳ ಕಷ್ಟಸಾಹಸಗಳಂದ ಆ ತೇಲುವೆಯನ್ನು ಹಿಡಿದುಕೊಂಡರು. ಆಗ ನಾವು ಹಗ್ಗಹಿಡಿದು ಆ ದೋಣಿಯನ್ನು

ಸಂಜೆಯಾದಾಗ ಹಡಗಿನ ನಾಯಕನ ಸಹಾಯಕನೂ ಹಡಗಿನ ಮೇಲ್ವಿಚಾರಕನೂ ಮುಂಗೂವೆಯನ್ನು ಕತ್ತರಿಸಿಬಿಡಬೇಕೆಂದು ನಾಯಕನನ್ನು ಬೇಡಿಕೊಂಡರು ; ಹಾಗೆ ಮಾಡುವುದು ನಾಯಕನಿಗೆ ಇಷ್ಟವಿರಲಿಲ್ಲ. ಹಾಗೆ ಮಾಡದಿದ್ದರೆ ಹಡಗು ಮುಳುಗಿ ಹೋಗುವುದೆಂದು ಅವರು ಹೇಳಿದಾಗ ಆತನು ಒಪ್ಪಿಕೊಂಡನು ; ಬಳಿಕ ಮುಂಗೂವೆಯನ್ನು ಕತ್ತರಿಸಿಹಾಕಲಾಯಿತು ; ಅದರ ಪರಿಣಾಮವಾಗಿ ಮುಖ್ಯ ಕೂವೆ ತುಂಬ ಸಡಿಲವಾಗಿ ಹಡಗು ಕುಲುಕಾಡಲು ಮೊದಲಾಯಿತು ; ಹೀಗಾಗಲು, ಮುಖ್ಯ ಕೂವೆಯನ್ನೂ ಕಡಿದುಹಾಕಿ, ಹಡಗಿನ ಅಟ್ಟ ಕೂವೆಯಿಲ್ಲದೆ ಬೋಳಾಗಿ ನಿಂತಿತು.

ಹಡಗುಪಯಣದ ಅನುಭವವೇ ಇಲ್ಲದ ನನ್ನ ಆಗಿನ ದುಃಸ್ಥಿತಿಯನ್ನು ಊಹೆಗೆ ಬಿಡಲು ಸಾಧ್ಯವೇ ಹೊರತು ನಾನು ಬಣ್ಣಿಸಲಾರೆ. ನನ್ನ ತಂದೆಯ ಹಿತೋಕ್ತಿ ಅದನ್ನು ಮೀರಿ ನಾನು ದುಡುಕಿದ್ದು, ಆಮೇಲೆ ಕಷ್ಟಸ್ಥಿತಿಯಲ್ಲಿ ಪಶ್ಚಾತ್ತಾಪ ಪಟ್ಟದ್ದು – ಇವೆಲ್ಲವನ್ನೂ ನೆನೆನೆದು ನನ್ನ ಮನಸ್ಸು ಕಡಲಿನಂತೆಯೇ ಕಲಕಿಹೋಗಿತ್ತು. ಸಾವನ್ನು ಎದುರಿಸಿದಾಗ ಕೂಡ ಮನಸ್ಸು ಅಷ್ಟೊಂದು ದಿಗಿಲುಗೊಂಡಿರಲಾರದು. ಆದರೆ ಇನ್ನೂ ಆತಂಕ ಉತ್ಕಟಾವಸ್ಥೆ ಬಂದಿರಲಿಲ್ಲ. ಬಿರುಗಾಳಿಮಳೆ ಇನ್ನೂ ಅತ್ಯಂತ ರಭಸವಾಗಿಯೇ ಸಾಗುತ್ತಿತ್ತು. ಇದಕ್ಕಿಂತಲೂ ಉಗ್ರವಾದ ಬಿರುಗಾಳಿಮಳೆಯನ್ನು ತಾವು ಹಿಂದೆಂದೂ ಕಂಡಿರಲಿಲ್ಲವೆಂದು ನಾವಿಕರೇ ಒಪ್ಪಿಕೊಂಡರು. ನಮ್ಮ ಹಡಗೇನೋ ಸೊಗಸಾದದ್ದೇ ; ಆದರೆ ಹೊರೆ ಹೆಚ್ಚಾಗಿದ್ದುದರಿಂದ ಕೆಸರಿನಲ್ಲಿ ಸಿಕ್ಕಿಕೊಂಡ ಗಾಡಿಯಂತೆ ಅದು ಕಡಲಿನಲ್ಲಿ ಒದ್ದಾಡುತ್ತಿತ್ತು. ಹಡಗಿನ ನಾಯಕನೂ ಇತರರು ಕೆಲವರೂ ದೇವರನ್ನು ಪ್ರಾರ್ಥನೆ ಮಾಡುತ್ತಾ, ಹಡಗು ಕಡಲ ಪಾಲಾಗುವುದೆಂದು ಪ್ರತಿಕ್ಷಣದಲ್ಲಿಯೂ ನಿರೀಕ್ಷಿಸುತ್ತಿದ್ದರು. ನಟ್ಟಿರುಳಿನಲ್ಲಿ, ಆವರೆಗೂ ನಮಗೆ ಸಂಭವಿಸಿದ್ದ ಕಷ್ಟ ಪರಂಪರೆ ಸಾಲದೋ ಎಂಬಂತೆ, ಹಡಗಿನ ತಳಭಾಗವನ್ನು ಪರೀಕ್ಷಿಸಿ ನೋಡಲು ಹೋಗಿದ್ದವನು ಮೇಲಕ್ಕೆ ಬಂದು ಹಡಗು ತೂತುಬಿದ್ದಿದೆಯೆಂದು ಕೂಗಿಕೊಂಡನು; ಅಟ್ಟದ ಕೆಳಗಿನ ಸಾಮಾನು ತುಂಬುವ ಕುಳಿಯಲ್ಲಿ ನಾಲ್ಕು ಅಡಿ ನೀರು ನಿಂತಿದೆಯೆಂದು ಮತ್ತೊಬ್ಬನು ಚೀರಿದನು. ನೀರನ್ನು ಹೊರಸಾಗಿಸಲು ಪಂಪಿನ ಬಳಿಗೆ ಹೋಗಬೇಕೆಂದು ಎಲ್ಲರಿಗೂ ಆಜ್ಞೆಯಾಯಿತು. ಆ ಮಾತನ್ನು ಕೇಳಿ ನನ್ನ ಎದೆ ಝುಗ್ಗನೆ ಕುಸಿದುಹೋಯಿತು ; ಇದುವರೆಗೂ ಏನನ್ನೂ ಮಾಡಲಾರದವನಾಗಿದ್ದ ನನ್ನನ್ನೂ ಸಹ ನೀರೆತ್ತುವ ಕೆಲಸದಲ್ಲಿ ನೆರವಾಗಬೇಕೆಂದು ಹಡಗಿನವರು ಕರೆದುಕೊಂಡು ಹೋದರು. ನಾನು ಪಂಪಿನ ಬಳಿಗೆ ಹೋಗಿ

ಆದರೆ ನಾನು ಕಡಲ ಪಾಲಾಗಿಲ್ಲವೆಂಬ ಭರವಸೆ ಬಹಳ ಕಾಲದವರೆಗೂ ಅವರಿಗೆ ದೊರೆತಿರಲಿಲ್ಲ.

ನನ್ನ ದುರ್ದೈವವು ದುರ್ದಮ್ಯವಾದ ಛಲದಿಂದ ನನ್ನನ್ನು ಮುನ್ನೂಕಿಕೊಂಡು ಹೋಯಿತು ; ಮನೆಗೆ ಹಿಂದಿರುಗುವಂತೆ ನನ್ನನ್ನು ವಿವೇಕವಾಣಿ ಪ್ರೇರಿಸುತ್ತಿದ್ದರೂ ಅದರ ಪ್ರೇರಣೆಯಂತೆ ನಡೆಯಲು ನನಗೆ ಸಾಮರ್ಥ್ಯವಿರಲಿಲ್ಲ. ಇದನ್ನು ಹೇಗೆ ಅರ್ಥಮಾಡಬೇಕೊ ನಾನರಿಯೆ. ಯಾವುದೋ ಒಂದು ರಹಸ್ಯವಾದ ವಿಧಾಯಕ ನಿಯಮವು ನಮ್ಮ ಬೆನ್ನ ಹಿಂದೆ ಇದ್ದು ವಿಧಿಲಿಖಿತಕ್ಕೆ ಅನುಸಾರವಾಗಿ ವಿನಾಶದ ಪ್ರಪಾತಕ್ಕೆ ನಮ್ಮನ್ನು ತಳ್ಳುತ್ತಿರುತ್ತದೆಯೆಂದೇ ತೋರುತ್ತದೆ. ಮನಸ್ಸು ಸ್ತಿಮಿತವಾಗಿದ್ದಾಗ ಮಾಡಿದ ಒಳ್ಳೆಯ ಆಲೋಚನೆಗಳನ್ನೆಲ್ಲ ಮರೆತು, ಕಣ್ಣು ತೆರೆದುಕೊಂಡೇ ನಮ್ಮ ಮುಂದಿರುವ ಹಳ್ಳಕ್ಕೆ ನಾವು ಬೀಳಹೋಗುವುದಾದರೆ ಇನ್ನೇನು ತಾನೆ ಹೇಳಲಾದೀತು?

ನನ್ನ ಮನಸ್ಸನ್ನು ಕಡಲ ಪ್ರಯಾಣಕ್ಕೆ ಒಗ್ಗಿಸಿಕೊಳ್ಳುವುದರಲ್ಲಿ ನನಗೆ ಮೊದಲು ನೆರವಾಗಿದ್ದ ನನ್ನ ಸಂಗಾತಿ, ಹಡಗಿನ ಒಡೆಯನ ಮಗ ; ಅವನು ನನ್ನಷ್ಟು ಮುನ್ನುಗ್ಗುವವನಾಗಿರಲಿಲ್ಲ. ಯಾರ್‌ಮೌತ್ ಪಟ್ಟಣದಲ್ಲಿ ತಂಗಿದ್ದಾಗ ನಾವೆಲ್ಲ ಒಬ್ಬೊಬ್ಬರು ಒಂದೊಂದುಕಡೆ ಬೇರೆ ಬೇರೆ ಬಿಡಾರಗಳಲ್ಲಿದ್ದೆವು. ನಾವಿಬ್ಬರೂ ಒಬ್ಬರನ್ನೊಬ್ಬರು ನೋಡಿ ಎರಡುಮೂರು ದಿನಗಳಾಗಿದ್ದುವು. ಅವನು ಮೊದಲಸಲ ನನ್ನನ್ನು ಕಂಡು ಮಾತನಾಡಿಸಿದಾಗ ಅವನ ಧ್ವನಿ ಕೊಂಚ ಕುಗ್ಗಿತ್ತು, ಮುಖ ಮಂಕಾಗಿತ್ತು. ಅವನು ನನ್ನ ಕ್ಷೇಮಸಮಾಚಾರವನ್ನು ವಿಚಾರಿಸಿದಮೇಲೆ ನಾನು ಯಾರೆಂಬುದನ್ನು ತನ್ನ ತಂದೆಗೆ ತಿಳಿಸಿ, ಇನ್ನೂ ದೂರದೇಶಗಳ ಪ್ರಯಾಣ ಮಾಡುವುದಕ್ಕೆ ಪೂರ್ವಭಾವಿಯಾಗಿ ಕಡಲ ಪ್ರಯಾಣದ ಅನುಭವ ಪಡೆಯಲು ಈ ಪ್ರಯಾಣವನ್ನು ನಾನು ಕೈಗೊಂಡಿದ್ದೆನೆಂಬುದಾಗಿ ಹೇಳಿದನು. ಅವನ ತಂದೆ ನನ್ನ ಕಡೆಗೆ ತಿರುಗಿ, ನಾನು ಇನ್ನುಮುಂದಕ್ಕೆ ಕಡಲ ಪ್ರಯಾಣ ಮಾಡಕೂಡದೆಂದೂ ಈಗ ಸಂಭವಿಸಿದ್ದ ದುರ್ಘಟನೆಯಿಂದ ನಾನು ಪಾಠ ಕಲಿಯಬೇಕೆಂದೂ ಚಿಂತೆ ಆತಂಕಗಳಿಂದ ಕೂಡಿದ ಧ್ವನಿಯಲ್ಲಿ ಹೇಳಿದರು. ನಾನು ಅವರಿಗೆ ನನ್ನ ಕಥೆಯನ್ನೆಲ್ಲ ಹೇಳಿ, ನನ್ನ ಆಸೆ ಕನಸುಗಳನ್ನು ಬಿತ್ತರಿಸಿದೆ. ನನ್ನ ಮಾತನ್ನು ಕೇಳಿ ಅವರು ವಿಚಿತ್ರವಾದ ಭಾವೋದ್ರೇಕದಿಂದ ಸಿಡಿದು ನುಡಿದರು: "ನಿನ್ನಂಥ ದುರದೃಷ್ಟಶಾಲಿ ನನ್ನ ಹಡಗಿಗೆ ಕಾಲಿಡುವಂಥ ಯಾವ ಪಾಪಕಾರ್ಯವನ್ನು ನಾನು ಆಚರಿಸಿದ್ದೆ? ನೀನು ಕಾಲಿಟ್ಟು ನನ್ನ ಹಡಗು ಹಾಳಾಯಿತು. ಸಾವಿರ ಹೊನ್ನು ಕೊಟ್ಟರೂ ನೀನು ಹತ್ತಿದ ಹಡಗನ್ನು ನಾನು ಇನ್ನು ಮೆಟ್ಟುವುದಿಲ್ಲ." ತಮಗಾದ ನಷ್ಟವನ್ನು ನೆನೆದು ಅವರು ಈ ರೀತಿ

ನಮ್ಮ ಹಡಗಿನ ಹತ್ತಿರ ಹತ್ತಿರಕ್ಕೆ ಎಳೆದುಕೊಂಡು, ಎಲ್ಲರೂ ದೋಣಿಯನ್ನು ಸೇರಿದೆವು. ನಾವೆಲ್ಲ ದೋಣಿಯಲ್ಲಿ ಕುಳಿತಮೇಲೆ, ಮತ್ತೆ ಅವರ ಹಡಗನ್ನು ಹತ್ತಬೇಕೆಂದು ನಾವಾಗಲಿ ಅವರಾಗಲಿ ಯೋಚಿಸುವುದರಿಂದ ಏನೂ ಪ್ರಯೋಜನವಾಗುವಂತಿರಲಿಲ್ಲ. ಆದ್ದರಿಂದ ಸಾಧ್ಯವಾದಷ್ಟು ಪ್ರಯತ್ನಮಾಡಿ ದೋಣಿಯನ್ನು ಕಡಲ ಕರೆಯ ಕಡೆಗೆ ತೆಗೆದುಕೊಂಡು ಹೋಗುವುದೇ ಲೇಸೆಂದು ಯೋಚಿಸಿದೆವು. ಇದೇ ಸರಿಯಾದ ಯೋಚನೆಯೆಂದು ಎಲ್ಲರೂ ಒಪ್ಪಿದಮೇಲೆ ಕಡಲ ಕರೆಗೆ ಓಲಿಕೊಂಡು ಹೋಗುವಂತೆ ದೋಣಿಯುವರು ಹುಟ್ಟುಹಾಕತೊಡಗಿದರು.

ನಾವು ಹಡಗು ಬಿಟ್ಟು ಕಾಲುಗಂಟೆಗಿಂತ ಹೆಚ್ಚಾಗಿರಲಿಲ್ಲ ; ಆಗ ನಮ್ಮ ಹಡಗು ಮುಳುಗುತ್ತಿರುವುದು ನಮಗೆ ಕಂಡುಬಂದಿತು. ಹಡಗು ಮುಳುಗುತ್ತಿದೆಯೆಂದು ನಾವಿಕರು ನನಗೆ ಹೇಳಿದಾಗ ನನ್ನ ಎದೆ ಒಡೆದು ಹೋಯಿತು ; ಎಂಥಾ ವಿನಾಶದಿಂದ ಪಾರಾದೆವೆಂದು ನೆನೆದಾಗ, ಇನ್ನೆಂಥ ಘೋರ ವಿಪತ್ತು ನಮಗಾಗಿ ಕಾದಿರಬಹುದೋ ಎಂದು ತೋರಿ, ಭೀತಿಯ ಭರದಿಂದ ಎದೆ ಕುಸಿದುಹೋಯಿತು.

ನಾವು ಈ ಸ್ಥಿತಿಯಲ್ಲಿದ್ದಾಗ, ದೋಣಿಯವರು ದೋಣಿಯನ್ನು ಕರೆಯಂಚಿಗೆ ತೆಗೆದುಕೊಂಡುಹೋಗಲು ಸಾಹಸಪಡುತ್ತಿದ್ದಾಗ, ನಮ್ಮ ದೋಣಿ ಅಲೆಗಳ ಮೇಲೆ ಎದ್ದು ಬೀಳುತ್ತಿದ್ದಾಗ, ಕಡಲ ಕರೆ ಕ್ರಮಕ್ರಮವಾಗಿ ದೃಷ್ಟಿಗೋಚರವಾಗುತ್ತ ಬಂದಿತು ; ನಾವು ಕರೆಯನ್ನು ಸಮೀಪಿಸಿದಾಗ ನಮಗೆ ಸಹಾಯ ಮಾಡುವುದಕ್ಕಾಗಿ ಅನೇಕ ಜನ ಕರೆಯುದ್ದಕ್ಕೂ ಓಡಾಡುತ್ತಿದ್ದುದೂ ಕಂಡುಬಂದಿತು. ಕಡಲಾಳ ಕಡಮೆಯಾಗಿ ನೆಲಸಿಕ್ಕುತ್ತ ಬಂದಂತೆ ಗಾಳಿಯ ಬಿರುಸು ಕೂಡ ತಗ್ಗುತ್ತಾ ಬಂದಿತು. ಕಡಗೆ ದೋಣಿ ಸುರಕ್ಷಿತವಾಗಿ ಕರೆಯನ್ನು ಮುಟ್ಟಿತು. ನಾವೆಲ್ಲರೂ ದೋಣಿಯನ್ನಿಳಿದು ಸ್ವಲ್ಪ ದೂರದಲ್ಲಿದ್ದ "ಯಾರ್‌ಮೌತ್" ಪಟ್ಟಣಕ್ಕೆ ನಡೆದುಕೊಂಡೇ ಹೋದೆವು. ಪಟ್ಟಣದ ಅಧಿಕಾರಿಗಳು ದುರ್ದಶೆಯಲ್ಲಿದ್ದ ನಮ್ಮನ್ನು ಬಹಳ ದಯೆಯಿಂದ ಸತ್ಕರಿಸಿ ಒಳ್ಳೆಯ ಬಿಡಾರವನ್ನು ಒದಗಿಸಿಕೊಟ್ಟರು. ಅಲ್ಲಿನ ಕೆಲವು ವರ್ತಕರೂ, ಹಡಗಿನ ಒಡೆಯರೂ, ನಾವು ನಮ್ಮ ಇಷ್ಟಬಂದಂತೆ ಲಂಡನ್ನಿಗಾಗಲಿ ಮರಳಿ ಹಲ್‌ಪಟ್ಟಣಕ್ಕಾಗಲಿ ಹಿಂದಿರುಗಲು ಸಾಕಾಗುವಷ್ಟು ಹಣವನ್ನೂ ಕೊಟ್ಟರು.

ಹಲ್ ಪಟ್ಟಣಕ್ಕೆ ಮರಳಿ ಹೋಗಿ ಮನೆಗೆ ಹಿಂದಿರುಗಿ ಹೋಗುವ ಸದ್ಬುದ್ಧಿ ನನಗೆ ಬಂದಿದ್ದರೆ ನಾನು ಎಷ್ಟೋ ಸುಖವಾಗಿರಬಹುದಾಗಿತ್ತು. ನಾನು ಪ್ರಯಾಣ ಮಾಡಿದ ಹಡಗು ಯಾರ್‌ಮೌತ್ ಪಟ್ಟಣದ ಹಡಗು ನಿಲ್ಲೆಡೆಯಲ್ಲಿ ಕಡಲಪಾಲಾಯಿತೆಂಬ ಸಮಾಚಾರ ನಮ್ಮ ತಂದೆಯ ಕಿವಿಗೂ ಮುಟ್ಟಿತ್ತು ;

# ಅಧ್ಯಾಯ ೨

## ಗಿನಿ ಪ್ರಯಾಣ

ಯಾವ ದುಷ್ಪ್ರೇರಣೆ ನನ್ನನ್ನು ಮೊತ್ತಮೊದಲು ಮನೆಯಿಂದ ಕರೆದೊಯ್ದಿತೋ, ಅಲೆದಾಟದಿಂದ ಭಾಗ್ಯವಂತನಾಗಬಹುದೆಂಬ ಹುಚ್ಚು ಬಯಕೆಗೆ ಯಾವುದು ನನ್ನನ್ನು ಬಲಿಕೊಟ್ಟಿತೋ, ಒಳ್ಳೆಯ ಸಲಹೆಗಳಿಗೆ ಕಿವಿಗೊಡದಂತೆ ಯಾವುದು ನನ್ನ ಅಹಂಭಾವನೆಗಳನ್ನು ಹೆಚ್ಚಿಸಿತೋ, ಯಾವುದು ನನ್ನ ತಾಯ ಮೊರೆಯನ್ನೂ ತಂದೆಯ ಆಣತಿಗಳನ್ನೂ ನಾನು ಲೆಕ್ಕಿಸದೆ ಕಡಲ ಕಡೆಗೆ ಧಾವಿಸುವಂತೆ ನನ್ನನ್ನು ದೂಡಿತ್ತೋ ಅದೇ ದುಷ್ಪ್ರೇರಣೆ ನನ್ನನ್ನು ಅತ್ಯಂತ ದೌರ್ಭಾಗ್ಯದ ಸಾಹಸೋದ್ಯಮಕ್ಕೆ ಸೆಳೆದೊಯ್ದಿತು. ಹಾಗೆ ಪ್ರೇರಿತನಾಗಿ, ಆಫ್ರಿಕಾಖಂಡದ ತೀರವನ್ನು ಕುರಿತು ಹೊರಟಿದ್ದ ಒಂದು ಹಡಗನ್ನು ಹತ್ತಿದೆ. ನಾವಿಕರು ಅದನ್ನು ಗಿನಿ ಪ್ರಯಾಣ ಎನ್ನುತ್ತಿದ್ದರು.

ಈ ಸಾಹಸ ಕಾರ್ಯಗಳಲ್ಲೆಲ್ಲಾ ನಾನು ನಾವಿಕವೃತ್ತಿಯನ್ನವಲಂಬಿಸಿ ಹಡಗು ಹತ್ತುತ್ತಿರಲಿಲ್ಲ. ಅದು ನನ್ನ ದೊಡ್ಡ ದೌರ್ಭಾಗ್ಯವಾಗಿ ಪರಿಣಮಿಸಿತು. ನಾನು ಹಾಗೆ ಮಾಡಿದ್ದಿದ್ದರೆ ಕಷ್ಟಪಡಬೇಕಾಗಿತ್ತು, ನಿಜ ; ಆದರೆ ಪಯಣ ಮಾಡಿದ ತೃಪ್ತಿಯೂ ನನಗೆ ಲಭಿಸುತ್ತಿತ್ತು. ಜೊತೆಗೆ, ಕಾಲಕ್ರಮದಲ್ಲಿ, ಹಡಗಿನ ನಾಯಕನ ಪದವಿಯಲ್ಲದಿದ್ದರೆ ಅವನ ಸಹಾಯಕನಾಗುವ ಪದವಿಯಾದರೂ ಲಭಿಸುವ ಸಂಭವವಿತ್ತು. ಆದರೆ ದೈವ ಬೇರೆ ಬಗೆದಿರಲು ನಾನು ಮಾಡುವುದಾದರೂ ಏನು? ಕಿಸೆಯಲ್ಲಿ ದುಡ್ಡಿತ್ತು ; ಮೈಮೇಲೆ ಒಳ್ಳೆಯ ಉಡುಪಿತ್ತು. ಆದ್ದರಿಂದ ಯಾವಾಗಲೂ ಸಂಭಾವಿತನಂತೆ ಹಡಗು ಹತ್ತುತ್ತಿದ್ದೆ. ಈಗಲೂ ಹಾಗೆಯೇ ಮಾಡಿದೆ.

ಲಂಡನ್ನಿನಲ್ಲಿ ನನಗೆ ಮೊದಲು ಸತ್ಸಹವಾಸವೇ ದೊರಕಿತು. ಗಿನಿಯ ತೀರ ಪ್ರದೇಶದಲ್ಲಿ ಪಯಣಮಾಡಿದ್ದ ನೌಕಾನಾಯಕನೊಬ್ಬನ ಪರಿಚಯವಾಯಿತು. ಅವನ ಮೊದಲ ಪ್ರಯಾಣ ಯಶಸ್ವಿಯಾಗಿದ್ದುದರಿಂದ ಅವನು ಮರಳಿ ಅಲ್ಲಿಗೆ ಹೋಗಲು ನಿಶ್ಚಯಿಸಿದ್ದನು. ಆತ ನನ್ನ ಸೊಗಸಾದ ಮಾತುಗಾರಿಕೆಗೆ ಮರುಳಾದ; ಪ್ರಪಂಚವನ್ನು ಸುತ್ತಾಡಿ ನೋಡಿಬರಬೇಕೆಂಬ ಆಸೆ ನನಗುಂಟೆಂಬುದು ಅವನಿಗೆ

ಉದ್ರೇಕಗೊಂಡು ನುಡಿದಿರಬೇಕು. ಏಕೆಂದರೆ, ಅವರು ಒಡನೆಯೆ ಗಂಭೀರವಾಗಿ ಮೃದುವಾಗಿ ಮತ್ತೆ ಹೀಗೆ ಹೇಳಿದರು : "ಮಗೂ ಅದೃಷ್ಟ ಪರೀಕ್ಷೆಮಾಡುವ ನಿನ್ನ ಈ ಸಾಹಸ ಏಕೆ? ಸುಮ್ಮನೆ ನಿನ್ನ ತಂದೆಯಬಳಿಗೆ ಹಿಂದಿರುಗೆ ಹೋಗು. ನನ್ನ ಮಾತನ್ನು ಲಾಲಿಸು. ನೀನು ಹಿಂದಿರುಗದಿದ್ದರೆ, ಎಲ್ಲಿ ಹೋದರೂ ವಿಪತ್ತುಗಳೂ ನಿರಾಶೆಗಳೂ ನಿನ್ನನ್ನು ಕಾಡದೆ ಬಿಡವು. ನಿನ್ನ ತಂದೆಯ ಮಾತು ವಿಫಲವಾಗದು."

ನಾನು ಅವರಿಗೆ ಏನೂ ಉತ್ತರ ಕೊಡಲಿಲ್ಲ. ಕೆಲಹೊತ್ತಿನಮೇಲೆ ನಾವಿಬ್ಬರೂ ಬೇರೆಯಾದೆವು. ಆಮೇಲೆ ಅವರನ್ನು ನಾನು ನೋಡಲೇ ಇಲ್ಲ. ಅವರು ಎತ್ತಹೋದರೋ ನಾನರಿಯೆ. ನನ್ನ ಕಿಸೆಯಲ್ಲಿ ಸ್ವಲ್ಪ ಹಣವಿದ್ದುದರಿಂದ ಭೂಮಾರ್ಗವಾಗಿ ಲಂಡನ್ನಿಗೆ ಹೋದೆ. ಹೋಗುವಾಗ ದಾರಿಯಲ್ಲೂ, ಹೋದಮೇಲೆ ಲಂಡನ್ನಿನಲ್ಲೂ, ಮನೆಗೆ ಹಿಂದಿರುಗಿಹೋಗಿ ನೆಲಸಬೇಕು ಇಲ್ಲವೆ ಮತ್ತೆ ಕಡಲ ಪಯಣವನ್ನು ಕೈಕೊಳ್ಳಬೇಕೆ ಎಂಬ ಬಗ್ಗೆ ಮನಸ್ಸಿನಲ್ಲಿ ಹೋರಾಟ ನಡೆಯುತ್ತಲೇ ಇತ್ತು. ಮನೆಗೆ ಹಿಂದಿರುಗಬೇಕೆಂದು ವಿವೇಕವು ಒತ್ತಾಯಪಡಿಸುತ್ತಿದ್ದರೂ, ಎತ್ತೆತ್ತಲೋ ಹರಿಯುತ್ತಿದ್ದ ಮನಃಪ್ರವೃತ್ತಿ ಅದನ್ನು ವಿರೋಧಿಸುತ್ತಿತ್ತು. ಊರಿಗೆ ಹಿಂದಿರುಗಿ ತಂದೆ ತಾಯಿಗೂ ನೆರೆಹೊರೆಯವರಿಗೂ ಹೇಗೆ ಮುಖ ತೋರಿಸುವುದೆಂಬ ನಾಚಿಕೆಯ ಭಾವ ಆ ಬಗೆಯ ಮನಃಪ್ರವೃತ್ತಿಗೆ ಮೂಲಕಾರಣವಾಗಿತ್ತು. ನಾನು ಹಿಂದಿರುಗಿ ಹೋದರೆ ಕದ್ದು ಓಡಿಹೋಗಿದ್ದವನು ನಾಚಿಕೆಯಿಲ್ಲದೆ ಹಿಂದಿರುಗಿ ಬಂದನೆಂದು ಎಲ್ಲರೂ ನಗುವರೆಂದು ನನಗೆ ಅನ್ನಿಸುತ್ತಿತ್ತು. ಅಂಥ ಸಂದರ್ಭಗಳಲ್ಲಿ ಯಾರಿಗಾದರೂ ನನ್ನ ಹಾಗೆಯೇ ಅನ್ನಿಸೀತೆಂದು ತೋರುತ್ತದೆ ; ಆದರೆ ಅಂಥ ಸಂದರ್ಭಗಳಲ್ಲಿ ವಿವೇಕಬುದ್ಧಿ ಹೇಳಿದಂತೆ ಕೇಳಬೇಕಲ್ಲದೆ ಮನಸ್ಸು ಸೆಳೆದತ್ತ ಹೋಗಬಾರದೆಂಬುದು ಯಾರಿಗೂ ತೋರುವುದಿಲ್ಲ. ಮನುಷ್ಯನು ಪಾಪಕಾರ್ಯ ಮಾಡಲು ನಾಚುವುದಿಲ್ಲ. ಎಸಗಿದ ಅವಿವೇಕವನ್ನು ತಿದ್ದಿಕೊಂಡು ವಿವೇಕಿ ಎನ್ನಿಸಿಕೊಳ್ಳಲು ನಾಚುತ್ತಾನೆ.

ಕೆಲವು ಕಾಲ ನಾನು ಹೀಗೆ ಇಬ್ಬಗೆಯ ಮನಸ್ಸಿನಲ್ಲಿದ್ದೆ. ಕಾಲಕಳೆದಂತೆ ಹಿಂದಿರಗಬೇಕೆಂಬ ಯೋಚನೆ ಮಾಯವಾಗತೊಡಗಿತು. ಮನಸ್ಸಿನ ಹೋರಾಟದ ಉರುಬು ತಗ್ಗುತ್ತ ಬಂದಿತು. ಮನೆಗೆ ಹಿಂದಿರುಗಬೇಕೆಂಬ ಬಯಕೆ ಬರಿಯ ಕನಸಿನಂತೆ ಸುಳಿದುಹೋಯಿತು. ಮತ್ತೆ ಪ್ರಯಾಣದ ಗೀಳಿನ ಗಾಳಕ್ಕೆ ನನ್ನ ಮನಸ್ಸು ಸಿಕ್ಕಿಕೊಂಡಿತು.

* * * *

ಈಗ ನಾನು ಒಬ್ಬ "ಗಿನಿ ವ್ಯಾಪಾರಗಾರ" ಎನ್ನಿಸಿಕೊಂಡಿದ್ದೆ ; ಆದರೆ, ನನ್ನ ದುರದೃಷ್ಟಕ್ಕೆ, ನನ್ನ ನೆಚ್ಚಿನ ಗೆಳೆಯನಾಗಿದ್ದ ನೌಕಾನಾಯಕನು ಪ್ರಯಾಣದಿಂದ ಹಿಂದಿರುಗಿದ ಮೇಲೆ ತೀರಿಹೋಗಿದ್ದನು. ಹಿಂದೆ ಅವನ ಸಹಾಯಕನಾಗಿದ್ದವನು ಈಗ ಹಡಗಿನ ನಾಯಕನಾಗಿದ್ದನು. ಈ ಹೊಸ ನಾಯಕನೊಡನೆ ಅದೇ ಹಡಗಿನಲ್ಲಿ ಮತ್ತೆ ಪ್ರಯಾಣ ಮಾಡಬೇಕೆಂದು ನಿಶ್ಚಯಿಸಿದೆ. ಈ ಪ್ರಯಾಣದಷ್ಟು ದುಃಖಕರವಾದ ಪ್ರಯಾಣವನ್ನು ಯಾರೂ ಮಾಡಿರಲಾರರು. ನಾನು ಹೆಚ್ಚುಹಣವನ್ನೇನೋ ಜೊತೆಯಲ್ಲಿ ಒಯ್ಯಲಿಲ್ಲ ; ನೂರು ಪೌಂಡಿನಷ್ಟು ಹಣವನ್ನು ಮಾತ್ರ ಇಟ್ಟುಕೊಂಡಿದ್ದೆ. ಉಳಿದ ಇನ್ನೂರನ್ನು ನನ್ನ ಮಡಿದ ಗೆಳೆಯನ ಹೆಂಡತಿಯ ಬಳಿ ನಂಬಿ ಇಟ್ಟಿದ್ದೆ. ಈ ಪ್ರಯಾಣದಲ್ಲಿ ನನಗೆ ಸಂಭವಿಸಿದ ವಿಪತ್ತುಗಳು ಬಹು ಘೋರವಾದುವು.

ನಮ್ಮ ಹಡಗು ಕೆನರಿ ದ್ವೀಪಗಳಿಗೂ, ಆಫ್ರಿಕದ ತೀರಕ್ಕೂ ನಡುವೆ ಪ್ರಯಾಣ ಮಾಡುತ್ತಿದ್ದಾಗ ಒಬ್ಬ ತುರ್ಕಿ ಕಡಲುಗಳ್ಳನು ನಮ್ಮನ್ನು ಅಟ್ಟಿಸಿಕೊಂಡು ಬಂದನು. ನಾವು ಇದ್ದಬದ್ದ ಹಾಯಿ (ಪಟ)ಗಳನ್ನೆಲ್ಲಾ ಹರಡಿ ಓಟ ಕಿತ್ತೆವು. ಆದರೂ ಕಡಲುಗಳ್ಳನು ನಮ್ಮನ್ನು ಹಿಂಬಾಲಿಸಿ ಸಮೀಪಕ್ಕೆ ಬಂದದ್ದರಿಂದ ನಾವು ಅವನೊಡನೆ ಕಾದಾಟಕ್ಕೆ ನಿಲ್ಲಬೇಕಾಯಿತು. ನಮ್ಮಲ್ಲಿ ಹನ್ನೆರಡು ಫಿರಂಗಿಗಳಿದ್ದವು; ಅವನ ಬಳಿ ಹದಿನೆಂಟು ಇದ್ದುವು. ಫಿರಂಗಿಯ ಕಾದಾಟ ಕೆಲವು ಕಾಲ ನಡೆಯಿತು. ಅವನ ಹಡಗಿನಲ್ಲಿ ಇನ್ನೂರು ಮಂದಿ ಇದ್ದರು. ಅವನು ಕಾದಾಡುತ್ತಲೇ ಅರವತ್ತು ಮಂದಿಯನ್ನು ನಮ್ಮ ಹಡಗಿಗೆ ಹತ್ತಕಳಿಸಿದ್ದನು. ಅವರು ನಮ್ಮ ಹಡಗು ಹತ್ತಿ ಹಡಗಿನ ಅಟ್ಟವನ್ನೂ ಹಗ್ಗ ಹುರಿಗಳನ್ನೂ ಕತ್ತರಿಸತೊಡಗಿದರು. ನಮ್ಮಲ್ಲಿ ಇಬ್ಬರು ಮಡಿದರು ; ಎಂಟುಮಂದಿ ಗಾಯಗೊಂಡರು. ನಾವು ಅವರೊಡನೆ ಎಷ್ಟು ಕಾದಾಡಿದರೂ ಕೊನೆಗೆ ಅವರಿಗೆ ಶರಣಾಗಬೇಕಾಯಿತು. ಅವರು ನಮ್ಮನ್ನೆಲ್ಲಾ ಸೆರೆಹಿಡಿದು ಮೂರ್ ಜನಕ್ಕೆ ಸೇರಿದ ಸ್ಯಾಲಿ (Sallee) ಎಂಬ ರೇವು ಪಟ್ಟಣಕ್ಕೆ ಕರೆದೊಯ್ದರು.

ಅಲ್ಲಿಗೆ ಹೋದಮೇಲೆ ನಾನು ನಿರೀಕ್ಷಿಸಿದ್ದಷ್ಟು ಭಯಂಕರವಾದ ದುರವಸ್ಥೆಯೇನೋ ಒದಗಲಿಲ್ಲ. ನನ್ನ ಜೊತೆಯವರನ್ನೆಲ್ಲ ದೇಶದೊಳಕ್ಕೆ ಚಕ್ರವರ್ತಿಯ ಬಳಿಗೆ ಕರೆದೊಯ್ದರು. ತರುಣನೂ ಚಟುವಟಿಕೆಯುಳ್ಳವನೂ ಆದ ನನ್ನನ್ನು ಕಡಲುಗಳ್ಳರ ಹಡಗಿನ ನಾಯಕನು ತನ್ನ ಬಳಿಯೇ ಇರಿಸಿಕೊಂಡು, ನನ್ನನ್ನು ತನ್ನ ಗುಲಾಮನಾಗಿ ಮಾಡಿಕೊಂಡನು.

ಗೊತ್ತಾಗಲು, ಏನೂ ವೆಚ್ಚವಿಲ್ಲದೆ ಜೊತೆಯಲ್ಲಿ ಕರೆದುಕೊಂಡು ಹೋಗುವುದಾಗಿ ಹೇಳಿದ ; ಅವನಿಗೆ ಊಟಪಾಟಗಳಲ್ಲಿ ಒಬ್ಬ ಜೊತೆಗಾರ ಬೇಕಾಗಿತ್ತು, ಅಷ್ಟೆ. ನನ್ನ ಸಂಗಡ ನಾನು ಏನಾದರೂ ಸರಕು ತೆಗೆದುಕೊಂಡು ಹೋಗಬಹುದಾದರೆ, ಅದನ್ನು ವ್ಯಾಪಾರ ಮಾಡಿ ಅದರಿಂದ ಬರಬಹುದಾದ ಅಲ್ಪಸ್ವಲ್ಪ ಲಾಭವನ್ನು ನಾನೇ ಪಡೆಯಬಹುದೆಂದು ಆತ ನನಗೆ ಆಸೆ ಹುಟ್ಟಿಸಿದ. ಇದಕ್ಕಿಂತಲೂ ಇನ್ನೇನು ಪ್ರೋತ್ಸಾಹ ಬೇಕು? ಅವನ ಸ್ನೇಹದ ಆಹ್ವಾನವನ್ನು ಒಪ್ಪಿಕೊಂಡೆ. ನಾಯಕನ ಸ್ನೇಹಿತನಾಗಿ ಹಡಗು ಹತ್ತಿದೆ. ಪ್ರಯಾಣ ಹೊರಡುವ ಮುನ್ನ ನನ್ನಲ್ಲಿ ೪೦ ಪೌಂಡು ಹಣ ಇತ್ತು. ನನ್ನ ನೆಂಟರು ಕೆಲವರಿಗೆ ಕಾಗದ ಬರೆದು ಈ ಮೊತ್ತವನ್ನು ಜೊತೆಮಾಡಿ ಕೊಟ್ಟಿದ್ದೆ. ಈ ನಂಟರು ನನ್ನ ತಂದೆಯನ್ನಲ್ಲದಿದ್ದರೆ, ನನ್ನ ತಾಯನ್ನಾದರೂ ಕೇಳಿ ಈ ಹಣವನ್ನು ಜೊತೆಮಾಡಿ ಕಳಿಸಿರಬೇಕು. ಅದು ಹೇಗಾದರೂ ಇರಲಿ. ನನ್ನ ಸ್ನೇಹಿತನಾದ ನೌಕಾನಾಯಕನು ಸೂಚಿಸಿದ ಮೇರೆಗೆ, ನಾನು ಪ್ರಯಾಣ ಹೊರಡುವ ಮುನ್ನ ಕೆಲವು ಆಟದ ಸಾಮಾನುಗಳನ್ನೂ ಚಿಲ್ಲರೆಪಲ್ಲರೆ ಸರಕನ್ನೂ ಆ ಹಣದಿಂದ ಕೊಂಡುಕೊಂಡಿದ್ದೆ. ಪ್ರಾಮಾಣಿಕನಾದ ನನ್ನ ಸ್ನೇಹಿತನ ನಿರ್ವಂಚನೆಯ ಸಹಾಯದಿಂದ ಈ ಪ್ರಯಾಣದಲ್ಲಿ ನನ್ನ ಬಂಡವಾಳವನ್ನು ತಕ್ಕಮಟ್ಟಿಗೆ ಹೆಚ್ಚಿಸಿಕೊಂಡೆ. ನನ್ನ ಎಲ್ಲ ಪ್ರಯಾಣ ಸಾಹಸಗಳಲ್ಲೂ ಇದೊಂದೇ ಯಶಸ್ವಿಯಾಗಿದ್ದುದೆಂದು ಹೇಳಬಹುದು. ನನ್ನ ಸ್ನೇಹಿತನಾದ ನೌಕಾನಾಯಕನ ಅಮೂಲ್ಯ ಸಹಾಯದಿಂದ ನನ್ನ ಕೈ ಹಣ ಹೆಚ್ಚಿದುದಲ್ಲದೆ, ನೌಕಾ ಪ್ರಯಾಣವಿದ್ಯೆಗೆ ಸಂಬಂಧಪಟ್ಟ ಅನೇಕ ವಿಷಯಗಳ ಜ್ಞಾನವು ನನಗೆ ಲಭಿಸಿತು. ಉದಾಹರಣೆಗೆ, ಹಡಗಿನ ಪ್ರಯಾಣದ ದಿಕ್ಕನ್ನು ಕಂಡುಹಿಡಿಯುವುದು, ಪ್ರಯಾಣ ಮಾರ್ಗವನ್ನು ಗುರುತುಮಾಡಿಡುವುದು ಮುಂತಾದ ಹಲವು ನೌಕಾ ಗಣಿತ ವಿಷಯಗಳು ನನಗೆ ಆತನಿಂದ ತಿಳಿದುವು. ಅವನು ಎಷ್ಟು ಸಂತೋಷದಿಂದ ಹೇಳಿಕೊಡುತ್ತಿದ್ದನೋ, ನಾನು ಅಷ್ಟೇ ಸಂತೋಷದಿಂದ ಕಲಿಯುತ್ತಿದ್ದೆ. ಒಂದು ಮಾತಿನಲ್ಲಿ ಹೇಳುವುದಾದರೆ, ಈ ಪ್ರಯಾಣದ ದೆಸೆಯಿಂದ ನಾನು ನುರಿತ ನಾವಿಕನಾದುದಲ್ಲದೆ ವರ್ತಕನೂ ಆದೆ. ಈ ಪ್ರಯಾಣದಿಂದ ಹಿಂದಿರುಗುವಾಗ ನಾನು ಐದು ಪೌಂಡು ಒಂಬತ್ತು ಔನ್ಸು ತೂಕದ ಚಿನ್ನದ ಹುಡಿಯನ್ನು ತೆಗೆದುಕೊಂಡು ಬಂದಿದ್ದೆ ; ಲಂಡನ್ನಿನಲ್ಲಿ ಅದನ್ನು ಮಾರಿದ್ದರಿಂದ ನನಗೆ ೩೦೦ ಪೌಂಡು ಬೆಲೆ ದೊರಕಿತು. ಈ ಅನಿರೀಕ್ಷಿತ ಲಾಭ ನನ್ನ ಆಸೆಯನ್ನು ಮುಗಿಲಿಗೇರಿಸಿತು. ಹಾಗೆ ಅಡರಿದ ಆಸೆಯೇ ನನ್ನ ಅಧಃ ಪತನಕ್ಕೆ ಕಾರಣವಾಯಿತು.

ಹೋಗುತ್ತಿದ್ದಾಗ, ದೋಣಿಯ ಹುಟ್ಟುಹಾಕುವುದಕ್ಕಾಗಿ ನನ್ನನ್ನೂ ಮರೆಸ್ಕೋ ಎಂಬ ಇನ್ನೊಬ್ಬ ತರುಣನನ್ನೂ ಅವನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದನು. ಮೀನು ಹಿಡಿಯುವದರಲ್ಲಿ ನಾನು ಬಹಳ ನಿಪುಣನೆನಿಸಿದೆ. ಆದ್ದರಂದ ಕೆಲವು ವೇಳೆ ನನ್ನ ದಣಿ ತನ್ನ ನಂಟನಾದ ಇನ್ನೊಬ್ಬ ಮೂರನೊಡನೆಯೂ ಮರೆಸ್ಕೋವಿನೊಡನೆಯೂ ಮೀನು ಹಿಡಿಯುವುದಕ್ಕಾಗಿ ನನ್ನನ್ನು ಕಳಿಸುತ್ತಿದ್ದನು. ಒಂದು ದಿನ ಬೆಳಗ್ಗೆ ನಾವು ಮೀನುಹಿಡಿಯುವುದಕ್ಕೆ ಹೋಗಿದ್ದಾಗ ದಟ್ಟವಾದ ಇಬ್ಬನಿಯ ಕಾವಳ ಮುಸುಕಿತು. ಕರೆಯನ್ನು ಬಿಟ್ಟು ಒಂದೆರಡು ಮೈಲಿಗಳಷ್ಟು ದೂರ ಹೋದಕೂಡಲೆಯೇ ಕರೆ ಕಣ್ಮರೆಯಾಯಿತು. ಎರಡು ದಿನಗಳವರೆಗೂ ಎಷ್ಟೇ ತೊಳಲಿದರೂ ಕರೆ ಗೋಚರವಾಗಲಿಲ್ಲ. ಕರೆಯನ್ನು ಬಿಟ್ಟು ಎರಡು ಹರಿದಾರಿಗಳಷ್ಟು ದೂರ ನಡುಗಡಲಿಗೆ ಬಂದುಬಿಟ್ಟಿದ್ದೆವು; ಜೊತೆಗೆ ಎರಡು ದಿನಗಳಿಂದಲೂ ಆಹಾರವಿಲ್ಲದೆ ಹಸಿವಿನಿಂದ ಬಳಲಿಹೋಗಿದ್ದೆವು. ಮೂರನೆಯ ದಿನ ಬೆಳಿಗ್ಗೆ ಕಾವಳ ತೆಗೆದು, ಗಾಳಿ ಅನುಕೂಲವಾಗಿ ಬೀಸುತ್ತಿದ್ದುದರಿಂದ ನಾವು ಅಪಾಯದಿಂದ ಪಾರಾದೆವು. ಈ ಅನಿರೀಕ್ಷಿತವಾದ ಘಟನೆಯಿಂದ ನನ್ನ ದಣಿ ಒಂದು ಪಾಠ ಕಲಿತನು : ಇನ್ನು ಮುಂದೆ ಜೊತೆಯಲ್ಲಿ ದಿಕ್ಸೂಚಿಯನ್ನೂ ಸ್ವಲ್ಪ ಆಹಾರ ಸಾಮಗ್ರಿಯನ್ನೂ ತೆಗೆದುಕೊಳ್ಳದೆ ಮೀನು ಹಿಡಿಯುವುದಕ್ಕೆ ಹೊರಡಕೂಡದೆಂದು ನಿಶ್ಚಯಿಸಿದನು. ಹಾಗೆ ನಿಶ್ಚಯಿಸಿ, ಮೀನು ಹಿಡಿಯುವುದಕ್ಕಾಗಿ ಬೇರೆಯ ಒಂದು ಉದ್ದ ದೋಣಿಯನ್ನು ಗೊತ್ತುಮಾಡಿ, ಅದರ ಮೇಲೆ ಒಂದು ಕೋಣೆಯನ್ನು ಕಟ್ಟಿಸಿ, ಬೇಕಾದ ಇತರ ಅನುಕೂಲತೆಗಳನ್ನೂ ಏರ್ಪಡಿಸಿ, ಅದನ್ನು ಸಜ್ಜುಗೊಳಿಸಿದನು.

ನಾವು ಮೀನು ಹಿಡಿಯುವುದಕ್ಕಾಗಿ ದೋಣಿಯಲ್ಲಿ ಆಗಿಂದಾಗ್ಗೆ ಹೋಗುತ್ತಿದ್ದೆವು ; ಮೀನು ಹಿಡಿಯುವುದರಲ್ಲಿ ನಾನು ಬಹಳ ಚತುರನೆಂದು ಆತನಿಗೆ ಗೊತ್ತಾದ್ದರಿಂದ ಅವನು ಎಂದೂ ನನ್ನನ್ನು ಬಿಟ್ಟುಹೋಗುತ್ತಿರಲಿಲ್ಲ. ಹೀಗಿರಲು ಒಂದು ದಿನ ಅವನು ಆ ಸ್ಥಳದ ಗಣ್ಯರಾದ ಇಬ್ಬರು ಮೂವರು ಮೂರರೊಡನೆ ವಿನೋದಕ್ಕಾಗಿಯೋ ಮೀನು ಹಿಡಿಯುವುದಕ್ಕಾಗಿಯೋ ಆ ದೋಣಿಯ ಮೇಲೆ ಹೊರಡಬೇಕೆಂದು ನಿಶ್ಚಯಿಸಿದ್ದ. ಇದಕ್ಕಾಗಿ ಆತನು ಹಿಂದಿನ ರಾತ್ರಿಯೇ ಎಂದಿಗಿಂತ ಹೆಚ್ಚು ಆಹಾರ ಸಾಮಗ್ರಿಯನ್ನು ದೋಣಿಗೆ ಕಳಿಸಿದ್ದ ; ಮತ್ತು ಮೀನು ಹಿಡಿಯುವುದರ ಜೊತೆಗೆ ಕಡಲು ಕೋಳಿಗಳನ್ನೂ ಬೇಟೆಯಾಡಬೇಕೆಂದು ಉದ್ದೇಶಪಟ್ಟಿದ್ದುದರಿಂದ ಆತನ ಹಡಗಿನಲ್ಲಿ ಮದ್ದು ಗುಂಡುಗಳನ್ನು ದೋಣಿಗೆ ಸಾಗಿಸಿ ತಂದಿಡಬೇಕೆಂದು ಅಪ್ಪಣೆ ಮಾಡಿದ್ದನು.

**ಗುಲಾಮಗಿರಿ**

ಎಂಥಾ ಪರಿವರ್ತನೆ ! ನಿನ್ನೆ ವರ್ತಕನಾಗಿದ್ದವನು ಇಂದು ಗುಲಾಮ ! ನಾನು ಹೇಳಲಾಗದಂಥ ಕಷ್ಟಗಳಿಗೆ ಸಿಲುಕುವೆನೆಂದೂ, ಅವುಗಳಿಂದ ಪಾರಾಗಲು ಯಾರ ನೆರವೂ ದೊರೆಯದೆ ನಾನು ಪಶ್ಚಾತ್ತಾಪ ಪಡಬೇಕಾಗುವುದೆಂದೂ ನುಡಿದಿದ್ದ ನನ್ನ ತಂದೆಯ ಭವಿಷ್ಯವಾಣಿ ನಿಜವಾಗುತ್ತಾ ಬರುತ್ತಿರುವಂತೆ ನನಗೆ ತೋರಹತ್ತಿತು. ಈಗ ನಾನು ಇದ್ದ ದುಃಸ್ಥಿತಿಯಿಂದ ಪಾರಾಗುವುದು ಸಾಧ್ಯವಿಲ್ಲವೆಂದೇ ನನಗೆ ತೋರಿತು.

ನನ್ನ ಈ ಹೊಸ ದಣಿ ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಅವನು ಮತ್ತೆ ಕಡಲ ಪ್ರಯಾಣ ಹೊರಟಾಗ ನನ್ನನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗುವನೆಂದೂ, ಆಗ ಅವನು ಸ್ಪೈನ್ನಿನ ಅಥವಾ ಪೋರ್ಚುಗಲ್ಲಿನ ಯುದ್ಧದ ಹಡಗಿಗೆ ಎಂದಾದರೂ ಒಮ್ಮೆ ಸೆರೆಸಿಕ್ಕುವನೆಂದೂ, ಅಂದು ನನ್ನ ಬಿಡುಗಡೆಯಾವುದೆಂದೂ ಬರಿದೆ ನೆಚ್ಚಿಕೊಂಡಿದ್ದೆ. ನನ್ನ ಈ ನೆಚ್ಚಿಕೆ ಬೇಗನೆ ನುಚ್ಚುನೂರಾಯಿತು. ಆತನು ಮತ್ತೆ ಪ್ರಯಾಣ ಹೊರಟಾಗ, ಆತನ ತೋಟದ ಮತ್ತು ಮನೆಯ ಇತರ ಗುಲಾಮಚಾಕರಿ ಮಾಡುವುದಕ್ಕಾಗಿ ನನ್ನನ್ನು ಹಿಂದೆಯೆ ಬಿಟ್ಟು ಹೋದನು. ಅವನು ಪ್ರಯಾಣದಿಂದ ಹಿಂದಿರುಗಿದ ಮೇಲೆ ಅವನ ಹಡಗನ್ನು ನೋಡಿಕೊಳ್ಳುವುದಕ್ಕಾಗಿ ಹಡಗಿನ ಕೋಣೆಯಲ್ಲಿ ಮಲಗಿಕೊಳ್ಳುವಂತೆ ನನಗೆ ಆಣತಿಯಿತ್ತನು.

ಇಲ್ಲಿ ನನ್ನ ಬಿಡುಗಡೆಯ ಹೊರತಾಗಿ ಬೇರೇನನ್ನೂ ಕುರಿತು ನಾನು ಯೋಚಿಸುತ್ತಿರಲಿಲ್ಲ. ಎಷ್ಟು ಯೋಚಿಸಿದರೂ ಬಿಡುಗಡೆಯ ಮಾರ್ಗ ಮಾತ್ರ ತೋರಲಿಲ್ಲ. ಬಿಡಗಡೆ ಪಡೆಯುವ ಸಾಹಸಕಾರ್ಯದಲ್ಲಿ ಸಹಕರಿಸಲು ಯಾರೂ ಇರಲಿಲ್ಲ. ಹೊಳೆವ ಯೋಚನೆಯೆಲ್ಲಾ ಅಸಂಭವವಾಗಿಯೇ ಕಾಣುತ್ತಿತ್ತು. ಹೀಗೆ ವ್ಯರ್ಥ ಚಿಂತನೆಯಲ್ಲೆ ಎರಡು ವರ್ಷ ಕಳೆಯಿತು.

ಎರಡು ವರ್ಷವಾದ ಮೇಲೆ ನಡೆದ ಒಂದು ವಿಚಿತ್ರ ಘಟನೆ ಬಿಡುಗಡೆ ಹೊಂದುವ ಆಲೋಚನೆಯನ್ನು ಮತ್ತೆ ಹುಟ್ಟಿಸಿತು. ಈ ಸಲ ಪ್ರಯಾಣದಿಂದ ಹಿಂದಿರುಗಿದಮೇಲೆ ನನ್ನ ದಣಿ ಮತ್ತೆ ಪ್ರಯಾಣ ಹೊರಡುವ ಯೋಚನೆ ಮಾಡದೆ ಎಂದಿಗಿಂತ ಹೆಚ್ಚುಕಾಲ ಮನೆಯಲ್ಲೇ ಉಳಿದನು. ಅವನ ಬಳಿ ಹಣವಿಲ್ಲದಿದ್ದುದೇ ಇದಕ್ಕೆ ಕಾರಣವೆಂದು ನನಗೆ ತಿಳಿಯಬಂದಿತು. ಈ ಕಾಲದಲ್ಲಿ ಆತನು ಹಡಗಿನ ಕೈಗಾವಲು ದೋಣಿಯನ್ನು ತೆಗೆದುಕೊಂಡು ಮೀನುಹಿಡಿಯುವುದಕ್ಕೆ ಹಡಗಿನ ನಿಲ್ಲೆಡೆಯ ಪ್ರಾಂತಕ್ಕೆ ಹೋಗುತ್ತಿದ್ದನು. ಹಾಗೆ

ಬೇಡೆಯಾಡಿಕೊಳ್ಳಬಹುದೆಂದೂ ಅವನಿಗೆ ಸೂಚಿಸಿದೆ. ಅವನು ಒಪ್ಪಿಕೊಂಡು ಸುಮಾರು ಒಂದೂವರೆ ಪೌಂಡಿನಷ್ಟು ಮದ್ದು ತುಂಬಿದ ಒಂದು ತೊಗಲ ಚೀಲವನ್ನೂ ಸುಮಾರು ಐದಾರು ಪೌಂಡಿನಷ್ಟು ತೂಕದ ಗುಂಡುಗಳಿದ್ದ ಇನ್ನೊಂದು ತೊಗಲ ಚೀಲವನ್ನೂ ತಂದು ದೋಣಿಯಲ್ಲಿಟ್ಟನು. ಹಡಗಿನ ಕೋಣೆಯಲ್ಲಿ ಇದ್ದ ನನ್ನ ದಣಿಯ ಉಪಯೋಗದ ಸ್ವಲ್ಪ ಮದ್ದನ್ನು ನಾನು ತಂದಿದ್ದೆ ; ಅವನ್ನು ತೆರಪಾಗಿದ್ದ ಒಂದು ಮದ್ಯದ ಶೀಸೆಗೆ ತುಂಬಿ ಪೆಟ್ಟಿಗೆಯಲ್ಲಿಟ್ಟಿದ್ದೆ. ಹೀಗೆ ಆವಶ್ಯಕವಾದ ಎಲ್ಲ ಸಾಮಗ್ರಿಗಳನ್ನೂ ಸಜ್ಜುಗೊಳಿಸಿಕೊಂಡು ಮೀನು ಹಿಡಿಯುವುದಕ್ಕಾಗಿ ಬಂದರನ್ನು ಬಿಟ್ಟೆವು. ಬಂದರಿನ ಪ್ರವೇಶದ್ವಾರದ ಬಳಿ ಇದ್ದ ದುರ್ಗದ ಕಾವಲಿನವರಿಗೆ ನಮ್ಮ ಪರಿಚಯವಿದ್ದುದರಿಂದ ನಮ್ಮನ್ನು ಗಮನಿಸಲೇ ಇಲ್ಲ. ಬಂದರು ಬಿಟ್ಟು ಒಂದು ಮೈಲಿಯಷ್ಟು ದೂರ ಕಳೆದಮೇಲೆ ದೋಣಿಯ ಹಾಯಿಗಳನ್ನು ಎಳೆದು, ಮೀನು ಹಿಡಿಯಲು ಮೊದಲುಮಾಡಿದೆವು.

ಗಾಳಿ ಉತ್ತರದ ಕಡೆಯಿಂದ ಬೀಸುತ್ತಿತ್ತು ; ಅದು ನನ್ನ ಅಪೇಕ್ಷೆಗೆ ಪ್ರತಿಕೂಲವಾಗಿತ್ತು ; ಏಕೆಂದರೆ ದಕ್ಷಿಣದ ಕಡೆಯಿಂದ ಬೀಸುತ್ತಾ ಇದ್ದಿದ್ದರೆ ನಾನು ಸ್ಪೆಯ್ನ್ ದೇಶದ ತೀರವನ್ನು ತಲುಪಬಹುದಾಗಿತ್ತು ; ಕಡೆಗೆ ಕೇಡಿಸ್ (Cadiz) ಕೊಲ್ಲಿಯನ್ನಾದರೂ ಸೇರಬಹುದಾಗಿತ್ತು. ಆದರೆ ನಾನಿದ್ದ ಘೋರವಾದ ಸ್ಥಳವನ್ನು ಬಿಟ್ಟು ಎಲ್ಲಿಗಾದರೂ ಹೋಗಬೇಕೆಂದು ನಿರ್ಧರಿಸಿದ್ದೆನಾದ್ದರಿಂದ ಗಾಳಿ ಎತ್ತಕಡೆಯಿಂದಾದರೂ ಬೀಸಿಕೊಳ್ಳಲೆಂದು ಸುಮ್ಮನಾದೆ. ಕೆಲವುಕಾಲ ಮೀನುಹಿಡಿಯುವ ಆಟವಾಡಿದೆ. ಸಿಕ್ಕಿದ ಮೀನನ್ನು ಮೇಲಕ್ಕೆ ಎಳೆಯುತ್ತಿರಲಿಲ್ಲ. ಮೀನು ಹಿಡಿಯದೆ ಹಿಂದಿರುಗಿದರೆ ದಣಿ ಕೋಪಿಸಿಕೊಳ್ಳುವನೆಂದೂ ಇನ್ನೂ ಮುಂದಕ್ಕೆ ಹೋದರೆ ಮೀನು ದೊರಕಬಹುದೆಂದೂ ಆ ಮೂರನಿಗೆ ಹೇಳಿದೆ. ದೋಣಿಯ ಮುಂತುದಿಯಲ್ಲಿದ್ದ ಮೂರನು ನನ್ನ ಮೋಸದ ಮಾತುಗಳನ್ನು ಸುಲಭವಾಗಿ ನಂಬಿ, ಹಾಯಿಗಳನ್ನು ಏರಿಸಿದನು. ದೋಣಿಯ ಚುಕ್ಕಾಣಿಯ ಚಕ್ರವನ್ನು ನಾನು ಹಿಡಿದಿದ್ದೆನಾದ್ದರಿಂದ, ದೋಣಿಯನ್ನು ಮೂರುಮೈಲಿಗಳಷ್ಟಾಚೆಗೆ ನಡಸಿಕೊಂಡು ಹೋದೆ. ಬಳಿಕ ಮೀನು ಹಿಡಿಯುವುದಕ್ಕಾಗಿಯೋ ಎಂಬಂತೆ ದೋಣಿಯನ್ನು ನಿಲ್ಲಿಸಿ, ಚುಕ್ಕಾಣಿಯನ್ನು ಹುಡುಗನ ಕೈಗೆ ಕೊಟ್ಟು, ಮೂರನು ನಿಂತಿದ್ದ ಬಳಿಗೆ ಹಿಂದಿನಿಂದ ಹೋದೆ. ಅವನ ಬಳಿ ನಿಂತು, ಏನನ್ನೋ ನೋಡಲು ಬಾಗಿದವನಂತೆ ನಟಿಸಿ, ಸ್ವಲ್ಪವೂ ಸುಳಿವು ಕೊಡದೆ ಅವನ ತೋಳನ್ನು ನನ್ನ ಹೆಗಲ ಮೇಲಕ್ಕೆ ಸೆಳೆದು, ಅವನನ್ನು ಕಡಲಿಗೆ ಒಗೆದೆ. ಕೂಡಲೆ ಅವನು ಮುಳುಗಿದ್ದವನು ಎದ್ದು, ಈಜ ಬಲ್ಲವನಾದ್ದರಿಂದ, ಬೆಂಡಿನಂತೆ ತೇಲಿಕೊಂಡು

ಆತನ ಅಪ್ಪಣೆಯ ಮೇರೆಗೆ ಮಾರನೆಯ ದಿನ ಬೆಳಗ್ಗೆ ನಾನು ಎಲ್ಲವನ್ನೂ ಸಿದ್ಧಪಡಿಸಿ ಕಾದಿದ್ದೆ. ಆದರೆ ನನ್ನ ದಣಿ ಒಬ್ಬನೇ ಬಂದು ತನ್ನ ಅತಿಥಿಗಳು ಇನ್ನೊಮ್ಮೆ ಬರುವುದಾಗಿ ಹೇಳಿಕಳಿಸಿರುವರೆಂದೂ, ಆದ್ದರಿಂದ ಎಂದಿನಂತೆ ಮೂರನೊಡನೆಯೂ, ಹುಡಗನೊಡನೆಯೂ ದೋಣಿಯಲ್ಲಿ ಹೋಗಿ ಮೀನು ಹಿಡಿದು ತರಬೇಕೆಂದೂ ಅಪ್ಪಣೆಮಾಡಿದನು. ಅವನ ಅಪ್ಪಣೆಯನ್ನು ನಡೆಸಲು ಸಿದ್ಧನಾದೆ.

**ಬಿಡುಗಡೆ ; ಆಮೇಲಿನ ಪ್ರಯಾಣ**

ಆಗ ನನ್ನ ಹಿಂದಿನ ಬಿಡುಗಡೆಹೊಂದುವ ಆಲೋಚನೆಗಳು ಮನಸ್ಸಿಗೆ ಹೊಳೆದುವು ; ಏಕೆಂದರೆ, ಈಗ ಒಂದು ಸಣ್ಣ ಹಡಗೇ ನನ್ನ ಅಧೀನದಲ್ಲಿ ಇದ್ದಂತಾಯಿತು. ನನ್ನ ದಣಿಯೂ ಎಲ್ಲಿಗೋ ಹೊರಟುಹೋದುದರಿಂದ ಮೀನು ಹಿಡಿಯುವ ಕೆಲಸದ ಬದಲು ಪ್ರಯಾಣ ಹೊರಡುವ ಸನ್ನಾಹದಲ್ಲಿ ತೊಡಗಿದೆ. ಎಲ್ಲಿಗೆ ಹೋಗಬೇಕೆಂದು ಗೊತ್ತೂ ಇರಲಿಲ್ಲ, ಯೋಚಿಸಲೂ ಇಲ್ಲ. ಆ ಸ್ಥಳವನ್ನು ಬಿಟ್ಟು ಎಲ್ಲಿಗೆ ಹೋದರೂ ಸರಿಯೆ ಎಂದು ಬಯಸಿದ್ದೆ.

ನನ್ನ ಪ್ರಯಾಣದ ಸನ್ನಾಹವನ್ನು ತುಂಬ ಎಚ್ಚರಿಕೆಯಿಂದ ಮಾಡಬೇಕಾಗಿತ್ತು. ಮೊದಲನೆಯದಾಗಿ, ಮೂರನನ್ನು ನನ್ನ ಬಳಿಗೆ ಕರೆದು, ನಮ್ಮ ದಣಿಗಾಗಿ ಸಿದ್ಧಗೊಳಿಸಿದ್ದ ರೊಟ್ಟಿಯನ್ನು ನಾವು ತಿನ್ನಬಾರದೆಂದೂ ದೋಣಿಯ ಮೇಲೆ ಹೊರಟಾಗ ನಾವು ತಿನ್ನುವುದಕ್ಕಾಗಿ ಬೇರೆ ಏನಾದರೂ ತಂದು ಇಟ್ಟುಕೊಂಡಿರಬೇಕೆಂದೂ ಅವನಿಗೆ ಹೇಳಿದೆ. ಆತನು ಒಪ್ಪಿ ಒಂದು ದೊಡ್ಡ ಬುಟ್ಟಿಯ ತುಂಬ ಒಂದು ಬಗೆಯ ಬಿಸ್ಕತ್ತನ್ನೂ ಮೂರು ಜಾಡಿಗಳ ತುಂಬ ಸೀನೀರನ್ನೂ ತಂದನು. ನನ್ನ ದಣಿಯ ಮದ್ಯದ ಶೀಸೆಗಳ ಪೆಟ್ಟಿಗೆ ಎಲ್ಲಿತ್ತೆಂಬುದು ನನಗೆ ಗೊತ್ತಿತ್ತು ; ಮೂರನು ತೀರಕ್ಕೆ ಹೋಗಿದ್ದಾಗ ನಾನು ಆ ಪೆಟ್ಟಿಗೆಯನ್ನು ದೋಣಿಗೆ ಸಾಗಿಸಿದೆ. ಅದರ ಜೊತೆಗೆ ನಾನು ಸುಮಾರು ಐವತ್ತು ಪೌಂಡು ತೂಕದ ಜೇನುಮೇಣದ ದೊಡ್ಡ ಮುದ್ದೆಯನ್ನೂ ಒಂದು ಹಿರಿಯ ಕಟ್ಟನ್ನೂ ಒಂದು ಕೈಗೊಡಲಿಯನ್ನೂ ಒಂದು ಗರಗಸವನ್ನೂ ದೋಣಿಗೆ ಸಾಗಿಸಿದೆ. ಸುಲಭವಾಗಿ ಮೋಸಕ್ಕೆ ಒಳಗಾಗುವಂತೆ ತೋರಿದ ಈ ಮೂರರಿಂದ ಇನ್ನೊಂದು ಕೆಲಸ ಮಾಡಿಸಿದೆ. ನಮ್ಮ ದಣಿಯು ಬಂದೂಕಗಳು ಮಾತ್ರ ದೋಣಿಯಲ್ಲಿವೆಯೆಂದೂ ಸ್ವಲ್ಪ ಮದ್ದು ಗುಂಡುಗಳನ್ನು ಹಡಗಿನಿಂದ ತಂದರೆ ನಮ್ಮ ಉಪಯೋಗಕ್ಕಾಗಿ ಕೆಲವು ಕಡಲುಕೋಳಿಗಳನ್ನು

ನೇರವಾಗಿ ದಕ್ಷಿಣಕ್ಕೆ ತಿರುಗಿಸಿ, ಸ್ವಲ್ಪ ಪೂರ್ವದಕಡೆಗೆ ಓಲಿಸಿದೆ. ಗಾಳಿ ಸೊಗಸಾಗಿತ್ತು; ಕಡಲು ಶಾಂತವಾಗಿತ್ತು. ಮಾರನೆಯ ದಿನ ಮಧ್ಯಾಹ್ನದ ಮೇಲೆ ಮೂರು ಘಂಟೆಯ ಹೊತ್ತಿಗೆ ನಾನು ಮೊತ್ತಮೊದಲು ದೂರದಲ್ಲಿ ನೆಲವನ್ನು ಕಂಡಾಗ ಸ್ಯಾಲಿ ಬಂದರಿನಿಂದ ನೂರಐವತ್ತು ಮೈಲಿಗಳಿಗೆ ಕಡಮೆಯಿಲ್ಲದೆ ದಕ್ಷಿಣಕ್ಕೆ ಸಾಗಿ ಬಂದಿದ್ದೇನೆಂದು ತೋರಿತು. ಮೊರಾಕೊ ಚಕ್ರವರ್ತಿಯ ರಾಜ್ಯದಿಂದ ಆಚೆಗೆ ಬಂದಿದ್ದುದರಲ್ಲಿ ಸಂದೇಹವೇ ಇರಲಿಲ್ಲ. ಆದರೂ ಕೂಡ ಮೊರಾಕೊ ರಾಜ್ಯದ ಮೂರರ ಹೆದರಿಕೆ ನನ್ನಲ್ಲಿ ಬಹಳವಾಗಿ ಬೇರೂರಿತ್ತು. ಅವರ ಕೈಗೆ ಎಲ್ಲಿ ಸಿಕ್ಕಿಬೀಳುವೆನೋ ಎಂದು ಹೆದರಿ, ನಾನು ಪ್ರಯಾಣಮಧ್ಯದಲ್ಲಿ ಎಲ್ಲಿಯೂ ನಿಲ್ಲದೆ, ತೀರದ ಕಡೆಗೂ ಹೋಗದೆ, ಲಂಗರನ್ನೂ ಬಿಡದೆ, ಒಂದೇ ಸಮನಾಗಿ ಸಾಗುತ್ತಿದ್ದೆ. ಗಾಳಿ ಸೊಗಸಾಗಿದ್ದುದರಿಂದ ಹೀಗೆ ಐದು ದಿನ ಪ್ರಯಾಣ ಮಾಡಿದೆ. ಆ ಬಳಿಕ ಗಾಳಿ ದಕ್ಷಿಣದ ಕಡೆಗೆ ತಿರುಗಿದುದರಿಂದ, ಯಾವುವಾದರೂ ಹಡಗುಗಳು ನನ್ನನ್ನು ಅಟ್ಟಿಸಿಕೊಂಡು ಬರುತ್ತಿದ್ದರೂ ಕೂಡ ಅವು ತಮ್ಮ ಪ್ರಯತ್ನವನ್ನು ಬಿಟ್ಟುಬಿಡುವುವೆಂದು ನಿಶ್ಚಯಿಸಿ, ಕರೆಯ ಕಡೆಗೆ ಹೋಗುವ ಧೈರ್ಯಮಾಡಿದೆ. ಒಂದು ಸಣ್ಣ ನದಿಯ ಮುಖದಲ್ಲಿ ಲಂಗರು ಹಾಕಿದೆ. ಆ ನದಿ ಯಾವುದೆಂಬುದು ತಿಳಿಯಲಿಲ್ಲ. ಆ ಸ್ಥಳ ಯಾವ ಅಕ್ಷಾಂಶದಲ್ಲಿತ್ತೆಂಬುದಾಗಲಿ ಯಾವ ದೇಶಕ್ಕೆ ಸೇರಿದುದೆಂಬುದಾಗಲಿ ಅಲ್ಲಿ ಇದ್ದಿರಬಹುದಾದ ಜನ ಯಾರೆಂಬುದಾಗಲಿ ಗೊತ್ತಾಗಲಿಲ್ಲ. ಯಾವ ಜನವೂ ಕಣ್ಣಿಗೆ ಬೀಳಲಿಲ್ಲ ; ಅವರನ್ನು ಕಾಣಬೇಕೆಂಬ ಬಯಕೆಯೂ ಇರಲಿಲ್ಲ. ನನಗೆ ಮುಖ್ಯವಾಗಿ ಬೇಕಾಗಿದ್ದುದು ಸೀನೀರು. ಸಂಜೆಯ ಹೊತ್ತಿಗೆ, ನದಿಯ ಬಾಯೊಳಕ್ಕೆ ನುಗ್ಗಿದ ಕಡಲ ಚಾಚಿನ ಬಳಿಗೆ ಬಂದೆವು. ಸ್ವಲ್ಪ ಕತ್ತಲೆಯಾದ ಮೇಲೆ ಈಜಿಕೊಂಡು ಹೋಗಿ ನಾಡು ಯಾವುದಿರಬಹುದೆಂಬುದನ್ನು ಕಂಡುಹಿಡಿಯಬೇಕೆಂದು ನಿಶ್ಚಯಿಸಿದೆ. ಆದರೆ ಕತ್ತಲೆಯಾದಕೂಡಲೆ ಬಗುಳಾಟ ಊಳಾಟ ಗರ್ಜನೆ ಮೊದಲಾದ ಕಾಡು ಮೃಗಗಳ ಭಯಂಕರವಾದ ಕೂಗುಗಳು ಕೇಳಿಬಂದವು. ಆ ಕೂಗುಗಳನ್ನು ಕೇಳಿದ ಹೆದರಿಕೆಯಿಂದಲೇ ಸತ್ತುಹೋಗುವುದರಲ್ಲಿದ್ದ ಹುಡುಗನು ಹಗಲಾಗುವವರೆಗೂ ಕರೆಗೆ ಹೋಗದಂತೆ ನನ್ನನ್ನು ಬೇಡಿಕೊಂಡನು. ಗ್ಸೂರಿಯ ಸಲಹೆ ಸೂಕ್ತವಾಗಿ ಕಂಡಿತು. ಆದ್ದರಿಂದ ಅವನ ಸಲಹೆಯಂತೆ ಇದ್ದೆಡೆಯಲ್ಲಿಯೆ ಇರುವುದಾಗಿ ನಿಶ್ಚಯಿಸಿ, ದೋಣಿಗೆ ಲಂಗರು ಹಾಕಿದೆ. ಹೆದರಿಕೆಯಿಂದ ಉಡುಗಿ ಹೋಗಿದ್ದ ಆ ಬಡಹುಡುಗನಿಗೆ ಸ್ವಲ್ಪ ಚೈತನ್ಯ ತುಂಬುವುದಕ್ಕಾಗಿ ಅವನಿಗೆ ಒಂದು ಗುಟುಕು ಮದ್ಯವನ್ನು ಕುಡಿಸಿದೆ. ಇರುಳೆಲ್ಲಾ ಇಬ್ಬರೂ ಎಚ್ಚರವಾಗಿಯೇ ಮಲಗಿದ್ದೆವು. ಹಾಗೆ ಸುಮ್ಮನೆ

ಬಂದು, ತನ್ನನ್ನು ದೋಣಿಯ ಮೇಲಕ್ಕೆ ಕರೆದುಕೊಳ್ಳುವ ಉಪಕಾರಮಾಡಿದರೆ ನನ್ನ ಜೊತೆ ಎಲ್ಲಿಗೆ ಬೇಕಾದರೆ ಅಲ್ಲಿಗೆ ಬರಲು ಸಿದ್ಧನಾಗಿರುವುದಾಗಿ ಬೇಡಿಕೊಂಡನು. ಆದರೆ ಅವನು ನನ್ನ ಮಾತನ್ನು ಕೇಳದೆ ಈಜಿಕೊಂಡು ದೋಣಿಯನ್ನು ಹಿಂಬಾಲಿಸುತ್ತಿದ್ದ. ನಾನು ಕೋಣೆಯಿಂದ ಒಂದು ಬಂದೂಕನ್ನು ತೆಗೆದುಕೊಂಡು ಬಂದು ಅವನ ಕಡೆಗೆ ಗುರಿಮಾಡಿ ಹಿಡಿದು, – "ನಾನು ನಿನಗೆ ಏನೂ ತೊಂದರೆ ಮಾಡಿಲ್ಲ. ಇನ್ನು ಮುಂದೂ ಮಾಡುವುದಿಲ್ಲ. ಆದರೆ ನನ್ನ ತಂಟೆಗೆ ನೀನು ಬರಬೇಡ. ನೀನು ಚೆನ್ನಾಗಿ ಈಜಬಲ್ಲೆ. ಆದ್ದರಿಂದ ಸುಮ್ಮನೆ ಈಜಿಕೊಂಡು ದಡವನ್ನು ಸೇರು. ನನ್ನ ಮಾತನ್ನು ಕೇಳದೆ ನೀನು ದೋಣಿಯ ಬಳಿಗೆ ಬಂದರೆ ಗುಂಡುಹಾರಿಸಿ ನಿನ್ನನ್ನು ಕೊಂದುಬಿಡುತ್ತೇನೆ" – ಎಂದು ಬೆದರಿಸಿದೆ. ನನ್ನ ಮಾತಿನಂತೆ ಅವನು ಹಿಂದಿರುಗಿ ಹೋದನು. ಅವನು ಒಳ್ಳೆಯ ಈಜುಗಾರನಾದ್ದರಿಂದ ಹೆಚ್ಚು ಪ್ರಯಾಸವಿಲ್ಲದೆ ಕರೆಯನ್ನು ಮುಟ್ಟಿದನೆಂಬುದರಲ್ಲಿ ಸಂದೇಹವಿಲ್ಲ. ಮೂರನನ್ನು ಜೊತೆಯಲ್ಲಿ ಕರೆದುಕೊಂಡು ಈ ಹುಡುಗನನ್ನು ಕಡಲಿಗೆ ತಳ್ಳಿಬಿಡಬಹುದಾಗಿತ್ತು. ಆದರೆ ಮೂರನನ್ನು ನಂಬುವುದು ಸಾಹಸವೆಂದು ನನಗೆ ತೋರಿತು. ಆದ್ದರಿಂದ ಹಾಗೆ ಮಾಡಿದೆ.

ಹುಡಗನ ಹೆಸರು ಗ್ಸೂರಿ (Xury). ಮೂರನು ಕಣ್ಮರೆಯಾದ ಮೇಲೆ ಹುಡಗನ ಕಡೆಗೆ ತಿರುಗಿ, ನೀನು ನನ್ನ ನಂಬಿಕೆಗೆ ಪಾತ್ರನಾಗಿ ನಾನು ಹೇಳಿದಹಾಗೆ ಕೇಳಿದರೆ ನಿನ್ನನ್ನು ಭಾರಿ ಮನುಷ್ಯನನ್ನಾಗಿ ಮಾಡುತ್ತೇನೆ. ಹಾಗೆ ನಡೆದುಕೊಳ್ಳುವುದಾಗಿ ಮಾತುಕೊಡದೆ ಹೋದರೆ ನಿನ್ನನ್ನು ಕಡಲಿಗೆ ತಳ್ಳಬೇಕಾಗುತ್ತೆ" ಎಂದು ಹೇಳಿದೆ. ಆ ಹುಡುಗನು ಮುಗುಳ್ನಗೆ ನಗುತ್ತಾ ಬಹಳ ನಿಷ್ಕಾಪಟ್ಯದಿಂದ ಮಾತನಾಡಿದನು ; ಮತ್ತು ನನಗೆ ವಿಧೇಯನಾಗಿರುವುದಾಗಿಯೂ ಎಲ್ಲಿಗೆ ಬೇಕಾದರೂ ನನ್ನೊಡನೆ ಹೋಗುವುದಾಗಿಯೂ ಮಾತುಕೊಟ್ಟನು. ಅವನಲ್ಲಿ ಅಪನಂಬಿಕೆ ಇಡಲು ಕಾರಣ ತೋರಲಿಲ್ಲ. ಮೂರನು ಈಜಿಕೊಂಡು ಹೋಗುತ್ತಿದ್ದಾಗ ನಾನು ನಡುಗಡಲ ಕಡೆಗೆ ನೇರವಾಗಿ ಹೊರಟಿದ್ದೆ. ದೋಣಿಯನ್ನು ಯಾರಾದರೂ ಕಂಡಿದ್ದರೂ ಕೂಡ ಜಲಸಂಧಿಯ ಕಡೆಗೆ ದೋಣಿ ಹೋಗಬಹುದೆಂದು ತಿಳಿಯುತ್ತಿದ್ದರೇ ಹೊರತು, ಕಾಡುಜನರ ಮತ್ತು ಕಾಡುಮೃಗಗಳ ನೆಲೆಬೀಡಾಗಿದ್ದ ತೀರಪ್ರದೇಶವನ್ನು ಕುರಿತು ದಕ್ಷಿಣ ದಿಕ್ಕಿಗೆ ತಿರುಗುವುದೆಂದು ಊಹಿಸುವುದಕ್ಕೂ ಅವಕಾಶವಿರಲಿಲ್ಲ.

ಸಂಜೆಯ ಮಬ್ಬು ಕವಿಯುತ್ತ ಬರಲು ನಾನು ನನ್ನ ಪ್ರಯಾಣ ಮಾರ್ಗವನ್ನು ಬದಲಾಯಿಸಿದೆ ; ತೀರಪ್ರದೇಶಕ್ಕೆ ಸಮೀಪವಾಗಿರುವ ರೀತಿಯಲ್ಲಿ ದೋಣಿಯನ್ನು

ತಂದುಕೊಡುವುದಾಗಿ ಗ್ಲೂರಿ ಹೇಳಿದ. "ನೀನೇ ಏಕೆ ಹೋಗಬೇಕು? ನೀನು ದೋಣಿಯಲ್ಲಿದ್ದು ನಾನೇಕೆ ಹೋಗಬಾರದು" ಎಂದು ನಾನು ಕೇಳಿದೆ. ಆ ಹುಡುಗನು ಕೊಟ್ಟ ಉತ್ತರದಲ್ಲಿ ಪ್ರೀತಿ ತುಂಬಿ ತುಳುಕುತ್ತಿತ್ತು ; ಅಂದಿನಿಂದ ಆ ಹುಡುಗನ ಮೇಲೆ ನನಗೂ ಅತಿಶಯವಾದ ಪ್ರೀತಿಯುಂಟಾಯಿತು. "ಕಾಡುಜನ ಬಂದರೆ ನನ್ನನ್ನು ತಿಂದುಕೊಳ್ಳಲಿ. ನೀನು ಹೊರಟುಹೋಗು" ಎಂದು ಹೇಳಿದ ಆ ಹುಡುಗ. ನಾನು ಹೇಳಿದೆ : "ನಾವಿಬ್ಬರೂ ಹೋಗೋಣ. ಕಾಡು ಜನ ಬಂದರೆ ಅವರನ್ನು ಕೊಂದುಹಾಕೋಣ. ನಮ್ಮಿಬ್ಬರಲ್ಲಿ ಯಾರನ್ನೂ ಅವರು ತಿನ್ನಬೇಕಾಗಿಲ್ಲ." ಹೀಗೆ ಹೇಳಿ ಗ್ಲೂರಿಗೆ ಒಂದು ಚೂರು ರೊಟ್ಟಿಯನ್ನೂ ಒಂದು ಗುಟುಕು ಮದ್ಯವನ್ನೂ ಕೊಟ್ಟೆ. ದೋಣಿಯನ್ನು ಕರೆಗೆ ಎಷ್ಟು ಸಮೀಪದಲ್ಲಿರಬೇಕೋ ಅಷ್ಟು ಸಮೀಪಕ್ಕೆ ಎಳೆದೊಯ್ದು ನೀರಿನಲ್ಲಿ ನಡೆದುಕೊಂಡು ಹೋದೆವು. ನೀರಿಗಾಗಿ ಎರಡು ಜಾಡಿಗಳು ಮತ್ತು ಬಂದೂಕಗಳನ್ನಲ್ಲದೆ ಜೊತೆಯಲ್ಲಿ ಇನ್ನೇನನ್ನೂ ತೆಗೆದುಕೊಂಡು ಹೋಗಲಿಲ್ಲ.

ದೋಣಿ ಕಣ್ಣಿಗೆ ಕಾಣದಷ್ಟು ದೂರ ಹೊರಟುಹೋಗಲು ನನಗೆ ಇಷ್ಟವಿರಲಿಲ್ಲ. ನದಿಯ ಮೇಲಿನಿಂದ ಕಾಡುಜನ ಕನೂ (Canoe) ದೋಣಿಯಲ್ಲಿ ಎಲ್ಲಿ ಬಂದುಬಿಡುವರೋ ಎಂದು ನನಗೆ ಹೆದರಿಕೆ. ಒಂದು ಮೈಲಿ ಆಚೆ ಒಂದು ತಗ್ಗಾದ ಎಡೆಯನ್ನು ಕಂಡು ಹುಡುಗನು ಆ ಕಡೆಗೆ ಧಾವಿಸಿದ ; ತುಸ ಹೊತ್ತಾದ ಮೇಲೆ ಅವನು ನನ್ನ ಕಡೆಗೆ ಓಡೋಡಿ ಬರುತ್ತಿರುವುದು ಕಂಡಿತು. ಕಾಡುಮನುಷ್ಯನೊಬ್ಬನು ಅಟ್ಟಿಸಿಕೊಂಡು ಬಂದನೋ ಇಲ್ಲವೆ ಕಾಡುಮೃಗವೊಂದನ್ನು ಕಂಡು ಹೆದರಿರುವನೋ ಎಂದು ಊಹಿಸಿ, ಅವನಿಗೆ ನೆರವು ನೀಡುವುದಕ್ಕಾಗಿ ಅವನ ಬಳಿಗೆ ಓಡಿಹೋದೆ. ಅವನ ಮುಖದಲ್ಲಿ ಹೆದರಿಕೆಯ ಚಿಹ್ನೆ ಇರಲಿಲ್ಲ ; ಬದಲಾಗಿ ಅತ್ಯಂತ ಸಂತೋಷ ಸೂಸುತ್ತಿತ್ತು. ಒಳ್ಳೆಯ ನೀರನ್ನು ಕಂಡೆನೆಂದೂ ಕಾಡುಜನರಾರು ಕಾಣಲಿಲ್ಲವಂದೂ ನನಗೆ ತಿಳಿಸುವುದಕ್ಕೋಸ್ಕರ ಅವನು ಹಾಗೆ ಓಡಿಬಂದಿದ್ದ. ಅವನು ನನ್ನ ಬಳಿಗೆ ಬಂದಾಗ ಅವನ ಹೆಗಲಮೇಲೆ ಮೊಲದಂಥ ಒಂದು ಪ್ರಾಣಿ ನೇತಾಡುತ್ತಿತ್ತು. ಅದನ್ನು ಅವನು ಗುಂಡುಹೊಡೆದು ಕೊಂದಿದ್ದ. ಅದು ನಮಗೆ ತಿನ್ನಲು ಒಳ್ಳೆಯ ಆಹಾರವಾಯಿತು.

ನೀರಿಗಾಗಿ ಹೆಚ್ಚುತೊಂದರೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಗೊತ್ತಾಯಿತು. ನಾವು ತಂಗಿದ್ದ ಸ್ಥಳದಿಂದ ಸ್ವಲ್ಪ ದೂರದವರೆಗೆ ಮಾತ್ರ ಕಡಲು ನುಗ್ಗಿ ಹೋಗುತ್ತಿತ್ತು. ಕಡಲ ಉಬ್ಬರ ಇಳಿದಾಗ ಅಲ್ಲಿ ನೀರು ಚೆನ್ನಾಗಿರುತ್ತಿತ್ತು. ಅಲ್ಲಿಗೆ ಹೋಗಿ ಜಾಡಿಗಳ ತುಂಬ ನೀರು ತುಂಬಿಕೊಂಡು, ಗ್ಲೂರಿ ಕೊಂದು ತಂದಿದ್ದ ಪ್ರಾಣಿಯ

ಮಲಗಿಕೊಂಡಿದ್ದಾಗ ಕಡಲ ಕರೆಯ ಕಡೆಗೆ ಬಹು ದೊಡ್ಡಪ್ರಾಣಿಗಳ ನೀರಿನೊಳಕ್ಕೆ ನುಗ್ಗಿಬಂದು ಅಲ್ಲಿ ಮುಳುಗಾಡುತ್ತಿದ್ದುದು ಕಂಡುಬಂದಿತು. ಅವುಗಳ ಆಗ ಮಾಡಿದ ಭೀಕರ ಗರ್ಜನೆಗಳನ್ನು ನಾನು ಎಂದೂ ಕೇಳಿರಲಿಲ್ಲ.

ಗ್ಸೂರಿಯ ಹೆದರಿಕೆಯನ್ನು ಹೇಳಿತೀರದು, ನನಗೂ ಹೆದರಿಕೆಯೇ ಆಗಿತ್ತು. ಆ ಬೃಹತ್‌ಪ್ರಾಣಿಗಳಲ್ಲಿ ಒಂದು ನಮ್ಮ ದೋಣಿಯ ಕಡೆಗೆ ಈಜಿಕೊಂಡು ಬರುತ್ತಿರುವ ಸುದ್ದು ಕೇಳಿದಾಗ ನಮ್ಮ ಭೀತಿ ಹೆಚ್ಚಿತು. ಆ ಪ್ರಾಣಿ ಕಾಣುವಂತಿರಲಿಲ್ಲ. ಅದರ ಈಜಾಟದ ಸದ್ದಿನಿಂದ ಅದು ಬಹುದೊಡ್ಡ ಹಿಂಸ್ರಜಂತುವಾಗಿರಬೇಕೆಂದು ತೋರಿತು. ನನ್ನಂಥ ಗುಲಾಮರೊಡನೆ ಮಾತನಾಡಿ ಆಡಿ ಗ್ಸೂರಿಗೆ ಕೊಂಚ ಹರುಕುಮುರುಕು ಇಂಗ್ಲೀಷು ಬರುತ್ತಿತ್ತು. ಆ ಪ್ರಾಣಿ ಸಿಂಹವಿರಬಹುದೆಂದು ಗ್ಸೂರಿ ಹೇಳಿದ ; ಲಂಗರನ್ನು ಎತ್ತಿ ಹುಟ್ಟುಹಾಕಿ ದೋಣಿಯನ್ನು ಓಡಿಸಿಕೊಂಡು ಹೋಗಬೇಕೆಂದು ಸೂಚಿಸಿದ. "ಹಾಗೆ ಮಾಡುವುದು ಬೇಡ, ಗ್ಸೂರಿ ; ನಾವು ಹಗ್ಗಕ್ಕೆ ತೇಲುವೆ ಕಟ್ಟಿಕೊಂಡು ಸಮುದ್ರದೊಳಕ್ಕೆ ಈಜಿಕೊಂಡು ಹೊರಟು ಹೋಗಬಹುದು. ಅವು ತುಂಬಾ ದೂರ ನಮ್ಮನ್ನು ಹಿಂಬಾಲಿಸಲಾರವು" ಎಂದೆ ನಾನು. ಹಾಗೆ ಹೇಳಿದ್ದೇ ತಡ, ಆ ಪ್ರಾಣಿ ದೋಣಿಯಿಂದಾಚೆ ಎರಡು ಹುಟ್ಟುಗಳಷ್ಟು ದೂರಕ್ಕೆ ಸಾಗಿಬಂತು ; ಅದನ್ನು ಕಂಡು ಚಕಿತನಾದೆ. ಕೂಡಲೆ ಕೋಣೆಯ ಬಾಗಿಲ ಬಳಿಗೆ ಹೋಗಿ ನನ್ನ ಬಂದೂಕನ್ನು ತೆಗೆದುಕೊಂಡು ಗುಂಡು ಹಾರಿಸಿದೆ; ಆ ಪ್ರಾಣಿ ಹಿಂದಿರುಗಿ ಕರೆಯ ಕಡೆಗೆ ಈಜಿಕೊಂಡು ಹೊರಟುಹೋಯಿತು. ಗುಂಡು ಹಾರಿಸಿದ ಕೂಡಲೇ ಕರೆಯ ಕಡೆಯಿಂದ ಘೋರವಾದ ಕೂಗಾಟ ಚೀರಾಟಗಳ ಗೊಂದಲ ಎದ್ದಿತು. ಗುಂಡು ಹಾರಿದ ವಿಚಿತ್ರವಾದ ಸದ್ದುಕೇಳಿಯೇ ಪ್ರಾಣಿಗಳು ಕೂಗಾಟವೆಬ್ಬಿಸಿರಬೇಕು. ಹೀಗೆ, ಕಡಲ ಕರೆಯಲ್ಲಿ ಮೃಗಗಳ ಪಡೆ ಇದ್ದುದು ಗೊತ್ತಾದಮೇಲೆ, ಆ ಇರುಳು ಕರೆಗೆ ಹೋಗುವುದು ದುಸ್ಸಾಧ್ಯವೆಂದು ದೃಢವಾಯಿತು. ಹಗಲಾದ ಮೇಲೆ ಕರೆಗೆ ಹೋಗುವುದಾದರೂ ಪ್ರಶ್ನೆಯಾಗಿಯೇ ಉಳಿಯಿತು. ಇರುಳಿನಲ್ಲಿ ಕಾಡು ಮೃಗಗಳ ಕಾಟವಾದರೆ, ಹಗಲಿನಲ್ಲಿ ಕಾಡುಜನರ ಕೈಗೆ ಬೀಳುವ ಶಂಕೆ ಇತ್ತು.

ಅದು ಹೇಗಾದರೂ ಇರಲಿ. ಮಾರನೆಯ ದಿನ ನಾವು ಕರೆ ದಾಟಿ ನೀರಿಗಾಗಿ ಎಲ್ಲಿಗಾದರೂ ಹೋಗಬೇಕಾಗಿತ್ತು. ಏಕೆಂದರೆ, ದೋಣಿಯಲ್ಲಿ ಒಂದು ಬೊಗಸೆಯಷ್ಟು ಕೂಡ ಕುಡಿಯುವ ನೀರಿರಲಿಲ್ಲ. ಯಾವಾಗ ಮತ್ತು ಎಲ್ಲಿಗೆ ಹೋಗಿ ತರಬೇಕೆಂಬುದೇ ಪ್ರಶ್ನೆಯಾಗಿತ್ತು. ಒಂದು ಜಾಡಿಯನ್ನು ಕೊಟ್ಟು ತನ್ನನ್ನು ಕಳಿಸಿದರೆ ತಾನು ಕರೆಗೆ ಹೋಗಿ ಹುಡುಕಿ ನನಗೆ ನೀರು

ತಂಗಬೇಕಾಯಿತು. ಒಮ್ಮೆ ಬೆಳಕು ಹರಿಯುವುದಕ್ಕೆ ಮುಂಚೆ ಒಂದು ಕಡೆ ಲಂಗರು ಬಿಟ್ಟೆವು. ಪಕ್ಕದ ಕರೆಯ ನೆಲ ತಕ್ಕಮಟ್ಟಿಗೆ ಎತ್ತರಕ್ಕೆ ಎದ್ದಿತ್ತು. ಭರತ ಬಂದು ಹರಿಯುವುದರಲ್ಲಿ ಇದ್ದುದರಿಂದ, ಇನ್ನೂ ಮುಂದಕ್ಕೆ ಹೋಗುವುದಕ್ಕಾಗಿ ಇದ್ದೆಡೆಯಲ್ಲೇ ಕಾದಿದ್ದೆವು. ನನಗಿಂತಲೂ ಹೆಚ್ಚಾಗಿ ಗ್ಝೂರಿ ಮೈಯೆಲ್ಲಾ ಕಣ್ಣಾಗಿ ಜಾಗರೂಕನಾಗಿದ್ದನು. ಅವನು ನನ್ನ ಬಳಿಗೆ ಬಂದು "ಅಗೋ ನೋಡು, ಆ ಗುಡ್ಡದ ಮೇಲೆ ಒಂದು ಭೂತದಂಥ ಪ್ರಾಣಿ ಮಲಗಿದೆ" ಎಂದು ಮೆಲ್ಲನೆ ಹೇಳಿ ತೋರಿಸಿದ. ಅವನು ಕೈತೋರಿದ ಕಡೆ ನೋಡಿದೆ. ಅವನು ಹೇಳಿದ್ದು ನಿಜ. ಅಲ್ಲಿ ಕರೆಗೆ ಅಭಿಮುಖವಾಗಿ ಒಂದು ಸಿಂಹ ಮಲಗಿತ್ತು. ಹುಡುಗನನ್ನು ದೋಣಿಯಲ್ಲಿ ಸದ್ದುಮಾಡದೆ ಮಲಗಿರುವಂತೆ ಹೇಳಿ, ನಾನು ನನ್ನ ಬಳಿಯಲ್ಲಿದ್ದ ಮೂರು ಬಂದೂಕುಗನ್ನು ಚೆನ್ನಾಗಿ ಬಾರುಮಾಡಿ ತೆಗೆದುಕೊಂಡು ಹೋದೆ. ಗುಂಡಿನ ಸದ್ದು ಕೇಳಿ ಸಿಂಹ ಎದ್ದು ನಿಂತು ಗರ್ಜಿಸಿತು.



ಆ ಸಿಂಹ ಬಡಪೆಟ್ಟಿಗೆ ಸಾಯಲಿಲ್ಲ. ಮೂರು ಬಂದೂಕುಗಳಿಂದಲೂ ಮೂರುಸಲ ಗುಂಡುಹಾರಿಸಿದ ಮೇಲೆ ಅದು ನೆಲದ ಮೇಲೆ ಒರಗಿ ಬಿತ್ತು. ಆದರೂ ಇನ್ನೂ ಪ್ರಾಣಹೋಗದೆ ಒದ್ದಾಡುತ್ತಲೇ ಇತ್ತು. ಗ್ಝೂರಿಗೆ ಸ್ವಲ್ಪ ಧೈರ್ಯ ಬಂದಂತಾಗಿ ತಾನು ಕರೆಯ ಕಡೆಗೆ ಹೋಗಲು ಅವಕಾಶ ಕೇಳಿದ. ನಾನು ಹೋಗೆಂದೆ. ಅವನು ನೀರಿಗೆ ದುಮುಕಿ, ಒಂದು ಕೈಯಲ್ಲಿ ಈಜಿಕೊಂಡು ಕರೆಗೆ

ಮಾಂಸವನ್ನು ತುಂಬಿ, ಪ್ರಯಾಣವನ್ನು ಮುಂದುವರಿಸಲು ಸಿದ್ಧರಾದೆವು. ನಾವು ತಂಗಿದ್ದ ಆ ಕರೆಯ ಪ್ರಾಂತದಲ್ಲಿ ಯಾವ ಮಾನವ ಪ್ರಾಣಿಯ ಹೆಜ್ಜೆಯ ಗುರುತೂ ಕಂಡುಬರಲಿಲ್ಲ.

ಹಿಂದೊಮ್ಮೆ ಈ ತೀರಪ್ರಾಂತದಲ್ಲಿ ನಾನು ಪ್ರಯಾಣಮಾಡಿದ್ದೆನಾದ್ದರಿಂದ, ಕನೇರಿ ದ್ವೀಪಗಳೂ (Canaries) ವೆರ್ಡ್‌ಭೂಶಿರ ದ್ವೀಪಗಳೂ (Cape de Verde Islands) ತೀರದಿಂದ ಬಹುದೂರ ಇರಲಿಲ್ಲವೆಂಬುದು ನನಗೆ ಗೊತ್ತಿತ್ತು. ನಾವು ಯಾವ ಅಕ್ಷಾಂಶದಲ್ಲಿದ್ದೇವೆಂಬುದು ನನಗೆ ಗೊತ್ತಾಗಲಿಲ್ಲ ; ಅದನ್ನು ಕಂಡು ಹಿಡಿಯಲು ಬೇಕಾದ ಯಂತ್ರ ಸಲಕರಣೆ ನನ್ನ ಬಳಿ ಇರಲಿಲ್ಲ. ದ್ವೀಪಗಳ ಅಕ್ಷಾಂಶ ಯಾವುದೆಂಬುದು ಸಹ ನನಗೆ ಸರಿಯಾಗಿ ನೆನಪಿರಲಿಲ್ಲ. ಹೀಗಾಗಿ ದ್ವೀಪಗಳನ್ನು ಕುರಿತು ಪಯಣ ಬೆಳೆಸುವುದು ಅಸಾಧ್ಯವಾಗಿತ್ತು. ಈ ತೀರಪ್ರದೇಶದ ಕೆಲವು ಪ್ರಾಂತಗಳಿಗೆ ಇಂಗ್ಲಿಷರು ವ್ಯಾಪಾರಕ್ಕಾಗಿ ಬಂದುಹೋಗುತ್ತಿದ್ದರು. ಆದ್ದರಿಂದ ತೀರವನ್ನು ಹಿಡಿದು ಉದ್ದಕ್ಕೂ ಪ್ರಯಾಣಮಾಡುತ್ತ ಹೋದರೆ ಅವರ ಹಡಗುಗಳಲ್ಲಿ ಕೆಲವಾದರೂ ಇತ್ತಕಡೆ ವ್ಯಾಪಾರಕ್ಕೆ ಬರಬಹುದೆಂದೂ, ಹಾಗೆ ಬಂದಾಗ ನಮಗೆ ನೆರವು ದೊರೆಯುವುದೆಂದೂ ನಿರೀಕ್ಷಿಸಿದ್ದೆ.

ನನ್ನ ಎಣಿಕೆಯ ಮೇರೆಗೆ ಈಗ ನಾನಿದ್ದ ಪ್ರಾಂತ ಮೊರಾಕೊ ಚಕ್ರವರ್ತಿಯ ರಾಜ್ಯಕ್ಕೂ ನೀಗ್ರೋ ಜನ ವಾಸವಾಗಿದ್ದ ಪ್ರದೇಶಕ್ಕೂ ನಡುವೆ ಇತ್ತು. ಮೂರರಿಗೆ ಹೆದರಿ ಆ ಪ್ರಾಂತವನ್ನು ಬಿಟ್ಟು ನೀಗ್ರೋ ಜನ ಅದರಿಂದ ಇನ್ನೂ ತೆಂಕಣ ಕಡೆಗೆ ಸರಿದಿರಬೇಕು. ಆ ಪ್ರಾಂತ ವಾಸಯೋಗ್ಯವಲ್ಲವೆಂದು ಮೂರರು ಯೋಚಿಸಿರಬೇಕು. ಜೊತೆಗೆ ಆ ಪ್ರಾಂತದ ತುಂಬ ಬಗೆಬಗೆಯ ಕಾಡುಮೃಗಗಳು ತುಂಬಿಕೊಂಡಿದ್ದುವು. ಮೂರರೇನೊ ಅತ್ತ ಕಡೆ ಒಮ್ಮೊಮ್ಮೆ ಬೇಟೆಗಾಗಿ ಬರುತ್ತಿದ್ದರು. ಅಂತೂ ಈ ತೀರ ಪ್ರಾಂತದಲ್ಲಿ ನೂರಾರು ಮೈಲಿಗಳಷ್ಟು ಪ್ರದೇಶ ನಿರ್ಜನವಾಗಿತ್ತು.

ಹಗಲು ಹೊತ್ತಿನಲ್ಲಿ ಒಂದೆರಡು ಸಲ ಕನೇರಿ ದ್ವೀಪಗಳ ಎತ್ತರವಾದ ಪರ್ವತದ ಶಿಖರವು ಕಣ್ಣಿಗೆ ಕಂಡಂತೆ ಭಾಸವಾಯಿತು. ದೋಣಿಯನ್ನು ಅತ್ತಕಡೆ ತೆಗೆದುಕೊಂಡು ಹೋಗಲು ಎರಡುವೇಳೆ ಪ್ರಯುತ್ನಪಟ್ಟೆ. ಗಾಳಿ ಅನುಕೂಲವಾಗಿರಲಿಲ್ಲ. ನನ್ನ ದೋಣಿ ತಡೆಯಲಾರದಷ್ಟು ಎತ್ತರಕ್ಕೆ ಅಲೆಗಳೇಳುತ್ತಿದ್ದವು. ಆದ್ದರಿಂದ ನನ್ನ ಮೊದಲ ಸಂಕಲ್ಪದ ಮೇರೆಗೆ ಕರೆಯನ್ನು ಹಿಡಿದೇ ಮುಂದುವರಿಯಬೇಕಾಯಿತು.

ಈ ಸ್ಥಳವನ್ನು ಬಿಟ್ಟಮೇಲೆ ನಾವು ಅನೇಕವೇಳೆ ಸೀನೀರಿಗಾಗಿ ಅಲ್ಲಲ್ಲಿ

ಬಟ್ಟಬತ್ತಲೆಯಾಗಿದ್ದರು. ದೋಣಿ ನಿಲ್ಲಿಸಿ ಅವರ ಬಳಿಗೆ ಹೋಗಬೇಕೆಂದು ಒಮ್ಮೆ ಅನ್ನಿಸಿತು. ಆದರೆ ಗ್ಸೂರಿ ಬೇಡವೆಂದು ಸಲಹೆ ಕೊಟ್ಟ. ಆದರೂ, ಅವರ ಜೊತೆ ಮಾತನಾಡಬಹುದೆಂಬ ಎಣಿಕೆಯಿಂದ ದೋಣಿಯನ್ನು ಕರೆಯಂಚಿನಲ್ಲೆ ನಡಸಿಕೊಂಡು ಹೋದೆ ; ನಾನು ಹಾಗೆ ಮಾಡಿದಾಗ ಬಹುದೂರ ಅವರು ನಮ್ಮ ಜೊತೆಯಲ್ಲೆ ಕರೆಯುದ್ದಕ್ಕ ಓಡಿ ಬಂದರು. ಅವರ ಬಳಿ ಯಾವ ಆಯುಧಗಳೂ ಇದ್ದಂತೆ ಕಾಣಲಿಲ್ಲ. ಒಬ್ಬನು ಮಾತ್ರ ಒಂದು ಉದ್ದನೆಯ ಕೋಲನ್ನು ಹಿಡಿದುಕೊಂಡಿದ್ದನು. ಆ ಕೋಲು ಈಟಿಯೆಂದೂ ಅದನ್ನು ಅವರು ಗುರಿಯಿಟ್ಟು ಬಹುದೂರಕ್ಕೆ ಎಸೆಯಬಲ್ಲರೆಂದೂ ಗ್ಸೂರಿ ನನಗೆ ತಿಳಿಸಿದ. ಆದ್ದರಿಂದ ನಾನು ಸ್ವಲ್ಪ ದೂರದಲ್ಲಿಯೇ ಹೋಗುತ್ತಿದ್ದೆ. ಉದ್ದಕ್ಕೂ ಸನ್ನೆಮಾಡಿ ಅವರೊಡನೆ ಮಾತಾಡುತ್ತಿದ್ದೆ. ನನ್ನ ಈ ಸಂಜ್ಞಾ ಸಂಭಾಷಣೆ ಅವರಿಗೆ ಬಹುಮಟ್ಟಿಗೆ ಅರ್ಥವಾಗಿದ್ದಿರಲಾರದು. ಆದರೆ ತಿನ್ನುವುದಕ್ಕೆ ಏನಾದರೂ ಬೇಕೆಂದು ಸನ್ನೆಮಾಡಿದಾಗ, ದೋಣಿಯನ್ನು ನಿಲ್ಲಿಸಬೇಕೆಂದೂ ಸ್ವಲ್ಪ ಮಾಂಸವನ್ನು ತಂದುಕೊಡುವುದಾಗಿಯೂ ಅವರು ಸನ್ನೆಮಾಡಿ ತಿಳಿಸಿದರು.

ಕೂಡಲೆ ನಾನು ದೋಣಿಯ ಹಾಯಿಯ ಮೇಲ್ಭಾಗವನ್ನು ತಗ್ಗಿಸಿ ದೋಣಿಯನ್ನು ನಿಲ್ಲಿಸಿದೆ. ಅವರಲ್ಲಿ ಇಬ್ಬರು ಓಡಿಹೋಗಿ, ಅರ್ಧಗಂಟೆಯೊಳಗಾಗಿ ಹಿಂದಿರುಗಿ ಒಣಮಾಂಸದ ಎರಡು ತುಂಡುಗಳನ್ನೂ ಸ್ವಲ್ಪ ಧಾನ್ಯವನ್ನೂ ತಂದರು. ಮಾಂಸ ಯಾವ ಪ್ರಾಣಿಯದೋ ಧಾನ್ಯ ಯಾವ ಜಾತಿಯದೋ ಒಂದೂ ನಮಗೆ ಗೊತ್ತಾಗಲಿಲ್ಲ. ಹೇಗಿದ್ದರೂ ಅವುಗಳನ್ನು ಸ್ವೀಕರಿಸಲು ನಾವು ಸಿದ್ಧರಾಗಿದ್ದೆವು. ಆದರೆ ಅದನ್ನು ಹೇಗೆ ಪಡೆಯಬೇಕೆಂಬುದೇ ಪ್ರಶ್ನೆಯಾಗಿತ್ತು. ಅವರ ಬಳಿಗೆ ಹೋಗುವ ಸಾಹಸಮಾಡಲು ನನಗೆ ಇಷ್ಟವಿರಲಿಲ್ಲ. ನಮ್ಮನ್ನು ಕಂಡರೂ ಅವರಿಗೆ  ಹೆದರಿಕೆಯಿತ್ತು. ಕೊನೆಗೆ ಅವರೇ ಒಂದು ಉಪಾಯವನ್ನು ಕಂಡುಕೊಂಡರು. ಅವರು ತಂದ ಆಹಾರವನ್ನು ಕರೆಯ ಈ ಕಡೆಯ ಅಂಚಿನಲ್ಲಿ ತಂದಿಟ್ಟು ದೂರ ಹೋಗಿ ನಿಂತರು ; ನಾವು ಹೋಗಿ ಅದನ್ನು ತೆಗೆದುಕೊಂಡು ದೋಣಿಗೆ ಬಂದಮೇಲೆ ಅವರು ಮತ್ತೆ ಹತ್ತಿರ ಬಂದು ಕರೆಯ ಮೇಲೆ ನಿಂತರು. ನಾವು ನಮ್ಮ ಕೃತಜ್ಞತೆಯನ್ನು ಅವರಿಗೆ ತಿಳಿಸುವ ಸನ್ನೆಗಳನ್ನು ಮಾಡಿದೆವು; ಇನ್ನಾವ ರೀತಿಯಲ್ಲೂ ಅವರ ಉಪಕಾರವನ್ನು ತೀರಿಸಲು ಸಾಧ್ಯವಿರಲಿಲ್ಲ. ಆದರೆ ಅಷ್ಟರಲ್ಲಿಯೇ ಅವರ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವ ಸಂದರ್ಭ ಒದಗಿತು. ನಾವು ಕರೆಯ ಬಳಿಯಲ್ಲಿಯೇ ಇನ್ನೂ ತಂಗಿದ್ದಾಗ, ದೂರದ ಪರ್ವತ ಪ್ರದೇಶದಿಂದ ಕಡಲ ಕಡೆಗೆ ಎರಡು ಭಾರಿ ಪ್ರಾಣಿಗಳು ಬಹಳ

ಹೋದ. ಹೋಗಿ ಒದ್ದಾಡುತ್ತಿದ್ದ ಪ್ರಾಣಿಯ ಕಿವಿಗೆ ಬಂದೂಕು ಹಿಡಿದು ಗುಂಡು ಹಾರಿಸಿ ಅದನ್ನು ಪೂರ್ತಿ ಸಾಯಿಸಿಬಿಟ್ಟ. ಇದೇನೋ ಒಳ್ಳೆಯ ಬೇಟೆಯೇ ಆಯಿತು. ಆದರೆ ಅದರಿಂದ ನಮಗೆ ಆಹಾರ ಮಾತ್ರ ದೊರಕಲಿಲ್ಲ. ಮೂರು ಸಲ ಹೊಡೆಯುವಷ್ಟು ಮದ್ದು ಗುಂಡು ನಷ್ಟವಾದುದಕ್ಕೆ ನನಗೆ ವ್ಯಥೆಯಾಯಿತು. ಆದರೆ ಸಿಂಹದ ಚರ್ಮ ನಮಗೆ ಒಂದಲ್ಲ ಒಂದು ರೀತಿ ಸ್ವಲ್ಪ ಪ್ರಯೋಜನವಾಗುವುದೆಂದು ಭಾವಿಸಿದೆ. ಸಾಧ್ಯವಾದರೆ ಅದರ ಚರ್ಮವನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿ ನಾನೂ ಗ್ಸೂರಿಯೂ ಅದರ ಚರ್ಮವನ್ನು ಸುಲಿಯತೊಡಗಿದೆವು. ಆ ದಿನವೆಲ್ಲಾ ಅದೇ ಕೆಲಸ ಹಿಡಿಯಿತು. ಕಡೆಗೆ ಸಿಂಹದ ತೊಗಲನ್ನು ತೆಗೆದು, ದೋಣಿಯ ಕೋಣೆಯ ಮೇಲೆ ಅದನ್ನು ಬಿಸಿಲಿನಲ್ಲಿ ಆರಹಾಕಿದೆನು. ಎರಡು ದಿನಗಳಲ್ಲಿ ಅದು ಚೆನ್ನಾಗಿ ಆರಿ, ಆಮೇಲೆ ನನಗೆ ಮಲಗುವುದಕ್ಕೆ ಒಳ್ಳೆಯ ಹಾಸಾಯಿತು.

ಮುಂದೆ ಹತ್ತು ಹನ್ನೆರಡು ದಿನ ಒಂದೇ ಸಮನಾಗಿ ತೆಂಕಣ ಕಡೆಗೆ ಸಾಗಿಹೋದೆವು. ನಮ್ಮ ಆಹಾರಸಾಮಗ್ರಿ ದಿನದಿನಕ್ಕೆ ಕಡಮೆಯಾಗುತ್ತಾ ಬಂದುದರಿಂದ ನಾವು ಅದನ್ನು ಬಹಳ ಮಿತವಾಗಿ ಬಳಸಬೇಕಾಗಿತ್ತು. ಸೀನೀರು ಬೇಕಾದಾಗ ಮಾತ್ರ ತಂಗಿ ಕರೆಯ ಮೇಲಕ್ಕೆ ಹೋಗುತ್ತಿದ್ದೆವು. ಗಾಂಬಿಯ (Gambia) ಅಥವ ಸಿನಿಗಾಲ್ (Senegal) ನದಿಯ ಹತ್ತಿರಕ್ಕೆ ಹೋದರೆ ವರ್ಡ ದ್ವೀಪಗಳ ಸಮಸಮಕ್ಕೆ ಹೋದಂತೆ ಆಗುತ್ತಿತ್ತು. ಅಲ್ಲಿ ಯಾರಾದರೂ ಯೂರೋಪಿನ ಕಡೆಯ ಹಡಗು ಗೋಚರವಾಗಬಹುದೆಂದು ನನ್ನ ಬಯಕೆ. ಯೂರೋಪಿನಿಂದ ಗಿನಿ ತೀರವನ್ನಾಗಲಿ ಬ್ರಜಿಲ್ ದೇಶವನ್ನಾಗಲಿ ಈಸ್ಟ್ ಇಂಡಿಯಾ ದ್ವೀಪಗಳನ್ನಾಗಲೀ ಕುರಿತು ಹೊರಟ ಹಡಗುಗಳು ಈ ಭೂಶಿರದ ಮಾರ್ಗವಾಗಿಯೋ ಆ ದ್ವೀಪಗಳ ಮಾರ್ಗವಾಗಿಯೋ ಬಂದೇ ಬರಬೇಕೆಂದು ನನಗೆ ಗೊತ್ತಿತ್ತು. ನನ್ನ ನಿರೀಕ್ಷೆಯಂತೆ ಯಾವ ಹಡಗೂ ಕಾಣಬಾರದೆ ಹೋದರೆ ಏನು ಮಾಡಬೇಕೊ ನನಗೆ ತೋರದಾಗಿತ್ತು. ಹೇಗಾದರೂ ಮಾಡಿ ದ್ವೀಪಗಳನ್ನು ಹುಡುಕಿಕೊಂಡು ಹೋಗಬೇಕಾಗಿತ್ತು, ಇಲ್ಲವೆ ನೀಗ್ರೋಗಳ ಕೈಗೆ ಸಿಕ್ಕಿ ಮಡಿಯಬೇಕಾಗಿತ್ತು. ಇವೆರಡು ಬಿಟ್ಟು ಗತ್ಯಂತರವಿರಲಿಲ್ಲ.

ಮೊದಲೇ ಹೇಳಿದಂತೆ, ನನ್ನ ನಿಶ್ಚಯದಂತೆ ಹತ್ತುದಿನ ಪ್ರಯಾಣ ಮಾಡಿದಮೇಲೆ ತೀರಪ್ರದೇಶದಲ್ಲಿ ಜನವಸತಿ ಇದ್ದಂತೆ ಕಂಡುಬಂದಿತು. ನಾವು ದೋಣಿಯ ಮೇಲೆ ಹೋಗುತ್ತಿದ್ದಾಗ ಎರಡು ಮೂರು ಕಡೆಗಳಲ್ಲಿ ಜನ ನಿಂತು ನಮ್ಮ ಕಡೆಯೆ ನೋಡುತ್ತಿದ್ದುದು ಕಂಡುಬಂದಿತು. ಅವರು ಕಗ್ಗಪ್ಪಾಗಿದ್ದು,

ಆಮೇಲೆ ಒಂದು ಜಾಡಿಯನ್ನು ತಲೆಕೆಳಗಾಗಿ ಹಿಡಿದು ಅದು ಬರಿದೆಂಬ ಅರ್ಥವನ್ನು ಸೂಚಿಸಿ ನೀರು ಬೇಕೆಂದು ಸನ್ನೆ ಮಾಡಿದ ಕೂಡಲೆ ಅವರು ಇಬ್ಬರು ಹೆಂಗಸರನ್ನು ಕಳಿಸಿ ಒಂದು ದೊಡ್ಡ ಗುಡಾಣದ ತುಂಬ ನೀರನ್ನು ತರಿಸಿ ಇಟ್ಟರು. ನಾನು ಗ್ಸೂರಿಯನ್ನು ಕರೆಗೆ ಕಳಿಸಿ ಮೂರು ಜಾಡಿಗಳನ್ನೂ ನೀರಿನಿಂದ ತುಂಬಿಸಿ ತರಿಸಿದೆ.

ಈಗ ನನ್ನಲ್ಲಿ ಕೆಲವು ತಿನ್ನಬಹುದಾದ ಬೇರುಗಳೂ ಧಾನ್ಯವೂ ಮತ್ತು ನೀರೂ ಶೇಖರವಾದುವು. ಸ್ನೇಹದಿಂದ ನಡೆದುಕೊಂಡ ಈ ನೀಗ್ರೋ ಜನರನ್ನು ಬಿಟ್ಟು, ಸುಮಾರು ಹನ್ನೊಂದು ದಿನಗಳ ಕಾಲ ಮುಂದಕ್ಕೆ ಪ್ರಯಾಣಮಾಡಿದೆ. ನಡುವೆ ಎಲ್ಲೂ ಕರೆಯ ಕಡೆ ಹೋಗಲಿಲ್ಲ. ಕಡೆಗೆ ನೆಲವು ಸಮುದ್ರದೊಳಕ್ಕೆ ಬಹುದೂರ, ಸುಮಾರು ನಾಲ್ಕೈದು ಹರಿದಾರಿಗಳಷ್ಟು ಚಾಚಿಕೊಂಡಿದ್ದುದು ಕಂಡುಬಂದಿತು. ಕಡಲು ಶಾಂತವಾಗಿದ್ದುದರಿಂದ ಈ ನೆಲದ ಚಾಚಿನ ಅಗ್ರಭಾಗವನ್ನು ಮುಟ್ಟುವುದಕ್ಕಾಗಿ ನಾನು ಕರೆಯಿಂದ ದೂರದ ನೆಲೆಹಿಡಿದು ಹೋದೆ. ಕಡೆಗೆ ನೆಲದಿಂದ ಎರಡು ಹರಿದಾರಿ ದೂರದಲ್ಲಿ ನೆಲದ ಚಾಚುತುದಿಯನ್ನು ಬಳಸಲು ಇನ್ನೊಂದು ಕಡೆಯ ಕಡಲಕರೆ ದೂರದಲ್ಲಿ ಕಾಣಿಸಿತು. ಇದೇ ವೆರ್ಡ್ ಭೂಶಿರವಿರಬೇಕೆಂದು ನಾನು ನಿಶ್ಚಯಿಸಿದೆ. ಮತ್ತು ಆ ದ್ವೀಪಗಳೇ ಈ ಭೂಶಿರದಿಂದ ಹೆಸರು ಪಡೆದ ವೆರ್ಡ್ ದ್ವೀಪಗಳೆಂದೂ ನಿರ್ಧರಿಸಿದೆ. ಆದರೆ ಆ ದ್ವೀಪಗಳು ಬಹುದೂರದಲ್ಲಿದ್ದುದರಿಂದ ನಾನು ಏನು ಮಾಡಬೇಕೋ ತಿಳಿಯದೆ ಹೋದೆ. ಏಕೆಂದರೆ ಇದ್ದಕ್ಕಿದ್ದ ಹಾಗೆ ಒಂದು ಗಾಳಿಯ ನುಗ್ಗು ನುಗ್ಗಿಬಿಟ್ಟರೆ ಇತ್ತ ಭೂಶಿರವನ್ನೂ ಮುಟ್ಟುವಂತಿರಲಿಲ್ಲ, ಅತ್ತ ದ್ವೀಪಗಳನ್ನೂ ತಲುಪುವಂತಿರಲಿಲ್ಲ.

ಈ ಇಕ್ಕಟ್ಟಿನಲ್ಲಿ ಸಿಲುಕಿ, ಚಿಂತೆಯಲ್ಲಿ ಮುಳುಗಿ, ಚುಕ್ಕಾಣಿಯ ಬಳಿ ಗ್ಸೂರಿಯನ್ನು ಬಿಟ್ಟು ನಾನು ಕೋಣೆಗೆ ಹೋಗಿ ಕುಳಿತೆ. ಆಗ ತಟ್ಟನೆ ಹುಡುಗ, "ಒಡೆಯಾ, ಒಡೆಯಾ ; ಹಾಯಿಯ ಹಡಗು" ಎಂದು ಕೂಗಿ ಕೊಂಡದ್ದು ಕೇಳಿಬಂದಿತು. ನಮ್ಮನ್ನು ಬೆಂಬತ್ತಿಬರಲು ತನ್ನ ದಣಿ ಹಡಗು ಕಳಿಸಿದ್ದಿರಬೇಕೆಂದು ಹುಡುಗ ಭಯಭ್ರಾಂತನಾಗಿದ್ದ ; ಆದರೆ, ಅವರಿಗೆ ಸಿಕ್ಕದಷ್ಟು ದೂರ ಸಾಗಿಬಂದಿದ್ದೆವೆಂದು ನನಗೆ ಗೊತ್ತಿತ್ತು. ನಾನು ಕೋಣೆಯಿಂದ ಹೊರಕ್ಕೆ ಹಾರಿಬಂದೆ; ಆ ಹಡಗನ್ನು ನೋಡಿದೆ ; ಅದು ಪೋರ್ಚುಗೀಸರ ಹಡಗಾಗಿತ್ತು; ನೀಗ್ರೋಗಳನ್ನು ತರುವುದಕ್ಕಾಗಿ ತೀರಪ್ರದೇಶದ ಕಡೆಗೆ ಸಾಗುತ್ತಿದೆಯೆಂಬುದನ್ನು ಗಮನಿಸಿದಾಗ, ಅದು ಬೇರೆಯ ಮಾರ್ಗವನ್ನು ಹಿಡಿದಿತ್ತೆಂಬುದು

ರಭಸದಿಂದ ಒಂದನ್ನೊಂದು ಅಟ್ಟಿಸಿಕೊಂಡು ಓಡಿಬಂದುವು. ಅವನ್ನು ಕಂಡು ಜನವೆಲ್ಲಾ, ಅದರಲ್ಲೂ ಹೆಂಗಸರು, ಅತ್ಯಂತ ಭೀತಿಗೊಂಡರು. ಈಟಿ ಹಿಡಿದುಕೊಂಡಿದ್ದವನು ಹೊರತಾಗಿ ಉಳಿದವರೆಲ್ಲಾ ಓಡಿಹೋದರು. ಆದರೆ ಆ ಪ್ರಾಣಿಗಳು ಆ ನೀಗ್ರೋ ಜನರ ಮೇಲೆ ಬೀಳದೆ ಕ್ರೀಡೆಗೋಸ್ಕರವೋ ಎಂಬಂತೆ ನೀರಿನೊಳಕ್ಕೆ ನುಗ್ಗಿ ಬಂದು ಈಜಾಡತೊಡಗಿದುವು. ಕಡೆಗೆ ಅವುಗಳಲ್ಲಿ ಒಂದು ನಮ್ಮ ದೋಣಿಯ ಹತ್ತಿರ ಹತ್ತಿರಕ್ಕೆ ಬಂದಿತು. ನಾನು ಸಿದ್ಧವಾಗಿಯೇ ಇದ್ದೆ. ಬೇಗನೆ ಬಂದೂಕನ್ನು ಬಾರು ಮಾಡಿ ಅದರ ತಲೆಗೆ ಗುರಿಯಿಟ್ಟು ಹೊಡೆದೆ. ಅದು ಪ್ರಾಣಸಂಕಟದಿಂದ ಒದ್ದಾಡುವಂತೆ ಅನೇಕ ಸಲ ನೀರಿನಲ್ಲಿ ಮುಳುಗಿ ಎದ್ದು, ಬಳಿಕ ಕರೆಯ ಕಡೆಗೆ ಓಡಿ ಹೋಯಿತು. ಆದರೆ ಕಡಲು ಮುಟ್ಟುವ ಮುನ್ನವೇ ನೆಲದ ಮೇಲೆ ಕೆಡೆದುಬಿದ್ದಿತು.

ಪ್ರಾಣಿಯನ್ನು ಕೊಲ್ಲಲು ನಾನು ಗುಂಡು ಹಾರಿಸಿದಾಗ ಅದರ ಸದ್ದು ಕೇಳಿ ಅಲ್ಲಿದ್ದ ಜನರೆಲ್ಲಾ ಭಯದಿಂದಲೂ ಬೆರಗಿನಿಂದಲೂ ತತ್ತರಿಸಿಹೋಗಿ ಸತ್ತಂತೆ ಕೆಳಕ್ಕೆ ಬಿದ್ದರು. ಆದರೆ ಆ ಕ್ರೂರಜಂತು ಸತ್ತುಬಿದ್ದದ್ದನ್ನು ನೋಡಿ, ನಾನು ಹತ್ತಿರಕ್ಕೆ ಬರುವಂತೆ ಅವರಿಗೆ ಸನ್ನೆಮಾಡಿದ ಮೇಲೆ ಅವರು ಸ್ವಲ್ಪ ಧೈರ್ಯಗೊಂಡು ಕರೆಯ ಹತ್ತಿರಕ್ಕೆ ಬಂದರು. ಬಂದು, ಸತ್ತ ಪ್ರಾಣಿಗಾಗಿ ಹುಡುಕಾಡತೊಡಗಿದರು. ನೀರಿನಲ್ಲಿ ಕದಡಿ ಬರುತ್ತಿದ್ದ ನೆತ್ತರಿನಿಂದ ಪ್ರಾಣಿ ಎಲ್ಲಿದೆಯೆಂಬುದು ನನಗೆ ಗೊತ್ತಾಗಲು ಒಂದು ಹಗ್ಗವನ್ನು ಬೀಸಿ ಅದನ್ನು ಬಂಧಿಸಿದೆ. ಆ ಪ್ರಾಣಿಯನ್ನು ಎಳೆದುಕೊಂಡು ಹೋಗುವಂತೆ ನೀಗ್ರೋಗಳಿಗೆ ಸನ್ನೆ ಮಾಡಿದೆ. ಅವರು ಅದನ್ನು ಕರೆಗೆ ಎಳೆದುಕೊಂಡು ಹೋದರು. ಅದು ಒಂದು ವಿಚಿತ್ರಜಾತಿಯ ಚಿರತೆಯಾಗಿತ್ತು.

ಅಷ್ಟುಹೊತ್ತಿಗೆ ಇನ್ನೊಂದು ಪ್ರಾಣಿ ಗುಂಡಿನ ಸದ್ದಿಗೆ ಭೀತಿಪಟ್ಟು ಪರ್ವತದ ಕಡೆಗೆ ಓಡಿಹೋಗಿ ಅಡಗಿಕೊಂಡಿತ್ತು. ಸತ್ತ ಪ್ರಾಣಿಯನ್ನು ತಿನ್ನಬೇಕೆಂಬ ಬಯಕೆ ಆ ನೀಗ್ರೋಜನಕ್ಕೆ ಇದೆಯೆಂದು ನನಗೆ ಗೊತ್ತಾದ ಕೂಡಲೆ ಅದನ್ನು ಅವರು ಉಪಯೋಗಿಸಿಕೊಳ್ಳಬಹುದೆಂದು ಸನ್ನೆಮಾಡಿ ತಿಳಿಸಿದೆ. ಕೂಡಲೆ ಅವರು ಆ ಚಿರತೆಯ ಒಡಲನ್ನು ಚಾಕುವಿನಂತಿದ್ದ ಮರದ ತುಂಡಿನಿಂದ ಬಗಿಯತೊಡಗಿದರು. ಅವರು ನನಗೆ ಸ್ವಲ್ಪ ಮಾಂಸವನ್ನು ಕೊಡಬಂದರು. ನನಗೆ ಮಾಂಸ ಬೇಡವೆಂದೂ ಚಿರತೆಯ ಚರ್ಮವನ್ನು ಕೊಟ್ಟರೆ ಸಾಕೆಂದೂ ಸನ್ನೆ ಮಾಡಿದೆ. ಅವರು ಅಂತೆಯೇ ಆ ಚರ್ಮವನ್ನು ನನಗೆ ಕೊಟ್ಟುದಲ್ಲದೆ ಇನ್ನೂ ಏನೇನೋ ಆಹಾರ ಸಾಮಗ್ರಿಗಳನ್ನು ತಂದುಕೊಟ್ಟರು. ಅದು ಏನೆಂಬುದು ನನಗೆ ಗೊತ್ತಾಗದಿದ್ದ್ರೂ ಅದನ್ನು ಸ್ವೀಕರಿಸಿದೆ.

ಸುರಕ್ಷಿತವಾಗಿ ನನಗೆ ಹಿಂದಿರುಗಿಸಬೇಕೆಂದು ಹಡಗಿನವರಿಗೆ ಹೇಳಿದನು. ತಾನೇ ನನ್ನ ಕಷ್ಟಸ್ಥಿತಿಯಲ್ಲಿ ಇದ್ದಿದ್ದರೆ ಹೇಗೋ ಹಾಗೆ ಭಾವಿಸಿ, ನನ್ನಲ್ಲಿ ಇದ್ದುದನ್ನೆಲ್ಲ ಕಸಿದುಕೊಂಡು ನನ್ನನ್ನು ಬ್ರೆಜಿಲ್ ದೇಶದಲ್ಲಿ ಬಿಟ್ಟರೆ ತಾನೇ ಉಳಿಸಿದ ಜೀವವನ್ನು ಮತ್ತೆ ತಾನೇ ತೆಗೆದುಬಿಟ್ಟಂತಾಗುವುದೆಂದು ಆತನು ನನಗೆ ವಿವರಿಸಿದನು. ಕಡೆಗೂ ಅವನು ತಾನು ನುಡಿದಂತೆ ನಡೆದುಕೊಂಡನು. ನನ್ನ ಸರಕೇನನ್ನೂ ಮುಟ್ಟಕೂಡದೆಂದು ತನ್ನ ಹಡಗಿನ ನಾವಿಕರಿಗೆ ಕಟ್ಟಪ್ಪಣೆ ಮಾಡಿ, ನನ್ನ ಸರಕೆಲ್ಲವನ್ನೂ ತನ್ನ ವಶಕ್ಕೆ ತೆಗೆದುಕೊಂಡು, ಅವುಗಳ ವಿವರವಾದ ಪಟ್ಟಿಯೊಂದನ್ನು ಮಾಡಿ ನನಗೆ ಕೊಟ್ಟನು.

ನನ್ನ ದೋಣಿ ಬಹಳ ಚೆನ್ನಾಗಿತ್ತು. ತನ್ನ ಹಡಗಿನ ಉಪಯೋಗಕ್ಕಾಗಿ ಅದನ್ನು ತಾನು ಕೊಂಡುಕೊಳ್ಳುವುದಾಗಿ ನನಗೆ ಹೇಳಿ, ಅದರ ಬೆಲೆ ಕೇಳಿದನು. ಎಲ್ಲ ಭಾಗದಲ್ಲೂ ಬಹಳ ಔದಾರ್ಯವನ್ನು ಮೆರೆದಿದ್ದ ಆತನಿಂದ ದೋಣಿಗೆ ಬೆಲೆ ತೆಗೆದುಕೊಳ್ಳಲು ನನ್ನ ಮನಸ್ಸು ಒಪ್ಪದೆಂದು ಹೇಳಿ, ಆತನಿಗೆ ತೋರಿದಂತೆ ಮಾಡಿಕೊಳ್ಳಲೆಂದು ಸುಮ್ಮನಾದೆನು. ಆತನು ದೋಣಿಯನ್ನು ಹಾಗೆಯೇ ಪಡೆಯಲೊಪ್ಪದೆ, ಬ್ರಜಿಲ್ ದೇಶವನ್ನು ತಲಪಿದಾಗ ನನಗೆ ಎಂಬತ್ತು ಹೊನ್ನುಗಳನ್ನು ಕೊಡುವುದಾಗಿ ಹುಂಡಿ ಬರೆದುಕೊಟ್ಟನು ; ಅಲ್ಲಿಗೆ ಹೋದಾಗ ಇನ್ನೂ ಯಾರಾದರೂ ಹೆಚ್ಚಿನ ಬೆಲೆ ಕೊಡಬಂದರೆ, ಆ ಹೆಚ್ಚಿನ ಹಣವನ್ನೂ ತಾನೇ ಕೊಡುವುದಾಗಿ ಮಾತುಕೊಟ್ಟನು. ಮತ್ತು ನನ್ನ ಜೊತೆಯಲ್ಲಿದ್ದ ಹುಡುಗ ಗ್ಸೂರಿಗೆ ಅರವತ್ತು ಹೊನ್ನು ಕೊಡಬಂದನು. ನನ್ನ ಸ್ವಾತಂತ್ರ್ಯ ಸಂಪಾದನೆಯಲ್ಲಿ ನೆರವಾಗಿದ್ದ ಹುಡುಗನ ಸ್ವಾತಂತ್ರ್ಯವನ್ನು ಆ ರೀತಿ ಮಾರಲು ನನ್ನ ಮನಸ್ಸು ಒಡಂಬಡಲಿಲ್ಲ. ನೌಕಾನಾಯಕನಿಗೆ ನನ್ನ ಮನಸ್ಸನ್ನು ತಿಳಿಯಪಡಿಸಲು, ಆತನು ನನ್ನ ಅಭಿಪ್ರಾಯವನ್ನು ಅನುಮೋದಿಸಿ, ಬೇರೊಂದು ಮಾರ್ಗವನ್ನು ಸೂಚಿಸಿದನು; ಹುಡುಗನು ಹತ್ತುವರ್ಷದೊಳಗೆ ಕ್ರೈಸ್ತನಾದರೆ, ಅವನನ್ನು ಸ್ವತಂತ್ರನನ್ನಾಗಿ ಮಾಡುವುದಾಗಿ ಹೇಳಿದನು. ಈ ಸೂಚನೆಯ ಮೇರೆಗೆ, ಗ್ಸೂರಿ ಆತನ ಸಂಗಡ ಹೋಗಲೊಪ್ಪಿದುದರಿಂದ, ಅವನನ್ನು ನೌಕಾ ನಾಯಕನ ವಶಕ್ಕೊಪ್ಪಿಸಿದೆ.

ಬ್ರಜಿಲ್ ದೇಶದವರೆಗೂ ನಮ್ಮ ಪ್ರಯಾಣ ಬಹಳ ಚೆನ್ನಾಗಿಯೇ ಇತ್ತು. ಇಪ್ಪತ್ತೆರಡು ದಿನಗಳ ತರುವಾಯ ನಾವು ಆಲ್ ಸೇಯ್‌ಂಟ್ಸ್ ಬೇ ಎಂಬ ಕೊಲ್ಲಿಯನ್ನು ಸೇರಿದೆವು. ಜೀವನದಲ್ಲಿ ಅತ್ಯಂತ ದುಃಖಪೂರ್ಣವಾದ ಸ್ಥಿತಿಯಿಂದ ನಾನು ಮತ್ತೊಮ್ಮೆ ಪಾರಾಗಿದ್ದೆ. ಮುಂದೆ ಏನು ಮಾಡಬೇಕೆಂಬುದನ್ನು ಕುರಿತು ನಾನು ಪರ್ಯಾಲೋಚಿಸಬೇಕಾಗಿತ್ತು.

ಖಚಿತವಾಯಿತು; ಈ ತೀರದ ಬಳಿಗೆ ಬರುವ ಉದ್ದೇಶ ಅದಕ್ಕೆ ಇದ್ದಂತೆ ಕಾಣಲಿಲ್ಲ. ಸಾಧ್ಯವಾದರೆ ಅವರನ್ನು ಸಂಧಿಸಿ ಅವರೊಡನೆ ಮಾತನಾಡಬೇಕೆಂಬ ನಿಶ್ಚಯಮಾಡಿ ಕಡಲೊಳಕ್ಕೆ ದೋಣಿಯಲ್ಲಿ ಹೊರಟೆ.

ಇದ್ದ ಹಾಯಿಯನ್ನೆಲ್ಲ ಹರಡಿಕೊಂಡು ಎಷ್ಟೇ ಪ್ರಯತ್ನಪಟ್ಟರೂ ಹಡಗಿನ ಬಳಿ ಹೋಗಲಾಗುವುದಿಲ್ಲವೆಂದೂ ನಾನು ಅವರಿಗೆ ಏನಾದರೂ ಸಂಜ್ಞೆಮಾಡಿ ತಿಳಿಸುವುದಕ್ಕೆ ಮೊದಲೇ ಅವರು ಹೋಗಿಬಿಡುವರೆಂದೂ ನನಗೆ ಕಂಡುಬಂದಿತು. ಆದರೂ, ಹಾಯಿಯನ್ನೆಲ್ಲ ಏರಿಸಿ ನಿರಾಶೆಯಲ್ಲಿದ್ದಾಗ, ದುರ್ಬೀನನ್ನು ಹಿಡಿದು ನೋಡುತ್ತಿದ್ದ ಅವರು ನನ್ನನ್ನು ಕಂಡರು (ಹಾಗೆಂದು ಅವರೇ ಆಮೇಲೆ ನನಗೆ ಹೇಳಿದರು) ; ಇದು ಹಾಳಾಗಿಹೋದ ಯೂರೋಪಿನ ಹಡಗಿಗೆ ಸೇರಿದ ದೋಣಿಯೆಂದು ಊಹಿಸಿ, ನಾನು ಬಳಿಗೆ ಹೋಗುವುದಕ್ಕಾಗಿ ತಮ್ಮ ಹಡಗಿನ ಹಾಯಿಯನ್ನು ತಗ್ಗಿಸಿದರು. ಇದರಿಂದ ನನಗೆ ಪ್ರೋತ್ಸಾಹ ದೊರೆಯಿತು. ದೋಣಿಯಲ್ಲಿ ನನ್ನ (ಹಿಂದಿನ) ಆಶ್ರಯದಾತನ ಬಾವುಟವಿತ್ತು ; ದುಃಸ್ಥಿತಿಯ ಸಂಕೇತವಾಗಿ ಅದನ್ನು ಎತ್ತಿ ಆಡಿಸಿ, ಗುಂಡು ಹಾರಿಸಿದೆ. ಬಾವುಟವೂ ಗುಂಡು ಹಾರಿಸಿದ ಹೊಗೆಯೂ ಅವರಿಗೆ ಕಂಡುವೆಂದು ಅವರು ಆಮೇಲೆ ತಿಳಿಸಿದರು. ಈ ಸಂಕೇತಗಳನ್ನು ಕಂಡು, ಬಹಳ ದಯಾಬುದ್ಧಿಯುಳ್ಳವರಾಗಿ ಅವರು ಹಡಗನ್ನು ಹತ್ತಿರಕ್ಕೆ ತಂದು ನನಗಾಗಿ ಕಾದು ನಿಂತರು ; ಮೂರು ಗಂಟೆಗಳ ಕಾಲದಲ್ಲಿ ನಾನು ಅವರನ್ನು ಸೇರಿದೆ.

ಅವರು ಪೋರ್ಚುಗೀಸಿನಲ್ಲಿ, ಸ್ಪ್ಯಾನಿಷಿನಲ್ಲಿ, ಫ್ರೆಂಚಿನಲ್ಲಿ ನಾನು ಯಾರೆಂದು ಕೇಳಿದರು. ನನಗೆ ಯಾವ ಭಾಷೆಯೂ ಅರ್ಥವಾಗಲಿಲ್ಲ. ಕಡೆಗೆ, ಹಡಗಿನಲ್ಲಿದ್ದ ಒಬ್ಬ ಸ್ಕಾಟರವನು ನನ್ನನ್ನು ಮಾತನಾಡಿಸಿದನು. ನಾನು ಇಂಗ್ಲಿಷರವನೆಂದೂ, ಸ್ಯಾಲಿಯಲ್ಲಿ ಮೂರರ ಗುಲಾಮಗಿರಿಯಿಂದ ತಪ್ಪಿಸಿಕೊಂಡು ಬಂದಿದ್ದೇನೆಂದೂ ಆತನಿಗೆ ಉತ್ತರಕೊಟ್ಟೆ. ಬಳಿಕ ಅವನು ಹಡಗು ಹತ್ತುವಂತೆ ನನಗೆ ಹೇಳಿ, ಬಹು ಮರುಕದಿಂದ ನನ್ನನ್ನು ಕರೆದುಕೊಂಡು, ನನ್ನ ಸರಕನ್ನೆಲ್ಲ ತೆಗೆದುಹಾಕಿಕೊಂಡರು.

ಈ ರೀತಿ ನಾನು ಇದ್ದ ದುಃಸ್ಥಿತಿಯಿಂದ ಪಾರಾದದ್ದಕಾಕ್ಕಾ ನನಗೆ ಹೇಳಲಾಗದಷ್ಟು ಸಂತೋಷವಾಯಿತು. ನನ್ನನ್ನು ಪಾರುಮಾಡಿದ ಉಪಕಾರಕ್ಕೆ ಪ್ರತಿಯಾಗಿ ನನ್ನಲ್ಲಿ ಇದ್ದುದೆಲ್ಲವನ್ನೂ ನಾನು ಕೂಡಲೆ ಹಡಗಿನ ನಾಯಕನಿಗೆ ಒಪ್ಪಿಸಹೋದೆ. ಆದರೆ ಆತನದು ಬಹಳ ಉದಾರಬುದ್ಧಿ ; ಆತನು ನನ್ನಿಂದ ಏನನ್ನೂ ತೆಗೆದುಕೊಳ್ಳಲೊಪ್ಪದೆ, ಬ್ರಜಿಲ್ ದೇಶಕ್ಕೆ ಹೋದಾಗ ಎಲ್ಲವನ್ನೂ

ಕಡಮೆಯಾಗಿಯೇ ಇದ್ದಿತು. ಎರಡು ವರ್ಷಗಳವರೆಗೂ ನಾವಿಬ್ಬರೂ ಆಹಾರಕ್ಕೆ ಮಾತ್ರ ಬೆಳೆಯಿಡುತ್ತಿದ್ದೆವು. ಆದರೆ, ಸ್ವಲ್ಪ ಕಾಲದೊಳಗಾಗಿ ನಾವು ಏಳಿಗೆ ಹೊಂದಿ, ಮೂರನೆಯ ವರ್ಷದಲ್ಲಿ ಸ್ವಲ್ಪ ಹೊಗೆಯಸೊಪ್ಪನ್ನು ಬೆಳೆದು, ಅದರ ಮಾರನೆಯ ವರ್ಷ ಕಬ್ಬನ್ನು ಬೆಳೆಯಬೇಕೆಂಬ ಉದ್ದೇಶದಿಂದ ಜಮೀನಿನ ಒಂದು ದೊಡ್ಡತಾಕನ್ನು ಸಿದ್ಧಗೊಳಿಸಿಕೊಂಡೆವು. ಆದರೆ ನಮ್ಮಿಬ್ಬರಿಗೂ ನೆರವಿಗೆ ಯಾರಾದರೂ ಬೇಕಾಗಿದ್ದಿತು ; ನನಗಂತೂ ಆ ನೆರವು ಅತ್ಯಾವಶ್ಯಕವಾಗಿದ್ದಿತ್ತು. ನನ್ನ ಹುಡುಗ ಗ್ಸೂರಿಯನ್ನು ಬಿಟ್ಟುಕೊಟ್ಟದ್ದು ತಪ್ಪಾಯಿತೆಂದು ಈಗ ತೋರಿತು.

ಆದರೆ, ಎಂದೂ ಸರಿಯಾದುದ್ದನ್ನು ಮಾಡದ ನಾನು ತಪ್ಪು ಮಾಡಿದ್ದರಲ್ಲಿ ಆಶ್ಚರ್ಯವೇನು? ನನ್ನ ಹೊಸ ಉದ್ಯಮದಲ್ಲಿ ಮುಂದುವರಿಯುವುದಲ್ಲದೆ ಗತ್ಯಂತರವೇ ಇರಲಿಲ್ಲ : ಯಾವುದಕ್ಕಾಗಿ ನನ್ನ ತಂದೆಯ ಮನೆಯನ್ನು ತೊರೆದು ಹೊರಟು ಬಂದಿದ್ದೆನೋ, ಯಾವುದಕ್ಕಾಗಿ ಅವರ ಬುದ್ಧಿವಾದವನ್ನೆಲ್ಲ ಮೀರಿದ್ದೆನೋ ಆ ಬಗೆಯ ಜೀವನಕ್ಕೆ, ನನಗೆ ಯಾವುದರಲ್ಲಿ ನಲಿವೋ ಆ ಬಗೆಯ ಜೀವನಕ್ಕೆ ಮತ್ತು ನನ್ನ ಸಹಜಪ್ರವೃತ್ತಿಗೆ ತೀರ ವಿರುದ್ಧವಾಗಿತ್ತು. ನಾನು ಈಗ ಕೈಕೊಂಡಿದ್ದ ಉದ್ಯೋಗ. ನನ್ನ ತಂದೆ ನನಗೆ ಹಿಂದೆ ಬೋಧಿಸಿದ್ದ ಮಧ್ಯಮ ದರ್ಜೆಯ ಜೀವನಕ್ಕೆ ಈಗ ನಾನು ಕಾಲಿಟ್ಟಿದ್ದೆ. ಈ ಬಗೆಯ ಜೀವನವನ್ನು ನಡೆಸಬೇಕೆಂದು ನಾನು ಅಂದೇ ಮನಸ್ಸು ಮಾಡಿದ್ದಿದ್ದರೆ ಹುಟ್ಟು ನಾಡಿನಲ್ಲಿಯೇ ಇದ್ದುಕೊಂಡು, ನಾನು ಇದುವರೆಗೆ ಪಟ್ಟಂಥ ಶ್ರಮಗಳನ್ನು ಪಡದೆ, ಐದು ಸಾವಿರ ಮೈಲಿಗಳಾಚೆ ಬಂದು ಕಾಡುಮೇಡಿನಲ್ಲಿ ಅಪರಿಚಿತರ ಮತ್ತು ಕಾಡುಜನರ ನಡುವೆ ನೆಲಸಬೇಕಾಗಿಲ್ಲದೆ, ಇದ್ದಕಡೆಯೇ ಇಂಗ್ಲೆಂಡಿನಲ್ಲಿ ಗೆಳೆಯರ ನಡುವೆ ಸುಖವಾಗಿರಬಹುದಾಗಿತ್ತು.

ಈ ಪ್ರಕಾರದಲ್ಲಿ, ನನ್ನ ಪರಿಸ್ಥಿತಿಯನ್ನು ನೆನೆದು ನಾನು ಅನೇಕ ವೇಳೆ ವ್ಯಸನಗೊಂಡೆ. ಈ ನೆರೆಯವನಲ್ಲದೆ ಮಾತುಕತೆಯಾಡಲು ಬೇರೆಯ ಸಂಗಡಿಗರಿರಲಿಲ್ಲ ; ಈಗಿನ ಕೈದುಡಿಮೆಯಲ್ಲದೆ ಮಾಡಲು ಬೇರೆಯ ಕೆಲಸವಿರಲಿಲ್ಲ. ನಿರ್ಜನ ದ್ವೀಪವೊಂದರಲ್ಲಿ ಒಬ್ಬನನ್ನೇ ಬಿಟ್ಟುಬಂದರೆ ಅವನ ಪಾಡು ಎಂತೋ ನನ್ನ ಪಾಡು ಅಂತೆ ಎಂದು ಹಲವು ಸಲ ನಾನು ಎಂದು ಕೊಂಡದ್ದುಂಟು. ಆದರೆ, ನನ್ನ ಈಗಿನ ಜೀವನಕ್ಕೂ ನಾನು ಪರಿಭಾವಿಸಿದ ನಿರ್ಜನ ದ್ವೀಪವಾಸಕ್ಕೂ ಹೋಲಿಸಿದರೆ, 'ಕೆಟ್ಟಿದ್ದರಲ್ಲಿ ಮಧ್ಯಸ್ಥ'ವೆಂಬುದು ಅನುಭವದಿಂದ ಮಾತ್ರ ಗೊತ್ತಾಗಲು ಸಾಧ್ಯ. ಮೊದಲಿನ ದುಃಸ್ಥಿತಿಗಿಂತ ಹೆಚ್ಚು ಕಠಿನವಾದ ದುಃಸ್ಥಿತಿ ಬಂದರೆ ಮೊದಲಿನದೇ ಇರಲೆಂದು ಬಯಸುತ್ತೇವೆ. ನನ್ನ

ನೌಕಾನಾಯಕನ ಉಪಕಾರವನ್ನು ನಾನು ಎಂದಿಗೂ ಮರೆಯಲಾರೆ. ನನ್ನನ್ನು ಸುರಕ್ಷಿತವಾಗಿ ಪಯಣ ಮಾಡಿಸಿದ್ದಕ್ಕಾಗಿ ಏನನ್ನೂ ಆತನು ನನ್ನಿಂದ ಪಡೆಯಲೊಲ್ಲದೆ ಹೋದನು. ನನ್ನ ದೋಣಿಯಲ್ಲಿದ್ದ ಚಿರತೆಯ ಮತ್ತು ಸಿಂಹದ ಚರ್ಮಗಳನ್ನು ಹಣಕೊಟ್ಟು ತೆಗೆದುಕೊಂಡನು. ಇಷ್ಟೇ ಅಲ್ಲದೆ, ಶೀಸೆಗಳ ಪೆಟ್ಟಿಗೆ, ಎರಡು ಬಂದೂಕುಗಳು, ಜೇನುಮೇಣದ ಒಂದು ಗಡ್ಡೆ (ಹೆಚ್ಚು ಭಾಗದ ಮೇಣವನ್ನು ಮೋಬತ್ತಿಮಾಡುವುದಕ್ಕಾಗಿ ನಾನು ಉಪಯೋಗಿಸಿಬಿಟ್ಟಿದ್ದೆ) – ಇವೇ ಮುಂತಾದ ನಾನು ಮಾರಲು ಇಷ್ಟಪಟ್ಟ ಅನೇಕ ವಸ್ತುಗಳನ್ನು ಆತನು ನನ್ನಿಂದ ಕೊಂಡುಕೊಂಡನು. ಒಟ್ಟಿನಲ್ಲಿ, ದೋಣಿಯಲ್ಲಿದ್ದ ನನ್ನ ಸರಕಿಗೆ ಇನ್ನೂರ ಇಪ್ಪತ್ತು ಹೊನ್ನುಗಳು ದೊರಕಿದವು. ಇಷ್ಟು ಬಂಡವಾಳವನ್ನಿಟ್ಟುಕೊಂಡು ಬ್ರಜಿಲ್ ದೇಶದ ತೀರಪ್ರಾಂತವನ್ನು ಪ್ರವೇಶಿಸಿದೆ.

### ಬ್ರಜಿಲ್ ದೇಶದಲ್ಲಿ ಬೇಸಾಯಗಾರ

ಬ್ರಜಿಲ್ ದೇಶಕ್ಕೆ ಹೋಗಿ ಇನ್ನೂ ಬಹಳ ಕಾಲವಾಗಿರಲಿಲ್ಲ. ಒಬ್ಬ ಪ್ರಾಮಾಣಿಕನಾದ ಒಳ್ಳೆಯ ಮನುಷ್ಯನ ಮನೆಯಲ್ಲಿ ನನಗೆ ಆಶ್ರಯ ದೊರೆಯಿತು. ಅವನು ಬೇಸಾಯದ ಭೂಮಿಯನ್ನೂ ಹೊಂದಿದ್ದನು. ನಾನು ಕೆಲವುಕಾಲ ಅವನ ಜೊತೆಯೇ ವಾಸಮಾಡಿಕೊಂಡಿದ್ದು ಅವರು ಬೇಸಾಯ ಮಾಡುವ ಪರಿಯನ್ನೂ ಸಕ್ಕರೆ ಮಾಡುವ ವಿಧಾನವನ್ನೂ ಪರಿಚಯಮಾಡಿಕೊಂಡೆ. ಅಲ್ಲಿನ ಬೇಸಾಯಗಾರರು ಹೇಗೆ ತಟ್ಟನೆ ಧನಿಕರಾಗಿ, ಸೊಗಸಾಗಿ ಜೀವನ ಮಾಡುತ್ತಿದ್ದರೆಂಬುದನ್ನು ಕಣ್ಣಾರೆ ನೋಡಿದಮೇಲೆ, ಅನುಮತಿಪತ್ರ ದೊರೆತರೆ ನಾನೂ ಕೂಡ ಏಕೆ ಅವರಂತೆ ಬೇಸಾಯಗಾರನಾಗಬಾರದು ಎನ್ನಿಸಿತು ; ಹಾಗೆಯೇ ನಿಶ್ಚಯಮಾಡಿದೆ. ಈ ಮಧ್ಯೆ, ನಾನು ಲಂಡನ್ನಿನಲ್ಲಿ ಹಿಂದೆ ಬಿಟ್ಟುಬಂದಿದ್ದ ಹಣವನ್ನು ತರಿಸಿಕೊಳ್ಳುವುದಕ್ಕೆ ಯಾವುದಾದರೂ ಮಾರ್ಗ ಹುಡುಕಲು ಯೋಚಿಸುತ್ತಿದ್ದೆ. ಈ ಬಗೆಯ ಉದ್ದೇಶವನ್ನಿಟ್ಟುಕೊಂಡು, ಮೊದಲು ಸ್ಥಳವೊಂದಿಗನೆನ್ನಿಸಲು ಅವಶ್ಯವಾದ ಅನುಮತಿ ದೊರಕಿಸಿಕೊಂಡು, ನನ್ನಲ್ಲಿದ್ದ ಹಣಕ್ಕೆ ಎಷ್ಟು ದೊರೆಯುವುದಾಗಿತ್ತೊ ಅಷ್ಟು ಉಳುಮೆ ಮಾಡಿಲ್ಲದ ಜಮೀನನ್ನು ಕೊಂಡುಕೊಂಡೆ. ಬಳಿಕ, ಇಂಗ್ಲೆಂಡಿನಿಂದ ನಾನು ತರಿಸಿಕೊಳ್ಳಬೇಕೆಂದು ಯೋಚಿಸುತ್ತಿದ್ದ ಹಣಕ್ಕೆ ಸಾಲುವ ಮಟ್ಟಿಗೆ ಬೇಸಾಯದ ವ್ಯವಸ್ಥೆಯನ್ನು ಮಾಡಿದೆ.

ನನ್ನ ನೆರೆಯವನು ಒಬ್ಬ ಪೋರ್ಚುಗೀಸರವನು. ಆತನ ಹೆಸರು ವೆಲ್ಸ್. ಆತನೂ ನನ್ನ ಪರಿಸ್ಥಿತಿಯಲ್ಲಿಯೇ ಇದ್ದನು. ನಮ್ಮಿಬ್ಬರ ಬಂಡವಾಳವೂ

ಯೂರೋಪಿಯನ್ ಸೇವಕನನ್ನೂ ಕೆಲಸಕ್ಕಿಟ್ಟುಕೊಂಡೆ.

ಅನೇಕವೇಳೆ, ಉಚ್ಚ್ರಾಯಸ್ಥಿತಿಯ ದುರುಪಯೋಗವೇ ನಮ್ಮ ದುರ್ನಿವಾರಣೀಯವಾದ ದುಃಸ್ಥಿತಿಗೆ ಕಾರಣವಾಗುವುದು. ನನ್ನ ವಿಷಯದಲ್ಲಿಯೂ ಅಂತೆಯೇ ಆಯಿತು. ಮಾರನೆಯ ವರ್ಷ ನನ್ನ ಬೇಸಾಯ ಹಿಂದೆಂದೂ ಆಗಿರದಂತೆ ಕುದುರಿತು. ಸುತ್ತಮುತ್ತ ನೆರೆಯವರಿಗೆಲ್ಲ ಮಾರಿಯಾದ ಮೇಲೆ, ಸುಮಾರು ಐವತ್ತು ಪಿಂಡಿಯಾಗುವಷ್ಟು ಹೊಗೆಯಸೊಪ್ಪನ್ನು ಬೆಳೆದಿದ್ದೆ. ಆ ಫಸಲನ್ನು ಲಿಸ್ಬಾನಿಗೆ ಹಡಗಿನಲ್ಲಿ ಕಳಿಸಿಕೊಡುವುದಕ್ಕಾಗಿ ಕಾದಿರಿಸಿದ್ದೆ. ನನ್ನ ವ್ಯಾಪಾರವೂ ಐಶ್ವರ್ಯವೂ ಹೆಚ್ಚಿದಂತೆ, ನನ್ನ ಅಳವಿಗೆ ಮೀರಿದ ಯೋಜನೆಗಳ ಮತ್ತು ಸಾಹಸೋದ್ಯಮಗಳ ಆಲೋಚನೆಗಳು ತಲೆಯತುಂಬ ತುಂಬಿಕೊಂಡುವು. ವ್ಯವಹಾರಕುಶಲಿಗಳ ತಲೆಯನ್ನು ಕೂಡ ಕೆಡಿಸುವಂತಹ ಆಲೋಚನೆಗಳವು.

ನಾನು ಇದ್ದ ನೆಲೆಯಲ್ಲಿಯೇ ಇದ್ದಿದ್ದರೆ ನಾನು ಇನ್ನೂ ಕಾಣದೆ ಇದ್ದಂತಹ ಅನೇಕ ಭೋಗಾನುಭವಗಳಿಗೆ ಅವಕಾಶವಿತ್ತು ; ನಮ್ಮ ತಂದೆ ಅಷ್ಟೊಂದು ಉತ್ಸಾಹದಿಂದ ಹಾಡಿ ಹೊಗಳುತ್ತಿದ್ದ ಶಾಂತವಾದ ಏಕಾಂತ ಜೀವನವನ್ನು ನಡೆಸಬಹುದಾಗಿತ್ತು. ಆದರೆ ನನ್ನ ಸ್ವಂತ ಕೇಡನ್ನು ನಾನೇ ತಂದುಕೊಳ್ಳುವುದು ಇನ್ನೂ ನನ್ನ ಪಾಲಿಗೆ ಉಳಿದಿತ್ತು. ಪ್ರಕೃತಿದೇವಿಯೂ ದೈವವೂ ಕೂಡಿ ನನ್ನ ಮುಂದೆ ಈಗ ಒಡ್ಡಿದ್ದ, ಸಾಧಾರಣ ರೀತಿಯವಾದರೂ ಸುಖಾವಹಗಳಾದ ಜೀವನ ಸನ್ನಿವೇಶಗಳನು ಸ್ವಾಗತಿಸಿ ನನ್ನ ಶ್ರೇಯಸ್ಸನ್ನು ನಾವೇ ರೂಪಿಸಿಕೊಳ್ಳುವ ಅವಕಾಶವನ್ನು ಅತ್ತ ದೂಡಿದೆ ; ಹಾಗೆ ದೂಡಿದುದಕ್ಕೆ ದೇಶಾಟನದ ಹಳೆಯ ಗೀಳಿಗೆ ಮತ್ತೆ ನಾನು ಮಾರುವೋದುದೇ ಕಾರಣವಾಯಿತು.

ನನ್ನ ತಾಯಿತಂದೆಗಳನ್ನು ತ್ಯಜಿಸುವಂತೆ ಯಾವ ಹುಚ್ಚುಬಯಕೆ ನನ್ನನ್ನು ಪ್ರೇರಿಸಿತೋ ಅದೇ ಹುಚ್ಚು ಬಯಕೆ, ಸಹಜಸ್ಥಿತಿಯಲ್ಲಿ ಸಾಧ್ಯವಾಗಿರುವುದಕ್ಕಿಂತ ಬೇಗಬೇಗನೆ ಅಭಿವೃದ್ಧಿ ಹೊಂದಬೇಕೆಂಬ ಆಸಜವಾದ ಹುಚ್ಚು ಬಯಕೆ – ಈಗ ನನ್ನನ್ನು ಅತೃಪ್ತನನ್ನಾಗಿ ಮಾಡಿತು. ಅಂತು, ಮನುಷ್ಯನೆನಿಸಿದವನು ಬಿದ್ದಿರಬಹುದಾದ ಅತ್ಯಗಾಧವಾದ ಸಂಕಷ್ಟಗಳ ಅಧಃಕೂಪಕ್ಕೆ ಮರಳಿ ಬಿದ್ದೆ.

## ಗಿನಿಯ ಪ್ರಯಾಣ

ಬ್ರಜಿಲ್‌ನಲ್ಲಿ ನಾನು ವಾಸಿಸತೊಡಗಿ ನಾಲ್ಕು ವರ್ಷಗಳಾಗಿದ್ದುವು. ನನ್ನ ಜಮೀನಿನ ಬೇಸಾಯದಲ್ಲಿ ಏಳಿಗೆಹೊಂದುತ್ತ ಬಂದಂತೆ, ನನ್ನ ಜೊತೆಯ ಬೇಸಾಯಗಾರರ ಭಾಷೆಯನ್ನು ಕಲಿತುದರ ಜೊತೆಗೆ ಅವರೊಂದಿಗೂ ಸೇಯಿಂಟ್

ವಿಚಾರದಲ್ಲಿ ಆದುದಂತೂ ಹಾಗೆಯೆ. ನನ್ನ ಕೈಕೊಂಡ ಉದ್ಯಮದಲ್ಲಿಯೇ ನಾನು ಕಚ್ಚಿಕೊಂಡಿದ್ದಿದ್ದರೆ, ಬಹುಶಃ ನಾನು ಬಹಳ ಐಶ್ವರ್ಯವಂತನಾಗಿ ಏಳಿಗೆ ಹೊಂದುತ್ತಿದ್ದೆ.

ನಾನು ನನ್ನ ವ್ಯವಸಾಯದ ಏರ್ಪಾಟುಗಳಲ್ಲಿ ಸ್ವಲ್ಪಮಟ್ಟಿಗೆ ನೆಲೆಸಿದ್ದೆ. ಆ ವೇಳೆಗೆ ಕಡಲಿನಲ್ಲಿ ನನ್ನನ್ನು ಸಂರಕ್ಷಿಸಿದ್ದ ನೌಕಾನಾಯಕನು ಹಿಂದಿರುಗಿ ಬಂದನು. ಆತನ ಹಡಗು ಹೇರು ತುಂಬಿಕೊಳ್ಳುವುದಕ್ಕಾಗಿ ಇಲ್ಲಿ ಕೆಲವುಕಾಲ ಉಳಿದುಕೊಂಡಿತ್ತು. ಆಗ ನಾನು ಆತನಿಗೆ ಲಂಡನ್ನಿನಲ್ಲಿ ಹಿಂದೆ ಬಿಟ್ಟುಬಂದಿದ್ದ ನನ್ನ ಚಿಕ್ಕ ಬಂಡವಾಳದ ವಿಷಯವಾಗಿ ಪ್ರಸ್ತಾಪಿಸಿದೆ. ಆತನು ತನಗೆ ಒಂದು ಅಧಿಕಾರಪತ್ರವನ್ನು ಕೊಟ್ಟರೆ, ಲಿಸ್ಬಾನಿನಲ್ಲಿ ತನಗೆ ಪರಿಚಯವಿರುವ ಕೆಲವರ ಉಪಕಾರದ ಮೂಲಕ ಈ ದೇಶಕ್ಕೆ ತರಿಸಿಕೊಳ್ಳಬಹುದಾದಂತಹ ಸರಕುಗಳನ್ನು ಆ ಹಣದಿಂದ ಕೊಂಡು ತಂದುಕೊಡುವುದಾಗಿ ಸಲಹೆಕೊಟ್ಟನು. ಈ ಸಲಹೆಯು ನನ್ನ ಮನಸ್ಸಿಗೆ ಹಿಡಿಯಿತು. ಅದೇ ಮೇರೆಗೆ, ಯಾವ ಮಹಿಳೆಯಲ್ಲಿ ನನ್ನ ಹಣವನ್ನು ನ್ಯಾಸವಿಟ್ಟಿದ್ದೆನೋ ಆಕೆಗೆ ಕೆಲವು ಕಾಗದಗಳನ್ನೂ, ನೌಕಾನಾಯಕನಿಗೆ ಒಂದು ಅಧಿಕಾರ ಪತ್ರವನ್ನೂ ಬರೆದುಕೊಟ್ಟೆ. ನೌಕಾನಾಯಕನು ಹಿಂದಿರುಗಿ ಬಂದಾಗ ತಾನು ಸಲಹೆಕೊಟ್ಟಿದ್ದ ಪ್ರಕಾರ, ನನಗೆ ಬಂದ ನೂರು ಪೌಂಡುಗಳಿಗೆ ಅನೇಕ ಸರಕುಗಳನ್ನೂ ಬಗೆಬಗೆಯ ವ್ಯವಸಾಯದ ಮುಟ್ಟುಗಳನ್ನೂ ತಂದುಕೊಟ್ಟನು. ನನಗೆ ಹಣ ದೊರಕಿಸಿಕೊಡುವುದರಲ್ಲಿ ನೆರವಾಗಿದ್ದ ಲಂಡನ್ನಿನ ಸಾಹುಕಾರನು ತನ್ನ ಗೆಳೆಯನೆನಿಸಿದ ನನಗೆ ಉಪಕಾರ ಮಾಡಲೊಪ್ಪಿದ್ದ ಈ ನೌಕಾನಾಯಕನಿಗೆ ಐದು ಪೌಂಡುಗಳ ಬಹುಮಾನ ಮಾಡಿದ್ದನು. ನೌಕಾನಾಯಕನು ಈ ಬಹುಮಾನವನ್ನು ತನಗಾಗಿ ಉಪಯೋಗಿಸಿಕೊಳ್ಳಲೊಲ್ಲದೆ, ಆರು ವರುಷ ಕಾಲ ನನ್ನ ಬಳಿ ಇರುವಂತೆ ಗೊತ್ತುಮಾಡಿ ಒಬ್ಬ ಜೀತದ ಆಳನ್ನು ಕರೆದುತಂದು ನನ್ನ ಬಳಿ ಬಿಟ್ಟನು. ಈ ಎಲ್ಲ ಉಪಕಾರಕ್ಕೂ ಪ್ರತಿಯಾಗಿ ನೌಕಾನಾಯಕನು ನನ್ನಿಂದ ಏನನ್ನೂ ತೆಗೆದುಕೊಳ್ಳಲಿಲ್ಲ. ನಾನು ಬೆಳೆದ ಒಂದಿನಿತು ಹೊಗೆಯಸೊಪ್ಪನ್ನು ಸ್ವೀಕರಿಸಿದನು.

ಇಷ್ಟೇ ಅಲ್ಲ. ನನಗೆ ತಂದುಕೊಟ್ಟಿದ್ದ ಸರಕೆಲ್ಲವೂ ಈ ದೇಶದಲ್ಲಿ ಬಹಳ ಬೆಲೆ ಬಾಳುವುವಾಗಿದ್ದುವು. ಅವುಗಳನ್ನೆಲ್ಲ ಮಾರಿದಮೇಲೆ, ನನ್ನ ಬಂಡವಾಳದ ನಾಲ್ಕರಷ್ಟು ಆದಾಯವಾಯಿತು ನನಗೆ. ಇಂದರಿಂದಾಗಿ, ಬೇಸಾಯದ ಉದ್ಯಮದಲ್ಲಿ ನನ್ನ ನೆರೆಯವನಿಗಿಂತ ನಾನು ಬಹಳ ಏಳಿಗೆ ಹೊಂದಿದ್ದೆ. ನನ್ನ ಜೀತದ ಆಳಿನ ಜೊತೆಗೆ, ಒಬ್ಬ ನೀಗ್ರೋ ಗುಲಾಮನನ್ನು ಕೊಂಡುಕೊಂಡುದಲ್ಲದೆ ಒಬ್ಬ

ಪ್ರಾಂತ್ಯದಲ್ಲಿ ಭದ್ರವಾಗಿ ನೆಲೆನಿಂತು ಮೂರು ನಾಲ್ಕು ವರ್ಷಗಳಾಗಿದ್ದುವು ; ಇಂಗ್ಲೆಂಡಿನಲ್ಲಿ ಬಿಟ್ಟುಬಂದಿದ್ದ ಉಳಿದ ನೂರು ಪೌಂಡುಗಳನ್ನು ತರಿಸಿಕೊಂಡು, ಆ ಹೆಚ್ಚಿನ ಬಂಡವಾಳವನ್ನು ಹಾಕಿಕೊಂಡು, ಇನ್ನು ಮೂರು ನಾಲ್ಕು ಸಾವಿರ ಪೌಂಡುಗಳ ಬಂಡವಾಳಗಾರನಾಗದೆ ಇರುತ್ತಿರಲಿಲ್ಲ. ಇಂಥ ಉಚ್ಛ್ರಾಯದಶೆಯಲ್ಲಿದ್ದ ನಾನು ಅಂಥ ಪ್ರಯಾಣದ ಆಲೋಚನೆ ಮಾಡಬೇಕಾದರೆ, ಎಂಥ ಅವಿವೇಕದ ಕಾರ್ಯವದು!

ಆದರೆ, ನನ್ನ ವಿನಾಶಕ್ಕೆ ನಾನೇ ಹೇತುವಾಗಬೇಕೆಂದಿರುವಾಗ, ಅವರು ಹುಟ್ಟಿಸಿದ ಆಶೆಯನ್ನು ಅಣಗಿಸುವುದು ನನ್ನಿಂದ ಸಾಧ್ಯವಾಗಲಿಲ್ಲ. ನಾನು ಅವರೊಂದಿಗೆ ಸಂತೋಷದಿಂದ ಹೊರಡಲು ಸಿದ್ಧನಾಗಿರುವನೆಂದೂ, ನಾನಿಲ್ಲದಿರುವಾಗ ನನ್ನ ಜಮೀನಿನ ಮೇಲುವಿಚಾರಣೆಯನ್ನು ನೋಡಿಕೊಳ್ಳುವ ಹೊಣೆ ಅವರದೆಂದು, ನಾನು ಅಕಸ್ಮಾತ್ ಹಿಂದಿರುಗಿ ಬಾರದಿದ್ದರೆ ನನ್ನ ಇಷ್ಟಪ್ರಕಾರ ಜಮೀನನ್ನು ವಿನಿಯೋಗ ಮಾಡಬೇಕೆಂದು ಅವರಿಗೆ ಹೇಳಿದೆ. ಅವರು ನನ್ನ ಕೋರಿಕೆಗಳೆಲ್ಲ ಒಪ್ಪಿ, ಅದೇ ಮೇರೆಗೆ ಒಪ್ಪಂದದ ಪತ್ರವನ್ನೂ ಬರೆದುಕೊಟ್ಟರು; ನಾನು ನನ್ನ ಜಮೀನಿನ ವಿನಿಯೋಗದ ಬಗ್ಗೆ ಒಂದು ಉಯಿಲನ್ನು ಬರೆದು ಅವರ ವಶಕ್ಕೆ ಕೊಟ್ಟೆ ; ಅದರ ಪ್ರಕಾರ, ನನಗೆ ಮರಣ ಸಂಭವಿಸಿದರೆ, ನನಗೆ ಸಹಾಯ ಮಾಡಿದ ನೌಕಾನಾಯಕನು ನನ್ನ ಆಸ್ತಿಯೆಲ್ಲಕ್ಕೂ ಉತ್ತರಾಧಿಕಾರಿಯಾಗಿದ್ದುಕೊಂಡು, ಅದನ್ನು ಮೀರಿ ಬಂದ ಆದಾಯದ ಅರ್ಧ ಭಾಗವನ್ನು ತಾನು ಇಟ್ಟುಕೊಂಡು ಉಳಿದ ಅರ್ಧ ಭಾಗವನ್ನು ಇಂಗ್ಲೆಂಡಿಗೆ ಕಳಿಸಿಕೊಡತಕ್ಕದ್ದೆಂದು ಅಪೇಕ್ಷಿಸಿದ್ದೆ.

ನನ್ನ ಆಸ್ತಿಯನ್ನು ಉಳಿಸಿಕೊಳ್ಳುವುದಕ್ಕೆ ನಾನು ಯಾವ ವಿವೇಕವನ್ನು ಉಪಯೋಗಿಸಿದ್ದೆನೋ ಅದೇ ವಿವೇಕವನ್ನು – ಆ ಸನ್ನಿವೇಶದಲ್ಲಿ ನಾನು ಏನು ಮಾಡತಕ್ಕದ್ದು, ಏನು ಮಾಡತಕ್ಕದಲ್ಲ– ಎಂಬ ವಿಚಾರ ನಿರ್ಣಯದಲ್ಲಿ ಉಪಯೋಗಿಸಿದ್ದಿದ್ದರೆ, ಅಭಿವೃದ್ಧಿಯನ್ನೈದುತ್ತಿದ್ದ ಉದ್ಯಮವನ್ನು ತ್ಯಜಿಸಿ ನಾನೆಂದಿಗೂ ಅಪಾಯಪರಂಪರೆಗಳಿಗೊಳಗಾದ ಸಮುದ್ರ ಪ್ರಯಾಣದ ಮೇಲೆ ಮತ್ತೆ ಹೊರಡುತ್ತಿರಲಿಲ್ಲ.

ಆದರೆ ನಾನು ದುಡುಕಿದೆ. ವಿವೇಕದ ಮಾರ್ಗವನ್ನು ಹಿಡಿಯದೆ ಭಾವನಾಮರೀಚಿಕೆಯನ್ನು ಬೆಂಬತ್ತಿದೆ. ಇಂತು, ೧೬೫೯ನೆಯ ಇಸವಿ ಸೆಪ್ಟೆಂಬರ್ ೧ನೆಯ ತಾರೀಖಿನ ದಿನ, ನನ್ನ ಸಹಪ್ರಯಾಣಿಕರು ಅಣಿಗೊಳಿಸಿದ್ದ ಹಡಗನ್ನು ಹತ್ತಿದೆ. ಸರಿಯಾಗಿ ಎಂಟು ವರ್ಷಗಳ ಹಿಂದೆ, ನನ್ನ ತಾಯಿತಂದೆಗಳ ಮಾತನ್ನು

ಸಾಲ್ವಡೋರ್ ಬಂದರಿನ ವರ್ತಕರೊಂದಿಗೂ ಪರಿಚಯವನ್ನೂ ಸ್ನೇಹವನ್ನೂ ಬೆಳೆಸಿಕೊಂಡಿದ್ದೆ. ಅವರೊಡನೆ ಮಾತುಕತೆಯಾಡುತ್ತಿದ್ದಾಗ, ನಾನು ಎರಡು ಸಲ ಗಿನಿ ತೀರಕ್ಕೆ ಪಯಣ ಮಾಡಿದ್ದು, ಅಲ್ಲಿ ನೀಗ್ರೋಗಳೊಡನೆ ವ್ಯಾಪಾರಮಾಡುವ ರೀತಿ, ಮಣಿಗಳು ಆಟದ ಸಾಮಾನುಗಳು ಚೂರಿಗಳು, ಕತ್ತರಿಗಳು, ಗಾಜಿನ ಚೂರುಗಳು ಮುಂತಾದುವನ್ನು ಕೊಟ್ಟು ಚಿನ್ನದ ಹುಡಿ ಆನೆಯ ಕೊಂಬು ಇವು ಮಾತ್ರವಲ್ಲದೆ ಅಸಂಖ್ಯಾತರಾದ ನೀಗ್ರೋಗಳನ್ನು ಕೂಡ ಆ ತೀರ ಪ್ರಾಂತದಲ್ಲಿ ಕೊಂಡುಕೊಳ್ಳುವುದು ಎಷ್ಟು ಸುಲಭವೆಂಬ ಸಂಗತಿ – ಇವೇ ಮುಂತಾದ ನನ್ನ ಅನುಭವದ ವಿವರಗಳನ್ನು ಅವರಿಗೆ ಒಕ್ಕಣಿಸಿದೆ. ಎಲ್ಲಕ್ಕಿಂತ ಹೆಚ್ಚಾಗಿ ನೀಗ್ರೋಗಳನ್ನು ಕೊಂಡುಕೊಳ್ಳುವ ವಿಚಾರಕ್ಕೆ ಸಂಬಂಧಿಸಿದ ವಿವರಗಳನ್ನು ಅವರು ಗಮನಕೊಟ್ಟು ಕೇಳಿದರು. ಆಗ ನೀಗ್ರೋಗಳ ವ್ಯಾಪಾರ ಇನ್ನೂ ಅಷ್ಟಾಗಿ ಬಳಕೆಯಲ್ಲಿರಲಿಲ್ಲ. ನೀಗ್ರೋಗಳನ್ನು ಕೊಳ್ಳಬೇಕಾದರೆ ಸ್ಪೆಯ್ನ್ ಇಲ್ಲವೆ ಪೋರ್ಚುಗಲ್ ದೇಶಗಳ ದೊರೆಗಳ ಅನುಮತಿ ಆವಶ್ಯಕವಾಗಿತ್ತು. ಹೀಗಾಗಿ ನೀಗ್ರೋಗಳನ್ನು ಕೊಳ್ಳುವುದು ಅಪೂರ್ವವಾಗಿತ್ತು ; ಕೊಂಡವರ ಬೆಲೆಯಂತೂ ಅತ್ಯಧಿಕವಾಗಿತ್ತು.

ನಾನು ಮಾತನಾಡಿದವರಲ್ಲಿ ಮೂವರು ಮಾರನೆಯ ಬೆಳಗ್ಗೆ ನನ್ನ ಬಳಿಗೆ ಬಂದರು. ಬಂದು, ತಾವು ಹೇಳಬೇಕೆಂದಿರುವುದನ್ನು ಬಹಳ ಗೋಪ್ಯವಾಗಿಡಬೇಕೆಂದು ನನ್ನಿಂದ ಮಾತು ತೆಗೆದುಕೊಂಡು, ತಮ್ಮ ರಹಸ್ಯಾಲೋಚನೆಯನ್ನು ನನ್ನ ಕಿವಿಗೆ ಹಾಕಿದರು : ಗಿನಿಗೆ ಹೋಗಲು ಒಂದು ಹಡಗನ್ನು ಸಜ್ಜುಗೊಳಿಸುವ ಸಂಕಲ್ಪ ತಮಗುಂಟು ; ನನ್ನಂತೆಯೇ ಅವರಿಗೂ ಜಮೀನುಗಳಿದ್ದುವಾದ್ದರಿಂದ ಆಳುಗಳ ಕೊರತೆ ಬಹಳವಾಗಿತ್ತು ; ನೀಗ್ರೋಗಳನ್ನು ಕೊಂಡು ತಂದು ಬಹಿರಂಗವಾಗಿ ಮಾರುವ ಅವಕಾಶವಿಲ್ಲವಾದ್ದರಿಂದ, ಒಂದೇ ಒಂದು ಪ್ರಯಾಣವನ್ನು ಮಾಡಿ, ಕರೆದುತಂದ ನೀಗ್ರೋಗಳನ್ನು ತಮ್ಮ ಜಮೀನುಗಳ ಜೀತಕ್ಕಾಗಿ ತಮ್ಮ ತಮ್ಮಲ್ಲಿಯೇ ಹಂಚಿಕೊಳ್ಳತಕ್ಕದ್ದು : ಇದೇ ಅವರ ರಹಸ್ಯಾಲೋಚನೆ. ಒಂದು ಮಾತಿನಲ್ಲಿ, ನಾನು ಅವರ ಸಂಗಡ ಹೋಗಿ ಗಿನಿ ತೀರದಲ್ಲಿ ನೀಗ್ರೋಗಳ ವ್ಯಾಪಾರ ಕಾರ್ಯವನ್ನು ನಿರ್ವಹಿಸಲಾಗುವುದೇ? – ಎಂಬುದು ಅವರ ಪ್ರಶ್ನೆಯಾಗಿತ್ತು. ಬಂಡವಾಳವೇನನ್ನೂ ಹಾಕದೆಯೇ ಅವರೊಂದಿಗೆ ಸರಿ ಪಾಲಾಗಿ ನೀಗ್ರೋಗಳನ್ನು ನಾನು ಪಡೆಯಲು ಅವರು ಒಪ್ಪಿದರು.

ಜಮೀನಿಲ್ಲದೆ, ಜೀವನದಲ್ಲಿ ಇನ್ನೂ ನೆಲಸದೆ ಇರುವಂತಹವನಿಗೆ ಅವರು ಮಾಡಿದಂತಹ ಸಲಹೆ ಸೂಚನೆ ಪರಿಗ್ರಾಹ್ಯವಾದುದೇ. ಆದರೆ ನಾನು ಈ

ಕೊಚ್ಚಿಹೋದರು. ಹನ್ನೆರಡನೆಯ ದಿನ ಹವ ಕೊಂಚ ಶಾಂತವಾಗಲು, ಹಡಗಿನ ಯಜಮಾನನು ಪರಿಶೀಲನೆಮಾಡಿ ಹಡಗು ಸೆಯ್‌ಂಟ್ ಆಗಸ್ಟಿನೋ ಭೂಶಿರದಿಂದ ರೇಖಾಂಶ ಇಪ್ಪತ್ತೆರಡು ಡಿಗ್ರಿಗಳ ಆಚೆ ಇದ್ದಿತೆಂಬುದಾಗಿ ಕಂಡುಕೊಂಡನು. ಎಂದರೆ, ಬ್ರಜಿಲಿನ ಉತ್ತರ ಪ್ರಾಂತದ ಗಿನಿ ತೀರದಲ್ಲಿ, ಅಮೆಜಾನ್ ನದಿಯಿಂದಾಚೆಗೆ, ಓರಿನಾಕೊ ನದಿಯ ಕಡೆಗೆ, ಹಡಗು ಹೋಗುತ್ತಿತ್ತು. ಈ ಮಧ್ಯೆ ಹಡಗು ಒಡಕಾಗಿ, ಬಹಳಮಟ್ಟಿಗೆ ನಿರುಪಯೋಗವಾಗಿತ್ತು. ಮತ್ತೆ ಬ್ರಜಿಲ್ ತೀರಕ್ಕೇ ಹಿಂದಿರುಗಬೇಕಾಗಿದ್ದ ಆ ಸನ್ನಿವೇಶದಲ್ಲಿ ಏನು ಮಾಡಬೇಕೆಂಬುದಾಗಿ ಹಡಗಿನೊಡೆಯನು ನನ್ನ ಸಲಹೆ ಕೇಳಿದನು. ಹಾಗೆ ಬ್ರಜಿಲ್ ತೀರಕ್ಕೇ ಹಿಂದಿರುಗುವುದಕ್ಕೆ ನಾನು ವಿರುದ್ಧವಾಗಿದ್ದೆ. ನೌಕಾನಾಯಕನೊಡನೆ ಅಮೆರಿಕಾ ತೀರ ಪ್ರದೇಶಗಳ ನಕ್ಷೆಗಳನ್ನು ಪರಿಶೀಲಿಸಲಾಗಿ, ಕ್ಯಾರಿಬೀ ದ್ವೀಪಸ್ತೋಮದ (Caribbee Islands) ಪರಿಸರಕ್ಕೆ ಹೋದಹೊರತು ಜನನಿವಾಸವುಳ್ಳ ಬೇರೆ ಯಾವ ಭೂಭಾಗವೂ ಹತ್ತಿರದಲ್ಲಿ ಇರಲಿಲ್ಲ. ಆದ್ದರಿಂದ, ಹದಿನೈದು ದಿನಗಳಲ್ಲಿ ಬಾರ್ಬೊಡೋಸ್ (Barbadoes) ದ್ವೀಪಗಳನ್ನು ತಲುಪಬಹುದೆಂಬ ಎಣಿಕೆಯಿಂದ ಆ ದಿಕ್ಕನ್ನು ಹಿಡಿದೆವು. ಹಡಗಿಗೂ ನಮಗೂ ಅವಶ್ಯಕವಾಗಿದ್ದ ನೆರವು ದೊರೆಯದೆ ಆಫ್ರಿಕಾ ಖಂಡದ ತೀರವನ್ನು ಮುಟ್ಟುವುದು ಅಸಾಧ್ಯದ ಮಾತಾಗಿತ್ತು.

ಮೇಲಿನ ಉದ್ದೇಶವನ್ನು ಹೊಂದಿ, ಆಂಗ್ಲ ದ್ವೀಪಗಳಲ್ಲಿ ಯಾವುದನ್ನಾದರೂ ತಲಪಿದರೆ ಅಲ್ಲಿ ನೆರವು ದೊರೆಯಬಹುದೆಂಬ ಆಲೋಚನೆಯಿಂದ, ಹಡಗಿನ ಪ್ರಯಾಣಮುಖವನ್ನು ವಾಯವ್ಯದ ಕಡೆಗೆ ತಿರುಗಿಸಿದೆವು. ಆದರೆ ನಾವು ಬಗೆದಂತೆ ನಡೆಯಲಿಲ್ಲ. ಹನ್ನೆರಡು ಡಿಗ್ರಿಗಳ ಅಕ್ಷಾಂಶದಲ್ಲಿರುವಾಗ, ಮೊದಲ ಸಲದ ಬಿರುಸಿನಿಂದಲೇ ಇನ್ನೊಂದು ಬಿರುಗಾಳಿಯೆದ್ದು ನಮ್ಮನ್ನು ಪಶ್ಚಿಮದ ಕಡೆಗೆ ಒಯ್ದಿತು. ಮಾನವ ಸಂಬಂಧ ಯಾವುದೂ ಇಲ್ಲದಂತಹ ಪ್ರದೇಶದತ್ತ ಹಡಗು ಸಾಗಿದ್ದಿತು. ಒಂದು ವೇಳೆ ಸಮುದ್ರಸಮಾಧಿಯಿಂದ ಹೇಗಾದರೂ ಪಾರಾಗಿದ್ದರೂ ಕೂಡ ಕಾಡು ಜನರ ಪಾಲಾಗುವ ಸಂಭವ ಹೆಚ್ಚಾಗಿದ್ದಿತೇ ಹೊರತು ಸ್ವದೇಶಕ್ಕೆ ಸುರಕ್ಷಿತವಾಗಿ ಮರಳು ಸಂಭವವೇ ಇರಲಿಲ್ಲ.

ಈ ಪೇಚಾಟದಲ್ಲಿ ಸಿಲುಕಿರುವಾಗ, ಮುಂಜಾವಿನ ವೇಳೆಯಲ್ಲಿ ನಮ್ಮವನೊಬ್ಬನು "ನೆಲ!" ಎಂದು ಕೂಗಿಕೊಂಡನು. ನಾವು ಎಲ್ಲಿದ್ದೇವೆಂಬುದ್ನು ಕಂಡುಕೊಳ್ಳುವುದಕ್ಕಾಗಿ ಹಡಗಿನ ಕೋಣೆಯಿಂದ ನಾವು ಹೊರನುಗ್ಗಿ ಹೋಗುವಷ್ಟರಲ್ಲಿ, ಹಡಗು ಮರುನೆಲವನ್ನು ಕಚ್ಚಿದಂತಾಯಿತು ; ಕ್ಷಣದಲ್ಲಿ

ಮೀರಿ, ಅವರ ಆಣತಿಯನ್ನು ಮುರಿದು, ನನ್ನ ಹಿತಕ್ಕೆ ನಾನೇ ಶತ್ರುವಾದದ್ದು ಅದೇ ತಾರೀಖಿನ ದಿನ.

**ಹಡಗಿನ ನಾಶ**

ನಮ್ಮ ಹಡಗು ಒಂದು ನೂರು ಇಪ್ಪತ್ತು ಟನ್ನುಗಳ ಹೇರಿನ ತೂಕದ್ದು. ಆದರಲ್ಲಿ ಆರು ಫಿರಂಗಿಗಳಿದ್ದುವು. ಯಜಮಾನ, ಅವನ ಹುಡುಗ ಮತ್ತು ನಾನಲ್ಲದೆ ಹಡಗಿನವರು ಹದಿನಾಲ್ಕು ಮಂದಿ. ನೀಗ್ರೋಗಳೊಡನೆ ಮಾರಾಟಕ್ಕೆ ಆವಶ್ಯಕವಾದ ಚಿಲ್ಲರೆಪಲ್ಲರೆ ಥಳುಕುಪಳುಕು ವಸ್ತುಗಳಲ್ಲದೆ ಹಡಗಿನಲ್ಲಿ ಹೆಚ್ಚಿನ ಸರಕೇನೂ ಇರಲಿಲ್ಲ.

ನಾನು ಹಡಗು ಹತ್ತಿದ ದಿನವೇ ಹಡಗು ಪ್ರಯಾಣದ ಮೇಲೆ ಹೊರಟಿತು. ನಮ್ಮ ತೀರವನ್ನು ಬಿಟ್ಟು ಉತ್ತರದಿಕ್ಕನ್ನು ಹಿಡಿದು ಆಫ್ರಿಕದ ತೀರದ ಕಡೆಗೆ ಸಾಗಬೇಕೆಂಬುದು ನಮ್ಮ ಉದ್ದೇಶವಾಗಿತ್ತು. ಆಗಿನ ಪ್ರಯಾಣದ ಪದ್ಧತಿಯ ಮೇರೆಗೆ, ಉತ್ತರ ಅಕ್ಷಾಂಶ ಹತ್ತು ಹನ್ನೆರಡು ಡಿಗ್ರಿಗಳ ಸಮೀಪದ ಮಾರ್ಗವನ್ನು ಹಡಗು ಹಿಡಿಯಿತು. ಸೆಕೆ ಅತ್ಯಂತ ಹೆಚ್ಚಾಗಿತ್ತೆಂಬುದನ್ನು ಬಿಟ್ಟರೆ, ನಮ್ಮ ತೀರದ ಬಳಿಯ ಪಯಣದುದ್ದಕ್ಕೂ ಹವ ಚೆನ್ನಾಗಿಯೇ ಇತ್ತು. ಸೆಯ್‌ಂಟ್ ಆಗಸ್ಟಿನೋ ಭೂಶಿರದ (Cape St. Augustino) ತಿಟ್ಟನ್ನು ತಲಪಿದಮೇಲೆ, ಹಡಗು ಒಳಗಡಲಿಗೆ ಹೋಯಿತು. ಆಗ, ಫರ್ನಂಡ್ ಡ ನೊರೊನ (Fernand de Noronha) ದ್ವೀಪದ ಕಡೆಗೆ ಸಾಗುವಂತೆ ಸಾಗಿ, ಈಶಾನ್ಯ ದಿಕ್ಕನ್ನು ಹಿಡಿದು ಮುಂದುವರಿಯಿತು ಹಡಗು ; ಆ ದ್ವೀಪಗಳು ಪೂರ್ವದ ಕಡೆ ಇದ್ದುವು. ಈ ಮಾರ್ಗದಲ್ಲಿಯೇ ಹನ್ನೆರಡು ದಿನ ಪ್ರಯಾಣಮಾಡಲು, ಉತ್ತರ ಅಕ್ಷಾಂಶ ಏಳು ಡಿಗ್ರಿಗಳ ಸಮೀಪಕ್ಕೆ ಹಡಗು ಬಂದಿತ್ತು. ಆಗ ನೈರುತ್ಯದಿಂದ ಹೊರಟುಬಂದ ದೊಡ್ಡ ಬಿರುಗಾಳಿಯೊಂದು ಹುಚ್ಚುಹುಚ್ಚಾಗಿ ಬೀಸುತ್ತಬಂದು, ವಾಯವ್ಯಕ್ಕೆ ತಿರುಗಿ, ಹಡಗಿನ ಮಾರ್ಗವನ್ನು ಪಲ್ಲಟಗೊಳಿಸಿತ್ತು. ದೈವವೂ ಚಂಡಮಾರುತವೂ ಕೂಡಿ ಒಯ್ದು ದಿಕ್ಕಿನಲ್ಲಿ ಹಡಗು ಒಂದೇ ಸಮನಾಗಿ ಹನ್ನೆರಡು ದಿನಗಳ ಕಾಲ ಮಾರ್ಗವಿಹೀನವಾಗಿ ತೇಲುತ್ತ ಮುಳುಗುತ್ತ ಸಾಗಿತು. ಆ ಹನ್ನೆರಡು ದಿವಸಗಳೂ ಯಾರೂ ಜೀವದಿಂದುಳಿಯುವ ಆಶೆಯನ್ನು ಉಳಿಸಿಕೊಂಡಿರಲಿಲ್ಲ. ನಾನಂತೂ ಕಡಲು ನನ್ನನ್ನು ಎಂದು ನುಂಗಿಕೊಳ್ಳುವುದೋ ಎಂಬುದನ್ನೇ ಎದುರುನೋಡುತ್ತಿದ್ದೆ.

ಈ ಸಂಕಷ್ಟದ ನಡುವೆ, ನಮ್ಮಲ್ಲಿ ಒಬ್ಬನು ಒಂದು ಬಗೆಯ ತೀವ್ರ ಜ್ವರದಿಂದ ತೀರಿಕೊಂಡನು ; ಇನ್ನೊಬ್ಬನೂ ಒಬ್ಬ ಹುಡುಗನೂ ಹಡಗಿನಿಂದ

ಕೆಲವರು ಹೇಳಿದರು.

ಈ ಇಕ್ಕಟ್ಟಿನ ಸ್ಥಿತಿಯಲ್ಲಿದ್ದಾಗ, ನಮ್ಮ ಹಡಗಿನ ನಾಯಕನ ಸಹಾಯಾಧಿಕಾರಿಯು ಇತರರ ನೆರವನ್ನೂ ಪಡೆದು ದೋಣಿಯನ್ನು ಹಡಗಿನ ಒಂದು ಪಕ್ಕದಲ್ಲಿ ತೂಗಬಿಟ್ಟನು. ನಾವೆಲ್ಲರೂ ಅದರಲ್ಲಿ ಕುಳಿತು, ದೇವರ ಕೃಪೆಯನ್ನವಲಂಬಿಸಿ, ಕಲಕಿ ಮೊರೆಯುತ್ತಿದ್ದ ಕಡಲ ಪೆರ್ದೆರೆಗಳುಡಿಯಲ್ಲಿ ಬಿದ್ದೆವು. ಬಿರುಗಾಳಿಮಳೆ ಕೊಂಚಮಟ್ಟಿಗೆ ಕಡಮೆಯಾಗಿದ್ದರೂ ಕರೆಯ ಬಳಿ ಕಡಲು ಭಯಂಕರವಾಗಿ ಉಕ್ಕೆದ್ದು ಮೊರೆಯುತ್ತಿತ್ತು.

ಈಗ ನಮ್ಮ ಸ್ಥಿತಿ ನಿಜವಾಗಿಯೂ ನಿರಾಶಾಜನಕವಾಗಿತ್ತು. ಅಲೆಗಳು ಎದ್ದು ಬೀಳುತ್ತಿದ್ದ ರಭಸಕ್ಕೆ ದೋಣಿ ಉಳಿಯುವಂತಿರಲಿಲ್ಲವೆಂದೂ ಎಲ್ಲರೂ ಕಡಲ ಪಾಲಾಗುವುದು ಅನಿವಾರ್ಯವೆಂದೂ ನಮಗೆ ಸ್ಪಷ್ಟವಾಯಿತು. ಹಾಯಿಯನ್ನು ಹರಡೋಣವೆಂದರೆ, ಅದೇ ಇರಲಿಲ್ಲ ; ಇದ್ದಿದ್ದರೂ ನಮ್ಮ ಪ್ರಯತ್ನ ವ್ಯರ್ಥವಾಗುತ್ತಿತ್ತು. ಇನ್ನೇನೂ ತೋರದೆ, ಶೂಲದಮರದ ಬಳಿಗೆ ಹೋಗುವವರಂತೆ ವಿಷಣ್ಣಮನಸ್ಕರಾಗಿ, ದೋಣಿಯನ್ನು ಹುಟ್ಟುಹಾಕಿ ಭೂಮ್ಯಭಿಮುಖವಾಗಿ ನಡೆಸತೊಡಗಿದೆವು ; ಕಡಲಕರೆಯನ್ನು ದೋಣಿ ಸಮೀಪಿಸಿದಂತೆ ಅದು ಅಲೆಗಳ ಹೊಡೆತಕ್ಕೆ ಸಿಲುಕಿ ಸಾವಿರಚೂರಾಗಿ ಛಿನ್ನಭಿನ್ನವಾಗುವುದೆಂದು ನಾವೆಲ್ಲ ಮನಗಂಡಿದ್ದರೂ ನಮ್ಮ ಪ್ರಾಣಗಳನ್ನು ದೇವರ ವಶಕ್ಕೊಪ್ಪಿಸಿ ಮುಂಬರಿದೆವು. ಕರೆ ಹತ್ತಿರ ಹತ್ತಿರವಾದಂತೆ ನಾವೇ ತ್ವರೆಗೊಳಿಸಿಕೊಂಡ ನಮ್ಮ ವಿನಾಶಕಾಲವೂ ಹತ್ತಿರಹತ್ತಿರಕ್ಕೆ ಬರುತ್ತಿತ್ತು.

ಕರೆಯೆಂತಹುದು ? ಬಂಡೆಗಳಿಂದ ಕೂಡಿದ್ದೆ, ಮರಳುನೆಲವೆ ? ಕಡಿದೆ, ಚಪ್ಪಟೆಯೆ? – ಯಾವುದೂ ನಮಗೆ ಗೊತ್ತಿರಲಿಲ್ಲ. ನಮ್ಮ ಹಡಗು ಅಕಸ್ಮಾತ್ತಾಗಿ ಯಾವುದದಾರೂ ಖಾರಿಗೊ ಕೊಲ್ಲಿಗೊ ಅಥವಾ ಯಾವುದಾದರೂ ನದೀಮುಖಕ್ಕೊ ಪ್ರವೇಶಮಾಡುವ ಸಂದರ್ಭವೇನಾದರೂ ಒದಗಿದರೆ, ನಾವು ಬದುಕುವ ನಿರೀಕ್ಷೆಯಿಟ್ಟುಕೊಳ್ಳಲು ಅವಕಾಶವಿತ್ತು. ನಾವು ಕರೆಯ ಹತ್ತಿರ ಹತ್ತಿರ ಸಾರಿದಂತೆ ಆ ಸಂಭವ ಕನಸಾಯಿತು ; ಕಡಲಿಗಿಂತ ನೆಲವೇ ಘೋರತರವಾಗಿ ಕಾಣುವಂತಿತ್ತು.

ನಮ್ಮ ಎಣಿಕೆಯಲ್ಲಿ ನಾವು ಸುಮಾರು ಆರೇಳು ಮೈಲಿಗಳಷ್ಟು ದೂರ ದೋಣಿಯನ್ನು ಹುಟ್ಟುಹಾಕಿ ಹೊಡೆದುಕೊಂಡು ಹೋಗಿದ್ದಾಗ, ಪರ್ವತೋಪಮವಾದ ಮಹಾತರಂಗವೊಂದು ಮೃತ್ಯುದೇವತೆಯಂತೆ ನಮ್ಮ ಬೆಂಬತ್ತಿ ಬಂದು, ಅಪ್ಪಳಿಸಿ ಹೊಡೆದು, ಕಣ್ಣು ಬಿಡುವಷ್ಟರಲ್ಲಿ ದೋಣಿಯನ್ನು

ಹಡಗಿನ ಚಲನೆ ನಿಂತುಹೋಯಿತು. ಕಡಲು ಉಕ್ಕಿದಂತಾಗಿ ಹಡಗಿನ ಮೇಲೆ ಅಪ್ಪಳಿಸಿ ಹೊಡೆಯಲು, ನಾವೆಲ್ಲ ಕೂಡಲೆ ನಾಶವೈದುವೆವೆಂಬಂತೆ ತೋರಿತು. ಸುತ್ತಮುತ್ತಲೆಲ್ಲ ಕಡಲ ತುಂತುರನೊರೆ ದಟ್ಟಯಿಸಿ ಕವಿದು, ಅದರ ಮಸಕವನ್ನು ತಪ್ಪಿಸಿಕೊಳ್ಳಲು ನಾವೆಲ್ಲ ಹಡಗಿನಲ್ಲಿನ ಮರೆಯ ಸ್ಥಳಗಳನ್ನು ಆಶ್ರಯಿಸಬೇಕಾಯಿತು.

ನಾವು ಅಂದು ಇದ್ದ ಸ್ಥಿತಿಯಲ್ಲಿ ಇಲ್ಲದವರಿಗೆ ಆ ಸ್ಥಿತಿಯಲ್ಲಿದ್ದಂತಹ ನಮ್ಮ ನಿರಾಶೆಯ ನಿಬ್ಬರವನ್ನು ಕಲ್ಪಿಸಿಕೊಳ್ಳುವುದಕ್ಕಾಗಲಿ ಬಣ್ಣಿಸುವುದಕ್ಕಾಗಲಿ ಸಾಧ್ಯವಿಲ್ಲ. ನಾವು ಎಲ್ಲಿದ್ದೆವು? ಯಾವ ಭೂಭಾಗವನ್ನು ಹಡಗು ಹತ್ತಿತ್ತು? ನಾವು ಇದ್ದದ್ದು ದ್ವೀಪವೆ, ಕಡಲೆ ? ಜನಭರಿತವೆ, ನಿರ್ಜನವೆ? ಏನೊಂದೂ ನಮಗೆ ತಿಳಿಯುವಂತಿರಲಿಲ್ಲ. ಬಿರುಗಾಳಿಯ ರಭಸವು ಮೊದಲಿನಷ್ಟಲ್ಲದಿದ್ದರೂ ಇನ್ನೂ ಹೆಚ್ಚಾಗಿಯೇ ಇತ್ತು ; ಅನಿರೀಕ್ಷಿವಾದ ಅದ್ಭುತ ಘಟನೆಯ ಪರಿಣಾಮವಾಗಿ ಗಾಳಿ ದಿಕ್ಕು ಬದಲಾಯಿಸದ ಹೊರತು, ಹಡಗು ಚೂರುಚೂರಾಗದೆ ಕೆಲವು ನಿಮಿಷಗಳ ಕಾಲವೂ ತಡೆದುಳಿಯುವಂತಿರಲಿಲ್ಲ. ಒಂದು ಮಾತಿನಲ್ಲಿ, ನಾವೆಲ್ಲ ಒಬ್ಬರ ಮುಖವನ್ನೊಬ್ಬರು ನೋಡುತ್ತ, ಪ್ರತಿಯೊಂದು ಕ್ಷಣದಲ್ಲಿಯೂ ಸಾವನ್ನು ನಿರೀಕ್ಷಿಸುತ್ತಿದ್ದೆವು. ನಮ್ಮ ಪಾಲಿಗುಳಿದಿದ್ದ ಒಂದೇ ಸಮಾಧಾನ, ಸರ್ವಸಮಾಧಾನ, ಪರಲೋಕ ಯಾತ್ರೆಗೆ ಸಿದ್ಧರಾಗಿರುವಂತೆ ಕುಳಿತಿದ್ದೆವು. ಎಂದರೆ – ಹಡಗು ಇನ್ನೂ ಒಡೆದು ಹೋಗದಿದ್ದುದು, ಮತ್ತು ಗಾಳಿ ಕಡಮೆಯಾಗತೊಡಗಿದೆಯೆಂದು ಹಡಗಿನೊಡೆಯನು ಹೇಳಿದ್ದು.

ಗಾಳಿ ತಗ್ಗುತ್ತಿದೆಯೆಂದು ನಮಗೆ ತೋರಿತಾದರೂ, ಹಡಗು ಮರಳು ನೆಲದಲ್ಲಿ ಬಲವಾಗಿ ಕಚ್ಚಿಕೊಂಡುಬಿಟ್ಟಿದ್ದುದರಿಂದ ಅದನ್ನು ಹೊರತೆಗೆಯುವುದು ಅಸಾಧ್ಯವಾದ ಮಾತಾಗಿತ್ತು. ನಾವು ಇದ್ದ ಪರಿಸ್ಥಿತಿ ಭಯಂಕರವಾಗಿತ್ತು. ನಮ್ಮ ನಮ್ಮ ಪ್ರಾಣಗಳನ್ನು ಉಳಿಸಿಕೊಳ್ಳುವುದಕ್ಕೆ ಉಪಾಯ ಚಿಂತನೆಮಾಡುವುದಲ್ಲದೆ ನಮಗೆ ಬೇರೆ ಕೆಲಸವೇನೂ ಇರಲಿಲ್ಲ. ಹಡಗಿನ ಹಿಂಭಾಗದಲ್ಲಿ ಒಂದು ದೋಣಿಯಿತ್ತು ; ಅದು ಬಿರುಗಾಳಿಯಮಳೆ ಹೊಡೆದಾಟದಲ್ಲಿ ಕಿತ್ತುಕೊಂಡು ಹೋಗಿ, ಕಡಲಿನಲ್ಲಿ ಮುಳುಗಿಹೋಗಿರಬೇಕು ಇಲ್ಲವೆ ಕೊಚ್ಚಿಕೊಂಡು ಹೋಗಿರಬೇಕು. ಹೇಗಿದ್ದರೂ ಅದರ ಆಶೆಯನ್ನು ಬಿಡಬೇಕಾಯಿತು. ಹಡಗಿನಲ್ಲಿ ಇನ್ನೊಂದು ದೋಣಿಯೇನೋ ಇತ್ತು ; ಆದರೆ ಅದನ್ನು ಕಡಲೊಳಕ್ಕೆ ಬಿಡುವುದು ಹೇಗೆಂಬುದೇ ಪ್ರಶ್ನೆಯಾಗಿತ್ತು. ಏನಾದರೂ ಆಗಲಿ, ಚರ್ಚೆಗೆ ವೇಳೆಯಿರಲಿಲ್ಲ ; ಪ್ರತಿನಿಮಿಷದಲ್ಲಿಯೂ ಹಡಗು ಚೂರು ಚೂರಾಗುತ್ತಿರುವಂತೆ ನಮಗೆ ಭಾಸವಾಗುತ್ತಿತ್ತು ; ಅದು ಆಗಲೇ ವಾಸ್ತವವಾಗಿ ಒಡೆದುಹೋಗಿತ್ತೆಂಬುದಾಗಿ

ಅಡಿಗಳಷ್ಟು ಆಳದಲ್ಲಿ ತನ್ನೊಡಲೊಳಗೆ ನನ್ನನ್ನು ಅಡಗಿಸಿಕೊಂಡಿತು ; ಒಂದು ಮಹಾಶಕ್ತಿಯು ನನ್ನನ್ನು ರಭಸದಿಂದ ಕರೆಯ ಕಡೆಗೆ ಬಹುದೂರ ಒಯ್ದಂತೆ ನನಗೆ ಭಾಸವಾಯಿತು. ಆದರೆ, ನಾನು ನನ್ನ ಉಸಿರನ್ನು ಬಿಗಿಹಿಡಿದುಕೊಂಡು, ನನ್ನ ಬಲವನ್ನೆಲ್ಲಾ ಪ್ರಯೋಗಿಸಿ, ಇನ್ನೂ ಉಸಿರಿನ್ನು ಮುಂದುಮುಂದಕ್ಕೆ ಈಜಿಕೊಂಡುಹೋಗಲು ಪ್ರಯತ್ನಪಟ್ಟೆ. ಬಹುಹೊತ್ತು ಉಸಿರು ಕಟ್ಟಿರಲು ಸಾಧ್ಯವಾಗದೆ ಎದೆ ಬಿರಿದುಹೋಗುವುದೋ ಎಂಬಂತೆ ವೇದನೆಯಾಗುತ್ತಿರಲು, ನನ್ನ ತಲೆಯೂ ಕೈಗಳೂ ನೀರಮೇಲೆ ನಿಂತಿರುವುದು ವೇದ್ಯವಾಗಿ ತಟ್ಟನೆ ಜೀವ ಬಂದಂತಾಯಿತು ; ಎರಡು ಕ್ಷಣಗಳಲ್ಲಿ ಮತ್ತೆ ಧಾರಾಳವಾಗಿ ಉಸಿರಾಡಿದೆ, ಹೊಸ ಹುರಿಪು ಕೂಡಿಕೊಂಡಿತು. ಮತ್ತೆ ನೀರು ನನ್ನ ಮೇಲೆ ಕೊಚ್ಚಿಕೊಂಡು ಹೋದರೂ, ನನ್ನಲ್ಲಿ ಮೂಡಿದ್ದ ನವಚೇತನವನ್ನವಲಂಬಿಸಿ, ಹಿಂದಿರುಗುವ ತೆರೆಗಳಿಂದ ತಪ್ಪಿಸಿಕೊಳ್ಳಲು ಮಹಾಪ್ರಯತ್ನದಿಂದ ಮುನ್ನುಗ್ಗಿಹೋಗಿ, ಉಸಿರನ್ನು ಕೂಡಿಸಿಕೊಳ್ಳಲು ಕೆಲವುಕಾಲ ಅಚಲನಾಗಿ ನಿಂತಿತ್ತು, ನೀರು ಹಿಂದಿರುಗಿ ಹೋದಮೇಲೆ ಇದ್ದಬದ್ದ ಬಲವನ್ನೆಲ್ಲಾ ಕೂಡಿಸಿಕೊಂಡು ಕರೆಯ ಕಡೆಗೆ ಧಾವಿಸಿದೆ. ಇಷ್ಟಾದರೂ, ಕಡಲ ರೌದ್ರಾವೇಶದಿಂದ ನಾನು ಕೂಡಲೆ ಪಾರಾಗಲು ಸಾಧ್ಯವಾಗಲಿಲ್ಲ; ಕರೆ ಚಪ್ಪಟೆಯಾಗಿದ್ದುದರಿಂದ ಮತ್ತೆರಡು ಸಲ ಅಲೆಗಳು ಉರುಳಿಬಂದು ನನ್ನನ್ನು ಹೊಡೆದುಕೊಂಡು ಹೋದುವು. ಕಡೆಯ ಸಲವಂತೂ ನನ್ನ ಪ್ರಾಣವೇ ಹೋಗಿಬಿಡಬೇಕಾಗಿತ್ತು. ಏಕೆಂದರೆ, ನುಗ್ಗಿಬಂದ ಅಲೆಗಳು ನನ್ನನ್ನು ಒಂದು ಬಂಡೆಗೆ ಡಿಕ್ಕಿಹೊಡೆಯಿಸಿದುವು. ಆಗ ಕೆಲಹೊತ್ತು ನಾನು ಪ್ರಜ್ಞೆಯಿಲ್ಲದೆ ಬಿದ್ದಿದ್ದು, ಅಲೆಗಳ ಕಾಟದಿಂದ ತಪ್ಪಿಸಿಕೊಳ್ಳಲು ನಿಸ್ಸಹಾಯನಾಗಿದ್ದೆ. ಆದರೆ, ಅಲೆಗಳು ಹಿಂದಿರುಗುವುದರೊಳಗಾಗಿ ನಾನು ಎಚ್ಚತ್ತವನಾಗಿ, ಪಾರಾಗಲು ಯೋಚನೆ ಮಾಡುವಷ್ಟರಲ್ಲಿ ಮತ್ತೆಲ್ಲಿ ಅಲೆಗಳು ಹರಿದುಬರುವುವೋ ಎಂಬ ಭೀತಿಯಿಂದ ಯಾವ ಬಂಡೆಗೆ ಡಿಕ್ಕಿಹೊಡೆದಿದ್ದೆನೋ ಅದನ್ನೇ ಬಲವಾಗಿ ಅಪ್ಪಿಕೊಂಡು ಸುಮ್ಮನಿದ್ದೆ. ಈ ಸಲ ಬಂದ ಅಲೆ ಅಷ್ಟು ಎತ್ತರವಾಗಿರಲಿಲ್ಲ ; ಅದು ನನ್ನನ್ನು ಕೆಲಕಾಲ ಮುಳುಗಿಸಿ ಹಿಂದಿರುಗಿದ ಮೇಲೆ ತಳುವದೆ ಒಂದು ಓಟ ಓಡಿದೆ. ಈಗಾಗಲೇ ನಾನು ಕರೆಗೆ ಬಹು ಸಮೀಪದಲ್ಲಿದ್ದೆ ; ಮತ್ತೊಮ್ಮೆ ಬಂದ ಅಲೆ ನನ್ನ ಮೇಲೆ ಹಾಯ್ದುಹೋದರೂ ನನ್ನನ್ನು ಸೆಳೆದುಕೊಂಡು ಹೋಗಲಿಲ್ಲ. ಇನ್ನೊಮ್ಮೆ ನಾನು ಓಡಿದಾಗ ಕರೆಯನ್ನು ಬಿಟ್ಟು ಸುರಕ್ಷಿತವಾದ ಪ್ರಾಂತವನ್ನು ಸೇರಿದ್ದೆ. ಅಲ್ಲಿ ಕರೆಯಂಚಿನ ಕಡಿದು ಬಂಡೆಗಳನ್ನೇರಿ ಹೋಗಿ, ಹುಲ್ಲುನೆಲದ ಮೇಲೆ ಕುಳಿತುಕೊಂಡೆ.

ಬುಡಮೇಲು ಮಾಡಿತು ; ದೋಣಿಯೊಂದು ಕಡೆಯಾಯಿತು, ಒಬ್ಬೊಬ್ಬರೂ ಒಂದೊಂದು ಕಡೆಯಾದೆವು ; "ಹೇ, ದೇವಾ!" ಎಂದು ಪ್ರಾಣೋತ್ಕ್ರಮಣ ಕಾಲ ಸಹಜವಾದ ಮೊರೆಯನ್ನಿಡುವುದಕ್ಕೂ ಅವಕಾಶವಿಲ್ಲದಂತೆ ಎಲ್ಲರೂ ಕ್ಷಣಮಾತ್ರದಲ್ಲಿ ಕಡಲ ಬಸಿರನ್ನು ಹೊಕ್ಕೆವು.

**ನಾನೊಬ್ಬನುಳಿದು ಎಲ್ಲರ ನಷ್ಟ**

ನಾನು ನೀರಿನೊಳಕ್ಕೆ ಮುಳುಗಿಕೊಂಡಾಗ ಉಂಟಾದ ನನ್ನ ಚಿತ್ತ ಕ್ಷೋಭೆಯನ್ನು ಬಣ್ಣಿಸಲು ಮಾತುಗಳಿಲ್ಲ ; ನನ್ನ ಆಗಿನ ಸ್ಥಿತಿಗೆ ಕಾರಣವಾಗಿದ್ದ ಸಮುದ್ರಕ್ಷೋಭೆಯೂ ಅದಕ್ಕೆ ತಕ್ಕ ಹೋಲಿಕೆಯಾಗದು. ನಾನು ಚೆನ್ನಾಗಿ ಈಜು ಬಲ್ಲವನಾಗಿದ್ದರೂ, ಉಸಿರೆಳೆದುಕೊಳ್ಳಲಾಗುವ ಮಟ್ಟಿಗೆ ಅಲೆಗಳ ಆಕ್ರಮಣದಿಂದ ಪಾರಾಗಲು ಸಾಧ್ಯವೆನಿಸಲಿಲ್ಲ. ಯಾವ ಅಲೆ ದೋಣಿಯನ್ನುರುಳಿಸಿತ್ತೋ ಬಹುಶಃ ಅದೇ ಅಲೆ ನನ್ನನ್ನು ಕರೆಯತ್ತ ಬಹು ದೂರ ಕೊಚ್ಚಿಕೊಂಡು ಹೋಗಿ, ರಭಸವನ್ನು ಕಳೆದುಕೊಂಡು, ಕರೆಯ ನೆಲದ ಮೇಲೆ ನನ್ನನ್ನು ಉಳಿಸಿ, ಹಿಂದಿರುಗಿರಬೇಕು ; ನೆಲದ ಮೇಲೆ ಬಿದ್ದಿದ್ದ ನಾನು ಕಡಲನೀರು ಕುಡಿದು ಅರೆಜೀವವಾಗಿದ್ದೆ. ದೇವರ ದಯೆಯಿಂದ ಆಗ ನನಗೆ ತಕ್ಕಮಟ್ಟಿಗೆ ಪ್ರಜ್ಞೆಯೂ ಉಸಿರೂ ಉಳಿದುಕೊಂಡಿದ್ದು, ನಾನು ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ದೂರ ಕರೆಯಾಚೆ ಗಟ್ಟಿನೆಲದ ಮೇಲೆ ಇದ್ದುದರ ಅರಿವುಂಟಾಗಿ, ಕಾಲಮೇಲೆ ಎದ್ದುನಿಂತು, ಇನ್ನೊಂದು ಮಹಾತರಂಗವು ಧಾವಿಸಿ ಬಂದು ನನ್ನನ್ನು ಮರಳಿ ಕಡಲೊಳಕ್ಕೆ ಎಲ್ಲಿ ಸೆಳೆದೊಯ್ಯುವುದೋ ಎಂದು ಹೆದರಿ ಇದ್ದ ಬಲವೆಲ್ಲವನ್ನೂ ಕೂಡಿಸಿಕೊಂಡು ನೆಲನಾಡಿನತ್ತ ಬೇಗಬೇಗನೆ ನಡೆಯತೊಡಗಿದೆ. ಆದರೆ, ಅದರಿಂದ ತಪ್ಪಿಸಿಕೊಳ್ಳಲು ನನಗೆ ಸಾಧ್ಯವಾಗಲಿಲ್ಲ ; ಕಡಲು ಮತ್ತೆ ಬೆಟ್ಟದೆತ್ತರಕ್ಕೆದ್ದು ; ಶತ್ರುವಿನಂತೆ ಬೆಂಬತ್ತಿಬಂದಿತು ; ಅದನ್ನು ಎದುರಿಸಿ ಹೋರಾಡಲು ಸಾಧನವಾಗಲಿ ಸಾಮರ್ಥ್ಯವಾಗಲಿ ನನ್ನಲ್ಲಿರಲಿಲ್ಲ. ನಾನು ಮಾಡಬಹುದಾಗಿದ್ದುದು ಒಂದೇ ಪ್ರಯತ್ನ ; ಬಲವಾಗಿ ಉಸಿರುಕಟ್ಟಿ, ನೀರಮೇಲೆ ತೇಲಿಕೊಂಡು, ಸಾಧ್ಯವಾದರೆ ಹಾಗೆಯೇ ಈಜುತ್ತ ಉಸಿರಾಡಲವಕಾಶ ಮಾಡಿಕೊಂಡು ಕರೆಯತ್ತ ಸಾಗಿಹೋಗುವುದು. ಅಲೆ ಬಂದಾಗ ಕಡಲನೀರು ನನ್ನನ್ನು ಕರೆಯಿಂದಾಚೆ ಬಹುದೂರ ತೆಗೆದುಕೊಂಡು ಹೋಗಿ, ಅಲೆ ಹಿಂದಿರುಗಿದಾಗ ನನ್ನನ್ನು ಮತ್ತೆ ಕಡಲೊಳಕ್ಕೆ ತೆಗೆದುಕೊಂಡು ಹೋಗಲಾರದೆಂಬುದೇ ನನ್ನ ಎಣಿಕೆಯಾಗಿತ್ತು.

ನನ್ನ ಮೇಲೆ ಮರಳಿ ಎರಗಿದ ಪೆರ್ದೆರೆಯು ಸುಮಾರು ಇಪ್ಪತ್ತು ಮೂವತ್ತು

ಬಟ್ಟೆಗಳಿರಲಿಲ್ಲ. ತಿನ್ನುವುದಕ್ಕಾಗಲಿ ಕುಡಿಯುವುದಕ್ಕಾಗಲಿ ಏನೂ ಇರಲೇ ಇಲ್ಲ. ಹಸಿವಿನಿಂದಲೋ ಕ್ರೂರಜಂತುವಿನ ತುತ್ತಾಗಿಯೋ ಸಾಯಬೇಕಾದ ಪರಿಸ್ಥಿತಿಯ ಹೊಸಿಲುಮೆಟ್ಟಿ ನಿಂತಿದ್ದೆ. ನನ್ನ ಆಹಾರಕ್ಕಾಗಿ ಯಾವುದಾದರೂ ಪ್ರಾಣಿಯನ್ನು ಬೇಟೆಯಾಡಿ ಕೊಲ್ಲುವುದಕ್ಕಾಗಲಿ ತನ್ನ ಆಹಾರವಾಗಿ ನನ್ನನ್ನು ಕೊಲ್ಲಬಂದ ಯಾವುದೇ ಪ್ರಾಣಿಯನ್ನಾಗಲಿ ಕೊಂದು ಆತ್ಮಸಂರಕ್ಷಣೆ ಮಾಡಿಕೊಳ್ಳುವುದಕ್ಕಾಗಲಿ ನನ್ನಲ್ಲಿ ಯಾವ ಬಗೆಯ ಆಯುಧವೂ ಇರಲಿಲ್ಲ. ಒಂದು ಮಾತಿನಲ್ಲಿ ಹೇಳುವುದಾದರೆ, ಒಂದು ಚೂರಿ, ಒಂದು ತಂಬಾಕಿನ ಚುಂಗಾಣಿ ಮತ್ತು ಒಂದು ಪೆಟ್ಟಿಗೆಯಲ್ಲಿ ಒಂದಿಷ್ಟು ತಂಬಾಕು – ಇಷ್ಟು ಹೊರತು ನನ್ನಲ್ಲಿ ಇನ್ನೇನೂ ಇರಲಿಲ್ಲ. ಈ ಪರಿಸ್ಥಿತಿ ನನ್ನ ಮನಸ್ಸಿನ ಸುಸ್ಥಿತಿಗೆ ವಜ್ರಾಘಾತವಾಯಿತು. ಹುಚ್ಚನಂತೆ ಕೆಲಹೊತ್ತು ಅಲ್ಲಿಂದಿಲ್ಲಿಗೆ ಹರಿದಾಡಿದೆ. ಇರುಳು ಕವಿದು ಬರಲು, ಉಗ್ರಜಂತುಗಳು ಇರುಳಿನಲ್ಲೇ ತಮ್ಮ ಬೇಟೆಯನ್ನು ಹುಡುಕಿಕೊಂಡು ಹೊರತಿರುಗುವುವೆಂಬ ಆಲೋಚನೆಯುಂಟಾಗಿ, ಅಂತಹ ಜಂತುಗಳು ಬಳಿಗೆ ಬಂದರೆ ಗತಿಯೇನೆಂದು ಚಿಂತಿಸುತ್ತ ಬಹಳ ದುಮ್ಮಾನಗೊಂಡೆ.

ಆ ಪೇಚಿನಲ್ಲಿ ನನಗೆ ಹೊಳೆದ ಉಪಾಯವೊಂದೆ : ಬಳಿಯಲ್ಲಿಯೇ ಪೊದೆಪೊದೆಯಾದ ಒಂದು ಮರವಿತ್ತು ; ಆದರೆ ಅದು ಬರಿಯ ಮುಳ್ಳು ಮುಳ್ಳು. ಅದರ ಮೇಲೆ ಕುಳಿತು ರಾತ್ರಿಯನ್ನೆಲ್ಲಾ ಹೇಗೋ ಕಳೆದು, ಯಾವ ಬಗೆಯ ಸಾವನ್ನಪ್ಪುವುದೆಂಬುದನ್ನು ಮಾರನೆಯ ದಿನ ಆಲೋಚಿಸುವುದಾಗಿ ನಿಶ್ಚಯಮಾಡಿದೆ. ಆ ಹೊತ್ತು ನನಗಂತೂ ಬದುಕುವ ಆಶೆ ಕಂಡುಬರಲಿಲ್ಲ. ಕುಡಿಯಲು ಸೀನೀರು ಸಿಕ್ಕುವುದೇ ನೋಡೋಣವೆಂದು ಕರೆಯಿಂದ ಒಂದು ಫರ್ಲಾಂಗಿನಷ್ಟು ದೂರ ಹುಡುಕುತ್ತ ಹೊರಟೆ. ನನ್ನ ಅದೃಷ್ಟಕ್ಕೆ ಸೀನೀರಿದ್ದ ಸ್ಥಳ ದೊರೆತು, ಹೊಟ್ಟೆಹಿಡಿಯುವಷ್ಟು ನೀರು ಕುಡಿದು, ಹಸಿವನ್ನು ತಡೆಗಟ್ಟುವುದಕ್ಕಾಗಿ ಒಂದು ಚೂರು ತಂಬಾಕನ್ನು ಬಾಯಿಗೆ ಹಾಕಿಕೊಂಡೆ. ತರುವಾಯ ಆ ಮರವನ್ನು ಹತ್ತಿ, ನಿದ್ದೆ ಹತ್ತಿದ ಮೇಲೂ ಎಡೆತಪ್ಪಿ ಬೀಳದ ರೀತಿಯಲ್ಲಿ ಆಯವಿಡಿದು ಅಲ್ಲಿ ಭದ್ರವಾಗಿ ಕುಳಿತು, ಆತ್ಮರಕ್ಷಣೆಗಾಗಿ ಒಂದು ಕೋಲನ್ನು ಕತ್ತರಿಸಿಕೊಂಡು ಕೈಲಿ ಹಿಡಿದು, ಮರದ ಮೇಲೆ ಬಿಡಾರಮಾಡಿಕೊಂಡು ನಿದ್ದೆಹೋದೆ. ಬಹಳ ಆಯಾಸಗೊಂಡಿದ್ದ ನನಗೆ ಬಹುಬೇಗನೆ ನಿದ್ದೆ ಬಂದಿತು. ಬಹುಶಃ ನನ್ನ ಸ್ಥಿತಿಯಲ್ಲಿ ಇನ್ನು ಯಾರೇ ಇದ್ದರೂ ನಾನು ಅಂದು ಹೊಂದಿದಂತೆ ಗಾಢನಿದ್ರೆಯನ್ನು ಹೊಂದಿದ್ದಿರಲಾರರು. ಗಾಢನಿದ್ರೆಯ ಪ್ರಭಾವದಿಂದ ಮಾರನೆಯ ದಿನ ಹೊಸ ಮನುಷ್ಯನಾಗಿ ಎದ್ದೆ.

* * * *

ಈಗ ನಾನು ಅಪಾಯದಿಂದ ಪಾರಾಗಿ ಜೀವದಿಂದ ಉಳಿದುಕೊಂಡಿದ್ದಕ್ಕಾಗಿ ದೇವರಿಗೆ ನನ್ನ ಕೃತಜ್ಞತೆಯನ್ನು ಸಮರ್ಪಿಸಿದೆ. ಆಗ ನನ್ನಲ್ಲಿ ಮೂಡಿದ್ದ ಪರಮಾನಂದದ ಸ್ಥಿತಿಯನ್ನು ಮಾತುಗಳಲ್ಲಿ ಬಣ್ಣಿಸಲು ಸಾಧ್ಯವಿಲ್ಲ. ನೀರಿನ ಗೋರಿಯಿಂದ ನಾನು ಎದ್ದುಬಂದು ಜೀವದಾನವನ್ನು ಹೊಂದಿದ್ದೆ. ಘೋರ ಪಾಪಕೃತ್ಯವನ್ನೆಸಗಿದವನೊಬ್ಬನ ಕೊರಳಿಗೆ ಉರಲುಹಾಕಿ ಅದರ ಕುಣಿಕೆಯನ್ನು ಎಳೆಯಬೇಕೆಂದಿರುವ ಕ್ಷಣದಲ್ಲಿಯೇ ಅವನಿಗೆ ಕ್ಷಮಾದಾನ ಮಾಡಿದರೆ ಅವನ ಮನಸ್ಥಿತಿ ಹೇಗಿರಬಹುದೆಂಬುದನ್ನು ಊಹಿಸಿಕೊಂಡರೆ ನನ್ನ ಆಗಿನ ಸ್ಥಿತಿಯನ್ನೂ ಊಹಿಸಿಕೊಳ್ಳಬಹುದು.

"ಸಂತಸವಾಗಲಿ ಅಳಲೇ ಆಗಲಿ
ತಟ್ಟನೆ ಸಮನಿಸಲು
ಎಂತಾದೊಡಮೆಮ್ಮನು ಕವಿಯುವುವು
ದಿಕ್ಕೇ ಕಾಣದೊಲು."

ಆ ಸ್ಥಿತಿಯಲ್ಲಿ, ನಾನು ನನ್ನ ಕೈಗಳನ್ನು ಮೇಲಕ್ಕೆ ಎಸೆದಾಡುತ್ತ, ನನ್ನ ಬಿಡುಗಡೆಯ ಪರಿಭಾವನೆಯಲ್ಲಿ ಮೈಮರೆತು ಅಂಗಾಂಗಗಳನ್ನು ಹಲವಂದದಲ್ಲಿ ಆಡಿಸುತ್ತ, ಕರೆಯ ಮೇಲೆ ಆನಂದೋನ್ಮತ್ತನಾಗಿ ಅಲ್ಲಿದಿಂಲ್ಲಿಗೆ ಹಾಸು ಹೊಕ್ಕಾಗಿ ಹರಿದಾಡಿದೆ. ಆಗ ನನ್ನ ಒಡನಾಡಿಗಳ ನೆನಪು ಬಾರದೆ ಇರಲಿಲ್ಲ. ನನ್ನನ್ನುಳಿದು ಎಲ್ಲರೂ ಕಡಲಿನಲ್ಲಿ ಮುಳುಗಿಹೋಗಿರಬೇಕೆಂದು ಬಗೆದೆ. ಆಮೇಲೆ ಮುಂದೆಯೂ ಕೂಡ ಅವರಲ್ಲಿ ಯಾರನ್ನೂ ನಾನು ಕಾಣಲಿಲ್ಲ ; ಮೂರು ಹ್ಯಾಟುಗಳು, ಒಂದು ಟೋಪಿ, ಎರಡು ಜೋಡುಗಳು – ಇವು ಹೊರತಾಗಿ ಅವರ ಸುಳಿವು ಬೇರೆ ಯಾವುದೂ ಕಂಡುಬರಲಿಲ್ಲ.

ಮುಳುಗಿಹೋಗಿದ್ದ ಹಡಗಿನ ಕಡೆಗೊಮ್ಮೆ ನನ್ನ ದೃಷ್ಟಿಯನ್ನು ಬೀರಿದೆ. ಅದು ಬಹು ದೂರದಲ್ಲಿತ್ತು. ಕಡಲೆಲ್ಲ ಅಲೆಯೋ ಅಲೆ, ನೊರೆಯೋ ನೊರೆ, ತುಂತುರೋ ತುಂತುರು. ಇಬ್ಬನಿಯ ಮುಸುಕಿನಾಚೆ ಕಾಣುವ ಗುಡ್ಡಸಾಲಿನಂತೆ ಹಡಗು ಅಸ್ಪಷ್ಟವಾಗಿ ಕಾಣುತ್ತಿತ್ತು. "ಹಡಗಿನ ಗತಿ ಅಂತಿರಲು ನಾನು ಮುಟ್ಟಿದುದು ಹೇಗೆ ! ಏನಚ್ಚರಿ! ಆಹಾ, ದೈವವೇ !" ಎಂದು ಅಚ್ಚರಿಪಟ್ಟೆ.

ಹೀಗೆ, ನನ್ನಲ್ಲಿ ನಾನು ಸಮಾಧಾನಗೊಂಡಮೇಲೆ, ನಾನು ಯಾವ ಪರಿಯ ಪ್ರದೇಶದಲ್ಲಿರುವೆನೆಂಬುದನ್ನು ಅರಿಯುವುದಕ್ಕಾಗಿ ನನ್ನ ಸುತ್ತ ತಿರುಗಿ ಆರೈದೆ. ಮುಂದೇನು ಮಾಡಬೇಕೆಂಬುದು ನನ್ನ ಮೊದಲ ಆಲೋಚನೆಯಾಗಿತ್ತು. ಕ್ಷಣಹೊತ್ತಿನ ಹಿಂದೆ ನನ್ನಲ್ಲಿ ಮೂಡಿದ್ದ ಮನಸ್ಸಮಾಧಾನ ಮಾಯವಾಗಿ, ನಾನು ಪ್ರಾಣಾಪಾಯದಿಂದ ಪಡೆದಿದ್ದ ಬಿಡುಗಡೆ ಬಹು ಭಯಂಕರವಾಗಿ ಕಂಡಿತು. ನಾನು ಒದ್ದೆಮುದ್ದೆಯಾಗಿದ್ದೆ, ಬದಲಾಯಿಸಿ ಹಾಕಿಕೊಳ್ಳಲು ಬೇರೆಯ

ದೊಡ್ಡ ಸಮಸ್ಯೆಯಾಯಿತು. ಹಡಗು ನೆಲಕಚ್ಚಿ ನೀರ ಮೇಲೆ ಬಹು ಎತ್ತರದಲ್ಲಿ ನಿಂತಿದ್ದಿತು. ಹತ್ತುವುದಕ್ಕೆ ಯಾವ ಆಸರೆಯೂ ಇದ್ದಂತೆ ಕಾಣಲಿಲ್ಲ. ಈಜಿಕೊಂಡು ಎರಡು ಸಲ ಹಡಗನ್ನು ಬಳಸಿದೆ. ಆಗ ಇದ್ದಕ್ಕಿದ್ದಂತೆ ಹಡಗಿನ ಮುಂಭಾಗದ ಸರಪಣಿಗಳಿಂದ ಒಂದು ತುಂಡುಹಗ್ಗ ನೇಲುತ್ತಿದ್ದುದು ಕಂಡಿತು. ಬಹಳ ಪ್ರಯಾಸದಿಂದ ಅದನ್ನು ನಿಲುಕಿಸಿಕೊಂಡು, ಕಡೆಗೂ ಹಡಗನ್ನು ಹತ್ತಿದೆ. ಹಡಗಿನ ಹಿಂಭಾಗವು ಮೇಲಕ್ಕೆ ಎತ್ತಿಕೊಂಡು, ತಲೆಯ ಭಾಗವು ನೀರಮಟ್ಟಕ್ಕೆ ಇಳಿಯಬಿದ್ದಿತ್ತು. ಹೀಗಾಗಿ, ಮುಂಭಾಗವೆಲ್ಲ ನೀರಿನಿಂದ ತುಂಬಿಕೊಂಡು, ಹಿಂಭಾವೆಲ್ಲ ನೀರ ಮೇಲಿದ್ದುದರಿಂದ ಆ ಭಾಗದಲ್ಲಿದ್ದ ಪದಾರ್ಥಗಳಾವುವೂ ತೇವವಾಗಿರಲಿಲ್ಲ. ನಾನು ಮೊದಲು ಮಾಡಿದ ಕೆಲಸವೇನೆಂದರೆ, ಯಾವ ಪದಾರ್ಥ ಸುರಕ್ಷಿತವಾಗಿತ್ತು, ಯಾವುದು ಕೆಟ್ಟಿತ್ತು ಎಂಬುದನ್ನು ಕಂಡುಕೊಳ್ಳುವುದು. ಹಾಗೆ ಪರಿಶೀಲಿಸಲಾಗಿ, ಹಡಗಿನ ಆಹಾರಸಾಮಗ್ರಿಯೆಲ್ಲವೂ ನೀರು ಸೋಕದೆ ಸುರಕ್ಷಿತವಾಗಿದ್ದುದು ಕಂಡುಬಂದಿತು. ಆಗ ನನಗೆ ತುಂಬ ಹಸಿವಾಗಿದ್ದುದರಿಂದ, ರೊಟ್ಟಿಯ ಕೋಣೆಗೆ ಹೋಗಿ, ನನ್ನ ಜೇಬುಗಳ ತುಂಬ ಬಿಸ್ಕತ್ತುಗಳನ್ನು ತುಂಬಿಕೊಂಡು, ಹೊತ್ತಿಲ್ಲದ್ದರಿಂದ ತಿನ್ನುತ್ತಲೇ ನನ್ನ ಮುಂದಿನ ಪರಿಶೀಲನಾಕಾರ್ಯದಲ್ಲಿ ತೊಡಗಿದೆ. ದೊಡ್ಡ ಕೋಣೆಯಲ್ಲಿ ಸ್ವಲ್ಪ 'ರಂ' ಮದ್ಯವೂ ದೊರಕಿತು ; ನನಗೆ ಆಗ ಅತ್ಯಾವಶ್ಯಕವಾಗಿದ್ದ ಹುಮ್ಮಸ್ಸು ಅದರ ಪಾನದಿಂದ ತುಂಬಿಬಂದಿತು. ನನಗೆ ಆವಶ್ಯವಾಗಿದ್ದ ಸಾಮಗ್ರಿಯನ್ನು ತುಂಬಿಕೊಂಡು ಹೋಗಲು ದೋಣಿಯ ಹೊರತಾಗಿ ಇನ್ನೇನೂ ಬೇಕಾಗಿರಲಿಲ್ಲ.

**ತೆಪ್ಪದ ಮೇಲೆ ಸರಕು ಸಾಗಣೆ**

ದೊರೆಯದಿದ್ದುದನ್ನು ಬಯಸುತ್ತ ಸುಮ್ಮನೆ ಕುಳಿತಿರುವುದರಿಂದ ಏನೂ ಫಲವಿರಲಿಲ್ಲ ; ಈ ನಿಸ್ಸಹಾಯಸ್ಥಿತಿ ನನ್ನ ಕಾರ್ಯಪ್ರವರ್ತನಾಸಕ್ತಿಯನ್ನು ಪ್ರಚೋದನಗೊಳಿಸಿತು. ಹಡಗಿನಲ್ಲಿದ್ದ ಕೆಲವು ದೂಲಗಳು, ಜಂತೆಗಳು ಮತ್ತು ಒಂದೆರಡು ಮೇಲ್ಕೂವೆಗಳು – ಇವುಗಳನ್ನೆಲ್ಲ ಸಂಗ್ರಹಿಸಿ, ತೇಲಿ ಹೊರಟುಹೋಗದಂತೆ ಹಗ್ಗಕ್ಕೆ ಬಿಗಿದು ಹಡಗಿನಿಂದಾಚೆಗೆ ಕಡಲ ಮೇಲಕ್ಕೆ ಎಸೆದೆ. ಬಳಿಕ, ಹಡಗಿನ ಪಕ್ಕದಿಂದ ಇಳಿದುಹೋಗಿ, ಅವುಗಳಲ್ಲಿ ನಾಲ್ಕನ್ನು ನನ್ನ ಕಡೆಗೆ ಎಳೆದುಕೊಂಡು, ಎರಡು ಕೊನೆಗಳಲ್ಲೂ ಅವುಗಳನ್ನು ಒಟ್ಟು ಗೂಡಿಸಿ ಚೆನ್ನಾಗಿ ಬಿಗಿದು, ಒಂದು ತೆಪ್ಪವನ್ನು ಸಿದ್ಧಗೊಳಿಸಿದೆ. ಅದರ ಮೇಲೆ ಅಡ್ಡಡ್ಡನಾಗಿ ಎರಡುಮೂರು ತುಂಡುಹಲಗೆಗಳನ್ನು ಇಟ್ಟು, ಅದರ ಮೇಲೆ

## ಅಧ್ಯಾಯ ೩

# ಒಡೆದ ಹಡಗಿಗೆ ಈಜಿಕೊಂಡು ಹೋದದ್ದು

ನಾನು ಎಚ್ಚರಗೊಂಡಾಗ ಚೆನ್ನಾಗಿ ಹಗಲಾಗಿತ್ತು. ಬಿರುಗಾಳಿಮಳೆ ತಗ್ಗಿ, ಕಡಲು ಮೊದಲಿನಂತೆ ಉಕ್ಕೆದ್ದು ಮೊರೆಯುತ್ತಿರಲಿಲ್ಲ. ಆದರೆ ನನಗೆ ಅಚ್ಚರಿಗೊಳಿಸಿದ ನೋಟವೇನೆಂದರೆ, ಮರಳಿನಲ್ಲಿ ಹೂತುಹೋಗಿದ್ದ ಹಡಗು ಕಡಲಿನುಬ್ಬರದ ಪರಿಣಾಮವಾಗಿ ನಾನು ಡಿಕ್ಕಿಹೊಡೆದಿದ್ದ ಬಂಡೆಯ ಬಳಿ ತೇಲುತ್ತಿತ್ತು ! ಹಡಗು ಹೆಚ್ಚೆಂದರೆ ಒಂದು ಮೈಲಿ ದೂರದಲ್ಲಿತ್ತು ; ನನಗೆ ಉಪಯೋಗಕ್ಕೆ ಬರುವಂಥ ಕೆಲವು ಪದಾರ್ಥಗಳನ್ನು ತರಬೇಕೆಂಬ ಉದ್ದೇಶದಿಂದ ನಾನು ಹಡಗಿಗೆ ಹೋಗಬಯಸಿದೆ.

ನಾನು ನನ್ನ ಹಿಂದಿನ ರಾತ್ರಿಯ ಬಿಡಾರವಾಗಿದ್ದ ಮರದಿಂದ ಇಳಿದು ಬಂದು ಸುತ್ತಮುತ್ತ ನೋಡಿದಾಗ ನನ್ನ ಕಣ್ಣಿಗೆ ಮೊದಲು ಬಿದ್ದ ಪದಾರ್ಥವೆಂದರೆ ದೋಣಿ. ಅದು ನನ್ನ ಬಲಗಡೆ ಸುಮಾರು ಎರಡು ಮೈಲಿಗಳಾಚೆ ಬಿದ್ದಿದ್ದಿತು. ಅದನ್ನು ನೋಡೋಣವೆಂದು ನಡೆದುಹೋಗಲು, ಅದಕ್ಕೂ ನನಗೂ ನಡುವೆ ಅರ್ಧಮೈಲಿಯಗಲದ ಒಂದು ಖಾರಿಯಿತ್ತು. ಹಡಗಿನ ಬಳಿಗೆ ಹೋಗುವುದೇ ಸದ್ಯಕ್ಕೆ ಹೆಚ್ಚು ಪ್ರಯೋಜನಕರವೆಂದು ಬಗೆದು ಅಲ್ಲಿಂದ ಹಿಂದಿರುಗಿದೆ.

ಮಧ್ಯಾಹ್ನದ ಮೇಲೆ ತುಸ ಹೊತ್ತಾದ ಬಳಿಕ, ಕಡಲು ಬಹು ಶಾಂತವಾಗಿದ್ದಂತೆ ಕಂಡುಬಂದಿತು. ಕಡಲಿನುಬ್ಬರವೂ ಇಳಿದುಹೋಗಿ, ಹಡಗು ಕಾಲುಮೈಲಿಯಷ್ಟು ದೂರದಲ್ಲಿ ಇರುವಂತೆ ತೋರಿತು. ಆಗ ನನ್ನ ದುಃಖವು ಮರುಕೊಳಿಸಿತು ; ನಾವೆಲ್ಲರೂ ಹಡಗನ್ನೇ ನಂಬಿಕೊಂಡು ಅದರಲ್ಲಿಯೇ ಉಳಿದಿದ್ದರೆ ಎಲ್ಲರೂ ಸುರಕ್ಷಿತವಾಗಿರಬಹುದ್ದಾಗಿದ್ದಿತೆಂದೂ, ಈಗಿನಂತೆ ನಾನು ಒಂಟಿಯಾಗಿರಬೇಕಾಗಿಲ್ಲದೆ ಎಲ್ಲರೂ ಕರೆಗೆ ಬರಬಹುದಾಗಿದ್ದಿತೆಂದೂ ತೋರಿತು. ಈ ನೆನಕೆಯಿಂದ ಕಣ್ಣಿನಲ್ಲಿ ನೀರೂರಿತು. ಮಿಂಚಿಹೋದದ್ದಕ್ಕೆ ಚಿಂತಿಸಿ ಫಲವಿಲ್ಲೆಂದು ಎಣಿಸಿ, ಹಡಗಿನ ಬಳಿಗೆ ಹೋಗಲು ನಿಶ್ಚಯಿಸಿದೆ. ಹಾಗೆ ನಿಶ್ಚಯಿಸಿ, ಬಹಳ ಸೆಕೆಯಾದದ್ದರಿಂದ ಬಟ್ಟೆಗಳನ್ನೆಲ್ಲ ಕಳಚಿ, ಕಡಲಿನಲ್ಲಿ ನುಗ್ಗಿ ಹೋದೆ. ಆದರೆ, ಹಡಗಿನ ಬಳಿಗೆ ಹೋದಾಗ, ಅದರ ಮೇಲಕ್ಕೆ ಹೇಗೆ ಹತ್ತಿ ಹೋಗುವುದೆಂಬುದೇ

ನನ್ನ ಮುಂದಿನ ಯೋಚನೆ ಮದ್ದು ಗುಂಡು ಮತ್ತು ಕೋವಿಗಳ ಕಡೆಗೆ ತಿರುಗಿತು. ಹಡಗಿನ ದೊಡ್ಡ ಕೋಣೆಯಲ್ಲಿ ಕಡಲುಕೋಳಿಯನ್ನು ಬೇಟೆಯಾಡಲು ಉಪಯೋಗಿಸುವ ಎರಡು ಕೋವಿಗಳಲ್ಲದೆ ಎರಡು ಪಿಸ್ತೂಲುಗಳೂ ಇದ್ದುವು. ಇವುಗಳನ್ನು ಮೊದಲು ತೆಗೆದುಕೊಂಡೆ ; ಒಂದಿಗೆ, ಮದ್ದುತುಂಬಿದ್ದ ಕೊಂಬುಗಳೂ ಒಂದು ಸಣ್ಣ ಸಂಚಿಯ ತುಂಬ ಗುಂಡೂ ಎರಡು ಹಳೆಯ ತುಕ್ಕುಹಿಡಿದಿದ್ದ ಕತ್ತಿಗಳೂ ದೊರೆತುವು : ಇವುಗಳನ್ನೂ ತೆಗೆದುಕೊಂಡೆ. ಹಡಗಿನಲ್ಲಿ ಮೂರು ಪೀಪಾಯಿಗಳ ತುಂಬ ಮದ್ದು ಇದ್ದುದು ಆಗ ನನ್ನ ನೆನಪಿಗೆ ಬಂದು, ಅವುಗಳಿಗಾಗಿ ಬಹಳ ಹುಡುಕಾಡಿದೆ. ಕಡೆಗೆ ಅವು ದೊರೆತುವು. ಅವುಗಳಲ್ಲಿ ಒಂದು ಪೀಪಾಯಿಗೆ ನೀರು ನುಗ್ಗಿ ಮದ್ದು ನೆನೆದುಹೋಗಿತ್ತು. ಉಳಿದೆರಡು ಪೀಪಾಯಿಗಳನ್ನೂ ಕಲೆಹಾಕಿದ್ದ ಆಯುಧ ಮುಂತಾದುವನ್ನೂ ತೆಪ್ಪದ ಮೇಲಕ್ಕೆ ಸಾಗಿಸಿದೆ. ಈಗ ತೆಪ್ಪದ ಮೇಲೆ ಹಿಡಿಯುವಷ್ಟು ಸರಕನ್ನು ಅಡಕಿಯಾಗಿತ್ತು. ತೆಪ್ಪವನ್ನು ಹೇಗೆ ಕರೆಯ ಕಡೆಗೆ ನಡೆಸಿಕೊಂಡು ಹೋಗುವುದೆಂಬುದೇ ನನ್ನ ಮುಂದಿನ ಪ್ರಶ್ನೆಯಾಗುಳಿಯಿತು. ಹಾಯಿಯಾಗಲಿ ಹುಟ್ಟಾಗಲಿ ಚಾಲಕ ಸಾಧನವಾಗಲಿ ಇಲ್ಲದ ಈ ನನ್ನ ನವೀನ ನಾವೆಯನ್ನು ಬುಡಮೇಲು ಮಾಡಲು ಮೇಲುಗಾಳಿಯ ಒಂದು ಮೆಲ್ಲುರುಬು ಸಾಕಾಗಿತ್ತು.

ಆದರೆ, ಪರಿಸ್ಥಿತಿ ನನಗೆ ಅನುಕೂಲವಾಗಿಯೇ ಇತ್ತು : ಕಡಲು ಶಾಂತವಾಗಿತ್ತು ; ಕಡಲ ಉಬ್ಬರ ಕರೆಯ ಕಡೆಗೆ ತುಯ್ಯುತ್ತಿತ್ತು ; ಇದ್ದ ಅಲ್ಪಸ್ವಲ್ಪ ಗಾಳಿ ಕಡಲ ಕಡೆಗೇ ಬೀಸುತ್ತಿತ್ತು. ಅಷ್ಟರಲ್ಲಿ, ದೋಣಿಗೆ ಸೇರಿದ್ದ ಎರಡುಮೂರು ಮುರಿದ ಹುಟ್ಟುಗಳೂ, ಪೆಟ್ಟಿಗೆಯಲ್ಲಿದ್ದ ಆಯುಧಗಳಲ್ಲದೆ ಇನ್ನೆರಡು ಗರಗಸಗಳೂ ಒಂದು ಕೊಡಲಿಯೂ ಒಂದು ಸುತ್ತಿಗೆಯೂ ಲಭಿಸಿದವು. ಇಷ್ಟು ಸರಕನ್ನು ಹಾಕಿಕೊಂಡು ತೆಪ್ಪವನ್ನ ಕಡಲಿನಲ್ಲಿ ಹರಿಯಬಿಟ್ಟೆ. ಒಂದು ಮೈಲಿಯಷ್ಟು ದೂರ ತೆಪ್ಪ ತಡೆಯಿಲ್ಲದೆ ಸಾಗಿತು. ಅದು ಕರೆಯನ್ನು ಮುಟ್ಟಿದಾಗ, ನಾನು ಮೊದಲು ಎಲ್ಲಿ ಇಳಿದಿದ್ದೆನೋ ಅಲ್ಲಿಂದ ತುಸದೂರಕ್ಕೆ ಸರಿದಿತ್ತು. ಇದರಿಂದ, ಆ ಸ್ಥಳದಲ್ಲಿನ ನೀರಿನ ಒಳಹರಿತ ಇರಬಹುದೆಂಬುದಾಗಿ ತೋರಿ, ಅಲ್ಲಿ ಒಂದು ನದಿಯ ಮುಖವೋ ನೀರಿನ ಒಳಚಾಚೋ ಇರಬೇಕೆಂಬುದಾಗಿ ನಿರ್ಣಯಿಸಿದೆ. ನನ್ನ ಊಹೆ ನಿಜವಾಗಿದ್ದ ಭಾಗದಲ್ಲಿ, ನನ್ನ ಸರಕನ್ನು ತಂದಿಳುಹಲು, ಒಂದು ರೇವು ದೊರೆತಂತಾಗುತ್ತಿತ್ತು.

ನಾನು ಊಹಿಸಿದಂತೆಯೇ ಇತ್ತು. ನೆಲ ಅಲ್ಲಿ ಬಾಯಿ ಬಿಟ್ಟುಕೊಂಡಂತೆ ಇದ್ದು, ಕಡಲ ಭರತ ರಭಸದಿಂದ ಅಲ್ಲಿ ನುಗ್ಗಿ ಹೋಗುತ್ತಿತ್ತು. ಹೀಗೆ ನುಗ್ಗುತ್ತಿದ್ದ

ನಡೆದಾಡಬಹುದೆಂಬುದನ್ನು ಕಂಡುಕೊಂಡೆ. ಆದರೆ, ಅದರ ಮೇಲೆ ಹೆಚ್ಚು ಭಾರವನ್ನು ಹೇರುವಂತಿರಲಿಲ್ಲ. ಆದ್ದರಿಂದ ಬಿಡಿಯಾಗಿ ಬಿದ್ದಿದ್ದ ಇನ್ನೊಂದು ಮೇಲ್ಕೂವೆಯನ್ನು ಹಡಗಿನಲ್ಲಿದ್ದ ಗರಗಸದಿಂದ ಮೂರು ತುಂಡುಗಳಾಗಿ ಕತ್ತರಿಸಿ, ಅವುಗಳನ್ನು ಸಿದ್ಧವಾಗಿದ್ದ ಸಣ್ಣ ತೆಪ್ಪಕ್ಕೆ ಬಹಳ ಶ್ರಮಪಟ್ಟು ಜೋಡಿಸಿದೆ.

ಈಗ ನನ್ನ ತೆಪ್ಪವು ತಕ್ಕಮಟ್ಟಿನ ಭಾರವನ್ನು ತಡೆಯುವಷ್ಟುಮಟ್ಟಿಗೆ ಬಲವಾಗಿತ್ತು. ಮೊತ್ತಮೊದಲು, ದೊರೆತ ಎಲ್ಲ ಹಲಗೆಗಳನ್ನೂ ಅದರ ಮೇಲೆ ಪೇರಿಸಿಟ್ಟೆ ; ತರುವಾಯ ಹಡಗಿನಲ್ಲಿದ್ದ ನಾವಿಕರ ಪೆಟ್ಟಿಗೆಗಳಲ್ಲಿ ಮೂರನ್ನು ಅವಕ್ಕೆ ಹಾಕಿದ್ದ ಬೀಗವೊಡೆದು ತೆರಪು ಮಾಡಿ ತೆಪ್ಪದ ಮೇಲಕ್ಕೆ ಇಳುಹಿದೆ. ಇವುಗಳಲ್ಲಿ ಒಂದರ ತುಂಬ ಹಡಗಿನಲ್ಲಿದ್ದ ರೊಟ್ಟಿ, ಅಕ್ಕಿ, ಚೀಸು, ಒಣಗಿಸಿದ ಆಡಿನಮಾಂಸದ ಐದು ತುಂಡುಗಳು, ಸ್ವಲ್ಪ ಯೂರೋಪಿಯನ್ ಜಾತಿಯ ಮುಸುಕಿನ ಜೋಳದ ಧಾನ್ಯ – ಇವುಗಳನ್ನು ತುಂಬಿದೆ. ಇದ್ದ ಸ್ವಲ್ಪ ಬಾರ್ಲಿ ಮತ್ತು ಗೋಧಿಯನ್ನು ಇಲಿಗಳು ಮುಕ್ಕಿಬಿಟ್ಟಿದ್ದುದನ್ನು ಕಂಡು ನಿರಾಶೆಗೊಂಡೆ. ಹಡಗಿನಲ್ಲಿ ಐದಾರು ಶೀಸೆಗಳ ತುಂಬ ಮದ್ಯವೂ ಐದಾರು ಗ್ಯಾಲನ್ 'ರ್‍ಯಾಕ್' ಹೆಂಡವೂ ಇದ್ದುವು. ಇವನ್ನು ಹಾಗೆ ಹಾಗೆಯೇ ತೆಪ್ಪದಮೇಲೆ ಒಂದು ಕಡೆ ಅಡಕಿದೆ. ಈ ಕೆಲಸದಲ್ಲಿ ನಿರತನಾಗಿದ್ದ ವೇಳೆಯಲ್ಲಿ ಸಾಮಾನ್ಯರೀತಿಯ ಕಡಲುಬ್ಬರವೆದ್ದು, ಕರೆಯಮೇಲೆ ಹಾಯ್ದು, ಇಳಿದು ಹಿಂದಿರುಗಿದಾಗ ಅಲ್ಲಿ ನಾನು ಬಿಚ್ಚಿಹಾಕಿದ್ದ ನನ್ನ ಅಂಗಿ, ಷರಟು, ಗಿಡ್ಡಂಗಿ ಮೊದಲಾದುವನ್ನು ಕೊಚ್ಚಿಕೊಂಡು ಹೋಯಿತು ; ಇದನ್ನು ನೋಡಿದ ನನಗೆ ಬಹು ವ್ಯಥೆಯಾಯಿತು. ಈಗ ನನ್ನ ಮೈ ಮೇಲಿದ್ದುದು ಷರಾಯಿ ಮತ್ತು ಕಾಲುಚೀಲಗಳು ಮಾತ್ರ. ಆದ್ದರಿಂದ, ಸಹಜವಾಗಿ ನನ್ನ ಯೋಚನೆ ನನ್ನ ಬಟ್ಟೆಬರೆಗಳ ಕಡೆಗೆ ಹರಿಯಿತು. ಸಿಕ್ಕಿದಷ್ಟು ಉಡುಪನ್ನು ಕಲೆಹಾಕಿ, ಸದ್ಯದ ಉಪಯೋಗಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ತೆಗೆದುಕೊಂಡೆ. ಕೂಡಲೆ ನನ್ನ ಗಮನವು ನನಗೆ ಬೇಕೆನಿಸಿದ ಇತರ ಪದಾರ್ಥಗಳ ಕಡೆಗೆ ಚಲಿಸಿತು. ಉದಾಹರಣೆಗೆ, ಕರೆಯ ಮೇಲೆ ಕೆಲಸ ಮಾಡಲು ಕೆಲವು ಆಯುಧಗಳು ಬೇಕಾಗಿದ್ದುವು. ಬಹಳ ಹುಡುಕಾಡಿದಮೇಲೆ, ಬಡಗಿಯ ಪೆಟ್ಟಿಗೆ ದೊರಕಿತು ; ಆಗ ನನಗೆ ಅದು ಎಷ್ಟು ಅಮೂಲ್ಯವಾಗಿ ಕಂಡಿತೆಂದರೆ, ಹಡಗಿನ ತುಂಬ ಹೊನ್ನು ದೊರಕಿದ್ದರೂ ಅದು ಪೆಟ್ಟಿಗೆಯಷ್ಟು ಬೆಲೆ ಬಾಳುವುದಾಗಿರುತ್ತಿರಲಿಲ್ಲ. ಆ ಪೆಟ್ಟಿಗೆಯಲ್ಲಿ ಏನೇನಿದೆಯೆಂಬುದನ್ನು ನೋಡುವಷ್ಟು ಕಾಲವನ್ನೂ ಕಳೆಯದೆ ಅದನ್ನು ಇದ್ದುದಿದ್ದಂತೆ ತೆಪ್ಪದ ಮೇಲಕ್ಕೆ ಇಳುಹಿಕೊಂಡೆ.

ಬರುವಂತಿರಲಿಲ್ಲ : ನಾನಿದ್ದುದು ಒಂದು ಭೂಖಂಡದ ತೀರವೋ ದ್ವೀಪವೋ, ಜನವಸತಿಯುಳ್ಳದ್ದೋ ವಿಜನವಾದದ್ದೋ, ಕ್ರೂರ ಜಂತುಗಳಿಂದ ತುಂಬಿದ್ದುದೋ ಯಾವ ಪ್ರಾಣಿಯೂ ಇಲ್ಲದ ಬೆಂಗಾಡೋ – ಒಂದು ನನಗೆ ಗೊತ್ತಿರಲಿಲ್ಲ. ನಾನಿದ್ದೆಡೆಯಿಂದ ಒಂದು ಮೈಲಿ ದೂರದಲ್ಲಿ ಗುಡ್ಡಸಾಲಿನ ನಡುವೆ ಒಂದು ಎತ್ತರವಾದ ಗುಡ್ಡವಿದ್ದುದು ಕಂಡುಬಂದಿತು. ಒಂದು ಕೋವಿಯನ್ನೂ ಒಂದು ಪಿಸ್ತೂಲನ್ನೂ ಮದ್ದು ತುಂಬಿದ ಒಂದು ಕೊಂಬನ್ನೂ ತೆಗೆದುಕೊಂಡು ಗುಡ್ಡವನ್ನು ಕುರಿತು ಹೊರಟೆ. ಬಹಳ ಪ್ರಯಾಸದಿಂದ ಗುಡ್ಡವನ್ನು ಹತ್ತಿಹೋಗಿ, ಅದರ ನೆತ್ತಿಯ ಮೇಲೆ ನಿಂತು ಸುತ್ತಲೂ ಕಣ್ಣು ಹರಿಸಿದೆ : ಆಹಾ ! ನನ್ನ ದುರ್ದೈವವೇ! ನಾನಿದ್ದುದು ಒಂದು ದ್ವೀಪದಲ್ಲಿ ! ಸುತ್ತಲೂ ಕಡಲು ಬಳಸಿಕೊಂಡಿತ್ತು ; ನೆಲವೆಂಬುದರ ಸುಳಿವೇ ಇಲ್ಲ. ದೂರದಲ್ಲೆಲ್ಲೋ ಕೆಲವು ಬಂಡೆಗಳು ಮತ್ತು ಇದಕ್ಕಿಂತ ಸಣ್ಣವಾದ ಇನ್ನೆರಡು ದ್ವೀಪಗಳು. ಇಷ್ಟೇ ಅಲ್ಲದೆ, ದ್ವೀಪವು ಬೆಂಗಾಡಾಗಿದ್ದುದೂ ಸುಸ್ಪಷ್ಟವಾಯಿತು ; ನಿರ್ಜನವಾದುದೆಂದೂ ಊಹಿಸಲು ಅವಕಾಶವಿತ್ತು. ಕಾಡುಮೃಗಗಳು ಯಾವುವೂ ಕಣ್ಣಿಗೆ ಬೀಳದಿದ್ದರೂ ಅವು ಇರಲೇಬೇಕೆನ್ನಿಸಿತು. ಆದರೂ, ಹಿಂಡು ಹಿಂಡು ಕಾಡುಕೋಳಿಗಳು ಕಂಡುಬಂದವು. ಕೆಲವು ಕೋಳಿಗಳನ್ನು ಕೊಂದೆ. ಅವು ತಿನ್ನಲು ಯೋಗ್ಯವೇ ಅಲ್ಲವೇ ಎಬುದು ಮಾತ್ರ ನನಗೆ ಗೊತ್ತಾಗಲಿಲ್ಲ. ಹಿಂದಿರುಗಿ ಬರುವಾಗ ಮರವೊಂದರ ಮೇಲೆ ಕುಳಿತಿದ್ದ ದೊಡ್ಡ ಹಕ್ಕಿಯೊಂದನ್ನು ಗುಂಡುಹೊಡೆದು ಕೊಂದು ಕೆಡವಿದೆ. ಪ್ರಪಂಚವು ಸೃಷ್ಟಿಯಾದಂದಿನಿಂದ ಅಲ್ಲಿ ನಾನು ಹಾರಿಸಿದ್ದೇ ಮೊದಲನೆಯ ಗುಂಡೆಂದು ನನ್ನ ನಂಬಿಕೆ : ಏಕೆಂದರೆ, ನಾನು ಗುಂಡು ಹಾರಿಸಿದ್ದೇ ತಡ, ಕಾಡುಮೇಡಿನ ನಾನಾ ದಿಗ್ಭಾಗಗಳಿಂದ ಬಗೆಬಗೆಯ ಕಾಡುಕೋಳಿಗಳು ಹಲವಂದದಲ್ಲಿ ಚೀರುತ್ತ ಕೀರುತ್ತ ಹಾರುತ್ತ ಹೊರಹೊರಟುವು. ಅವುಗಳ ಒಂದು ಜಾತಿಯೂ ನನಗೆ ಪರಿಚಯವಿರಲಿಲ್ಲ.

ಈ ಅನ್ವೇಷಣ ಕಾರ್ಯದಿಂದ ತೃಪ್ತಿಗೊಂಡವನಾಗಿ ತೆಪ್ಪದ ಬಳಿಗೆ ಹಿಂದಿರುಗಿದೆ. ಸರಕೆಲ್ಲವನ್ನೂ ಕರೆಯ ಪ್ರಾಂತಕ್ಕೆ ಸಾಗಿಸುವ ಕಾರ್ಯದಲ್ಲಿ ತೊಡಗಿದೆ. ಉಳಿದ ದಿನವೆಲ್ಲಾ ಆ ಕೆಲಸವೇ ಹಿಡಿಯಿತು. ಇರುಳಾದ ಮೇಲೆ ಏನು ಮಾಡಬೇಕೆಂಬುದಾಗಲಿ ಎಲ್ಲಿ ಮಲಗಬೇಕೆಂಬುದಾಗಲಿ ತೋರಲಿಲ್ಲ. ನೆಲದ ಮೇಲೆ ನಿದ್ದೆ ಹೋಗೋಣವೆಂದರೆ, ದುಷ್ಟಜಂತುಗಳ ಭೀತಿ. ನಾನು ತಂದಿದ್ದ ಪೆಟ್ಟಿಗೆಗಳನ್ನೂ ಹಲಗೆಗಳನ್ನೂ ಒಂದು ಕಾಪು ಕಟ್ಟಡವಾಗುವಂತೆ ಸುತ್ತಲೂ ಅಳವಡಿಸಿ, ಒಂದು ರೀತಿಯ ಗುಡಿಸಿಲಂತೆ ಮಾಡಿಕೊಂಡು, ಅಲ್ಲಿ

ಪ್ರವಾಹ ಮಧ್ಯದಲ್ಲಿ ತೆಪ್ಪವು ಸಾಗಿ ಹೋಗುತ್ತಿದ್ದಾಗ, ತೆಪ್ಪದ ಒಂದು ಪಕ್ಕ ಆಳವಿಲ್ಲದ ಒಂದೆಡೆಯಲ್ಲಿ ನೆಲಕಚ್ಚಿ, ಇನ್ನು ಸ್ವಲ್ಪದರಲ್ಲಿ ಸರಕೆಲ್ಲವೂ ನೀರಪಾಲಾಗುವುದರಲ್ಲಿತ್ತು. ಅಷ್ಟರಲ್ಲಿ, ನೀರ ಮೇಲೆ ಎತ್ತಿಕೊಂಡಿದ್ದ ಎದುರು ಪಕ್ಕದಿಂದ ಪೆಟ್ಟಿಗೆಗಳಾವುವೂ ಜಾರಿ ಬರದಂತೆ ಅವುಗಳನ್ನು ಒರಗಿಕೊಂಡು ಕುಳಿತೆ. ಅರ್ಧಗಂಟೆಯ ಕಾಲ ಹೀಗೆ ಹೆಣಗಿದ ಮೇಲೆ, ಭರತ ಹೆಚ್ಚಿನ ರಭಸದಿಂದ ನುಗ್ಗಿಬರಲು ತೆಪ್ಪ ಮತ್ತೆ ತೇಲತೊಡಗಿತು. ಆಗ, ಹುಟ್ಟುಹಾಕಿ ತೆಪ್ಪವನ್ನು ಆದಷ್ಟು ಬೇಗ ಮುನ್ನಡಸಿಕೊಂಡು ಹೋದೆ. ಕಟ್ಟಕಡೆಗೆ, ತೆಪ್ಪವು ಒಂದು ಸಣ್ಣ ನದೀಮುಖವನ್ನು ಪ್ರವೇಶಿಸಿತು. ಎರಡೂ ಕಡೆ ನದಿಯ ದಡಗಳಿದ್ದುವು. ತೆಪ್ಪವನ್ನು ಸರಿಯಾದ ಕಡೆ ನಿಲ್ಲಿಸುವುದಕ್ಕಾಗಿ ಉದ್ದಕ್ಕೂ ದಡವನ್ನು ಪರಿಶೀಲಿಸಿಕೊಂಡು ಹೋದೆ. ನದಿಯ ಮೇಲೆ ಬಹುದೂರ ಸಾಗಿಹೋಗಲು ನನಗೆ ಇಷ್ಟವಿರಲಿಲ್ಲ. ಅನತಿಕಾಲದಲ್ಲಿಯೇ ಕಡಲ ಮೇಲೆ ಯಾವುದಾದರೂ ಹಡಗನ್ನು ಕಂಡೇನೆಂಬ ಪ್ರತೀಕ್ಷೆಯಿಂದ, ಕಡಲ ಕರೆಗೆ ಸಾಧ್ಯವಾದಷ್ಟು ಹತ್ತಿರ ತಂಗಲು ನಿರ್ಣಯಿಸಿದೆ.

ಕಡೆಗೆ, ದಡದ ಬಲಭಾಗದಲ್ಲೊಂದು ಕಡೆ ಮೂಲೆಯಾಸರೆಯೊಂದು ದೃಷ್ಟಿಗೆ ಬಿದ್ದಿತು. ಬಹಳ ಪ್ರಯಾಸಪಟ್ಟು ತೆಪ್ಪವನ್ನು ಅಲ್ಲಿಗೆ ತೆಗೆದುಕೊಂಡು ಹೋದೆ. ಅಲ್ಲಿ ಹುಟ್ಟಿನಿಂದ ನೆಲವನ್ನು ಮೆಟ್ಟಿಕೊಂಡು ತೆಪ್ಪವನ್ನು ನೆಟ್ಟಗೆ ಒಳಕ್ಕೆ ನುಗ್ಗಿಸಬಹುದಾಗಿತ್ತು. ಆದರೆ ತಟ್ಟನೆ ಹಾಗೆ ಮಾಡಿದ್ದರೆ ನನ್ನ ತೆಪ್ಪದ ಸರಕೆಲ್ಲ ಮತ್ತೆ ಜಾರಿಬೀಳುವ ಸಂಭವವಿತ್ತು ; ಏಕೆಂದರೆ, ಅಲ್ಲಿ ದಡ ಕಡಿದೋರೆಯಾಗಿತ್ತು. ಆದ್ದರಿಂದ, ಕಡಲ ಭರತವು ಅತ್ಯಂತ ಹೆಚ್ಚಿನಮಟ್ಟಕ್ಕೆ ಏರುವವರೆಗೂ ಕಾದಿದ್ದು, ಭರತವು ತಗ್ಗುವ ವೇಳೆಯಲ್ಲಿ ಚಪ್ಪಟೆಯಾದ ತೀರ ಪ್ರಾಂತದಲ್ಲಿ ತೆಪ್ಪ ನಿಲ್ಲುವಂತೆ ಮಾಡುವುದೇ ಉಪಾಯವಾಗಿತ್ತು. ಅದೇ ಮೇರೆಗೆ, ಭರತದ ನೀರು ಹಿಮ್ಮರಳುವವರೆಗೂ ಹುಟ್ಟುಗಳನ್ನು ಲಂಗರಿನಂತೆ ಉಪಯೋಗಿಸಿ ತೆಪ್ಪವನ್ನು ದಡಕ್ಕೆ ಸೋಕಿಕೊಂಡಂತೆ ಹಿಡಿದು ನಿಲ್ಲಿಸಿದ್ದೆ. ಭರತವಿಳಿಯುವಾಗ, ಹುಟ್ಟುಗಳನ್ನು ಬಲವಾಗಿ ನೆಲದೊಳಕ್ಕೆ ನಟ್ಟು, ನೀರೆಲ್ಲ ಹಿಂದಿರುಗುವವರೆಗೂ ತೆಪ್ಪವನ್ನು ಹಾಗೆಯೇ ನಿಲ್ಲಿಸಿದ್ದೆ. ನೀರೆಲ್ಲ ಹೊರಟುಹೋದ ಮೇಲೆ ತೆಪ್ಪವೂ ಸರಕೂ ಸುರಕ್ಷಿತವಾಗಿ ದಡದ ಬಳಿ ನೆಲಸಿದಂತಾಯಿತು.

ಆ ಬಳಿಕ ನಾನು ಮಾಡಬೇಕಾಗಿದ್ದ ಕೆಲಸವೆಂದರೆ, ಆ ಪ್ರಾಂತವನ್ನೆಲ್ಲಾ ಸುತ್ತಿನೋಡಿ ನನ್ನ ವಸತಿಗೆ ಸರಿಯಾದ ಒಂದು ಸ್ಥಳವನ್ನು ಕಂಡುಹಿಡಿಯುವುದಾಗಿದ್ದಿತು. ನಾನು ತಂದಿದ್ದ ಸರಕನ್ನು ಸುರಕ್ಷಿತವಾಗಿಡುವುದಕ್ಕೂ ತಕ್ಕ ಸ್ಥಳ ಆವಶ್ಯಕವಾಗಿತ್ತು. ನಾನು ಎಲ್ಲಿದ್ದೆನೆಂಬುದು ನನ್ನ ಅರಿವಿಗೆ

ಒಂದು ಪ್ರಾಣಿ ಕುಳಿತಿತ್ತು. ಅದರ ಕಡೆಗೆ ಬಂದೂಕನ್ನು ಗುರಿಯಿಟ್ಟಾಗ, ಅದು ನಿಶ್ಚಲವಾಗಿ ಗಂಭೀರವಾಗಿ ಕುಳಿತಿತ್ತು. ಒಂದು ಚೂರು ಬಿಸ್ಕತ್ತನ್ನು ತೆಗೆದು ಅದರ ಕಡೆಗೆಸೆಯಲು, ಅದನ್ನು ಮೂಸಿನೋಡಿ, ತಿಂದು, ಹೊರಟುಹೋಯಿತು.

ಎರಡನೆಯ ಸಲ ಹಡಗಿನಿಂದ ಸರಕನ್ನು ತಂದಮೇಲೆ, ಹಾಯಿಬಟ್ಟೆಯನ್ನೂ ಕೆಲವು ಗಣೆಗಳನ್ನೂ ಉಪಯೋಗಿಸಿ ಚಿಕ್ಕದೊಂದು ಗೂಡಾರವನ್ನು ಮಾಡಿದೆ. ಬಿಸಿಲಿಗೆ ಅಥವಾ ಮಳೆಗೆ ಕೆಡಬಹುದಾದುವೆಲ್ಲವನ್ನೂ ಈ ಗೂಡಾರದೊಳಕ್ಕೆ ತಂದಿಟ್ಟೆ. ಮನುಷ್ಯನೇ ಆಗಲಿ ಪ್ರಾಣಿಯೇ ಆಗಲಿ ಗೂಡಾರದೊಳಕ್ಕೆ ತಟ್ಟನೆ ನುಗ್ಗಿ ಬರದಿರಲೆಂದು ಬರಿಯ ಪೆಟ್ಟಿಗೆಗಳನ್ನೂ ಪೀಪಾಯಿಗಳನ್ನೂ ಗೂಡಾರದ ಸುತ್ತಲೂ ರಕ್ಷಣೆಯಾಗಿ ಜೋಡಿಸಿಟ್ಟೆ. ಇಷ್ಟು ಮಾಡಿ, ಒಳಗಡೆಯಿಂದ ಕೆಲವು ಹಲಗೆಗಳನ್ನೂ ಉದ್ದ ಮೊಗನಾಗಿ ಒಂದು ಪೆಟ್ಟಿಗೆಯನ್ನೂ ನಿಲ್ಲಿಸಿ, ಗೂಡಾರದ ದ್ವಾರವನ್ನು ಮುಚ್ಚಿ, ಒಳಗಡೆ ಹಾಸಿಗೆ ಹಾಸಿಕೊಂಡು ಮಲಗಿದೆ. ಆತ್ಮರಕ್ಷಣಾರ್ಥವಾಗಿ, ತಲೆದಸಿಯಲ್ಲಿ ಎರಡು ಪಿಸ್ತೂಲುಗಳನ್ನೂ ಪಕ್ಕದಲ್ಲಿ ಕೈಯೆಡೆಯಲ್ಲಿ ಒಂದು ಕೋವಿಯನ್ನೂ ಇರಿಸಿಕೊಂಡಿದ್ದೆ. ಹಿಂದಿನ ರಾತ್ರಿ ಸರಿಯಾದ ನಿದ್ದೆಯಿಲ್ಲದಿದ್ದುದರಿಂದಲೂ ದಿನವೆಲ್ಲ ಬಹಳ ದುಡಿದಿದ್ದೆನಾದ್ದರಿಂದಲೂ ಬಹಳ ಶಾಂತನಾಗಿ ನಿದ್ರಿಸಿದೆ.

ಒಬ್ಬ ಮನುಷ್ಯನಿಗೆ ಬೇಕಾದುದಕ್ಕಿಂತ ಹೆಚ್ಚಿನ ಮದ್ದಿನಕೋಠಿಯೇ ನನ್ನ ಬಳಿಯಿತ್ತು. ಆದರೆ ನನಗೆ ಇನ್ನೂ ತೃಪ್ತಿಯಿರಲಿಲ್ಲ. ಹಡಗು ಒಂದು ಕೊನೆ ಎದ್ದುಕೊಂಡು ಹಾಗೆ ನಿಂತಿರುವಾಗಲೇ ಅದರಲ್ಲಿನ ಪ್ರತಿಯೊಂದು ಪದಾರ್ಥವನ್ನೂ ನನ್ನ ಕೈಲಾದಮಟ್ಟಿಗೆ ಸಾಗಿಸಿಕೊಂಡು ಬರಬೇಕೆಂದು ಆಲೋಚಿಸಿದೆ. ಅದೇ ಮೇರೆಗೆ, ಪ್ರತಿದಿನವೂ ಕಡಲು ಇಳಿತದಲ್ಲಿದ್ದಾಗ ಹಡಗಿಗೆ ಹೋಗಿ ಏನಾದರೊಂದನ್ನು ತರತೊಡಗಿದೆ. ಮೂರನೆಯ ಸಲ ಹಡಗಿಗೆ ಹೋದಾಗ ಮುಖ್ಯವಾಗಿ ಹಡಗಿನಲ್ಲಿದ್ದ ಎಲ್ಲ ಸಣ್ಣ ಸಣ್ಣ ಹಗ್ಗಹುರಿಗಳನ್ನೂ ಹಾಯಿಬಟ್ಟೆಗಳನ್ನೂ ಜೊತೆಗೆ ತೇವ ಹಿಡಿದಿದ್ದ ಮದ್ದಿನ ಪೀಪಾಯಿಯನ್ನೂ ತಂದೆ.

ಈ ರೀತಿಯಲ್ಲಿ ಐದಾರೂ ಸಲ ಹಡಗಿಗೆ ಪಯಣಮಾಡಿ, ನನಗೆ ಬೇಕಾದ ಪದಾರ್ಥವಾವುದನ್ನೂ ತರದೆ ಉಳಿಸಿಲ್ಲವೆಂದು ಸಮಾಧಾನಗೊಂಡ ಮೇಲೆಯೂ, ಹೆಚ್ಚಿನ ಆಹಾರಸಾಮಗ್ರಿ ಪತ್ತೆಯಾದದ್ದು ಆಶ್ಚರ್ಯಕರವಾಗಿತ್ತು : ಒಂದು ದೊಡ್ಡ ಪೀಪಾಯಿಯ ತುಂಬ ರೊಟ್ಟಿ, ಮೂರು ಪೀಪಾಯಿಗಳ ತುಂಬ 'ರಂ' ಮದ್ಯ, ಒಂದು ಪೆಟ್ಟಿಗೆ ತುಂಬ ಸಕ್ಕರೆ ಮತ್ತು ಒಂದು ಪೀಪಾಯಿ ತುಂಬ ಹಿಟ್ಟು – ಇವಿಷ್ಟು ನನಗೆ ದೊರೆತ ಹೊಸ ನಿಧಿಯಾಗಿದ್ದುವು. ಇವೆಲ್ಲವನ್ನೂ

ಆ ರಾತ್ರಿಯನ್ನು ಕಳೆಯಲು ನಿಶ್ಚಯಿಸಿದೆ. ಆಹಾರ ಸಂಪಾದನೆಗೆ ಮಾರ್ಗವೇ ಇರಲಿಲ್ಲ.

ಇಷ್ಟಾದ ಮೇಲೆ, ನನಗೆ ಉಪಯೋಗವಾಗುವಂತಹ ಯಾವ ಯಾವ ಪದಾರ್ಥಗಳನ್ನು ಹಡಗಿನಿಂದ ಇನ್ನೂ ತರಬಹುದೆಂಬುದನ್ನು ವಿಚಾರ ಮಾಡತೊಡಗಿದೆ. ಮುಖ್ಯವಾಗಿ ಹಡಗಿನ ಹಗ್ಗಹುರಿಗಳೂ ಹಾಯಿಬಟ್ಟೆಗಳೂ ಬಹಳ ಪ್ರಯೋಜನಕರವಾಗಿ ಕಂಡುವು. ಆದ್ದರಿಂದ, ಹಡಗಿಗೆ ಇನ್ನೊಮ್ಮೆ ಪಯಣ ಬೆಳಸಬೇಕೆಂದು ನಿಶ್ಚಯಿಸಿದೆ. ತರುವಾಯ, ನಾನು ಕಟ್ಟಿದ ತೆಪ್ಪವನ್ನು ತೆಗೆದುಕೊಂಡು ಹೋಗತಕ್ಕದ್ದೇ ಇಲ್ಲವೇ ಎಂಬುದನ್ನು ಬಹಳ ಹೊತ್ತು ಆಲೋಚನೆ ಮಾಡಿ, ಮೊದಲಿನಂತೆಯೇ ಈಜಿಕೊಂಡು ಹೋಗತಕ್ಕದ್ದೆಂದು ತೀರ್ಮಾನಿಸಿದೆ. ಕಡಲಿನುಬ್ಬರ ಇಳಿದಾಗ, ಹಾಗೆಯೇ ಮಾಡಿದೆ ; ಬರಿಯ ಒಂದು ಷರಟು, ಒಂದು ಷರಾಯಿ, ಸಾಮಾನ್ಯವಾದ ಜೋಡು – ಇಷ್ಟನ್ನು ಮಾತ್ರ ಧರಿಸಿ ಹೊರಟೆ.

ಮೊದಲಿನಂತೆಯೇ ಹಡಗು ಹತ್ತಿಹೋದೆ ; ಇನ್ನೊಂದು ತೆಪ್ಪವನ್ನು ಕಟ್ಟಿದೆ. ನನಗೆ ಅತ್ಯಂತ ಪ್ರಯೋಜನಕರವೆಂದು ಕಂಡ ಹಲವು ಪದಾರ್ಥಗಳನ್ನು ಆರಿಸಿಕೊಂಡೆ. ಮೊದಲು, ಬಡಗಿಯ ಸಾಮಾನು ಸರಂಜಾಮುಗಳ ಶೇಖರಣೆಯಲ್ಲಿ ದೊರೆತ ಮೂರು ಚೀಲಗಳ ತುಂಬ ಇದ್ದ ಮೊಳೆ–ಮೇಕುಗಳು, ದೊಡ್ಡದೊಂದು ತಿರುಪು ತಿರುಗಿಸುವ ಸಲಕರಣೆ, ಹತ್ತು ಹನ್ನೆರಡು ಕೈಗೊಡಲಿಗಳು ಮತ್ತು ಎಲ್ಲಕ್ಕಿಂತ ಮುಖ್ಯವಾಗಿ ಒಂದು ಬೀಸುವ ಕಲ್ಲು – ಇವಿಷ್ಟನ್ನು ಬಿಡದೆ ಸಂಗ್ರಹಿಸಿದೆ. ಇಷ್ಟರ ಜೊತೆಗೆ, ಫಿರಂಗಿಕಾರನ ವಶದಲ್ಲಿದ್ದ ಇನ್ನೂ ಕೆಲವು ಬೇರೆ ಬೇರೆ ಅಳತೆಯ ಕೋವಿಗಳು, ಗುಂಡುಗಳು, ಸ್ವಲ್ಪ ಮದ್ದು, ಎರಡು ಮೂರು ಕಬ್ಬಿಣದ ಗಡಾರಿಗಳು – ಇವೂ ಕೂಡ ನನ್ನ ಮನಸೆಳೆದು ನನ್ನ ಸಾಮಗ್ರಿ ಸಂಗ್ರಹದಲ್ಲಿ ಸೇರಿದುವು. ಕಡೆಯಲ್ಲಿ ಹಡಗಿನಲ್ಲಿ ದೊರೆತ ಎಲ್ಲ ಉಡುಪು ತೊಡುಪುಗಳನ್ನೂ, ಹೆಚ್ಚಿನದಾಗಿ ಇಟ್ಟಿದ್ದ ಒಂದು ಹಾಯಿಯನ್ನೂ ಜೋಲಿಯನ್ನೂ ಹಾಸಿಗೆ ಬಟ್ಟೆಯನ್ನೂ ನನ್ನ ಸಂಗ್ರಹಕ್ಕೆ ಸೇರಿಸಿಕೊಂಡೆ. ಇವಿಷ್ಟನ್ನು ನನ್ನ ಎರಡನೆಯ ತೆಪ್ಪದ ಮೇಲೆ ಹೇರಿಕೊಂಡು, ಸರಕೆಲ್ಲವನ್ನೂ ಸುರಕ್ಷಿತವಾಗಿ ಕರೆಗೆ ಸಾಗಿಸಿದೆ.

ನಾನು ಕರೆಯಲ್ಲಿ ಇಲ್ಲದಿದ್ದಾಗ ಯಾವುದಾದರೂ ಪ್ರಾಣಿಗಳು ಬಂದು ಆಹಾರಸಾಮಗ್ರಿಯನ್ನು ತಿಂದುಹಾಕಿವೆಯೇನೋ ಎಂಬ ಶಂಕೆಯುಂಟಾಗಿತ್ತು. ಆದರೆ, ಹಿಂದಿರುಗಿ ಬಂದಾಗ ಅಲ್ಲಿ ಯಾವ ಪ್ರಾಣಿಯೂ ಸುಳಿದಂತೆ ಕಂಡುಬರಲಿಲ್ಲ. ಆದರೆ ಮಾತ್ರ, ಪೆಟ್ಟಿಗೆಯೊಂದರ ಮೇಲೆ ಕಾಡು ಬೆಕ್ಕಿನಂತಹ

ಸಂದೂಕದಲ್ಲಿ, ಒಟ್ಟು ಮೂವತ್ತಾರು ಪೌಂಡುಗಳ ಬೆಲೆಯ, ಬೇರೆ ಬೇರೆ ದೇಶಗಳ ಚಿನ್ನದ ಮತ್ತು ಬೆಳ್ಳಿಯ ನಾಣ್ಯಗಳಿದ್ದುವು.

ಈ ಹಣವನ್ನು ಕಂಡಕೂಡಲೆ ನನ್ನಷ್ಟಕ್ಕೆ ನಾನೇ ನಕ್ಕೆ : "ಅಯ್ಯೋ! ಕೆಲಸಕ್ಕೆ ಬಾರದ ವಸ್ತುವೇ! ನಿನ್ನಿಂದ ನನಗೇನು ಪ್ರಯೋಜನ? ಆ ಚೂರಿಗಳಲ್ಲಿ ಒಂದು ಈಹಣದ ಗುಡ್ಡೆಗಿಂತ ಹೆಚ್ಚಿನ ಬೆಲೆಯುಳ್ಳದ್ದು. ನಿನ್ನಿಂದ ನನಗೆ ಯಾವ ಬಗೆಯ ಪ್ರಯೋಜನವೂ ಇಲ್ಲ. ನೀನು ಇರುವೆಡೆಯಲ್ಲಿಯೇ ಬಿದ್ದಿರು ; ಜೀವದಿಂದುಳಿಸಲು ಯೋಗ್ಯವಲ್ಲದ ಪ್ರಾಣಿಯಂತೆ ಕಡಲಾಳಕ್ಕೆ ಹೋಗು" ಎಂಬುದಾಗಿ ಗಟ್ಟಿಯಾಗಿ ಹೇಳಿದೆ. ಆದರೂ, ಮತ್ತೆ ಆಲೋಚನೆಮಾಡಿ, ಹಣವೆಲ್ಲವನ್ನೂ ರಟ್ಟುಬಟ್ಟೆಯ ಚೂರೊಂದರಲ್ಲಿ ಕಟ್ಟಿಕೊಂಡು, ಇನ್ನೊಂದು ತೆಪ್ಪವನ್ನು ಕಟ್ಟುವ ಆಲೋಚನೆ ಮಾಡತೊಡಗಿದೆ. ಈ ವೇಳೆಯಲ್ಲಿ, ಆಗಸ ಮೋಡ ಮುಸುಕಿತು, ಗಾಳಿಯೆದ್ದಿತು; ಕಾಲು ಗಂಟೆಯೊಳಗಾಗಿ, ಕರೆಯ ಕಡೆಯಿಂದ ಹೊಸ ಬಿರುಗಾಳಿಮಳೆಯೇ ಬೀಸಿಬಂದಿತು. ಕರೆಯಿಂದ ವಿಮುಖವಾಗಿ ಗಾಳಿ ಬೀಸುತ್ತಿರುವಾಗ ತೆಪ್ಪವನ್ನು ಕಟ್ಟುವುದು ವ್ಯರ್ಥ್ಯವೆಂದು ತೋರಿ, ಇಳಿತದ ಪ್ರವಾಹ ಮೊದಲಾಗುವ ಮುನ್ನವೇ ಕರೆ ಸೇರುವುದು ಸುಕ್ಷೇಮವೆಂದು ಬಗೆದೆ. ಅದೇ ಮೇರೆಗೆ, ನೀರಿಗಿಳಿದು ಈಜಿಕೊಂಡೇ ಹಿಂದಿರುಗಿದೆ. ಕಡಲು ಆಗಲೇ ಕಲಕಿಹೋಗತೊಡಗಿದ್ದರಿಂದಲೂ ನಾನು ಹೊತ್ತಿದ್ದ ಪದಾರ್ಥಗಳ ಭಾರದಿಂದಾಗಿಯೂ ಈಜುವುದು ಸ್ವಲ್ಪ ಕಷ್ಟಕರವಾಗಿಯೇ ಇದ್ದಿತು. ಇದ್ದಕ್ಕಿದ್ದಂತೆ ಗಾಳಿ ಬಿರ್ರನೆ ಬಿರುಸಾಯಿತು ; ಬಿರುಗಾಳಿಗೆ ಮಳೆಯ ಕೆಳೆಯಾಗಿ ಕಡಲು ಹುಚ್ಚೆದ್ದಿತು.

ಆದರೆ ಅಷ್ಟರೊಳಗಾಗಿ ನಾನು ನನ್ನ ನಿಧಿಯೆಲ್ಲದರೊಡನೆ ನನ್ನ ಚಿಕ್ಕ ಗೂಡಾರಕ್ಕೆ ಸುರಕ್ಷಿತವಾಗಿ ತಲಪಿದ್ದೆ. ಬಿರುಗಾಳಿಮಳೆ ಇರುಳೆಲ್ಲ ಜೋರಾಗಿಯೇ ಇತ್ತು. ಬೆಳಗಾಗೆದ್ದು ಕಡಲಕಡೆ ನೋಡುತ್ತೇನೆ, ಹಡಗು ಮಾಯವಾಗಿದೆ ! ಮೊದಲು ಅಚ್ಚರಿಯಾಯಿತು ; ಆಮೇಲೆ ಸಮಾಧಾನ ಮೂಡಿತು. ನಾನು ಸ್ವಲ್ಪವೂ ಕಾಲವಿಳಂಬ ಮಾಡದೆ ನನಗೆ ಉಪಯೋಗವಾಗಬಹುದಾದದ್ದೆಲ್ಲವನ್ನೂ ಹಡಗಿನಿಂದ ತಂದಿದ್ದೆ. ಇನ್ನೂ ಹೆಚ್ಚಿನ ಕಾಲಾವಕಾಶವಿದ್ದರೂ ಕೂಡ ಹೆಚ್ಚಿನದೇನೂ ತರುವಂತಹುದು ಹಡಗಿನಲ್ಲುಳಿದಿರಲಿಲ್ಲ.

### ವಸತಿ ನಿರ್ಮಾಣ

ಇನ್ನು ಹಡಗಿನ ಆಲೋಚನೆಗಳನ್ನೆಲ್ಲ ಬಿಟ್ಟೆ. ದ್ವೀಪದಲ್ಲಿ ಇದ್ದಿರಬಹುದಾದ ಕಾಡುಜನರ ಮತ್ತು ಕಾಡುಪ್ರಾಣಿಗಳ ಕಾಟದಿಂದ ಸುರಕ್ಷಿತವಾಗಿರುವುದಕ್ಕಾಗಿ

ಜೋಪಾನವಾಗಿ ಕರೆಯೆಡೆಗೆ ಕೊಂಡೆಯ್ದೆ.

ಮಾರನೆಯ ದಿನ ಇನ್ನೊಂದು ಪ್ರಯಾಣಮಾಡಿದೆ. ಈ ಹೊತ್ತಿಗಾಗಲೇ ನಾನು ಹಡಗನ್ನು ಸೂರೆಮಾಡಿಬಿಟ್ಟಿದ್ದೆ. ಆದರೂ, ಹಡಗಿನ ತಂತಿಹುರಿಗಳು, ಕಬ್ಬಿಣದ ಪದಾರ್ಥಗಳು, ಹಾಯಿಕಟ್ಟುವ ಅಡ್ಡದೂಲಗಳು – ಇವು ನನ್ನ ಗಮನವನ್ನು ಸೆಳೆದುವು. ದೂಲಗಳನ್ನೆಲ್ಲಾ ಒಟ್ಟುಗೂಡಿಸಿ ದೊಡ್ಡದೊಂದು ತೆಪ್ಪವನ್ನು ಕಟ್ಟಿ, ನನ್ನ ಗಮನಕ್ಕೆ ಬಿದ್ದ ಮೇಲೆ ಹೇಳಿದ ಎಲ್ಲಾ ಭಾರವಾದ ಸಾಮಗ್ರಿಗಳನ್ನೂ ಅದರ ಮೇಲೆ ಹೇರಿಕೊಂಡು ಹಿಂದಿರುಗಿದೆ. ಈ ಸಲ ನನ್ನ – ಅದೃಷ್ಟ ಅನುಕೂಲವಾಗಿ ಪರಿಣಮಿಸಲಿಲ್ಲ. ಎಂದಿನಂತೆ, ತೆಪ್ಪವನ್ನು ನಿಲ್ಲಿಸುತ್ತಿದ್ದ ನದೀಮುಖದ ಮೂಲೆಯಾಸರೆಯನ್ನು ತಲಪಿದಾಗ, ಬಹು ಭಾರವನ್ನು ಹೇರಿದ್ದರಿಂದ ಕಡೆಯ ಘಳಿಗೆಯಲ್ಲಿ ತೆಪ್ಪವನ್ನು ಸರಿಯಾಗಿ ಆಯವರಿತು ನಡೆಸಲಾಗದೆ ಅದು ಮಗುಚಿಕೊಂಡಿತು. ಸರಕೆಲ್ಲವೂ ನೀರ ಪಾಲಾದದ್ದಲ್ಲದೆ ನಾನೂ ನೀರಿನಲ್ಲಿ ಮುಳುಗಿ ಹೋದೆ. ನನಗೇನೋ ಗಾಸಿಯಾಗಲಿಲ್ಲ. ಆದರೆ, ನನಗೆ ಅತ್ಯಂತ ಪ್ರಯೋಜನಕರವೆಂದು ಎಣಿಸಿದ್ದ ಕಬ್ಬಿಣದ ಸಾಮಾನೆಲ್ಲವೂ ನೀರಿನಲ್ಲಿ ಮುಳುಗಿಹೋಯಿತು. ಆದರೂ, ಕಡಲ ಭರತ ಇಳಿದಾಗ, ತಂತಿಹುರಿಯ ತುಂಡುಗಳ ಬಹುಭಾಗವನ್ನೂ ಕಬ್ಬಿಣದ ಸಾಮಾನು ಕೆಲವನ್ನೂ ನೀರಿನಲ್ಲಿ ಮುಳುಗಿ ಎತ್ತಿ ತಂದು ದಡದ ಮೇಲಕ್ಕೆ ಸಾಗಿಸಿದೆ. ಈ ಕೆಲಸ ಬಹು ಶ್ರಮ ಸಾಧ್ಯವಾದದ್ದರಿಂದ ಮುಳುಗಿಹೋದ ಸರಕೆಲ್ಲವನ್ನೂ ಆ ರೀತಿ ಉಳಿಸಿಕೊಳ್ಳಲಾಗಲಿಲ್ಲ. ಇದಾದ ಮೇಲೆ, ಪ್ರತಿದಿನವೂ ಹಡಗಿಗೆ ಹೋಗಿ ಏನು ಸಾಧ್ಯವಾದರೆ ಅದನ್ನು ತೆಗೆದುಕೊಂಡು ಬರುತ್ತಿದ್ದೆ.

ಈಗ ಕರೆಯ ಮೇಲೆ ನೆಲಸಿ ಹದಿಮೂರು ದಿನಗಳಾಗಿದ್ದುವು ; ಹನ್ನೊಂದು ಸಲ ಹಡಗಿನ ಮೇಲೆ ಹೋಗಿದ್ದೆ. ಈ ಕಾಲದಲ್ಲಿ, ಒಬ್ಬ ಮನುಷ್ಯನು ತನ್ನ ಎರಡು ಕೈಗಳಿಂದ ಎಷ್ಟು ತರಲಾಪನೋ ಅಷ್ಟನ್ನೂ ಕೊಂಡೊಯ್ದು ತಂದಿದ್ದೆ. ನನ್ನ ತಾಳ್ಮೆ ಕುಗ್ಗದೆ ಇದ್ದಿದ್ದರೆ ಇಡಿಯ ಹಡಗನ್ನೇ ಚೂರುಚೂರು ಮಾಡಿ ತಂದುಬಿಡುತ್ತಿದ್ದೆ. ಹನ್ನೆರಡನೆಯ ಸಲವೂ ಹಡಗಿಗೆ ಹೋದೆ. ಈ ಸಲ ಗಾಳಿ ಜೋರಾಗಿತ್ತು. ಆದರೂ, ಭರತವಿಲ್ಲದಿದ್ದಾಗ ಎಂದಿನಂತೆ ಹೋಗಿ ಹಡಗನ್ನು ಹತ್ತಿದೆ. ಹಡಗಿನ ಕೋಣೆಯೆಲ್ಲವನ್ನೂ ಏನು ಇಲ್ಲದಂತೆ ಶೋಧಿಸಿಬಿಟ್ಟಿದ್ದರೂ ಅಲ್ಲಿ ಒಂದು ಸಂದೂಕಪೆಟ್ಟಿಗೆ ಕಣ್ಣಿಗೆ ಬಿದ್ದಿತು. ಅದರ ಸಂದೂಕವೊಂದರಲ್ಲಿ ಎರಡು ಮೂರು ಕ್ಷೌರಗತ್ತಿಗಳೂ ಒಂದು ದೊಡ್ಡ ಕತ್ತರಿಯೂ ಹತ್ತುಹನ್ನೆರಡು ಚೂರಿಗಳೂ ಕೆಲವು ಮುಳ್ಳು ಚಮಚ (Fork)ಗಳೂ ಇದ್ದುವು ; ಇನ್ನೊಂದು

ಮೇಲ್ಭಾಗದಲ್ಲಿ ಮೊನಚಾಗಿ ಹೆರೆದೆ. ಎರಡು ಸಾಲು ದಸಿಗಳ ನಡುವೆಯೂ ಆರು ಅಂಗುಲಗಳ ಅಂತರವಿತ್ತು. ಅನಂತರ ನಾನು ಹಡಗಿನಿಂದ ತಂದಿದ್ದ ತಂತಿಹುರಿಗಳ ತುಂಡುಗಳನ್ನು ತೆಗೆದುಕೊಂಡು ದಸಿಸಾಲುಗಳ ನಡುವೆಯಲ್ಲಿ ಒಂದರ ಮೇಲೊಂದರಂತೆ ಪೇರಿಸಿಟ್ಟೆ. ಒಳಭಾಗದಲ್ಲಿ ಬಿಟ್ಟ ತೆರಪಿನಲ್ಲಿ ಅಲ್ಲಲ್ಲಿ ಹೆಚ್ಚಿನ ದಸಿಗಳನ್ನು ನಿಲ್ಲಿಸಿದೆ. ಈ ದಸಿಬೇಲಿ ಎಷ್ಟು ಬಲವಾಗಿತ್ತೆಂದರೆ, ಯಾವ ಮನುಷ್ಯನೇ ಆಗಲಿ ಯಾವ ಪ್ರಾಣಿಯೇ ಆಗಲಿ ಅದನ್ನು ಭೇದಿಸಿಕೊಂಡು ಬರಲು ಸಾಧ್ಯವಿರಲಿಲ್ಲ. ಕಾಡಿನಿಂದ ಮರದ ಕೊಂಬೆಗಳನ್ನು ಕತ್ತರಿಸಿಕೊಂಡು ಬಂದು ಈ ಬೇಲಿಯನ್ನು ನಿರ್ಮಿಸಲು ನನಗೆ ಬಹಳ ಶ್ರಮವೂ ಕಾಲವೂ ಹಿಡಿದುವು.

ನಾನು ಈ ಬೇಲಿಯೊಳಕ್ಕೆ ಹೋಗುವುದಕ್ಕಾಗಿ ಬಾಗಿಲನ್ನು ಇಡಲಿಲ್ಲ. ಆ ಉದ್ದೇಶಕ್ಕಾಗಿಯೇ ಒಂದು ಮೋಟಾದ ಏಣಿಯನ್ನು ಮಾಡಿದೆ. ಒಳಕ್ಕಾಗಲಿ ಹೊರಕ್ಕಾಗಲಿ ಏಣಿಯನ್ನು ಹತ್ತಿ ಹೋಗಬೇಕಾಗಿತ್ತು. ಒಳಕ್ಕಿಳಿದ ಮೇಲೆ ಹೊರಗೆ ಇಟ್ಟಿದ್ದ ಏಣಿಯನ್ನು ಎತ್ತಿ ತೆಗೆದುಕೊಂಡು ಹೋಗುತ್ತಿದ್ದೆ. ಈ ರೀತಿ ನಾನು ಒಂದು ದುರ್ಭೇದ್ಯವಾದ ಒಂದು ಸಣ್ಣ ಕೋಟೆಯನ್ನೆ ಕಟ್ಟಿಕೊಂಡು, ಒಳಗೆ ಬಹಳ ಸುರಕ್ಷಿತವಾಗಿದ್ದಂತೆ ಭಾವಿಸಿಕೊಂಡಿದ್ದೆ. ಅಂತೂ, ರಾತ್ರಿಯ ಹೊತ್ತು ನೆಮ್ಮದಿಯಾಗಿ ನಿದ್ದೆಮಾಡುತ್ತಿದ್ದೆ.

ನಾನು ಹಡಗಿನಿಂದ ಸಾಗಿಸಿಕೊಂಡು ಬಂದು ರಾಶಿಹಾಕಿದ್ದ ನನ್ನ ನಿಧಿಯೆಲ್ಲವನ್ನೂ ಈ ಬೇಲಿ ಕಟ್ಟಡದೊಳಕ್ಕೆ ಹೊತ್ತು ತಂದೆ. ಮಳೆಗಾಲದಲ್ಲಿ ಸಂರಕ್ಷಣೆಯಾಗಿರುವಂತೆ, ಒಂದರ ಮೇಲೆ ಒಂದರಂತೆ ಎರಡು ಗೂಡಾರಗಳನ್ನು ಬೇಲಿಯಾವರಣದೊಳಗೆ ರಚಿಸಿದೆ. ಹೀಗೆ ರಚಿಸಿದ ಗೂಡಾರದಲ್ಲಿ ನಾನು ತಂದಿದ್ದ ಹಾಸಿಗೆಯಲ್ಲಿ ಮಲಗದೆ ಜೋಲಿಯಲ್ಲಿ ಮಲಗತೊಡಗಿದೆ. ಯಾವ ಯಾವ ಸಾಮಗ್ರಿಗಳು ಬಿಸಿಲಿಗೂ ಮಳೆಗೂ ಕೆಡಬಹುದೊ ಅಂಥವುಗಳೆಲ್ಲವನ್ನೂ ಈ ಹೊಸ ಗುಡಾರದಲ್ಲಿ ಭದ್ರಪಡಿಸಿದೆ. ಇಷ್ಟಾದ ಮೇಲೆ, ಗುಡ್ಡದ ಬದಿಯನ್ನು ಕೊರೆಯುವ ಕೆಲಸದಲ್ಲಿ ತೊಡಗಿದೆ. ನಾನು ಅಗೆದ ಕಲ್ಲುಮಣ್ಣೆಲ್ಲವನ್ನೂ ಗುಡ್ಡದ ಮೂಲಕ ಹೊರಕ್ಕೆ ತಂದು, ಬೇಲಿಯ ಸುತ್ತ ಒಳಭಾಗದಲ್ಲಿ ಸುರಿದು ಒಂದು ಜಗಲಿಯಂತೆ ಮಾಡಿದೆ. ಈ ರೀತಿಯಲ್ಲಿ ನನ್ನ ಗೂಡಾರದ ಹಿಂದೆ ಒಂದು ಗುಹೆಯನ್ನು ಕೊರೆದೆ. ಅದು ನನ್ನ ಮನೆಯ ಗವಿಕೋಣೆಯಾಯಿತು.

ಇದನ್ನೆಲ್ಲ ರಚಿಸಲು ನನಗೆ ಬಹಳ ಶ್ರಮವೂ ಅನೇಕ ದಿನಗಳೂ ಹಿಡಿದುವೆಂದು ಹೇಳಲೇಬೇಕಾಗಿಲ್ಲ. ಹೀಗೆ, ನನ್ನ ಬಗೆಬಗೆಯ

ಏನು ಮಾಡಬೇಕೆಂಬ ಕಡೆಗೆ ನನ್ನ ವಿಚಾರ ಹರಿಯಿತು. ನೆಲದಲ್ಲಿ ಒಂದು ಗವಿಯನ್ನು ತೋಡಿಕೊಳ್ಳಬೇಕೆ, ಇಲ್ಲವೆ ನೆಲದ ಮೇಲೆ ಒಂದು ಗೂಡಾರ ಹೊಡೆಯಬೇಕೆ ಎಂಬುದಾಗಿ ಆ ಬಗ್ಗೆ ಹಲವಾರು ಆಲೋಚನೆಗಳು ಮೂಡಿದುವು. ಎರಡು ವಿಧಾನಗಳನ್ನು ಸಂಯೋಜಿಸಿಕೊಂಡು ಒಂದು ಬಗೆಯ ವಸತಿಯನ್ನು ನಿರ್ಮಾಣ ಮಾಡಲು ನಿಶ್ಚಯಿಸಿದೆ. ನಿರ್ಮಾಣ ಕಾರ್ಯದ ವರ್ಣನೆ ಇಲ್ಲಿ ಅನುಚಿತವಾಗಿರಲಾರದು.

ನಾನು ಸದ್ಯಃ ನೆಲಸಿದ್ದ ಪ್ರದೇಶವು ನನ್ನ ಅನುದಿನದ ವಸತಿಗೆ ಯೋಗ್ಯವಲ್ಲವೆಂದು ಬೇಗನೆಯೇ ಅರಿವಿಗೆ ಬಂದಿತು. ಅದು ಕಡಲ ಬಳಿಯಲ್ಲಿನ ತಗ್ಗಾದ ಜೌಗು ಪ್ರದೇಶವಾಗಿತ್ತು ; ಅಲ್ಲದೆ, ಸಮೀಪದಲ್ಲಿ ಸೀನೀರಿನ ಆನುಕೂಲ್ಯವಿರಲಿಲ್ಲ. ಆದ್ದರಿಂದ ಬೇರೆ ಸ್ಥಳವನ್ನು ಹುಡಿಕಿ ಗೊತ್ತು ಮಾಡಬೇಕೆಂದು ನಿಶ್ಚಯಿಸಿದೆ. ಹಾಗೆ ಸ್ಥಳಾನ್ವೇಷಣ ಮಾಡುವಂದು ನಾನು ನಾಲ್ಕು ಅಂಶಗಳನ್ನು ಗಮನದಲ್ಲಿರಿಸಿಕೊಂಡೆ : ಒಂದು ಆರೋಗ್ಯ ; ಎರಡು, ಸೀನೀರಿನ ಆನುಕೂಲ್ಯ; ಮೂರು, ಬಿಸಿಲಿನ ತಾಪದಿಂದ ಮರೆಯಾಗಿರುವುದು ; ನಾಲ್ಕು, ಕಡಲು ದೃಷ್ಟಿಪಥದಲ್ಲಿರುವುದು : ಅಕಸ್ಮಾತ್ ದೈವಕೃಪೆಯಿಂದ ಯಾವುದಾದರೂ ಹಡಗು ಗೋಚರಕ್ಕೆ ಬಂದರೆ, ಇಲ್ಲಿಂದ ಪಾರಾಗಿ ಹೋಗಬೇಕೆಂಬ ಪ್ರತೀಕ್ಷೆಯೊಂದಿತ್ತು.

ಹಾಗೆಯೇ ಹುಡುಕುತ್ತ ಹೋಗಲು, ಎತ್ತರವಾದ ಗುಡ್ಡದ ಪಕ್ಕದಲ್ಲಿ ಒಂದು ಕಿರಿದಾದ ಸಮಭೂಮಿ ಕಂಡಿತು. ಈ ಮೈದಾನಭೂಮಿಗೆ ಅಭಿಮುಖವಾಗಿದ್ದ ಗುಡ್ಡದ ಬದಿಯು ಮನೆಯ ಪಕ್ಕದಂತೆ ಕಡಿದಾಗಿತ್ತು. ಈ ಬಂಡೆಯ ಪಕ್ಕದಲ್ಲಿ ಒಳಕ್ಕೆ ಕೊರೆದುಕೊಂಡು ಹೋಗಿದ್ದ, ಗವಿಯ ಬಾಗಿಲಂತೆ ಕಾಣುತ್ತಿದ್ದ, ಒಂದು ಹಳ್ಳಬಿದ್ದ ಸ್ಥಳವಿತ್ತು. ವಾಸ್ತವವಾಗಿ ಅದು ಗವಿಯೂ ಆಗಿರಲಿಲ್ಲ, ಅಲ್ಲಿ ಬಂಡೆಯೊಳಕ್ಕೆ ಮಾರ್ಗವೂ ಇರಲಿಲ್ಲ.

ಗವಿಯಂತಿದ್ದ ಪ್ರದೇಶದ ಎದುರಿನ ಹಸಲೆಯ ಮೇಲೆ ನನ್ನ ಗೂಡಾರವನ್ನು ರಚಿಸಬೇಕೆಂದು ತೀರ್ಮಾನಿಸಿದೆ. ಈ ಹಸಲೆಬಯಲು ಸುಮಾರು ನೂರು ಗಜಗಳಷ್ಟು ಅಗಲವಾಗಿಯೂ ಇನ್ನೂರು ಗಜಗಳಷ್ಟು ಉದ್ದವಾಗಿಯೂ ಇದ್ದು, ಕಡಲ ಕರೆಯ ಕಡೆಗೆ ವಕ್ರವಕ್ರವಾಗಿ ಇಳುಕಲಾಗಿತ್ತು. ಗೂಡಾರವನ್ನು ಹೊಡೆಯುವುದಕ್ಕೆ ಮೊದಲು ಗುಡ್ಡದ ಗವಿಯಂತಿದ್ದ ಭಾಗದ ಮುಂದುಗಡೆ ಒಂದು ಆರ್ಧವೃತ್ತಾಕಾರವನ್ನು ಗುರುತುಮಾಡಿ, ಅದರ ಉದ್ದಕ್ಕೂ ಬಲವಾದ ದಸಿಗಳನ್ನು ಎರಡು ಸಾಲಾಗಿ ನೆಲದೊಳಕ್ಕೆ ಹೂತೆ. ಹಾಗೆ ಹೂತಮೇಲೆ ಅವು ನೆಲದ ಮೇಲ್ಗಡೆ ಸುಮಾರು ಐದೂವರೆ ಅಡಿ ಎತ್ತರ ನಿಂತಿದ್ದುವು. ದಸಿಗಳೆಲ್ಲವನ್ನೂ

ಗೊತ್ತುಮಾಡಿಕೊಂಡೆ. ಕಣಿವೆಗಳಲ್ಲಿ ಅವು ಮೇಯುತ್ತಿದ್ದಾಗ ನಾನು ಗುಡ್ಡಬಂಡೆಗಳ ಮೇಲಿದ್ದರೆ ನಾನು ಅವುಗಳ ದೃಷ್ಟಿಗೆ ಬೀಳುತ್ತಿರಲಿಲ್ಲ. ಆದುದರಿಂದ ನಾನು ಯಾವಾಗಲೂ ಬಂಡೆಗಳ ಮೇಲೆ ಹತ್ತಿ, ಅವುಗಳ ಮೇಲೆ ನಿಂತು, ಆಡುಗಳ ಕಡೆಗೆ ಗುಂಡು ಹಾರಿಸುತ್ತಿದ್ದೆ. ಸಾಧಾರಣವಾಗಿ ಗುರಿ ತಪ್ಪುತ್ತಿರಲಿಲ್ಲ. ನನ್ನ ಮೊದಲ ಗುಂಡಿನೇಟಿಗೆ ಒಂದು ಮೇಕೆ ಆಹುತಿಯಾಯಿತು ; ಅದಕ್ಕೆ ಇನ್ನೂ ಹಾಲುಕುಡಿಯುವ ಮರಿ ಇತ್ತು. ಮರಿಯ ತಾಯಿಯನ್ನು ಕೊಂದ ನಾನು ಬಹಳವಾಗಿ ಮರುಗಿದೆ. ತಾಯಿ ನೆಲಕ್ಕೆ ಕೆಡೆದಾಗ ಮರಿ ಅದರ ಹತ್ತಿರ ನಿಶ್ಚಲವಾಗಿ ನಿಂತುಕೊಂಡಿತ್ತು. ನಾನು ಹೋಗಿ ಮರಿಯನ್ನು ಎತ್ತಿಕೊಂಡೆ. ಸತ್ತ ಮೇಕೆಯನ್ನು ಹೆಗಲಮೇಲೆ ಹೊತ್ತು ನಾನು ನಡೆದಾಗ, ಮರಿಯು ಬಿಡದೆ ನನ್ನನ್ನು ಹಿಂಬಾಲಿಸಿತು. ನಾನು ಮರಿಯನ್ನು ಎತ್ತಿಕೊಂಡು ಬೇಲಿಯನ್ನು ಹತ್ತಿ, ಅದನ್ನು ಒಳಗೆ ಇಳಿಸಿದೆ. ಅದನ್ನು ಸಾಕಿ ಬೆಳಸಬೇಕೆಂದು ನನ್ನ ಆಸೆ. ಆದರೆ, ತಾಯನ್ನು ಕಳೆದುಕೊಂಡು ದುಃಖದಿಂದಲೋ ಏನೋ, ಅದು ಏನನ್ನೂ ತಿನ್ನಲೊಲ್ಲದು. ಆದ್ದರಿಂದ ಅದನ್ನು ಕೊಂದು ಅದನ್ನೇ ನಾನು ತಿನ್ನಬೇಕಾಯಿತು. ಈ ಎರಡರ ಮಾಂಸ ನನಗೆ ಬಹಳ ಕಾಲದವರೆಗೆ ಬಂದಿತು : ಏಕೆಂದರೆ, ನಾನು ಹಡಗಿನಿಂದ ತಂದಿದ್ದ ಆಹಾರಸಾಮಗ್ರಿಯನ್ನು, ಅದರಲ್ಲಿಯೂ ರೊಟ್ಟಿಯನ್ನು, ಉಳಿಸಿಡಬೇಕೆಂಬ ಉದ್ದೇಶದಿಂದ ಬಹಳ ಮಿತವಾಗಿಯೇ ತಿನ್ನುತ್ತಿದ್ದೆ.

ಸ್ಥಳವಸತಿಯನ್ನು ನಿರ್ಮಿಸಿಯಾಯಿತು. ಬೆಂಕಿಯುರಿಸುವುದಕ್ಕೆ ಒಂದು ಸ್ಥಳವೂ ಸೌದೆಯೂ ಅತ್ಯಾವಶ್ಯಕವಾಗಿ ಕಂಡುಬಂದುವು. ಇವುಗಳ ಮತ್ತು ಇನ್ನೂ ಕೆಲವು ಅನುಕೂಲಗಳ ಕಲ್ಪನೆಯ ವಿಚಾರವನ್ನು ಮುಂದೆ ಸಂದರ್ಭ ಬಂದಾಗ ಹೇಳುತ್ತೇನೆ. ಈಗ ನನ್ನ ವಿಚಾರವಾಗಿಯೂ ಜೀವಿತದ ಬಗ್ಗೆ ನನ್ನಲ್ಲಿ ತಲೆದೋರಿದ ಚಿಂತನೆಗಳ ವಿಚಾರವಾಗಿಯೂ ಕೆಲವು ಅಂಶಗಳನ್ನು ನಿರೂಪಿಸುವುದು ಅಗತ್ಯ.

ನನ್ನ ಭವಿಷ್ಯವು ಬಹು ನಿರಾಶಾದಾಯಕವಾಗಿತ್ತು. ಬಿರುಗಾಳಿ ಮಳೆಯ ರೋಷಾವೇಶಕ್ಕೆ ಪಾತ್ರರಾಗಿ ಕಡಲ ಪಾಲಾಗಿದ್ದವರಲ್ಲಿ ನಾನೊಬ್ಬನೇ ನಿರ್ಜನವಾದ ಈ ದ್ವೀಪದಲ್ಲಿ ಬಂದು ಬಿದ್ದು ಒಂಟಿಯಾಗಿ ಬಾಳನ್ನು ನೂಕಬೇಕಾಗಿ ಬಂದುದರಲ್ಲಿ ಇಂತಹ ಪ್ರದೇಶದಲ್ಲಿ ನಾನು ಒಂಟಿಯಾಗಿ ಸಾಯಬೇಕೆಂಬುದು ವಿಧಿಯ ಸಂಕಲ್ಪವಿರಬೇಕೆಂಬುದಾಗಿ ನನಗೆ ತೋರಹತ್ತಿತು. ಈ ಆಲೋಚನೆಗಳು ಬಂದಾಗ ನನ್ನ ಕಣ್ಣುಗಳಿಂದ ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿದ್ದಿತು. ಕೆಲವೊಮ್ಮೆ ನಾನು ದೈವವನ್ನು ನಿಂದಿಸುತ್ತಿದ್ದೆ. ದೇವರು ತಾನು ಸೃಷ್ಟಿಸಿದ ಜೀವಿಗಳನ್ನು

ಏರ್ಪಾಡುಗಳನ್ನೊಳಗೊಂಡ ಕಾರ್ಯಯೋಜನೆಯನ್ನು ಮುಂದುವರಿಸುತ್ತಿರುವ ಅವಸರದಲ್ಲಿ ಒಂದು ದೊಡ್ಡ ಬಿರುಮಳೆ ಸುರಿಯಿತು. ಅದರೊಂದಿಗೆ ಹೊಡೆದ ಸಿಡಿಲೂ ಮಿಂಚಿದ ಮಿಂಚೂ ನನಗೆ ಗಾಬರಿ ಹಿಡಿಸಿದುವು : ಗಾಬರಿ ಹೆದರಿಕೆಯಿಂದಲ್ಲ ; ನಾನು ಹೊರಗೆ ಬಿಟ್ಟಿದ್ದ ಮದ್ದು ಎಲ್ಲಿ ಸಿಡಿಲು ತಾಕಿ ಹೊತ್ತಿಕೊಂಡು ನಾಶವಾಗಿ ಹೋಗುವುದೋ ಎಂಬ ಶಂಕಿಯಿಂದ. ನನ್ನ ಮುಂದಿನ ಆತ್ಮರಕ್ಷಣೆಗೂ ಆಹಾರ ಸಂಪಾದನೆಗೂ ಈ ಮದ್ದು ಅತ್ಯಾವಶ್ಯಕವಾಗಿತ್ತು. ಆದ್ದರಿಂದ, ಮಳೆ ಮುಗಿದಕೂಡಲೆ ನನ್ನ ಎಲ್ಲ ಇತರ ಕೆಲಸಗಳನ್ನೂ ಬದಿಗಿಟ್ಟು, ಮದ್ದನ್ನೆಲ್ಲಾ ಸ್ವಲ್ಪಸ್ವಲ್ಪವಾಗಿ ಬೇರೆ ಬೇರೆಯ ಕಡೆ ಇರಿಸುವುದಕ್ಕಾಗಿ ಸಣ್ಣ ಸಣ್ಣ ಪೆಟ್ಟಿಗೆಗಳನ್ನೂ ಚೀಲಗಳನ್ನೂ ಮಾಡುವ ಕಾರ್ಯದಲ್ಲಿ ಉದ್ಯುಕ್ತನಾದೆ. ಮದ್ದಿನ ಪೆಟ್ಟಿಗೆಗಳನ್ನೂ ಚೀಲಗಳನ್ನೂ ಬೇರೆ ಬೇರೆಯಾಗಿ ಇಟ್ಟರೆ, ಒಂದು ವೇಳೆ ಎಲ್ಲಿಯಾದರೂ ಮದ್ದಿಗೆ ಬೆಂಕಿ ತಗುಲಿದರೂ ಎಲ್ಲ ಮದ್ದಿಗೂ ಒಟ್ಟಿಗೆ ಬೆಂಕಿ ತಾಕದಿರಲೆಂಬುದು ನನ್ನ ಎಣಿಕೆಯಾಗಿದ್ದಿತು. ಈ ರೀತಿಯಲ್ಲಿ ಸುಮಾರು ನೂರು ಮದ್ದಿನ ಕೋಶಗನ್ನು ಮಾಡಿಟ್ಟೆ. ಒದ್ದೆಯಾಗಿದ್ದ ಮದ್ದಿನ ಪೀಪಾಯಿಯ ಬಗ್ಗೆ ನನಗೆ ಯಾವ ಅಪಾಯ ಶಂಕೆಯೂ ಇರಲಿಲ್ಲ. ಅದನ್ನು ನನ್ನ ಹೊಸ ಗುಹೆಯಲ್ಲಿ ಇರಿಸಿದೆ. ಉಳಿದ ಕೋಶಗಳನ್ನು ಗುಡ್ಡದ ಬದಿಯಲ್ಲಿ ಅಲ್ಲಲ್ಲಿ ಗೂಡುಗಳನ್ನು ತೋಡಿ ತೇವ ಹಿಡಿಯದಂತೆ ಸುರಕ್ಷಿತವಾಗಿಟ್ಟೆ. ಈ ಕೆಲಸವನ್ನು ಮುಗಿಸುವುದಕ್ಕೆ ನನಗೆ ಸುಮಾರು ಎರಡು ವಾರಗಳ ಕಾಲ ಹಿಡಿಯಿತು.

ಈ ಕೆಲಸಗಳನ್ನು ಮಾಡುತ್ತಿದ್ದಾಗ ನಡುನಡುವೆ ಬಿಡುವು ಮಾಡಿಕೊಂಡು ನಾನು ನನ್ನ ಕೋವಿಯನ್ನು ತೆಗೆದುಕೊಂಡು ಹೊರಗೆ ಸುತ್ತಾಡಲು ಹೊರಡುತ್ತಿದ್ದೆ. ಆಹಾರಯೋಗ್ಯವಾದ ಯಾವುದಾದರೂ ಪ್ರಾಣಿಯನ್ನು ಬೇಟೆಯಾಡಲು ಬಂದೀತೇನೋ ಎಂಬ ಎಣಿಕೆಯೊಂದು ; ದ್ವೀಪದಲ್ಲಿ ಏನೇನು ಬೆಳೆಯುತ್ತದೆಯೆಂಬುದನ್ನು ತಿಳಿದುಕೊಳ್ಳಬೇಕೆಂಬ ಉದ್ದೇಶವೊಂದು. ಮೊದಲ ಸಲ ನಾನು ಹೊರಕ್ಕೆ ಹೊರಟಾಗ ದ್ವೀಪದಲ್ಲಿ ಆಡುಗಳು ಓಡಾಡುತ್ತಿದ್ದದು ಗೋಚರಕ್ಕೆ ಬಂದಿತು ; ಆದರೆ ನನ್ನ ದುರದೃಷ್ಟಕ್ಕೆ ಅವುಗಳನ್ನು ಹಿಡಿಯುವುದು ಅತ್ಯಂತ ಕಷ್ಟವಾಗಿ ಕಂಡಿತು. ಏಕೆಂದರೆ ಅವು ಅಷ್ಟು ಬೆದರುತ್ತಿದ್ದುವು ಮತ್ತು ಜಿಂಕೆಯಂತೆ ಜಿಗಿದೋಡುತ್ತಿದ್ದುವು. ಆದರೆ ನಾನು ಇದರಿಂದ ನಿರಾಶೆಗೊಳ್ಳಲಿಲ್ಲ. ಯಾವಾಗಲಾದರೂ ಒಮ್ಮೊಮ್ಮೆ ಒಂದೊಂದನ್ನಾದರೂ ಗುಂಡುಹೊಡೆದು ಕೊಲ್ಲಬಹುದೆಂದು ನನಗೆ ತೋರಿತು. ನಾನು ಮಾಡಿದ್ದಾದರೂ ಹಾಗೆಯೆ. ಮೊದಲು ಅವು ಎಲ್ಲಿ ಹೆಚ್ಚಾಗಿ ಬಂದು ಹೋಗುತ್ತವೆಯೆಂಬುದನ್ನು

ಘಟನೆಗಳನ್ನು ಹೇಗೆ ಎದುರಿಸಬೇಕೆಂಬುದನ್ನು ಕುರಿತು ಮೊದಲಿನಿಂದಲೂ ಆಲೋಚನೆ ಮಾಡುತ್ತಿದ್ದೆ.

ನಾನು ಈಗ ತೊಡಗಿದ್ದಂತಹ ಮಾತುಕತೆಯಿಲ್ಲದ ನೀರವವಾದ ಏಕಾಂತಜೀವನವನ್ನು ಪ್ರಪಂಚದಲ್ಲಿ ಇದುವರೆಗೆ ಯಾರೂ ಜೀವಿಸಿರಲಾರರು; ಕಂಡು ಕೇಳಿರಲಾರರು. ಆ ಜೀವನಕ್ರಮವನ್ನು ಕ್ರಮವಾಗಿ ಮತ್ತೆ ಮೊದಲಿನಿಂದ ನಿರೂಪಿಸುತ್ತೇನೆ:

ಈ ದ್ವೀಪಕ್ಕೆ ನಾನು ಕಾಲಿಟ್ಟದ್ದು ಸೆಪ್ಟಂಬರ್ ೩೦ನೆಯ ತಾರೀಖು. ಆಗ ಈ ದ್ವೀಪದಲ್ಲಿ ಸೂರ್ಯನು ತುಲಾ ಸಂಕ್ರಾಂತಿಯಲ್ಲಿದ್ದು (Autumnol Equinox) ಹೆಚ್ಚು ಕಡಮೆ ನನ್ನ ನೆತ್ತಿಯ ಮೇಲೆ ಸಂಚರಿಸುತ್ತಿದ್ದನು. ನಾನು ಇಲ್ಲಿಗೆ ಬಂದು ಹತ್ತುಹನ್ನೆರಡು ದಿನಗಳಾದಮೇಲೆ, ಪುಸ್ತಕಗಳೂ ಲೇಖನ ಸಾಮಗ್ರಿಯೂ ಇಲ್ಲದ್ದರಿಂದ ಕಾಲಗಣನೆಯನ್ನೂ ವಿಶ್ರಾಂತಿ ದಿನಗಳನ್ನೂ (ಭಾನುವಾರಗಳನ್ನು) ಮರೆತುಬಿಡಬಹುದೆಂದು ಶಂಕಿಸಿ, ಒಂದು ದೊಡ್ಡ ಕಂಬದಮೇಲೆ "೧೬೫೦ರ ಸೆಪ್ಟೆಂಬರ್ ೩೦ನೆಯ ತಾರೀಖಿನ ದಿನ ಇಲ್ಲಿಯ ಕರೆಯನ್ನು ಮೆಟ್ಟಿದೆ" ಎಂಬುದಾಗಿ ದೊಡ್ಡಕ್ಷರಗಳಲ್ಲಿ ಕೆತ್ತಿ, ಕಂಬವನ್ನು ಶಿಲುಬೆಯಾಕಾರದಲ್ಲಿ ಜೋಡಿಸಿ ನೆಟ್ಟೆ. ಈ ಶಿಲುಬೆಕಂಬದ ತೋಳುಗಳ ಮೇಲೆ ಪ್ರತಿದಿನವೂ ನನ್ನ ಚೂರಿಯಿಂದ ಒಂದು ಕಚ್ಚನ್ನು ಮಾಡುತ್ತಿದ್ದೆ. ಪ್ರತಿ ಏಳನೆಯ ಕಚ್ಚೂ ಉಳಿದ ಕಚ್ಚುಗಳ ಎರಡರಷ್ಟು ಉದ್ದವಾಗಿರುತ್ತಿತ್ತು ; ಪ್ರತಿ ತಿಂಗಳ ಮೊದಲನೆಯ ದಿನದ ಕಚ್ಚು ವಾರಾಂತ್ಯದ ಉದ್ದ ಕಚ್ಚಿನ ಎರಡರಷ್ಟಿರುತ್ತಿತ್ತು. ಈ ರೀತಿಯಲ್ಲಿ ನಾನು ನನ್ನ ಕಾಲ ಗಣನೆಯ ಪಂಚಾಂಗವೊಂದನ್ನು ಯೋಜಿಸಿದೆ.

ನಾನು ಮೇಲೆ ವರ್ಣಿಸಿರುವಂತೆ ಹಡಗಿಗೆ ಹಲವು ಪ್ರಯಾಣಗಳನ್ನು ಮಾಡಿ ಅಲ್ಲಿಂದ ತಂದ ಅನೇಕ ಪದಾರ್ಥಗಳಲ್ಲಿ ಕಡಮೆಯ ಬೆಲೆಯವಾದರೂ ನನಗೆ ಬಹಳ ಉಪಯೋಗಕರವಾದ ಹಲವಾರು ಪದಾರ್ಥಗಳಿದ್ದುವು. ಅವುಗಳನ್ನು ಮೇಲೆ ಹೆಸರಿಸಿಲ್ಲ. ಮುಖ್ಯವಾಗಿ, ಲೇಖನಿಗಳು, ಮಸಿ, ಕಾಗದ, ಹಡಗಿನ ನಾಯಕನ ಮತ್ತು ಇತರರ ಸ್ವಂತ ಉಪಯೋಗದ ಪದಾರ್ಥಗಳು, ಎರಡು ಮೂರು ದಿಕ್ಸೂಚಿಗಳು, ನೌಕಾಪ್ರಯಾಣಕ್ಕೆ ಸಂಬಂಧಪಟ್ಟ ನಕ್ಷೆಗಳು ಮತ್ತು ಪುಸ್ತಕಗಳು ಇವೆಲ್ಲವನ್ನೂ ತಂದು, ಅವು ನನಗೆ ಬೇಕಿರಲಿ ಬೇಡದಿರಲಿ, ಒಂದು ಕಡೆ ಒಟ್ಟಿಕೊಂಡೆ. ಇವುಗಳ ಜೊತೆಗೆ, ನನ್ನ ಸರಕಿನೊಂದಿಗೆ ಸೇರಿಕೊಂಡು ಇಂಗ್ಲೆಂಡಿನಿಂದ ಬಂದಿದ್ದ ಮೂರು ಒಳ್ಳೆಯ ಬೈಬಲ್ ಗ್ರಂಥಗಳೂ ಎರಡು ಮೂರು ಪೋರ್ಚುಗೀಸು ಪ್ರಾರ್ಥನಾ ಪುಸ್ತಕಗಳೂ ದೊರೆತುವು.

ಏತಕ್ಕೆ ಹೀಗೆ ಕೈಬಿಟ್ಟು ನಿಸ್ಸಹಾಯವಾದ ಸ್ಥಿತಿಯಲ್ಲಿರಿಸಿ, ನಿರಾಶೆಯ ಪ್ರಪಾತಕ್ಕೆ ತಳ್ಳಿ, ಯಾವ ವಿನೋದಾರ್ಥವಾಗಿ ತಾನು ಇದನ್ನೆಲ್ಲಾ ಅವಲೋಕಿಸುತ್ತಿರುವನೋ ಎಂದು ನನಗೆ ದೈವಸಂಕಲ್ಪದ ಬಗ್ಗೆ ದಿಗ್ಭ್ರಮೆ ಹಿಡಿಯುತ್ತಿದ್ದಿತು. ಆದರೆ ಇಂಥ ಭಾವನೆಗಳು ಬಂದಾಗಲೆಲ್ಲಾ ಇನ್ನಾವುದೋ ಭಾವನೆ ಮೂಡಿ ಆ ಭಾವನೆಗಳನ್ನೆಲ್ಲಾ ತಡೆಗಟ್ಟಿ ನನ್ನನ್ನು ಹಳಿಯುತ್ತಿದ್ದಿತು. ವಿಶೇಷವಾಗಿ, ಒಂದು ದಿನ ನಾನು ಕೈಯಲ್ಲಿ ಕೋವಿ ಹಿಡಿದು ಕಡಲ ದಂಡೆಯಲ್ಲಿ ಹೋಗುತ್ತಿದ್ದಾಗ ನನ್ನ ಸದ್ಯದ ಪರಿಸ್ಥಿತಿಯನ್ನು ಕುರಿತು ಬಹಳ ಚಿಂತಾಕ್ರಾಂತನಾಗಿದ್ದೆ. ಆಗ ವಿವೇಕವಾಣಿಯು ನನ್ನನ್ನು ಈ ರೀತಿಯಲ್ಲಿ ಎಚ್ಚರಿಸಿತು : "ನೀನು ಶೋಚನೀಯವಾದ ಸ್ಥಿತಿಯಲ್ಲಿರುವುದು ನಿಜ. ಆದರೆ ನಿನ್ನ ಉಳಿದ ಜೊತೆಯವರೆಲ್ಲಿರುವರೆಂಬುದನ್ನು ನೆನೆ. ನೀವು ದೋಣಿ ಹತ್ತಿದವರು ಹನ್ನೊಂದು ಮಂದಿಯಲ್ಲವೆ? ಉಳಿದ ಹತ್ತುಮಂದಿ ಎಲ್ಲಿ? ಅವರೇ ಉಳಿದುಕೊಂಡು ನೀನೇಕೆ ಸಾಯಲಿಲ್ಲ? ವಿಧಿ ನಿನ್ನೊಬ್ಬನನ್ನೇ ಉಳಿಸಿತೇಕೆ? ಇಲ್ಲಿರುವುದು ಒಳ್ಳೆಯದೆ, ಅಲ್ಲಿರುವುದು ಒಳ್ಳೆಯದೇ?" "ಅಲ್ಲಿರುವುದು' ಎಂಬ ಮಾತನ್ನು ಉಚ್ಚರಿಸಿದಾಗ ನನ್ನ ಕೈ ತಾನಾಗಿ ಕಡಲ ಕಡೆ ತೋರಿಸುತ್ತಿತ್ತು. ನಾವು ಕೇಡುಗಳನ್ನು ಕುರಿತು ಆಲೋಚಿಸುವಾಗ ಅವುಗಳಲ್ಲಿ ಅಂತರ್ಗತವಾಗಿರುವ ಒಳ್ಳೆಯದನ್ನು ಕುರಿತು ಚಿಂತಿಸಬೇಕು ಮತ್ತು ಅದಕ್ಕಿಂತಲೂ ಹೆಚ್ಚಿನ ಕೇಡುಗಳೊಡನೆ ಅವನ್ನು ಹೋಲಿಸಬೇಕು.

ಆಮೇಲೆ ನನಗೆ ಮರಳಿ ಹೀಗೆ ತೋರಿತು ; ನಾನು ಜೀವದಿಂದಿರುವುದಕ್ಕಾಗಿಯೇ ನನಗೆ ಎಷ್ಟೊಂದು ಸಾಮಗ್ರಿ ಸಂಪತ್ತು ದೊರಕಿತ್ತು! ಹಡಗು ನೆಲದಲ್ಲಿ ಹೂತಕಡೆ ನಿಂತಿರದೆ ಎಲ್ಲಿಯೋ ಕೊಚ್ಚಿಕೊಂಡು ಹೊರಟು ಹೋಗಿ, ನಾನು ಮೊತ್ತಮೊದಲು ಈ ದ್ವೀಪದ ಕರೆಯಂಚಿನ ಮೇಲೆ ಬಂದು ಬಿದ್ದಸ್ಥಿತಿಯಲ್ಲಿಯೇ ಇರಬೇಕಾಗಿ ಬಂದಿದ್ದರೆ, ಇಲ್ಲಿನ ನನ್ನ ಬಾಳು ಎಂತಿರುತ್ತಿದ್ದಿತು? ಹೀಗೆ ಯೋಚಿಸಿ ನನಗೆ ನಾನೇ ಗಟ್ಟಿಯಾಗಿ ಹೇಳಿಕೊಂಡೆ : "ಕೋವಿ, ಮದ್ದುಗುಂಡು, ಆಯುಧೋಪಕರಣಗಳು, ಬಟ್ಟೆಬರೆ, ಹಾಸಿಗೆ ಹೊದಿಕೆ, ಗೂಡಾರ – ಇವು ಏನೊಂದೂ ಇಲ್ಲದೆ ನಾನು ಏನು ಮಾಡಬೇಕಾಗಿತ್ತು?" ಈಗ ಇವೆಲ್ಲವೂ ನನ್ನ ಬಳಿ ವಿಪುಲವಾಗಿದ್ದುದರಿಂದ, ಮದ್ದು ಮುಗಿದುಹೋದರೂ ಕೋವಿಯನ್ನು ಉಪಯೋಗಿಸಬೇಕಾದ ಆವಶ್ಯಕತೆಯಿಲ್ಲದೆ ನನ್ನ ಆಯುಸ್ಸು ತೀರುವವರೆಗೂ ನಾನು ಇದ್ದುದರಲ್ಲಿ ಹೊಟ್ಟೆಗೆ ಬಟ್ಟೆಗೆ ಯಾವ ಕೊರತೆಯೂ ಇಲ್ಲದೆ ಬದುಕುವ ಭರವಸೆಯಿತ್ತು, ಮದ್ದು ಮುಗಿದುಹೋದ ಮೇಲೆ, ನನ್ನ ಆರೋಗ್ಯವೂ ಬಲವೂ ಉಡುಗಿದ ಮೇಲೆ, ಅಕಸ್ಮಾತ್ತಾಗಿ ಸಂಭವಿಸುವ

ಕಾಡುತ್ತಿದ್ದ ಆಲೋಚನೆಗಳ ಹೊರೆಯನ್ನು ಇಳಿಸಿಕೊಳ್ಳುವುದಕ್ಕಾಗಿ. ಈಗ ನನ್ನ ನಿರಾಶೆ ತಗ್ಗುತ್ತ ಬಂದು ವಿವೇಚನಾಶಕ್ತಿ ಮೇಲುಗೈಯಾಗಿದ್ದುದರಿಂದ, ನನಗೆ ನಾನು ಸಮಾಧಾನಪಟ್ಟುಕೊಂಡು, ನನಗೆ ಆಗಿದ್ದ ಒಳ್ಳೆಯದನ್ನೂ ಕೆಟ್ಟದ್ದನ್ನೂ ಬರೆದಿಟ್ಟೆ. ಲೆಕ್ಕಿಗನು ಲೇಣೆದೇಣೆಗಳನ್ನು ಬರೆದಿಡುವಷ್ಟು ಕರಾರುವಾಕ್ಕಾಗಿ ಆ ಅಂಶಗಳ್ನು ಪಕ್ಕಪಕ್ಕಗಳಲ್ಲಿ ಬರೆದಿಟ್ಟೆ.

**ಕೆಟ್ಟದ್ದು**

೧) ನಾನು ಭಯಂಕರವಾದ ನಿರ್ಜನ ದ್ವೀಪದಲ್ಲಿ ಬಂದು ಬಿದ್ದಿದ್ದೇನೆ. ಇಲ್ಲಿಂದ ಪಾರಾಗುವ ಆಶೆ ಲವಲೇಶವೂ ಇಲ್ಲ.

೨) ದೈವವು ಪ್ರಪಂಚದಲ್ಲಿ ಎಲ್ಲರನ್ನೂ ಬಿಟ್ಟು ನನ್ನೊಬ್ಬನನ್ನೇ ಆರಿಸಿಕೊಂಡು ನಾನು ದುಃಖವನ್ನು ಅನುಭವಿಸಬೇಕೆಂದು ನಿಯಾಮಕಮಾಡಿದೆ.

೩) ನಾನು ಮಾನವಕೋಟಿಯಿಂದ ಬೇರ್ಪಟ್ಟು, ಮಾನವ ಸಮಾಜದಿಂದ ಬಹಿಷ್ಕೃತನಾಗಿ, ಒಬ್ಬೊಂಟಿಗನಾಗಿದ್ದೇನೆ.

೪) ನನ್ನ ಮೈ ಮುಚ್ಚಿಕೊಳ್ಳಲು ನನ್ನಲ್ಲಿ ಬಟ್ಟೆಯಿಲ್ಲ.

೫) ಮನುಷ್ಯನೇ ಆಗಲಿ ಪ್ರಾಣಿಯೇ ಆಗಲಿ ಮೇಲೆಬಿದ್ದು ಹಿಂಸಿಸಿದರೆ, ಆತ್ಮರಕ್ಷಣೆಮಾಡಿಕೊಳ್ಳಲು ನನ್ನಲ್ಲಿ ಯಾವ ಸಾಧನೋಪಾಯವೂ ಇಲ್ಲ.

೬) ನನ್ನೊಡನೆ ಮಾತನಾಡಿ ನನ್ನ ಬೇಸರ ಕಳೆಯಲು ಯಾವ ಪ್ರಾಣಿಯೂ ನನ್ನ ಬಳಿ ಇಲ್ಲ.

**ಒಳ್ಳೆಯದು**

೧) ಆದರೆ, ಹಡಗಿನಲ್ಲಿದ್ದ ನನ್ನ ಸಂಗಡಿಗರೆಲ್ಲಾ ಕಡಲಿನಲ್ಲಿ ಮುಳುಗಿ ಹೋದರು. ಆದರೆ ನಾನು ಮುಳುಗಿಹೋಗದೆ ಜೀವಸಹಿತ ಉಳಿದುಕೊಂಡಿದ್ದೇನೆ.

೨) ಆದರೆ, ದೈವವು ಹಡಗಿನವರನ್ನೆಲ್ಲಾ ಬಿಟ್ಟು ನನ್ನೊಬ್ಬನನ್ನೇ ಆರಿಸಿಕೊಂಡು ಸಾವಿನ ಬಾಯಿಂದ ಪಾರುಮಾಡಿದೆ. ಯಾವ ದೈವವು ನನ್ನನ್ನು ಮೃತ್ಯುಮುಖದಿಂದ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಪಾರು ಮಾಡಿತೋ ಅದೇ ದೈವವು ನನ್ನನ್ನು ಈ ದುಃಸ್ಥಿತಿಯಿಂದಲೂ ಪಾರುಮಾಡಬಹುದು.

೩) ಆದರೆ, ನಾನು ಹೊಟ್ಟೆಗಿಲ್ಲದೆ, ಆಹಾರ ಸಾಮಗ್ರಿಯೇ ದೊರಕದ ಬಂಜರುಗಾಡಿನಲ್ಲಿ ನರಳುತ್ತ ನಾಶಹೊಂದಬೇಕಾದ ಸ್ಥಿತಿಯಲ್ಲಿಲ್ಲ.

೪) ಆದರೆ ನಾನು ಉಷ್ಣಪ್ರದೇಶದಲ್ಲಿದ್ದೇನೆ. ಬಟ್ಟೆ ಇದ್ದರೂ ಅವನ್ನು ತೊಡುವುದು ಅನಾವಶ್ಯಕ.

ಈ ಸಂದರ್ಭದಲ್ಲಿ, ನಮ್ಮ ಹಡಗಿನಲ್ಲಿದ್ದ ನಾಯಿಯ ಮತ್ತು ಎರಡು ಬೆಕ್ಕುಗಳ ವಿಚಾರವನ್ನು ಉಲ್ಲೇಖಿಸಿದರೆ ಸಾಕು : ಅವುಗಳ ಚರಿತೆಯನ್ನು ಮುಂದೆ ಉಚಿತ ಪ್ರಸಂಗದಲ್ಲಿ ಹೇಳಲಾಗಿದೀತು. ಎರಡು ಬೆಕ್ಕುಗಳನ್ನು ನಾನು ನನ್ನೊಡನೆ ಕರೆತಂದೆ. ನಾನು ಮೊದಲನೆಯ ಸಲ ತೆಪ್ಪದ ಮೇಲೆ ಸರಕು ತುಂಬಿಕೊಂಡು ಹೊರಟಂದು ನಾಯಿ ತಾನಾಗಿ ಹಡಗಿನಿಂದ ಹೊರನೆಗೆದು ಈಜಿಕೊಂಡು ನನ್ನನ್ನು ಹಿಂಬಾಲಿಸಿತು : ಅದು ಬಹಳ ವರ್ಷಗಳವರೆಗೆ ನನ್ನ ನಚ್ಚಿನ ಒಡನಾಡಿಯಾಗಿತ್ತು. ಈ ನಾಯಿ ನನಗೆ ಏನನ್ನೂ ತಂದುಕೊಡಬೇಕಾಗಿರಲಿಲ್ಲ; ಸರ್ವದಾ ಅದರ ಸಹವಾಸವೂ ನನಗೆ ಬೇಕಾಗಿರಲಿಲ್ಲ. ಒಮ್ಮೊಮ್ಮೆಯಾದರೂ ಅದು ನನ್ನೊಡನೆ ಮಾತನಾಡಬೇಕೆಂದು ನನ್ನ ಬಯಕೆ ; ಆದರೆ ಅದು ಮಾತನಾಡಲಾರದೆಂಬುದು ನನಗೆ ಗೊತ್ತಿತ್ತು. ಎಂಥ ಬಯಕೆ ; ಎಂಥ ನಿರಾಶೆ!

ಮೇಲೆ ಹೇಳಿದವುಗಳ ಜೊತೆಗೆ, ನನಗೆ ಇನ್ನೂ ಹಲವಾರು ಪದಾರ್ಥಗಳು ಬೇಕಾಗಿದ್ದುವು. ನೆಲವನ್ನು ಅಗೆದು ಮಣ್ಣನ್ನು ತೋಡಿಹಾಕಲು ಗುದ್ದಲಿ, ಎಲೆಗುದ್ದಲಿ, ಪಿಕಾಸಿ – ಇವೆಲ್ಲ ಬೇಕಾಗಿದ್ದುವು. ಜೊತೆಗೆ ಸೂಜಿ, ಗುಂಡುಸೂಜಿ, ದಾರ – ಇವೂ ಬೇಕಾಗಿದ್ದುವು.

ಮೇಲ್ಕಂಡ ಆಯುಧೋಪಕರಣಗಳು ಇಲ್ಲದಿದ್ದುದರಿಂದ, ನಾನು ಕೈಕೊಂಡು ಮಾಡಿದ ಪ್ರತಿಯೊಂದು ಕೆಲಸವೂ ಪ್ರಯಾಸಕರವಾಗಿದ್ದುದಲ್ಲದೆ ಬಹಳ ಕಾಲವನ್ನು ಹಿಡಿಯುತ್ತಿದ್ದಿತು. ನನ್ನ ವಾಸಸ್ಥಳದ ಸುತ್ತಲೂ ಹಾಕಿದ ದಸಿಬೇಲಿಯನ್ನು ಕಟ್ಟಲು ನನಗೆ ಸುಮಾರು ಒಂದು ವರ್ಷಕಾಲ ಹಿಡಿಯಿತು. ಆದರೆ, ಯಾವ ಕೆಲಸವೇ ಆಗಲಿ ಅದನ್ನು ನಿರ್ವಹಿಸಲು ನನ್ನ ಮುಂದೆ ಒಂದು ಜೀವಮಾನದ ಕಾಲಾವಕಾಶವೇ ಇದ್ದುದರಿಂದ ಮಾಡಿದ ಕೆಲಸ ಬೇಸರ ಹಿಡಿಸುವುದೆಂದಾಗಲಿ ಕಾಲ ಹಿಡಿಯುವುದೆಂದಾಗಲಿ ಚಿಂತಿಸುವ ಆವಶ್ಯಕತೆಯೇ ನನಗಿರಲಿಲ್ಲ. ನನ್ನ ಆಹಾರ ಸಂಪಾದನೆಗಾಗಿ ಪ್ರತಿದಿನವೂ ದ್ವೀಪವನ್ನೊಂದು ಸಲ ಬಳಸಿಬರುವುದು ಹೊರತಾಗಿ ನನಗೆ ಬೇರೆ ಯಾವ ಉದ್ಯೋಗವೂ ಇರಲಿಲ್ಲ.

**ಸದಿಸದ್ವಿವೇಚನೆ**

ಇಷ್ಟಾದ ಮೇಲೆ, ನನ್ನ ಪರಿಸ್ಥಿತಿಯನ್ನು ಕುರಿತು ಪರ್ಯಾಲೋಚನೆ ಮಾಡತೊಡಗಿದೆ. ಪರ್ಯಾಲೋಚನೆ ಮಾಡಿ, ನನ್ನ ಸ್ಥಿತಿಗತಿಯನ್ನು ಬರಹದ ರೂಪಕ್ಕಿಳಿಸಿದೆ : ಮುಂದೆ ಯಾರಾದರೂ ಓದಿಕೊಳ್ಳಲೆಂದಲ್ಲ ; ನನ್ನ ಮನಸ್ಸನ್ನು

ನಾನು ನನ್ನ ಈ ವಸತಿಗೆ ಸಾಮಗ್ರಿ ಸಲಕರಣೆಗಳನ್ನು ತಂದು ತುಂಬಿಕೊಂಡ ಪರಿಯನ್ನೂ ಈ ಮೊದಲೇ ಬಿತ್ತರಿಸಿದ್ದೇನೆ. ಅವುಗಳನ್ನು ತಂದು ಹೇಗೆ ಹೇಗೆಯೊ ಎಲ್ಲೆಲ್ಲಿಯೋ ಅಡಕಿಬಿಟ್ಟಿದ್ದೆ. ಕಾಲೂರುವುದಕ್ಕೂ ಎಡೆಯಿರಲ್ಲಿಲ. ಆದ್ದರಿಂದ, ಸ್ಥಳಾವಕಾಶವನ್ನು ವಿಶಾಲಗೊಳಿಸಿಕೊಳ್ಳಬೇಕಾದ ಆವಶ್ಯಕತೆಯೊದಗಿತು. ಗುಡ್ಡದ ಬದಿಯ ಗವಿಯ ಭಾಗವನ್ನು ಒಳಕ್ಕೆ ಕೊರೆದುಕೊಂಡು ಹೋದೆ. ಕಲ್ಲುಬಂಡೆ ಹೆಚ್ಚಾಗಿಲ್ಲದೆ ಮರಳುಮಣ್ಣೇ ಹೆಚ್ಚಾಗಿದ್ದುದರಿಂದ ಕೊರೆಯುವ ಕೆಲಸ ತಕ್ಕಮಟ್ಟಿಗೆ ಹಗುರವಾಯಿತು. ಹೀಗೆ ಒಳಕ್ಕೆ ಸ್ವಲ್ಪ ದೂರ ಕೊರೆದುಕೊಂಡು ಹೋದಮೇಲೆ ಬಲಪಕ್ಕದಲ್ಲಿ ಒಂದು ಹಾದಿಯನ್ನು ಕೊರೆಯತೊಡಗಿದೆ ; ಬಲಭಾಗದ ಮಾರ್ಗದೊಳಗೆ ಮತ್ತೆ ಅದರ ಬಲಕ್ಕೆ ಕೊರೆಯತೊಡಗಿದೆ. ಹೀಗೆ ಕೊರೆದು, ಗುಡ್ಡದೊಳಗಡೆಯಿಂದ ಹೊರಕ್ಕೆ ಬರಲು ಒಂದು ಮಾರ್ಗವನ್ನು ಕಲ್ಪಿಸಿದೆ. ಈ ಮಾರ್ಗದ ಮೂಲಕ ನನ್ನ ಗೂಡಾರದೊಳಕ್ಕೂ ಉಗ್ರಾಣದ ಮನೆಗೂ ಹೋಗಿ ಬರುವುದಕ್ಕೆ ಅವಕಾಶವಾದುದಲ್ಲದೆ ಹೆಚ್ಚಿನ ಸರಕನ್ನು ಇಡುವುದಕ್ಕೂ ಎಡೆಯಾಯಿತು.

ಇದಾದಮೇಲೆ ನನಗೆ ಆವಶ್ಯಕವಾಗಿದ್ದ ಅನೇಕ ಪದಾರ್ಥಗಳನ್ನು ಮಾಡತೊಡಗಿದೆ. ನನಗೆ ಒಂದು ಕುರ್ಚಿಯೂ ಒಂದು ಮೇಜೂ ಅತ್ಯಾವಶ್ಯಕವಾಗಿದ್ದುವು. ಬರೆಯುವುದು, ತಿನ್ನುವುದು ಮತ್ತು ಇನ್ನೂ ಅನೇಕ ಕಾರ್ಯಗಳಿಗೆ ಮೇಜಿಲ್ಲದೆ ನನಗೆ ಬಹಳ ತೊಂದರೆಯಾಗಿದ್ದಿತು. ಆದ್ದರಿಂದ ಅವುಗಳ ಕೆಲಸವನ್ನು ಹಿಡಿದೆ.

ಈ ಸಂದರ್ಭದಲ್ಲಿ ಒಂದು ಅಂಶವನ್ನು ನಾನು ಸ್ಪಷ್ಟಪಡಿಸಲಿಚ್ಛಿಸುತ್ತೇನೆ. ಮನುಷ್ಯನು ಮನಸ್ಸು ಮಾಡಿದರೆ ಯಾವ ಯಾಂತ್ರಿಕ ಕಲೆಯಲ್ಲಾದರೂ ಪ್ರವೀಣತೆಯನ್ನು ಪಡೆಯಬಹುದು. ನಾನು ಹಿಂದೆಂದೂ ಒಂದು ಆಯುಧವನ್ನೂ ಹಿಡಿದವನಲ್ಲ ; ಕಾಲಕ್ರಮದಲ್ಲಿ ಸತತಶ್ರಮವೂ ಅಭ್ಯಾಸವೂ ಕಲ್ಪನಾಶಕ್ತಿಯೂ ಕಲೆತು ಯಾವ ಪದಾರ್ಥವೆಂದರೆ ಅದನ್ನು ಮಾಡುವ ಸಾಮರ್ಥ್ಯವನ್ನು ಪಡೆದೆ. ತಕ್ಕ ಆಯುಧಗಳಿಲ್ಲದಿದ್ದುದೇ ದೊಡ್ಡ ಕೊರತೆಯಾಗಿದ್ದಿತು. ಆದರೂ ತಕ್ಕ ಆಯುಧಗಳಿಲ್ಲದೆಯೇ ಅನೇಕ ಪದಾರ್ಥಗಳನ್ನು ನಿರ್ಮಿಸಿದೆ. ಕೆಲವನ್ನು ನನ್ನಲ್ಲಿದ್ದ ಕೈಬಾಚಿ ಮತ್ತು ಕೈಕೊಡಲಿಗಳ ಸಹಾಯದಿಂದ ಮಾಡಿದೆ. ಉದಾಹರಣೆಗೆ, ಒಂದು ಹಲಗೆ ಬೇಕಾದರೆ, ಒಂದು ಮರವನ್ನು ಕಡಿದು ಅದು ಹಲಗೆಯ ಆಕಾರಕ್ಕೆ ಬರುವವರೆಗೂ ಅದನ್ನು ಬಾಚಿಯಿಂದ ಎರಡೂಕಡೆ ಕೆತ್ತುತ್ತಿದ್ದೆ. ಹೀಗೆ ಒಂದು ಹಲಗೆ ಮಾಡಲು ಒಂದು ಇಡಿಯ ಮರವೇ ಬೇಕಾಗಿತ್ತೆಂಬುದೇನೋ

೫) ಆದರೆ, ನನ್ನನ್ನು ಹಿಂಸಿಸುವಂತಹ ದುಷ್ಟಮೃಗಗಳೇ ಇಲ್ಲದ ದ್ವೀಪದಲ್ಲಿ ಬಂದು ಬಿದ್ದಿದ್ದೇನೆ. ದುಷ್ಟಮೃಗಗಳು ತುಂಬಿರುವ ಆಫ್ರಿಕಾ ತೀರ ಪ್ರದೇಶದಲ್ಲಿ ಹಡಗೊಡೆದು ನಾನು ಅಲ್ಲಿಗೆ ಹೋಗಿಬಿದ್ದಿದ್ದರೆ ನನ್ನ ಗತಿ ಏನಾಗುತ್ತಿತ್ತು?

೬) ಆದರೆ, ದೇವರು ಹಡಗನ್ನು ಕರೆಯ ಸಮೀಪಕ್ಕೆ ತಂದುಬಿಟ್ಟದ್ದು ಅಚ್ಚರಿ. ಹಾಗಾಗಿರುವುದರಿಂದ ನಾನು ಬದುಕಿರುವವರೆಗೂ ನನಗೆ ಸಾಕಾಗುವ ಮಟ್ಟಿಗೆ ಹಲವು ಆವಶ್ಯಕ ಸಾಮಗ್ರಿ ಸಲಕರಣೆಗಳನ್ನು ಒಯ್ದು ತಂದಿಟ್ಟುಕೊಳ್ಳಲು ಸಾಧ್ಯವಾಯಿತು.

ಒಟ್ಟಿನ ಮೇಲೆ ಒಂದು ಅಂಶವು ನನಗೆ ಪ್ರಮಾಣೀಕೃತವಾಯಿತು. ಪ್ರಪಂಚದಲ್ಲಿ ಎಂತಹ ಶೋಚನೀಯವಾದ ಸ್ಥಿತಿಯೇ ಒದಗಲಿ, ಅದರಲ್ಲಿಲ್ಲದಿರುವ ಗುಣದಿಂದಾಗಲಿ ಅದರಲ್ಲಿರುವ ಗುಣದಿಂದಾಗಲಿ ನಮಗೆ ಉಪಕಾರವಾಗಿಯೇ ಆಗುವುದು. ಆದ್ದರಿಂದ, ಪ್ರಪಂಚದಲ್ಲೆಲ್ಲ ಅತ್ಯಂತ ಶೋಚನೀಯವಾದ ದುರವಸ್ಥೆಯ ಅನುಭವದ ಫಲಿತಾಂಶವಾದ ಈ ನಿರ್ದೇಶವು ಎಲ್ಲರಿಗೂ ಮಾರ್ಗದರ್ಶಕವಾಗಿರಲಿ: ನಮಗೆ ಅತ್ಯಂತ ದುಃಖಕರವಾಗಿ ತೋರುವ ಸನ್ನಿವೇಶಗಳಲ್ಲಿಯೂ ಅಹಿತಕರವಾದ ಅಂಶದೊಂದಿಗೆ ಹಿತಕರವಾದ ಅಂಶವೂ ಬೆರೆತಿರುತ್ತದೆ. ಸುಖಾವಹವಾದ ಸ್ಥಿತಿಯ ವಿಚಾರದಲ್ಲೂ ಇದು ಸತ್ಯ. ಮಾನವನು ಅಹಿತವಾದುದಕ್ಕಾಗಿ ಅಳಲದೆ, ಹಿತಕರವಾದುದಕ್ಕಾಗಿ ಹಿಗ್ಗದೆ ಸಮಸ್ಥಿತಿಯಲ್ಲಿರುವುದೇ ನಿಜವಾದ ಸೌಖ್ಯ.

ಈ ರೀತಿಯಲ್ಲಿ ನನ್ನ ಪರಿಸ್ಥಿತಿಯ ಬಗ್ಗೆ ನಾನು ಸಮಾಧಾನಗೊಂಡು, ಆ ವಿಚಾರವಾಗಿ ಇನ್ನು ಹೆಚ್ಚಿನ ಅನಾವಶ್ಯಕವಾದ ಚಿಂತೆಗೆ ಅವಕಾಶಕೊಡದೆ, ನನ್ನ ಬಾಳನ್ನು ಸಾಧ್ಯವಾದಮಟ್ಟಿಗೆ ಹಿತಕರವಾಗಿ ಮಾಡಿಕೊಳ್ಳುವ ಹವಣಿಕೆಯಲ್ಲಿ ತೊಡಗಿದೆ.

ನನ್ನ ವಾಸಸ್ಥಳದ ನಿರ್ಮಾಣದ ವಿಷಯವನ್ನು ಈ ಮೊದಲೇ ತಕ್ಕಮಟ್ಟಿಗೆ ಬಣ್ಣಿಸಿದ್ದೇನೆ. ನಾನು ಹಿಂದೆ ಕಟ್ಟಿದ್ದ ದಸಿಬೇಲಿ ಈಗ ಒಂದು ಗೋಡೆಯ ಸ್ವರೂಪವನ್ನು ತಳೆದಿದ್ದಿತು : ಬೇಲಿಯ ಸುತ್ತಲೂ ಎರಡು ಅಡಿಗಳಷ್ಟು ದಪ್ಪನಾಗಿ ಮಣ್ಣು ಹೆಪ್ಪಿನ ಗೋಡೆಯೊಂದನ್ನು ಎಬ್ಬಿಸಿದೆ. ಅಲ್ಲದೆ, ಸುಮಾರು ಒಂದೂವರೆ ವರ್ಷವಾದ ಮೇಲೆ, ಬಂಡೆಯ ಮೇಲಿನಿಂದ ಇಳಿಜಾರಾಗಿ ಕೆಲವು ಜಂತಿಗಳನ್ನು ಹರಡಿ, ಅವುಗಳ ಮೇಲೆ ಮರದ ರೆಂಬೆಗಳನ್ನು ಹರಹಿ, ಒಂದು ಬಗೆಯ ಮೇಲ್ಹಾವಣಿಯನ್ನು ರಚಿಸಿದೆ. ಮಳೆಯ ಹೊಡೆತವನ್ನು ತಡೆಯಲು ಇದು ಒಳ್ಳೆಯ ರಕ್ಷಣೆಯಾಗಿತ್ತು.

# ಅಧ್ಯಾಯ ೪

## ದಿನಚರಿಯ ವಿವರಗಳು

**ದಿನಚರಿಯ ಪ್ರಾರಂಭ**

ಸೆಪ್ಟೆಂಬರ್ ೩೦, ೧೬೫೯ :– ಹಡಗೊಡೆದು ಕಡಲುಪಾಲಾದ, ಅದೃಷ್ಟಹೀನನಾದ, ರಾಬಿನ್‌ಸನ್ ಕ್ರೂಸೊ ಎಂಬ ಹೆಸರಿನ ನಾನು ಈ ನಿರ್ಜನ ದ್ವೀಪಕ್ಕೆ ಬಂದುಬಿದ್ದೆ. ಅದಕ್ಕೆ ನಿರಾಶಾದ್ವೀಪವೆಂದು ಹೆಸರಿಟ್ಟೆ. ದಿನವೆಲ್ಲಾ ನನ್ನ ದುಃಸ್ಥಿತಿಯ ಬಗ್ಗೆ ಪರಿತಪಿಸಿದೆ. ಇರುಳು ಕವಿದ ಮೇಲೆ ಒಂದು ಮರದ ಮೇಲೆ ಮಲಗಿದೆ. ಚೆನ್ನಾಗಿ ನಿದ್ರೆ ಬಂದಿತು. ರಾತ್ರಿಯೆಲ್ಲಾ ಮಳೆ.

ಅಕ್ಟೋಬರ್ ೧ :– ಬೆಳಗ್ಗೆ ಕಡಲಿನ ಉಬ್ಬರದೊಂದಿಗೆ ಹಡಗು ಮೇಲಕ್ಕೆದ್ದು ತೇಲುತ್ತಿದ್ದುದು ಕಂಡುಬಂದು, ನನಗೆ ಅಚ್ಚರಿಯಾಯಿತು ; ಬರಬರುತ್ತ ಅದು ಕರೆಯ ಹತ್ತಿರ ಹತ್ತಿರಕ್ಕೆ ಗಾಳಿಯಿಂದ ಹೊಡೆದುಕೊಂಡು ಬಂದಿತು. ಅದನ್ನು ನೋಡಿ ಸಮಾಧಾನವಾದರೂ ನಷ್ಟರಾದ ನನ್ನ ಸಂಗಡಿಗರನ್ನು ನೆನೆದು ಮರುಗಿದೆ. ಬಹಳ ಹೊತ್ತಾದಮೇಲೆ ನೀರಿನಲ್ಲಿ ಮುಳುಗಿದ್ದ ಹಡಗು ಒಣಗಿದೆಯೆಂಬುದು ವ್ಯಕ್ತಪಟ್ಟು, ಕರೆಯ ಮರಳಿನಮೇಲೆ ನಡೆದು ಹೋಗುವವರೆಗೂ ನಡೆದುಕೊಂಡು ಹೋಗಿ ಬಳಿಕ ಈಜಿಕೊಂಡು ಹೋದೆ; ಈಜಿಕೊಂಡು ಹೋಗಿ ಹಡಗನ್ನು ಹತ್ತಿದೆ. ಈ ದಿನವೂ ಬಹಳ ಮಳೆ ; ಗಾಳಿ ಏನೂ ಇರಲಿಲ್ಲ.

ಅಕ್ಟೋಬರ್ ೧ ರಿಂದ ೨೪ :– ಈ ಎಲ್ಲ ದಿನಗಳಲ್ಲಿಯೂ ಹಡಗಿಗೆ ಅನೇಕ ಸಲ ಪ್ರಯಾಣಮಾಡಿ ನನಗೆ ಸಾಧ್ಯವಾದ ಸಾಮಗ್ರಿಗಳೆಲ್ಲವನ್ನೂ ಕರೆಯ ಮೇಲಕ್ಕೆ ನಾನೇ ಕಟ್ಟಿದ ತೆಪ್ಪಗಳ ಮೇಲೆ ತೆಗೆದುಕೊಂಡು ಬಂದೆ. ಈ ದಿನಗಳಲ್ಲಿಯೂ ಬಹಳ ಮಳೆ ; ಮಳೆಗಾಲವಾಗಿತ್ತೆಂದು ಕಾಣುತ್ತದೆ.

ಅಕ್ಟೋಬರ್ ೨೫ :– ಹಗಲಿರುಳೆಲ್ಲಾ ಬರಿಯ ಮಳೆ. ನಡುನಡುವೆ ಸ್ವಲ್ಪ ಜೋರಾದ ಗಾಳಿ. ಹಡಗು ಚೂರುಚೂರಾಗಿ ಒಡೆದುಹೋಯಿತು. ಗಾಳಿ ಇನ್ನೂ ಜೋರಾಗತೊಡಗಿತು. ಹಡಗು ಸಂಪೂರ್ಣವಾಗಿ ಕಣ್ಮರೆಯಾಯಿತು. ನಾನು ತಂದ ಸಾಮಾನುಗಳೆಲ್ಲವನ್ನೂ ಮಳೆಯಿಂದ ಕೆಡದಂತೆ ಮುಚ್ಚಿ ಸುರಕ್ಷಿತಪಡಿಸುವುದರಲ್ಲಿ ಈ ದಿನವನ್ನೆಲ್ಲಾ ಕಳೆದೆ.

ನಿಜ. ಆದರೆ ಅಂತಹುದೊಂದು ಹಲಗೆಯನ್ನು ದೊರಕಿಸಿಕೊಳ್ಳಲು ತಾಳ್ಮೆ ಮತ್ತು ದುಡಿಮೆಗಳಲ್ಲದೆ ಬೇರೆ ಯಾವ ಸಾಧನೋಪಾಯಗಳೂ ನನ್ನಲ್ಲಿರಲಿಲ್ಲ. ಕಾಲವಂತೂ ನನ್ನ ಮುಂದೆ ಯಥೇಚ್ಛವಾಗಿತ್ತು. ಆದ್ದರಿಂದ, ವೃಥಾ ಕಾಲಹರಣವಾಯಿತೆಂದು ನಾನು ವ್ಯಥೆಪಡುವ ಹಾಗೆಯೇ ಇರಲಿಲ್ಲ. ನನ್ನ ಭಾಗಕ್ಕೆ ಕೆಲಸವನ್ನು ಎಷ್ಟು ಹೊತ್ತು ಮಾಡಿದರೂ ಒಂದೇ ಆಗಿತ್ತು.

ಮೇಲೆ ಹೇಳಿದಂತೆ, ಒಂದು ಮೇಜನ್ನೂ ಕುರ್ಚಿಯನ್ನೂ ಮಾಡಿದೆ ; ಇವುಗಳನ್ನು ಮಾಡುವುದಕ್ಕಾಗಿ, ನಾನು ಹಡಗಿನಿಂದ ತೆಪ್ಪದ ಮೇಲೆ ತಂದಿದ್ದ ಸಣ್ಣ ಸಣ್ಣ ಹಲಗೆಗಳನ್ನು ಉಪಯೋಗಿಸಿಕೊಂಡೆ. ಉಳಿದ ಹಲಗೆಗಳೆಲ್ಲವನ್ನೂ ನನ್ನ ಗುಹೆಯ ಒಂದು ಬದಿಯಲ್ಲಿ ಒಂದರ ಮೇಲೊಂದರಂತೆ ಅಳವಡಿಸಿಟ್ಟು, ನನ್ನ ಆಯುಧ ಸಲಕರಣೆಗಳನ್ನು ಕೈಗೆ ಸುಲಭವಾಗಿ ಸಿಕ್ಕುವಂತೆ ಓರಣವಾಗಿಡಲು ಒಂದು ಬಡುಗಳ ತಂಡವನ್ನು ಮಾಡಿದೆ. ಕೆಲವು ಮರದ ತುಂಡುಗಳನ್ನು ಬಂಡೆಗೋಡೆಗೆ ಬಡಿದು, ಕೋವಿ ಮೊದಲಾದ ನೇತುಹಾಕುವಂತಹ ವಸ್ತುಗಳನ್ನು ನೇತುಹಾಕುವುದಕ್ಕಾಗಿ ಗೂಟಗಳನ್ನು ಸಿದ್ಧಗೊಳಿಸಿದೆ.

ಒಟ್ಟಿನ ಮೇಲೆ ಈಗ ನನ್ನ ಗುಹೆ ಸಮಸ್ತ ಆವಶ್ಯಕ ವಸ್ತುಗಳನ್ನೊಳಗೊಂಡ ಒಂದು ಶಸ್ತ್ರಾಗಾರವೂ ಆಹಾರ ಪದಾರ್ಥಗಳ ಉಗ್ರಾಣವೂ ಆಗಿ ಪರಿಣಮಿಸಿತ್ತು. ಹೀಗೆ ಓರಣಗೊಂಡ ಸರ್ವಸಾಮಗ್ರಿ ಸಂಗ್ರಹ ಸಂಪತ್ತನ್ನು ನೋಡುವುದೇ ನನ್ನ ನಲಿವಾಗಿತ್ತು.

ಈಗ ನಾನು ನನ್ನ ಪ್ರತಿನಿತ್ಯದ ಕಾರ್ಯಕಲಾಪಗಳ ಒಂದು ದಿನಚರಿಯನ್ನು ಬರೆದಿಡತೊಡಗಿದೆ. ಒಂದು ಕ್ಷಣವೂ ಬಿಡುವಿಲ್ಲದಂತೆ ಅನೇಕ ಕಾರ್ಯಗಳಲ್ಲಿ ಮಗ್ನನಾಗಿದ್ದುದರಿಂದ ತೀರ ಮೊದಲಿನಲ್ಲಿಯೇ ಈ ದಿನಚರಿಯನ್ನು ಪ್ರಾರಂಭಿಸಲಾಗಲಿಲ್ಲ ; ಅಲ್ಲದೆ ಮನಃಸ್ಥಿತಿಯೂ ಸರಿಯಾಗಿರಲಿಲ್ಲ. ಆದ್ದರಿಂದ, ಒಂದು ವೇಳೆ ಹಾಗೇನಾದರೂ ಆಗಲೇ ಅದನ್ನು ಬರೆದಿಡತೊಡಗಿದ್ದರೂ ಅದು ಅನೇಕ ಬೇಸರ ಹಿಡಿಸುವ ವಿವರಗಳಿಂದ ತುಂಬಿರುತ್ತಿದ್ದಿತು. ಮಸಿ ಮುಗಿದುಹೋದ ಪ್ರಯುಕ್ತ ಆ ದಿನಚರಿಯನ್ನು ನಡುವೆಯಲ್ಲಿಯೇ ನಿಲ್ಲಿಸಬೇಕಾಗಿ ಬಂದಿತು. ಬರೆದಷ್ಟರ ಪ್ರತಿಯನ್ನು ಇಲ್ಲಿ ಎತ್ತಿಕೊಟ್ಟಿದ್ದೇನೆ. ಅದರಲ್ಲಿ ನಾನು ಈ ಮೊದಲೇ ವಿವರಿಸಿರುವ ಅನೇಕ ಅಂಶಗಳು ಅನಿವಾರ್ಯವಾಗಿ ಪುನರುಕ್ತವಾಗಿವೆ.

* * * *

ಚರ್ಮವೇನೊ ಬಹಳ ಮೃದುವಾಗಿ ಸೊಗಸಾಗಿತ್ತು. ಆದರೆ ಅದರ ಮಾಂಸ ಆಹಾರಯೋಗ್ಯವಾಗಿರಲಿಲ್ಲ. ಹಿಂದಿರುಗುವಾಗ ಕರೆಯಂಚಿನಲ್ಲಿಯೇ ಬರುತ್ತಿರಲು, ಅನೇಕ ಬಗೆಯ ಕಡಲು ಕೋಳಿಗಳು ದೃಷ್ಟಿಗೆ ಬಿದ್ದುವು. ನಾನು ಹಾಗೆಯೇ ಅವುಗಳನ್ನು ದಿಟ್ಟಿಸಿ ನೋಡುತ್ತಿದ್ದಾಗ ಎರಡು ಮೂರು ಸೀಲ್ ಪ್ರಾಣಿಗಳು ಕರೆಯ ಮೇಲಿನಿಂದ ಸಮುದ್ರದೊಳಕ್ಕೆ ಹೋದವು. ಹೀಗಾಗಿ ಈ ಸಲಕ್ಕೆ ಅವು ನನ್ನ ಗುಂಡಿನೇಟಿನಿಂದ ಪಾರಾದುವು.

ನೊವೆಂಬರ್ ೬ :– ನನ್ನ ಬೆಳಗಿನ ಸುತ್ತಾಟವಾದ ಮೇಲೆ, ಮತ್ತೆ ಮೇಜನ್ನು ಮಾಡುವ ಕಾರ್ಯದಲ್ಲಿ ತೊಡಗಿದೆ.

ನೊವೆಂಬರ್ ೭ :– ಹವ ಈಗ ಕೊಂಚ ಚೆನ್ನಾಗಿತ್ತು. ಈ ದಿನವೂ, ೮, ೯, ೧೦ ಮತ್ತು ೧೨ನೆಯ ತಾರೀಖುಗಳಲ್ಲಿಯೂ ಕುರ್ಚಿಯೊಂದನ್ನು ಮಾಡುವ ಕೆಲಸ ಹಿಡಿಯಿತು. ೧೧ನೆಯ ತಾರೀಖು ಭಾನುವಾರವಾದ್ದರಿಂದ ಆ ದಿನ ಏನೂ ಕೆಲಸ ಮಾಡಲಿಲ್ಲ.

ಟಿಪ್ಪಣಿ : ಬರುಬರುತ್ತ ಭಾನುವಾರಗಳನ್ನು ವಿಶ್ರಾಂತಿ ದಿನವಾಗಿ ಎಣಿಸುವುದೇ ತಪ್ಪಿಹೋಯಿತು ; ಏಕೆಂದರೆ, ಅವುಗಳಿಗಾಗಿ ನಾನು ಕಂಬದ ಮೇಲೆ ಪ್ರತ್ಯೇಕವಾದ ಕಚ್ಚುಗುರುತನ್ನು ಮಾಡುವುದು ತಪ್ಪಿಹೋಗಿ, ಯಾವುದು ಭಾನುವಾರ ಯಾವುದು ಅಲ್ಲ ಎಂಬ ಎಣಿಕೆಯೇ ತಪ್ಪಿ ಹೋಯಿತು.

ನೊವೆಂಬರ್ ೧೩ :– ಈ ದಿನ ಮಳೆ ಬಂದು ನೆಲವೆಲ್ಲಾ ತಂಪಾಯಿತು. ನನಗೂ ಬಹಳ ಹಿತವಾಯಿತು. ಆದರೆ ಮಳೆಯೊಂದಿಗೆ ಬಂದ ಸಿಡಿಲು ಮಿಂಚುಗಳನ್ನು ಕಂಡು, ಮದ್ದು ಎಲ್ಲಿ ಹೊತ್ತಿಕೊಂಡುಬಿಡುವುದೋ ಎಂದು ನನಗೆ ಗಾಬರಿಯಾಯಿತು. ಮದ್ದೆಲ್ಲವನ್ನೂ ಸ್ವಲ್ಪ ಸ್ವಲ್ಪ ಪ್ರಮಾಣದಲ್ಲಿ ವಿಭಾಗಮಾಡಿ ಪ್ರತ್ಯೇಕವಾಗಿಡಲು ನಿಶ್ಚಯಿಸಿದೆ.

ನೊವೆಂಬರ್ ೧೪, ೧೫, ೧೬ :– ಈ ಮೂರು ದಿನಗಳೂ ಮದ್ದನ್ನು ತುಂಬಿಡುವುದಕ್ಕಾಗಿ ಸಣ್ಣ ಸಣ್ಣ ಚೌಕನೆಯ ಪೆಟ್ಟಿಗೆಗಳನ್ನು ಮಾಡಿಡುವುದರಲ್ಲಿ ಕಳೆದೆ. ಒಂದು ದಿನ ಒಂದು ದೊಡ್ಡ ಹಕ್ಕಿಯನ್ನು ಕೊಂದೆ ; ಅದು ತಿನ್ನಲು ಸೊಗಸಾಗಿತ್ತು ; ಆದರೆ ಅದರ ಹೆಸರನ್ನು ನಾನರಿಯೆ.

ನೊವೆಂಬರ್ ೧೭ :– ಈ ದಿನ ನನ್ನ ಗೂಡಾರದ ಹಿಂದೆ ಗುಡ್ಡ ಬಂಡೆಯ ಬದಿಯನ್ನು ಕೊರೆಯತೊಡಗಿದೆ. ನನ್ನ ವಾಸಸ್ಥಳದ ಆನುಕೂಲ್ಯಕ್ಕೆ ಹೆಚ್ಚಿನ ಸ್ಥಳಾವಕಾಶ ಬೇಕಾಗಿದ್ದುದೇ ಅದಕ್ಕೆ ಕಾರಣ.

ಟಿಪ್ಪಣಿ :– ನನಗೆ ಮೂರು ಸಲಕರಣೆಗಳು ಅತ್ಯಾವಶ್ಯವಾಗಿ ಬೇಕಾಗಿದ್ದುವು:

ಅಕ್ಟೋಬರ್ ೨೬ :– ಒಂದು ಯೋಗ್ಯವಾದ ವಾಸಸ್ಥಳವನ್ನು ಕಂಡು ಹಿಡಿಯುವುದಕ್ಕಾಗಿ ದಿನಪೂರ್ತಿ ಕರೆಯೆಡೆಯಲ್ಲೆಲ್ಲಾ ಸುತ್ತಾಡಿದೆ. ರಾತ್ರಿಯ ಹೊತ್ತಿಗೆ ಒಂದು ಗುಡ್ಡಬಂಡೆಯ ತಳಭಾಗದಲ್ಲಿ ಒಂದು ತಕ್ಕ ಸ್ಥಳ ದೊರಕಿತು.

ಅಕ್ಟೋಬರ್ ೨೬ ರಂದ ೩೦ :– ನಾನು ತಂದಿದ್ದ ಸರಕೆಲ್ಲವನ್ನೂ ಹೊಸದಾಗಿ ಗೊತ್ತುಮಾಡಿದ್ದ ಸ್ಥಳಕ್ಕೆ ಕೊಂಡೊಯ್ದೆ.

ಅಕ್ಟೋಬರ್ ೩೧ :– ನನ್ನ ಕೋವಿಯನ್ನು ತೆಗೆದುಕೊಂಡು ಆಹಾರ ಸಂಪಾದನೆಗಾಗಿ ದೀಪ ಪರ್ಯಟನಮಾಡಲು ಹೊರಟೆ. ಒಂದು ಮೇಕೆಯನ್ನು ಕೊಂದೆ. ಆಹಾರ ತಿನ್ನಲೊಲ್ಲದ ಅದರ ಮರಿಯನ್ನೂ ಕೊಂದು ನಾನೇ ತಿನ್ನಬೇಕಾಯಿತು.

ನೊವೆಂಬರ್ ೧ :– ಬಂಡೆಯ ಕೆಳಗೆ ಗೂಡಾರವನ್ನು ಹೊಡೆದೆ. ಈ ರಾತ್ರಿ ಅದರೊಳಗೇ ಮಲಗಿದೆ.

ನೊವೆಂಬರ್ ೨ :– ನನ್ನ ಎಲ್ಲ ಪೆಟ್ಟಿಗೆಗಳನ್ನೂ ಹಲಗೆಗಳನ್ನೂ ವಾಸ ಸ್ಥಳದ ಸುತ್ತಲೂ ಸಾಲಾಗಿ ಜೋಡಿಸಿಟ್ಟು ಒಂದು ಬಗೆಯ ಬೇಲಿಯನ್ನು ಹಾಕಿಕೊಂಡೆ.

ನೊವೆಂಬರ್ ೩ :– ಕೋವಿ ಹಿಡಿದು ಹೊರಟು ಎರಡು ಬಾತು ಕೋಳಿಗಳಂಥ ಹಕ್ಕಿಗಳನ್ನು ಕೊಂದೆ. ಅವು ಒಳ್ಳೆಯ ಆಹಾರವಾಯಿತು. ಮಧ್ಯಾಹ್ನದ ಮೇಲೆ ಒಂದು ಮೇಜನ್ನು ಮಾಡುವ ಕಾರ್ಯಹಿಡಿದೆ.

ನೊವೆಂಬರ್ ೪ :– ಈ ಬೆಳಗ್ಗೆ ನನ್ನ ಕಾರ್ಯವೇಳೆಗಳನ್ನು ಗೊತ್ತು ಮಾಡಿಕೊಂಡೆ : ಪ್ರತಿ ಬೆಳಗ್ಗೆಯೂ, ಮಳೆಬರದೆ ಹೋದ ಭಾಗದಲ್ಲಿ, ಕೋವಿಯನ್ನು ತೆಗೆದುಕೊಂಡು ಹೊರಗಡೆ ಸಂಚಾರಕ್ಕೆ ಹೊರಡುವುದು ; ಆಮೇಲೆ ಸುಮಾರು ಹನ್ನೊಂದು ಗಂಟೆಯುವರೆಗೂ ಏನಾದರೂ ಕೆಲಸಮಾಡುವುದು ; ಆ ಬಳಿಕ ಆಹಾರ ಸೇವನೆ ; ಮಧ್ಯಾಹ್ನ ಹನ್ನೆರಡಾದ ಮೇಲೆ ಎರಡು ಗಂಟೆಯವರೆಗೂ ನಿದ್ರೆ (ಬಹಳ ಬಿಸಿಲಾದದ್ದರಿಂದ ಆ ವೇಳೆಯಲ್ಲಿ ಕೆಲಸ ಸಾಗುತ್ತಿರಲಿಲ್ಲ) ; ಮತ್ತೆ ಸಂಜೆಯವರೆಗೂ ಕೆಲಸ : ಇದು ನಾನು ಗೊತ್ತು ಮಾಡಿಕೊಂಡ ವೇಳಾಪಟ್ಟಿಕೆ. ಈ ದಿನವೂ ಮಾರನೆಯ ದಿನವೂ ನಾನು ಗೊತ್ತು ಮಾಡಿಕೊಂಡಿದದ್ದ ಮೇರೆಗೆ ಕೆಲಸ ಮಾಡುವ ಹೊತ್ತಿನಲ್ಲಿ ನನ್ನ ಮೇಜನ್ನು ಮಾಡುವ ಕಾರ್ಯದಲ್ಲಿ ನಿರತನಾಗಿದ್ದೆ.

ನೊವೆಂಬರ್ ೫ :– ಈ ದಿನ ಕೋವಿಯನ್ನು ತೆಗೆದುಕೊಂಡು ನನ್ನ ನಾಯಿಯೊಡನೆ ಹೊರಕ್ಕೆ ಹೊರಟೆ. ಒಂದು ಕಾಡು ಬೆಕ್ಕನ್ನು ಕೊಂದೆ. ಅದರ

ನಾನೇನಾದರೂ ಅದರ ಕೆಳಗೆ ಇದ್ದಿದ್ದರೆ, ಆ ಹೊತ್ತಿನ ದಿನ ನನಗೆ ಗೋರಿ ಅಗೆಯುವವನೊಬ್ಬನು ಬೇಕಾಗಿಯೇ ಇರಲಿಲ್ಲ. ಹೀಗೆ ಮಣ್ಣು ರಾಶಿ ಬಿದ್ದುದರಿಂದ ನನಗೆ ಹೆಚ್ಚಿನ ಕೆಲಸ ಹಿಡಿಯಿತು. ಉದುರಿದ ಮಣ್ಣನ್ನೆಲ್ಲಾ ಹೊರಕ್ಕೆ ಸಾಗಿಸಬೇಕಾಯಿತು. ಮತ್ತು ಸಡಿಲಬಿದ್ದಿದ್ದ ಗುಹೆಯ ಚಾವಣಿ ಮತ್ತೆ ಕುಸಿಯದಂತೆ ಅದಕ್ಕೆ ಊರೆಯಾಸರೆ ಕೊಡಬೇಕಾಯಿತು.

ಡಿಸೆಂಬರ್ ೧೧ :– ಈ ದಿನ ಮೇಲೆ ಹೇಳಿದ ಕಾರ್ಯದಲ್ಲಿ ನಿರತನಾದೆ. ಎರಡು ಕಂಬಗಳನ್ನು ನಿಲ್ಲಿಸಿ, ಒಂದೊಂದರ ಮೇಲೂ ಒಂದೊಂದು ಹಲಗೆಯನ್ನಿಟ್ಟು ಅವು ಚಾವಣಿಗೂ ನೆಲಕ್ಕೂ ನಡುವೆ ಭದ್ರವಾಗಿ ನಿಲ್ಲುವಂತೆ ಅಳವಡಿಸಿದೆ. ಹೀಗೆಯೇ ಉದ್ದಕ್ಕೂ ಕಂಬಗಳನ್ನೂ ಹಲಗೆಗಳನ್ನೂ ಜೋಡಿಸಿ ಊರೆ ಕೊಟ್ಟುಕೊಂಡು ಹೋದೆ. ಒಂದು ವಾರದೊಳಗಾಗಿ ಮೇಲ್ಚಾವಣಿ ಭದ್ರವಾಯಿತು. ಸಾಲಾಗಿ ನಿಲ್ಲಿಸಿದ ಕಂಬಗಳು ಮನೆಯನ್ನು ಕೋಣೆಗಳನ್ನಾಗಿ ವಿಭಾಗಮಾಡಿಕೊಳ್ಳಲು ಅನುವಾದವು.

ಡಿಸೆಂಬರ್ ೧೭ :– ಇವೊತ್ತಿನಿಂದ ೨೦ನೆಯ ತಾರೀಖಿನವರೆಗೂ ಬಡುಗಳನ್ನು ಏರ್ಪಡಿಸಿದೆ. ಮತ್ತು ಪದಾರ್ಥಗಳನ್ನು ತೂಗಹಾಕುವುದಕ್ಕಾಗಿ ಕಂಬಗಳ ಮೇಲೆ ಮೊಳೆಗಳನ್ನು ಹೊಡೆದೆ.

ಡಿಸೆಂಬರ್ ೨೦ :– ನನ್ನ ಸಾಮಾನೆಲ್ಲವನ್ನೂ ಗುಹೆಯೊಳಕ್ಕೆ ಸಾಗಿಸಿ, ನನ್ನ ಮನೆಯನ್ನು ಸಜ್ಜುಗೊಳಿಸತೊಡಗಿದೆ.

ಡಿಸೆಂಬರ್ ೨೪ :– ಹಗಲೂ ಇರಳೂ ಬಹಳ ಮಳೆ ; ಮನೆಬಿಟ್ಟು ಕದಲಲಿಲ್ಲ.

ಡಿಸೆಂಬರ್ ೨೫ :– ದಿನವೆಲ್ಲಾ ಮಳೆ.

ಡಿಸೆಂಬರ್ ೨೬ :– ಮಳೆಯಿಲ್ಲ. ನೆಲ ಬಹಳ ತಂಪಾಗಿ, ಹವ ಸೊಗಸಾಗಿತ್ತು.

ಡಿಸೆಂಬರ್ ೨೭ :– ಒಂದು ಚಿಕ್ಕ ಆಡನ್ನು ಕೊಂದೆ. ಇನ್ನೊಂದರ ಕಾಲಿಗೆ ಏಟು ತಗುಲಿ ಕುಂಟಾದ್ದರಿಂದ ಅದರ ಕೊರಳಿಗೆ ದಾರಕಟ್ಟಿ ಅದನ್ನು ಕರೆದುಕೊಂಡು ಬಂದೆ. ಮನೆಗೆ ಕರೆದುಕೊಂಡು ಬಂದಮೇಲೆ ಅದರ ಮುರಿದ ಕಾಲಿಗೆ ದಬ್ಬೆ ಕಟ್ಟಿದೆ.

ಟಿಪ್ಪಣಿ :– ಈ ಪ್ರಾಣಿಯ ವಿಚಾರದಲ್ಲಿ ನಾನು ಬಹಳ ಎಚ್ಚರಿಕೆ ವಹಿಸಿದ್ದರಿಂದ, ಅದು ಬದುಕಿಕೊಂಡಿತು. ಅದರ ಕಾಲು ಸರಿಹೋಗಿ ಮೊದಲಿನಂತೆಯೇ ಅದಕ್ಕೆ ಬಲ ಕೂಡಿಕೊಂಡಿತು. ಬಹಳ ದೀರ್ಘಕಾಲ ಅದರ

ಒಂದು ಪಿಕಾಸಿ, ಒಂದು ಎಲೆಗುದ್ದಲಿ ಮತ್ತು ಒಂದು ಕೈಬಂಡಿ ಅಥವಾ ಮಕ್ಕರಿ. ಆದ್ದರಿಂದ ನನ್ನ ಕೆಲಸವನ್ನು ನಡುವೆ ನಿಲ್ಲಿಸಿ ಈ ಉಪಕರಣಗಳನ್ನು ಮಾಡಿಕೊಳ್ಳುವ ಕಾರ್ಯದಲ್ಲಿ ಉದ್ಯುಕ್ತನಾಗಬೇಕಾಯಿತು. ಕಬ್ಬಿಣದ ಗಡಾರಿಗಳನ್ನು ಉಪಯೋಗಿಸಿಕೊಂಡು ಪಿಕಾಸಿಯನ್ನೇನೋ ಮಾಡಿದ್ದಾಯಿತು. ಆದರೆ ಎಲೆಗುದ್ದಲಿಯನ್ನು ಹೇಗೆ ಒದಗಿಸಿಕೊಳ್ಳಬೇಕೆಂಬುದು ಬಗೆಹರಿಯಲಿಲ್ಲ. ಅದಿಲ್ಲದೆ ನನ್ನ ಕೆಲಸವನ್ನು ಸರಿಯಾಗಿ ಮಾಡುವುದಕ್ಕಾಗುತ್ತಿರಲಿಲ್ಲ.

**ಸಲಕರಣೆಗಳ ಹವಣಿಕೆ ; ವಸತಿ ನಿರ್ಮಾಣ**

ನೊವೆಂಬರ್ ೧೮ :– ಕಾಡಿನಲ್ಲಿ ಅಲೆಯುತ್ತಿದ್ದಾಗ ನಾನು ಒಂದು ಬಗೆಯ ಮರವನ್ನು ಕಂಡೆ. ಅದನ್ನು ಬ್ರಜಿಲ್ ದೇಶದಲ್ಲಿ 'ಕಬ್ಬಿಣ ಮರ' ಎನ್ನುತ್ತಾರೆ; ಏಕೆಂದರೆ, ಅದು ಕಬ್ಬಿಣದಷ್ಟು ಗಟ್ಟಿ. ಅದರಿಂದ ಒಂದು ತುಂಡನ್ನು ಕಡಿದುಕೊಳ್ಳುವುದು ಎಷ್ಟು ಕಷ್ಟವಾಯಿತೊ ಅದನ್ನು ನನ್ನ ಮನೆಗೆ ತಂದೊಯ್ಯವುದು ಅಷ್ಟೇ ಕಷ್ಟವಾಯಿತು. ಕಡಿಯುವುದರಲ್ಲಿ ಕೊಡಲಿಯ ಬಾಯಿ ಮೊಂಡಾಯಿತು; ಹೊತ್ತು ತರುವುದರಲ್ಲಿ ಹೆಗಲು ನೊಂದಿತು. ಈ ಮರದ ತುಂಡನ್ನು ಸ್ವಲ್ಪ ಸ್ವಲ್ಪವಾಗಿ ಕೆತ್ತಿಕೆತ್ತಿ ಒಂದು ಎಲೆಗುದ್ದಲಿಯನ್ನು ಮಾಡಿಕೊಂಡೆ. ಇನ್ನು ಉಳಿದದ್ದು ಮಕ್ಕರಿ, ಅದಿಲ್ಲದಿದ್ದರೆ ಕೈಬಂಡಿ. ಬೆತ್ತದ ಹಾಗೆ ಬಾಗುವಂಥ ಸಿಬುರುಪದಾರ್ಥ ಯಾವುದೂ ದೊರೆಯದಿದ್ದುದರಿಂದ ಮಕ್ಕರಿಯನ್ನು ಮಾಡಿಕೊಳ್ಳಲು ಸಾಧ್ಯವಿರಲಿಲ್ಲ . ಕೈಬಂಡಿಯನ್ನೇನೋ ಮಾಡಬಹುದಾಗಿತ್ತು . ಆದರೆ ಬಂಡಿಯ ಚಕ್ರ , ಅದರ ಅಚ್ಚು ಮೊದಲಾದುವನ್ನು ಮಾಡುವುದು ಸಾಧ್ಯವಿರಲಿಲ್ಲ ; ಆದ್ದರಿಂದ ನನ್ನ ಗುಹೆಯಲ್ಲಿ ಕೊರೆದುಹಾಕಿದ ಮಣ್ಣನ್ನು ಹೊರಸಾಗಿಸುವುದಕ್ಕಾಗಿ ಗಾರೆ ಹೊರುವವರು ಉಪಯೋಗಿಸುವಂತಹ ಒಂದು ತೊಟ್ಟಿಯನ್ನು ಮಾಡಿಕೊಂಡೆ. ಈ ತೊಟ್ಟಿಯನ್ನು ಮಾಡಿಕೊಳ್ಳುವುದು ಅಷ್ಟು ಕಷ್ಟವಾಗಲಿಲ್ಲ. ಅಂತೂ, ಇವುಗಳನ್ನೆಲ್ಲಾ ಮಾಡಲು ನನಗೆ ನಾಲ್ಕು ದಿನಗಳ ಕಾಲ ಹಿಡಿಯಿತು.

ನೊವೆಂಬರ್ ೨೩ :– ನನ್ನ ಗುಹೆಯನ್ನು ಒಳಕ್ಕೆ ತೋಡಿಕೊಂಡು ಹೋಗುವ ಕಾರ್ಯವನ್ನು ಮುಂದುವರಿಸಿ, ಅವಿಚ್ಛಿನ್ನವಾಗಿ ಮಾಡಿಕೊಂಡು ಹೋದೆ. ಈ ಕೆಲಸಕ್ಕೆ ಒಟ್ಟು ೧೮ ದಿನಗಳ ಕಾಲ ಹಿಡಿಯಿತು.

ಡಿಸೆಂಬರ್ ೧೦ :– ನನ್ನ ಗುಹೆಯ ವಿಸ್ತರಣಕಾರ್ಯ ಇನ್ನೇನು ಮುಗಿಯಿತೆಂದುಕೊಂಡಿದ್ದಾಗ, ಮೇಲುಭಾಗದಿಂದಲೂ ಒಂದು ಪಕ್ಕದಿಂದಲೂ ಅಪಾರವಾದ ಮಣ್ಣು ತೊಪತೊಪನೆ ರಾಶಿರಾಶಿಯಾಗಿ ಉದುರಿ ಬಿಟ್ಟಿತು. ಆಗ

ದೊಡ್ಡವಾದಾಗ, ಬಹುಶಃ ನಾನು ಅವುಗಳಿಗೆ ತಿನಿಸಿಡಿವುದು ಸಾಲದೆ, ಹಾರಿಹೋದವು. ಅವುಗಳಿಗೆ ತಿನಿಸಿಡುವುದರಲ್ಲಿ ಏನೂ ಇರಲಿಲ್ಲ, ಆದರೂ ಆಗಾಗ್ಗೆ ಆ ಪಾರಿವಾಳಗಳ ಗೂಡುಗಳ ಬಳಿ ಹೋಗಿ ಮರಿಗಳನ್ನು ಒಯ್ದು ತರುತ್ತಿದ್ದೆ ; ಏಕೆಂದರೆ ಅವುಗಳ ಮಾಂಸ ಬಹು ರುಚಿಯಾಗಿತ್ತು.

ನನ್ನ ಗೃಹಕೃತ್ಯ ನಿರ್ವಾಹದಲ್ಲಿ ನನಗೆ ಇನ್ನೂ ಅನೇಕ ಪದಾರ್ಥಗಳು ಆವಶ್ಯಕವಾಗಿದ್ದವು. ನನ್ನಲ್ಲಿ ಮದ್ಯ ತುಂಬಿದ ಕೆಲವು ಪೀಪಾಯಿಗಳಿದ್ದವು. ಪೀಪಾಯಿಗಳ ಆವಶ್ಯಕತೆ ನನಗೆ ತುಂಬ ಇತ್ತು. ಹಲಗೆಗಳನ್ನು ಜೋಡಿಸಿ ಅವುಗಳಿಗೆ ಬಳೆಪಟ್ಟಿ ತೊಡಿಸಿ ಪೀಪಾಯಿ ಮಾಡುವುದು ನನ್ನ ಮನಸ್ಸಿಗೆ ಮೀರಿದ ಕೆಲಸವಾಗಿತ್ತು.

ಎರಡನೆಯದಾಗಿ, ನನಗೆ ಮೋಂಬತ್ತಿಯ ಆವಶ್ಯಕತೆ ಬಹಳವಾಗಿತ್ತು. ಅದು ಇಲ್ಲದಿದ್ದುದರಿಂದ ಸಂಜೆ ೭ ಗಂಟೆಗೆ ಕತ್ತಲೆ ಕವಿದಾಗ, ನಾನು ಮಲಗಿಕೊಳ್ಳಬೇಕಾಗಿತ್ತು. ನನ್ನ ಆಫ್ರಿಕಾದೇಶದ ಪ್ರಪಂಚ ಪರ್ಯಟನೆಗಳಲ್ಲಿ ಜೇನುಮೇಣದಿಂದ ಮೋಂಬತ್ತಿಯನ್ನು ಮಾಡಿಸಿದ್ದುದು ನೆನಪಿಗೆ ಬಂದಿತು. ಆದರೆ, ಈಗ ನನ್ನ ಬಳಿ ಜೇನುಮೇಣವಿಲ್ಲ ಆದ್ದರಿಂದ ಒಂದು ಆಡನ್ನು ಕೊಂದ ಸಂರ್ಭದಲ್ಲಿ ಆದರ ಕೊಬ್ಬು ಸಂಗ್ರಹಿಸುತ್ತಿದ್ದೆ. ಹಾಗೆ ಸಂಗ್ರಹಿಸಿದ ಕೊಬ್ಬನ್ನು, ನಾನೇ ಬಿಸಿಲಿನಲ್ಲಿ ಒಣಗಿಸಿದ ಮಣ್ಣಿನ ತಟ್ಟೆಯಲ್ಲಿ ಹಾಕಿ, ಸಣಬಿನ ನಾರಿನಿಂದ ಮಾಡಿದ ಬತ್ತಿಯನ್ನು ಕೊಬ್ಬಿನಲ್ಲಿಟ್ಟು, ದೀಪವನ್ನು ಮಾಡಿಕೊಂಡಿದ್ದರಿಂದ ಸ್ವಲ್ಪ ಮಾತ್ರ ಬೆಳಕು ಬರುತ್ತಿತ್ತು.

## ಧಾನ್ಯ ದೊರೆತದ್ದು

ಈ ಕೆಲಸಗಳಲ್ಲೆಲ್ಲಾ ನಿರತನಾಗಿದ್ದಾಗ, ನನ್ನ ಪದಾರ್ಥಗಳನ್ನೆಲ್ಲಾ ಯಾವುದೋ ಉದ್ದೇಶದಿಂದ ತಡಕಾಡುತ್ತಿದ್ದಾಗ, ಒಂದು ಸಣ್ಣ ಚೀಲ ದೊರಕಿತು. ಹಿಂದೆ ಯಾವುದೋ ಒಂದು ಪ್ರಯಾಣ ಕಾಲದಲ್ಲಿ ಅದರ ತುಂಬ ಧಾನ್ಯ ತುಂಬಿತ್ತು. ಆದರೆ ಅದರಲ್ಲಿದ್ದ ಧಾನ್ಯವನ್ನೆಲ್ಲಾ ಯಾವಾಗಲೋ ಇಲಿಗಳು ಮುಕ್ಕಿ ಬಿಟ್ಟಿದ್ದುವು. ಮತ್ತೆ ಚೀಲ ನನ್ನ ಕೈಗೆ ಸಿಕ್ಕಿದಾಗ ಅದರ ತುಂಬ ಹೊಟ್ಟು ಧೂಳಲ್ಲದೆ ಇನ್ನೇನೂ ಇರಲಿಲ್ಲ. ಮದ್ದು ಹೊತ್ತಿಕೊಳ್ಳುವುದೆಂದು ಅದನ್ನು ಮೊತ್ತಮೊತ್ತವಾಗಿ ಬೇರ್ಪಡಿಸಿ ಇಡುವ ಸಂದರ್ಭದಲ್ಲಿ ಈ ಚೀಲವನ್ನು ಆ ಕಾರ್ಯಕ್ಕೆ ಉಪಯೋಗಿಸಿಕೊಂಡಿದ್ದ ನೆನಪು. ಹಾಗೆ ಚೀಲವನ್ನು ಬೇರೆಯ ಕೆಲಸಕ್ಕೆ ಉಪಯೋಗಿಸಿಕೊಂಡಾಗ ಅದರಲ್ಲಿದ್ದ ಹೊಟ್ಟನ್ನು ನನ್ನ ಬೇಲಿಯಾವರಣದ

ಆರೈಕೆ ಮಾಡಿದ್ದರ ಪರಿಣಾಮವಾಗಿ ಅದು ಸಾಧುವಾಗಿ ಹೋಯಿತು. ನನ್ನ ಮನೆಯ ಮುಂದಣ ಹಸುರನ್ನೆ ಮೇದುಕೊಂಡು, ಈ ಸ್ಥಳವನ್ನು ಬಿಟ್ಟುಹೋಗಲು ಒಲ್ಲದ್ದಾಯಿತು. ಇದನ್ನು ಕಂಡು, ಮೊತ್ತ ಮೊದಲನೆಯ ಸಲ ಕೆಲವು ಸಾಧುಪ್ರಾಣಿಗಳನ್ನು ಸಾಕಿಕೊಳ್ಳುವ ಆಲೋಚನೆ ನನ್ನಲ್ಲಿ ಮೂಡಿತು. ಹಾಗೆ ಮಾಡಿದರೆ ಮದ್ದುಗುಂಡೆಲ್ಲಾ ತೀರಿಹೋದ ಮೇಲೂ ನನ್ನ ಆಹಾರಕ್ಕೆ ಕಷ್ಟವಾಗದೆಂದು ನನಗೆ ತೋರಿತು.

ಡಿಸೆಂಬರ್ ೨೮, ೨೯, ೩೦ :– ಬಹಳ ಸೆಕೆ, ಗಾಳಿಯ ಸುಳಿವಿಲ್ಲ ; ಸಂಜೆಯ ಹೊತ್ತು ಆಹಾರಕ್ಕಾಗಿ ಹೊರಹೊರಡುವುದು ಬಿಟ್ಟು, ಉಳಿದ ಕಾಲಗಳಲ್ಲಿ ಹೊರಹೊರಡುತ್ತಿರಲಿಲ್ಲ. ಮನೆಗೆ ಒಳಗೇ ಇದ್ದುಕೊಂಡು ಸಾಮಾನುಗಳನ್ನೆಲ್ಲಾ ಅಣಿಗೊಳಿಸಿಕೊಳ್ಳುತ್ತಿದ್ದೆ.

ಜನವರಿ ೧ :– ಇನ್ನೂ ಬಹಳ ಸೆಕೆ. ಆದರೆ ಹೊತ್ತರೆಯಲ್ಲೂ ಬೈಗಿನಲ್ಲೂ ಕೋವಿಯನ್ನು ತೆಗೆದುಕೊಂಡು ಹೊರಕ್ಕೆ ಹೋಗಿದ್ದೆ. ಇಂದಿನ ಬೈಗೂ ದ್ವೀಪಮಧ್ಯದಲ್ಲಿದ್ದ ಕಣಿವೆಗಳೊಳಕ್ಕೆ ಬಹಳದೂರ ನಡೆದುಹೋದೆ. ಅಲ್ಲಿ ಆಡುಗಳು ಹಿಂಡುಹಿಂಡಾಗಿದ್ದುವು. ಅವು ಬಹಳವಾಗಿ ಬೆದರುತ್ತಿದ್ದುವಾದ್ದರಿಂದ, ಅವುಗಳ ಬಳಿಗೆ ಹೋಗುವುದು ಕಷ್ಟವಾಗಿತ್ತು. ನಾಯನ್ನು ಬಿಟ್ಟು ಅವುಗಳನ್ನು ಬೇಟೆಯಾಡಲಾಗುವುದಿಲ್ಲವೆ ಎಂಬುದಾಗಿ ಆಲೋಚಿಸಿದೆ.

ಜನವರಿ ೨ :– ಅದೇ ಮೇರೆಗೆ, ಮಾರನೆಯ ದಿನ ನಾಯಿಯನ್ನು ಕರೆದುಕೊಂಡು ಹೋಗಿ ಅವುಗಳ ಮೇಲೆ ಬಿಟ್ಟೆ. ಆದರೆ ನನ್ನ ಎಣಿಕೆ ತಪ್ಪಾಗಿತ್ತು. ಆಡುಗಳೆಲ್ಲಾ ಹಿಂಡುಗೂಡಿ ನಾಯಿಯನ್ನೇ ಎದುರಿಸಿ ಅದನ್ನು ಮುತ್ತ ಬಂದುವು. ಅಪಾಯವನ್ನರಿತ ನಾಯಿ ಅವುಗಳ ಬಳಿಗೆ ಸುಳಿಯಲೂ ಇಲ್ಲ.

ಜನವರಿ ೩ :– ನನ್ನ ಮನೆಯ ಆವರಣದ ಬೇಲಿಯನ್ನು ಕಟ್ಟಿ, ಅದನ್ನು ಇನ್ನೂ ಬಲಪಡಿಸಬೇಕೆಂದು ತೀರ್ಮಾನಿಸಿದೆ. ಈ ಬೇಲಿ ಅಥವಾ ಗೋಡೆಯನ್ನು ಕಟ್ಟುವ ಕೆಲಸದ ವಿವರವನ್ನು ಹಿಂದೆಯೇ ವರ್ಣಿಸಿರುವುದರಿಂದ, ಆ ಸಂಬಂಧದ ದಿನಚರಿಯ ಭಾಗವನ್ನು ಇಲ್ಲಿ ಎತ್ತಿ ಕೊಡುವುದಿಲ್ಲ. ಆ ಕೆಲಸ ಜನವರಿ ೩ ರಿಂದ ಏಪ್ರಿಲ್ ೧೪ರ ವರೆಗೂ ಹಿಡಿಯಿತೆಂದು ಇಲ್ಲಿ ಹೇಳಿದರೆ ಸಾಕು.

ಗಳನ್ನೂ ಪದಾರ್ಥಗಳನ್ನೂ ಕಂಡುಹಿಡಿದೆ. ಒಂದು ಕಡೆ ಒಂದು ಬಗೆಯ ಕಾಡುಪಾರಿವಾಳಗಳನ್ನು ನೋಡಿದೆ. ಅವು ಕಾಡುಪಾರಿವಾಳಗಳಾದರೂ ಮನೆಯ ಪಾರಿವಾಳಗಳಂತೆ ಬಂಡೆಯ ಛಿದ್ರಗಳಲ್ಲಿ ಗೂಡು ಮಾಡಿಕೊಂಡಿದ್ದುವು. ಅವುಗಳ ಮರಿಗಳಲ್ಲಿ ಕೆಲವನ್ನು ಹಿಡಿದುಕೊಂಡು ಅವುಗಳನ್ನು ಪಳಗಿಸಿದೆ. ಆದರೆ ಅವು

ದ್ವೀಪದಲ್ಲಿ ಇನ್ನೂ ಬೇರೆ ಬೇರೆ ಕಡೆಗಳಲ್ಲಿ ಈ ಪಯಿರುಗಳು ಹೆಚ್ಚಾಗಿ ಬೆಳೆದಿರಬಹುದೆಂಬ ಆಶೆಯಿಂದ ನಾನು ಇದುವರೆಗೆ ಸುತ್ತಾಡಿದ್ದ ದ್ವೀಪ ಭಾಗವನ್ನೆಲ್ಲಾ ಮತ್ತೆ ಸುತ್ತಿನೋಡಿಕೊಂಡು ಬಂದೆ. ಹೋದೆಡೆಯಲ್ಲೆಲ್ಲಾ ಮೂಲೆ ಮೂಲೆಯನ್ನೂ, ಬಂಡೆ ಬಂಡೆಗಳ ತಲಪ್ರದೇಶಗಳನ್ನೂ ಕಣ್ಣಿಟ್ಟು ನೋಡಿದೆ. ಎಷ್ಟು ಹುಡುಕಿದರೂ ಎಲ್ಲಿಯೂ ಒಂದು ಮೊಳಕೆಯೂ ಕಣ್ಣಿಗೆ ಬೀಳಲಿಲ್ಲ. ಕಡೆಗೆ, ಪಯಿರು ಬೆಳೆದಿದ್ದ ಸ್ಥಳದಲ್ಲಿ ಕೋಳಿಮರಿಗಳ ಮಾಂಸವಿದ್ದ ಚೀಲವೊಂದನ್ನು ಕೊಡವಿ ತೆರಪು ಮಾಡಿದ್ದುದ್ದು ನೆನಪಿಗೆ ಬಂದಿತು. ಆ ಕೂಡಲೆ ದೈವಸಹಾಯಕ್ಕಾಗಿ ನನ್ನಲ್ಲಿ ಹಿಂದೆ ಮೂಡಿದ್ದ ಕೃತಜ್ಞತಾ ಭಾವವೆಲ್ಲವೂ ಮಾಯವಾಗಿ ಹೋಯಿತು. ಇದೆಲ್ಲಾ ಬಹಳ ಸಾಮಾನ್ಯವೆನ್ನಿಸಿತು. ಆದರೆ ನಿಜವಾಗಿ ಆ ಅನಿರೀಕ್ಷಿತವೂ ವಿಚಿತ್ರವೂ ಆದ ಅದ್ಭುತ ಘಟನೆ ದೈವ ಸಹಾಯವೆಂದೇ ತಿಳಿದು ಅದಕ್ಕಾಗಿ ನಾನು ಕೃತಜ್ಞತೆಯುಳ್ಳವನಾಗಿರಬೇಕಾಗಿತ್ತು. ಏಕೆಂದರೆ, ಅದು ನನ್ನ ಭಾಗಕ್ಕೆ ದೈವಸಹಾಯವಾಗಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇಲಿಗಳು ಚೀಲದ ಧಾನ್ಯವೆಲ್ಲವನ್ನೂ ತಿಂದಿರುವಾಗ ಹತ್ತುಹನ್ನೆರಡು ಕಾಳುಗಳು ಮಾತ್ರ ಕೆಡದೆ ಉಳಿದುಕೊಂಡು, ನೇರವಾಗಿ ಸ್ವರ್ಗದಿಂದಲೇ ಉದುರಿದುವೊ ಎಂಬಂತೆ ಇಲ್ಲಿ ಉದುರಿ ಬೆಳೆದಿರಬೇಕಾದರೆ ಅದು ದೈವಸಹಾಯವಲ್ಲದೆ ಇನ್ನೇನು ? ಅಲ್ಲದೆ, ಆ ಕಾಳುಗಳೆಲ್ಲವನ್ನೂ ಎಲ್ಲಿಯೋ ಬಿಸುಡದೆ ಎತ್ತರದ ಬಂಡೆಯ ನೆರಳಿನಾಸರೆಯುಳ್ಳ ಆ ಸ್ಥಳದಲ್ಲಿಯೇ ಏಕೆ ಚೆಲ್ಲಬೇಕಾಗಿತ್ತು? ನಾನು ಇನ್ನೆಲ್ಲಿಯಾದರೂ ಬಿಸುಟಿದ್ದರೆ ಕಾಳುಗಳೆಲ್ಲಾ ಸುಟ್ಟು ನಾಶವಾಗಿಹೋಗುತ್ತಿದ್ದುದರಲ್ಲಿ ಸಂಶಯವಿಲ್ಲ. ಆದರೆ ನಾನು ಚೆಲ್ಲಿದೆಡೆ ತಂಪಾಗಿದ್ದುದರಿಂದ ಅಲ್ಲಿ ಅವು ಮೊಳೆತಿದ್ದುವು.

ಅದು ಹೇಗಾದರೂ ಇರಲಿ. ಧಾನ್ಯದ ತೆನೆಗಳನ್ನಂತೂ ನಾನು ಬಹು ಜೋಪಾನವಾಗಿ ತೆಗೆದಿರಿಸಿ ಅವುಗಳನ್ನು ಮತ್ತೆ ಬಿತ್ತಿ ಬೆಳೆ ತೆಗೆಯಬೇಕೆಂದು ಯೋಚಿಸಿದೆ. ಕಾಲಕ್ರಮದಲ್ಲಿ ನನ್ನ ರೊಟ್ಟಿಗಾಗುವಷ್ಟು ಧಾನ್ಯವನ್ನು ಬೆಳೆಯಬಹುದೆಂಬುದು ನನ್ನ ನಿರೀಕ್ಷೆಯಾಗಿದ್ದಿತು. ವಾಸ್ತವವಾಗಿ ನಾಲ್ಕು ವರ್ಷಗಳವರೆಗೆ ನಾನು ನಿರೀಕ್ಷಿಸಿದ್ದಂತೆ ಧಾನ್ಯ ಸಂಗ್ರಹವಾಗಲಿಲ್ಲ. ಆಮೇಲೆ ಕೂಡ ನನಗೆ ತಿನ್ನಲು ದೊರೆಯುತ್ತಿದ್ದುದು ಬಹು ಸ್ವಲ್ಪ ಭಾಗ ಮಾತ್ರ. ಮೊದಲನೆಯ ಸಲ ಬಿತ್ತಿದಾಗ ಸಕಾಲವಾಗಿರಲಿಲ್ಲ ; ಆದ್ದರಿಂದ ಬಿತ್ತಿದ್ದು ಬೆಳೆಯಾಗಲಿಲ್ಲ. ಬಾರ್ಲಿ ಜೊತೆಗೆ ಬತ್ತದ ಕಾಳನ್ನೂ ಹಾಗೆಯೇ ಸಂಗ್ರಹಿಸಿ ಅದರಂತೆಯೇ ಮುಂದೆ ಉಪಯೋಗಿಸತೊಡಗಿದೆ.

ಆಚೆ ಬಂಡೆಯ ಕೆಳಗೆ ಒಂದು ಕಡೆ ಸುರಿದಿದ್ದೆ. ಆಗಾಗ್ಗೆ ಮಳೆ ಬೀಳುತ್ತಿತ್ತೆಂದು ಹಿಂದೆಯೇ ಹೇಳಿರುವೆನಷ್ಟೆ. ಆ ಮಳೆಗಳಿಗೆ ಸ್ವಲ್ಪ ಕಾಲ ಮುಂಚೆ ಈ ಹೊಟ್ಟನ್ನು ನಾನು ಬಿಸುಟಿದ್ದೆ. ಹಾಗೆ ಬಿಸುಟಿದ್ದುದು ಕೂಡ ನನಗೆ ನೆನಪಿರಲಿಲ್ಲ. ಒಂದು ತಿಂಗಳಾದ ಮೇಲೆ, ಕೆಲವು ಹಸುರು ಮೊಳಕೆಗಳು ನೆಲದಿಂದ ಮೇಲಕ್ಕೆ ಮೂತಿಯಿಡುತ್ತಿದ್ದುದು ನನಗೆ ಕಂಡಿತು. ಮೊದಲು ಯಾವುದೋ ಸಸ್ಯವಿರಬಹುದೆಂದು ಸುಮ್ಮನಾದೆ. ಆದರೆ ಕೆಲವು ಕಾಲವಾದಮೇಲೆ ಗಿಡಗುಂಪಲಿನಲ್ಲಿ ಕೆಲವು ತೆನೆಗಳು ಹೊರಟದ್ದನ್ನು ನೋಡಿ ನನಗೆ ಅಚ್ಚರಿಯಾಯಿತು. ಅವುಗಳನ್ನು ಪರಿಕಿಸಿ ನೋಡಲು ಬಾರ್ಲಿ ಧಾನ್ಯದ ತೆನೆಗಳೆಂಬುದಾಗಿ ಸ್ಪಷ್ಟವಾಯಿತು.

ಈ ಸಂದರ್ಭದಲ್ಲಿ ನನಗುಂಟಾದ ಆಶ್ಚರ್ಯವನ್ನೂ ಚಿತ್ತಭ್ರಮೆಯನ್ನೂ ವರ್ಣಿಸುವುದು ಅಸಾಧ್ಯ. ನನ್ನ ಇದುವರೆಗಿನ ವರ್ತನೆಗೆ ಯಾವ ಧಾರ್ಮಿಕವಾದ ತಳಹದಿಯೂ ಇರಲಿಲ್ಲ. ವಾಸ್ತವವಾಗಿ, ನನ್ನ ತಲೆಯಲ್ಲಿ ಧಾರ್ಮಿಕವಾದ ಭಾವನೆಗಳೇ ಸುಳಿದಾಡುತ್ತಿರಲಿಲ್ಲ. ಏನಾದರೂ ಸಂಭವಿಸಿದರೆ ಅದು ಆಕಸ್ಮಿಕ ಘಟನೆಯೆಂದೋ ಅಥವಾ ಎಲ್ಲರ ಬಾಯಲ್ಲೂ ಅಭ್ಯಾಸಬಲದಿಂದ ನುಡಿಯುವಂತೆ ದೈವೇಚ್ಛೆಯೆಂದೊ ಹೇಳಿಬಿಡುತ್ತಿದ್ದೆ.

ಪ್ರಾಪಂಚಿಕ ಘಟನೆಗಳ ವ್ಯವಸ್ಥೆಯಲ್ಲಿ ದೈವಸಂಕಲ್ಪವೇನಿದ್ದೀತು ಎಂಬುದರ ಕಡೆಗೆ ನನ್ನ ಲಕ್ಷ್ಯವೇ ಹೋಗಿರಲಿಲ್ಲ. ಆದರೆ ಧಾನ್ಯದ ಬೆಳೆಗೆ ಉಚಿತವಲ್ಲದ ಹವವನ್ನುಳ್ಳ ಪ್ರದೇಶದಲ್ಲಿ ಬಾರ್ಲಿ ಸಸ್ಯ ಬೆಳೆದದ್ದನ್ನು ನೋಡಿ ನನಗೆ ವಿಚಿತ್ರ ರೀತಿಯಲ್ಲಿ ಅಚ್ಚರಿಯಾಯಿತು. ಅಲ್ಲದೆ, ಅಲ್ಲಿ ಬಾರ್ಲಿ ಧಾನ್ಯ ಹೇಗೆ ಬಿದ್ದಿತೆಂಬುದು ಇಮ್ಮಡಿಯ ಅಚ್ಚರಿಗೆ ಕಾರಣವಾಯಿತು. ಬಿತ್ತನೆಯ ನಿಮಿತ್ತವೇ ಇಲ್ಲದೆ ಬಾರ್ಲಿಪಯಿರು ಬೆಳೆದಿರುವುದು ದೈವಿಕವಾದ ಅತ್ಯದ್ಭುತ ಘಟನೆಯೆಂದೇ ಬಗೆದೆ; ಮತ್ತು ಈ ನಿರ್ಜನ ಪ್ರದೇಶದಲ್ಲಿ ನನಗಾಗಿಯೇ ಇದು ಬೆಳೆದಿರುವುದೂ ದೈವಸಂಕಲ್ಪವೇ ಎಂದು ಆಲೋಚಿಸಿದೆ.

ಹೀಗೆ ನೆನೆದಾಗ, ನನ್ನ ಎದೆ ಕರಗಿ, ಕಣ್ಣಿನಲ್ಲಿ ನೀರೂರಿತು ; ನನಗಾಗಿ ಪ್ರಕೃತಿದೇವಿ ಕರುಣೆ ತೋರಿದ್ದಕ್ಕಾಗಿ ನಾನು ಧನ್ಯನೆಂದು ಭಾವಿಸಿಕೊಂಡೆ. ಅಲ್ಲದೆ, ಬಂಡೆಯ ಪಕ್ಕದಲ್ಲಿ ಉದ್ದಕ್ಕು ಸ್ವಲ್ಪ ಬತ್ತದ ಪಯಿರಿನ ಸಾಲೊಟ್ಟಿಲನ್ನು ಕಂಡಾಗ ನನಗೆ ಇನ್ನೂ ವಿಚಿತ್ರವೆನಿಸಿತು. ಆಫ್ರಿಕಾ ಖಂಡದ ತೀರ ಪ್ರದೇಶಕ್ಕೆ ಹೋಗಿದ್ದಾಗ ಅಲ್ಲಿ ನನಗೆ ಬತ್ತದ ಪಯಿರಿನ ಪರಿಚಯವಾಗಿತ್ತು. ಆದ್ದರಿಂದ, ನಾನು ನೋಡಿದ್ದು ಬತ್ತದ ಪಯಿರೇ ಎಂಬುದರಲ್ಲಿ ನನಗೆ ಸಂದೇಹವಿರಲಿಲ್ಲ.

ಮೂರನೆಯ ಸಲದ ಕಂಪನ ನಿಂತಮೇಲೆ, ಬಹಳ ಹೊತ್ತು ಕಂಪನವಾಗಲಿಲ್ಲ. ಸ್ವಲ್ಪ ಸ್ವಲ್ಪವಾಗಿ ಧೈರ್ಯವನ್ನು ಕೂಡಿಸಕೊಳ್ಳತೊಡಗಿದೆ. ಆದರೂ ಮನೆಯೊಳಕ್ಕೆ ಹೋಗಲು ಧೈರ್ಯ ಸಾಲದು. ಮೂಕನಾಗಿ ಮುಂದುಗಾಣದೆ ಸುಮ್ಮನೆ ಕುಳಿತಿದ್ದೆ. ಆ ಸಂದರ್ಭದಲ್ಲಿ, "ಭಗವಂತ ನನ್ನ ಮೇಲೆ ಕೃಪೆಮಾಡು!" ಎಂಬ ಸರ್ವಸಾಮಾನ್ಯವಾದ ಉದ್ಗಾರವೊಂದಲ್ಲದೆ ನನ್ನಲ್ಲಿ ನಿಜವಾದ ಧರ್ಮಶ್ರದ್ಧೆ ಇನ್ನೂ ಉಂಟಾಗಿರಲಿಲ್ಲ. ವಿಪತ್ತು ಪರಿಹಾರವಾದೊಡನೆಯೇ ದೇವರ ನೆನಕೆಯೂ ಮರೆತು ಹೋಯಿತು.

ನಾನು ಹಾಗೆ ಕುಳಿತಿದ್ದಾಗ, ಆಕಾಶವೆಲ್ಲಾ ಮೇಘಮಯವಾಗಿ ಮಳೆ ಸುರಿಯುವಂತೆ ತೋರಿತು. ಸ್ವಲ್ಪಸ್ವಲ್ಪವಾಗಿ ಗಾಳಿ ಜೋರಾಗತೊಡಗಿತು. ತಟ್ಟನೆ ಬಿರುಮಳೆ ಚೆಚ್ಚತೊಡಗಿತು. ಕಡಲು ಇದ್ದಕ್ಕಿದ್ದಂತೆ ಬರಿಯ ನೊರೆದೆರೆಗಳಿಂದ ತುಂಬಿಹೋಯಿತು. ಗಿಡಮರಗಳು ಬೇರು ಕಿತ್ತು ಉರುಳಿದವು. ಒಂದು ಮಾತಿನಲ್ಲಿ, ಬಿರುಗಾಳಿಮಳೆ ಭೀಕರವಾಗಿತ್ತು. ಮೂರು ಗಂಟೆಗಳವರೆಗೂ ಬಿರುಗಾಳಿಮಳೆ ಭೋರ್ಗರೆದು, ಆಮೇಲೆ ಎರಡು ಗಂಟೆಗಳೊಳಗಾಗಿ ಸರ್ವಶಾಂತವಾಯಿತು. ಮಳೆ ಸುರಿಯುತ್ತಿದ್ದರೂ ಅದನ್ನು ಗಮನಿಸದೆ ನಾನು ನೆಲದ ಮೇಲೆಯೇ ಭಯಭ್ರಾಂತನಾಗಿ ಕುಳಿತಿದ್ದೆ. ಈ ಮಳೆ ಭೂಕಂಪದ ಪರಿಣಾಮವೆಂದು ತಟ್ಟನೆ ತೋರಿ, ಭೂಕಂಪವೇ ನಿಂತುಹೋಗಿರುವುದರಿಂದ ನಾನು ಧೈರ್ಯವಾಗಿ ಗುಹೆಯೊಳಕ್ಕೆ ಹೋಗಬಹುದೆಂದು ಆಲೋಚನೆ ಮಾಡಿದೆ. ಬಿರುಗಾಳಿಯ ಹೊಡೆತ ಕಡಮೆಯಾಗಿ, ಮಳೆ ಸುರಿಯುತ್ತಲೇ ಇದ್ದುದರಿಂದ ಗೂಡಾರದೊಳಕ್ಕೆ ಹೋಗಿ ಕುಳಿತುಕೊಳ್ಳುವುದೇ ಮೇಲೆಂದು ಭಾವಿಸಿ ಹಾಗೆಯೇ ಮಾಡಿದೆ. ಮಳೆ ಕೂಡ ತಕ್ಕಮಟ್ಟಿಗೆ ಜೋರಾಗಿಯೇ ಇದ್ದುದರಿಂದ, ಗೂಡಾರವು ತಲೆಯ ಮೇಲೆ ಕಳಚಿಬೀಳುವುದೆಂಬ ಹೆದರಿಕೆಯಿಂದ ಗುಹೆಯೊಳಕ್ಕೆ ಹೋಗಿ ಕುಳಿತೆ. ಅಲ್ಲಿಗೆ ಹೋದಮೇಲೆ, ಗುಹೆ ಕುಸಿದು ನನ್ನ ಮೇಲೆ ಬೀಳದಿರದೆಂಬ ಶಂಕೆ ಬಾಧಿಸತೊಡಗಿತು.

ಈ ಬಿರುಮಳೆ ಒಂದು ಹೊಸ ಕೆಲಸದ ಆಲೋಚನೆಯನ್ನು ನನ್ನ ತಲೆಗಿಕ್ಕಿತು. ನನ್ನ ಮನೆಯೊಳಗೆ ತುಂಬಿಕೊಂಡ ನೀರೆಲ್ಲವನ್ನೂ ಹೊರ ಹರಿಯಿಸುವುದಕ್ಕೆ ನನ್ನ ಆವರಣದ ಗೋಡೆಯಲ್ಲಿ ಒಂದು ಬಚ್ಚಲುಕಂಡಿ ಆವಶ್ಯಕವೆಂದು ತೋರಿತು. ಈ ಪರಿಸ್ಥಿತಿಯಲ್ಲಿ, ಸ್ವಲ್ಪ ಹುರುಪುಗೊಳ್ಳುವುದಕ್ಕಾಗಿ ನನ್ನ ಉಗ್ರಾಣದ ಮನೆಗೆ ಹೋಗಿ ಒಂದು ಸಣ್ಣ ಬಟ್ಟಲು 'ರಂ' ಮದ್ಯವನ್ನು ಕುಡಿದೆ.

ಇನ್ನು ನನ್ನ ದಿನಚರಿಗೆ ಮರಳುತ್ತೇನೆ.

ಈ ಮೂರು ನಾಲ್ಕು ತಿಂಗಳುಗಳ ಕಾಲ ನನ್ನ ಗೋಡೆಯ ನಿರ್ಮಾಣ ಕಾರ್ಯಕ್ಕಾಗಿ ಬಹಳ ಶ್ರಮಿಸಿದೆ. ಏಪ್ರಿಲ್ ೧೪ನೆಯ ತಾರೀಖಿನ ದಿನ ಅದರ ದ್ವಾರವನ್ನು ಮುಚ್ಚಿಬಿಟ್ಟು, ಒಂದು ಏಣಿಯನ್ನು ಮಾಡಿ ಅದರ ನೆರವಿನಿಂದ ನನ್ನ ಮನೆಗೆ ಹತ್ತಿ ಇಳಿದು ಹೋಗುವ ವ್ಯವಸ್ಥೆಯನ್ನು ಮಾಡಿದೆ.

**ಭೂಕಂಪ ; ಬಿರುಮಳೆ**

ಏಪ್ರಲ್ ೧೬ :– ಏಣಿಯನ್ನು ಮುಗಿಸಿದೆ. ಅದರ ಮೇಲೆ ಗೋಡೆಯ ಮೇಲಕ್ಕೆ ಹತ್ತಿ ಹೋಗಿ, ಅದನ್ನು ಎಳೆದುಕೊಂಡು ಒಳಭಾಗದಲ್ಲಿರಿಸಿದೆ. ಇದಾದ ಮಾರನೆಯ ದಿನವೇ, ನನ್ನ ದುಡಿಮೆಯ ಫಲವೆಲ್ಲಾ ನಷ್ಟವಾಗಿ ನನಗೆ ಮರಣ ಸಂಭವಿಸುವ ಸನ್ನಿವೇಶವೊಂದು ಒದಗಿತು. ನಾನು ನನ್ನ ಗುಹೆಯ ದ್ವಾರದಲ್ಲಿ ನಿಂತಿದ್ದಾಗ ಇದ್ದಕ್ಕಿದ್ದಂತೆಯೇ ಗುಹೆಯ ಚಾವಣಿಯಿಂದಲೂ ಗುಡ್ಡದ ತುದಿಯಿಂದಲೂ ಮಣ್ಣು ಕಳಚಿಕೊಂಡು ನನ್ನ ತಲೆಯ ಮೇಲೆ ಸುರಿಯತೊಡಗಿತು. ಅಲ್ಲದೆ ಗುಹೆಯ ಚಾವಣಿಗೆ ಊರೆಕೊಟ್ಟಿದ್ದ ಕಂಬಗಳಲ್ಲಿ ಎರಡು ಮುರಿದುಹೋದವು. ಆಗ ನಾನು ಅತ್ಯಂತವಾಗಿ ಬೆದರಿದೆ. ನಿಜವಾದ ಕಾರಣ ಗೊತ್ತಾಗಲಿಲ್ಲ. ಹಿಂದೆ ಒಮ್ಮೆ ನಡೆದಂತೆ ಗುಹೆಯ ಚಾವಣಿ ಕುಸಿದಿರಬೇಕೆಂದು ಎಣಿಸಿದೆ. ನಾನು ಕಲ್ಲುಮಣ್ಣುಗಳ ರಾಶಿಯಲ್ಲಿ ಹೂತುಹೋಗುವ ಮೊದಲು ಪ್ರಾಣರಕ್ಷಣೆ ಮಾಡಿಕೊಳ್ಳಬೇಕೆಂದು ಉತ್ಕಟೇಚ್ಛೆಯಿಂದ ಸರ್ರನೆ ಓಡಿಹೋಗಿ, ಏಣಿಯನ್ನು ಹತ್ತಿ ಗೋಡೆಯನ್ನಿಳಿದು ನನ್ನ ಬೇಲಿಯ ಆವರಣದ ಆಚೆಗೆ ಹೋಗಿ ಗಟ್ಟಿನೆಲದ ಮೇಲೆ ನಿಂತುಕೊಂಡೆ. ಅಲ್ಲಿ ಕಾಲಿಟ್ಟದ್ದೇ ತಡ, ಏಳೆಂಟು ನಿಮಿಷಗಳ ಅಂತರಕ್ಕೊಮ್ಮೆ, ನೆಲ ಪ್ರಚಂಡವಾಗಿ ನಡುಗಿತು. ಸುಮಾರು ಅರ್ಧಮೈಲಿಯ ದೂರದಲ್ಲಿದ್ದ ಗುಡ್ಡದ ಬಂಡೆಯೊಂದು ಭಯಂಕರ ಶಬ್ದದೊಂದಿಗೆ ಉರುಳಿ ಬಿದ್ದಿತು. ಅಂಥ ಶಬ್ದವನ್ನು ನಾನು ಹಿಂದೆಂದೂ ಕೇಳಿರಲಿಲ್ಲ. ಇಷ್ಟೇ ಅಲ್ಲದೆ, ಸಮುದ್ರವೂ ಕೂಡ ಪ್ರಕ್ಷುಭಿತವಾಗಿತ್ತೆಂದು ಕಂಡುಬಂದಿತು. ಸಮುದ್ರತಲದ ಕಂಪನ ಭೂಭಾಗದ ಕಂಪನಕ್ಕಿಂತ ಅತ್ಯಧಿಕವಾಗಿದ್ದಿರಬೇಕು.

ಇಷ್ಟೆಲ್ಲಾ ಸಂಭವಿಸಿದಾಗ ನಾನು ಮೊತ್ತಮೊದಲು ಪ್ರಜ್ಞೆ ತಪ್ಪಿ ಬಿದ್ದಿದ್ದೆ. ಬಂಡೆ ಬಿದ್ದ ಸದ್ದು ನನ್ನನ್ನು ಎಚ್ಚರಿಸಿತು. ಆಗ, ಗುಡ್ಡ ನನ್ನ ಮನೆಯ ಮೇಲೆ ಉರುಳಿ, ನನ್ನ ಮನೆಯೂ ಸಾಮಗ್ರಿ ಸಂಪತ್ತು ನೆಲದಲ್ಲಿ ಹೂತುಹೋಗುವುದೆಂದೇ ಬಗೆದೆ ; ಆಗ ನನ್ನ ಎದೆ ಕುಸಿದು ಹೋಯಿತು.

ಪ್ರಾಣವನ್ನು ಉಳಿಸಬೇಕೆ ಬಿಡಬೇಕೆ? ಎಂಬ ತೀರ್ಪಿಗೋ ವ್ಯಯಮಾಡಬಹುದಾದ ಮೇಧಾ ಶಕ್ತಿಯೆಲ್ಲವನ್ನೂ ನಾನು ಈ ಬಗ್ಗೆ ವ್ಯಯ ಮಾಡಿದೆ. ಕಟ್ಟಕಡೆಯಲ್ಲಿ, ಸಾಣೆ ಹಿಡಿಯುವುದಕ್ಕೆ ನನ್ನ ಎರಡು ಕೈಗಳು ಬಿಡುವಾಗಿರುವ ರೀತಿಯಲ್ಲಿ ಕಾಲಿನಿಂದ ಒತ್ತಿ ಸಾಣೆಯ ಕಲ್ಲನ್ನು ತಿರುಗಿಸಲಾಗುವಂತೆ ಚಕ್ರಕ್ಕೆ ಒಂದು ಹುರಿಯನ್ನು ಅಳವಡಿಸಿ ಒಂದು ಬಗೆಯ ಸಾಣೆ ಹಿಡಿಯುವ ಯಂತ್ರವನ್ನು ನಿರ್ಮಾಣ ಮಾಡಿದೆ. ಈ ಯಂತ್ರವನ್ನು ಪರಿಪೂರ್ಣಗೊಳಿಸುವುದಕ್ಕೆ ಇಡಿಯ ಒಂದು ವಾರದ ಕಾಲ ಬೇಕಾಯಿತು.

ಏಪ್ರಿಲ್ ೨೮, ೨೯:– ನನ್ನ ಆಯುಧಗಳನ್ನೆಲ್ಲಾ ಸಾಣೆ ಹಿಡಿದೆ. ನಿರ್ಮಿಸಿದ್ದ ಯಂತ್ರ ಬಹು ಸಮರ್ಪಕವಾಗಿ ಕೆಲಸ ಮಾಡುತ್ತಿತ್ತು .

ಏಪ್ರಿಲ್ ೩೦:– ನನ್ನ ರೊಟ್ಟಿಯ ದಾಸ್ತಾನು ಈಚೀಚೆಗೆ ಬಹಳ ಕಡಿಮೆ ಬಿದ್ದು ಹೋಗಿದ್ದುದು ಕಂಡುಬಂದು, ದಿನಕ್ಕೆ ಒಂದು ಬಿಸ್ಕತ್ ರೊಟ್ಟಿ ತಿನ್ನುವುದಾಗಿ ತೀರ್ಮಾನ ಮಾಡಿಕೊಂಡೆ. ಈ ತೀರ್ಮಾನದಿಂದ ಮನಸ್ಸು ಕುಗ್ಗಿತೆಂದು ಬೇರೆ ಹೇಳಬೇಕೆ ?

* * * *

ರಾತ್ರಿಯೆಲ್ಲಾ ಮಳೆ ಸುರಿಯುತ್ತಲೇ ಇತ್ತು. ಮಾರನೆಯ ದಿವಸವೂ ತಕ್ಕಮಟ್ಟಿಗೆ ಮಳೆಯಿದ್ದುದರಿಂದ ಹೊರಕ್ಕೆ ಹೊರಡಲಾಗಲಿಲ್ಲ. ನನ್ನ ಮನಸ್ಸೇನೋ ಸಮಾಧಾನಸ್ಥಿತಿಯಲ್ಲಿದ್ದಿತು. ಆಗ, ದ್ವೀಪದಲ್ಲಿ ಇನ್ನು ಮುಂದೆಯೂ ಭೂಕಂಪವಾಗಬಹುದೆಂದು ತೋರಿ, ಹಾಗಾದರೆ ಈ ಗುಹೆಯಲ್ಲಿ ನನಗೆ ಉಳಿಗಾಲವಿರದೆಂದು ಖಚಿತವಾಯಿತು. ಆಗ ಬೇರೆ ಇನ್ನೆಲ್ಲಿಯಾದರೂ ಬಯಲುದಾಣದಲ್ಲಿ ಒಂದು ಸಣ್ಣ ಗುಡಿಸಿಲನ್ನು ಹಾಕಿಕೊಂಡು ಇಲ್ಲಿನಂತೆಯೇ ರಕ್ಷಣೋಪಾಯಗಳನ್ನು ಕಲ್ಪಿಸಿಕೊಳ್ಳುವ ಆಲೋಚನೆ ಮಾಡಿದೆ. ಮಾರನೆಯ ಎರಡು ದಿನಗಳನ್ನು (ಎಂದರೆ ಏಪ್ರಿಲ್ ೧೯ ಮತ್ತು ೨೦) ನನ್ನ ವಾಸಸ್ಥಳವನ್ನು ಹೇಗೆ ಮತ್ತು ಎಲ್ಲಿಗೆ ಬದಲಾಯಿಸುವುದೆಂಬ ಉಪಾಯಚಿಂತನೆಯಲ್ಲಿ ಕಳೆದೆ.

ನಾನು ಈಗ ಇದ್ದ ಸ್ಥಳದಲ್ಲಿ ಜೀವಸಹಿತ ಸಮಾಧಿಯಾಗುವೆನೆಂಬ ಯೋಚನೆ ಎಷ್ಟು ಭೀತಿಕಾರಕವಾಗಿದ್ದಿತೊ, ಹೊರಗಡೆ ಬಯಲಿನಲ್ಲಿ ಸುತ್ತ ಬೇಲಿಯ ರಕ್ಷಣೆಯಿಲ್ಲದೆ ಮಲಗಿಕೊಳ್ಳುವುದು ಬೇರೆಯ ರೀತಿಯಲ್ಲಿ ಭೀತಿಕಾರಕವಾಗಿದ್ದಿತು. ಒಮ್ಮೆ ಹಾಗೆಯೇ ನನ್ನ ವಾಸಸ್ಥಳವನ್ನು ದಿಟ್ಟಿಸಿ ನೋಡಲು ಅದು ಬಹಳ ಹಿತಕರವಾಗಿ ಕಂಡು, ಅದನ್ನು ತ್ಯಜಿಸಲು ಮನಸ್ಸು ಹಿಂದೆಗೆಯಿತು. ಅಲ್ಲದೆ ಬೇರೆಯ ಕಡೆ ವಾಸಸ್ಥಳವನ್ನು ಏರ್ಪಡಿಸಿಕೊಳ್ಳುವುದೆಂದರೆ ಬಹಳ ಕಾಲ ಹಿಡಿಯುವ ಮಾತು. ಆದ್ದರಿಂದ ಬೇರೆಯ ವಸತಿ ನಿರ್ಮಾಣವಾಗುವವರೆಗೂ ಇಲ್ಲಿಯೇ ಇದ್ದುಕೊಂಡು ಬಂದದ್ದನ್ನೆಲ್ಲಾ ಅನುಭವಿಸುವುದೆಂಬ ನಿಶ್ಚಯಮಾಡಿದೆ ; ಮತ್ತು ನಾನು ಯೋಚಿಸಿದ್ದಂತೆ ಬೇರೆಯ ವಸತಿಯನ್ನು ಕಲ್ಪಿಸಿಕೊಳ್ಳುವ ಆಲೋಚನೆಯನ್ನು ಸಾಧ್ಯವಾದಷ್ಟು ಬೇಗನೆ ಕಾರ್ಯರೂಪಕ್ಕೆ ತರುವುದಾಗಿಯೂ ನಿರ್ಧಾಮಾಡಿದೆ. ಈವೊತ್ತು ಏಪ್ರಿಲ್ ೨೧.

ಏಪಿಲ್ ೨೨ :– ಮೇಲ್ಕಂಡಂತೆ ನನ್ನ ಯೋಜನೆಯನ್ನು ಕಾರ್ಯ ರೂಪಕ್ಕೆ ಹೇಗೆ ತರುವುದೆಂಬ ಬಗ್ಗೆ ಚಿಂತಿಸತೊಡಗಿದೆ. ನನ್ನಲ್ಲಿ ಹಲವು ಬಗೆಯ ಆಯುಧಗಳಿರಲಿಲ್ಲ ; ಮೂರು ದೊಡ್ಡ ಕೊಡಲಿಗಳೂ ನೂರಾರು ಕೈಗೊಡಲಿಗಳೂ ಮಾತ್ರ ಇದ್ದುವು. ಗಂಟುಗಂಟಾದ ಗಟ್ಟಿಮರವನ್ನು ಕೆತ್ತಿ ಕೆತ್ತಿ ಅವೆಲ್ಲಾ ಮೊಂಡಾಗಿದ್ದವು. ನನ್ನಲ್ಲಿ ಸಾಣೆ ಹಿಡಿಯುವ ಕಲ್ಲೇನೋ ಇತ್ತು. ಆದರೆ ಅದನ್ನು ತಿರುಗಿಸಲಾಗದಿದ್ದುದರಿಂದ ಆಯುಧಗಳನ್ನು ಸಾಣೆ ಹಿಡಿಯುವುದಕ್ಕೆ ಆಗುವಂತಿರಲಿಲ್ಲ. ರಾಜನೀತಿ ವಿಶಾರದನು ಒಂದು ಮಹಾರಾಜಕಾರ್ಯ ಸಮಸ್ಯೆಯನ್ನು ಬಿಡಿಸುವುದಕ್ಕೋ ಇಲ್ಲವೇ ನ್ಯಾಯಧೀಶನೊಬ್ಬನು ಅಪರಾಧಿಯ




ಗಡಾರಿಯಿಂದಲೋ ಹಡಗಿನ ಭಾಗಗಳನ್ನೆಲ್ಲಾ ಬೇರ್ಪಡಿಸಿ, ಅದರಿಂದ ದೊರೆಯಬಹುದಾದ ಹಲವು ಉಪಯುಕ್ತ ಪದಾರ್ಥಗಳನ್ನು ಸಂಗ್ರಹಿಸಿದೆ. ಹೀಗೆ ಸಂಗ್ರಹಿಸಿದ ಮುಖ್ಯ ಪದಾರ್ಥಗಳಲ್ಲಿ ಹಲಗೆಗಳು, ಮರದ ತುಂಡುಗಳು, ಸಣ್ಣಸಣ್ಣ ಜಂತಿಗಳು, ಕಬ್ಬಿಣದ ಅಗುಳಿಗಳು ಮತ್ತು ಇನ್ನೂ ಅನೇಕ ಬಗೆಯ ಕಬ್ಬಿಣದ ಪದಾರ್ಥಗಳು ಸೇರಿದ್ದುವು. ನನಗೆ ದೋಣಿಯನ್ನು ಕಟ್ಟುವುದಕ್ಕೆ ಬಂದಿದ್ದರೆ ದೋಣಿಯ ನಿರ್ಮಾಣಕ್ಕೆ ಎಷ್ಟು ಆವಶ್ಯಕವೋ ಅಷ್ಟು ಮರದ ಮತ್ತು ಕಬ್ಬಿಣದ ಸಾಮಗ್ರಿಗಳು ಸಂಗ್ರಹವಾಗಿದ್ದುವು. ಪ್ರತಿದಿನವೂ ಬೆಳಗಿನಿಂದ ಸಂಜೆಯವರೆಗೂ ದುಡಿದು ಇವೆಲ್ಲವನ್ನೂ ಕರೆಗೆ ಸಾಗಿಸುತ್ತಿದ್ದೆ.

**ಒಂದು ದೊಡ್ಡ ಆಮೆ**

ಜೂನ್ ೧೬ :– ಕಡಲ ಬಳಿಗೆ ಹೋದಾಗ ಈ ದಿನ ಒಂದು ದೊಡ್ಡ ಆಮೆ ಕಣ್ಣಿಗೆ ಬಿದ್ದಿತು. ಇದು ನನ್ನ ಕಣ್ಣಿಗೆ ಬಿದ್ದ ಮೊದಲನೆಯ ಆಮೆ.

ಜೂನ್ ೧೭ :– ಆಮೆಯನ್ನು ಬೇಯಿಸುವುದರಲ್ಲಿ ಈ ದಿನ ಕಳೆದೆ.

## ಅಧ್ಯಾಯ ೫

# ಒಡೆದ ಹಡಗಿನಿಂದ ಪದಾರ್ಥ ಸಂಗ್ರಹಣ

ಮೇ ೧ : ಬೆಳಗ್ಗೆ ಎದ್ದು ಕಡಲ ಕಡೆ ನೋಡಿದಾಗ, ಕರೆಯ ಮೇಲೆ ಏನೋ ಒಂದು ದೊಡ್ಡ ಪದಾರ್ಥ ಬಿದ್ದಿರುವುದಾಗಿ ಕಂಡಿತು. ಅದರ ಬಳಿಗೆ ಹೋಗಿ ನೋಡಲಾಗಿ ಅದು ಒಂದು ಸಣ್ಣ ಪೀಪಾಯಿಯಾಗಿದ್ದಿತು. ಅದರ ಪಕ್ಕದಲ್ಲಿಯೇ ಹಡಗಿನ ಒಡೆದ ಚೂರುಗಳು ಎರಡು ಮೂರು ಬಿದ್ದಿದ್ದುವು. ಒಡೆದ ಹಡಗು ಎಂದಿಗಿಂತ ನೀರಿನ ಮೇಲೆ ಎತ್ತರವಾಗಿ ನಿಂತಿದ್ದಂತೆ ಕಂಡಿತು. ಪೀಪಾಯಿಯ ತುಂಬ ತುಂಬಿದ್ದ ಕೋವಿಮದ್ದು ನೀರಿನಲ್ಲಿ ನೆನೆದು ಕಲ್ಲಿನಂತೆ ಗಟ್ಟಿಯಾಗಿತ್ತು. ಅದನ್ನು ಕರೆಯ ಮೇಲೆ ಸಾಧ್ಯವಾದಷ್ಟು ದೂರ ಉರುಳಿಸಿಕೊಂಡು ಹೋಗಿ ಬಿಟ್ಟು ಬಂದು, ಒಡೆದ ಹಡಗಿನ ಬಳಿಗೆ ಹೋದೆ.

ಹಡಗಿನ ಬಳಿ ಹೋಗಿ ನೋಡಿದಾಗ ಅದು ಬಹು ವಿಚಿತ್ರವಾದ ರೀತಿಯಲ್ಲಿ ಅಸ್ತವ್ಯಸ್ತವಾಗಿತ್ತು. ಒಂದು ತುದಿ ಕುಸಿದಿತ್ತು, ಇನ್ನೊಂದು ತುದಿ ನೆಟ್ಟಗೆ ನಿಮಿರಿ ನಿಂತಿತ್ತು ; ಒಂದು ಬದಿ ಛಿದ್ರಛಿದ್ರವಾಗಿ ಹಡಗಿನ ಒಡಲಿಂದ ಸಂಪೂರ್ಣವಾಗಿ ಬೇರ್ಪಟ್ಟಿತ್ತು. ಹಡಗಿನ ಈ ಸ್ಥಿತಿಗೆ ಭೂಕಂಪವೇ ಕಾರಣವಿರಬೇಕೆಂದು ಊಹಿಸಿದೆ. ಹೀಗೆ ಹಡಗು ಸಂಪೂರ್ಣವಾಗಿ ಒಡೆದುಹೋಗಿದ್ದುದರಿಂದ ಅದರಲ್ಲಿದ್ದ ಸಾಮಗ್ರಿಗಳು ಒಂದೊಂದಾಗಿ ಕೊಚ್ಚಿಕೊಂಡು ಕಡಲಿನ ಕಡೆಗೆ ಬರುವುದರಲ್ಲಿ ಸಂದೇಹವಿರಲಿಲ್ಲ. ಹಡಗನ್ನು ನೋಡಿದ ಮೇಲೆ ಇನ್ನೊಂದು ವಸತಿಯನ್ನು ಮಾಡುವ ಆಲೋಚನೆಗಳೆಲ್ಲಾ ಮರೆತುಹೋದವು. ಆದರೆ ಹಡಗನ್ನು ಹತ್ತಿಹೋಗಲು ಸರಿಯಾದ ಮಾರ್ಗವೇ ಇರಲಿಲ್ಲ. ಹಡಗಿನ ಒಳಭಾಗವೆಲ್ಲ ಮರಳಿನಿಂದ ತುಂಬಿ ಹೋಗಿತ್ತು. ಎಷ್ಟೇ ಪ್ರತಿಕೂಲ ಸಂದರ್ಭಗಳಿದ್ದರೂ ನಿರಾಶೆಪಡದಿರುವುದನ್ನು ಕಲಿತಿದ್ದೆನಾದ್ದರಿಂದ, ಒಡೆದ ಹಡಗನ್ನು ಇನ್ನೂ ಸಂಪೂರ್ಣವಾಗಿ ಒಡೆದುಹಾಕಿ, ನನಗೆ ಉಪಯೋಗವಾಗುವ ಪದಾರ್ಥವನ್ನೊಂದನ್ನೂ ಬಿಡದೆ ತರಬೇಕೆಂದು ನಿಶ್ಚಯಿಸಿದೆ.

ಮೇ ೩ರಿಂದ ಜೂನ್ ೧೫ :– ಈ ಅವಧಿಯಲ್ಲಿ, ನಾನು ಪ್ರತಿದಿನವೂ ಹಡಗಿಗೆ ಹೋಗಿ, ಗರಗಸದಿಂದಲೋ ಕೈಗೊಡಲಿಯಿಂದಲೋ ಕಬ್ಬಿಣದ

ಮಲಗಿದ್ದೆ. ಆಹಾರಪಾನೀಯಗಳಿಲ್ಲ. ಬಾಯಾರಿಕೆಯಿಂದ ಬಳಲಿಹೋಗಿದ್ದೆ. ಎದ್ದು ನಿಂತು ನೀರು ತಂದು ಕುಡಿಯುವಷ್ಟ ತ್ರಾಣವೂ ಇರಲಿಲ್ಲ. ಆ ಸ್ಥಿತಿಯಲ್ಲಿ ಎರಡು ಮೂರು ಗಂಟೆಗಳ ಕಾಲ ಒಂದೇ ಸಮನಾಗಿ ಬಿಡದೆ, – "ದೇವರೇ ಕರುಣಿಸು !" ದೇವರೇ, ಕರುಣೆ ತೋರಿಸು ! ದೇವರೇ, ನನ್ನ ಮೇಲೆ ಕೃಪಾಕಟಾಕ್ಷ ಬೀರು !" ಎಂಬುದಾಗಿ ಮೊರೆಯಿಟ್ಟೆ. ತರುವಾಯ, ಅತ್ಯಂತ ಆಯಾಸದಿಂದ ನಿದ್ದೆಯಲ್ಲಿ ಮುಳುಗಿಹೋದೆ. ಮಧ್ಯ ರಾತ್ರಿಯಲ್ಲಿ ಎಚ್ಚರವಾಯಿತು. ಆಗ ಮೈಗೆ ಎಷ್ಟೋ ಮೇಲಾಗಿದ್ದಂತೆ ತೋರಿತು. ಆದರೆ ಬಹಳ ನಿಶ್ಶಕ್ತಿ ; ತಡೆಯಲಾಗದಷ್ಟು ದಾಹ. ಮನೆಯಲ್ಲಿ ಒಂದು ತೊಟ್ಟೂ ನೀರಿರಲಿಲ್ಲ. ಬೆಳಗಾಗುವವರೆಗೂ ಮಲಗಿ ನಿದ್ದೆ ಹೋಗಬೇಕಾಯಿತು. ನನ್ನ ಎರಡನೆಯ ನಿದ್ದೆಯಲ್ಲಿ ನನಗೊಂದು ಭಯಂಕರವಾದ ಕನಸಾಯಿತು. ಇದೇ ಆ ಕನಸು :–

**ಭಯಂಕರ ಸ್ವಪ್ನ**

ನಾನು ನನ್ನ ವಾಸಸ್ಥಳದ ಗೋಡೆಯ ಹೊರಗೆ ನೆಲದ ಮೇಲೆ ಕುಳಿತಿದ್ದೆ. ಆಗ ಒಂದು ದೊಡ್ಡ ಕಾಲಮೇಘದಿಂದ ಒಬ್ಬ ಪುರುಷನು ಇಳಿದು ಬಂದನು. ಅವನ ಸುತ್ತ ಜ್ವಾಲೆಯ ಪ್ರಭಾವಳಿಯಿತ್ತು. ಆತನನ್ನು ದಿಟ್ಟಿಸಿ ನೋಡುವುದೇ ಅಸಾಧ್ಯವಾಗಿತ್ತು. ಆತನ ನೋಟವಂತೂ ಬಹು ಉಗ್ರವಾಗಿತ್ತು. ಆತನು ಆಗಸದಿಂದಿಳಿದು ನೆಲದಮೇಲಡಿಯಿಟ್ಟಾಗ ನೆಲ ನಡುಗಿದಂತೆ ತೋರಿತು. ಆ ಉಗ್ರಸ್ವರೂಪಿಯು ನೆಲಕ್ಕೆ ಕಾಲಿಟ್ಟಕೂಡಲೆ ಕೈಯಲ್ಲೊಂದು ಭರ್ಜಿಯನ್ನು ಹಿಡಿದುಕೊಂಡು ನನ್ನನ್ನು ಕೊಲ್ಲಲೆಂಬಂತೆ ನನ್ನಲ್ಲಿಗೆ ಧಾವಿಸಿ ಬಂದನು. ನನ್ನ ಸಮೀಪದಲ್ಲಿದ್ದ ಒಂದು ತಿಟ್ಟಿನ ಮೇಲಕ್ಕೆ ಬಂದಾಗ ಆತನು ಅಲ್ಲಿಯೇ ನಿಂತು ಮೊಳಗುವ ಧ್ವನಿಯಲ್ಲಿ ನನ್ನನ್ನು ಕುರಿತು ಹೀಗೆ ನುಡಿದನು. "ಇದುವರೆಗೂ ವಿಪತ್ತಿನ ಮೇಲೆ ವಿಪತ್ತು ಸಂಭವಿಸಿದರೂ ಪಶ್ಚಾತ್ತಾಪಪಡದೆಯಿರುವೆಯಲ್ಲವೆ? ಇನ್ನೂ ನೀನು ಸಾಯುವೆ." ಈ ನುಡಿಗಳನ್ನು ನುಡಿದು ಆತನು ನನ್ನನ್ನು ಕೊಲ್ಲುವುದಕ್ಕಾಗಿ ಭರ್ಜಿಯನ್ನು ಎತ್ತಿದಂತೆ ನನಗೆ ತೋರಿತು.

ಈ ಭಯಂಕರ ಸ್ವಪ್ನದರ್ಶನದಿಂದ ನನ್ನ ಅಂತಃಕರಣದಲ್ಲಿ ಆದ ತುಮುಲವನ್ನು ನಾನು ವರ್ಣಿಸಲಾರೆ. ಅದು ಕನಸೇ ಆದರೂ ಅದರ ಭೀಕರತೆ ಮಾತಿಗೆ ಮೀರಿದ್ದು. ನಾನು ಎಚ್ಚತ್ತು ಅದು ಕನಸೆಂದು ಅರಿತು ಕೊಂಡಮೇಲೆ ಕೂಡ ನನ್ನ ಮನಸ್ಸಿನಲ್ಲಿ ಉಳಿದಿದ್ದಂಥ ಭಾವನೆಯನ್ನು ಕೂಡ ವರ್ಣಿಸಲಾರೆ.

ದೇವರ ಬಗ್ಗೆ ನನಗೆ ಏನೇನೂ ಕಲ್ಪನೆಯಿರಲಿಲ್ಲ. ನಮ್ಮ ತಂದೆ ನನಗೆ

ಅದರೊಳಗೆ ಸುಮಾರು ಅರುವತ್ತು ಮೊಟ್ಟೆಗಳಿದ್ದುವು. ಈ ದ್ವೀಪಕ್ಕೆ ಬಂದಂದಿನಿಂದ ಆಡುಗಳ ಮತ್ತು ಕಾಡುಕೋಳಿಗಳ ಮಾಂಸವನ್ನಲ್ಲದೆ ಬೇರೆ ಯಾವ ಮಾಂಸವನ್ನೂ ರುಚಿ ನೋಡದಿದ್ದ ನನಗೆ ಈ ಆಮೆಯ ಮಾಂಸ ಬಹು ಮಧುರವಾಗಿತ್ತು.

ಜೂನ್ ೧೮ :– ದಿನವೆಲ್ಲಾ ಮಳೆ. ಒಳಗೇ ಇದ್ದೆ. ಸ್ವಲ್ಪ ಚಳಿಯ ಕೊರೆತ ಕಾಣಿಸತೊಡಗಿತು.

**ಅನಾರೋಗ್ಯ :– ಜ್ವರ**

ಜೂನ್ ೧೯ :– ಮೈಗೆ ಅಸ್ವಸ್ಥವಾದಂತಿತ್ತು. ಚಳಿಯಿಂದ ನಡುಗುತ್ತಿದ್ದೆ.

ಜೂನ್ ೨೦ :– ರಾತ್ರಿಯೆಲ್ಲಾ ವಿಶ್ರಾಂತಿಯಿಲ್ಲ. ಬಹಳ ತಲೆನೋವು ; ಜ್ವರ ಬಂದಂತಿತ್ತು.

ಜೂನ್ ೨೧ :– ಬಹಳ ಅಸ್ವಸ್ಥನಾದೆ. ಇದ್ದಕ್ಕಿದ್ದಂತೆಯೇ ನನಗೆ ಆರೋಗ್ಯ ಕೆಟ್ಟು ಯಾರೂ ನೆರವಿಗಿಲ್ಲದಿದ್ದುದರಿಂದ ಮರಣಭೀತಿಯಿಂದ ನಡುಗಿಹೋದೆ. ಹಲ್ ಬಂದರಿನಾಚೆ ಬಿರುಗಾಳಿ ಮಳೆ ಕಾಣಿಸಿಕೊಂಡ ದಿನ ದೇವರ ಪ್ರಾರ್ಥನೆ ಮಾಡಿದ್ದೆ. ಅಂದಿನಿಂದ ಇಂದಿನವರೆಗೆ ಎಂದೂ ಪ್ರಾರ್ಥನೆ ಮಾಡದ ನಾನು ಇಂದು ದೇವರಿಗೆ ಪ್ರಾರ್ಥನೆ ಸಲ್ಲಿಸಿದೆ. ಏನು ಪ್ರಾರ್ಥನೆ ಮಾಡಿಕೊಂಡೆನೋ ಅದು ಮಾತ್ರ ತಿಳಿಯಲಿಲ್ಲ.

ಜೂನ್ ೨೨ :– ಸ್ವಲ್ಪ ಮೇಲು. ಆದರೆ ರೋಗಭಯ ಹೆಚ್ಚಾಗಿಯೇ ಇದ್ದಿತು.

ಜೂನ್ ೨೩ :– ಮತ್ತೆ ಪೂರ್ವಸ್ಥಿತಿ, ನೆಗಡಿ, ನಡುಕ ಮತ್ತು ಪ್ರಬಲವಾದ ಶಿರೋವೇಧೆ.

ಜೂನ್ ೨೪ :– ಸ್ವಲ್ಪ ಮೇಲು.

ಜೂನ್ ೨೫ :– ಪ್ರಬಲವಾದ ಜ್ವರ ಕಾಣಿಸಿಕೊಂಡಿತು. ಜ್ವರದ ಉರುಬು ೭ ಗಂಟೆಯ ಕಾಲ ಇದ್ದಿತು. ಆ ತರುವಾಯ ಮೈ ತುಸ ಬೆವರಿತು.

ಜೂನ್ ೨೬ :– ಸ್ವಲ್ಪ ಮೇಲು. ತಿನ್ನುವುದಕ್ಕೆ ಆಹಾರವಿಲ್ಲದೆ, ಕೈಗೆ ಕೋವಿ ತೆಗೆದುಕೊಂಡೆ. ಶಕ್ತಿ ಬಹಳ ಉಡುಗಿಹೋಗಿತ್ತು. ಆದರೂ ಒಂದು ಮೇಕೆಯನ್ನು ಹೊಡೆದು ಕೊಂದು ಅದರ ಮಾಂಸವನ್ನು ಬೇಯಿಸಿ ತಿಂದೆ. ನನಗೆ ಸದ್ಯದಲ್ಲಿ ಮಾಂಸರಸ ಬೇಕಾಗಿದ್ದಿತು. ಆದರೆ ಅದನ್ನು ತೆಗೆಯಲು ಪಾತ್ರೆಯಿರಲಿಲ್ಲ.

ಜೂನೆ ೨೭ :– ಜ್ವರ ಬಹಳ ಪ್ರಬಲವಾಯಿತು. ದಿನವೆಲ್ಲಾ ಹಾಸಿಗೆಯಲ್ಲೇ

ಏರ್ಪಾಡುಗಳನ್ನು ಮಾಡಿಕೊಳ್ಳುತ್ತಿದ್ದ ಸಂದರ್ಭಗಳಲ್ಲಿಯೂ ನನ್ನ ಬುದ್ಧಿ ಸರ್ವದಾ ಕಾರ್ಯ ಮಗ್ನವಾಗಿದ್ದಿತೇ ಹೊರತು ದೇವರ ಕಡೆಗೆ ಹೊರಳಿರಲಿಲ್ಲ. ಬಾರ್ಲಿ ಧಾನ್ಯದ ಸಸ್ಯವು ಮೊಳೆತಾಗ ನನ್ನಲ್ಲಿ ಮೂಡಿದ್ದ ಭಾವನೆಗಳನ್ನು ಈ ಹಿಂದೆಯೇ ವರ್ಣಿಸಿದ್ದೇನೆ. ಈ ಪ್ರಪಂಚದಲ್ಲಿ ನಡೆಯುವ ಎಲ್ಲ ಘಟನಾವಳಿಗಳೂ ಅದೃಶ್ಯನಾಗಿರುವ ದೇವದೇವನ ಕಾರ್ಯಗಳೇ ಎಂಬುದನ್ನು ಮನಗಾಣಿಸಲು ಭೂಕಂಪಕ್ಕಿಂತಲೂ ಬೇರೆ ನಿದರ್ಶನ ಬೇಕೆ ? ಆದರೆ ಆಗಲೂ ಕೂಡ ನನ್ನ ಚಿತ್ತವು ಚಲಿಸಲಿಲ್ಲ .

ಆದರೆ, ಈಗ ನಾನು ರುಗ್ಣ ಶಯ್ಯೆಯಲ್ಲಿ ಮಲಗಿ ಮೃತ್ಯುವು ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟುಕೊಂಡು ಸಾವಧಾನವಾಗಿ ನನ್ನ ಬಳಿ ಸಾರುತ್ತಿದ್ದುದನ್ನು ಗಮನಿಸುತ್ತಿದ್ದೆ . ನನ್ನ ಶಕ್ತಿಯೆಲ್ಲವೂ ಉಡುಗಿ, ಚೈತನ್ಯವೆಲ್ಲವೂ ಇಂಗಿಹೋಗಿ, ನಾನು ಜೀವಚ್ಛವವಾಗಿ ಹಾಸಿಗೆಯ ಮೇಲೆ ಬಿದ್ದಿದ್ದಾಗ ಅದುವರೆಗೂ ಜಡತೆಯಿಂದ ಪ್ರಸುಪ್ತವಾಗಿದ್ದ ನನ್ನ ಅಂತರಾತ್ಮವು ಕ್ರಮಕ್ರಮವಾಗಿ ಎಚ್ಚರಗೊಳ್ಳತೊಡಗಿತು. ನನ್ನ ಹಿಂದಿನ ಜೀವನಕ್ಕಾಗಿ ನನ್ನನ್ನು ನಾನೇ ಹಳಿದುಕೊಂಡೆ. ನನಗೆ ಸಂಭವಿಸಿದ ಅಸಾಧಾರಣವಾದ ವಿಪತ್ ಪರಂಪರೆಗಳೆಲ್ಲವೂ ದೈವದತ್ತವಾದ ನ್ಯಾಯವಿತರಣೆಯೆಂದು ಭಾವಿಸಿಕೊಳ್ಳತೊಡಗಿದೆ.

ನನ್ನ ಅಸ್ವಸ್ಥತೆಯ ಎರಡನೆಯ ಅಥವಾ ಮೂರನೆಯ ದಿನದಿಂದ ಈ ಬಗೆಯ ಪರಿಚಿಂತನೆ ನನ್ನನ್ನು ಕಾಡತೊಡಗಿತು. ಆತ್ಮನಿಂದನೆಯ ಉದ್ರೇಕದಿಂದಲೂ ಜ್ವರದ ಪ್ರಕೋಪನದಿಂದಲೂ ಪ್ರಚೋದನೆಗೊಂಡು ಕೆಲವು ಪ್ರಾರ್ಥನೆಯ ನುಡಿಗಳು ನನ್ನ ಹೃದಯದಿಂದ ಹೊರಹೊಮ್ಮಿದುವು. ಆದರೆ ಆ ಪ್ರಾರ್ಥನಾ ವಚನಗಳಲ್ಲಿ ಯಾವ ಒಂದು ಅಪೇಕ್ಷೆಯಾಗಲಿ ಪ್ರತೀಕ್ಷೆಯಾಗಲಿ ಹುದುಗಿದ್ದಂತೆ ನನಗೆ ನೆನಪಿಲ್ಲ. ಅದು ಭೀತಿ ಮತ್ತು ಕ್ಲೇಶಗಳ ಪರಿಣಾಮವಾಗಿ ಹೊರಟ ಬರಿಯ ನೋವಿನ ಕೂಗೆಂದು ನನ್ನ ಎಣಿಕೆ. ಇಷ್ಟಂತೂ ನಿಜ : ನನ್ನ ವಿಚಾರಸರಣಿಯೆಲ್ಲಾ ಅಸ್ತವ್ಯಸ್ತವಾಗಿತ್ತು ; ಚಿಂತಾಭಾರವು ಮನಸ್ಸನ್ನು ಒತ್ತುತಿತ್ತು. ಎಂತಹ ಶೋಚನೀಯವಾದ ಪರಿಸ್ಥಿತಿಯಲ್ಲಿ ಸಾಯಬೇಕಾಗಿ ಬಂದಿತಲ್ಲಾ ಎಂಬ ಭೀಕರ ಭಾವನೆಯ ಕುಲುಮೆಯಲ್ಲಿ ನನ್ನ ಮಿದುಳು ಕಾದು ಸಿಡಿಯುತ್ತಿತ್ತು. ಆ ಭಯಾವಿಷ್ಟ ಪರಿಸ್ಥಿತಿಯಲ್ಲಿ ನನ್ನ ಬಾಯಿಂದ ಹೀಗೆ ಉದ್ಗಾರವೊಂದು ಹೊರಟಿತು: "ದೇವರೇ! ಎಷ್ಟೊಂದು ದುಃಖಿ ನಾನು! ಯಾರ ಸಹಾಯವೂ ಇಲ್ಲದೆ ನಾನು ರೋಗದಲ್ಲಿಯೇ ನರಳಿ ನರಳಿ ಸಾಯುವೆನೋ ಏನೊ! ನನ್ನ ಮುಂದಿನ ಗತಿ ಏನು!" ಇದ್ದಕ್ಕಿದ್ದಂತೆಯೇ ಕಣ್ಣಿನಲ್ಲಿ ನೀರು ಚಿಮ್ಮಿ, ಬಹಳ

ಆಗಾಗ್ಗೆ ಮಾಡಿದ್ದ ಸದ್ಬೋಧನೆಯೆಲ್ಲವೂ ನನ್ನ ಸಮುದ್ರ ಪರ್ಯಟನದ ಒರಟುಬಾಳಿನಿಂದಲೂ ಮತ್ತು ನನಗಿಂತ ಕೀಳಾದವರ ದುಷ್ಟ ಸಹವಾಸದಿಂದಲೂ ನಶಿಸಿಹೋಗಿತ್ತು. ಎಂದೂ ನಾನು ದೇವರ ಕಡೆ ಮೊಗವೆತ್ತಿ ಆತನನ್ನು ಬೇಡಿಕೊಳ್ಳಬೇಕೆಂಬ ಭಾವನೆ ನನ್ನಲ್ಲಿ ಉಂಟಾದಂತೆಯೇ ನನಗೆ ನೆನಪಿಲ್ಲ. ಅದು ಹೋಗಲಿ. ನನ್ನ ನಡವಳಿಕೆಗಳನ್ನು ಕುರಿತು ನನ್ನಲ್ಲಿ ನಾನು ವಿಚಾರಮಾಡಿಕೊಂಡ ನೆನಪಿಲ್ಲ. ನನ್ನ ಆತ್ಮವು ಒಂದು ಬಗೆಯಲ್ಲಿ ಜಡಮೂಢತೆಯಿಂದ ಕೂಡಿತ್ತು; ಅದಕ್ಕೆ ಒಳ್ಳೆಯದನ್ನು ಕುರಿತ ಬಯಕೆಯಿರಲಿಲ್ಲ, ಕೆಟ್ಟದ್ದು ಏನೆಂಬುದರ ಕಲ್ಪನೆಯಿರಲಿಲ್ಲ. ಹೀಗಾಗಿ ನಾನು ಒಂದು ವಿವೇಚನಾರಹಿತವಾದ ಕ್ರೂರಪ್ರಾಣಿಯಂತಾಗಿದ್ದೆ. ಅಪಾಯಕ್ಕೆ ಸಿಲುಕಿದಾಗ ದೈವಭೀತಿಯಾಗಲಿ ಅಪಾಯದಿಂದ ಪಾರಾದಮೇಲೆ ದೇವರಲ್ಲಿ ಕೃತಜ್ಞತಾಭಾವವಾಗಲಿ ನನ್ನಲ್ಲಿ ಇರಲೇ ಇರಲಿಲ್ಲ. ಇದಕ್ಕೆಲ್ಲಾ ನಾನು ಇದುವರೆಗೆ ವಿವರಿಸಿರುವ ನನ್ನ ಕಥೆಯ ಘಟನಾವಳಿಗಳೇ ನಿದರ್ಶನ. ಇದುವರೆಗೆ ನನಗೆ ಸಂಭವಿಸಿದ ವಿವಿಧ ವಿಪತ್ತುಗಳೆಲ್ಲವೂ ನ್ನ ಪಾಪಕಾರ್ಯಗಳಿಗೆ ಪ್ರತಿಯಾಗಿ ದೇವರು ನನಗೆ ಕೊಟ್ಟ ಶಿಕ್ಷೆ ಎಂಬ ಭಾವನೆಯೇ ನನಗೆ ಉಂಟಾಗಿರಲಿಲ್ಲ. ಪ್ರತಿಯೊಂದು ಘಟನೆಯಲ್ಲಿಯೂ ದೇವರ ಕೈವಾಡವಿದೆಯೆಂಬ ಅರಿವು ನನ್ನಲ್ಲಿ ಸ್ಫುರಿಸಿರಲಿಲ್ಲ. ಆಫ್ರೀಕಾತೀರದಲ್ಲಿ ನಾನು ಸಂಚರಿಸುತ್ತಿದ್ದಾಗ ನಾನು ನನ್ನ ಸಾಮಾನ್ಯ ಪರಿಜ್ಞಾನವನ್ನು ಅವಲಂಬಿಸಿಕೊಂಡು ನಡುನಡುವೆ ಸಂಭವಿಸಿದ ವಿಘ್ನಗಳನ್ನೂ ಅಪಾಯಗಳನ್ನೂ ಎದುರಿಸುತ್ತಿದ್ದೆನೇ ಹೊರತು ದೇವರ ವಿಚಾರದಲ್ಲಿ ಪರಿಜ್ಞಾನವೇ ಇರಲಿಲ್ಲ. ಪೋರ್ಚುಗಲ್ಲಿನ ನೌಕಾನಾಯಕನು ಔದಾರ್ಯವನ್ನು ಮೆರೆದು ನನ್ನ ನೆರವಿಗೆ ಬಂದಾಗ ನನ್ನ ಹೃದಯದಲ್ಲಿ ಕೃತಜ್ಞತಾಭಾದ ಸುಳಿವೂ ಇರಲಿಲ್ಲ. ಮತ್ತೆ, ನಾನು ಈ ದ್ವೀಪದಲ್ಲಿ ಬಂದು ಬಿದ್ದಾಗ, ನನ್ನಲ್ಲಿ ಏನಾದರೂ ಪಶ್ಚಾತ್ತಾಪ ಬುದ್ಧಿಯುಂಟಾಯಿತೆ? ಇಲ್ಲ. "ನಾನೊಬ್ಬ ಅದೃಷ್ಟಹೀನ ; ದುಃಖಪಡುವುದೇ ನನ್ನ ಬದುಕು" ಎಂದು ನನ್ನಲ್ಲಿ ನಾನು ಕೊರಗಿದೆನಷ್ಟೆ. ನಾನು ಈ ದ್ವೀಪದ ಕಡಲ ಕರೆಯ ಮೇಲೆ ಕಾಲಿಟ್ಟಾಗ, ಒಂದು ಬಗೆಯ ಆನಂದದಲ್ಲಿ ಮುಳುಗಿ ಮೈಮರೆತಿದ್ದಾಗ, ಆ ಕ್ಷಣದಲ್ಲಿ ದೈವಕೃಪೆಯ ಸಹಾಯವಿದ್ದಿದ್ದರೆ, ನನ್ನಲ್ಲಿ ದೇವರ ಬಗ್ಗೆ ಕೃತಜ್ಞಭಾವ ಮೊಳೆಯುತ್ತಿದ್ದಿತೋ ಏನೊ. ಆದರೆ ನನ್ನ ಹಿಗ್ಗು ಹಿಗ್ಗಾಗಿಯೇ ಉಳಿಯಿತೇ ಹೊರತು ನನ್ನನ್ನು ಕಾಪಾಡಿದ್ದ ದೈವದಲ್ಲಿ ಭಕ್ತಿಯಾಗಿ ಪರಿಣಮಿಸಲಿಲ್ಲ. ಇಷ್ಟೇ ಅಲ್ಲದೆ, ನಾನು ಈ ದ್ವೀಪದಲ್ಲಿ ನನ್ನ ವಾಸಸ್ಥಳವನ್ನು ನಿರ್ಮಾಣ ಮಾಡಿಕೊಂಡು ಕ್ರಮಕ್ರಮವಾಗಿ ನನ್ನ ಆತ್ಮಸಂರಕ್ಷಣೆಯ ಮತ್ತು ಜೀವನ ನಿರ್ವಾಹದ

ದಿನ ಜ್ವರವು ಎಲ್ಲಿ ಮರಳೀತೋ ಎಂಬ ಭೀತಿಯಿಂದಲೂ ಹೃದಯ ಭಾರವಾಗಿತ್ತು, ಮನಸ್ಸು ಕುಗ್ಗಿತ್ತು. ಇರುಳಾದ ಮೇಲೆ ಮೂರು ಆಮೆಯ ಮೊಟ್ಟೆಗಳನ್ನು ಬೆಂಬೂದಿಯಲ್ಲಿ ಸುಟ್ಟು ತಿಂದೆ ; ತಿನ್ನುವ ಮೊದಲು ದೇವರನಾಮ ಸ್ಮರಣೆ ಮಾಡಿ, ಅವನ ದಯಾಭಿಕ್ಷೆಯನ್ನು ಬೇಡಿ ತಿಂದೆ. ನನ್ನ ಜೀವಮಾನದಲ್ಲೆಲ್ಲಾ ಭೋಜನಪೂರ್ವದಲ್ಲಿ ಮಾಡಿದ ಮೊದಲನೆಯ ಪ್ರಾರ್ಥನೆ ಇದೇ.

ಮೊಟ್ಟೆಯನ್ನು ತಿಂದ ಬಳಿಕ ಹೊರಗಡೆ ಸ್ವಲ್ಪ ಸುತ್ತಾಡಿಕೊಂಡು ಬರಲು ಪ್ರಯತ್ನಿಸಿದೆ. ಬಂದೂಕನ್ನು ಎತ್ತಿಹಿಡಿಯುವಷ್ಟು ಶಕ್ತಿಯೂ ಇರಲಿಲ್ಲ. (ಬಂದೂಕನ್ನು ತೆಗೆದುಕೊಳ್ಳದೆ ನಾನು ಹೊರಹೊರಡುತ್ತಲೇ ಇರಲಿಲ್ಲ). ಆದ್ದರಿಂದ ಸ್ವಲ್ಪದೂರ ಮಾತ್ರ ನಡೆದುಹೋಗಿ ನೆಲದಮೇಲೆ ಕುಳಿತೆ ; ಎದುರಿನಲ್ಲಿ ಶಾಂತವಾದ ಸಮುದ್ರ ; ಅದನ್ನು ನೋಡುತ್ತಾ ಕುಳಿತಿರಲು, ನನ್ನ ಮನಸ್ಸಿನಲ್ಲಿ ಈ ಬಗೆಯ ಭಾವನೆಗಳು ಸುಳಿದಾಡಿದುವು :–

ನಾನು ಹುಟ್ಟಿದಂದಿನಿಂದ ಎಡೆಬಿಡದೆ ನೋಡುತ್ತಿರುವ ಈ ನೆಲ, ಆ ಕಡಲು – ಇವು ಯಾವುವು? ಇವು ಎಲ್ಲಿಂದ ಬಂದುವು? ನಾನು ಯಾರು? ಎಲ್ಲಿಂದ ಬಂದೆ? ಇತರ ಪ್ರಾಣಿಗಳೂ ಮಾನವರೂ ಎಲ್ಲಿಂದ ಬಂದರು?

ಯಾವ ಶಕ್ತಿ ಈ ನೆಲವನ್ನೂ ಕಡಲನ್ನೂ, ಆ ಬಾನನ್ನೂ ಸುತ್ತಲೂ ಬೀಸುವ ಗಾಳಿಯನ್ನೂ ಮಾಡಿತೋ ಅದೇ ಶಕ್ತಿಯು, – ಅದೃಶ್ಯವಾದ, ಗುಹ್ಯಾತ್ ಗುಹ್ಯತರವಾದ ಅದೇ ಶಕ್ತಿಯು – ನಮ್ಮನ್ನೂ ಮಾಡಿದೆ ; ಇದರಲ್ಲಿ ಸಂಶಯವಿಲ್ಲ. ಆ ಶಕ್ತಿ ಯಾವುದು?

ಮೇಲ್ಕಂಡ ಪ್ರಶ್ನೆಗಳಿಗೆ ಉತ್ತರವು ಸಹಜವಾಗಿ ತಾನೇ ತಾನಾಗಿ ಹೊರಟಿತು:–

ಎಲ್ಲವನ್ನೂ ಸೃಷ್ಟಿಸಿರುವವನು ದೇವರು. ಇವೆಲ್ಲವನ್ನೂ ದೇವರೇ ಸೃಷ್ಟಿಸಿರುವುದಾದರೆ, ಎಲ್ಲವನ್ನೂ ಅವನೇ ನಡೆಸಿಕೊಂಡು ಹೋಗುತ್ತಾನೆ ; ಸಮಸ್ತವೂ ಅವನ ಅಂಕೆ ಆಳಿಕೆಗಳಿಗೆ ಒಳಪಟ್ಟಿವೆ. ಏಕೆಂದರೆ, ಎಲ್ಲವನ್ನೂ ಸೃಜಿಸುವ ಶಕ್ತಿಯುಳ್ಳವನು ಅವುಗಳನ್ನು ನಡಸಿಕೊಂಡು ಹೋಗುವ ಶಕ್ತಿಯನ್ನೂ ಹೊಂದಿರಲೇಬೇಕು.

ಹಾಗಿರುವ ಪಕ್ಷಕ್ಕೆ, ಅವನ ಕಾರ್ಯವ್ಯವಸ್ಥೆಯಲ್ಲಿ ಯಾವುದೂ ಆತನ ಅರಿವಿಗೆ ಬರದೆ, ಇಲ್ಲವೆ ಆತನ ಇಚ್ಛೆಯಿಲ್ಲದೆ, ಸಂಭವಿಸಲಾರದು ; ಒಂದು ಹುಲ್ಲುಕಡ್ಡಿ ಕೂಡ ಚಲಿಸಲಾರದು.

ಆತನ ಅರಿವಿಲ್ಲದೆ ಯಾವೂದೂ ಸಂಭವಿಸಲಾರದೆಂದಾದರೆ, ನಾನು

ಹೊತ್ತಿನವರೆಗೆ ಕೊರಲು ಕಟ್ಟಿಹೋಯಿತು.

ಈ ಅಂತರದಲ್ಲಿ ನನ್ನ ತಂದೆ ನನಗೆ ಉಪದೇಶಿಸಿದ ಹಿತವಾಕ್ಯಗಳು ನನ್ನ ನೆನಪಿಗೆ ಬಂದುವು. ಅದನ್ನೆಲ್ಲಾ ಕಥೆಯ ಪ್ರಾರಂಭದಲ್ಲಿಯೇ ವಿವರಿಸಿದ್ದೇನೆ. ನನ್ನ ತಂದೆಯ ಹಿತದ ನುಡಿಗಳನ್ನು ನೆನೆದಕೂಡಲೆ ನನ್ನನ್ನು ನಾನು ಹಳಿದುಕೊಳ್ಳತೊಡಗಿದೆ. ನನ್ನ ತಂದೆ ಹೇಳಿದಂತೆ, ಅವಿವೇಕದ ಮಾರ್ಗದಲ್ಲಿ ಮುಂದುವರಿಯುತ್ತ ಮುಂಗಾಣದೆ ವಿಪತ್ತಿನ ಪ್ರಪಾತದೊಳಕ್ಕೆ ಬಿದ್ದಾಗ ಕೈಹಿಡಿದು ಎತ್ತುವವರು ಯಾರೂ ಬಳಿಯಲ್ಲಿಲ್ಲದಂತಹ ಸ್ಥಿತಿಯಲ್ಲಿ ನಾನಿಂದು ಇದ್ದೆ. ನನ್ನ ತಂದೆಯ ಮಾತನ್ನು ಕೇಳಿದ್ದಿದ್ದರೆ ಎಷ್ಟು ಮೇಲಾಗಿರುತ್ತಿತ್ತೆಂದು ಈಗ ಅನ್ನಿಸತೊಡಗಿತು. ಈಗ ನಾನು ಎದುರಿಸುತ್ತಿದ್ದ ಕ್ಲೇಶಾನುಭವವು ದುರ್ಭೇದ್ಯವಾದ ಪ್ರಾಕಾರದಂತಿದ್ದಿತು. ಅದನ್ನಡರಿ ಪಾರಾಗಲು ಯಾರ ಸಹಾಯವೂ ಇರಲಿಲ್ಲ ; ನನ್ನ ಈಗಿನ ಕಷ್ಟ ಸ್ಥಿತಿಯಲ್ಲಿ ಯಾರ ಸಮಾಧಾನಕಾರಕ ವಚನಗಳೂ ಪರಿತಪಿಸುತ್ತಿದ್ದ ನನ್ನ ಆತ್ಮಕ್ಕೆ ಅಮೃತವನ್ನು ಕುಡಿಸುವಂತಿರಲಿಲ್ಲ. ಇಂತಹ ಆಪತ್ತಿನ ಸನ್ನಿವೇಶದಲ್ಲಿ ಸಿಲುಕಿ, ನಾನು ತಟ್ಟನೆ – "ಎಲೆ ದೇವ, ನನ್ನ ನೆರವಿಗೆ ಬಾ ; ನಾನು ಬಹಳ ದುಃಖದಲ್ಲಿ ಮುಳುಗಿದ್ದೇನೆ !" ಎಂಬುದಾಗಿ ಗಟ್ಟಿಯಾಗಿ ಮೊರೆಯಿಟ್ಟೆ.

ಹಲವಾರು ವರ್ಷಗಳಿಂದೀಚೆಗೆ ನಾನು ಮಾಡಿದ ಮೊದಲನೆಯ ಪ್ರಾರ್ಥನೆಯಿದು.

ಇನ್ನು ನನ್ನ ದಿನಚರಿಯನ್ನು ಮುಂದುವರಿಸುತ್ತೇನೆ.

ಜೂನ್ ೨೮ :– ನನಗೆ ಬಂದ ನಿದ್ರೆಯ ಪ್ರಭಾವದಿಂದ ನನ್ನ ಮನಸ್ಸು ಸ್ವಲ್ಪ ಹಗುರವಾಗಿತ್ತು. ಜ್ವರದ ಉರುಬು ಸಂಪೂರ್ಣವಾಗಿ ಕೊನೆಗೊಂಡಿತ್ತು. ಹಿಂದಿನ ದಿನದ ಕನಸಿನ ಭಯಂಕರವಾದ ನೆನಪು ಮನಸ್ಸನ್ನು ಹಿಂಡುತ್ತಿದ್ದರೂ, ಮಾನೆಯ ದಿನ ಮರಳಿ ಜ್ವರವು ಬರಬಹುದೆಂದು ಶಂಕಿಸಿ, ಅಷ್ಟರೊಳಗಾಗಿ ಜೀವಾಧಾರಕ್ಕಾಗಿ ಮಾಡಿಕೊಳ್ಳಬೇಕಾದ ಕೆಲವು ಏರ್ಪಾಡುಗಳನ್ನು ನಡಸಲು ಇದೇ ಸಮಯವೆಂದು ಮೇಲಕ್ಕೆದ್ದೆ. ಮೊದಲನೆಯದಾಗಿ, ಒಂದು ಗಾಜಿನ ಶೀಸೆಯ ತುಂಬ ನೀರು ತುಂಬಿ, ಅದನ್ನು ಮೇಜಿನ ಮೇಲೆ ಹಾಸಿಗೆಯ ಮೇಲಿನಿಂದ ಕೈನೀಡಿದರೆ ಸಿಕ್ಕುವಷ್ಟು ದೂರದಲ್ಲಿ ಇರಿಸಿಕೊಂಡೆ ; ನೀರಿನ ಅನಾರೋಗ್ಯಕಾರಕ ಗುಣವನ್ನು ಮುರಿದು ಒಂದು ತುಂಡು ಆಡಿನ ಮಾಂಸವನ್ನು ಕೆಂಡದ ಮೇಲೆ ಸುಟ್ಟು ಅದರ ಒಂದು ಚೂರನ್ನು ತಿಂದೆ ; ಅದಕ್ಕಿಂತ ಹೆಚ್ಚು ಸೇರಲಿಲ್ಲ. ತಿಂದಾದಮೇಲೆ, ಹಾಗೆಯೇ ಸ್ವಲ್ಪ ಸುತ್ತಾಡಿದೆ. ಆದರೆ ಬಹಳ ನಿಶ್ಶಕ್ತವಾಗಿದ್ದೆ. ಜೊತೆಗೆ ನನ್ನ ಪರಿಸ್ಥಿತಿಯನ್ನು ಕುರಿತ ಚಿಂತೆಯಿಂದಲೂ ಮಾರನೆಯ

ಬಂದಿತು. ಒಂದು ಪೆಟ್ಟಿಗೆಯಲ್ಲಿ ಒಂದು ಸ್ವಲ್ಪ ಹೊಗೆಯಸೊಪ್ಪೂ ಇತ್ತು.

**ಬೇನೆಗೂ ಮನಸ್ಸಿಗೂ ಮದ್ದು**

ಹೀಗೆ ದೈವಪ್ರೇರಣೆಯ ಸಹಾಯದಿಂದ, ನನ್ನ ಆತ್ಮಕ್ಕೂ ನನ್ನ ಶರೀರಕ್ಕೂ ಒಂದೇ ಪೆಟ್ಟಿಗೆಯಲ್ಲಿ ಔಷಧಗಳು ದೊರೆತವು. ಪೆಟ್ಟಿಗೆಯ ಬಾಗಿಲನ್ನು ತೆರೆದಕೂಡಲೆ ಹೊಗೆಯಸೊಪ್ಪು ಕೈಗೆ ಸಿಕ್ಕಿತು ; ಅದರೊಂದಿಗೆ ನಾನು ಅಲ್ಲಿ ಅಡಕಿದ್ದ ಇತರ ಪುಸ್ತಕಗಳ ನಡುವೆ ಇದ್ದ ಬೈಬಲ್ ಗ್ರಂಥ ಪ್ರತಿಗಳೂ ದೃಷ್ಟಿಗೆ ಬಿದ್ದವು. ಒಂದು ಬೈಬಲನ್ನೂ ಹೊಗೆಯಸೊಪ್ಪನೂ ತೆಗೆದುಕೊಂಡು ಮೇಜಿನ ಬಳಿಗೆ ಬಂದೆ.

ಹೊಗೆಯಸೊಪ್ಪನ್ನು ಯಾವ ರೀತಿ ಉಪಯೋಗಿಸಬೇಕೋ ಗೊತ್ತಿರಲಿಲ್ಲ. ನನ್ನ ಅಸ್ವಸ್ಥತೆಗೆ ಅದು ಒಳ್ಳೆಯದೋ ಅಲ್ಲವೋ ಅದೂ ತಿಳಿದಿರಲಿಲ್ಲ. ಯಾವುದಾದರೂ ಒಂದು ಪ್ರಯೋಗದಿಂದ ಪ್ರಯೋಜನವಾಗುವುದೆಂಬ ಎಣಿಕೆಯಿಂದ ಹಲವು ಪ್ರಯೋಗಗಳನ್ನು ಮಾಡಿದೆ. ಮೊದಲ ಹೊಗೆಯಸೊಪ್ಪಿನ ಒಂದು ಚೂರನ್ನು ಬಾಯಿಗೆ ಹಾಕಿಕೊಂಡು ಅಗಿದೆ. ಅದರ ಪರಿಣಾಮವಾಗಿ ನನ್ನ ಬುದ್ಧಿಗೆ ಮಂಕು ಕವಿದಂತಾಯಿತು. ಆಮೇಲೆ ಇನ್ನು ಸ್ವಲ್ಪ ಹೊಗೆಯ ಸೊಪ್ಪನ್ನು 'ರಂ' ಮದ್ಯದಲ್ಲಿ ನೆನೆಹಾಕಿ, ಹಾಗೆ ಸಿದ್ಧವಾದ ಕಷಾಯವನ್ನು ಮಲಗಿಕೊಳ್ಳುವುದಕ್ಕೆ ಮುಂಚೆ ಕುಡಿಯಬೇಕೆಂದು ನಿಶ್ಚಯಮಾಡಿದೆ. ಕಡೆಯದಾಗಿ ಕೆಂಡಗಳ ಮೇಲೆ ಕಾವಲಿತಗಡನ್ನಿಟ್ಟು, ಅದರ ಮೇಲೆ ಹೊಗೆಯಸೊಪ್ಪನ್ನು ಸುಟ್ಟು, ಅದರಿಂದ ಬಂದ ಹೊಗೆಗೆ ತಡೆಯಲಾಗುವವರೆಗೂ ಮೂಗನ್ನೊಡ್ಡಿದೆ.

ಈ ಕಾರ್ಯಕ್ರಮವನ್ನು ಮಾಡುವಾಗ ನಡುನಡುವೆ ಬೈಬಲ್ ಗ್ರಂಥವನ್ನು ತೆಗೆದುಕೊಂಡು ಓದಲು ಪ್ರಯತ್ನಪಟ್ಟೆ. ಹೊಗೆಯಸೊಪ್ಪಿನ ಸೇವನೆಯಿಂದ ಬುದ್ಧಿಯೆಲ್ಲ ಮಂದವಾಗಿದ್ದರಿಂದ ಓದಿ ಅರ್ಥಗ್ರಹಣಮಾಡಿಕೊಳ್ಳುವುದು ದುಃಸಾಧ್ಯವಾಗಿತ್ತು. ಸುಮ್ಮನೆ ಹಾಗೆಯೇ ಪುಸ್ತಕವನ್ನು ತೆರೆದು ಕಣ್ಣೋಡಿಸುತ್ತಿದ್ದಾಗ ಮೊದಲು ಕಣ್ಣಿಗೆ ಬಿದ್ದ ಮಾತುಗಳಿವು : "ಕಷ್ಟದಿನದಲ್ಲಿ ನನ್ನನ್ನು ಕೂಗಿ ಕರೆ, ನಾನು ನಿನ್ನನ್ನು ಪಾರು ಮಾಡುತ್ತೇನೆ ; ನೀನು ನನ್ನನ್ನು ಹಾಡಿ ಹೊಗಳುವೆ."

ಮೇಲಿನ ನುಡಿಗಳು ನನಗೆ ಚೆನ್ನಾಗಿ ಅನ್ವಯಿಸುತ್ತಿದ್ದವು ; ಮತ್ತು ಅವನ್ನು ಓದಿದಾಗ ನನ್ನ ಮೇಲೆ ಸ್ವಲ್ಪಮಟ್ಟಿನ ಪರಿಣಾಮನ್ನುಂಟುಮಾಡಿದುವು. ಆದರೆ ಆ ಮಾತುಗಳಿಗೆ ಮುಂದೆ ಯಾವ ಅರ್ಥವನ್ನು ನಾನು ಕಲ್ಪಿಸಿಕೊಂಡೆನೊ ಇಂದು ಆ ಅರ್ಥವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. 'ಪಾರಾಗುವುದು' ಎಂಬ ಮಾತಂತೂ ನನಗೆ ಸಂಪೂರ್ಣವಾಗಿ ಅರ್ಥವಿಹೀನವಾಗಿಯೇ ಕಂಡಿತು.

ಇಲ್ಲಿ ಕ್ಲೇಶಭಾಜನನಾಗಿರುವುದು ಅವನಿಗೆ ಗೊತ್ತಿರಲೇಬೇಕು ; ಅವನ ಇಚ್ಛೆಯಿಲ್ಲದೆ ಏನೂ ಸಂಭವಿಸಲಾರದೆಂದಾರೆ, ನನಗೆ ಸಂಭವಿಸಿರುವುದೆಲ್ಲವೂ ಆತನ ನಿಯಾಮಕವೆ.

ನನ್ನ ಈ ತೀರ್ಮಾನಗಳಿಗೆ ವಿರುದ್ಧವಾದ ಪ್ರತ್ಯಾಲೋಚನೆ ಯಾವುದೂ ತಲೆದೋರಲಿಲ್ಲ . ಆದ್ದರಿಂದ ಅವೆಲ್ಲವೂ ನನ್ನ ಮನೋಭೂಮಿಯಲ್ಲಿ ಚೆನ್ನಾಗಿ ಬೇರೂರಿ, ನನಗೆ ಸಂಭವಿಸಿರುವುದೆಲ್ಲವೂ ಆತನ ಅರಿವಿನಲ್ಲಿದ್ದು ಆತನ ಪ್ರೇರಣೆಯಿಂದಲೇ ನಡೆದಿದೆ ಎಂಬುದು ಖಚಿತವಾಯಿತು. ಕೂಡಲೇ ಈ ಉಪಪ್ರಶ್ನೆಗಳು ತಲೆದೋರಿದವು :–

ದೇವರು ನನಗೆ ಈ ಗತಿಯನ್ನೇಕೆ ವಿಧಿಸಿದ್ದಾನೆ? ಈ ರೀತಿ ಪಾಡುಪಡಲು ನಾನು ಮಾಡಿರುವುದಾದರೂ ಏನು?

ಈ ಪ್ರಶ್ನೆಗಳಿಗೆ ನನ್ನ ಅಂತಃಕರಣವೇ ಪಡಿನುಡಿವ ವಾಣಿಯಾಗಿ ಈ ರೀತಿ ನನ್ನನ್ನು ಎಚ್ಚರಿಸಿತು : "ನೀಚ! ಏನು ಮಾಡಿರುವುದಾಗಿ ಪ್ರಶ್ನಿಸುತ್ತೀಯಾ? ಅಪವ್ಯಯವಾದ ನಿನ್ನ ಈ ಹಿಂದಿನ ಘೋರವಾದ ಜೀವನವನ್ನು ಸ್ಮರಿಸಿಕೊಂಡು, ನೀನು ಏನು ಮಾಡಿಲ್ಲವೆಂಬುದಾಗಿ ಪ್ರಶ್ನಿಸಿಕೋ? ಈ ಹಿಂದೆಯೇ ನೀನು ಏತಕ್ಕೆ ಸರ್ವನಾಶ ಹೊಂದಬಾರದಾಗಿತ್ತೆಂದು ಕೇಳಿಕೊ? ಯಾರ್ಮೌತ್ ಬಂದರಿನಲ್ಲಿ ನೀನು ಏಕೆ ಮುಳುಗಿಹೋಗಲಿಲ್ಲ? ಸ್ಯಾಲಿ ಯುದ್ಧದ ಹಡಗು ನಿಮ್ಮ ಹಡಗನ್ನು ಬೆಂಬತ್ತಿದಾಗ ನಡೆದ ಯುದ್ಧದಲ್ಲಿ ನೀನು ಏಕೆ ಮಡಿಯಲಿಲ್ಲ? ಆಫ್ರಿಕದ ತೀರ ಪ್ರದೇಶದಲ್ಲಿ ನೀನು ಕ್ರೂರ ಜಂತುಗಳ ಬಾಯಿಗೆ ತುತ್ತಾಗಲಿಲ್ಲವೇಕೆ? ಇಲ್ಲವೆ, ಇಲ್ಲಿ , ಈ ಕಡಲಕರೆಯಿಂದ ಅನತಿದೂರದಲ್ಲಿ , ನಿನ್ನನ್ನು ಬಿಟ್ಟು ನಿನ್ನ ಸಂಗಡಿಗರೆಲ್ಲರೂ ಕಡಲು ಪಾಲಾದಾಗ ನೀನೇಕೆ ಮುಳುಗಿಹೋಗಲಿಲ್ಲ? ಏನು ಮಾಡಿರುವೆನೆಂದು ಕೇಳುತ್ತೀಯಾ?"

ಈ ಪರಿಭಾವನೆಯಿಂದ ನಾನು ಅಚ್ಚರಿಗೊಂಡವನಂತೆ ಮೌನದಲ್ಲಿ ಮುಳುಗಿದೆ. ಚಿಂತಾಕ್ರಾಂತನಾಗಿ ಮೇಲಕ್ಕೆದ್ದು, ಹಿಂದಿರುಗಿ ಗೋಡೆಯನ್ನೇರಿ ನನ್ನ ಮನೆಯೊಳಕ್ಕೆ ಹೋದೆ. ನನ್ನ ಚಿತ್ತವು ಬಹಳ ಕ್ಷೋಭೆಗೊಂಡದ್ದರಿಂದ ಮಲಗಿ ನಿದ್ದೆ ಹೋಗಲು ಇಷ್ಟವಾಗಲಿಲ್ಲ. ಕುರ್ಚಿಯ ಮೇಲೆ ಕುಳಿತು, ಕತ್ತಲೆಯಾಗುತ್ತಾ ಬಂದುದರಿಂದ, ದೀಪವನ್ನು ಹೊತ್ತಿಸಿದೆ. ಆಗ, ಜ್ವರವು ಮರುಕೊಳಿಸಬಹುದೆಂಬ ಭೀತಿ ಮತ್ತೆ ತಲೆದೋರಲಾಗಿ, ಬ್ರಜಿಲ್ ದೇಶದವರು ಯಾವ ಬೇನೆ ಬಂದರೂ ಇನ್ನು ಯಾವ ಔಷಧವನ್ನೂ ತೆಗೆದುಕೊಳ್ಳದೆ ಹೊಗೆಯಸೊಪ್ಪೊಂದನ್ನೇ ಸಿದ್ಧೌಷಧವಾಗಿ ಸೇವಿಸುತ್ತಿದ್ದುದು ತಟ್ಟನೆ ನೆನಪಿಗೆ

ನಡೆದುಹೋಗಲು ಇಷ್ಟಪಡಲಿಲ್ಲ. ಒಂದೆರಡು ಕಡಲು ಕೋಳಿಗಳನ್ನು ಬೇಟೆಯಾಡಿ ಮನಗೆ ತಂದರೂ ಅವುಗಳನ್ನು ತಿನ್ನುವ ಮನಸ್ಸಾಗಲಿಲ್ಲ. ಆದ್ದರಿಂದ ಇನ್ನೂ ಕೆಲವು ಆಮೆಯಮೊಟ್ಟೆಗಳನ್ನು ತಿಂದೆ. ಹಸಿದ ಹೊಟ್ಟೆಯಲ್ಲಿ ಅವು ಹೆಚ್ಚು ರುಚಿಕರವಾಗಿ ಕಂಡುವು. ನನಗೆ ಆರೋಗ್ಯವನ್ನುಂಟು ಮಾಡಿತೆಂದು ನಾನು ಎಣಿಸಿದ್ದ 'ರಂ' ಮತ್ತು ಹೊಗೆಯಸೊಪ್ಪಿನ ಮಿಶ್ರಣವನ್ನು ಈ ಸಂಜೆಯೂ ಸೇವಿಸಿದೆ. ಆದರೆ ಹಿಂದಿನಂತೆ ಹೊಗೆಯಸೊಪ್ಪಿನ ಚೂರನ್ನು ಅಗಿಯಲಿಲ್ಲ ; ಮತ್ತು ಅದರ ಹೊಗೆಯಿಂದ ಮುಖ ಕಾಸಿಕೊಳ್ಳಲಿಲ್ಲ.

ಜುಲೈ ೧ :– ಹಿಂದಿನ ದಿನದಷ್ಟು ಆರೋಗ್ಯವಾಗಿರಲಿಲ್ಲ. ಸ್ವಲ್ಪ ಶೀತ ಕಾಣಿಸಿಕೊಂಡಿತು. ಆದರೆ ಅದು ಅಷ್ಟು ಹೆಚ್ಚಾಗಿ ಬಾಧೆಕೊಡಲಿಲ್ಲ.

ಜುಲೈ ೨ :– ಹೊಗೆಯಸೊಪ್ಪನ್ನು ಮೂರು ವಿಧಗಳಲ್ಲಿಯೂ ಸೇವಿಸಿದೆ. ಕುಡಿಯುತ್ತಿದ್ದ ಕಷಾಯದ ಪ್ರಮಾಣವನ್ನು ಇಮ್ಮಡಿಸಿದೆ.

ಜುಲೈ ೩ :– ಶೈತ್ಯವಾಗಲಿ ಬೇರೆ ಯಾವ ಅನಾರೋಗ್ಯದ ಚಿಹ್ನೆಯಾಗಲಿ ಕಾಣಿಸಲಿಲ್ಲ. ಆದರೂ ನನ್ನ ಎಂದಿನ ಪೂರ್ಣಶಕ್ತಿಯನ್ನು ಪಡೆಯಲು ಕೆಲವು ವಾರಗಳ ಕಾಲ ಹಿಡಿಯಿತು. ಹೀಗೆ ಶಕ್ತಿಯನ್ನು ಕೂಡಿಸಿಕೊಳ್ಳುತ್ತಿದ್ದ ಕಾಲಾವಧಿಯಲ್ಲಿ, "ನಾನು ನಿನ್ನನ್ನು ಪಾರುಮಾಡುತ್ತೇನೆ" ಎಂಬ ಬೈಬಲ್ ವಚನವನ್ನು ಪದೇ ಪದೇ ಧ್ಯಾನಮಾಡುತ್ತಿದ್ದೆ. ನಾನು ಪಾರಾಗುವುದು ಅಸಾಧ್ಯವೆಂಬ ಭಾವನೆ ನನ್ನ ಮನಸ್ಸಿನಲ್ಲಿ ಬಲವಾಗಿ ಬೇರೂರಿತ್ತು. ಹೀಗೆ ನನಗೆ ನಾನೇ ನಿರುತ್ಸಾಹಕರವಾದ ಭಾವನೆಯನ್ನು ಬಲಪಡಿಸಿಕೊಳ್ಳುತ್ತಿದ್ದಾಗ, ನಿಜವಾಗಿಯೂ ಕಷ್ಟದಿಂದ ಪಾರಾಗಿರುವೆನೆಂಬ ಅಂಶದಕಡೆಗೆ ನಾನು ಗಮನವನ್ನೇ ಕೊಟ್ಟಿಲ್ಲದಿರುವುದಾಗಿ ನನಗೊಮ್ಮೆ ತೋರಿತು. ತತ್ಪರಿಣಾಮವಾಗಿ ನನಗೆ ನಾನೇ ಈ ರೀತಿ ಪ್ರಶ್ನೆ ಹಾಕಿಕೊಂಡೆ. ನಾನು ಪಾರಾಗಿಲ್ಲವೆ? ಅನಾರೋಗ್ಯದಿಂದ, ನಾನು ಇದುವರೆಗೆ ಅನುಭವಿಸಿದ ಹಲವಾರು ಕಷ್ಟಸ್ಥಿತಿಗಳಿಗಿಂತ ಒಂದು ರೀತಿಯಲ್ಲಿ ಕಠಿನವಾದ ಮತ್ತು ಭಯಂಕರವಾದ ಅನಾರೋಗ್ಯದ ಸ್ಥಿತಿಯಿಂದ ಪಾರಾಗಿಲ್ಲವೆ? ಈ ಅಂಶವನ್ನು ನಾನು ಉಪೇಕ್ಷೆಮಾಡಿಲ್ಲವೆ? ನನ್ನ ಕರ್ತವ್ಯವನ್ನು ಮಾಡಿರುವೆನೆ? ದೇವರು ನನ್ನನ್ನು ಕಾಪಾಡಿದ್ದನು ; ಆದರೆ ನಾನು ಆತನು ಕರುಣಿಸಿದ ಆರೋಗ್ಯವನ್ನು ಕಷ್ಟವಿಮೋಚನೆಯೆಂದು ಬಗೆಯದೆ, ಅವನಿಗೆ ನನ್ನ ವಂದನೆಯ ಪ್ರಣಾಮವನ್ನು ಸಲ್ಲಿಸದೆ ಹೋಗಿದ್ದೆ. ಇದಕ್ಕಿಂತ ಹೆಚ್ಚಿನ ವಿಮೋಚನೆಯನ್ನು ಆತನಿಂದ ನಿರೀಕ್ಷಿಸಲು ನನಗೆ ಅಧಿಕಾರವೆಲ್ಲಿಯದು ?

ಈ ಭಾವನೆ ನನ್ನ ಹೃದಯತಂತ್ರಿಯನ್ನು ಬಲವಾಗಿ ಮಿಡಿಯಿತು. ಕೂಡಲೆ

ನನ್ನ ಸದ್ಯದ ಪರಿಸ್ಥಿತಿಯನ್ನು ಕುರಿತು ಪರ್ಯಾಲೋಚನೆ ಮಾಡಿದ್ದರಲ್ಲಿ, ಪಾರಾಗುವ ಸಂಭವ ಊಹಾತೀತವಾಗಿತ್ತು. "ದೇವರು ನನ್ನನ್ನು ಈ ಸ್ಥಳದಿಂದ ಪಾರುಮಾಡಬಲ್ಲನೆ?" ಎಂಬುದಾಗಿ ನನ್ನಲ್ಲಿ ನಾನು ಕೇಳಿಕೊಳ್ಳತೊಡಗಿದೆ. ಇಲ್ಲಿಂದ ಪಾರಾಗುವ ಆಸೆ ಬಹು ವರ್ಷಗಳವರೆಗೂ ನನ್ನಲ್ಲಿ ಜನಿಸದಿದ್ದುದರಿಂದ, ಪಾರಾಗುವುದು ಅಸಾಧ್ಯವೆಂಬ ಭಾವನೆಯೇ ನನ್ನಲ್ಲಿ ಬೇರೂರಿ ನೆಲಸಿಬಿಟ್ಟಿದ್ದಿತು. ಆದರೂ ಕೂಡ ಮೇಲ್ಕಂಡ ವಾಕ್ಯದ ನುಡಿಗಳು ನನ್ನ ಮೇಲೆ ಮಹತ್ತರವಾದ ಪರಿಣಾಮವನ್ನುಂಟು ಮಾಡಿದುವು. ಅನೇಕವೇಳೆ ನಾನು ಆ ನುಡಿಗಳನ್ನೆ ಪರಿಭಾವಿಸುತ್ತಿದ್ದೆ.

ನಾನು ಮೊದಲೇ ಹೇಳಿದಂತೆ ಹೊಗೆಯಸೊಪ್ಪಿನ ಪ್ರಭಾವದಿಂದ ಈಗ ನನಗೆ ನಿದ್ರೆ ಬರುವಂತಾಗಿತ್ತು. ದೀಪವನ್ನು ಹಾಗೆಯೇ ಉರಿಯಬಿಟ್ಟು, ಹಾಸಿಗೆಯ ಮೇಲೆ ಹೋಗಿ ಮಲಗಿದೆ. ಆದರೆ ಮಲಗುವುದಕ್ಕೆ ಮುಂಚೆ ಮಂಡಿಯೂರಿ ಕುಳಿತು, ಕಷ್ಟದಿನದಲ್ಲಿ ಮೊರೆಯಿಟ್ಟಾಗ ನನ್ನನ್ನು ಕಷ್ಟದಿಂದ ಬಿಡುಗಡೆ ಮಾಡಬೇಕೆಂದು ದೇವರನ್ನು ಪ್ರಾರ್ಥಿಸಿಕೊಂಡೆ ; ಈ ರೀತಿ ಹಿಂದೆಂದೂ ನಾನು ಮಾಡಿರಲಿಲ್ಲ. ನನ್ನ ಹರುಕು ಮುರುಕು ಪ್ರಾರ್ಥನೆಯಾದ ಮೇಲೆ ಹೊಗೆಯಸೊಪ್ಪನ್ನು ನೆನೆಹಾಕಿದ್ದ 'ರಂ' ಮದ್ಯದ ಕಷಾಯವನ್ನು ಕುಡಿದೆ. ಕಷಾಯವು ಎಷ್ಟು ತೀಕ್ಷ್ಣವಾಗಿತ್ತೆಂದರೆ, ಗಂಟಲಿನಿಂದ ಒಳಕ್ಕಿಳಿಯುವುದೇ ಬಹಳ ಕಷ್ಟವಾಯಿತು. ಕುಡಿದ ಕೂಡಲೆ ಹಾಸಿಗೆಯ ಮೇಲೆ ಮಲಗಿಕೊಂಡೆ. ಕಷಾಯದ ತೀಕ್ಷ್ಣತೆ ಕೂಡಲೇ ನನ್ನ ನೆತ್ತಿಗೇರಿತು ; ಒಡನೆಯೇ ಗಾಢವಾದ ನಿದ್ರೆ ನನ್ನನ್ನಾವರಿಸಿತು. ಮತ್ತೆ ಮಾರನೆಯ ದಿನ ಅಪರಾಹ್ಣ ಮೂರುಗಂಟೆಯವರೆಗೂ ನನಗೆ ಎಚ್ಚರವೇ ಆಗಲಿಲ್ಲ. ಆದರೆ, ವಾಸ್ತವವಾಗಿ, ಸರಿಸುಮಾರು ಮೂರು ದಿನಗಳೇ ಮಲಗಿದ್ದಂತೆ ಈಗಲೂ ಒಮ್ಮೊಮ್ಮೆ ನನ್ನ ಬುದ್ಧಿಗೆ ತೋರುತ್ತದೆ. ಹಾಗಿಲ್ಲದೆ ಹೋದ ಭಾಗದಲ್ಲಿ ನನ್ನ ವಾರಗಣನೆಯಲ್ಲಿ ಒಂದು ದಿನದ ಎಣಿಕೆಯೇ ತಪ್ಪಿಹೋಗುವುದಕ್ಕೆ ಕಾರಣವಿಲ್ಲ.

ಅದು ಹೇಗಾದರೂ ಇರಲಿ. ನಾನು ಎದ್ದಾಗ ಹೊಸ ಹುಮ್ಮಸ್ಸಿನಿಂದ ಕೂಡಿ, ಬಹಳ ಗೆಲುವಾಗಿದ್ದೆ. ಹಿಂದಿನ ದಿನಕ್ಕಿಂತ ಹೆಚ್ಚು ಶಕ್ತಿ ಕೂಡಿಕೊಂಡಿತ್ತು. ಹಸಿವೂ ಇತ್ತು. ಮಾರನೆಯ ದಿನವೂ ಜ್ವರ ಕಾಣಿಸಿಕೊಳ್ಳಲಿಲ್ಲ. ಇಂದು ೨೯ನೆಯ ತಾರೀಖು.

೩೦ನೆಯ ತಾರೀಖಿನ ದಿನ ನಾನು ಸಂಪೂರ್ಣವಾಗಿ ಸ್ವಸ್ಥವಾಗಿದ್ದೆ. ಕೋವಿಯನ್ನು ತೆಗೆದುಕೊಂಡು ಹೊರಕ್ಕೆ ಹೊರಟೆ. ಆದರೆ ಬಹಳ ದೂರ

ಭಾವಿಸಿಕೊಂಡಿದ್ದೆ; ಬಿಡುಗಡೆ ಎಂಬುದರ ಅರ್ಥವೇ ನನಗಾಗಿರಲಿಲ್ಲ. ದ್ವೀಪದಲ್ಲಿ ನನಗೆ ಸಂಪೂರ್ಣ ಸ್ವಾತಂತ್ರ್ಯವಿದ್ದರೂ, ಅದು ನನ್ನ ಭಾಗಕ್ಕೆ ಖಂಡಿತವಾಗಿಯೂ ಸೆರೆಮನೆಯಾಗಿತ್ತು. ಆದರೆ ಈಗ ಬೇರೆಯ ಒಂದು ಹೊಸ ಭಾವನೆ ನನ್ನಲ್ಲಿ ನೆಲೆಸಿತ್ತು. ನನ್ನ ಹಿಂದಿನ ಜೀವನವನ್ನೂ ನಾನು ಎಸಗಿದ್ದ ಪಾಪಕಾರ್ಯಗಳನ್ನೂ ನೆನೆದು ನನಗೆ ಎಷ್ಟು ದಿಗಿಲಾಯಿತೆಂದರೆ, ನನ್ನ ನೆಮ್ಮದಿಯನ್ನು ಹಾಳುಮಾಡಿದ್ದ ಪಾಪದ ಹೊರೆಯನ್ನು ಇಳುಹಿ ಅದರ ಭಾರದಿಂದ ಬಿಡುಗಡೆಮಾಡೆಂಬ ಬೇಡಿಕೆಯಲ್ಲದೆ ಬೇರೆ ಯಾವ ಬೇಡಿಕೆಯನ್ನೂ ದೇವರಲ್ಲಿ ಬೇಡಲಿಲ್ಲ. ನನ್ನ ಏಕಾಂತ ಜೀವನದಿಂದ ಬಿಡುಗಡೆಮಾಡೆಂದು ಬೇಡಿಕೊಳ್ಳಲಿಲ್ಲ ; ಅದರ ವಿಚಾರವಾಗಿ ನಾನು ಯೋಚಿಸುತ್ತಲೇ ಇರಲಿಲ್ಲ. ಇದನ್ನು ಓದುವ ಯಾರಿಗೇ ಆಗಲಿ ನನ್ನ ಸ್ವಂತ ಅನುಭವದಿಂದ ನಾನು ಸೂಚನೆಮಾಡುವುದಿಷ್ಟೆ : ಯಾರೇ ಆಗಲಿ ತಮ್ಮ ಪರಿಸ್ಥಿತಿಯ ಯಥಾರ್ಥವಾದ ಪರಿಜ್ಞಾನವನ್ನು ಹೊಂದಿದುದೇ ಆದರೆ ದುಃಖದಿಂದ ವಿಮೋಚನೆ ಹೊಂದುವುದಕ್ಕಿಂತಲೂ, ಪಾಪದಿಂದ ವಿಮೋಚನೆ ಹೊಂದುವುದೇ ಹೆಚ್ಚಿನ ವರಪ್ರಸಾದವೆಂಬುದನ್ನು ಕಂಡುಕೊಳ್ಳುವರು.

ಈ ವಿಷಯವನ್ನು ಇಷ್ಟಕ್ಕೆ ಬಿಟ್ಟು, ನನ್ನ ದಿನಚರಿಯನ್ನು ಸ್ವಲ್ಪ ಮುಂದುವರಿಸುತ್ತೇನೆ.

ಜುಲೈ ೪ ರಿಂದ ಜುಲೈ ೧೪ :– ಜ್ವರ ನಿಂತಮೇಲೆ ಶಕ್ತಿ ಕೂಡಿಸಿಕೊಳ್ಳುತ್ತಿರುವ ಮನಷ್ಯನಿಗೆ ಸಹಜವಾದ ರೀತಿಯಲ್ಲಿ, ಕೈಯಲ್ಲಿ ಕೋವಿ ಹಿಡಿದುಕೊಂಡು ಸ್ವಲ್ಪ ಸ್ವಲ್ಪವಾಗಿ ಸುತ್ತಾಡತೊಡಗಿದೆ. ನಾನು ಎಷ್ಟು ನಿಶ್ಶಕ್ತನಾಗಿದ್ದೆನೆಂಬುದನ್ನು ಊಹಿಸಿಕೊಳ್ಳುವುದೂ ಕಷ್ಟ, ರೋಗ ಚಿಕಿತ್ಸೆಗಾಗಿ ನಾನು ಮಾಡಿದ ಪ್ರಯೋಗ ಸಂಪೂರ್ಣವಾಗಿ ಹೊಸದು; ಪ್ರಾಯಶಃ ಹಿಂದೆ ಅದರಿಂದ ಯಾರ ಜ್ವರವೂ ಪರಿಹಾರವಾಗಿರಲಾರದು, ಈ ಪ್ರಯೋಗವನ್ನು ಇತರರು ಮಾಡಿ ಪ್ರಯೋಜನ ಹೊಂದಬಹುದೆಂದೂ ನಾನು ಹೇಳಲಾರೆ. ನನ್ನ ಔಷಧ ಚಿಕಿತ್ಸೆಯಿಂದ ಜ್ವರ ನಿಂತಿತಾದರೂ ಅದು ನನ್ನನ್ನು ಬಹಳ ದುರ್ಬಲನನ್ನಾಗಿ ಮಾಡಿತು : ಏಕೆಂದರೆ, ಕೆಲವು ಕಾಲದವರೆಗೆ, ನರಸಂಬಂಧವಾದ ವಾಯುವಿನಿಂದ ನರಳಿದೆ.

ನನ್ನ ಬೇನೆಯಿಂದ ಇನ್ನೊಂದು ಪಾಠವನ್ನೂ ಕಲಿತೆ : ಬಿರುಗಾಳಿಯಿಂದ ಕೂಡಿದ ಮಳೆಯಕಾಲದಲ್ಲಿ ಹೊರಕ್ಕೆ ಹೊರಡುವುದು ನನ್ನ ಆರೋಗ್ಯ ಸ್ಥಿತಿಗೆ ಬಹಳ ಹಾನಿಕರವೆಂಬುದನ್ನು ಕಂಡುಕೊಂಡೆ. ಬೇಸಗೆಯಲ್ಲಿ ಬರುವ ಮಳೆ ಸಾಧಾರಣವಾಗಿ ಚಂಡಮಾರುತದಿಂದ ಕೂಡಿರುತ್ತಿದ್ದುದರಿಂದ ಆ ಕಾಲದ ಮಳೆ

ಮಂಡಿಯೂರಿ ಕುಳಿತು, ನನ್ನನ್ನು ಭಯಂಕರವಾದ ಬೇನೆಯಿಂದ ಪಾರುಮಾಡಿ ಸಂರಕ್ಷಿಸಿದ್ದುದಕ್ಕಾಗಿ ದೇವರಿಗೆ ಅನಂತ ವಂದನೆಗಳನ್ನು ಗಟ್ಟಿಯಾಗಿ ಹೇಳುತ್ತ ಸಲ್ಲಿಸಿದೆ.

ಜುಲೈ ೪ :– ಬೆಳಗ್ಗೆ ಬೈಬಲ್ ಗ್ರಂಥವನ್ನು ತೆಗೆದುಕೊಂಡೆ. ಅದರಲ್ಲಿನ ಹೊಸ ಒಡಂಬಡಿಕೆಯ (New Testament) ಭಾಗವನ್ನು ಮನಃಪೂರ್ವಕವಾಗಿ ಓದಲಾರಂಭಿಸಿ, ಪ್ರತಿದಿನ ಬೆಳಗ್ಗೆಯೂ ಸಂಜೆಯೂ ಮನಸ್ಸಿಗೆ ಸಾಕೆನಿಸುವವರೆಗೂ ಆ ಭಾಗದಿಂದ ಇಷ್ಟಬಂದ ಪ್ರಕರಣವನ್ನು ಓದುವುದಾಗಿ ನಿಶ್ಚಯಿಸಿದೆ. ಹೀಗೆ ಬೈಬಲ್ ಗ್ರಂಥವಾಚನವನ್ನು ಪ್ರಾರಂಭಮಾಡಿ ಮುಂದುವರಿಸಿದ ಸ್ವಲ್ಪ ಕಾಲದೊಳಗಾಗಿಯೇ ನಾನು ಹಿಂದೆ ಎಂತಹ ಹೀನಜೀವನನ್ನು ನಡೆಸಿದ್ದೆನೆಂಬ ಭಾವನೆಯುಂಟಾಗಿ, ಬಹಳ ಪರಿತಾಪಗೊಂಡೆ. ಆಗ, ಹಿಂದಿನ ಸ್ವಪ್ನದ ಸ್ಮರಣೆಯಾಯಿತು. "ಇಷ್ಟೆಲ್ಲಾ ಕ್ಲೇಶ ಪರಂಪರೆಗಳು ಸಂಭವಿಸಿದ್ದರೂ ನಿನಗೆ ಪಶ್ಚಾತ್ತಾಪವುಂಟಾಗಿಲ್ಲ." ಎಂಬ ಆ ಸ್ವಪ್ನಸಂದೇಶ ವಾಕ್ಯವು ನೆನಪಿಗೆ ಬಂದಿತು; ಹಾಗೆ ನೆನಪಿಗೆ ಬಂದ ಕೂಡಲೆ, "ದೇವರೆ ! ನನಗೆ ಪಶ್ಚಾತ್ತಾಪ ಬುದ್ಧಿಯನ್ನು ಕರುಣಿಸು !" ಎಂಬುದಾಗಿ ಹೃದಯಪೂರ್ವಕವಾಗಿ ಪ್ರಾರ್ಥಿಸಿಕೊಂಡೆ. ಅದೇ ದಿನವೇ ಬೈಬಲ್ ಗ್ರಂಥವನ್ನೋದುತ್ತಿದ್ದಾಗ ದೈವಕೃಪೆಯಿಂದ ಈ ನುಡಿಗಳು ನನ್ನ ದೃಷ್ಟಿಗೆ ಬಿದ್ದುವು : "ಪಶ್ಚಾತ್ತಾಪ ಬುದ್ಧಿಯನ್ನು ದಯಪಾಲಿಸುವ ಆತನೆ ನಮ್ಮ ದೊರೆ ; ನಮ್ಮ ಸಂರಕ್ಷಕ." ಆಗ ತಟ್ಟನೆ ಪುಸ್ತಕವನ್ನು ಒಕ್ಕಡೆಗೆ ಎಸೆದು, ಆನಂದಪರವಶನಾಗಿ ಕೈಗಳನ್ನು ಮೇಲಕ್ಕೆತ್ತಿಕೊಂಡು, "ದೇವ ಮಹಾಮಹಿಮನಾದ ದೊರೆಯೇ! ಸಂರಕ್ಷಕನೇ! ನನಗೆ ಪಶ್ಚಾತ್ತಾಪ ಬುದ್ಧಿಯನ್ನು ಕರುಣಿಸು" ಎಂಬುದಾಗಿ ಮೊರೆಯಿಟ್ಟೆ.

ನನ್ನ ಜೀವನದಲ್ಲೆಲ್ಲ ನಾನು ನಿಜವಾಗಿ ದೇವರನ್ನು ಪ್ರಾರ್ಥಿಸಿಕೊಂಡದ್ದು ಇದೇ ಮೊದಲನೆಯ ಸಲವೆನ್ನಬೇಕು. ಏಕೆಂದರೆ, ಈಗ ನನ್ನ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು, ಬೈಬಲ್ಲಿಗೆ ಸಹಜವಾದ ಆಶಾಭಾವನೆಯಿಂದ, ದೇವ ನಾಮಸ್ಮರಣೆಯಿಂದ ದೊರೆಯುವ ಪ್ರೋತ್ಸಾಹದಿಂದ ಹುರಿಪುಗೊಂಡವನಾಗಿ ಪ್ರಾರ್ಥಿಸಿಕೊಂಡಿದ್ದೆ. ಇಂದಿನಿಂದ ಮೊದಲುಗೊಂಡು ದೇವರು ನನ್ನ ಮೊರೆಗೆ ಕಿವಿಗೊಡುವನೆಂಬ ಆಶೆ ನನ್ನಲ್ಲಿ ನೆಲಸಿತು.

"ಕಷ್ಟದಲ್ಲಿ ನನ್ನನ್ನು ಕರೆ; ನಾನು ನಿನ್ನನ್ನು ಪಾರುಮಾಡುತ್ತೇನೆ" ಎಂಬ ವಾಕ್ಯಕ್ಕೆ ಹಿಂದಿನಂತಲ್ಲದೆ ಇಂದು ಬೇರೆಯ ರೀತಿಯಲ್ಲಿ ಅರ್ಥ ಮಾಡಿದೆ. ಆಗ, ಬಿಡುಗಡೆಯೆಂದರೆ, 'ನನ್ನ ಸದ್ಯದ ಸೆರೆಯಿಂದ ಬಿಡುಗಡೆ' ಎಂಬುದಾಗಿ

ಸೆಪ್ಟೆಂಬರ್ ಅಕ್ಟೋಬರ್ ತಿಂಗಳುಗಳಲ್ಲಿ ಬರುವ ಮಳೆಗಿಂತ ಹೆಚ್ಚು ಅಪಾಯಕರವೆಂಬುದು ನನ್ನ ಅರಿವಿಗೆ ಬಂದಿತು.

ಈ ದುಃಖಕರವಾದ ದ್ವೀಪದಲ್ಲಿ ಬಂದು ನೆಲೆಸಿ ಹತ್ತು ತಿಂಗಳ ಮೇಲಾಗಿತ್ತು; ಇಲ್ಲಿಂದ ಪಾರಾಗುವ ಎಲ್ಲ ಆಶೆ ಭರವಸೆಗಳೂ ನನ್ನನ್ನು ಬಿಟ್ಟು ತೊಲಗಿದ್ದುವು; ಯಾವ ಒಂದು ಮನುಷ್ಯ ಪ್ರಾಣಿಯೂ ಎಂದೂ ಇಲ್ಲಿ ಕಾಲೂರಿರಲಿಲ್ಲವೆಂದೂ ದೃಢವಾಗಿ ನಂಬಿದ್ದೆ. ಈಗ ನನ್ನ ಮನಸ್ಸಿಗೆ ತೃಪ್ತಿಯಾಗುವಂತೆ ವಾಸಸ್ಥಳವನ್ನು ನಿರ್ಮಿಸಿಕೊಂಡುದಾಗಿತ್ತು. ದ್ವೀಪದಲ್ಲಿ ಏನೇ ಇರಬಹುದಾದ ಸಮಸ್ತ ಚರಾಚರ ಪ್ರಪಂಚದ ಪೂರ್ಣ ಪರಿಚಯ ನನಗಿನ್ನೂ ಉಂಟಾಗಿರಲಿಲ್ಲ. ಆದ್ದರಿಂದ, ಇನ್ನೂ ಹೆಚ್ಚು ಪರಿಪೂರ್ಣವಾದ ದ್ವೀಪ ಪರಿಶೀಲನೆಯನ್ನು ಕೈಕೊಳ್ಳಬೇಕೆಂಬ ಪ್ರಬಲವಾದ ಇಚ್ಛೆ ನನಗಿತ್ತು. ಇಲ್ಲಿಗೆ ನನ್ನ ಜೀವನದಲ್ಲಿ ಒಂದು ಘಟ್ಟವನ್ನು ಮುಟ್ಟಿದಂತಾಗಿತ್ತು.

* * * *